University of Mysore

Oriental Library Publications

KANNADA SERIES No. 14

ನಯಸೇನ ವಿರಚಿತಂ

# ಧರ್ಮಾಮೃತಂ

ಪೂರ್ವಭಾಗ—ಅಧ್ಯಾಯಗಳು ೧–೯

# DHARMAMRITAM

BY

NAYASENA

PART I—CHAPTERS 1—9

EDITED BY

DR R. SHAMA SASTRY, B.A., PH.D., M.R.A.S.,

*Curator, Government Oriental Library Mysore, Director of Archaeological Researches in Mysore, Periodical Lecturer to the Post Graduates' Classes of the Calcutta University, and B B R A S Campbell Memorial Medalist*

MYSORE

PRINTED AT THE GOVERNMENT BRANCH PRESS

1924

## ವಿ ಷ ಯಾ ನು ಕ್ರ ಮ ಣಿ ಕೆ .

# ಉಪೋದ್ಘಾತ.

ಈ ಗ್ರಂಥವು ಮುಖ್ಯವಾಗಿ ಮೂರು ಲಿಖಿತ ಪುಸ್ತಕಗಳ ಸಹಾಯದಿಂದ ಶೋಧಿತವಾಗಿದೆ -

(೧) ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ೬ನೆಯ ನಂಬರಿನ ಓಲೆಯ ಪುಸ್ತಕ (ಬಿ).

(೨) ಅದೇ ಲೈಬ್ರರಿಯಲ್ಲಿರುವ [illegible]. ೩೭ನೆಯ ನಂಬರಿನ ಕಾಗದದ ಪುಸ್ತಕ (ಕ).

(೩) ಮೈಸೂರು ಜೈನ ಬೋರ್ಡಿಂಗ್ ಹೋಮಿನಲ್ಲಿರುವ ಶ್ರೀ ನೇಮಿಸಾಗರ ವರ್ಣಿಸ್ವಾಮಿಗಳು ಕೊಟ್ಟ ಓಲೆಯ ಪುಸ್ತಕ (ಗ)

ಶ್ರವಣಬೆಳಗೊಳದ ಶ್ರೀ ಜೈನಮಠದಿಂದ ಒಂದು ಓಲೆಯ ಪ್ರತಿಯನ್ನು ತರಿಸಿ ನೋಡಲು ಅದೂ ಮೇಲೆ ಹೇಳಿದ (೨)ನೆಯ ಪುಸ್ತಕವೂ ಒಂದೆಯೆಂದು ತೋರಿತು. ಲೈಬ್ರರಿಯ ಎರಡು ಪ್ರತಿಗಳಿಗೂ ಪರಸ್ಪರ ಹೆಚ್ಚು ವ್ಯತ್ಯಾಸವಿಲ್ಲ. ಇವುಗಳಲ್ಲಿ ಓಲೆಯ ಪುಸ್ತಕವೇ ಹೆಚ್ಚು ಶುದ್ಧವಾಗಿದೆ. ಆದುದರಿಂದ ಅದನ್ನೇ ಇಲ್ಲಿ ಮುಖ್ಯವಾಗಿ ಅನುಸರಿಸಿದೆ.

ಆದರೆ ಈ ಎರಡು ಪ್ರತಿಗಳಿಗೂ ನೇಮಿಸಾಗರ ವರ್ಣಿಸ್ವಾಮಿಗಳಿಂದ ಬಂದ ಪುಸ್ತಕಕ್ಕೂ ವ್ಯತ್ಯಾಸಗಳು ಬಹಳವಾಗಿವೆ. (ಗ) ಪುಸ್ತಕದಲ್ಲಿರುವ ಕಥಾಭಾಗ ಹೆಚ್ಚು, (ಕ) ಮತ್ತು (ಬಿ) ಪುಸ್ತಕಗಳಲ್ಲಿರುವುದು ಕಡಿಮೆ. ಇವುಗಳಲ್ಲಿ (ಕ) ಮತ್ತು (ಬಿ) ಪುಸ್ತಕಗಳು ಮೂಲ ಗ್ರಂಥವಾಗಿದ್ದು ಅದರ ಸಂಗ್ರಹವಾಗಿ (ಗ) ಪುಸ್ತಕವು ಹುಟ್ಟಿತೋ, ಅಥವಾ (ಗ) ಪುಸ್ತಕವೇ ಮೂಲವಾಗಿದ್ದು ಅದಕ್ಕೆ ಪ್ರಕ್ಷಿಪ್ತ ಭಾಗಗಳು ಸೇರಿ 'ಕ' ಮತ್ತು 'ಬಿ' ಪುಸ್ತಕಗಳು ಹುಟ್ಟಿದುವೋ ಹೇಳುವುದು ಕಷ್ಟ. ಈ ಎರಡನೆಯ ಪಕ್ಷವೇ ಸಂಭವವೆಂದು ತೋರುವುದು. ಆದರೂ ಪಾಠಕರ ಸೌಕರ್ಯಕ್ಕಾಗಿ ವಿಸ್ತಾರವಾದ ಪಾಠವೇ ಕೂಡಲ್ಪಟ್ಟಿದೆ. (ಗ) ಪುಸ್ತಕದಲ್ಲಿಲ್ಲದ ಹೆಚ್ಚು ಪಾಠವನ್ನು [ ] ಈ ಆವರಣಚಿಹ್ನೆಗಳಿಂದ ಸೂಚಿಸಿದೆ.

ಈ ಪ್ರತಿಗಳಲ್ಲೆಲ್ಲಾ ಅಶುದ್ಧಗಳು ಹೇರಳವಾಗಿರುವುದರಿಂದ ಗ್ರಂಥದಲ್ಲಿ ಬರುವ ಭಾಷೆಯ ಸ್ವರೂಪವನ್ನೂ ಶಬ್ದರೂಪಗಳನ್ನೂ ನಿಷ್ಕರ್ಷಿಸುವುದು ಕಷ್ಟವಾಯಿತು. ಕೊನೆಗೆ ಹನ್ನೆರಡನೆಯ ಶತಮಾನವಲ್ಲಿ ಪ್ರಚಾರದಲ್ಲಿದ್ದಿರಬಹುದಾದ ಕೆಲವು 'ಮಧ್ಯಗನ್ನಡ' ರೂಪಗಳನ್ನು ಉಪಯೋಗಿಸಬೇಕೆಂದು ತೀರ್ಮಾನಿಸಿ ಅದೇ ನಿಯಮವನ್ನು ಅನುಸರಿಸಿದೆ. ಈ ವಿಚಾರವೂ ಈ ಗ್ರಂಥ ಮತ್ತು ಗ್ರಂಥಕಾರನಿಗೆ ಸಂಬಂಧಪಟ್ಟ ಇತರ ವಿಚಾರಗಳೂ ಎರಡನೆಯ ಸಂಪುಟದ ಉಪೋದ್ಘಾತದಲ್ಲಿ ಬರೆಯಲ್ಪಡುವುವು.

ಈ ಗ್ರಂಥದ ಪ್ರತಿಪಾದ್ಯ ವಿಷಯವು ಸುಲಭವಾಗಿ ತಿಳಿಯುವಂತೆ ಈ ಸಂಪುಟದ ಒಂಬತ್ತು ಅಧ್ಯಾಯಗಳ ಸಾರಾಂಶವೂ ಮುಂದೆ ಬರೆಯಲ್ಪಟ್ಟಿದೆ.

ಎ. ಆರ್. ಕೃಷ್ಣಶಾಸ್ತ್ರೀ.

---

# ಕಥಾಸಾರಾಂಶ.

## ಪ್ರಥಮಾಶ್ವಾಸ

### ದರ್ಶನದ ಕಥೆ.

ಸೌರಾಷ್ಟ್ರ ವಿಷಯದಲ್ಲಿ ಗಿರಿನಗರವೆಂಬುದೊಂದು ಊರು; ಅದನ್ನು ವಿಶ್ವಸೇನನೆಂಬ ಮಹಾಮಂಡಳಿಕನು ಆಳುತ್ತಿದ್ದನು. ಅದೇ ಊರಲ್ಲಿ ದಯಾಮಿತ್ರ ಸೆಟ್ಟಿಯೆಂಬ "ರಾಜಶ್ರೇಷ್ಠಿ" ಇದ್ದನು. ಅವನು ಒಂದು ದಿನ ವ್ಯಾಪಾರಕ್ಕೆಂದು ಹೊರಟು ಪಯಣಬೀಡು ಬಿಟ್ಟಿರಲು, ವಸುಭೂತಿ ಎಂಬ ಒಬ್ಬ ಬ್ರಾಹ್ಮಣನು ಬಂದು, ತಾನು ಗಂಗಾಸ್ನಾನಕ್ಕೆ ಹೊರಟಿರುವುದಾಗಿಯೂ, ಆದರೆ ಒಬ್ಬನೇ ಇರುವುದರಿಂದ ಅವರ ಜೊತೆಯನ್ನು ಅಪೇಕ್ಷಿಸುವುದಾಗಿಯೂ ಹೇಳಿದನು. ಎಲ್ಲರೂ ಪ್ರಯಾಣ ಹೊರಟರು. ದಿವಸಕ್ಕೆ ಮೂರುಗಳಿಗೆಯ ಹೊತ್ತು ಧರ್ಮಶ್ರವಣ ಮಾಡದೆ ಊಟಮಾಡುವುದಿಲ್ಲವೆಂಬುದು ದಯಾಮಿತ್ರ ಸೆಟ್ಟಿಯ ವ್ರತ. ಅದರಂತೆ ದಾರಿಯಲ್ಲಿ ಅವನು ಧರ್ಮವನ್ನು ಹೇಳುತ್ತಿರಲು ವಸುಭೂತಿಯು ನಕ್ಕು ಅವನ ಮುಗ್ಧತನವನ್ನು ತಿಳಿಸಿ ತನ್ನ ನಿಜವಾದ ಧರ್ಮವನ್ನು ಹೇಳುತ್ತೇನೆಂದು ಹೊರಟು ಸವಣರ ಕಾರ್ಯವೆಲ್ಲ "ಕೂಟ' ಕಾರಣವಲ್ಲದೆ ಗತಿಕಾರಣಮಲ್ಲದು, ಗತಿಗೆಡೆವೆನೆಂಬುದು ಕಾಯಕ್ಲೇಶಂಬೇಡಪ್ಪುದು; ಆ ಕಾಯಕ್ಲೇಶಂ ನಿಮ್ಮ ನಚ್ಚಿನಸವಣರ ಮೆಯ್ಯೊಳ್ ಕ್ಲೇಶಿಸಿತುಮಿಲ್ಲ," ಇಂಥವರನ್ನೂ ಅವರ ದೇವರನ್ನೂ ಕೊಂಡಾಡುವುದು "ಮರುಳಾಟ" ವೆಂದು ಹೇಳಿದನು. ಸೆಟ್ಟಿಯೂ "ಕರ್ಮದ ತೀವ್ರತೆಯಿಂದೀ ಪಾಪರ್ಗಂಗೆ ಲೌಕಿಕಧರ್ಮವು ಧರ್ಮವಾಗಿ ತೋರ್ಪುದು" ಎಂದು ಪಶ್ಚಾತ್ತಾಪಪಟ್ಟು ಸಮಯ ನೋಡಿ ಅವನಿಗೆ ಬುದ್ಧಿಕಲಿಸಬೇಕೆಂದು ನಿಶ್ಚಯಿಸಿಕೊಂಡನು.

ಎಂಟು ಹತ್ತು ದಿನಗಳು ಕಳೆದ ಮೇಲೆ ಒಂದುದಿನ ವಸುಭೂತಿಯನ್ನು ಕರೆಸಿ "ಋಷಿಯರಿಂದ ಒಂದು ದೊಡ್ಡ ವ್ರತವನ್ನು ಮಾಡಿಸಿ

ಅವರಿಗೆ ಬೇಕಾದದ್ದನ್ನು ಕೊಡುವುದು ನಮ್ಮಲ್ಲಿ ನಡೆದುಬಂದಿದೆ. ಇಲ್ಲಿ ಋಷಿಯಾರಾರೂ ಇಲ್ಲ; ಇಲ್ಲದಿದ್ದರೇನಾಯ್ತು? ನಿಮಗಿಂತ ನಮಗೆ ಬೇರೆ ಋಷಿಗಳುಬೇಕೆ? ಆದ್ದರಿಂದ ತಾವು ಆ ವ್ರತವನ್ನು ಕೈಕೊಂಡು ಮುಗಿಸಿ ಬೇಕಾದಷ್ಟು ದಕ್ಷಿಣೆಯನ್ನು ಕೇಳಿ, ಕೊಡುವೆನು;" ಎಂದು ಹೇಳಿದನು. ಬ್ರಾಹ್ಮಣನು ಸಂತೋಷಪಟ್ಟು ಆ ವ್ರತದ ಕ್ರಮವೇನೆಂದು ಕೇಳಲು ಅದನ್ನು ಶೆಟ್ಟಿಗೆ ಹೀಗೆ ಹೇಳಿದನು—"ಅನ್ನ ತುಪ್ಪ ಭಕ್ಷ್ಯ ಭೋಜ್ಯಗಳನ್ನು ಕೈಗೆ ಹಾಕಿಸಿಕೊಂಡು ಊಟಮಾಡಬೇಕು; ಮರುದಿನ ಆ ಹೊತ್ತು ಬರುವವರೆಗೂ ತಾಂಬೂಲಾದಿಗಳಾಗಲಿ ಪುನಃ ಅನ್ನಪಾನಾದಿಗಳಾಗಲಿ ಕೂಡದು, ಮನೆ ಬಿಟ್ಟು ಹೊರಡದೆ ಹಗಲೂ ಇರುಳೂ ಓದುತ್ತಿರಬೇಕು. ಮೈಕೊಳೆಯಾಯಿತೆಂದು ಸ್ನಾನ ಮಾಡಕೂಡದು. ಬೇಕಾದರೆ ಬಾಯಲ್ಲಿ ಮುಂಗಿಕ್ಕೊಳ್ಳಬಹುದು. ತಲೆಯ ಕೂದಲುಗಳನ್ನೆಲ್ಲ ಕೀಳಿಸಿಕೊಳ್ಳಬೇಕು ಹೀಗೆ ಎರಡು ತಿಂಗಳು ದಿವಸ ಒಂದೇವಿಧವಾಗಿ ನಡೆಸಬೇಕು" ಎಂದು ಹೇಳಿದನು. ಹಣದಾಸೆಯಿಂದ ವಸುಭೂತಿಯು ಇದಕ್ಕೆ ಒಪ್ಪಿದನು. ಮೊದಲು ಲೋಚ ಮಾಡಿಸಿಕೊಳ್ಳುವಾಗಲೇ ಬಹಳ ಸಂಕಟವನ್ನು ಅನುಭವಿಸಬೇಕಾಯಿತು. ಆದರೆ ಅದನ್ನು ಹೇಗೆ ಹಾಗೋ ಸೈರಿಸಿಕೊಂಡು ಆ ದಿನ ಉಪವಾಸವಿದ್ದು ಮರುದಿನ ಭಕ್ಷ್ಯಭೋಜ್ಯಗಳನ್ನು ಕೈಯಲ್ಲಿ ಹಾಕಿಸಿಕೊಂಡು ಊಟಮಾಡಿದನು. ರಾತ್ರಿ ಒಂದು ಹೊತ್ತಿಗೆ ಬಲವಾದ ಬಾಯಾರಿಕೆಯಾಯಿತು, ಸಂಕಟ ಹೆಚ್ಚಾಗಿ ಅಂದಿನ ರಾತ್ರಿಯನ್ನು ಕಳೆಯುವುದೇ ದುಸ್ತರವಾಯಿತು. ಮರುದಿನ ಊಟದ ಹೊತ್ತು ಬರಲು ಪುನಃ ಹಾಲು ತುಪ್ಪ ಭಕ್ಷ್ಯ ಭೋಜ್ಯಗಳನ್ನು ತಂದು ಬಡಿಸಿದರು. ಆದರೆ ಹಿಂದಿನ ರಾತ್ರಿ ಅನುಭವಿಸಿದ ಬಾಯಾರಿಕೆಯನ್ನು ನೆನಸಿಕೊಂಡು ಅವೊಂದನ್ನೂ ತೆಗೆದುಕೊಳ್ಳುವುದಕ್ಕೆ ಆತನು ಇಷ್ಟಪಡಲಿಲ್ಲ. ವೈಶ್ಯನು ಇದನ್ನು ಕಂಡು "ನಮ್ಮ ಋಷಿಗಳು ನಾವು ಹೇಳಿದಂತೆ ಮಾತನಾಡದೆ ಊಟಮಾಡುತ್ತಾರೆ; ಭೂದೇವರಾದ ನಿಮಗೆ ಇದೊಂದತಿಶಯವೇ?" ಎಂದು ಮೂದಲಿಸಿದನು. ಬಹಳ ಕಷ್ಟದಿಂದ ಅದೆಲ್ಲವನ್ನೂ ಊಟಮಾಡಬೇಕಾಯಿತು. ಹೀಗೆ ಏಳೆಂಟುದಿನಗಳು ಏಳೆಂಟು

# ದ್ವಿತೀಯಾಶ್ವಾಸ

## ನಿಶ್ಶಂಕೆಯ ಕಥೆ.

ಕಾಶ್ಮೀರ ದೇಶದ ವಿಜಯಪುರವೆಂಬ ಪಟ್ಟಣದಲ್ಲಿ ಅರಿಮಥನನೆಂಬ ರಾಜನು ಸೌಂದರಿಯೆಂಬ ಪಟ್ಟದರಸಿಯೊಡನೆ ಆಳುತ್ತಿದ್ದನು ಅವನಿಗೆ ಲಲಿತಾಂಗನೆಂಬ ಮಗನು ಹುಟ್ಟಿದನು ; ತಾಯಿತಂದೆಗಳು ಅವನಲ್ಲಿ ಅಧಿಕವಾದ ಮೋಹವನ್ನಿಟ್ಟು ಅವನು ಏನು ಮಾಡಿದರೂ ಅವನನ್ನು ಬಯ್ಯದೆ ಹೊಡೆಯದೆ ಮುದ್ದಿಸುತ್ತಿದ್ದರು. ಅವನು ತನ್ನ ಗೆಳೆಯರೊಡಗೂಡಿ ಪುರಜನರನ್ನೂ ಪರಿಜನರನ್ನೂ ಹಿಡಿದು ಹೊಡೆದರೆ ಅದು ಅವನ ತಾಯಿತಂದೆಗಳಿಗೆ ವಿನೋದವಾಗಿತ್ತು ; ಹೀಗೆ ಅವನು "ಅಂಕುಶವಿಲ್ಲದ ಮದದಾನೆಯಂತೆ" ಬೆಳೆದು, ಪ್ರಾಪ್ತಯೌವನನೂ ಲೋಕಕಂಟಕನೂ ಆಗಲು ಜನರೆಲ್ಲರೂ ಬಂದು ಅರಮನೆಯ ಬಾಗಿಲಲ್ಲಿ ಗೋಳಿಟ್ಟರು. ಅರಿಮಥನ ಮಹಾರಾಜನು ಅವರ ದೂರನ್ನು ವಿಚಾರಿಸಿ ಕೇಳಿ ತಾನು ಮೊದಲಿನಿಂದಲೂ ಮಗನನ್ನು ಮುದ್ದುಮಾಡಿ ಅಶಿಕ್ಷೆಯಲ್ಲಿ ಬೆಳಸಿದುದೇ ಇದಕ್ಕೆ ಕಾರಣವೆಂದು ಎಂದುಕೊಂಡು ಲಲಿತಾಂಗನನ್ನು ಕರೆಸಿ ಅವನಿಗೆ ರಾಜನೀತಿಯನ್ನೂ ಬುದ್ಧಿವಾದವನ್ನೂ ಹೇಳಿದನು. ಆದರೆ ಇದರಿಂದ ಫಲವೇನೂ ಆಗದೆ ಲಲಿತಾಂಗನು ಎಂದಿನಂತೆ ಜನರನ್ನು ಕಾಡುತ್ತಲೇ ಬಂದನು. ಇದನ್ನು ಕಂಡು ಮಹಾರಾಜನು ಕೋಪಗೊಂಡು ತನ್ನ ದೇಶವನ್ನು ಬಿಟ್ಟು ಹೊರಟು ಹೋಗಬೇಕೆಂದು ಮಗನಿಗೆ ಅಪ್ಪಣೆಮಾಡಿದನು. ಅದರಂತೆ ಅವನು ವಿಜಯಪುರವನ್ನು ಬಿಟ್ಟು ಹೊರಟು ನೇಪಾಳದೇಶವನ್ನು ಸೇರಿ ಅಲ್ಲಿ ಕಳ್ಳರಿಗೆ ಅಧಿಪತಿಯಾಗಿ ಅವರಿಂದ ಅದೃಶ್ಯಘುಟಿಕವನ್ನು ಪಡೆದನು ಅದರ ಸಹಾಯದಿಂದ ಅನಂಗಸೌಂದರಿಯೆಂಬ ಆ ಪೂರಿನ ವೇಶ್ಯಾಸ್ತ್ರೀಯೊಬ್ಬಳಿಗೆ ಬೇಕಾದ ವಸ್ತುಗಳನ್ನು ತಂದು ಕೊಡುತ್ತ ಇದ್ದನು. ದೊಡ್ಡ ದೊಡ್ಡ ರಾಜರೂ ಸಾಹುಕಾರರೂ ಕೂಡ ತಂದೀಯಲಾರದ ವಸ್ತುಗಳನ್ನೆಲ್ಲಾ ಅವನು ತಂದು ಕೊಡುತ್ತಿದ್ದುದನ್ನು ನೋಡಿ ಆಶ್ಚರ್ಯಪಟ್ಟು ಆ ವೇಶ್ಯೆಯು ಒಂದು ದಿನ ಇದರ ಗುಟ್ಟನ್ನು ಅವನಿಂದ ಹೊರಡಿಸಿದಳು.

ಮರುದಿವಸ ರಾಜನೂ ರಾಣಿಯೂ ಜಲಕ್ರೀಡೆಗಾಗಿ ಆ ಮಾರ್ಗದಿಂದ ಹೋಗುತ್ತಿರಲು ಮಹಾರಾಣಿಯು ಧರಿಸಿಕೊಂಡಿದ್ದ ಜ್ಯೋತಿಪ್ರಭವೆಂಬುದೊಂದು ಪದಕವನ್ನು ಆ ವೇಶ್ಯೆಯು ಕಂಡು ಅದನ್ನು ತನಗೆ ತಂದುಕೊಂಡಬೇಕೆಂದು ಲಲಿತಾಂಗನನ್ನು ನಿರ್ಬಂಧ ಪಡಿಸಿದಳು. ಅವಳ ಇಷ್ಟದಂತೆ ಅವನು ಅದನ್ನು ಒಂದು ರಾತ್ರಿ ಅರಮನೆಯಿಂದ ಕದ್ದು ತರುತ್ತಿರಲು, ಅವನು ಅದೃಶ್ಯನಾಗಿದ್ದರೂ ಆ ರತ್ನವು ಸೂರ್ಯನಂತೆ ಪ್ರಕಾಶಿಸುತ್ತಿದ್ದಿತು. ಇದನ್ನು ನೋಡಿದ ದಂಡಕನೆಂಬ ತಳವಾರನು ಅಟ್ಟಿಸಿಕೊಂಡು ಬರಲು ಲಲಿತಾಂಗನು ದೆಸೆಗೆಟ್ಟು ಓಡುತ್ತ ಶ್ಮಶಾನಕ್ಕೆ ಬಂದನು. ಅಲ್ಲಿ ವರಸೇನನೆಂಬವನೊಬ್ಬನು ಒಂದು ಮರದ ಕೆಳಗೆ ಪರಶು ಕೊಂತ ಮುಂತಾದ ಮುವ್ವತ್ತೆರಡು ಆಯುಧಗಳನ್ನು ನೆಟ್ಟು ಪೂಜಿಸಿ ಅವರ ಮೇಲೆ ತೂಗುಹಾಕಿದ ಒಂದು ನೆಲುವಿನ ಮೇಲಕ್ಕೆ ಹತ್ತಿ ಇಳಿದು ಮಾಡುತ್ತಿದ್ದನು. ಇದನ್ನು ನೋಡಿ ಅಂಜನ ಚೋರನು, ಅದರ ವಿಚಾರವನ್ನು ಪ್ರಶ್ನೆ ಮಾಡಲು ಆತನು ಜಿನದತ್ತ ಸೆಟ್ಟಿಯು ಹೇಳಿಕೆಯಂತೆ ಒಂದು ವಿದ್ಯೆಯನ್ನು ಸಾಧಿಸಲೋಸುಗ ತಾನು ಹೀಗೆ ಮಾಡುತ್ತಿದ್ದನೆಂದೂ ಆದರೆ ಆ ಆಯುಧಗಳ ಮೇಲೆ ಬೀಳುವುದಕ್ಕೆ ಮನಸ್ಸಿರಲಿಲ್ಲವೆಂದೂ ಗೊತ್ತಾಯಿತು. ಲಲಿತಾಂಗನು ಇದನ್ನು ತಿಳಿದು, ತಳಾರರ ಕೈಯಲ್ಲಿ ಸಾಯುವುದಕ್ಕಿಂತ ಹೀಗೆ ಸಾಯುವುದೇ ಮೇಲೆಂದು ನಿರ್ಧರಿಸಿ ಅವನಿಂದ ತಕ್ಕ ಮಂತ್ರವನ್ನು ಉಪದೇಶಮಾಡಿಸಿಕೊಂಡು ನೆಲುವಿನ ಮೇಲಿನಿಂದ ಆಯುಧಗಳ ಮೇಲೆ ಬಿದ್ದನು. ಆದರೆ ಆಯುಧಗಳ ಹತ್ತಿರ ಬಂದಕೂಡಲೆ ಮೇಲಕ್ಕೆ ಹಾರಿದನು. ಆ ವಿದ್ಯಾದೇವತೆಯು ಮುಂದೆ ಬಂದು ನಿಂತು 'ಏನಪ್ಪಣೆ ?' ಎಂದು ಕೇಳಿತು. ಅದಕ್ಕೆ ಅವನು ತನ್ನನ್ನು ಜಿನದತ್ತನಲ್ಲಿಗೆ ಕರೆದುಕೊಂಡು ಹೋಗಬೇಕೆಂದು ಅಪೇಕ್ಷಿಸಿದನು. ಅದರಂತೆ ಅದು ಅವನನ್ನು ಕರೆದುಕೊಂಡು ಹೋಗಿ ಬಿಡಲು ಅವನು ಜಿನದತ್ತನನ್ನು ಕಂಡು ಈ ವಿದ್ಯೆ ಬಂದ ಪರಿಯನ್ನು ಕೇಳಿದನು. ಅದನ್ನು ಜಿನದತ್ತನು ಈ ರೀತಿಯಾಗಿ ವಿವರಿಸಿದನು :—

"ಜಿನಪದವೆಂಬ ದೇಶದಲ್ಲಿ ಭೂವಿತಿಲಕವೆಂಬ ನಗರವಿದೆ. ಅದಕ್ಕೆ ನರಪಾಲನೆಂಬ ದೊರೆ ಅವನ ರಾಜಶ್ರೇಷ್ಠಿ ಸೌಂದರನೆಂಬ ವನಿಗೂ ಆ ಶ್ರೇಷ್ಠಿಯು ಹೆಂಡತಿ ಸುನಂದೆ ಎಂಬವಳಿಗೂ ಶ್ರೀವರ್ಮ, ಜಯವರ್ಮ, ಜಿನಸೇನ, ಜಿನದತ್ತ, ಜಿನದಾಸ, ಧನ್ವಂತರಿ ಎಂದು ಮುಂತಾಗಿ ಎಂಟುಜನ ಮಕ್ಕಳಾದರು. ಆ ರಾಜನ ಪುರೋಹಿತನಾದ ಸೋಮಶರ್ಮನಿಗೂ ಅವನ ಹೆಂಡತಿ ಅಗ್ನಿಲೆಗೂ ವಿಶ್ವಾನುಲೋಮ ನೆಂಬ ಮಗನಾದನು ಈ ಧನ್ವಂತರಿಯೂ ವಿಶ್ವಾನುಲೋಮನೂ ದುರ್ವ್ಯಾಪಾರಕ್ಕೆ ಬಿದ್ದು ಅರಮನೆಯಲ್ಲಿ ಕಳವುಮಾಡಿ ದೇಶಭ್ರಷ್ಟರಾಗಿ ಮೊದಲ್ಪಟ್ಟು ತಾಯಿ ಹೆಂಡತಿಯರೊಡನ ಪರದೇಶಕ್ಕೆ ಹೋಗಿ ಅಲ್ಲಿ ಕಳವಿನಿಂದ ಜೀವಿಸುತ್ತಿದ್ದರು. ಧನ್ವಂತರಿಯು ವಿಶ್ವಾನುಲೋಮನ ಇಷ್ಟದಂತೆ ಬಸದಿಗೆ ಹೋಗುವುದನ್ನು ಬಿಟ್ಟು ಬಿಟ್ಟನು ಆದರೆ ಒಂದುದಿನ ಅವರಿಬ್ಬರೂ ಕೆರೆಗೆ ಹೋಗುತ್ತಿರುವಾಗ ಒಂದು ಮದವಾದಾನೆಯು ಆ ದಾರಿಯಲ್ಲಿ ಬರುವದನ್ನು ನೋಡಿ ಅವರು ಭಯಗೊಂಡು ಹತ್ತಿರದಲ್ಲಿದ್ದ "ಸಹಸ್ರ ಕೂಟ ಮಂಡಿತ" ವೆಂಬ ಒಂದು ಜಿನಾಲಯ ದಲ್ಲಿ ಹೋಗಿ ಸೇರಿಕೊಂಡರು ಅಷ್ಟರಲ್ಲಿಯೇ ಮಳೆ ಬಂದಿತು, ಕತ್ತಲೆ ಯಾಯಿತು, ಊರಬಾಗಿಲನ್ನು ಹಾಕಿಬಿಟ್ಟರು ಆದುದರಿಂದ ಅವ ರಿಬ್ಬರೂ ಅಲ್ಲಿಯೇ ನಿಲ್ಲಬೇಕಾಯಿತು ಅಲ್ಲಿ ವರಧರ್ಮರೆಂಬ ಮುನಿ ಗಳು ಧರ್ಮೋಪದೇಶ ಮಾಡುತ್ತಿದ್ದರು. ಇದು ಕಿವಿಗೆ ಬೀಳಬಾರ ದೆಂದು ಇಬ್ಬರೂ ಕಿವಿಗೆ ಬಟ್ಟೆಗಿಡಿದುಕೊಂಡು ಮಲಗಿದ್ದರು. ವಿಶ್ವಾನು ಲೋಮನಿಗೆ ನಿದ್ದೆ ಬಂದಮೇಲೆ ಧನ್ವಂತರಿಯು ತನ್ನ ಕಿವಿಗೆ ಗಿಡಿದುಕೊಂಡ ದ್ದನ್ನು ತೆಗೆದುಹಾಕಿ ಮುನಿಗಳ ಉಪದೇಶವನ್ನು ಕೇಳಿ ಕರ್ಮೋಪ ಶಮವಾಗಲು ಅವರಹತ್ತಿರ ಹೋಗಿ "ನನಗೊಂದು ವ್ರತವನ್ನು ಕೊಡ ಬೇಕು" ಎಂದು ಕೇಳಿದನು. ಅದಕ್ಕೆ ಅವರು "ನಿತ್ಯವೂ ತಲೆಬಟ್ಟು ತಲೆಯನ್ನು ನೋಡದೆ ಊಟಮಾಡಬೇಡ" ಎಂದರು ಇವರಂತೆ ಅವನು ನಡೆಸುತ್ತ ಒಂದುದಿವಸ ಊಟದ ಸಮಯದಲ್ಲಿ ಈ ವ್ರತವನ್ನು ಜ್ಞಾಪಿಸಿಕೊಂಡು ತನ್ನ ನೆರೆಯಲ್ಲಿದ್ದ ಕುಂಬಾರನು ತಲೆಬಟ್ಟು ತಲೆಯವ ನಾಗಿದ್ದದ್ದರಿಂದ ಅವನನ್ನು ನೋಡುವುದಕ್ಕೆಂದು ಹೋದನು. ಅವನು

ಮನೆಯಲ್ಲಿರಲಿಲ್ಲ; ಆದುದರಿಂದ ಅವನು ಹಣ್ಣು ತರುವುದಕ್ಕೆಂದು ಹೋಗಿದ್ದ ಸ್ಥಳಕ್ಕೆ ತಾನೇಹೋಗಿ ನೋಡಿ 'ನೋಡಿದೆ' ಎಂದು ಕೂಗಿಕೊಂಡನು. ಆದರೆ ಅಷ್ಟುಹೊತ್ತಿಗೆ ಸರಿಯಾಗಿ ಆ ಕುಂಬಾರನಿಗೆ ಒಂದು ನಿಧಿಯು ಕಣ್ಣಿಗೆ ಬಿದ್ದಿತ್ತು. ಇದನ್ನು ಧನ್ವಂತರಿಯು ಕಂಡು ಹಾಗೆ ಕೂಗಿರಬಹುದೆಂದು ಅವನು ತಿಳಿದುಕೊಂಡು ಸಾಯುಂಕಾಲ ಅವನ ಮನೆಗೆ ಬಂದು ಆ ನಿಧಿಯನ್ನು ಅವನ ಮುಂದೆ ಇಟ್ಟನು. ಇದರಲ್ಲಿ ಕುಂಬಾರನಿಗೆ ಬೇಕಾದಷ್ಟನ್ನು ಕೊಟ್ಟು ಕಳುಹಿಸಿ ಧನ್ವಂತರಿಯು ಬೆಳಗಾಗುತ್ತಲೆ ಬಸದಿಗೆ ಬಂದು ಭಟ್ಟಾರಕರಿಗೆ ನಮಸ್ಕಾರಮಾಡಿ ತನಗೆ ಇನ್ನೊಂದು ವ್ರತವನ್ನು ಕೊಡಬೇಕೆಂದು ಕೇಳಿದನು ಅದಕ್ಕೆ ಅವರು "ಹೆಸರು ಗೊತ್ತಿಲ್ಲದ ಯಾವಮರದ ಹಣ್ಣುಗಳನ್ನೂ ತಿನ್ನಬೇಡ" ಎಂದರು. ಕೆಲವು ದಿನಗಳಮೇಲೆ ಇವರಿಬ್ಬರೂ ಪರದೇಶಕ್ಕೆ ಹೋಗಿಬರುತ್ತ ದಾರಿಯಲ್ಲಿ ಕಾಡಿನೊಳಗೆ ಹಸಿವಾಗಲು ಭೃತ್ಯರನ್ನು ಹಣ್ಣು ಹಂಪಲು ತರುವುದಕ್ಕಾಗಿ ಕಳುಹಿಸಿಕೊಟ್ಟರು. ಅವರು ಹೋಗಿ "ಕಾಂಚೀರ" ಮರದ ಹಣ್ಣುಗಳನ್ನು ತಂದರು ಇದರ ಹೆಸರು ಗೊತ್ತಿಲ್ಲದಿದ್ದುದರಿಂದ ಧನ್ವಂತರಿಯು ಅವುಗಳನ್ನು ತಿನ್ನಲಿಲ್ಲ, ಅವನು ತಿನ್ನದೆ ಇದ್ದುದರಿಂದ ವಿಶ್ವಾನುಲೋಮನೂ ತಿನ್ನಲಿಲ್ಲ. ಭೃತ್ಯರುಮಾತ್ರ ಹಸಿವಿನ ಆತುರಕ್ಕೆ ತಿಂದು ಸತ್ತುಹೋದರು. ಆದುದರಿಂದ ಅವರೆಲ್ಲರ ಐಶ್ವರ್ಯವನ್ನೂ ಇವರಿಬ್ಬರೇ ತೆಗೆದುಕೊಂಡು ಬಂದರು. ಧನ್ವಂತರಿಯು ಇದನ್ನು ಭಟ್ಟಾರಕರಿಗೆ ತಿಳಿಸಿ ಮತ್ತೊಂದು ವ್ರತವನ್ನು ಕೊಡಬೇಕೆಂದು ಕೇಳಿದನು. ಅದಕ್ಕೆ ಅವರು "ಹಿಟ್ಟಿನ ಎತ್ತನ್ನೂ ಬಂಡಿಯನ್ನೂ ತಿನ್ನಬೇಡ" ಎಂದರು. ಒಂದುದಿನ ಹಿಂದಿನಂತೆ ಅವನೂ ವಿಶ್ವಾನುಲೋಮನೂ ಕಾಡಿನಲ್ಲಿ ಸಿಕ್ಕಿ ಹಸಿದು, ಯಾರೋ ಪೂಜಿಸಿಬಿಟ್ಟು ಹೋಗಿದ್ದ ಒಂದು ಹಿಟ್ಟಿನ ಎತ್ತನ್ನೂ ಗಾಡಿಯನ್ನೂ ನೋಡಿದರು. ಇದನ್ನು ಅವರ ಭೃತ್ಯರು ತಿಂದರು. ಆದರೆ ಹಿಂದಿನ ದಿವಸ ಅದರಲ್ಲಿ ಒಂದು ಹಾವು ವಿಷವನ್ನು ಕಾರಿದ್ದುದರಿಂದ ಅವರೆಲ್ಲರೂ ಸತ್ತುಹೋದರು. ಧನ್ವಂತರಿಯು ತಾನು ಬದುಕಿದುದಕ್ಕೆ ಸಂತೋಷಪಟ್ಟು ಪುನಃ ಬಸದಿಗೆ ಬಂದು ಭಟ್ಟಾರಕರಿಗೆ ಎಲ್ಲವನ್ನೂ ತಿಳಿಸಿ

ಮತ್ತೊಂದು ವ್ರತವನ್ನು ಕೇಳಿದನು. ಅವರು "ಪರ್ವಗಳು ಅಷ್ಟಮಿ ಚತುರ್ದಶಿ ಈ ದಿನಗಳಲ್ಲಿ ಮದ್ಯಮಾಂಸಗಳನ್ನು ಬಿಟ್ಟುಬಿಡು" ಎಂದರು. ಇದಾದ ಕೆಲವುದಿನದಮೇಲೆ ಪರದೇಶದಲ್ಲಿ ಕದ್ದು ಹಿಂತಿರುಗಿ ಬರುತ್ತಾ ದಾರಿಯಲ್ಲಿ ಇಳಿದುಕೊಂಡು, ಮಾಂಸದಮೇಲೆ ಆಸೆಯಾಗಲು ಇವರಿಬ್ಬರೂ ತಮ್ಮ ತಮ್ಮ ಜನರನ್ನು ಹತ್ತಿರದಲ್ಲಿದ್ದ ಒಂದು ಹಳ್ಳಿಯಿಂದ ಮಾಂಸವನ್ನು ತರುವಂತೆ ಹೇಳಿಕಳುಹಿಸಿದರು. ಅವರು ದುರಾಲೋಚನೆಮಾಡಿ ಎದುರು ಪಕ್ಷಿಯವರನ್ನು ಕೊಂದು ಅವರ ಐಶ್ವರ್ಯವನ್ನು ದೋಚಿಕೊಳ್ಳುವುದಕ್ಕೋಸ್ಕರ ಎರಡು ಗುಂಪಿನವರೂ ಬೇರೆಬೇರೆ ತಾವು ತಂದ ಮಾಂಸಕ್ಕೆ ವಿಷವನ್ನು ಬೆರಸಿ ತಂದರು. ಆದರೆ ಅಂದು ಚತುರ್ದಶಿಯಾದುದರಿಂದ ಧನ್ವಂತರಿಯು ಅದನ್ನು ತಿನ್ನಲಿಲ್ಲ; ಅವನು ತಿನ್ನದಿದ್ದುದರಿಂದ ವಿಶ್ವಾನುಲೋಮನೂ ತಿನ್ನಲಿಲ್ಲ. ಪರಿಜನರು ಮಾತ್ರ ಒಂದು ಗುಂಪಿನವರು ತಂದದ್ದನ್ನು ಇನ್ನೊಂದು ಗುಂಪಿನವರು ತಿಂದು, ಎಲ್ಲಾ ಮೃತರಾದರು. ಇದನ್ನು ನೋಡಿ ತನ್ನ ವ್ರತದ ಮಹಿಮೆಯನ್ನು ತಿಳಿದು ಧನ್ವಂತರಿಯು ಬಂದು ಭಟ್ಟಾರಕರನ್ನು ವಂದಿಸಿ ಮತ್ತೊಂದು ವ್ರತವನ್ನು ಕೇಳಿಕೊಂಡನು. ಅದಕ್ಕೆ ಅವರು "ನೀನು ಯಾವ ಪ್ರಾಣಿಯ ಮೇಲಾದರೂ ಕೋಪಿಸಿಕೊಂಡಾಗ ಹಿಂದಕ್ಕೆ ಏಳು ಹೆಜ್ಜೆ ಹೋಗಿ ಆಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡು" ಎಂದರು. ಇದಾದನಂತರ ಕಳಿಂಗದೇಶಕ್ಕೆ ಕಳ್ಳತನಕ್ಕೆ ಹೋಗಿ ಆರುತಿಂಗಳು ಅಲ್ಲಿ ಕದಿಯುತ್ತಿದ್ದು ತಟ್ಟನೆ ಮನೆಯಮೇಲೆ ಮನಸ್ಸುತಿರುಗಿ ಒಂದುರಾತ್ರಿ ಊರಿಗೆ ಬಂದು 'ಕವಾಟೋದ್ಘಾಟನ ವಿದ್ಯೆ'ಯಿಂದ ಬಾಗಿಲನ್ನು ತೆಗೆದು ಒಳಗೆ ನುಗ್ಗಿ ತನ್ನ ತಾಯಿಯೂ ಹೆಂಡತಿಯೂ ಒಟ್ಟಿಗೆ ಮಲಗಿದ್ದುದನ್ನು ನೋಡಿ ಯಾರೋ ಪರಪುರುಷನೊಬ್ಬನು ಅಲ್ಲಿಗೆ ಬಂದಿರಬೇಕೆಂದು ನೆನೆಸಿದನು. ಕೂಡಲೆ ಕೋಪಬಂದಿತು. ಆದರೆ ವ್ರತವನ್ನು ಅನುಸರಿಸಿ ಹಿಂದಕ್ಕೆ ಏಳಡಿಹೋದನು. ಇಷ್ಟರಹೊತ್ತಿಗೆ ಅವನ ಹೆಂಡತಿಯು 'ಅತ್ತೆ! ಸೆಕೆಯಾಗುತ್ತಿದೆ, ಸ್ವಲ್ಪ ಅತ್ತಲಾಗಿ ಮಲಗಿಕೊಳ್ಳಿ' ಎಂದಳು. ಅದನ್ನು ಕಂಡು ತಾನುಮಾಡಬೇಕೆಂದಿದ್ದ ಕೊಲೆಯು ನಿವಾರಣೆಯಾದುದಕ್ಕೆ ಸಂತೋಷಪಟ್ಟು, ಐದುವ್ರತ

ಗಳೂ ಸಫಲವಾದುದರಿಂದ ವಿಶ್ವಾಸವನ್ನೂ ವೈರಾಗ್ಯವನ್ನೂ ಪಡೆದು ದೀಕ್ಷೆಯನ್ನು ಕೈಕೊಂಡು ತಪಸ್ಸಿಗೆ ಹೊರಟು ಹೋದನು. ಮುಂದಿನ ಜನ್ಮದಲ್ಲಿ ಇವನು ಅಚ್ಯುತಕಲ್ಪದ ಅಹಮಿಂದ್ರದೇವನಾಗಿಯೂ ವಿಶ್ವಾನುಲೋಮನು ವಾಹನದೇವನಾಗಿಯೂ ಹುಟ್ಟಿದರು. ಅಲ್ಲಿಯೂ ಇವರಿಗೆ ತಮ್ಮ ತಮ್ಮ ಧರ್ಮವೇ ಹೆಚ್ಚೆಂಬ ಸ್ಪರ್ಧೆ ಉಂಟಾಯಿತು. ಆಗ ವಿಶ್ವಾನುಲೋಮನು ತೋರಿಸಿದ ತನ್ನ ಧರ್ಮದ ಒಬ್ಬ ಋಷಿಯು ಮಾಡುತ್ತಿದ್ದ ತಪಸ್ಸನ್ನು ಅಚ್ಯುತೇಂದ್ರನು (ಧನ್ವಂತರಿಯು) ಭಂಗ ಪಡಿಸಿ ಅವನನ್ನು ಸಂಸಾರದಲ್ಲಿ ಪ್ರವೇಶಮಾಡಿಸಿದನು. ಆದರೆ ಅದ ರಂತೆ ಧನ್ವಂತರಿಯು ತೋರಿಸಿದ ಒಬ್ಬ ಗೃಹಸ್ಥನ ತಪಸ್ಸನ್ನು ಮಾತ್ರ ವಿಶ್ವಾನುಲೋಮನು ಮಹಾಪ್ರಯತ್ನಮಾಡಿದರೂ ಭಂಗಪಡಿಸುವುದ ಕ್ಕಾಗಲಿಲ್ಲ. ಆಗ ವಾಹನದೇವನು (ವಿಶ್ವಾನುಲೋಮನು) ಮಿಥ್ಯಾತ್ವ ವನ್ನು ಬಿಟ್ಟು ಸದ್ದೃಷ್ಟಿಯಾದನು.

ಈ ಅಚ್ಯುತೇಂದ್ರನು ಒಂದುದಿನ ಬಂದು ನನಗೆ ನಮಸ್ಕರಿಸಿ 'ಪರ್ವದಿನಗಳಲ್ಲಿ ಅಕೃತ್ರಿಮ ಚೈತ್ಯಾಲಯಗಳಿಗೆ ಹೋಗಿಬರುವು ದಕ್ಕೆ ಅನುಕೂಲವಾಗುತ್ತದೆ' ಎಂದು ಹೇಳಿ ಈ ವಿದ್ಯೆಯನ್ನು ಕೊಟ್ಟು ಹೋದನು. ನಾನು ಅದನ್ನು ನಮ್ಮ ದೇಶದ ವಾಣಿವರ ಸೇನನಿಗೆ ಕೊಟ್ಟೆನು"

ಈ ಕಥೆಯನ್ನು ಕೇಳಿ ಲಲಿತಾಂಗನು ಬೆರಗಾಗಿ, ಅಂತಹ ದೇವನೂ ಈ ಮನುಷ್ಯ ಮಾತ್ರನಿಗೆ ನಮಸ್ಕಾರಮಾಡಿದನಂದಮೇಲೆ
"......ಜಿನಾಗಮಮುಮಂ ನಿಶ್ಶಂಕೆಯಿಂ ನಂಬುವಾತನಸಮ್ಯಕ್ತ್ವೋ ನ್ನತಿಯುಂ ಮಹಾಮಹಿಮೆಯುಂ ಪೇಳ್ದೊಡೆಸಲ್ ಬರ್ಕುಮೇ" ಎಂದು ದರ್ಶನದೊಳ್ ನಿಶ್ಶಂಕನಾಗಿ" ಸಂಸಾರ ಭೋಗಕ್ಕೆ ಹೇಸಿ ದೀಕ್ಷೆ ಯನ್ನು ತೆಗೆದುಕೊಂಡು ತಪಸ್ಸುಮಾಡಿ ಕರ್ಮಕ್ಷಯವಾಗಲು "ತ್ರಿಲೋಕ ಶಿಖರಿ ಶೇಖರ" ನಾದನು.

---

## ತೃತೀಯಾಶ್ವಾಸ.

### ನಿಷ್ಕಾಂಕ್ಷೆಯ ಕಥೆ

ಅಂಗವಿಷಯದ ಚಂಪಾಪುರದಲ್ಲಿ ಪ್ರಿಯದತ್ತನೆಂಬ ವರ್ತಕನು ಇದ್ದನು; ಆತನಿಗೆ ಅಂಗವತಿಯೆಂಬ ಹೆಂಡತಿಯೂ ಅನಂತಮತಿ ಯೆಂಬ ಮಗಳೂ ಇದ್ದರು. ಒಂದುದಿನ ಕೆಲವು ಹುಡುಗರು ಸೇರಿ ಕೊಂಡು ಅನಂತಮತಿಯ ಜೊತೆಯಲ್ಲಿ ಒಂದು ಬೊಂಬೆಯನ್ನು ಇಟ್ಟು ಅದು ಅವಳ ಗಂಡನೆಂದು ಹೇಳುತ್ತ ಮದುವೆಯ ಆಟವನ್ನು ಆಡುತ್ತಿದ್ದರು. ಪ್ರಿಯದತ್ತನು ಬಸದಿಗೆ ಹೋಗುತ್ತ ದಾರಿಯಲ್ಲಿ ಇದನ್ನು ನೋಡಿ 'ಯಾವ ಉತ್ಸವವೂ ಇಲ್ಲದೆ ಹೀಗೆ ನೀನು ಮದುವೆಯಾಗು ವುದು ಉಚಿತವಲ್ಲವೆಂದು ಹೇಳಿ ಕರೆದುಕೊಂಡುಹೋಗಿ ಬಸದಿಯಲ್ಲಿ ಭಟ್ಟಾರಕರನ್ನು ಕುರಿತು 'ಈ ಹುಡುಗಿಗೆ ಬ್ರಹ್ಮಚರ್ಯವನ್ನು ಕೊಡಿ' ಎಂದು ಹೇಳಿದನು. ಅವರ ಹಾಸ್ಯಕ್ಕೆ 'ಇಂದಿನಿಂದ ನಿನಗೆ ಬ್ರಹ್ಮ ಚರ್ಯವ್ರತವನ್ನು ಕೊಟ್ಟಿದ್ದೇವೆ' ಎಂದು ಹೇಳಿಬಿಟ್ಟರು. ಆದರೆ ಅವಳು ಮಾತ್ರ ಇದನ್ನು ಪರಮಾರ್ಥವಾಗಿ ತಿಳಿದುಕೊಂಡು ಐದನೆಯ ವರ್ಷ ದಲ್ಲಿ ಅನಿರೀಕ್ಷಿತವಾಗಿ ಈ ವ್ರತವು ಬಂದುದಕ್ಕಾಗಿ ಸಂತೋಷಪಟ್ಟು ಕೊಂಡಿದ್ದಳು. ಅವಳಿಗೆ 'ಬ್ರಹ್ಮಚಾರಿ' ಎಂಬ ಅಡ್ಡಹೆಸರು ರೂಢಿಗೆ ಬಂದಿತು. ಹೀಗಿರಲು ಹನ್ನೆರಡನೆಯ ವರ್ಷದಲ್ಲಿ ಒಂದುದಿನ ಅವಳು ಉದ್ಯಾನದಲ್ಲಿ ಉಯ್ಯಾಲೆಯಾಡುತ್ತಿದ್ದಾಗ ಕುಂಡಲಮಂಡಿತನೆಂಬ ವಿದ್ಯಾಧ ರನು ಆಕಾಶಮಾರ್ಗದಿಂದ ಬಂದು ಅವಳನ್ನು ಎತ್ತಿಕೊಂಡುಹೋದನು. ಇದನ್ನು ಅವನ ಹೆಂಡತಿಯು ಅವಲೋಕಿನೀ ವಿದ್ಯೆಯಿಂದ ಅರಿದು ಕೋಪದಿಂದ ಅವನನ್ನು ಅಟ್ಟಿಸಿಕೊಂಡು ಬರಲು ಅವನು ಅನಂತಮತಿ ಯನ್ನು ಪರ್ಣಲಘುವಿದ್ಯೆಯಿಂದ ಮೆಲ್ಲಗೆ ಕಾಡಿನಲ್ಲಿ ಇಳಿಸಿದನು. ಅವಳು ಕರ್ಮವಶದಿಂದ ಬಂದ ತನ್ನ ಸ್ಥಿತಿಯನ್ನು ನೋಡಿಕೊಂಡು ಜೈನಸ್ತವನವನ್ನು ಮಾಡುತ್ತಿರಲು ಆ ಕಾಡಿನ ಬೇಡಪಡೆಯ ಯಜ ಮಾನನು ಬಂದು ಅವಳನ್ನು ಮೋಹಿಸಿ ಮದುವೆಯಾಗಲಪೇಕ್ಷಿಸಿದಳು. ಆದರೆ ಅವಳು ತಾನು ಹಿಡಿದ ಬ್ರಹ್ಮಚರ್ಯವ್ರತವನ್ನು ಬಿಡುವುದಿಲ್ಲವೆಂದು ನಿರ್ಧರಿಸಿದಳು. ಇದರಿಂದ ಆಸನಕಂಪವಾದ ಯಕ್ಷಿಯು ಬಂದು

ಕಿರಾತನ ವೇಷದಿಂದ ಅವಳನ್ನು ಪರೀಕ್ಷಿಸಿ, ಅವಳು ಸ್ವಲ್ಪವೂ ಸಗ್ಗದಿರಲು, ತನ್ನ ರೂಪವನ್ನು ತೋರಿಸಿ, ಪುನಃ ಅವಳ (ಅನಂತಮತಿಯ) ರೂಪಿನಿಂದ ಕಿರಾತರಾಜನಲ್ಲಿಗೆ ಹೋಗಿ "ನಾನು ದೇವತೆ ; ನನ್ನನ್ನು ಕಳುಹಿಸದೆ ಇದ್ದರೆ ನಿನಗೆ ಏನಾಗುತ್ತದೆ ಎಂಬುದನ್ನು ಮುಂದೆ ನೀನೇ ಅರಿಯುವೆ" ಎಂದು ಹೆದರಿಸಿದಳು. ಅದರಂತೆ ಅವನು ಹೆದರಿಕೊಂಡು ಅನಂತಮತಿಯನ್ನು ಬಿಟ್ಟು ಅಯೋಧ್ಯೆಗೆ ದಾರಿಯನ್ನು ತೋರಿಸಿ ಕಳುಹಿಸಿದನು.

ಅಯೋಧ್ಯೆಯ ಒಂದು ಬಸದಿಯಲ್ಲಿದ್ದಾಗ ಅವಳನ್ನು ಒಬ್ಬ ವರ್ತಕನು ಕಂಡು "ದರ್ಶನವಿಶುದ್ಧೆ" ಯೆಂದು ತಿಳಿದು ಅವಳನ್ನು ಕರೆತಂದು ತನ್ನ ಪಂಡಿತೆಯ ವಶಕ್ಕೆ ಒಪ್ಪಿಸಿದನು. ಆಕೆಯು ಅವಳಲ್ಲಿ ಮಾತ್ಸರ್ಯದಿಂದ ಅನಂತಮತಿಯನ್ನು ವ್ಯಾಳಿ ಯೆಂಬ ಕುಂಟಣಿಗೆ ಮಾರಿದಳು. ವ್ಯಾಳಿಯು ಅವಳನ್ನು ದುರ್ಮಾರ್ಗಕ್ಕೆ ಒಪ್ಪಿಸಲು ಸಾಧ್ಯವಾಗದೆ ಆ ಪುರದ ರಾಜನಾದ ಸಿಂಹರಥನಿಗೆ ಒಪ್ಪಿಸಿದಳು. ಅವನು ಅವಳ ರೂಪದಿಂದ ಮೋಹಿತನಾಗಿ ಅವಳನ್ನು ನಯದಿಂದ ತನ್ನ ವಶವರ್ತಿನಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಪಟ್ಟು ಕೊನೆಗೆ ಅದು ಸಾಧ್ಯವಾಗದೆ ಅವಳಿಗೆ ಬಲಾತ್ಕಾರ ಪೀಡೆಗಳನ್ನು ಮಾಡತೊಡಗಿದನು. ಅವಳುಮಾತ್ರ ಹೆದರದೆ ಪಂಚನಮಸ್ಕಾರವನ್ನು ಧ್ಯಾನಿಸುತ್ತ ಸ್ಥಿರವಾಗಿದ್ದಳು. ಇದನ್ನು ನೋಡಿ ಆ ಪುರದ ದೇವತೆಗಳು ಬಂದು ಅವಳ ನೋವೆಲ್ಲವನ್ನೂ ಪಟ್ಟದರಸಿಯ ಮೇಲೆಯೂ ಪರಿವಾರದವರ ಮೇಲೆಯೂ ತಿರುಗಿಸಿದರು ; ಕೂಡಲೇ ಅವರೆಲ್ಲರೂ ರಕ್ತವನ್ನು ಕಾರಿಕೊಂಡು ನೆಲದ ಮೇಲೆ ಬಿದ್ದರು. ದೊರೆಯೂ ನೋವನ್ನು ಸೈರಿಸಲಾರದೆ ಹೊರಳಾಡುತ್ತಿದ್ದನು. ಇದನ್ನು ನೋಡಿ ದೇವತೆಗಳು ಸಕ್ಕ, ಜಯ-ಜಯನಿನಾದವನ್ನೂ ಪುಷ್ಪವೃಷ್ಟಿಯನ್ನೂ ಮಾಡಿ ಉಪಸರ್ಗವನ್ನು ನಿವಾರಣೆ ಮಾಡಿದರು. ಅನಂತರ ಸಿಂಹರಥ ಮುಂತಾದವರೆಲ್ಲರೂ ಅವಳನ್ನು ಪೂಜಿಸಿ ಶ್ರಾವಕರಾದರು. ಅನಂತಮತಿಯೂ ರಾಜಶ್ರೇಷ್ಠಿಯಾದ ಜಿನೇಂದ್ರದತ್ತಸೆಟ್ಟಿಯ ದೇಹಾರದಲ್ಲಿ ನಾನಾವ್ರತಗಳನ್ನು ಕೈಕೊಂಡು ಮಾಡುತ್ತ ಇದ್ದಳು.

ಇತ್ತ ಪ್ರಿಯದತ್ತಸೆಟ್ಟಿಯು ತನ್ನ ಮಗಳು ಅದೃಶ್ಯಳಾಗಿ ಹೋದುದನ್ನು ನೋಡಿ ದುಃಖಿಸುತ್ತ ಕೆಲವು ಕಾಲದಮೇಲೆ ತನ್ನ ಭಾವನಾದ ಜಿನದತ್ತಸೆಟ್ಟಿಯ ಮನೆಗೆ ಬಂದು ಅವನ ದೇಹಾಂದಲ್ಲಿ ತನ್ನ ಮಗಳನ್ನು ಕಂಡನು. ಆಮೇಲೆ ಪರಸ್ಪರ ಯೋಗಕ್ಷೇಮಗಳು ನಡೆದು ಆದ ಸಂಗತಿಗಳೆಲ್ಲಾ ಗೊತ್ತಾದುವು. ಇದಾದ ಎಂಟುಹತ್ತು ದಿವಸಕ್ಕೆ ಪ್ರಿಯದತ್ತಸೆಟ್ಟಿಯು ಅವಳನ್ನು ತನ್ನ ಸೋದರ ಅಳಿಯನಾದ ಶ್ರುತಸಾಗರನಿಗೆ ಕೊಟ್ಟು ಮದುವೆ ಮಾಡಬೇಕೆಂದು ಯೋಚಿಸಿ ಬೇಕಾದ ಏರ್ಪಾಡುಗಳನ್ನು ಮಾಡಿದನು. ಆದರೆ ಏನುಹೇಳಿದರೂ ಅನಂತಮತಿಯು ಮಾತ್ರ ಮದುವೆಗೆ ಒಪ್ಪದೆ ಎಲ್ಲರನ್ನೂ ಒಡಂಬಡಿಸಿ ಕಮಳಶ್ರೀಗಂತಿಯರಲ್ಲಿ ಜಿನದೀಕ್ಷೆಯನ್ನು ಕೈಕೊಂಡು ತಪಸ್ಸುಮಾಡಿ ಸಮಾಧಿಯಿಂದ ಶರೀರವನ್ನು ಬಿಟ್ಟು ಸಹಸ್ರಾರ ಕಲ್ಪದಲ್ಲಿ ಸುಕಾಂತನೆಂಬ ಮಹತ್ತರದೇವನಾಗಿ ಹುಟ್ಟಿದಳು.

---

## ಚತುರ್ಥಾಶ್ವಾಸ.

### ನಿರ್ವಿಚಿಕಿತ್ಸೆಯ ಕಥೆ.

ಇಂದ್ರಕಚ್ಛ ವಿಷಯದಲ್ಲಿ ರೌರವ ಪುರವೆಂಬುದೊಂದು ಪಟ್ಟಣವಿರುವುದು. ಅದನ್ನು ಪ್ರಭಾವತಿಯೆಂಬ ಪಟ್ಟದರಾಣಿಯೊಡನೆ ಉದ್ದಾಯನನೆಂಬ ರಾಜನು ಆಳುತ್ತಿದ್ದನು.

ಅತ್ತ ಸೌಧರ್ಮಕಲ್ಪದಲ್ಲಿ ಸೌಧರ್ಮೇಂದ್ರನಿಂದ ಧರ್ಮವನ್ನು ಕೇಳಿದ ದೇವತೆಗಳು "ನಿರ್ವಿಚಿಕಿತ್ಸೆಯಲ್ಲಿ ಪ್ರಸಿದ್ಧರಾದವರಾರು?' ಎಂದು ಪ್ರಶ್ನೆಮಾಡಲು, ಸೌಧರ್ಮೇಂದ್ರನು ಉದ್ದಾಯನ ಮಹಾರಾಜನ ಹೆಸರನ್ನು ಹೇಳಿದನು ಇದನ್ನು ಕೇಳಿ ವಾಸವನೆಂಬ ದೇವನು ಆಶ್ಚರ್ಯಪಟ್ಟು ಇದನ್ನು ಪರೀಕ್ಷಿಸಬೇಕೆಂದು ಹೊರಟು ಕುಷ್ಠದಿಂದ ಮಹಾ ಅಸಹ್ಯಕಾರವಾದ ದೇಹವನ್ನೂ ರೂಪವನ್ನೂ ಧರಿಸಿ ರೌರವಪುರದಲ್ಲಿ ಹೋಗುತ್ತಿದ್ದನು. ಅವನನ್ನು ನೋಡಿ ಬಬ್ಬೊಬ್ಬರು ಬಂದೊಂದು ಮಾತನಾಡುತ್ತಿದ್ದರು. ವಾಸವನು ಇದನ್ನೆಲ್ಲಾ ಕೇಳುತ್ತ ಸಕಲ ವೈಭ

ವದಿಂದ ಒಪ್ಪಿದ್ದ ಒದ್ದಾಯನನ ಒಡ್ಡೋಲಗಕ್ಕೆ ಬಂದನು ಮಹಾ ರಾಜನು ಅವನನ್ನು ಕಂಡಕೂಡಲೇ ಎದ್ದು ನಮಸ್ಕರಿಸಿ ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಪರಿವಾರದವರೆಲ್ಲರೂ ಋಷಿಯ ದುರ್ವಾಸನೆಯನ್ನು ತಡೆಯಲಾರದೆ ಒಬ್ಬೊಬ್ಬರಾಗಿ ಹೊರಟುಹೋದರು ಆದರೆ ರಾಜನೂ ರಾಣಿಯೂ ಮಾತ್ರ ಅಸಹ್ಯವಿಲ್ಲದೆ ನಿಂತು ಅವನಿಗೆ ಬೇಕಾದ ಆಹಾರ ವನ್ನು ತಂದಿತ್ತರು. ಋಷಿಯು ತೃಪ್ತಿಯಾಗಿ ಊಟಮಾಡಿ, ಸಂಕಟ ಪಡುತ್ತ ತಟ್ಟನೆ ಮಹಾರಾಜನಮೇಲೆ ವಮನಮಾಡಿಬಿಟ್ಟನು; ದೊರೆಯ ಮೈಯೆಲ್ಲಾ ತೊಯಿದು ಶೋಳೆಯಿಂದ ವಜ್ರಲೇಪಹಾಕಿದಹಾಗಾಯಿತು.. ಆದರೆ ಅವನು ಇದಕ್ಕೂ ಅಸಹ್ಯಪಟ್ಟುಕೊಳ್ಳದೆ ತಾನು ಬಡಿಸಿದುದರಲ್ಲಿ ಹೆಚ್ಚುಕಡಿಮೆಯಾದುದರಿಂದ ಹೀಗಾಯಿತೆಂದು ತನ್ನನ್ನು ತಾನು ನಿಂದಿ ಸಿಕೊಂಡು, ಬೀಳುತ್ತಿದ್ದ ಋಷಿಯನ್ನು ಒಂದು ಜಾವದ ವರೆಗೆ ಹಿಡಿದು ಕೊಂಡು ಕುಳಿತಿದ್ದನು. ಆಯಾಸವು ತೀರಿದಮೇಲೆ ಗಂಡಹೆಂಡರಿ ಬ್ಬರೂ ಅವನನ್ನು ಕರೆದುಕೊಂಡುಹೋಗಿ ತೊಳದು ಪೀತಾಂಬರದಿಂದ ಮೈಒರೆಸಿ ಒಳ್ಳೆಯದೊಂದು ಆಸನದಲ್ಲಿ ಕುಳ್ಳಿರಿಸಿ ತಮ್ಮಿಂದಾದ ಕಷ್ಟ ವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು ಇದನ್ನು ಕೇಳಿ ಸಂತೋ ಷಪಟ್ಟು ವಾಸವನು ತನ್ನ ನಿಜಸ್ವರೂಪವನ್ನು ತೋರಿಸಿ ತಾನು ಬಂದ ವೃತ್ತಾಂತವನ್ನು ತಿಳಿಸಿ ಪ್ರಭಾವತಿಯ ಮಾಹಾತ್ಮ್ಯವನ್ನು ಮುಂದೆ ಹೇಳುವಂತೆ ವಿವರಿಸಿದನು:—

"ಮಹಾರಾಜ! ಈಕೆಗೆ ಶೀಲವತಿಯೆಂಬ ಹೆಸರು ಬಂದ ವೃತ್ತಾಂ ತವನ್ನು ವಿವರಿಸುತ್ತೇನೆ ಕೇಳು; ಒಂದುಸಾರಿ ನೀನು ವಿಜಯಯಾತ್ರೆ ಹೊರಟುಹೋದಾಗ ನಾರಾಯಣದತ್ತೆ ಯೆಂಬಾಕೆಯು ಅರಮನೆಗೆ ಬಂದಳು. ಅವಳು ಪ್ರಭಾವತಿಯ ಬಾಲ್ಯಕಾಲದ ಗೆಳತಿ; ಆದರೆ ಚಿಕ್ಕ ನೆಯಸ್ಸಿನಲ್ಲಿಯೇ ವಿಧವೆಯಾಗಿ ತರ್ಕಶಾಸ್ತ್ರಗಳನ್ನೋದಿ ಪಂಡಿತೆಯೆ ನ್ನಿಸಿಕೊಂಡಿದ್ದಳು. ಪ್ರಭಾವತೀದೇವಿಯು ಈಕೆಯ ಮಿಥ್ಯಾವೇಷ ವನ್ನು ನೋಡಿ ಉದಾಸೀನಳಾಗಿದ್ದಳು. ನಾರಾಯಣದತ್ತೆಗೆ ಅವಮಾ ನವಾಗಿ ಕೋಪಬಂದಿತು. ಅನಂತರ ಹಿಂತಿರುಗಿಹೋಗಿ ಅವಳ ಶ್ರಾವಕ ತ್ವವನ್ನು ಹೇಗಾದರೂ ಮಾಡಿ ಕೆಡಿಸಬೇಕೆಂದು ನಿಶ್ಚಯಿಸಿದಳು. ಆದ

ಕ್ಕಾಗಿ ಅವಳ ಚಿತ್ರಪಟವೊಂದನ್ನು ಬರೆದು ಮಾಳವೇಶ್ವರನಾದ ಚಂಡಪ್ರದ್ಯೋತನಲ್ಲಿಗೆ ಹೋಗಿ ಅದನ್ನು ತೋರಿಸಿ ಅವನಿಗೆ ಅವಳಲ್ಲಿ ಮನಸ್ಸನ್ನುಂಟುಮಾಡಿದಳು. ಅವನು ನಿನ್ನ ಪಟ್ಟಣವನ್ನು ಮುತ್ತಿ ತನ್ನ ಹೆಗ್ಗಡೆಯೊಡನೆ ಪ್ರಭಾವತೀದೇವಿಗೆ ಹೇಳಿ ಕಳುಹಿಸಿದನು. ಆಕೆಯು ಅವನ ವಶವಾಗಲು ಒಪ್ಪದಿದ್ದ ಕಾರಣ ಅವನು ಯುದ್ಧಕ್ಕೆ ಸಿದ್ಧನಾದನು. ಈ ಸಮಯದಲ್ಲಿ ನಾನು ವಿಮಾನದಲ್ಲಿ ನಂದೀಶ್ವರದ್ವೀಪಕ್ಕೆ ಹೋಗುತ್ತ ಇದನ್ನು ತಿಳಿದು ಚಂಡಪ್ರದ್ಯೋತನ ಸೈನ್ಯವನ್ನೆಲ್ಲಾ ಉಜ್ಜಯಿನಿಗೆ ತೆಗೆದುಕೊಂಡುಹೋಗಿ ಬಿಟ್ಟು, ನಿನ್ನ ಪಟ್ಟಣದವರನ್ನೆಲ್ಲಾ ಸಿದ್ಧಗೊಳಿಸಿ ಚಂಡಪ್ರದ್ಯೋತನ ವೇಷದಿಂದ ಆಕೆಯನ್ನು ಮಹಾ ಭಯಪಡಿಸಿದೆನು. ಆದರೂ ಆಕೆಯು ಹೆದರಲಿಲ್ಲ. ಅನಂತರ ನನ್ನ ನಿಜವಾದ ರೂಪನ್ನು ತೋರಿಸಿ ಪುಷ್ಪವೃಷ್ಟಿಯನ್ನು ಸುರಿಸಿ ಶೀಲವತಿಯೆಂಬ ಹೆಸರನ್ನು ಕೊಟ್ಟು ದೇವಲೋಕಕ್ಕೆ ಹೊರಟು ಹೋದೆನು."

ಇಷ್ಟನ್ನು ಹೇಳಿದಮೇಲೆ ಆತನು ರತ್ನಖಚಿತವಾದ ಒಂದು ಸಿಂಹಾಸನವನ್ನು ಮಾಡಿ ಅದರಲ್ಲಿ ರಾಜರಾಣಿಯರನ್ನು ಕೂರಿಸಿ, ದೇವದುಂದುಭಿಯು ಮೊಳಗುತ್ತಲೂ ಪುಷ್ಪವೃಷ್ಟಿಯು ಕರೆಯುತ್ತಲೂ ಇರಲು, ಅವರಿಗೆ ಅಭಿಷೇಕಮಾಡಿ ಹೊಗಳಿ ದೇವಲೋಕಕ್ಕೆ ತೆರಳಿದನು.

"ದೇವತೆಗಳಿಂದ ಪೂಜಿಸಲ್ಪಟ್ಟ ಮನುಷ್ಯರೂ ಉಂಟೇ ? ನಮ್ಮ ಮಹಾರಾಜನ ಸಮಾನರಾರು ?" ಎಂದು ಲೋಕವೆಲ್ಲ ಹೊಗಳುತ್ತಿದ್ದರು. ಹೀಗೆ ಹಲವುಕಾಲ ರಾಜ್ಯವಾಳಿದಮೇಲೆ ಅವನೂ ಅವನ ಹೆಂಡತಿಯೂ ವೈರಾಗ್ಯವನ್ನು ತಳೆದು ದೀಕ್ಷೆಯನ್ನು ಕೈಕೊಂಡು ಸದ್ಗತಿಯನ್ನು ಪಡೆದರು.

---

## ಪಂಚಮಾಶ್ವಾಸ.

### ಅಮೂಢದೃಷ್ಟಿಯ ಕಥೆ.

ಶೂರಸೇನ ವಿಷಯದಲ್ಲಿ ಉತ್ತರ ಮಥುರೆಯೆಂಬ ಪಟ್ಟಣವಿದೆ. ಅದರಲ್ಲಿ ರೇವತಿಯೆಂಬ ಪಟ್ಟದರಸಿಯೊಡನೆ ವರುಣನೆಂಬ ಮಹಾಮಂಡಳಿಕನು ಆಳುತ್ತಿದ್ದನು.

ಅತ್ತ ಮೇಘಕೂಟ ಪುರದಲ್ಲಿ ಚಂದ್ರಾಭನೆಂಬ ಖೇಚರರಾಜನಿದ್ದನು. ಅವನಿಗೆ ಸುಮತಿ ಮಹಾದೇವಿಯೆಂಬ ಹೆಂಡತಿಯೂ ಚಂದ್ರಶೇಖರನೆಂಬ ಮಗನೂ ಇದ್ದರು. ಒಂದುದಿನ ರಾಜನು ನಾನಾ ಆಕಾರಗಳುಳ್ಳ ಮೇಘಗಳನ್ನೂ ಅವು ಕ್ಷಣಮಾತ್ರದಲ್ಲಿ ಕರಗಿಹೋಗುವುದನ್ನೂ ನೋಡಿ ವೈರಾಗ್ಯವನ್ನು ಪಡೆದನು. ಆದುದರಿಂದ ತನ್ನ ರಾಜ್ಯವನ್ನು ಮಗನಿಗೆ ಕೊಟ್ಟು ಅವನಿಗೆ ಬುದ್ಧಿವಾದವನ್ನು ಹೇಳಿ ತನ್ನ ದೇಶವನ್ನು ಬಿಟ್ಟು ಹೊರಟು ಪಾಂಡ್ಯದೇಶದ ದಕ್ಷಿಣಮಧುರೆಗೆ ಬಂದನು. ಅಲ್ಲಿ ಜಿನಾಲಯಗಳನ್ನು ನೋಡುತ್ತ ಹೋಗುತ್ತಿರಲು, ಆ ಪುರದ ರಾಜನಾದ ಚಿತ್ರವಾಹನ ಮಹಾರಾಜನು ತಮ್ಮ "ಅನ್ವಯದ ಬಸದಿ" ಗೆ ಬಂದು ಚತುರ್ಮುಖ ಶಾಂತಿನಾಥನನ್ನು ಪೂಜಿಸಿ ಸ್ತುತಿಸಿ ಹೋದನು. ಚಂದ್ರಾಭಮಹಾರಾಜನು ಇವನ್ನು ಕಂಡು ಚಿತ್ರವಾಹನನನ್ನು ಹೊಗಳಿ ತಾನೂ ಜಿನಭವನವನ್ನು ಹೊಕ್ಕು ಅಲ್ಲಿದ್ದ ಮುನಿಗುಪ್ತ ಭಟ್ಟಾರಕರನ್ನು ನಮಸ್ಕರಿಸಿ ತಾನು ತಪಸ್ಸಿಗಾಗಿ ಬಂದಿರುವುದನ್ನು ಅವರಿಗೆ ತಿಳಿಸಿದನು. ಅವರು ತಪಸ್ಸಿನ ಕಷ್ಟಸುಖಗಳನ್ನೂ ಋಷಿಗಳ ಗುಣವನ್ನೂ ತಿಳಿಸಿ 'ತಪಮೆಂಬುದು ಸಾಮಾನ್ಯಮಲ್ಲದು; ನೀನುಂ ನಿನ್ನ ಮುನ್ನಿನ ವಿದ್ಯಾಧರರಾಜ್ಯಮಂ ಕೈಕೊಂಡು ಸುಖದಿಸಿರೆಂ' ದು ಹೇಳಿದರು ಆದರ ಅವನು ಒಪ್ಪಲಿಲ್ಲ. ಆದುದರಿಂದ ಭಟ್ಟಾರಕರು "ಅವನ ವೈರಾಗ್ಯಕ್ಕೆ ಮೆಚ್ಚಿ ಮನಃಪೂರ್ವಕವಾಗಿ ನಿನ್ನ ಪರಿಗ್ರಹಗಳನ್ನೆಲ್ಲಾ ತೊರೆದುಬಿಡು" ಎಂದು ಅಪ್ಪಣೆ ಮಾಡಿದರು. ರಾಜನು ಎಲ್ಲವನ್ನೂ ತೊರೆದ, ಜಿನಾಲಯಗಳನ್ನು ನೋಡುವುದಕ್ಕೆ ಹೋಗಲು ಸಹಕಾರಿಗಳಾದ ಕೆಲವು ವಿದ್ಯೆಗಳನ್ನು ಮಾತ್ರ ಇಟ್ಟುಕೊಂಡನು. ಅದನ್ನು ನೋಡಿ ಮುನಿಗಳು ನಕ್ಕು ನಿನಗೆ "ಮಹಾವ್ರತಗಳು ಬೇಡ, ಅಣುವ್ರತಧಾರಿಯಾಗಿರು" ಎಂದು ಹೇಳಿ ಅವುಗಳ ಸ್ವರೂಪವನ್ನೂ ಹನ್ನೊಂದುಬಗೆಯ ಶ್ರಾವಕರ ಲಕ್ಷಣಗಳನ್ನೂ ತಿಳಿಸಿದರು. ಮಹಾರಾಜನು ಅವುಗಳಲ್ಲಿ ಹನ್ನೊಂದನೆಯ ಶ್ರಾವಕತ್ವವನ್ನು ಅಪೇಕ್ಷಿಸಲು ಅದನ್ನೇ ಅವನಿಗೆ ಕೊಟ್ಟರು. ಒಂದುದಿನ ಅವನಿಗೆ ಶೂರಸೇನ ವಿಷಯದ ಉತ್ತರ ಮಧುರೆಯ ಜಿನಾಲಯಗಳನ್ನು ವಂದಿಸಬೇಕೆಂಬ ಆಶೆ

ಹುಟ್ಟಲು ಅದನ್ನು ತನ್ನ ಗುರುಗಳಿಗೆ ತಿಳಿಸಿ ಅವರ ಅಪ್ಪಣೆಯನ್ನು ಬೇಡಿದನು. ಅವರು ಅದಕ್ಕೆ ಅನುಮತಿಯನ್ನಿತ್ತು, ವರುಣಮಹಾರಾಜನ ಅರಸಿಯಾದ ರೇವತೀ ಮಹಾದೇವಿಗೆ ಆಶೀರ್ವಾದವನ್ನೂ ಉಂಡುರುಳಿ ಭಟ್ಟಾರಕರಿಗೆ ವಂದನೆಯನ್ನೂ ಹೇಳಿಕಳುಹಿಸಿದರು. ಆಪುರದ ಶ್ರಾವಕರನ್ನೂ ಭವಸೇನಾಚಾರ್ಯರು ಮುಂತಾದ ಇತರ ಮುನಿಗಳನ್ನೂ ಬಿಟ್ಟು, ಉಂಡುರುಳಿಭಟ್ಟಾರಕರಿಗೂ ರೇವತೀ ದೇವಿಗೂ ಗೌರವ ಕೊಟ್ಟುದಕ್ಕಾಗಿ ಅವರು ಆಶ್ಚರ್ಯಪಡುತ್ತ ಉತ್ತರಮಥುರೆಗೆ ಬಂದು ಅಲ್ಲಿ ಭವಸೇನಾಚಾರ್ಯರೊಡನೆಯೂ ಉಂಡುರುಳಿ ಭಟ್ಟಾರಕರಲ್ಲಿಯೂ ಮಾತನಾಡಿ ಪರೀಕ್ಷಿಸಿ ಭವಸೇನಾಚಾರ್ಯರಲ್ಲಿ ಸಮ್ಯಕ್ತ್ವವಿಲ್ಲದುದನ್ನೂ ಉಂಡುರುಳಿ ಭಟ್ಟಾರಕರಲ್ಲಿ ಇರುವುದನ್ನೂ ತಿಳಿದುಕೊಂಡನು. ಅನಂತರ ರೇವತೀ ಮಹಾದೇವಿಯ ಅಮೂಢದೃಷ್ಟಿತ್ವವನ್ನು ಪರೀಕ್ಷಿಸಬೇಕೆಂದು ಹೊರಟು ಪೂರ್ವದಿಕ್ಕಿನಲ್ಲಿ ಬ್ರಹ್ಮನ ವೇಷವನ್ನು ಹಾಕಿಕೊಂಡು ನಿಂತನು. ಪಟ್ಟಣದವರಲ್ಲಿ ಅನೇಕರು ಬಂದು ಅವನನ್ನು ಅರ್ಚಿಸಿದರು. ಅರಸನು ತಾವೂ ಪೂಜೆಗೆ ಹೋಗಬೇಕೆಂದು ರೇವತೀ ದೇವಿಗೆ ಹೇಳಿದನು. ಆದರೆ ಅವಳು ಬರಲಿಲ್ಲ. ಇದರಂತೆ ನಾರಾಯಣ ಈಶ್ವರರ ವೇಷಗಳನ್ನು ಕ್ರಮವಾಗಿ ಒಂದಾದಮೇಲೆ ಒಂದರಂತೆ ಹಾಕಿಕೊಂಡನು. ಆಗಲೂ ರೇವತೀಮಹಾದೇವಿ ಮಾತ್ರ ಇದೆಲ್ಲಾ ಸುಳ್ಳೆಂದು ನಿರ್ಧರಿಸಿ ಪೂಜೆಗೆ ಹೋಗಲು ಇಷ್ಟಪಡಲಿಲ್ಲ. ಕೊನೆಗೆ ಚಂದ್ರಾಭನು ರೇವತಿಯ ಕುಲಸ್ವಾಮಿಯಾದ ವರ್ಧಮಾನನ ವೇಷವನ್ನು ಹಾಕಿಕೊಂಡನು. ಇದೂ ಅನುಪಪನ್ನವೆಂದು ಹೇಳಿ ರೇವತಿಯು ಮೂಢತ್ರಯಗಳನ್ನು ಅರಸನಿಗೆ ತಿಳಿಸಿದಳು. ಇತ್ತ ಚಂದ್ರಾಭನು ಈಗಲೂ ರೇವತಿಯು ಬರದೇ ಇದ್ದುದನ್ನು ನೋಡಿ ತನ್ನ ಮಾಯೆಯನ್ನು ಉಪಸಂಹರಿಸಿ, ನಿಜರೂಪವನ್ನು ಧರಿಸಿ ರೇವತೀ ಮಹಾದೇವಿಯನ್ನು ಕಾಣಿಸಿಕೊಂಡು ಅದುವರೆಗೂ ನಡೆದ ಸಂಗತಿಯನ್ನೆಲ್ಲಾ ಅವಳಿಗೆ ತಿಳಿಸಿ ಮುನಿಗುಪ್ತಭಟ್ಟಾರಕರ ಆಶೀರ್ವಾದವನ್ನು ಹೇಳಿ ದಕ್ಷಿಣಮಧುರೆಗೆ ಹೊರಟು ಹೋದನು.

ಪುರಜನರೆಲ್ಲರೂ ರೇವತೀದೇವಿಯನ್ನು ಹೊಗಳಿದರು. ವರುಣ

ಮಹಾರಾಜನು ಮೋಹತ್ರಯವನ್ನು ಬಿಟ್ಟು ತನ್ನ ಮಗನಾದ ಶಿವಕೀರ್ತಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ ತಾನು ದೀಕ್ಷೆಯನ್ನು ಕೈಕೊಂಡನು. ರೇವತೀ ದೇವಿಯೂ ಸುವ್ರತಗಂತಿಯರಲ್ಲಿ ದೀಕ್ಷೆಯನ್ನು ಪಡೆದು ಉತ್ತರಮಧುರೆಯಿಂದ ದಕ್ಷಿಣಮಧುರೆಯ ಕಡೆಗೆ ಯಾತ್ರಾರ್ಥವಾಗಿ ಹೊರಟು ದಾರಿಯಲ್ಲಿ ಮುಡಿಪಿ ಅಚ್ಯುತ ಕಲ್ಪದಲ್ಲಿ ಮಹರ್ಧಿಕ ದೇವನಾಗಿ ಹುಟ್ಟಿದಳು. ಆಕೆಯು ಮುಡಿಪಿದ ಸ್ಥಳವು ರೇವತೀ ತೀರ್ಥವೆಂದು ಪ್ರಸಿದ್ಧವಾಯಿತು.

---

## ಷಷ್ಠಾಶ್ವಾಸ.

### ಉಪಗೂಹನದ ಕಥೆ

ಗೌಡ್ಲ ವಿಷಯದಲ್ಲಿ ತಾಮ್ರಲಿಪ್ತಿಯೆಂಬ ಊರು ಇದೆ. ಅದರಲ್ಲಿ ಮನೋಹರನೆಂಬ ರಾಜನೂ ಜಿನಭಕ್ತನೆಂಬ ರಾಜಶ್ರೇಷ್ಠಿಯೂ ಇದ್ದರು.

ಅತ್ತ ಮಗಧ ವಿಷಯದ ಪಾಟಲೀ ಪುತ್ರವೆಂಬ ಊರಿನಲ್ಲಿ ವೀರಧ್ವಜನೆಂಬ ಅರಸನಿದ್ದನು ಅವನಿಗೆ ಸುಸೀಮೆಯೆಂಬ ಹೆಂಡತಿಯೂ ವೀರಕುಮಾರನೆಂಬ ಮಗನೂ ಇದ್ದರು. ಈ ವೀರಕುಮಾರನು ದುಷ್ಟರೊಡನೆ ಸೇರಿ ಒಂದುದಿನ ಊರ ಹೊರಗೆ ಕಳ್ಳತನದ ಮಾತನ್ನು ಕೇಳುತ್ತಿದ್ದನು. ಆಗ ಕಳ್ಳನೊಬ್ಬನು "ದೇವಾ! ನಾನು ಹೋಗದ ದೇಶವಿಲ್ಲ, ಕದಿಯದ ವಸ್ತುವಿಲ್ಲ, ಆದರೆ ತಾಮ್ರಲಿಪ್ತಿಪುರದ ಜಿನೇಂದ್ರಭಕ್ತನ ದೇಹಾರದಲ್ಲಿ ಒಂದು ಮುಕ್ಕೊಡೆಯೂ ಅದರಲ್ಲಿ ಒಂದು ರತ್ನವೂ ಇವೆ. ಆ ರತ್ನಕ್ಕೆ ಮೂಜಲೋಕವನ್ನೂ ಬೆಲೆಯಾಗಿ ಕೊಟ್ಟರೂ ಸಾಲದು" ಎಂದನು. ಇದನ್ನು ಕೇಳಿ ತನಗೆ ಅದರಮೇಲೆ ಆಸೆಯಾಗಲು ರಾಜಕುಮಾರನು "ಈ ರತ್ನವನ್ನು ತಂದುಕೊಟ್ಟವರಿಗೆ ನನ್ನ ರಾಜ್ಯವಲ್ಲಿ ಅರ್ಧವನ್ನು ಕೊಡುತ್ತೇನೆ, ಯಾರು ತಂದುಕೊಡುವಿರಿ?" ಎಂದು ಕೇಳಿದನು ಅದಕ್ಕೆ ಸೂರ್ಯನೆಂಬ ಕಳ್ಳನು ಒಪ್ಪಿ ಮುಂದೆ ಬಂದು ವೀಳೆಯವನ್ನು ತೆಗೆದುಕೊಂಡನು.

ಅನಂತರ ಸೂರ್ಪನು ಪೂರ್ವದಿಕ್ಕಿಗೆ ಹೋಗಿ ಅಲ್ಲಿದ್ದ ಋಷಿಗಳೊಡನೆ ಕೆಲವುಕಾಲ ವಾಸವಾಗಿದ್ದು ಅವರ ನಡೆನುಡಿಗಳನ್ನೆಲ್ಲಾ ಚೆನ್ನಾಗಿ ಅಭ್ಯಾಸಮಾಡಿಕೊಂಡು ತಪಸ್ವಿಯ ವೇಷದಿಂದ ತಾಮಲಿಪ್ತಿನಗರದ ಹತ್ತಿರ ಒಂದು ಊರಿನಲ್ಲಿ ಬಂದು ನಿಂತನು. ಅಲ್ಲಿ ಇವನ ಪ್ರಸಿದ್ಧಿ ಬಹಳವಾಗಿ ಜಿನೇಂದ್ರಭಕ್ತಸೆಟ್ಟಿ ಮುಂತಾದವರಿಗೆಲ್ಲಾ 'ಯಾರೋ ಮಹಾಪುರುಷರು ಬಂದಿದಾರೆಯಂತೆ' ಎಂಬ ವರ್ತಮಾನವು ತಿಳಿಯಿತು. ಜಿನೇಂದ್ರಭಕ್ತ ಸೆಟ್ಟಿಯು ಬಂದು ನೋಡಿ ಸೂರ್ಪನ ವೈರಾಗ್ಯವನ್ನು ನಿಜವೆಂದು ತಿಳಿದು ಅವನನ್ನು ಕರೆದುಕೊಂಡು ಹೋಗಿ ತನ್ನ ದೇಹಾರದಲ್ಲಿ ಇರಿಸಿದನು. ಸೂರ್ಪನು ನಂಬಿಸುವುದಕ್ಕೋಸ್ಕರ ಉಪವಾಸದ ಮೇಲೆ ಉಪವಾಸವನ್ನೂ ಮೌನವ್ರತವನ್ನೂ ಮಾಡುತ್ತಿದ್ದನು. ಹೀಗಿರಲು ಒಂದಾದಿನ ಜಿನೇಂದ್ರಭಕ್ತಸೆಟ್ಟಿಯು ಪರದೇಶಕ್ಕೆ ವ್ಯಾಪಾರಕ್ಕೆಂದು ಹೊರಟನು. ಈ ಸಮಯವನ್ನು ನೋಡಿಕೊಂಡು ನಡುರಾತ್ರಿಯಲ್ಲಿ, ಕಾವಲಿನವರು ನಿದ್ರಿಸುತ್ತಿದ್ದಾಗ, ಸೂರ್ಪನು ಮುಕ್ಕೊಡೆಯಲ್ಲಿದ್ದ ರತ್ನವನ್ನು ಕಳಚಿಕೊಂಡು ಹೊರಕ್ಕೆ ಹೊರಟನು. ಆದರೆ ಆ ರತ್ನವು ಬಾಲಾರ್ಕನಂತೆ ಪ್ರಜ್ವಲಿಸುತ್ತಿದ್ದಿತು. ಇದನ್ನು ಕಂಡು ತಳವಾರರು ಗದ್ದಲಮಾಡಿದರು, ಅದನ್ನು ಕೇಳಿ ದೇಹಾರದ ಕಾವಲಿನವರು ಎಚ್ಚೆತ್ತು ರತ್ನವು ಕಳವಾದುದನ್ನು ತಿಳಿದು ಅಟ್ಟಿಸಿಕೊಂಡು ಬಂದರು ಅವರ ಏಟುಗಳನ್ನು ತಡೆಯಲಾರದೆ ಸೂರ್ಪನು ಊರ ಹೊರಗೆ ಬೀಡುಬಿಟ್ಟಿದ್ದ ಜಿನೇಂದ್ರ ಭಕ್ತಸೆಟ್ಟಿಯ ಬಿಡಾರದಲ್ಲಿ ಹೋಗಿ ಸೇರಿಕೊಂಡನು. ಸೆಟ್ಟಿಯು ಇದನ್ನು ಕಂಡು 'ಇವನು ಹೋದ ದಾರಿಗೆ ಹೋಗಲಿ ನಾನು ನನ್ನ ಧರ್ಮವನ್ನು ನಡೆಸುತ್ತೇನೆ' ಎಂದು ಅವನನ್ನು ಪೀಠದಮೇಲೆ ಕುಳ್ಳಿರಿಸಿ ಕಾಲನ್ನು ಒತ್ತುತ್ತಿದ್ದನು. ಇಷ್ಟು ಹೊತ್ತಿಗೆ ತಳವಾರರೂ ಕಾವಲಿನವರೂ ಬಂದು ನಡೆದ ಸಂಗತಿಯನ್ನು ತಿಳಿಸಿದರು. ಸೆಟ್ಟಿಯು ತಳವಾರನಾಯಕನನ್ನು ಕುರಿತು ''ಇದೇನು ಗದ್ದಲ! ನನ್ನ ಒಡವೆಯನ್ನು ನನ್ನ ಹತ್ತಿರಕ್ಕೆ ತಂದು ಕೊಡುವವನು ಕಳ್ಳ ಹೇಗಾದಾನು? ಹಾಗೆ ಈತನು ಅದನ್ನು ಕದ್ದುಕೊಂಡು ಬಂದಿದ್ದರೆ ಮಿಕ್ಕಸ್ಥಳವನ್ನು ಬಿಟ್ಟು ಇಲ್ಲಿಗೆ ಬರುತ್ತಿದ್ದನೇ?'' ಎಂದು ಹೇಳಿ ಗದ

ರಿಸಿ ಕಳುಹಿಸಿದನು. ಅವನು ಹೊರಟು ಹೋಗಲು ಸೆಟ್ಟಿಯು ಸೂರ್ಪ ನನ್ನು ಗೋಪ್ಯವಾದ ಸ್ಥಳಕ್ಕೆ ಕರೆದುಕೊಂಡು ಹೋಗಿ ಅವನಿಗೆ ಧರ್ಮಾ ಧರ್ಮ ಸ್ವರೂಪಗಳನ್ನೂ ಅವುಗಳ ಫಲಗಳನ್ನೂ ವಿವರಿಸಿದನು. ಇದರಿಂದ ಅವನಿಗೆ ಜ್ಞಾನೋದಯವಾಗಲು ಜಿನೇಂದ್ರ ಭಕ್ತಸೆಟ್ಟಿಗೆ ನಮ ಸ್ಕರಿಸಿ ತನ್ನ ಹಿಂದಿನ ವೃತ್ತಾಂತವೆಲ್ಲಾ ಹೇಳಿ, ವೈರಾಗ್ಯವನ್ನು ಪಡೆದು ದೀಕ್ಷೆಯನ್ನು ಕೈಕೊಂಡನು ಕೊನೆಗೆ ಸಮಾಧಿಮರಣದಿಂದ ಮುಡಿಪಿ ದೇವಗತಿಯನ್ನು ಪಡೆದನು.

---

## ಸಪ್ತಮಾಶ್ವಾಸ.

### ಸ್ಥಿತಿಕರಣದ ಕಥೆ.

ಶ್ರೇಣಿಕ ಮಹಾರಾಜನಿಗೂ ಚೇಳಿನೀದೇವಿಗೂ ವಾರಿಷೇಣನೆಂಬ ಕುಮಾರನು ಹುಟ್ಟಿದನು. ಅವನು ಹುಟ್ಟಿದಂದಿನಿಂದ ಜಿನಮುನಿಗ ಳೊಡನೆಯೇ ಬೆಳೆಯುತ್ತ ವಿವೇಕಿಯಾಗಿದ್ದನು. ಒಂದು ದಿನ ಮುಂಡಿ ಯ ಪುತ್ರಾಚಾರ್ಯರೆಂಬ ಮುನಿಗಳು ಆ ಊರಿನ ಹತ್ತಿರಕ್ಕೆ ಬರಲು ಮಹಾರಾಜನು ಸಕುಟುಂಬ ಪರಿವಾರನಾಗಿ ಅವರನ್ನು ಎದುರುಗೊಂಡು ಸತ್ಕರಿಸಿದನು. ಅನಂತರ ಎಲ್ಲರೂ ಊರಿಗೆ ಹಿಂತಿರುಗಿ ಹೊರಟು ಹೋದರು. ಆದರೆ ರಾಜಪುತ್ರನಾದ ವಾರಿಷೇಣನು ಮಾತ್ರ ಹೊನ್ನನ್ನು ಕಂಡ ಲೋಭಿಯಂತೆ ಮುನಿಗಳನ್ನು ಬಿಟ್ಟು ಹೋಗಲಾರದೆ ಅವರನ್ನು ಉಪಚರಿಸುತ್ತ ಅವರಿಂದ ಧರ್ಮವನ್ನು ಕೇಳಬಯಸಿದನು. ಅವರು "ಕಿಱಿದಱೊಳ್ ಧರ್ಮಮಂ ತಿಳಿಪುವುದುಂ" ಅದನ್ನು ಕೇಳಿ ಸಂತೋಷ ಪಟ್ಟು ವಾರಿಷೇಣನು ಅಂದಿನ ರಾತ್ರಿ ಶ್ಮಶಾನಕ್ಕೆ ಹೋಗಿ ಅಲ್ಲಿ "ರಾತ್ರಿ ಪ್ರತಿಮೆ" ನಿಂತನು.

ಈ ಮಧ್ಯೆ ಮೃಗವೇಗನೆಂಬ ಒಬ್ಬ ಕಳ್ಳನು ರಾಜಶ್ರೇಷ್ಠಿಯ ಹೆಂಡತಿಯಾದ ಕೀರ್ತಿಮತಿಯ ಹಾರವನ್ನು ಕದ್ದುಕೊಂಡು ಹೋಗು ತ್ತಿದ್ದನು. ಅವನನ್ನು ತಳವಾರರು ಕಂಡು ಅಟ್ಟಿಸಿಕೊಂಡು ಬರಲು ಅವನು ಹೆದರಿ ಆ ಹಾರವನ್ನು ವಾರಿಷೇಣನ ಹತ್ತಿರ ಹಾಕಿ ಓಡಿಹೋ

ದನು. ತಳವಾರರು ಅಲ್ಲಿಗೆ ಬಂದು ವಾರಿಷೇಣನೇ ಕಳ್ಳನೆಂದು ಭಾವಿಸಿ ಅವನನ್ನು ನಾನಾವಿಧವಾಗಿ ಮೂದಲಿಸಿ ಹಿಂಸಿಸಿ ಹೊಡೆಯುತ್ತಿದ್ದರು. ಅವನು ಮಾತ್ರ ಜಿನಧ್ಯಾನ ಮಾಡುತ್ತ ಸುಮ್ಮನಿದ್ದನು. ಆಗ ಅಲ್ಲಿದ್ದ ದೇವತೆಗಳಿಗೆ ಆಸನ ಕಂಪವಾಗಲು ಅವರು ಬಂದು ರಾಜಪುತ್ರನಿಗೆ ಬೀಳುತ್ತಿದ್ದ ಏಟುಗಳನ್ನೆಲ್ಲಾ ಆಭರಣಗಳನ್ನಾಗಿ ಮಾಡಿದರು. ಇದನ್ನು ಕಂಡು ಆಶ್ಚರ್ಯವಾಗಲು ತಳವಾರರು ಈ ವರ್ತಮಾನವನ್ನು ರಾಜನಿಗೆ ತಿಳಿಸಿದರು. ಅದನ್ನು ಕೇಳಿ ರಾಜನು ಸಕಲಜನ ಪರಿವೃತನಾಗಿ ಬಂದನು. ಇಷ್ಟು ಹೊತ್ತಿಗೆ ಸೂರ್ಯೋದಯವಾಗಲು ವಾರಿಷೇಣನ ಪ್ರತಿಜ್ಞೆಯೂ ತೀರಿ ಅವನು ಎತ್ತಿದ್ದ ಕೈಗಳನ್ನು ಕೆಳಕ್ಕೆ ಇಳಿಸಿದನು. ರಾಜನು ಅವನನ್ನು ಕಂಡು ಕ್ಷಮೆಯನ್ನು ಬೇಡಿಕೊಂಡನು ಆದರೆ ರಾಜಪುತ್ರನು ಇದೆಲ್ಲವೂ ಕರ್ಮದ ಫಲವೆಂದು ಹೇಳಿ ರಾಜನನ್ನು ಸಮಾಧಾನಮಾಡಿದನು. ಎಲ್ಲರೂ ಅರಮನೆಗೆ ಬಂದರು. ಇದಾದ ಕೆಲವು ದಿನದಮೇಲೆ ವಾರಿಷೇಣನು ತಾಯಿತಂದೆಗಳನ್ನು ಒಡಂಬಡಿಸಿ ಪುಷ್ಪಗಿರಿಪರ್ವತಕ್ಕೆ ಹೋಗಿ ಅಲ್ಲಿ ಸುರದೇವರೆಂಬುವರಿಂದ ಜಿನದೀಕ್ಷೆಯನ್ನು ಕೈಕೊಂಡು ತಪಸ್ಸು ಮಾಡುತ್ತಿದ್ದನು

ಹೀಗಿರಲು ಒಂದು ದಿವಸ ವಾರಿಷೇಣನು ತನ್ನ ಬಾಲಸಖನಾದ ಪುಷ್ಪದಾಡನೆಂಬುವನು ಸುವಂತಿಯೆಂಬ ಹುಡುಗಿಯನ್ನು ಮದುವೆಯಾದನೆಂದು ಕೇಳಿ ಅವನಮನೆಗೆ ಹೋಗಿ ಅವನನ್ನು ಕರೆದುಕೊಂಡು ಬಂದು ಅವನಿಗೆ ತಮ್ಮ ಗುರುಗಳಲ್ಲಿ ಬಲಾತ್ಕಾರವಾಗಿ ದೀಕ್ಷೆಯನ್ನು ಕೊಡಿಸಿದನು. ಆದರೆ ಪುಷ್ಪದಾಡನು ಮಾತ್ರ "ಅಡವಿಯನ್ನು ಬಿಟ್ಟು ಬಂದ ಆನೆಯಂತೆ" ಕೊರಗುತ್ತಿದ್ದನು. ಇದನ್ನು ಕಂಡು ವಾರಿಷೇಣನು "ಶರೀರದೊಳಾದ ಪೊಲ್ಲಮೆಯುಮಂ ಸಂಸಾರದೊಳಾದ ದುಃಖಮುಮಂ ಭೋಗಂಗಳ ಕೇಡುಮಂ ಬಾಳ್ಕೆಯನಿತ್ಯತೆಯುಮಂ ವನಿತೆಯರ ಕಷ್ಟತೆಯುಮಂ ಸ್ಥಿತಿಕರಣಂ ಮಹಾಪುಣ್ಯಮೆಂಬುದುಮಂ ಬಗೆದು ಪನ್ನೆರಡುವರ್ಷಬರಂ ಮಾಣದೆ" ಉಪದೇಶಮಾಡಿದನು. ಪುಷ್ಪದಾಡನಿಗೆ ಮಾತ್ರ ಅದು ಮನಸ್ಸಿಗೆ ಅಂಟದೆ ಸಂಸಾರದಮೇಲೆಯೇ ಮನಸ್ಸು ಹೋಗುತ್ತಿದ್ದಿತು. ಹೀಗಿರಲು ಒಂದುದಿನ ವಾರಿಷೇಣನು ವರ್ಧಮಾನ

ಸ್ವಾಮಿಗಳ ಹತ್ತಿರಕ್ಕೆ ಹೋಗಿದ್ದಾಗ ಪುಷ್ಪಡಾಲನು ಮನೆಗೆ ಹಿಂತಿರುಗಿದನು. ಆವರೆ ವಾರಿಷೇಣನು ಅವನನ್ನು ಪುನಃ ಹಿಡಿದುಕೊಂಡು ಬಂದು ತನ್ನ ತಾಯಿತಂದೆಗಳಿದ್ದ ಅರಮನೆಗೆ ಹೋದನು. ಅಲ್ಲಿ ಅವನ ಇಷ್ಟದಂತೆ ಅವನ ಪತ್ನಿಯರಾಗಿದ್ದ ಐನೂರು ಜನ ಸ್ತ್ರೀಯರೂ ಪುಷ್ಪಡಾಲನ ಹೆಂಡತಿಯಾದ ಸುದಂತಿಯೂ ಕರೆಸಲ್ಪಟ್ಟರು. ಆಗ ವಾರಿಷೇಣನು ಪರಮಸುಂದರಿಯರಾದ ತನ್ನ ಹೆಂಡತಿಯರನ್ನು ತೋರಿಸಿ "ನಾನು ಇಂತಹವರನ್ನೇ ಬಿಟ್ಟು ತಪಶ್ಚರ್ಯೆಗಾಗಿ ಹೊರಟು ಹೋಗಿದ್ದೇನೆ. ನೀನು ಮಾತ್ರ ಹನ್ನೆರಡುವರ್ಷ ಧರ್ಮೋಪದೇಶವನ್ನು ಕೇಳಿದರೂ ಕುರೂಪಿಯಾದ ಈ ಸುದಂತಿಯಲ್ಲಿಯೇ ಅನುರಾಗವನ್ನಿಟ್ಟುಕೊಂಡಿದ್ದೀಯೆ" ಎಂದು ಹೇಳಿ ಸುದಂತಿಯನ್ನು ಕುರಿತು, "ಅಮ್ಮಾ, ಜಿನೇಶ್ವರ ರೂಪವನ್ನು ಧರಿಸಿ ಪುನಃ ತನ್ನ ಸ್ತ್ರೀಯನ್ನು ನೆನೆಸಿಕೊಳ್ಳುವನೂ ಒಬ್ಬ ಮನುಷ್ಯನೇ?" ಎಂದು ಕೇಳಿದನು ಅದಕ್ಕೆ ಆಕೆಯು "ಅಂತಹವನು ನಾಯಿಗಿಂತಲೂ ಕಡೆ; ಏಕೆಂದರೆ ನಾಯಿಯು ತಾನು ವಮನ ಮಾಡಿದುದನ್ನು ಮುಟ್ಟುವುದಿಲ್ಲ" ಎಂದಳು ಇದನ್ನು ಕೇಳಿ ಪುಷ್ಪಡಾಲನಿಗೆ ನಾಚಿಕೆಯಾಯಿತು; ಸಾಲದುದಕ್ಕೆ ಅಂತಹ ಸುಂದರಿಯರಾದ ಸ್ತ್ರೀಯರನ್ನೂ ವಾರಿಷೇಣನು ತ್ಯಜಿಸಿ ಹೊರಟು ಹೋದುದರಿಂದ ತಪಸ್ಸಿನ ಮಹತ್ವವನ್ನು ಊಹಿಸಿ ತಾನು ಅವನಿಂದ ಕೇಳಿದ ಧರ್ಮೋಪದೇಶವನ್ನೆಲ್ಲಾ ನಂಬಿದನು. ಅನಂತರ ಅವನಿಗೆ ಪುನಃ ದೀಕ್ಷೆಯು ಕೊಡಲ್ಪಟ್ಟಿತು; ಮರಣಾನಂತರ ದೇವಗತಿಯು ಪ್ರಾಪ್ತವಾಯಿತು ವಾರಿಷೇಣನೂ "ಮನುಷ್ಯರ ಪರಿಣಾಮ"ವನ್ನು ಭಾವಿಸಿ ಹನ್ನೆರಡು ತಪಸ್ಸನ್ನೂ ಆಚರಿಸಿ ಕೊನೆಗೆ "ಸನ್ಯಸನ ಸಮಾಧಿ"ಯಿಂದ ಮುಡಿಪಿ ಸರ್ವಾರ್ಥಸಿದ್ಧಿಯಲ್ಲಿ ಹುಟ್ಟಿದನು.

---

## ಅಷ್ಟಮಾಶ್ವಾಸ.

ವಾತ್ಸಲ್ಯದ ಕಥೆ

ಪಾಂಚಾಲವಿಷಯದಲ್ಲಿ ಅಹಿಚ್ಛತ್ರವೆಂಬ ಪಟ್ಟಣವಿದೆ. ಅದನ್ನು ಸಂತಪನೆಂಬ ಅರಸನು ಆಳುತ್ತಿದ್ದನು. ಅವನ ಪುರೋಹಿತನಾದ

ಸೋಮದತ್ತನ ಹೆಂಡತಿ ಯಜ್ಞದತ್ತೆಯು ಗರ್ಭಿಣಿಯಾಗಲು ಆಕೆಗೆ ಜಿನಸೇವೆ ಮಾಡಬೇಕೆಂಬ ಬಯಕೆಯುಂಟಾಯಿತು. ಅವಳ ವಂಶದಲ್ಲಾಗಲಿ ಅವಳ ಗಂಡನ ವಂಶದಲ್ಲಾಗಲಿ ಹಿಂದೆ ಯಾರೂ ಜಿನಪೂಜೆಯನ್ನು ಮಾಡಿದವರಲ್ಲ. ಆದುದರಿಂದ ತನ್ನ ಬಯಕೆಯನ್ನು ಹೇಳಿಕೊಂಡರೆ ನಾಚಿಕೆ ಕೇಡಾಗಬಹುದೆಂದು ಅವನ್ನು ಹೇಳಲಾರದೆ ಆಕೆಯು ಮನಸ್ಸಿನಲ್ಲಿಯೇ ಕೊರಗುತ್ತ ಬಡವಾದಳು. ಆಕೆಯ ನಂಟರು ಇವಳು ಬಡವಾದುದನ್ನು ನೋಡಿ ತಾವು ಬಯಕೆಯನ್ನು ತಂದು ಕೊಡುವುದಾಗಿಯೂ ಏನುಬೇಕೋ ಅದನ್ನು ಕೇಳಬಹುವೆಂದೂ ಹೇಳಿದರು ಆದರೆ ಯಜ್ಞದತ್ತೆ ಮಾತ್ರ ನಿಜಸ್ಥಿತಿಯನ್ನು ಹೇಳದೆ ತನಗೆ ಒಳ್ಳೆಯ ಮಾವಿನ ಹಣ್ಣಿನಮೇಲೆ ಬಯಕೆಯಾಗಿದೆಯೆಂದು ಹೇಳಿದಳು. ಆಗ ಮಾವಿನ ಹಣ್ಣಿನ ಕಾಲವಲ್ಲದುದರಿಂದ ಎಲ್ಲೆಲ್ಲಿ ಹುಡುಕಿದರೂ ಅದು ಸಿಕ್ಕಲಿಲ್ಲ. ಕೊನೆಗೆ ಸೋಮದತ್ತನೂ ಅವನ ಶಿಷ್ಯರೂ ಬಲವಾಹಿನಿಯೆಂಬ ನದಿಯ ಹತ್ತಿರ ಒಂದು ತೋಟದಲ್ಲಿ ಮಾವಿನ ಹಣ್ಣುಗಳು ಬಿಟ್ಟಿದ್ದುದನ್ನೂ ಅದರ ಕೆಳಗೆ ಸುಮತಿಭಟ್ಟಾರಕರೆಂಬ ಯತಿಗಳು ಇದ್ದುದನ್ನೂ ಕಂಡರು. ಈ ಅಕಾಲದಲ್ಲಿ ಫಲವಾಗಿದ್ದುದು ಅವರ ತಪಃಫಲದಿಂದಲೇ ಎಂದು ನಿಶ್ಚಯಿಸಿ ಅವರ ಮುಂದೆ ಬಂದುನಿಂತರು. ಆಗ ಯತಿಗಳು ಸಹಸ್ರಾರಕಲ್ಪದಲ್ಲಿ ಸೂರ್ಯಾಭವೆಂಬ ವಿಮಾನವನ್ನು ವರ್ಣಿಸುತ್ತಿದ್ದರು ಇದನ್ನು ಕೇಳಿದಕೂಡಲೆ ಸೋಮದತ್ತನಿಗೆ ತಾನು ಹಿಂದಿನ ಜನ್ಮದಲ್ಲಿ ಆ ವಿಮಾನದಲ್ಲಿ ಸೂರ್ಯಪ್ರಭನೆಂಬ ದೇವನಾಗಿ ಹುಟ್ಟಿದ್ದುದು ಜ್ಞಾಪಕಕ್ಕೆ ಬಂದಿತು. ಕೂಡಲೆ ಸೋಮದತ್ತನು ಮೂರ್ಛೆಹೋಗಿ ಎಚ್ಚತ್ತು ಆ ಮುನಿಗಳಿಗೆ ವಂದಿಸಿ ತನ್ನ ಹೆಂಡತಿಯು ಎಲ್ಲ ವಸ್ತುಗಳನ್ನೂ ಬಿಟ್ಟು ಮಾವಿನ ಹಣ್ಣನ್ನು ಬಯಸಿದುದಕ್ಕೆ ಕಾರಣವನ್ನು ಕೇಳಿದನು. ಅವರು, ಆಕೆಯ ಗರ್ಭದಲ್ಲಿದ್ದ ಮಗುವು ಜಿನಭಕ್ತನಾಗಿದ್ದನೆಂದೂ ಅವನ ಬಯಕೆಯೇ ಆಕೆಯ ಬಯಕೆಯಾಗಿದ್ದಿತೆಂದೂ ಅದನ್ನು ತಿಳಿಸಲಾರದೆ ಮಾವಿನ ಹಣ್ಣು ಬೇಕೆಂದಳೆಂದೂ ಹೇಳಿದರು. ಅನಂತರ ಸೋಮದತ್ತನು ಮಾವಿನ ಹಣ್ಣುಗಳನ್ನು ತನ್ನ ಶಿಷ್ಯರೊಡನೆ ಹೆಂಡತಿಗೆ ಕಳುಹಿಸಿಕೊಟ್ಟು ತಾನು ವೈರಾಗ್ಯ

ದಿಂದ ಜಿನದೀಕ್ಷೆಯನ್ನು ಪಡೆದು ನಾಭಿಗಿರಿಗೆ ತಪಸ್ಸಿಗಾಗಿ ಹೊರಟು ಹೋದನು

ಇತ್ತ ಯಜ್ಞದತ್ತೆಯು ಬಂದು ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ಶ್ರೀವತ್ತನೆಂದು ಹೆಸರಿಟ್ಟರು. ಕೆಲವುಕಾಲದಮೇಲೆ ಸೋಮದತ್ತನು ನಾಭಿಗಿರಿಯಲ್ಲಿದ್ದ ವರ್ತಮಾನವು ತಿಳಿಯಲು ಯಜ್ಞದತ್ತೆಯೂ ಇತರ ಬಂಧುಗಳೂ ಹೇಗಾದರೂ ಅವನ ತಪಸ್ಸನ್ನು ಕೆಡಿಸಿ ಅವನನ್ನು ಕರೆದುಕೊಂಡು ಬರಬೇಕೆಂದು ನಾಭಿಗಿರಿಗೆ ಹೋದರು. ಆದರೆ ಸೋಮದತ್ತನು ಅಚಲನಾಗಿದ್ದನು ಇದನ್ನು ಕಂಡು ಅವನ ಬಂಧುಗಳೆಲ್ಲರೂ ಮಗುವನ್ನು ಅವನಮುಂದೆ ಹಾಕಿ ಹೊರಟುಹೋದರು

ಅತ್ತ ಅಮರಾವತಿಯಲ್ಲಿದ್ದ ಶಂಭುವೆಂಬ ವಿದ್ಯಾಧರರಾಜನು ತನ್ನ ಹಿರಿಯಮಗನಾದ ಭಾಸ್ಕರದೇವನಿಗೆ ಯೌವರಾಜ್ಯವನ್ನು ಕೊಟ್ಟು ತಾನು ತಪಸ್ಸಿಗೆ ಹೊರಟುಹೋದನು. ಭಾಸ್ಕರದೇವನ ತಮ್ಮನಾದ ಮಂದರದೇವನು ವಿದ್ಯಾಬಲದಿಂದ ಅಣ್ಣನನ್ನು ಗದ್ದು ಅವನನ್ನು ಓಡಿಸಿದನು. ಭಾಸ್ಕರದೇವನು ತಮ್ಮನೊಡನೆ ಹೋರಾಡಲಿಷ್ಟವಿಲ್ಲದೆ ತನ್ನ ಮೈದುನನಾದ ವಿಮಳಮಹಾರಾಜನ ಹತ್ತಿರ ಬಂದು ನಿಂತನು ಒಂದುದಿವಸ ಭಾಸ್ಕರದೇವನೂ ಅವನ ಹೆಂಡತಿ ಮಣಿಮಾಲೆಯೂ ವಿಮಾನನಲ್ಲಿ ಹೋಗುತ್ತ ಸೋಮದತ್ತ ಮುನಿಯನ್ನು ಕಂಡು ವಂದಿಸಿ ಅವನಮುಂದೆ ಮಲಗಿದ್ದ ಮಗುವನ್ನು ಕರೆತಂದು ಅದಕ್ಕೆ ವಜ್ರಕುಮಾರನೆಂಬ ಹೆಸರಿಟ್ಟು ಸಾಕುತ್ತಿದ್ದರು ವಜ್ರಕುಮಾರನು ಪ್ರಾಪ್ತವಯಸ್ಕನಾಗಲು ಅವನಿಗೂ ವಿಮಳಮಹಾರಾಜನ ಮಗಳಾದ ಇಂದುಮತಿಗೂ ಮದುವೆಯಾಯಿತು. ಒಂದುದಿನ ಅವರಿಬ್ಬರೂ ವಿಮಾನದಲ್ಲಿ ಹೋಗುತ್ತಿರಲು ಪವನವೇಗೆಯೆಂಬ ವಿದ್ಯಾಧರೆಯನ್ನು ಒಂದು ಹಾವು ನುಂಗುತ್ತಿದ್ದಿತು. ವಜ್ರಕುಮಾರನು ಅವಳನ್ನು ಬಿಡಿಸಿದನು. ಅದಕ್ಕೆ ಪ್ರತಿಯಾಗಿ ಅವಳು ಅವನಿಗೆ ನಾನಾವಿದ್ಯೆಗಳನ್ನು ಕೊಟ್ಟಳು. ಅವುಗಳ ಸಹಾಯದಿಂದ ವಜ್ರಕುಮಾರನು ಅಮರಾವತೀನಗರದಲ್ಲಿ ಆಳುತ್ತಿದ್ದ ಮಂದರದೇವನನ್ನು ಸೋಲಿಸಿ ಅಲ್ಲಿ ಸುಖವಾಗಿ ಆಳುತ್ತಿದ್ದನು. ತಾನು ಹಿಂದೆ ಹಾವಿನ ಬಾಯಿನಿಂದ ಬಿಡಿಸಿದ ಪವನವೇಗೆಯು ಸ್ವಯಂವರದಲ್ಲಿ ಇವನನ್ನೇ

ವರಿಸಿದಳು. ಒಂದು ದಿವಸ ವಜ್ರಕುಮಾರನು ತಾನು ಹುಟ್ಟಿ ಬೆಳೆದ ವೃತ್ತಾಂತವನ್ನು ಅರಿತು ವೈರಾಗ್ಯವನ್ನು ತಾಳಿ ಸೋಮದತ್ತ ಭಟ್ಟಾರಕರಲ್ಲಿಗೆ ಬಂದು ದೀಕ್ಷೆಯನ್ನು ಪಡೆದು ತಪಶ್ಚರ್ಯೆಗೆ ಆರಂಭಿಸಿದನು.

ಅವನು ತಪಸ್ಸಿಗೆ ನಿಂತ ಊರಿನಲ್ಲಿ ಪೂತಿವಾಹನನೆಂಬ ರಾಜನು ಆಳುತ್ತಿದ್ದನು. ಅವನ ಪಟ್ಟದರಸಿಯಾದ ಓಹಿಲೆಯೆಂಬಾಕೆಯು "ಫಾಲ್ಗುನದ ನಂದೀಶ್ವರದಂದು" ಎಂದಿನಂತೆ ಜಿನಪೂಜೆಯನ್ನು ಮಾಡಬೇಕೆಂದಿದ್ದಳು. ಆದರೆ ರಾಜನ ಪ್ರಿಯ ಪತ್ನಿಯಾದ ಬುದ್ಧದಾಸಿಯು ಬುದ್ಧನ ಉತ್ಸವವನ್ನು ಹೊರಡಿಸಿದಳು. ಇದರಿಂದ ಓಹಿಲೆಗೆ ಅವಮಾನವಾಗಲು ಆಕೆಯು ಸೋಮದತ್ತ ಮುನಿಯಲ್ಲಿಗೆ ಬಂದು ಹೇಗಾದರೂ ತನ್ನ ಇಷ್ಟಸಿದ್ಧಿಯಾಗುವಂತೆ ಮಾಡಬೇಕೆಂದು ಪ್ರಾರ್ಥಿಸಿದಳು. ಆತನು ವಜ್ರಕುಮಾರ ಮುನಿಯಿಂದ ಆಕೆಯ ಕೆಲಸವು ಆಗುವುದೆಂದು ಧೈರ್ಯ ಹೇಳಿದನು. ಅದರಂತೆ ಆಕೆಯು ವಜ್ರಕುಮಾರನಿದ್ದೆಡೆಗೆ ಹೋಗಿ ಅವನನ್ನು ಪ್ರಾರ್ಥಿಸಲು ಆತನು ಅಮರಾವತಿಯಲ್ಲಿದ್ದ ಭಾಸ್ಕರದೇವನ ಹತ್ತಿರಕ್ಕೆ ಹೋಗಿ ಅವನೂ ಇತರ ವಿದ್ಯಾಧರರೂ ತನ್ನೊಡನೆ ಬಂದು ಓಹಿಲೆಯು ನಡೆಸಬೇಕೆಂದಿರುವ ಜಿನಪೂಜೆಯನ್ನು ನಡೆಸಬೇಕೆಂದು ಕೇಳಿಕೊಂಡನು. ಅದರಂತೆ ಎಲ್ಲರೂ ಬಂದು ಎಂಟುದಿವಸದವರೆಗೆ ಜಿನಪೂಜೋತ್ಸವಗಳನ್ನು ಮಹಾವೈಭವದಿಂದ ಮಾಡಿಸಿದರು. ಭಾಸ್ಕರದೇವನು ಓಹಿಲೆಯ ಇಷ್ಟಪ್ರಕಾರ "ವಜ್ರಮಯಮಪ್ಪ ಜಿನಪ್ರತಿಮಾವಳಿಗಳಿಂ ತುರುಗಿದ ಸ್ತೂಪಮುಮಂ ದಕ್ಷಿಣಮಧುರಾಪುರದೊಳಿರಿಸಿ" ದನು. ಅದನ್ನು ದೇವತೆಗಳೂ ಪೂಜಿಸುವುದಕ್ಕೆ ಮೊದಲು ಮಾಡಿದರು.

---

## ನವಮಾಶ್ವಾಸಂ.

### ಪ್ರಭಾವನೆಯ ಕಥೆ.

ಕುರುಜಾಂಗಣ ವಿಷಯದಲ್ಲಿ ಹಸ್ತಿನಾಪುರವೆಂಬ ಊರು ಇದೆ; ಅದರಲ್ಲಿ ಲಕ್ಷ್ಮೀಮತಿ ಮಹಾದೇವಿಯೆಂಬ ಅರಸಿಯೊಡನೆ ಮಹಾಪದ್ಮ

ನೆಂಬ ಮಾಂಡಳಿಕನು ಆಳುತ್ತಿದ್ದನು. ಅವನಿಗೆ ಪದ್ಮ ವಿಷ್ಣುಕುಮಾರ ಎಂಬ ಇಬ್ಬರು ಮಕ್ಕಳಿದ್ದರು. ಒಂದುದಿನ ಶ್ರುತಸಾಗರರೆಂಬಾಚಾರ್ಯರು ಹಸ್ತಿನಾವತಿಗೆ ಬರಲು ಮಹಾಪದ್ಮನು ಅವರ ಉಪದೇಶವನ್ನು ಕೇಳಿ ವೈರಾಗ್ಯವನ್ನುತಾಳಿ, ತಪಸ್ಸಿಗೆ ಹೋಗುವುದಕ್ಕೋಸ್ಕರ ವಿಷ್ಣುಕುಮಾರನಿಗೆ ಯುವರಾಜ ಪದವಿಯನ್ನು ಕೊಡುವುದಕ್ಕೆ ಹೋದನು. ಆವರೆ ವಿಷ್ಣುಕುಮಾರನೂ ತಪಸ್ಸಿಗೆ ಹೋಗುವುದಕ್ಕೆ ಇಷ್ಟಪಟ್ಟನು. ಆದುದರಿಂದ ಅವರಿಬ್ಬರೂ ದೀಕ್ಷೆಯನ್ನು ಪಡೆದು ತಪಸ್ಸಿಗೆ ಹೊರಟು ಹೋದರು ಪದ್ಮನೇ ರಾಜ್ಯವಾಳುವುದಕ್ಕೆ ತೊಡಗಿದನು.

ಅತ್ತ ಅವಂತಿವಿಷಯದ ಉಜ್ಜಯಿನೀ ಪುರದಲ್ಲಿ ಜಯವರ್ಮ ಮಹಾರಾಜನೆಂಬ ದೊರೆಯು ಆಳುತ್ತಿದ್ದನು. ಅವನಿಗ ಬಲಿಯೆಂಬ ಮಂತ್ರಿ ಇದ್ದನು ಈ ಬಲಿಯು ಶುಕ್ರ, ಬೃಹಸ್ಪತಿ, ಪ್ರಹ್ಲಾದ ಎಂಬ ಶಾಸ್ತ್ರ ಪಂಡಿತರಾದ ಬಹುಜನರೊಡನೆ ಸುಖವಾಗಿದ್ದನು. ಒಂದುದಿನ ಅಲ್ಲಿಗೆ ಐನೂರುಜನ ಮುನಿಗಳನ್ನು ಕರೆದುಕೊಂಡು ಅಕಂಪನಾಚಾರ್ಯರೆಂಬ ಮುನೀಶ್ವರರು ಬಂದರು. ರಾಜನು ತನ್ನ ಮಂತ್ರಿಗಳಿಂದಲೂ ಪರಿವಾರದಿಂದಲೂ ಕೂಡಿ ಅವರಿದ್ದಸ್ಥಳಕ್ಕೆ ಹೋಗಿ ಪರಲೋಕ ಜೀವ ಧರ್ಮ ಇವುಗಳು ಉಂಟೇ ಇಲ್ಲವೇ ಎಂದು ಅವರನ್ನು ಪ್ರಶ್ನೆಮಾಡಿದನು. ಅವರು ಉಂಟೆಂದು ನಿದರ್ಶಿಸಿದರು. ಬಲಿಯು ಇಲ್ಲವೆಂದನು. ಮುಂದೆ ಅವರಿಬ್ಬರಿಗೂ ನಡೆದ ವಾಕ್ಯಾರ್ಥದಲ್ಲಿ ಬಲಿಯು ಸೋತುಹೋದನು. ಅವನ ಮೌರ್ಖ್ಯವನ್ನೂ ಹೀನವಾದ ಮಾತುಗಳನ್ನೂ ನೋಡಿ ಜಯವರ್ಮ ಮಹಾರಾಜನು ಬಲಿಯನ್ನು ಸಪರಿವಾರನಾಗಿ ತನ್ನ ದೇಶದಿಂದ ಹೊರಕ್ಕೆ ಹೊಂಡಿಸಿದನು. ಇದಕ್ಕಾಗಿ ನಂಟರಿಷ್ಟರೆಲ್ಲರೂ ಬಲಿಯನ್ನು ಬೈದರು. ಬಲಿಯು ಬಹಳವಾಗಿ ನೊಂದು ತನಗೆ ಅವಮಾನಮಾಡಿದ ಅಕಂಪನಾಚಾರ್ಯರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿ ಅದನ್ನು ಸಾಧಿಸುವುದಕ್ಕೆ ಪದ್ಮನ ಹತ್ತಿರಕ್ಕೆ ಬಂದು ಅವನ ಆಶ್ರಯದಲ್ಲಿ ನಿಂತನು.

ಒಂದುದಿನ ಸಿಂಹಕೀರ್ತಿಯೆಂಬ ರಾಜನು ಪದ್ಮನ ಸೈನ್ಯವನ್ನು ಸೋಲಿಸಿ ಓಡಿಸಿದನು. ಆಗ ಬಲಿಯು ಅವನಮೇಲೆ ದಂಡೆತ್ತಿ ಹೋಗಿ

ಅವನನ್ನು ಸೋಲಿಸಿ ಸೆರೆಹಿಡಿದುಕೊಂಡು ಬಂದು ಪದ್ಮನಿಗೆ ಒಪ್ಪಿಸಿದನು. ಪದ್ಮನು ಸಂತೋಷಪಟ್ಟು ಬಲಿಗೆ ಒಂದು ವರವನ್ನು ಕೊಡುವುದಾಗಿ ಹೇಳಿದನು. ಬಲಿಯು ಆ ವರವನ್ನು ಆಗಲೇ ತೆಗೆದುಕೊಳ್ಳುವುದಿಲ್ಲವೆಂದೂ ತನಗೆ ಆವಶ್ಯಕವಾದಾಗ ತೆಗೆದುಕೊಳ್ಳುವೆನೆಂದೂ ಅಲ್ಲಿಯವರೆಗೆ ಅದು ರಾಜನಲ್ಲಿಯೇ ಇರಬೇಕೆಂದೂ ಪ್ರಾರ್ಥಿಸಿದನು. ಇದಕ್ಕೆ ರಾಜನು ಒಪ್ಪಿದನು.

ಕೆಲವು ಕಾಲದಮೇಲೆ ಅಕಂಪನಾಚಾರ್ಯರು ಆ ಊರಿಗೆ ಬಂದು ಚಾತುರ್ಮಾಸ್ಯ ವ್ರತಕ್ಕಾಗಿ ಅಲ್ಲಿ ನಿಂತರು. ಇದನ್ನು ನೋಡಿ ಬಲಿಯು ತನ್ನ ವೈರವನ್ನು ತೀರಿಸಿಕೊಳ್ಳಬೇಕೆಂದು ಉದ್ದೇಶಿಸಿ ಮಹಾರಾಜನನ್ನು ಕುರಿತು ತಾನು ರಾಜನಿಗೂ ದೇಶಕ್ಕೂ ಕ್ಷೇಮವಾಗುವಂತೆ ಒಂದು ದೊಡ್ಡ ಯಾಗವನ್ನು ಕೈಕೊಳ್ಳುವುದಾಗಿಯೂ ಅದು ಮಹತ್ಕಾರ್ಯವಾಗಿದ್ದುದರಿಂದ ಅವನ ರಾಜ್ಯವನ್ನು ಹದಿನೈದು ದಿನದವುಟ್ಟಿಗೆ ತನ್ನ ವಶಮಾಡಬೇಕಾಗಿಯೂ ಬೇಡಿಕೊಂಡನು. ಮಹಾರಾಜನು ತಾನು ಮಾತುಕೊಟ್ಟದ್ದರಂತೆ ಈ ವರವನ್ನು ಬಲಿಗೆ ಕೂಡಲೇ ಕೊಟ್ಟುಬಿಟ್ಟನು.

ಅನಂತರ ಬಲಿಯು ಅಕಂಪನಾಚಾರ್ಯರಿದ್ದ ಗಿರಿಗೆ ಬಂದು ಅಲ್ಲಿ ಭೂಮಿಶೋಧನೆ ಮಾಡಿಸುತ್ತ ಅವರಿದ್ದ ಗುಹೆಯನ್ನು ನೋಡಿ 'ಇದರೊಳಗೆ ಏನಾದರೂ ಕ್ರೂರಮೃಗಗಳು ಸೇರಿಕೊಂಡಿದ್ದರೆ ಓಡಿಹೋಗಲಿ, ಇದರೊಳಗೆ ಪುಳ್ಳೆಯನ್ನು ತುಂಬಿ ಉರಿಹಾಕಿಬಿಡಿ' ಎಂದು ಆಜ್ಞೆ ಮಾಡಿದನು. ಇದನ್ನು ಮಿಥಿಲಾಪುರದಲ್ಲಿದ್ದ ಜಿಷ್ಣುಗಳೆಂಬ ಆಚಾರ್ಯರು ಪರಮಾವಧಿ ಲೋಚನದಿಂದ ತಿಳಿದು ಮುನಿವರರ ಉಪಸರ್ಗವನ್ನು ಕಳೆಯುವುದಕ್ಕೋಸ್ಕರ ತಮ್ಮ ಶಿಷ್ಯನಾದ ವಿಷ್ಣುಕುಮಾರನನ್ನು ಕಳುಹಿಸಿಕೊಟ್ಟರು. ವಿಷ್ಣುಕುಮಾರನು ಪದ್ಮರಾಜನ ಹತ್ತಿರಕ್ಕೆ ಬಂದು ಈ ವರ್ತಮಾನವನ್ನು ತಿಳಿಸಲು ರಾಜನು ಮಹಾಕೋಪಗೊಂಡು ಎಲ್ಲವನ್ನೂ ಧ್ವಂಸಮಾಡುತ್ತೇನೆಂದು ಹೊರಟನು. ವಿಷ್ಣುಕುಮಾರನು ಹಿಂಸೆಯಾಗದಂತೆ ಬಲಿಯನ್ನು ಶಿಕ್ಷಿಸುವ ಭಾರವನ್ನು ತಾನು ತಗೆದುಕೊಂಡು ವಾಮನರೂಪಿನಿಂದ ಬಲಿಯ ಯಜ್ಞಶಾಲೆಗೆ ಹೋದನು. ಅಲ್ಲಿ ಬಲಿ ಮುಂತಾದವರೆಲ್ಲರೂ ಇವನನ್ನು

ಸಾಕ್ಷಾತ್ ವಿಷ್ಣುವೆಂದು ನಂಬಿ ಬಹಳವಾಗಿ ಉಪಚರಿಸಿ ತಮ್ಮಿಂದ ಏನನ್ನಾದರೂ ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು ; ವಾಮನನು ಅವರ ಇಷ್ಟದಂತೆ ಮೂರಡಿ ಭೂಮಿಯನ್ನು ಪ್ರಾರ್ಥಿಸಲು ಬಲಿಯು ಅದನ್ನು ಧಾರೆಯೆರೆದು ಕೊಡುತ್ತಿದ್ದನು. ಆಗ ವಾಮನನ ಕೈಯಲ್ಲಿದ್ದ ಶಂಖ ಕುಲಿಶ ಕಮಲ ಮುಂತಾದ ಚಿಹ್ನೆಗಳನ್ನು ನೋಡಿ ಶುಕ್ರನು ಹೆದರಿ ಬಲಿಯನ್ನು ತಡೆಯುವುದಕ್ಕೆ ಪ್ರಯತ್ನಪಟ್ಟನು. ಆದರೆ ಬಲಿಯು ಕೊಟ್ಟಮಾತಿಗೆ ತಪ್ಪಲೊಲ್ಲದೆ ಧಾರೆಯನ್ನು ಎರೆದು ಬಿಟ್ಟನು. ಕೂಡಲೆ ವಾಮನನು ಅದ್ಭುತ ರೂಪನ್ನು ತಾಳಿ ಇದ್ದ ಸ್ಥಳವನ್ನೆಲ್ಲಾ ಎರಡು ಹೆಜ್ಜೆಗಳಿಂದ ಆಳೆದನು. ಮೂರನೆಯ ಹೆಜ್ಜೆಗೆ ಅವಕಾಶವಿಲ್ಲದೆ ಅದನ್ನು ಆಕಾಶದಲ್ಲಿ ತಿರುಗಿಸುತ್ತಿರಲು ದೇವತೆಗಳಿಗೆ ಭಯವೂ ಆಸನಕಂಪವೂ ಆಗಿ ಎಲ್ಲರೂ ಬಂದರು. ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದುವು. ಆಗ ಇಂದ್ರನ ಅಪ್ಪಣೆಯಂತೆ ದೇವಕುಮಾರರು ಬಲಿಯನ್ನು ಮಟ್ಟೆಗಟ್ಟಿ ಹಸ್ತಿನಾಪುರದಿಂದ ಹೊರಕ್ಕೆ ಹಾಕಿದರು. ಋಷಿಗಳೂ ಸೌಧರ್ಮೇಂದ್ರಾದಿಗಳೂ ಅಕಂಪನಾಚಾರ್ಯರ ಗುಹೆಯ ಬಾಗಿಲಲ್ಲಿದ್ದ ಕಸವನ್ನೂ ಕಿಚ್ಚನ್ನೂ ನಂದಿಸಿ ಅವರಿಗೆ ಪ್ರಾಪ್ತವಾಗಿದ್ದ ಉಪಸರ್ಗವನ್ನು ತಪ್ಪಿಸಿದರು. ವಿಷ್ಣುಕುಮಾರನು ನಿಜರೂಪನ್ನು ತಾಳಲು ದೇವತೆಗಳೆಲ್ಲರೂ ಅವನನ್ನು ಹೊಗಳಿ ತಮ್ಮ ಲೋಕಕ್ಕೆ ಹಿಂತಿರುಗಿ ಹೊರಟು ಹೋದರು. ಪದ್ಮಮಹಾರಾಜನೂ ಅವನನ್ನು ಪೂಜಿಸಿ ಧರ್ಮದಲ್ಲಿ ದೃಢಚಿತ್ತನಾದನು.

"ಕುಸಿಯದೆ ಪೆಱರಱಲಂ ಬಿಂ
ತಿಸುವಂ ತಾನಱಿಗುಮಂತ ತೊದಱಿಲ್ಲದೆ ಬಿಂ |
ತಿಸುವಾತಂ ಪೆಱಗೆರ್ಪ್ಪಂ
ವಸುಮತಿಯೊಳ್ ತಾನೆ ಸಿರಿಗೆ ನೆರೆಯಾಗಿರ್ಕುಂ ||"

# ಶೋಧನಪತ್ರ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 1 | 12 | ರವುಳ | ರವುಳ |
| 4 | 2 | ಪೊರಮಣಿಸು | ಪೊಱಮಡಿಸು |
| ,, | 4 | ಸ್ವಾಮಿಗಳ | ಸ್ವಾಮಿಗಳ |
| ,, | ,, | ಪರಮೇಷಿ | ಪರಮೇಷ್ಠಿ |
| 6 | 14 | ದ್ಧಾಂತ | ದ್ಧಾಂತ |
| 8 | 4 | ಶರಭತ್ರ್ಯ | ಶರಭರ್ ತ್ರ್ಯ |
| ,, | 23 | ಕೂಪಲಾರಱದ | ಕೂಪಲಾಱದ |
| 10 | 22 | ದಿಟ್ಟರಮಿ ಪೆಱರಾರ್ಕ್ಕಂ | ಟ್ಟರೆಮ್ಮಿಂ ಪೆಱರಾರ್ |
| 18 | 3 | ಟೊಳ್ತಾಗುವ | ಜರೊಳ್ತಾಗುವ |
| ,, | 7 | ನೆಱಿ | ನೆಱಿ |
| 20 | 15 | ಪುತ್ರನುಮುಂ | ಪುತ್ರನುಮಂ |
| 30 | 14 | ಮುಚ್ಜರಿಸುವ | ಮುಚ್ಚರಿಸುವ |
| 58 | 17 | ಉಳಿಯೆ | ಉೞಿಯೆ |
| 60 | 14 | ನೀಮಂಬೆಜೇಡ | ನೀಮಂಜಬೇಡ |
| 63 | 4 | ಕೆಡಿಸಿದಂ | ಕಿಡಿಸಿದಂ |
| 67 | 10 | ಕನಿಷ | ಕನಿಷ್ಠ |
| 94 | 10 | ತತಣ | ತತ್ಕ್ಷಣ |
| ,, | 12 | ಕೆಡಿಸಿ | ಕಿಡಿಸಿ |
| 98 | 8 | ಪಾರ | ಪೌರ |
| 104 | 9 | ನೋತತ್ತುಂ | ನೋತುತ್ತುಂ |
| 107 | 13 | ರಣೆಲ್ಲಂಬೀ | ಶರಣೆಲ್ಲಂಬೀ |
| ,, | 14 | ಮೊಹೋದಯಂ | ಮೋಹೋದಯಂ |
| 108 | 8 | ಧ್ರವ | ಧ್ರುವ |
| 109 | 1 | ನೆತ್ತಱಿಂ | ನೆತ್ತರಿಂ |
| ,, | 23 | ಎಂದು | 3 ಎಂದು |

| ಪುಟ. | ಪಙ್ಕ್ತಿ | ಅಶುದ್ಧ. | ಶುದ್ಧ. |
|---|---|---|---|
| 112 | 18 | ತ್ರಿಬಿನೆ | ತ್ರಿಬ್ರುನೆ |
| 157 | 7 | ದಾರಣ್ಯ | ದಾರಣ್ಯಾ |
| 187 | 15 | ಸಾಳಂಕಾರ | ಸಾಳಂಕಾಯು |
| 188 | 21 | ,, | ,, |
| 232 | 12 | ಜಿವಂಗಳಂ | ಜೀವಂಗಳಂ |
| 317 | 4 | ಇತೀ | ಇಂತೀ |
| 447 | 13 | ಬಿಲಿ | ಬಲಿ |
| 455 | 1 | ವಿಷುಣು | ಜಿಷ್ಣು |

ಶ್ರೀ

ನಯಸೇನ ವಿರಚಿತಂ

# ಧರ್ಮಾಮೃತಂ.

ಶ್ರೀರಾಮಾರಮಣೀಯಪಾದಸರಸೀಜಾತಂ ನಿಲಿಂಪೇಂದ್ರವೃಂ
ದಾರಾಧ್ಯಂ ಭುವನತ್ರಯಪ್ರಭು ವಿನೇಯಾನೀಕಕಲ್ಪದ್ರುಮಂ ।
ಧೀರಂ ನಿತ್ಯನನಂತನಕ್ಷಯಸುಖಂ ಮುಕ್ತ್ಯಂಗನೇಶಂ ಜಗ
ತ್ಸಾರಂ ವೀರಜಿನೇಂದ್ರನೀಗೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ॥ ೧

ಪುದಿದೆಂಟುಂ ಕರ್ಮಬಂಧಂ ಪಱಿವಡೆ ಕಿಡದೆಂಟುಂ ಗುಣಂ ಪೊರ್ದೆ ಲೋಕಾ
ಗ್ರದೊಳೋರಂತೊಪ್ಪಿ ನಿಂದಚ್ಯುತರಜಿತರಮೂರ್ತರ್ಪ್ರಣೂತರ್ಸುಸೌಖ್ಯಾ ।
ಭ್ಯುದಯರ್ನಿತ್ಯರ್ಜಗನ್ಮಂಗಳರಮಳಗುಣೋತ್ತುಂಗರುದ್ಧೂತಲೇಪರ್
ಮುದದಿಂ ಸಿದ್ಧರ್ಸ್ವಕೀಯಪ್ರಭುತೆಯನೆಮಗಂ ಮಾಳ್ಕೆ ಕಾರುಣ್ಯದಿಂದಂ ॥ ೨

ವರಪಂಚಾಚಾರದೊಂದುನ್ನತಿಯೊಳವರೆ ಲೋಕೋತ್ತಮರ್ವಿಶ್ವಸತ್ತ್ವೋ
ತ್ಕರಮಂ ರಕ್ಷಿಪ್ಪುಪಾಯಕ್ಕವರೆ ಧರಣಿಯೊಳ್ ಸಜ್ಜನರ್ಪ್ರಸ್ತುತರ್ಭಾ ।
ಸುರಮುವ್ವತ್ತಾಱುಮತ್ಯುತ್ತಮಗುಣದೊಳವರ್ತಾಮೆ ಸತ್ಪೂಜ್ಯರೆಂಬಂ
ತಿರೆ ಮಿಕ್ಕಾಚಾರ್ಯವರ್ಯರ್ಕರುಣದಿ[1] ನಘನಿರ್ಮುಕ್ತರಂ ಮಾಡುಗೆಮ್ಮಂ ॥

---

[1] ನಘದೂರೀಕೃತಂ ಮಾಡುಗೆಂದುಂ; (ಕ)

ನುತಭವ್ಯಾನೀಕನೀಳಾಂಬುರುಹಮೊಲರೆ ಮಿಥ್ಯಾತ್ವಸೂರ್ಯಾಂಶು ಕುಂ
ದಲ್
ಶ್ರುತದುಗ್ಧಾಂಬೋಧಿ ಪೆರ್ಚಲ್ಜನನಿಗದಿತತತ್ವಾಂಶು ಪರ್ವಲ್ಸುರತ್ನ ।
ತ್ರಿತಯಾದ್ರೀಂದ್ರಾಗ್ರದೊಳ್ ಶೋಭಿಸುವೆನಘರುಪಾಧ್ಯಾಯತಾರಾಧಿಪ
ರ್ಗಂ
ತತಮುಸ್ಮಚ್ಚಿತ್ತಗೇಹಾಂತರವಿಮಳತೆಯುಂ ಮಾಳ್ಕೆ ವಾಗ್ಜ್ಯೋತಿಯಿಂ
ದಂ॥ ೪

ಮನದೊಳ್ಕೃಗಣ್ಮಿ ಪ್ರೋಣ್ಮುತ್ತಿರೆ ದಯೆ ವರಚಾರಿತ್ರದೊಳ್ಪರ್ಚೆ ಶೀಲಂ
ಜಿನಪಾದಾಂಭೋಜದೊಳ್ತಳ್ತಿರೆ ಮತಿ ಜಿನತತ್ವಾಬ್ಧಿಯೊಳ್ ಸಂತತಂ ಭಾ
ವನೆ ಮತ್ತೋಲಾಡೆ [1] ಕರ್ಮಾರಿಯುನದಟಲೆ [2] ವಾಸಂದಪೇರರ್ತಪಶ್ರೀ
ವನಿತಾಳಂಕಾರರಪ್ಪಿಂದಪಹರಿಸುಗೆ [3] ದುರ್ಮೋಹಮಂ ಸಾಧುವ
ರ್ಗಂ ॥ ೫

ಶತಪತ್ರಾನನೆ ಜೈನಧರ್ಮಕುಲಿಶಪ್ರಾಕಾರ ಮಿಥ್ಯಾತ್ವಪ
ರ್ವತವಜ್ರಾಗ್ರೆ ಸಮಸ್ತಭವ್ಯಜನಚಿತ್ತಾಹ್ಲಾದೆ ಲೋಕೈಕಸಂ ।
ಸ್ತುತೆ ಧರ್ಮಪ್ರಿಯೆ ಕೋಮಲಾಂಗಿ ವಿಲಸನ್ಮಾಂಗಲ್ಯಸದ್ಧರ್ಮಸಂ
ಯುತೆ ಸಿದ್ಧಾಯಿಪಿ ಯಕ್ಷಿ ಮಾಳ್ಕೆ [1] ನುತಮತ್ಕಾವ್ಯಕ್ಕೆ ನಿರ್ವಿಘ್ನಮಂ ॥

ವರಲಕ್ಷಣಾಂಗನರ್ಹ
ಚ್ಚರಣಾಂಬುಜಮಧುಪನನುಪಮಂ ಗುಣರತ್ನಾ ।
ಭರಣಂ ಗಜಮುಖಯಕ್ಷಂ
ಸಿರುತಂ ರಕ್ಷಿಸುಗೆ ಕೂರ್ತು ಭವ್ಯೋತ್ತಮರಂ ॥ ೭

ಕುಂದದ ಕೋಮಲಾಂಗರುಚಿಯಿಂ ಚೆಲುವಿಂಗೆಡೆಯಾಗಿ ವೃತ್ತದೊಂ
ದಂದದೊಳಿರ್ದ ಪೆರ್ಮೊಲೆಯಿನಂತೆಸೆದೊಪ್ಪುವನೇಕಛಂದದೊಂ ।

---

1 ಕಾವನಾರ (ಕ) 2 ದೋರಂತೆಧೀರ (ಬ) 3 ದುಷ್ಕರ್ಮವಂ (ಕ)

4 ಮುದದಿಂ, (ಬ)

ದಂವದ ಯಾನದೊಂದು ರಮಣೀಯತೆಯಿಂ ಕಡುಗಾಡಿವೆತ್ತು ವಾ
ಕ್ಸುಂದರಿ ಕೂರ್ತು ನಿಲ್ಕೆ ನಯಸೇನಮುನೀಂದ್ರಮುಖಾಬ್ಜಷಂಡ
ದೊಳ್ || ೮

[ದುರಿತೇಂಧನಾನಲಭಾ
ಸುರಕೀರ್ತಿಪತಾಕರಮಳಗುಣನಿಕರಕ್ಕಾ |
ಗರರರ್ಹದ್ಬಲ್ಯಾಚಾ
ರ್ಯರೆ ಜಗದೊಳನಿಂದ್ಯರದಱಿನೆಮಗಭಿವಂದ್ಯರ್ ] || ೯

ಪ್ರಕಟಯಶರ್ಗುಣನಿಧಿಗ
ಳ್ಸಕಳಧರಾವಳಯಪೂಜಿತರ್ ಸು [1] ಶ್ರುತರ |
ಕ್ಷಕರೆನೆ ಗುಣಧರಭಟ್ಟಾ
ರಕರೆ ವಲಮನಿಂದ್ಯರದಱಿನೆಮಗಭಿವಂದ್ಯರ್ || ೧೦

ವರ್ಯರೆನಿಪಾರ್ಯಮಂಕ್ಷಾ [2]
ಚಾರ್ಯರ ನೆಗೞ್ದರ್ ನಾಗಹಸ್ತ್ಯಾಚಾರ್ಯಾ |
ದ್ಯಾರ್ಯರ ನುತಯತಿವೃಷಭಾ
ಚಾರ್ಯರ ಪದಕಮಲಮೀಗೆ ಶಾಶ್ವತ [3] ಪದಮಂ || ೧೧

ಧೈರ್ಯಯುತರ್ [4] ಧರಸೇನಾ
ಚಾರ್ಯರ್ಭೂತಬಲಿಪುಷ್ಪದಂತಾಚಾರ್ಯರ್ |
ವರ್ಯರ್ಭವ್ಯಾಂಭೋರುಹ
ಸೂರ್ಯರ್ದಯಗೆಯ್ಗೆ ವಿಮಳರತ್ನತ್ರಯಮಂ || ೧೨

ವರ್ಯರ್ಲೋಕೋತ್ತಮರ್ಭಾವಿಸುಪ್ರೊಡನಘರತ್ಯುನ್ನತರ್ಕೊಂಡಕುಂ
ದಾ
ಚಾರ್ಯರ್ಚಾರಿತ್ರರತ್ನಾಕರರಧಿಕಗುಣರ್ಸಜ್ಜಟಾಸಿಂಹನಂದ್ಯಾ |

---

1 ವ್ರತ (ಬ)  2 ಪಿಂಛಾ. (ಗ)  3 ಸುಖಮುಂ, (ಬ)
4 ಸಿದ್ಧಸೇನಾ, (ಬ)  ತರ್ವರ (ಗ)

ಚಾರ್ಯಶ್ರೀಕುಂಚಿಭಟ್ಟಾರಕರುದಿತಯಶರ್ಮ್ಮಿಕ್ಕ ಪೆಂಪಿಂಗೆ ಲೋಕಾ
ಶ್ಚರ್ಯನಿಷ್ಕರ್ಮರೆಮ್ಮಂ ಪೊರಮಡಿಸುಗೆ ಸಂಸಾರಕಾಂತಾರದಿಂ
ದಂ ॥ ೧೩

ಶ್ರೀಮತ್ಸಮಂತಭದ್ರ
ಸ್ವಾಮಿಗಳ ನೆಗಳ್ತೆವೆತ್ತ ಕವಿಪರಮೇಷ್ಠಿ ।
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಬೋಧೋದಯಮಂ ॥ ೧೪

[ ಶ್ರೀಮದ್ವಿದ್ಯಾನಂದ
ಸ್ವಾಮಿಗಳ ಸಮಸ್ತಶಾಸ್ತ್ರವಾರಾಶಿಗಳ ।
ನ್ನೀಮಾತೊ ಸಕಳಶಾಸ್ತ್ರದೊ
ಳೀಮಹಿಯೊಳನಂತವೀರ್ಯದೇವರೆ ದೇವರ್ ] ॥ ೧೫

ಕ್ಷಿತಿಪೂಜ್ಯಸಿದ್ಧಸೇನವ್ರತಿಪತಿನುತವಾಕ್ಶ್ರೀವಧೂಕರ್ಣಪೂರರ್
ಶ್ರುತಕೀರ್ತ್ಯಾಚಾರ್ಯರುರ್ವೀವಳಯವ್ಯಾಪ್ತಯಶೋರಾಶಿಗಳ್ ಕರ್ಮ
ಸಂದೋ ।
ಹತಮಃಪ್ರಧ್ವಂಸನೈಕದ್ಯುಮಣಿಗಳಮಳಶ್ರೀಪ್ರಭಾಚಂದ್ರದೇವರ್
ಜಿತಮಾರಬೊಪ್ಪದೇವರ್ವಿದಿತಸಕಲವಿದ್ಯಾಬ್ಧಿತಾರಾಧಿನಾಥರ್ ॥ ೧೬

ನಿರುಪಮರೇಳಾಚಾರ್ಯರ
ನಿರತಿಶಯವೀರಸೇನಜಿನಸೇನಾಚಾ ।
ರ್ಯರ ಗುಣಭದ್ರಭಚಂದ್ರರ [1]
ಚರಣಯುಗಂ ಮಾಡುಗೆಮಗೆ ನಿರ್ವೃತಿಸುಖಮಂ ॥ ೧೭

ಪರಮಜಿನಾಗಮಾಂಬುನಿಧಿಪಾರಗರೂರ್ಜಿತಗಂಡ [2] ಮಂಡಲೇ
ಶ್ವರನುತಪಾದಪಂಕರುಹರುನ್ನತಕೀರ್ತಿಪತಾಕರಿಂದ್ರ [3] ಭೂ ।

---

1 ದಂತರ (ಗ)   2 ಗಂಧ (ಖ)   3 ರುಂದ್ರ (ಗ)

ಧರನಿಭಧೈರ್ಯಧುರಂಗಜನ್ಯಪಾಮದೇಭಹರರ್ಲಸದ್ಗುಣಾ
ಭರಣರೆನಿಪ್ಪ ಪೆಂಪಜಿತಸೇನಮುನೀಶ್ವರನೊಳ್ ವಿರಾಜಿಕುಂ ॥ ೧೮

ಅನುಪಮಗುಣನಿಳಯರ್ವಾದೀ
ದಿನಿಪೂಜ್ಯರ್ಸೋಮದೇವಪಂಡಿತರಮಳರ್ |
ಮುನಿವೃಷಭರ್ವಿನತತ್ರಿಭು
ವನದೇವರ್ವಿಬುಧವನಜವನಕಳಹಂಸರ್ ॥ ೧೯

ಪಡೆದೊಡೆ ತಪಮಂ ಶ್ರುತಮಂ
ಪಡೆಯರ್ ತಚ್ಛ್ರುತಮನೆಯ್ದೆ ಪಡೆದೊಡೆ ತಪಮಂ |
ಪಡೆಯರದಂತವನೆರಡುಮ
ನೊಡವಡೆದ ನರೇಂದ್ರಸೇನಮುನಿಪನೆ ಧನ್ಯಂ ॥ ೨೦

ಎನಿತೊಳವು ತರ್ಕಶಾಸ್ತ್ರಮ
ವನಿತುಮನತಿಶಯದಿನೆಸೆಯೆ ನಯಸೇನಮುನೀಂ |
ದ್ರನೆ ಬಲ್ಲನೆಂದು ಧಾರಿಣಿ
ಮನದಾದರದಿಂದೆ ಪೊಗಟೆ ಕೀರ್ತಿಯನಾಂತಂ ॥ ೨೧

ಶಾಂತಮೂರ್ತಿಗಳಗ್ರಕರ್ಮಹರರ್ದಿವಾಕರಣಂದಿಸಿ
ದ್ಧಾಂತದೇವರುದಗ್ರಮನ್ಮಥವೈರಿಗಳ್ ಶುಭಚಂದ್ರಸಿ |
ದ್ಧಾಂತದೇವರುದಾತ್ತಚಾರುಚರಿತ್ರರೀಧರೆಯೊಳ್ ಮನೋ
ಜಾಂತಕರ್ಮುನಿವಂದಿತರ್ಗುಣವಾರ್ಧಿಗಳ್ ಮದವರ್ಜಿತರ್ ॥ ೨೨

ಮಂತಣಮೇಂ ಶ್ರುತದಿಂ ಗುಣ
ದಿಂ ತಪದಿಂ [1] ರಾಮಣಂದಿಸಿದ್ಧಾಂತಿಗಳ್ |
ದರ್ಂತೆ ಪೆಱಪೆಱರನಂತಿಂ
[2] ತುಂತೆಂದೇನೆಂದು ಬಣ್ಣಿಪರ್ಜಡಮತಿಗಳ್ ॥ ೨೩

---

1 ಮಾಘಣಂದಿ (ಖ. ಗ)   2 ತುಂತೆಂಪಂ ಬಣ್ಣಿಪರ್ಜಡರ್ಮತಿರಹಿತರ್ (ಖ

ನುತಸಿದ್ಧಾಂತದೊಳೊಪ್ಪುವೆತ್ತ ಜಿನಸೇನಾಚಾರ್ಯರಿಂ ಶಾಸ್ತ್ರದು
ನ್ನತಿಯೊಳ್ ಭಾವಿಸೆ ಪೂಜ್ಯಪಾದಮುನಿಯಿಂ ಷಟ್ತರ್ಕದೊಳ್ಧಾರಿಣೀ|
ಸ್ತುತನಾಗಿರ್ದ ಸಮಂತಭದ್ರಮುನಿಯಿಂ ಮಿಕ್ಕಿರ್ದನುದ್ವೃತ್ತಪ
ಶ್ರುತವಾರಾಶಿನರೇಂದ್ರಸೇನಮುನಿಪಂ ತ್ರೈವಿದ್ಯಚಕ್ರೇಶ್ವರಂ ॥ ೨೪

ಪೊಡವೀಶರ್ಭುವನೈಕಮಲ್ಲನುತಪಾದಾಂಭೋಜರತ್ಯೂರ್ಜಿತರ್
ದೃಢಚಿತ್ತರ್ ಗುಣಚಂದ್ರಪಂಡಿತರಿಳಾಲೋಕೈಕಪೂಜ್ಯರ್ಮನಂ |
ಬಿಡೆ ತ್ರೈವಿದ್ಯಮಹಾಭಿಧಾನಮನದಂ ಕೂರ್ತಕ್ಕಱಿಂ ಕೊಟ್ಟರೆಂ
ದೊಡೆ ತ್ರೈವಿದ್ಯನರೇಂದ್ರಸೇನಮುನಿವೋಲ್ವಾಗ್ಮೀಶರಾಲೋಕ
ದೊಳ್ ॥ ೨೫

ಛೇರೆಂಡಪಂಡಿತರ್ಮಾ
ಕ್ಷ್ರೀರಮಣರ್ಮಾಸುಪೂಜ್ಯಸಿದ್ಧಾಂತೇಶರ್ |
ಮೇರುನಗಕ್ಷಮರವನೀ
ಶಾರಾಧ್ಯರ್ಮುನಿಕದಂಬವನಮಾಕಂದರ್ ॥ ೨೬

[ ಕಂತುವಿರೋಧಿಕಿಲ್ಬಿಷಗಜಾಧಿಪಕೇಸರಿಪದ್ಮಣಂದಿಸೈ
ದ್ಧಾಂತಮುನೀಂದ್ರರಂತವರಶಿಷ್ಯರನಂತಗುಣರ್ಚತುಷ್ಕಷಾ |
ಯಾಂತಕರುಗ್ರಕರ್ಮಹರಣಶ್ರುತವಾರಿಧಿಮೇಘಚಂದ್ರಸಿ
ದ್ಧಾಂತಮುನೀಂದ್ರರಿಂದ್ರಧರಣೀಧ್ರನಿಭಕ್ಷಮರೀಡ್ಯಸತ್ಕ್ರಮರ್ ॥ ೨೭

ಯತಿವಂದಿತಕ್ರಮರ್ದು
ಷ್ಕೃತದೂರರ್ಮಾಘಣಂದಿಸೈದ್ಧಾಂತಿಗಳೂ |
ರ್ಜಿತರವನಿಪೂಜ್ಯರತ್ಯು
ನ್ನತಪ್ರಭಾಚಂದ್ರಸೇನಸೈದ್ಧಾಂತೇಶರ ॥ ೨೮

ಅವರಿವರೊಳ್ಳಿದರೆಂಬೀ
ಬವರದೊಳೇನರ್ಹಣಂದಿಭಟ್ಟಾರಕರು |
ದ್ಭವಚಾರುಚರಿತರೆನಲೀ
ಭುವನಂ ಕೈಮುಗಿಯೆ ಗಣಕೆ ಮೂಲಿಗಳಾದರ್ ॥ ೨೯

ಒದವಿದ ಕವಿತೆಯ ವಾಗ್ಮಿ
ತ್ವದ ಗಮಕದ ವಿಬುಧತತಿಗೆ ರಂಜಿಪ ವಾದಿ ।
ತ್ವದ ಬಲ್ಮೆಗೆ ಸಕಲಕಲಾ
ಭ್ಯುದಯಶ್ರುತಕೀರ್ತಿದೇವನಲ್ಲವೆ ದೇವಂ ॥ ೨೦

ಖಳಕರ್ಮ ಜಲಧಿಬಡಬಾ
ನಳರುದ್ಧ ತವಾದಿನಿಕರಧರಣೀಧರಸಂ ।
ಕುಳಕುಳಿಶರಮಳಗುಣಗಣ
ನಿಳಯಶ್ರುತವಾರ್ಧಿರಾಮಸಿಂಹಬುಧೇಂದ್ರರ್ ॥ ೨೧

ಪರಮಜಿನೇಂದ್ರಾಗಮಸಾ
ಗರಚಂದ್ರರ್ವಾಸುಪೂಜ್ಯಭಟ್ಟಾರಕರು ।
ರ್ವರೆ ಪೊಗಟೆ ಗುಣಗಣಕ್ಕಾ
ಗರಮಾಗಲ್ದರೆಗೆ ಚಾರುಸೇನಾಚಾರ್ಯರ್ ॥ ೨೨

ಅಳವಟ್ಟುಗ್ರೋಗ್ರತಪೋ
ನಳನಿಂ ದುರಿತೇಂಧನಂಗಳಂ ಸುಟ್ಟು ತಪೋ ।
ಜ್ವಳವೆಪ್ಪ ಕುಕ್ಕುಟಾಶಾ
ಮಳಧಾರಿಮುನೀಂದ್ರರವನಿತಳಸಂಸ್ತುತ್ಯರ್ ॥ ೨೩

ಅಗಣಿತಮೆನಿಸುವ ಗುಣದಿಂ
ನೆಗಲ್ತೆವಡೆದಿರ್ದ ಶಾಸ್ತ್ರತರ್ಕಾಗಮದಿಂ ॥
ಜಗತೀವಳಯಂ ಬಣ್ಣಿಸೆ
ನೆಗಟ್ದರ್ ತ್ರೈವಿದ್ಯಮೇಘಚಂದ್ರಮುನೀಂದ್ರರ್ ॥ ೨೪

ಪರಲಿಂ ಮುದ್ರಿಕೆ ವಜ್ರದಿಂ ಕುಲಿಶಮಾತಾರೇಶನಿಂ ರಾತ್ರಿ ಭಾ
ಸ್ಕರನಿಂದಂಬರಚಕ್ರಮಾಮ್ರತರುವಿಂದುದ್ಯಾನಮುರ್ವೀಶರಿಂ ।
ಧರೆ ಪಂಕೇಜದಿನೊಳ್ಗೊಳಂ ಬುಧನುತ [1] ಶ್ರೀರಾಮಸೇನವ್ರತೀ
ಶ್ವರನಿಂ ನಿರ್ಮಳಜೈನಧರ್ಮವೆಸೆವಲಂ ರಮ್ಯಂ ಮಹೀಚಕ್ರದೊಳ್ ॥

[1] ಶ್ರೀರಾಮಚಂದ್ರ (ಬ)

ಪರವಾದಿಘನಾಘನನಿ
ಷ್ಠುರಪವನರ್ಜೈನಸಮಯದುಗ್ಧಾಬ್ಧಿನಿಶಾ |
ಕರರುಗ್ರಕರ್ಮಗಜರಿಪು
ಶರಭರ್ತೈವಿದ್ಯಕನಕನಂದಿಮುನೀಂದ್ರರ್ ] ೩೬

ವಿವಿಧಮುನಿಸಮಿತಿ ಗಣಧರ
ನಿವಹಂ ಯತಿಪತಿಮುನೀಂದ್ರನಿಕರಂ ಮಾಳ್ಕು |
ತ್ಸವದಿಂ ಭವ್ಯಸಮೂಹ
ಕ್ಕವಿತಥಸಮ್ಯಕ್ತ್ವರತ್ನಮಂ ದಯೆಯಿಂದಂ || ೩೭

[ ನಿರವದ್ಯಜಿನಸಮಯಾಂ
ಬರಹಿಮಕರರಖಿಳವಿಬುಧಜನಸಂಸ್ತುತ್ಯರ್ |
ಧರೆಯೊಳಕಳಂಕದೇವರೆ
ಪರಮಾರ್ಥಂ ನೋಡೆ ಸಕಲವಿದ್ಯಾಂಬುಧಿಗಳ್ ] || ೩೮

ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ
ದಸದೃಶಮಪ್ಪಪೂರ್ವರಸಮೆಯ್ದೆ ಗಜಾಂಕುಶನೊಳ್ಪುವೆತ್ತು ರಂ |
ಜಿಸುವ ಸದರ್ಥದೃಷ್ಟಿ ಗುಣವರ್ಮನ ಜಾಣ್ಕವಿರತ್ನನೋಜೆ ಶೋ
ಭಿಸೆ ನೆಲಸಿರ್ಕೆ ಧಾರಿಣಿಮನಂಗೊಳೆ ಮತ್ಕೃತಿಯೊಳ್ನಿರಂತರಂ || ೩೯

ರಸಭಾವಂ ಗಮಕಂ ಕಾ
ಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ |
ಕುಸುಮಿಯ ಬಗೆಯಿಂದಿನಿತಱೊ
ಳಸೆಯದ ಕೃತಿ ಕೃತಿಯೆ ಬಗೆದು ನೋಳ್ಪೊಡೆ ಜಗದೊಳ್ ||೪೦

[ ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ |
ತಿಸಿ ಕೂಡಲಾರದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ] || ೪೧

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ಧಗನ್ನಡದೊಳ್ತಂ ।
1 ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥ ೪೦

' [ ಪರಿಣತರೆನಿಸುವ ನಿರ್ಮ
ತ್ಸರರಂ ಮೆಚ್ಚಿಪುದು ಗಹನಮಲ್ಲದು ಜಡರಂ ।
ಕರಮಱಿವು ತಿಳಿಪಲೆಂತೆನೆ
ಖರಕರನಂ ಗೂಗೆಗೆಯ್ದೆ ತೋರ್ಪಂತಕ್ಕುಂ ॥ ೪೩

ಮಂಡೂಕಂ ಶರನಿಧಿಯುಂ
ಕಂಡಱಿಯದೆ ಪಳಿಗುಮಬ್ಧಿಗದು ಭಂಗಮೆ ಪೇೞ್ ।
ಖಂಡಿಸೆ ಕುಕವಿಸಮೂಹಂ
ಪಂಡಿತರಪ್ಪವರ್ಗೆ ಭಂಗಮಕ್ಕುಮೆ ಜಗದೊಳ್ ॥ ೪೪

ಪೊಲ್ಲಮೆಗಂಡದನೆಱಿದುಂ
ಮೆಲ್ಲನೆ ಸಯ್ತಾಗೆ ತಿರ್ದುವೆಸುಕವೀಶರ್ ।
ಪೊಲ್ಲಮೆಯಿಲ್ಲದೊಡಂ ಲೇ
ಸಲ್ಲದು ಕೃತಿಯೆಂದು ಕುಕವಿನಿಕರಂ ಪಳಿಗುಂ ॥ ೪೫

ಇಲಿಗಂ ಮೊರಕುಟವಕ್ಕಿಗಂ
ಮಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ ।
ಸಲೆ ಚಪಲಂಗಂ ಕುಕವಿಗ
ಮಲಸದೆ ತೆಗಳ್ವುದುವೆ ಸಹಜಮವಱಂತೆ ಕರಂ ] ॥ ೪೬

ನವಿಲಾಟಂ ಸೊಗಯಿಸುವುದು
ವಿವೇಕಿಯುಪ್ಪಂಗೆ ನಾಯ್ಗೆ ಸೊಗಯಿಸ-ವುದೆ ಸ ।

2 ದಿಕ್ಕುವುದಿಸದಂಗಳ (ಕ), ದಿಕ್ಕುವುದೇಕೆಪದಂಗಳ (ಬ)

ತ್ಕವಿಯು ಬಗೆಗೊಳ್ವು ಪುಗುವವೊ
ಲವಿವೇಕಿಯ ಮನಮನೊಳ್ಪುದೇಂ ಪೊಕ್ಕಪುದೇ ॥ ೪೭

ಅಡಕಿಲ ಮಡಕೆಗಳಂ ಸ
ಯ್ತಿಡಲಱಿವುವೆ ನಾಯ್ಗಳೊಡೆವುವಲ್ಲದೆ ಕೃತಿಯುಂ ।
ಕಿಡೆನುಡಿವರಲ್ಲದೇಂ ಜಡ
ರೊಡಂಬಡಲ್ತಿದ್ದಿನುಡಿಯಬಲ್ಲರೆ ಕವಿವೋಲ್ ॥ ೪೮

ಮಱೆಯಿಲ್ಲದೆ ಪೊಯ್ನೀರಿಂ
ಬೆಳಗುಮೆ ಧರೆ ಮೞುಗಿ ಕುದಿದು ಶಾಸ್ತ್ರದ ಬಲದಿಂ ।
ದಳಿಪಿಂ ಪೇೞ್ವೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ॥ ೪೯

ಉಪ್ಪಿಲ್ಲದೆ ಕೇಳೊಕ್ಕಳ
ತುಪ್ಪವನೆಱೆದುಣ್ಬೆನೆಂಬೊಡುಂಬುಣಿಸೇಂ ಸ್ವಾ ।
ದಪ್ಪುದೆ ಸಹಜಂ ತನಗಿನಿ
ಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ ॥ ೫೦

ಮುನಿದಪರೆಂಬುದೊಂದುಭಯಮೆಳ್ಗನಿತಪ್ಪೊಡಮೊಂದುಮಿಲ್ಲ ಸ
ಜ್ಜನರೊಳದೇಕಮರ್ಪುರುಡಿಪರ್ಮುನಿವರ್ಕಡುದುಷ್ಟರಪ್ಪವರ್ ।
ಮುನಿದೊಡೆ ರಾಗದಿಂದೊಸೆದೊಡಂ ಕಡುಪೊಲ್ಲದಱಿಂದಮಂಜಿ ದು
ರ್ಜನಪರಮೇಶ್ವರರ್ಗಱಿದು ಕೈಮುಗಿವೆಂ ಬಲಗೊಂಡು ಭಕ್ತಿಯಿಂ ॥

ಪಱುಗೋಲೊಳ್ ವಾರ್ಧಿಯ ತಡಿ
ಗುಱದೆ ಭರಂಗೆಯ್ದು ಪೋಪೆನೆಂಬಗ್ಗನವೋಲ್ ।
ನೆಱೆ [1] ಜಿನವಾಕ್ಯಾಂಬುಧಿಯುಮ
ನುಱದೀಸುವೆನೆಂಬ [2] ದಿಟ್ಟರೆಮಿ ಪೆಱರಾರ್ಕ್ಕಂ ॥ ೫೧

ತರಣಿ ಬೆಳಗಲ್ಪಂಪೇಕೆಂದಿರ್ದುವೇ ಭಗಣಂ ಸುರ
ದ್ವಿರದಮಿರಲಿಂ ಸೊರ್ಕೇಕೆಂದಿರ್ದುವೇ ಪೆಱವಾನೆಗಳ್ ।

---

1 ಜಿನರಾಗಮವಾರ್ಧಿ (ಗ)    2 ದುಷ್ಟ (ಬ, ಕ)

ಪರಮಸುಕವಿಗಳ್ ಸಾಲ್ವೆತ್ತಾವೆಂದು ಮಾಣದೆ ಪೇಳ್ವೆನಾ
ದರದಿ [1] ನೊಲವಿಂದರ್ಥೀ ದೋಷಂ ನಪಶ್ಯತಿ ಯೆಂಬಿನಂ ॥೫೩॥

ಮಱೆದಾನುಂ ಜಿನನಾಮಮಂ ಸುಮನದಿಂ ಪೇಳ್ದಾತನುಂ ದುಃಖಮಂ
ಕಿಱಿದುಂ ಪೊರ್ದದನಂತಮಪ್ಪ ಸುಖದೊಳ್ ಕೂಡಿರ್ಪನೆಂದಂದು ತ।
ಳ್ತುಱೆ ಪುಣ್ಯೋದಿತಮಪ್ಪ ತಚ್ಚರಿತಮಂ ಕಾವ್ಯಂಗಳೊಳ್ ಭಕ್ತಿಯಿಂ
ನೆಱೆ ಪೇಳ್ದಾತನ ಕರ್ಮನಿರ್ಜರೆಯನಂತಿಂತೆಂತೆನಲ್ಬರ್ಕುಮೋ ॥೫೪

ಜಿನಮತದೊಳನಿತುಸಾರಮ
ದನಿತುಂ ಲೇಸಾಗಿ ತೋರ್ಪುದೀಕೃತಿಯೊಳದೆಂ।
ತೆನೆ ಕನ್ನಡಿಯೊಳಗೆ ಜಲ
ಕ್ಕನೆ ತೋರ್ಪವೊಲಿಭದ ರೂಪು ವಿಸ್ತರದಿಂದಂ॥ ೫೫

ಗುರು ವಿದ್ಯಾಬ್ಧಿನರೇಂದ್ರಸೇನಮುನಿಪಂ ತ್ರೈಲೋಕ್ಯಚಕ್ರೇಶ್ವರಂ
ಪರಮಶ್ರೀಜಿನನಿಷ್ಟದೈವನಮಳಂ ಶ್ರೀಜೈನಯೋಗೀಶ್ವರರ।
ಪರಮಾರ್ಥಂ ತನಗಾಳ್ದರುತ್ತಮವಿನೇಯರ್ಬಂಧುವರ್ಗಂನಿಜಾ
ದರದಿಂದೆಂದೊಡೆ ಭಾಪು ಧನ್ಯನ [2] ದಿಟಂ ವಾತ್ಸಲ್ಯರತ್ನಾಕರಂ॥ ೫೬

ಸ್ಥಿರವಾಕ್ಯಂ ಸುವ್ರತಾಂಭೋನಿಧಿ ಸಕಲಜಗತ್ಪಾವನಂ ರಾಜಪೂಜ್ಯಂ
ಪರಮಶ್ರೀಜೈನಧರ್ಮಾಂಬರದಿನಕರನುದ್ಯತ್ಪ್ರೋಮೂರ್ತಿವಾಣ್ಯಾ।
ಭರಣಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಿನೀರಾಜಹಂಸಂ॥ ೫೭

ಮಾನಿತಶೀಲನಿಧಾನನ
ನೂನಗುಣಂ ಸಕಳಭವ್ಯಜನಬುಧಜನಚಿ।
ತ್ತಾನಂದಕರಂ ಕೇಳ್ಬುದು
ಸೇನಬುಧಂ ಸುಕವಿನಿಕರಪಿಕಮಾಕಂದಂ॥ ೫೮

---

1 ಬಗೆವಂದರ್ಥಿ (ಗ) 2 ಬ ಜ್ಞ್ಯಪನ್ಯನೆ (ಗ)

ಅತಿಶಯಜಿನೇಂದ್ರವಚನಾ
ಮೃತಮಂ ಸಕಲೈಕಜೀವಹಿತಮಂ ಪುಣ್ಯೋ।
ದಿತಮಂ ಭವ್ಯನಿಕಾಯ
ಸ್ತುತಮಂ ನೆಱೆ ಪೇೞ್ವೆನಱಿಯೆ ಧರ್ಮಾಮೃತಮಂ ॥ ೩೯

ಅದು ಮತ್ತಂತೆಂದೊಡಿಂದ್ರಪ್ರಣುತಪದಯುಗಂ ಮೋಕ್ಷಲಕ್ಷ್ಮೀವಿಳಾಸಂ
ಮದನೇಭೇಂದ್ರೋಗ್ರಕಂಠೀರವನಮಳಯಶಂ ನಿರ್ಮಳಂ ಸರ್ವಸೌಖ್ಯಾ
ಭ್ಯುದಯಂ ಶ್ರೀವೀರನಾಥಂ ನೆಲಸಿರೆ ವಿಪುಳಾದ್ರೀಂದ್ರದೊಳ್ ಶೋಭೆಯಿಂ ಮು
ತ್ತಿದ ದೇವಾನೀಕದಿಂ ಸುತ್ತಿದ ಖಚರನರಾಧೀಶಸಂದೋಹದಿಂದಂ ॥ ೪೦

[ಅಂತಿರ್ದ ತ್ರಿಜಗನ್ಮಹೀಶಸಭೆಯೊಳ್ ಭವ್ಯಾಳಿಗಂ ಚಂದ್ರನೆಂ
ಬಂತೊಪ್ಪಿರ್ದ ಸಮಸ್ತಶಾಸ್ತ್ರವಿದರಂ ಧರ್ಮೋಪದೇಶಜ್ಞರಂ।
ಮುಂತಾಗೌತಮರಂ ಮುನೀಂದ್ರನುತರಂ ಸದ್ಭಕ್ತಿಯಿಂ ಶ್ರೇಣಿಕಂ
ಸಂತೋಷಂ ಮಿಗೆ ಕೂರ್ತು ಕೇಳ್ದನಧಿಕಶ್ರೀಗಾರ್ಮವಂ ಧರ್ಮಮಂ] ॥ ೪೧

ಅಂತಾಗಿರೀಂದ್ರದೊಳ್ ಚರಮತೀರ್ಥಕರಪರಮದೇವರ ಸಮವಸರಣಂ ಬಂದು ನೆಲಸಿರ್ದುದನಱಿದು ಋಷಿನಿವೇದಕಂ ಷಡೃತುಫಲಂಗಳನಾಶ್ಚರ್ಯಮಪ್ಪಂತೆ ಶ್ರೇಣಿಕಮಹಾರಾಜಂಗೆ ಕಾಣ್ಕೆಗೊಟ್ಟು ಸರ್ವಾಂಗಪ್ರಣತನಾಗಿ ಕೈಮುಗಿದು ದೇವಾ ನಮ್ಮ ವಿಪುಳಗಿರಿಯೊಳ್ ಶ್ರೀವೀರವರ್ಧಮಾನಸ್ವಾಮಿಗಳ ಸಮವಸರಣಂ ಬಂದು ನೆಲಸಿರ್ದುದೆಂದು ಬಿನ್ನಪಂಗೆಯ್ಯಲೊಡನೆ ಕೇಳ್ದು ಸಿಂಹಾಸನದಿಂದಿಳಿದತ್ತಲೇಳಡಿಯುಂ ನಡೆದು ವಿನಮಿತಶಿರಸ್ಕನಾಗಿ ಋಷಿನಿವೇದಕಂಗೆ ಪೂರ್ಣಾನಂದಪುರಸ್ಸರ[1]ಮಂಗಚಿತ್ತಮಂ ಕೊಟ್ಟಾನಂದಭೇರಿಯಂ ಪೊಯ್ಸಿ ಪಡೆವಳನಂ ಬರಿಸಿ ಬೀಡೆಲ್ಲಮರ್ಚನಾದ್ರವ್ಯಂಬೆರಸು ಪೂಜಿಮಡುವಂತೆ ಸಾರೆಂದು

1 ತುಷ್ಟಿದಾನಪುರಸ್ಸರಂ (ಗ)

ನಿಯಮಿಸಿ ತಾನುಂ ಚೇಳಿನಿಮಹಾದೇವಿಯುಂ ಪಟ್ಟವರ್ಧನಗಜೇಂದ್ರಮನೇಱಿ ಸಪರಿವಾರಂ ವಿಪುಳಾದ್ರಿಯನೆಯ್ದಿ ದೂರೋತ್ಸಾರಿತವಾಹನಂ ವಿಚಿತ್ರಾತಪತ್ರಪ್ರಮುಖರಾಜಚಿಹ್ನಂಗಳಂ ಬಿಟ್ಟು ಸಮವಸರಣಮನೆಯ್ದಿ ಗಂಧಕುಟಿಯುಮಂ ತ್ರಿಃಪ್ರದಕ್ಷಿಣಂಗೆಯ್ದು [1] ಪರಮೇಶ್ವರನ ಪಾದಪದ್ಮಂಗಳಂ ದಿವ್ಯಾರ್ಚನೆಗಳಿಂದರ್ಚಿಸಿ ತ್ರೈಲೋಕ್ಯಸ್ವಾಮಿಗಭಿಮುಖನಾಗಿ ನಿಂದು ಮುಕುಳಿತಕರಕಮಳನುಂ ವಿಕಸಿತಹೃತ್ಕಮಳನುಮಾಗಿ ॥ ೬೦

ದುರಿತತಿಮಿರಪ್ರಭಾವಂ
ಪರಿಹರಿಪುದು ದೇವ ನಿನ್ನ ಮುಖಚಂದ್ರಮನಿಂ ।
ತ್ವರಿತಂ ನೋಡಲದೆಂತುಂ
ದೊರೆಕೊಳ್ವುದು ವೀರಜಿನಪ ನಿರ್ವೃತಿಸೌಖ್ಯಂ ॥ ೬೧

ಎಂದನೇಕಸ್ತುತಿಸಹಸ್ರಂಗಳಿಂ ಸ್ತುತಿಯಿಸಿ ನಿರ್ಭರಭಕ್ತಿಯಿಂದೆಱಗಿ ಪೊಡೆಮಟ್ಟು ಶ್ರೇಣಿಕಮಹಾರಾಜಂ ಜ್ಞಾನರ್ಧಿಸಂಪನ್ನರಪ್ಪ ಗೌತಮಸ್ವಾಮಿಗಳ್ಗೆ ಪೊಡೆಮಟ್ಟು ಮುಕುಳಿತಕರಕಮಳನುಮಾಗಿ ॥ ೬೨

ತಿರಿಕನಾರಕಮಾನವಾಮರಲೋಕದೊಳ್ ನೆಲೆಗೊಂಡು ನಿ
ತ್ತರಿಸದೆಲ್ಲಿಯುಮಲ್ಲಿಗಲ್ಲಿಗೆ ಪುಟ್ಟಿ ರಾಟಳದಂದದಿಂ ।
ತಿರಿವ ಸಂಸೃತಿದುಃಖದಿಂ ಪೊಱಮಟ್ಟು ಶಾಶ್ವತಸೌಖ್ಯದೊಳ್
ನೆರೆವುಪಾಯಮನಱ್ತಿಯಿಂ ಬೆಸಸಲ್ಕೆವೇೞ್ಕು ಮುನೀಶ್ವರಾ ॥ ೬೩

ಎನೆ ನಯದಿಂ ಚತುರ್ವಿಧಸುರಾಳಿ ಶಿರೋನತರಾಗಿ ಹಸ್ತಕೋ
ಕನದಯುಗಂಗಳಂ ಮುಗಿಯೆ ದಂತಮರೀಚಿ ಸುಧಾಂಶುರಶ್ಮಿಯುಂ ।
ತನುಪಮಮಾಗಿ ಶೋಭಿಸಿರೆ ಸರ್ವಜನಸ್ತುತರಪ್ಪ ಗೌತಮರ್ ।
ವನಧಿಗಭೀರದಿಂನುಡಿದರಾಪ್ತಮುಖೋದ್ಗತಮಪ್ಪ ತತ್ವಮಂ ॥ ೬೪

[1] ಭಗವಜ್ಜಿನೇಂದ್ರಶ್ರೀಪಾದ. (ಗ)

ನೀಂ ಬೆಸಗೊಂಡ ಚತುರ್ಗತಿಚ್ಛೇದಮುಂ ಜಾತಿಜರಾಮರಣದೂರಮುಂ ಸಾರಮುಮಪ್ಪ ನಿರಂತರಸುಖಂ [1] ಮುಕ್ತಿಯೊಳಲ್ಲದೆ ದೊರೆಕೊಳ್ಳದಾಮುಕ್ತಿಯುಂ ತ್ರಿಜಗನ್ಮಾಂಗಲ್ಯಮಪ್ಪ ಸಮ್ಯಗ್ದರ್ಶನದಿಂದಲ್ಲದೆ ಸಮನಿಸದಾಸಮ್ಯಗ್ದರ್ಶನಮುಂ ಕರಣಲಬ್ಧಿಯಿಲ್ಲದೆ ಕೂಡದಾಸಮ್ಯಗ್ದರ್ಶನಮಿಲ್ಲದೆ ನಿರಂತರಸ್ಥಾಯಿಯಪ್ಪ ಮುಕ್ತಿಶ್ರೀಯುಂ ಪಡೆವೆನೆಂಬಾತಂ [2] ಕಣ್ಣಿಲ್ಲದೆ ಕಾಣ್ಬೆನೆಂಬ, ಮಣ್ಣಿಲ್ಲದೆ ಬೆಳೆವೆನೆಂಬ, ಸತಿಯಿಲ್ಲದೆ ಸುತರಂ ಪಡೆವೆನೆಂಬ, [3] ಮತಿಯಿಲ್ಲದೆ ಪರದುಗೆಯ್ವೆನೆಂಬ, ಕೇರಿಲ್ಲದೆ ಚಿತ್ರಮಂ ಬರೆವೆನೆಂಬ, ನೀರಿಲ್ಲದೆ ಕೊಳನಡುವೆನೆಂಬ, ಅಂಬಿಲ್ಲದೆ ಬಿಲ್ವಿಡಿವೆನೆಂಬ, ತೂಬಿಲ್ಲದೆ ಕೆಱೆಯಂ ಕಟ್ಟುವೆನೆಂಬ, ಕಾಲಿಲ್ಲದೆ ಪರಿವೆನೆಂಬ, ಕೀಲಿಲ್ಲದೆ [4] ಪಡಿದೆಱೆವೆನೆಂಬ, ಛತ್ರಮಿಲ್ಲದೆ ಸಮುದ್ರದೊಳ್ಪೋಪೆನೆಂಬ, ಗೋತ್ರಮಱಿಯದೆ ಕೂಸುಗುಡುವೆನೆಂಬ, ಕಿವಿಯಿಲ್ಲದೆ ಕೇಳ್ವೆನೆಂಬ, ಸವಿಯಿಲ್ಲದುಣ್ಬೆನೆಂಬ, ಕೆಯ್ಯಿಲ್ಲದೆ ಬೇಲಿಯಿಕ್ಕುವನೆಂಬ, [5] ಬಾಗಿಲಿಲ್ಲದೆ ಪೊಗುವೆನೆಂಬ, [6] [ಧನಮಿಲ್ಲದಧಿಕನೆಂಬ, ವಾಹನಮಿಲ್ಲದೇರುವೆನೆಂಬ,] ನಾಲಗೆಯಿಲ್ಲದೆ ನುಡಿವೆನೆಂಬ, ಪಱುಗೋಲಿಲ್ಲದೆ ತೊಱೆಯಂ ಪಾಯ್ವೆನೆಂಬ ಪಚ್ಚಪಸಿಯೆಗನಂ ಪೋಲ್ಕುಂ, ಇಂತು ॥ ೬೭

ವರಚಕ್ರವರ್ತಿಪದವಿಗ
ಮುರುಗೀರ್ವಾಣಾಧಿಪತಿಯ ಸದ್ವಿಭವಕ್ಕಂ [7] ।
ಪರಮಾರ್ಹಂತ್ಯಪದಕ್ಕಂ
ಪರಮಾರ್ಥಂ ಶುದ್ಧದರ್ಶನಂ ಮೊದಲ್ ॥ ೬೮

---

1 ಗತಿದೂರಮುಂ ಸಾರಮುಮಪ್ಪ ಶಾಶ್ವತಸುಖಂ (ಗ)

2 ನಿರಂತರಂ ಸುಖಂಬಡೆವನೆಂಬಾತಂ (ಗ)

3 ಅಂಗಡಿಯಿಲ್ಲದೆ (ಗ)

4 ಪಡಿಯಂ ಕಿಱುವ (ಬ ಪ್ರ.) ಪಡಿಗೇರುವೆ (ಗ)

5 ಕೈಯಿಲ್ಲದೆ ಪಿಡಿವೆನೆಂಬ, ನೇಗಿಲಿಲ್ಲದ ಉಳುವೆನೆಂಬ (ಗ)

6 ಮನವಿಲ್ಲದಱಿವೆನೆಂಬ (ಗ)

7 ಸುರರಾಜಸುಖಾಸ್ಪದಕಂ ನರರೊಳಗಗ್ಗಳದ ಚಕ್ರವರ್ತಿತ್ವಕ್ಕಂ (ಕ. ಬ)

ಆದರ್ಶನವೆಂತಪ್ಪುದೆಂದೊಡೆ ॥ ೬೯

ಅಮರ್ದಷ್ಟಾದಶದೋಷವರ್ಜಿತನಪಂ ಸರ್ವಜ್ಞ ಸಿಂದ್ರಾರ್ಚಿತ
ಕ್ರಮನಂತಾತನೆ ಪೇಳ್ದುದಾಗಮಮಿಳಾಲೋಕೈಕಪೂಜ್ಯಂ ತದಾ ।
ಗಮದೊಂದರ್ಥಮೆ ತತ್ವಮೆಂಬು ನಯದಿಂ ಕೈಕೊಂಡು ನಂಬಿರ್ಪುದು
ತ್ತಮ [1] ಸೌಖ್ಯಾನ್ವಿತಮಪ್ಪ ಸಿದ್ಧಿತಿನುತಶ್ರೀಸ್ಪರ್ಶನಂ ದರ್ಶನಂ ॥ ೭೦

ವಿದಿತಂ ದರ್ಶನಮುಳ್ಳವಂಗೆ ಭವನಜ್ಯೋತಿಷ್ಕರಾವ್ಯಂತರಾ
ಸ್ಪದಮಲ್ಪಾಯುಮನಂಗತಾಪಮಬಲತ್ವಂ ನಿರ್ಧನತ್ವಂ [2] ದುರಾ ।
ಸ್ಪದಭೋಗಾವನಿಜತ್ವಮುಗ್ರನರಕಂ ತಾವಾಗವೆಂದಂದು ಲೋ
ಕದೊಳಾರ್ಬಣ್ಣಿಪರಣ್ಣ ದರ್ಶನದೊಳಾದೈಶ್ವರ್ಯಮಂ ಸ್ಥೈರ್ಯ
ಮಂ ॥ ೭೧

ಘಟಸಂಘಕ್ಕದಟೆಂತುಟಂತುಟೆ ಮುಖಾಂಭೋಜಕ್ಕೆ ಮೂಗೆಂತುಟಂ
ತುಟೆ ಬಿತ್ತಿಂಗೆಲೆಯೆಂತುಟಂತುಟೆ ಮಹಾಭೃತ್ಯಕ್ಕೆ ಕೀಲೆಂತುಟಂ ।
ತುಟೆ ಕೈಗಂಗುಲಿಯೆಂತುಟಂತುಟೆ ಲಸದ್ದೀಪಕ್ಕೆ ಸಂದೆಣ್ಣೆಯೆಂ
ತುಟುತಾನಂತುಟೆ ದರ್ಶನಂ [3] ಸಕಲಧರ್ಮಕ್ಕಂ ಧರಾಚಕ್ರದೊಳ್ ॥ ೭೨

ಪಟುದೇಹಕ್ಕಸುವೆಂತುಟಂತುಟೆ ಕುಜಾನೀಕಕ್ಕೆ ಬೇರೆಂತುಟಂ
ತುಟೆ ಕಣ್ಣಾಲಿಮದೆಂತುಟಂತುಟೆ ತಟಾಕಕ್ಕೇರಿ ತಾನೆಂತುಟಂ ।
ತುಟೆ ಕಾಲಿಂಗಡಿಯೆಂತುಟಂತುಟೆ ಚಿರಾವಾಸಕ್ಕಧಿಷ್ಠಾನಮೆಂ
ತುಟು ತಾನಂತುಟೆ ದರ್ಶನಂ [3] ಸಕಲಧರ್ಮಕ್ಕಂ ಮಹೀಚಕ್ರದೊಳ್ ॥

ಸುದತಿಯರಿಲ್ಲದೋಲಗದ ಲೀಲೆ ಮನೋಹರಮಪ್ಪ ಪುತ್ರರಿ
ಲ್ಲದ ಮನೆವಾಟೆ ಸಾರಜಲಮಿಲ್ಲದ ಬಾವಿ ವಿಶೇಷದುರ್ಗಮಿ ।
ಲ್ಲದ ಮಹಿಪಾಲನುಗ್ರತೆ ಜನೋನ್ನತಿಯಿಲ್ಲದ ನಾಡು ಕೂರ್ಮೆಯಿ
ಲ್ಲದ ನಿಜಕಾಂತೆ ಸತ್ವದಯೆಯಿಲ್ಲದ [4] ಧರ್ಮಮದೊಪ್ಪಲಾರ್ಕು
ಮೇ ॥ ೭೪

---

[1] ಸದ್ರತ್ನಮುಮಪ್ಪ (ಗ) [2] ನಿರಾಸ್ಪದ (ಕ)
[3] ಸಕಲಸೌಖ್ಯಕ್ಕಂ (ಕ) [4] ಸಮ್ಯಕ್ತವಿಲ್ಲದ (ಗ)

ಕಂಪಿಲ್ಲದ ತುಪ್ಪಮುಂ ಪೆಂಪಿಲ್ಲದ ಪ್ರಭುತ್ವಮುಂ ಸ್ನೇಹಮಿಲ್ಲದ ಕ್ರೋಡಮುಂ ಮೋಹಮಿಲ್ಲದ ಬಾೞುಂ ಭಕ್ತಿಯಿಲ್ಲದ ಕೊಂಡಾಟಮುಂ ಶಕ್ತಿಯಿಲ್ಲದ ಸೆಣಸುಂ ಕೋಡಿಲ್ಲದ ಸಿರಿಯುಂ ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ ಕುಲಮಿಲ್ಲದ ಮಹಿಮೆಯುಂ ಬಟ್ಟೆಯಿಲ್ಲದ ಪಯಣಮುಂ ಪಟ್ಟಣಮಿಲ್ಲದ ರಾಜ್ಯಮುಂ ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ ದಯೆಯಿಲ್ಲದ ನೆಗೞ್ತೆಯುಂ ನಯಮಿಲ್ಲದ ಸೇವೆಯುಂ [1] ಭಂಡಮಿಲ್ಲದಂಗಡಿಯುಂ ಗಂಡನಿಲ್ಲದ ಸತಿಯುಂ ಮೊದಲಿಲ್ಲದ ಪರದುಂ ಮದಮಿಲ್ಲದಾನೆಯುಂ ನೀರಿಲ್ಲದೂರುಂ ಕೇರಿಲ್ಲದ ಮನೆಯುಂ ಶ್ರುತಮಿಲ್ಲದ ತಪಮುಂ ಘೃತಮಿಲ್ಲದೂಟಮುಂ ಸಮ್ಯಗ್ದರ್ಶನಮಿಲ್ಲದ ದಾನಮುಂ ತಪಮುಂ ಜಪಮುಂ ಧರ್ಮಮುಮೊಪ್ಪಲಾರ್ಕುಮೆ ? ॥ ೭೫

ಒದವಿದ ಭೂಪರಿಲ್ಲದಿಳ ಭೋಜನಮಿಲ್ಲದ ಬಾಡು [2] ವಸ್ತ್ರಮಿ
ಲ್ಲದ ಬಹುಭೂಷಣಂ ನಯನಮಿಲ್ಲದ ಸೂಳ ವಿಶೇಷಲಾಭ ।
ಮಿಲ್ಲದ ಪರದಬ್ಜಮಿಲ್ಲದ ಕೊಳಂ ಬೆಳಸಿಲ್ಲದ ಧಾತ್ರಿ ರಕ್ಷೆಯಿ
ಲ್ಲದ ನೃಪನಾಳ್ಕೆ ದರ್ಶನದೊಳೊಂದದ ಧರ್ಮಮುಮೊಪ್ಪಲಾರ್ಕುಮೇ ॥ ೭೬

ದುರಿತವಶದಿಂದೆ ತಿರುಗದೆ
ತಿರಿಯದೆ ಸುಖನಿಳಯಮಪ್ಪ ಮುಕ್ತಿಶ್ರೀಯೊಳ್ ।
ನೆರೆದಿರ್ಪೆನೆಂಬ ಭವ್ಯಂ
ಪರಮಾದರದಿಂದೆ ತಾಳ್ವುದು ದರ್ಶನಮಂ ॥ ೭೭

ಆ ದರ್ಶನಸೌಖ್ಯಕ್ಕಷ್ಟಾಂಗಮುಂ ಶರೀರಕ್ಕವಯವಮುಂ ಮರಕ್ಕೆಶಾಖೆಯುಮೆಂತಂತೆ [3] ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಮೆಂದು ॥ ೭೮

---

1 ಸಸಿಯುಂ (ಗ) 2 ಮಾದ್ರ (ಗ) 3 ಸೌಖ್ಯಕ್ಕೆ ತಲೆಯುಂ ಮೂಗುಂ ಬಲದ ತೋಳು ಎಡದತೋಳು ಬಲದಕಾಲು ಎಡದಕಾಲು ಮಿರ್ಪಂತೆ (ಗ).

ಎಸೆವಂಗವೆಂಟಱಿಂ ರಂ
ಜಿಸುವ ಮಹಾನರ್ಘ್ಯಮಪ್ಪ ದರ್ಶನಮಂ ಶಂ ।
ಕಿಸದೆ ತಡೆದಿರದೆ ಕೈಕೊಂ
ಡೆಸಗುಗೆ ತಾಂ ಬಱಿಕಮೈದಣುವ್ರತತತಿಯಂ ॥ ೭೯

ಅವಾವುವೆಂದೊಡೆ ॥ ೮೦

ಕೊಲ್ಲದ ಪುಸಿಯದ ಕಳವಿನಿ
ಸಿಲ್ಲದ ಪರವನಿತೆಯರ್ಗೆ ಪದಪಿಂ ಚಿತ್ತಂ ।
ಸಲ್ಲದ ಪರಿಗ್ರಹಕ್ಕಳ
ಪಿಲ್ಲದ ಸುವ್ರತಮಿವೈದುಮಲ್ಲವೆ ರತ್ನಂ ॥ ೮೧

[ಇಂತೀ ಪದಿನಾಲ್ಕುಮನ
ತ್ಯಂತಂ ದೃಢಹೃದಯನಾಗಿ ತಾಳ್ದಿದರ್ಗಂಗೋ ।
ರಂತೆ ನಿರಂತರಸೌಖ್ಯಂ
ಭ್ರಾಂತಿಲ್ಲದೆ ಕೂಡುಗಲ್ಲಿ ಸಂದೆಯಮುಂಟೇ ॥ ೮೨

ಇನಿತುಮನೋರಂತಿರೆ ನೆ
ಟ್ಟನೆ ತಾಳ್ದಿದ ನರನ ಸುಖಮನೇಪೊಗೞ್ವುದೊ ಕೇ ।
ಳನಿತರೊಳೊಂದಂ ತಾಳ್ದಿದ
ಮನುಜಂಗಂ ಮುಕ್ತಿಲಕ್ಷ್ಮಿ ಗಹನಮೆ ಧರೆಯೊಳ್] ॥ ೮೩

ಎಂಬುದುಂ ಗಣಧರದೇವರ್ಗೆ ಮಗಧಾವನೀವಲ್ಲಭಂ ಭಕ್ತಿಪೂರ್ವಕಂ ವಂದಿಸಿ ನಿಮ್ಮಡಿಯೆನಗೆ ತಿಳಿವಂತಾಗೆ ದರ್ಶನಮುಂ ನಿಶ್ಶಂಕಾದ್ಯಷ್ಟಗುಣಂಗಳುಂ ಪಂಚಾಣುವ್ರತಮುಮೆಂಬ ಪದಿನಾಲ್ಕು ಮಹಾರತ್ನಂಗಳೊಳೊಂದೊಂದಱೊಳ್ ಚರಿಯಿಸಿ ನಿರ್ವೃತಿಯನೆಯ್ದಿದ

ಮಹಾಪುರುಷರ ಕಥೆಗಳಂ ಬೆಸಸಲ್ವೇಳ್ಕುಮೆಂಬುದುಂ ಮೃದುಮಧುರ
ಗಂಭೀರಧ್ವನಿಯಿನಿಂತೆಂದು ಪೇಳಲ್ತಗುಳ್ದರ್[1] ॥ ೧೪

ಮುದದಿಂದೊಂದೊಂದಱೊಳ್ತಾಗುವ ಜಲಚರಸಂದೋಹದಳ್ಳೇಱಿನಿಂ ಪೊ
ಣ್ಮಿದ ತಚ್ಛೀತಾಂಬುವಿಂ ತಜ್ಜಲದಿನೊಗೆದ ಮುಕ್ತಾಳಿಯಿಂದೆಯ್ದೆ ಶುಭ್ರಾಂ |
ಬುದಮಂ ತಾರಾಳಿಯುಂ ಪ್ರೋಲ್ತಸೆವನೆಱಿ ನಭೋಭಾಗದಂತೊಪ್ಪಿ[2] ಸುತ್ತಿ
ರ್ದುದು ಜಂಬೂದ್ವೀಪಮಂ ವಾರಿಧಿ ಕವಯುರಮಂ ಬೀಸಿದಂತಾಗೆ ಚೆಲ್ವಿಂ ॥ ೧೫

ಆ ಜಂಬೂದ್ವೀಪದ ನಟ್ಟನಡುವೆ ॥ ೧೬

ಮುದದಿಂ ಜಿನಾಭಿಷೇಕ
ಕ್ಕಿದು ಮಜ್ಜನಪೀಠಮೆನಿಸಿ ಮಹಿಮೆಯಿನೊಪ್ಪಿ |
ರ್ದುದು ಪೆಂಪಿಂ ತ್ರೈಲೋಕ್ಯಾ
ಭ್ಯುದಯಂ ರಮಣೀಯಮಪ್ಪ ಮಂದರಶೈಲಂ ॥ ೧೭

ಆ ಮೇರುಗಿರಿಯ ದಕ್ಷಿಣಭಾಗದ ಭರತಕ್ಷೇತ್ರದೊಳ್ ಸೌರಾಷ್ಟ್ರವಿಷಯಮೆಂಬುದು ನಾಡಲ್ಲಿ ॥ ೧೮

ಜಿನಭವನಾವಳಿಯಿಂದುಪ
ವನದಿಂ ಪರ್ಗೆಱೆಗಳಿಂ ಸರೋಜಾಕರದಿಂ |
ಧನದನ ಪುರದಂತೊಪ್ಪುವು
ದನವರತಂ ಶೋಭೆಯಿಂ ಕರಂ ಗಿರಿನಗರಂ ॥ ೧೯

---

1 ಇಂತೀ ದರ್ಶನಮಂ ದರ್ಶನಾಂಗಮೆಂಟುಮೈದಣುವ್ರತಮೆಂಬ ಪದಿನಾಲ್ಕು ಮಹಾರತ್ನಂಗಳಂ ತಾಳ್ದಿದ ಮಹಾಪುರುಷರ ಮಹಾಮಹಿಮೆಯಂ ನುಡಿಯುವೀ ವಱೊಳೊಂದನೆ ತಾಳ್ದಿ ಸಿರಂತರ ಸುಖಮನೆಯ್ದಿದವರ ಕಥೆಗಳಂ ಕೇಳಿಮೆಂದಿಂತೆಂದಂ (ಗ)

2 ಸೆದುಗಗನದಂತೊಪ್ಪಿ ಚೆಲ್ವಾಗಿ ಸುತ್ತಿ (ಗ)

ಆ ಪುರಮನಾಳ್ವಂ ವಿಶ್ವಸೇನನೆಂಬ ಮಹಾಮಂಡಳಿಕನಾತನ ರಾಜಶ್ರೇಷ್ಠಿ ಯನ್ವಯಶುದ್ಧನುಂ ಪ್ರಸಿದ್ಧನುಮಪ್ಪ ದಯಾಮಿತ್ರಸೆಟ್ಟಿ ಯೆಂಬ ಪರದನಿರ್ಪನಾತಂ ॥ ೯೦

ಸಿರಿಯೊಳ್ ಕುಬೇರನಂ ತ್ರ
ಸ್ತರಿಯಾಸುವನಹಿಪನೊಡನೆ ಭೋಗಕ್ಕಂ ಮ ।
ಚ್ಚರಿಸುವನುಪಾರಗುಣದೊಳ್
ಪುರುಡಿಸುವಂ ಕಲ್ಪವೃಕ್ಷದೊಳ್ತದ್ವಣಿಜಂ ॥ ೯೧

ಅಂತಳವಿಗಳದ ಸಿರಿಯೊಳಮುಪಮೆಗಳದ ಭೋಗದೊಳಮು ಪರಿಮಿತಜಿನಭಕ್ತಿಯೊಳಂ ನೆಗೞ್ತೆವೆತ್ತು ಸುಖಸಂಕಥಾವಿನೋದದಿಂ ಪಲವುಕಾಲಂ ಪೋಪುದುಮೊಂದುದಿವಸಂ ತನ್ನೊಳಿಂತೆಂದಂ :— ॥೯೨

ಪುರುಷಂ ಧನಮನಗುಂಟಿಂ
ದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾ ।
ರ್ಜಿಪುದೇಕೆನೆ [1] ವಿತ್ತಂ ತಾಂ
ದೊರೆಕೊಳೆ ಕೇಳಿಹಪರಂಗಳೆರಡುಂ ಸಾಧ್ಯಂ ॥ ೯೩

ಎಂದು ಪರದುವೋಪೆನೆಂಬ ಬಗೆಯಂ ತಂದು [2] ಯಥೋಚಿ ತಮಪ್ಪ ಭಂಡಮಂ ಕೊಂಡು ಶುಭದಿನದೊಳ್ ಪೊಱವೀಡಂ ಬಿಟ್ಟು ತನ್ನನಾಶ್ರಯಿಸಿಬರ್ಪವರ್ ಬರ್ಪನ್ನೆವರಮಿರ್ಪನ್ನೆಗಂ, ೯೪

ಕೊರಲ ಪೊಸಜನ್ನಿವರಮೊ
ಪ್ಪಿರೆ ನಿಡುಬೊಟ್ಟೆಸೆಯೆ ದರ್ಭೆ ಕರಮತಿಶಯದಿಂ ।
ಬೆರಳೊಳ್ ರಂಜಿಸೆ ಕಾಶಾಂ
ಬರಮೆಸೆದಿರೆ [3] ಬಂದು ನಿಂದು ಭೂಸುರನೊರ್ವಂ ॥ ೯೫

ವೇದರುಕ್ಕಂ ಪೇೞ್ದಕ್ಷತೆಯನೀವುದುಂ ದಯಾಮಿತ್ರಸೆಟ್ಟಿ ನೋಡಿ ನಿಮ್ಮ ಪೆಸರೇನೆಂದೆತ್ತಣಿಂ [4] ಬಂದಪ್ಪಿರಿನ್ನೆಲ್ಲಿಗೆ ಪೋದಪ್ಪಿರಿಲ್ಲಿಗೇಂ ಕಾರಣಂ ಬಂದಿರೆಂದು ಬೆಸಗೊಳ್ವುದುಂ ಪಾರ್ವನಿಂತೆಂದಂ ೯೬

---

[1] ದ್ರವ್ಯಮನೋಸರಿಸುವುದೆಂತೆನೆ (ಗ) [2] ಉತ್ತರಾಪಥಕ್ಕೆ ಪೋಪುದ್ಯೋಗದಿಂ ಯಥೋ(ಗ) [3] ಶೋಭಾಕರಮಾಗಿರೆ. (ಬ ಕ.) [4] ಬಂದಿರಪ್ಪಿರಿನ್ನೆಲ್ಲಿಗೆ(ಬ)

ವಸುಭೂತಿಯೆಂಬುದೆನ್ನ ಯ
ಪೆಸರುನ್ನತಿವೆತ್ತ ತೆಂಕನಾಡಿಂ ಬಂದೆಂ ।
ವಸುಧೆಗೆಸೆದಿರ್ದ ಗಂಗೆಯ
ನಸಹಾಯನೆಯರ್ತಿವೆರಸು ಮೀಯಲ್ಕೆಂದಾಂ ॥ ೯೭

ಎಂದು ಮುಂದಡವಿಯುಪ್ಪುದಱಿಂ [1] ಕ್ರೂರಮೃಗಂಗಳಿಂದಾನುಂ ವನಚರರಿಂದಾನುಂ ಪ್ರಾಣಭಯಮಕ್ಕುಮೆಂದಂಜಿ ನೆರವಂ ಪೊೞಲಿನೊಳಱಸುತ್ತುಮಿರ್ದು ನಿಮ್ಮ ಪೋಗಂ ಪುರಜನಂ ಪೇೞೆ ಕೇಳ್ದು ನಿಮ್ಮ [ನೆರವನಾಶ್ರಯಿಸಿ ಬಂದೆನೆಂಬುದುಂ ಸೆಟ್ಟಿ ಕರಮೊಳ್ಳಿತ್ತು] ಬನ್ನಿಮೆನೆ ವಸುಭೂತಿ, ೯೮

ಕರಮೊಸೆದು ರಾಗದಿಂ ಪೆ
ರ್ಚಿರೆ ಸೆಟ್ಟಿ ಮನೋನುರಾಗದಿಂದೊಡನೆಯವರ ।
ಬರೆ ನಯದಿಂ ಪಿರಿದುಬಲಂ
ಬೆರಸು ಮಹೋತ್ಸಾಹಚಿತ್ತದಿಂ ಮಱುದಿವಸಂ ॥ ೯೯

[2] ಮುವ್ವತ್ತಿರ್ವರ್ಪೆಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು, ೧೦೦

[ಸಂತತಂ ಮುನಿಸಂಕುಳಕ್ಕೆಱೆದನ್ನಮಂ ಜಿನಪೂಜೆಗೋ
ರಂತೆ ಬೇೞ್ಪ ಸಮಸ್ತವಸ್ತುವ ಸಾರಿಸಾರಿಗೆ ದಾನಮಂ ।
ಸಂತಸಂ ಮಿಗೆ ನಿಮ್ಮನಾಶ್ರಯಿಸಿರ್ಪ ಭವ್ಯಜನಕ್ಕೆ ನಾ
ನೆಂತುಮಾಡುವೆನೆನ್ನ ಬರ್ಪಿನಮಂತೆ ಮಾಡಿ ನಿರಂತರಂ ॥ ] ೧೦೧

ಎಂದು ಕೈಮುಗಿದು ಬೇಡಿಕೊಂಡು ಭರದಿಂದೊಪ್ಪೈಸಿ ಪೊಱಮಟ್ಟು ಕಿಱಿದಂತರಮಂ ಬಂದು ಬಂಧುಜನರುಮಂ ತನಯರುಮಂ ರಮಣೀಯಮಪ್ಪ ಬಹಿರುದ್ಯಾನವನದೊಳ್ ನಿಂದು ಮಗುೞ್ವೇೞ್ದು

1 ದೇನಾನುಂ ಕ್ರೂರಮೃಗಗಳಿಂ ವನಚರರಿಂ (ಬ)

2 ಮುವ್ವತ್ತಿರ್ವರ್ಪೆಂಡಿರ್ಗಂ ಬಂಧುಜನಗಳ್ಗಂ ಜ್ಯೇಷ್ಠಪುತ್ರರ್ಗಂ ಪೆಱಗಣ ಧರ್ಮಕಾರ್ಯಮಂ ಕೈಮುಗಿದೊಪ್ಪೈಸಿ ಪಯಣಂಬೋಗುತ್ತುಂ (ಗ)

ಪಯಣಂಬೋಗುತ್ತುಂ ತನಗೆ [ದಿವಸಕ್ಕೆ] ಮೂಱುಗಳಿಗೆವರಂ ಧರ್ಮಶ್ರವಣಮಂ ಕೇಳ್ದಲ್ಲದುಣ್ಣೆನೆಂಬ ವ್ರತಮುಂಟಪ್ಪುದಱಿಂ ಬಿಟ್ಟ ಬೀಡುಗಳೊಳ್ ಸಕಲ ಶ್ರಾವಕರ್ಗೆ ಧರ್ಮಮಂ ಪೇೞ್ವ ದಯಾಮಿತ್ರ ಸೆಟ್ಟಿಯು ಧರ್ಮಶ್ರವಣಕ್ಕೆ ವಸುಭೂತಿ ಕಳಕಳಿಸಿ ನಕ್ಕು ತನ್ನೊಳಿಂತೆಂದಂ॥೧೦೨

ಅಕಟಕಟ ವೈಶ್ಯಜಂ ಭಾ
ವಕನಲ್ಲಂ ಲಜ್ಜೆಗೆಟ್ಟ ಸವಣರ ಮಾತಂ ।
ನಿಕರಕ್ಕೆ ನಂಬಿ ಠಕ್ಕಿಂ
ಗೆ ಕರಂ ಮತಿಗೆಟ್ಟು ಗತಿಯನಱಿಯದೆ ಕೆಟ್ಟಂ ॥ ೧೦೩

ವಸುಮತಿಯೊಳ್ ಪಲರುಂ ಪೂ
ಜಿಸುವೆಸಗುವ ದೈವಮಂ ಮಹಾಧರ್ಮಮುಮಂ ।
ಬಿಸುಟಹಹ ನೋಡ ಕೋಣೆಯು
ಕುಸುಕುಱು [1] ಧರ್ಮಮನದೆಂತು ನಂಬಿದನೀತಂ ॥ ೧೦೪

ಕಾಯಕ್ಲೇಶಂಗಳನಿನಿ
ಸಾಯಾಸಂಬಡದೆ ಪೆಱರ ಮನೆಯೊಳ್ಳುಣಿಸಂ ।
ಮಾಯಾವಿತನದಿನುಣ್ಬ ರ
ದಾಯುಮನೀಪರದನಱಿಯದಕ್ಕಟ ಕೆಟ್ಟಂ ॥ ೧೦೫

ತಿರಿದಾಕೊಳಂ ನೀರೊಳ್
ಗರಗರನಪ್ಪಂತು ಕರ್ಚಿ ಮೇಣುಂಡಪರೋ ।
ಪರಿಯೊಳ್ ಮೇಣ್ಕೊಂಡಪರೋ
ಮರುಳೀತಂ ಶ್ರವಣರಾವ [2] ತಪಮಂ ಕಂಡರ್ ॥ ೧೦೬

ಜಗದಧಿವಲ್ಲಭನಂ ಲ
ಡ್ಡುಗೆಯಿಂ ಪಲತೆಱದ ಪುಷ್ಪದಿಂ ನಾನಾಪ ।

---

1 ಕುಸುಕುರು (ಬ) ಕುಸುಕಲ (ಗ)   2 ಮಾತಂ (ಬ)

ತ್ರಗಳಂ ಪೂಜಿಸಿ ನಿಚ್ಚಂ
ಸೊಗಯಿಸಿ ಮೆಯ್ಯಿಕ್ಕಿ ನಾಡೆ ಬಡವಾದಪರೋ ॥ ೧೦೭

[ಕುಲಮಂ ಮಾಸಿಸಿ ವಿವಾಹಮಂ ತೊಱೆದು ಕಂಡರ್ಪೋಸೆ ಮೆಯ್ಯೊಳ್ ಮಹಾ
ಮಲಮಂ ತಾಳ್ದಿದ ಕಷ್ಟರಂ ಸವಣರಂ ಕಂಗೆಟ್ಟರಂ ಕಂಡು ಸಂ ।
ಚಲಚಿತ್ತಂ ಕುಲದೈವಮೆಂದು ಪದಪಿಂ ಕೊಂಡಾಡುವಿಂತಪ್ಪ ಗಾ
ವಿಲನಂ ಗಾಂಪನನೆಗ್ಗನಂ ಜಡನನಾಂ ಕಾಣೆಂ ಮಹೀಚಕ್ರದೊಳ್ ॥ ]೧೦೮

ಎಂದು ನಾನಾವಿಧದಿಂ ದೂಷಿಸಿ ಮತ್ತಂ ಸೈರಿಸಲಾಱದೆ ಈತನ ಧನಮುಂ ಬುದ್ಧಿಯುಂ ವ್ಯಥೆಯಾಗದಂತೆನ್ನ ಬಲ್ಲ ಮಾರ್ಗದಿಂ ತಿಳಿಪಿ ಬಳಿಕ್ಕೀಧರ್ಮಮಂ ಪತ್ತುಪಿಡಿಸಿ ಮದೀಯಧರ್ಮದೊಳ್ ಪತ್ತಿಸುವೆನೆಂಬ ಬಗೆಯುಂ ತಂದು ಸೆಟ್ಟಿಗಿಂತೆಂದಂ ॥ ೧೦೯

ವರವಸ್ತುವನಱಿವೆಡೆಗಂ
ಪರದರ್ಕಡುಜಾಣರೆಂದು ಕರಮಾದರದಿಂ ।
ನರನಾಥಪೂಜಿಸುವ
ರ್ದರೆಪೊಗೞ್ವುದು ವಸ್ತುಪುರುಷರೆಂದುಱೆ ನಿಮ್ಮಂ ॥ ೧೧೦

ಎಲ್ಲೆಲ್ಲ ವಸ್ತುಗಳುಮಂ
ಬಲ್ಲಿರ್ನಿಮ್ಮನ್ನರಿಲ್ಲ ಬುದ್ಧಿಗೆ ನೀವುಂ ।
ನಿರ್ಲಜ್ಜರಪ್ಪ ಸವಣರ
ಸೊಲ್ಲಿಂಗೊಳಗಾದುದಕ್ಕೆ ನಾಂ ಬೆಱಗಾದೆಂ ॥ ೧೧೧

ಮಾಯುಮನೆ ಬೀಸಿ ಪೆಱರನು
ಪಾಯದೆ ತಕ್ಕಿಕ್ಕಿ ದೇವಕಾರ್ಯದೊಳನಿಸುಂ ।
ನೋಯದೆ ಸುಖಿಯಿಪ ಸವಣರು
ಪಾಯುಮನಿಂ ನಿನ್ನೊಳಣ್ಣ ಭಾವಿಸಿ ನೋಡಾ ॥ ೧೧೨

ಮಲವಂ ಧರಿಯಿಸಿ ನಾಣಂ
ತೊಲಗಿಸಿ ನಿರ್ಗ್ರಂಥಮಿರ್ದ ಸೊಂಬಿಂ ಪಲ್ಲಂ ।
ಸುಲಿಯದೆ ಮೀಯದೆ ಮಿಳ್ಕದೆ [1]
ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ ॥ ೧೧೩

ಮತ್ತಂ [ಭಾವಿಸುವೊಡ] ವರ ಮಾಟಮೆಲ್ಲಂ ಕೂಟ'ಕಾರಣಮ
ಲ್ಲದೆ ಗತಿಕಾರಣಮಲ್ಲದು; ಗತಿವಡೆವೆನೆಂಬುದು ಕಾಯಕ್ಲೇಶಂಬೇ
ಳ್ಪುದು; ಆ ಕಾಯಕ್ಲೇಶಂ ನಿಮ್ಮ ನಚ್ಚಿನ ಸವಣರ ಮೆಯ್ಯೊಳ್ಳನಿತು
ಮಿಲ್ಲ; ನೀನವರುಮನವರ ದೈವಮುಮಂ ಕೊಂಡಾಡುವ ಮರುಳಾಟ
ಕ್ಕೆನಗೆ ಪಿರಿದುಂ ವಿಸ್ಮಯಮಾದಪುದೆಂಬುದುಂ ದಯಾಮಿತ್ರಸೆಟ್ಟಿ ಮುಗು
ಳ್ನಗೆನಕ್ಕು ತನ್ನೊಳಿಂತೆಂದಂ, ೧೧೪

ಬೇಡಂ ಮಾಣಿಕಮೊಂದಂ
ಕಾಡೊಳ್ ಕಂಡೊರ್ಮೆ ಮುಳ್ದ ಪಗಿನಲ್ಲಂದೀ ।
ಡಾಡಿದನೆಂಬೀ ನಾಣ್ಣುಡಿ
ನಾಡೆಯುಮೆಸೆದಪುದು ದುರಿತವಶದಿಂದಿವನೊಳ್ ॥ ೧೧೫

ಬೆಳಗಿನೊಳಂ ಕಾಣದು ನಿಶಿ
ಯೊಳ್ ಕಾಣ್ಬುದು ಪೆಗ್ಗಣಕ್ಕೆ ನಿರ್ಗುಣರ್ಗಂತು ।
ಜ್ಜ್ವಳಧರ್ಮಮನಱಿಯದೆಯು
ಮ್ಮಳಮಂ [2] ಪೊರ್ದುವುದು ಜಡರ್ಗೆ ಸಹಜಮೆನಿಕ್ಕುಂ ॥ ೧೧೬

ಅಱಿಯದು ಕಪ್ಪೆ ಸಾಗರಮನಂಬುಧಿಗಂತದು ಕುಂದೆ ಗೂಗೆ ಕಂ
ಡಱಿಯದು ಚಂಡರೋಚಿಯನಿನಂಗದು ಭಂಗಮೆ ನೋಡೆ ಕಾಗೆ ಕಂ।
ಡಱಿಯದು ಚಂದ್ರನಂ ಸಸಿಗೆ ಹೀನಮೆ ಸಜ್ಜನರೊಳ್ಪನಿಂ
ತಱಿಯದೆ ದೂರ್ತನಿಂ ಪೞಿಯೆ ಕಷ್ಟತೆ ಸಾರ್ಗುಮೆ ದಿವ್ಯರಪ್ಪರಂ ॥

---

1 ನೊಕ್ಕಡೆ (ಬ. ಕ.)

2 ರುಮ್ಮಳಮಂ (ಬ. ಕ.) ಅಱಿಯದೆಮುಳಮಂ (ಗ)

ಮೆದ್ದು ಕುಣಿಕೆಯುಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣಮಾಗಿ ತೋರ್ಪಂತೆ ಕರ್ಮದ ತೀವ್ರತೆಯಿಂದೀಪಾರ್ವಂಗೆ ಲೌಕಿಕಧರ್ಮಮೆ ಧರ್ಮಮಾಗಿ ತೋರ್ಪುದದುಕಾರಣದಿಂ ಸದ್ಧರ್ಮಮನೊರ್ಮೆಯೆ ಪೇೞ್ದನಪ್ಪೊಡೆ ಪಿತ್ತಜ್ವರಮುಳ್ಳವಂಗೆ ಕುದಿವ ಪಾಲನೆಱೆವಂತಾನುಂ, ಶಿಶುವಿನ ಕೆಯ್ಯೊಳ್ ಮಸೆದ ಬಾಳಂ ಕೊಟ್ಟಂತಾನುಂ, ಕಱಿದು ಕೊರಲೊಳ್ ಪೂಮಾಲೆಯಿಕ್ಕಿದಂತಾನುಮಕ್ಕುಮದಱಿಂದುಪಾಯದೊಳ್ ತಿಳಿಪಲ್ವೇೞ್ಕುಮೆಂದು ದಯಾಮಿತ್ರಸೆಟ್ಟಿ ಪತ್ತೆಂಟುದಿವಸಂ ಪೋಗಲ್ ಮತ್ತೊಂದುದಿವಸಂ , ೧೧೮

ಬರಿಸಿ ವಸುಭೂತಿಯುಂ ವಿ
ಷ್ಟರಮಂ ಕುಡವೇೞ್ದು ಪಿರಿದು ಮನ್ನಣೆಯಿಂದಾ ।
ದರದಿಂ ವೀಳಯಮಂ ಕ
ರ್ಪೂರಸಹಿತಂ ಕೊಟ್ಟು ವೈಶ್ಯಸುತನಿಂತೆಂದಂ ॥ ೧೧೯

ಭಟ್ಟರೆ ಕೇಳಿಂ ನಿಮ್ಮಂ
ಬಿಟ್ಟು ಕೆಲರ್ಕುಲಜರೊಳರೆ ನಂಬಿದೆಸೀಗಳ್ ।
ನೆಟ್ಟನೆ ನಿಮ್ಮಿಂ ಸುಗತಿಯು
ಬಟ್ಟೆಯು ತೆಱನಱಿಯಲಾಯ್ತು ಪುಣ್ಯೋದಯದಿಂ ॥ ೧೨೦

ಎಂಬುದುಂ ವಸುಭೂತಿ ಮಹಾಭೂತಿವೆತ್ತರಂತೆ ಮನದೊಳ್ ಪೆರ್ಚೆ ದಯಾಮಿತ್ರಸೆಟ್ಟಿ ಮೆಲ್ಲನಿಂತೆಂದಂ, ೧೨೧

ಎಮ್ಮನ್ವಯದಿಂ ಬಂದುದು
ತಾಮ್ಮಿಗಿಲಪ್ಪೊಂದು ನೋಂಪಿ [1] ಯಾನೋಂಪಿಯುಮಂ ।
ನಾಮ್ಮಱೆದೆಂ ಸಂತತಮುಂ
ತೆಮ್ಮಯ್ಯಂ ನೋಂಪನಂತು ನೋನುತುಮಿರ್ಪೆಂ ॥ ೧೨೨

[ ಅದೆಂತೆಂದೊಡೆ ಮನೋಜಮದಹರನುಂ ಸುರಾಸುರಮಕುಟತಟಘಟಿತಚರಣಾರವಿಂದನುಮಪ್ಪರ್ಹತ್ಪರಮೇಶ್ವರನೆಮ್ಮನ್ವಯದಿಂ

1 ಯದನಿಂನಾಂಮಱೆ ಮದೆಸಂತತಮುಂತೆಂಮಯ್ಯಂನೋಂಪ (ಗ)

ಬಂದ ಕುಲದೈವಮುಮಿಷ್ಟದೈವಮುಮಪ್ಪುದಱಿಂ ಜಿನೇಶ್ವರಸಾಕ್ಷಿಯಾಗಿ ಮಹರ್ಷಿಯರ್ಕಳಿಂ ನೋನಿಸಿ ಬೇಳ್ಪುದಂ ಕುಡುವೆನೀಗಳ್] ಆ ನೋಂಪಿಯುಂ ನೋಂಪ ಕಾಲಮಾಸನ್ನ [1] ಮಾಯ್ತೀಯವಸರದೊಳ್ ಋಷಿಯರಾರುಮಿಲ್ಲ ಇಲ್ಲದೊಡಮೇನಾಯ್ತು, ೧೩

ಪಾಲೆಮ್ಮರ್ದಿಂಬಂತಿರೆ
ಭೂಲೋಕಸ್ತುತ್ಯರಪ್ಪನಿಮ್ಮನ್ನೋರ್ವರ್ [2] ।
ಸೋಲದೆ ಜಗದೊಳ್ ನೀವಿರೆ
ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ ॥ ೧೪

[ನಿತ್ತರಿಸದೆ ಬಲ್ಗೞಿಯೊಳ್
ಮತ್ತೆನಿಸದೆ ಬಿದಿರ್ಗಣ್ಣ ಸಹವಾಸಿಯೆ ಬಂ ।
ದೆತ್ತುವುದುಳಿದವರಱಿಸಿಯು
ಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ ॥ ೧೫

ಅದಱಿಂದೆಮಗೆ ರಿಸಿಯರಲ್ಲದೆ ಪೆಱರಾಗದೆಂಬ ನಿಯಮಮಿಲ್ಲ; ಆದಂ ಬಗೆವೊಡವರಿಂ ನೀವೆಮಗೆ ಸಹಸ್ರಮಡಿಯಪ್ಪುದಱಿಂ] ನಿಮಗೆ ಮಾಡಿದ [3] ದಾನಮುಂ ಪಾಲುಕ್ಕಿಮ್ಮಡಿಸುವಂತಿಮ್ಮಡಿಯಕ್ಕುಮದುಕಾರಣದಿನಿಲ್ಲಿ ನೋಂಪಿಯುಂ ನೋಂತು ನೋಂಪಿಯ ತದನಂತರಂ ಬೇಳ್ಪನಿತು ದಕ್ಷಿಣೆಯುಂ ಬೇಡಿಕೊಳ್ಳೆಮೆನೆ ಸೆಟ್ಟಿಯ ಮಾತಿಂಗೆ ವಸುಭೂತಿ ಮನದೊಳ್ ಗುಡಿಗಟ್ಟಿ, ೧೬

ಬಿತ್ತರದಿಂ ಕುರುಡಂ ಕ
ಣ್ಬೆತ್ತಂತಿರೆ ರಾಗಮೊದವೆ ಬೆಳೆವೆಣ್ ಪೆಣ್ಣಂ ।
ಪೆತ್ತಂತಿರೆ ಪಾರ್ವಂ ಮ
ಣ್ಬೆತ್ತಂತೆ ಪಿರಿದು ಸಂತಸಂ ಮಿಗೆ ಮನದೊಳ್ ॥ ೧೭

---

1 ಮಾಯ್ತುಮುನ್ನಋಷಿಯರಿಂ ನೋನಿಸಿ ತದನಂತರಂ ಬೇಳ್ಪನಿತು ದಕ್ಷಿಣೆಯುಂ ಕುಡುವೆವು (ಗ) 2 ನೀವೀ ನೋಂಪಿ ಸಲ್ವರ ನಿಮ್ಮಿಂ ಪೇಳ್ವೊಡೆ ಮೇಲೆನಿಸು (ಗ) 3 ದಾನಮುಪ್ಪೋಕಿಂಮ್ಮಡಿಸಿಸು (ಕ) ದಾನಮುಪೊಕ್ಕಿಮಡಿಸು (ಬ)

ಮರ್ದನಗಳಲ್ತ್ರೋೞದಂ ನಿದಿಗಂಡಂತೆ ಪೆರ್ಚಿ ಕರಮಶುಚಿಗಳಪ್ಪ ಸವರ್ಣರ್ಗೆ ಕುಡುವಾತನಮ್ಮನ್ನರಪ್ಪ ಸದ್ಬ್ರಾಹ್ಮಣರ್ಗೆ ಕುಡುವನೆಂಬುದಾವ ಚೋದ್ಯಂ, ೧೨೮

ಒದವಿದ ಪೊನ್ನಪ್ಪೊಡೆ ಜೋ
ಳದ ರಾಶಿಯೊಳಿರ್ಪುದಿಲ್ಲಿ ತಾನೇನಂ ಬೇ ।
ಡಿದೊಡಂ ಬೇಡಿದುದಂ ಕುಡು
ವುದು ಪುಸಿಯೇ ವೈಶ್ಯನಂದನಂ ಪುಸಿದಪನೇ ॥ ೧೨೯

ಕರವೊಳ್ಳಿತಾಯುಷ್ಯ ಪರದನ
ನರವಿಂ [1] ಮಟ್ಟಿತ್ತ್ರಲತ್ತ ಚಪ್ಪಟೆಯೆಂಬಂ ।
ತಿರಲಾಂ ಬೇೞ್ಪನಿತರ್ಥಂ
ದೊರೆಕೊಂಡಪ್ರದಾನ ಧನ್ಯನೆಂ ಭೂತಳದೊಳ್ ॥ ೧೩೦

ನೆರಪಲ್ಬಾರದ ವಿತ್ತಂ
ದೊರೆಕೊಂಡುದು ನೆಲೆಗೆ ಪೋಗಿ ಮಕ್ಕಳೊಳಂ ಪೆಂ ।
ಡಿರೊಳಮೊಡಗೂಡಿ ಸುಖದಿಂ
ಚರಿಯಿಸುವೆಂ ಮೆಚ್ಚಿದಂದದಿಂ ಭೋಗಿಸುವೆಂ ॥ ೧೩೧

ಎಂದು ಮನದೊಳ್ ಪಾಲುಡಿದು [2] ನೋಂಪಿಯುಂ ನೋಂಪ ಕ್ರಮಮಂ ಪೇೞೆಮೆನೆ ವೈಶ್ಯವಂಶಲಲಾಮನಿಂತೆಂದನಾ ನೋಂಪಿ ತೀರ್ವನ್ನಂ ಗ್ರಾಸದೊಳ್ ಕಳವೆಯ ಕೂೞಂ [3] ತಿಳಿದುಪ್ಪಮಂ [4] ಪೆಱರೊರ್ವರ್ಬಡಿಸೆ ಕಯ್ಯೊಳ್ ಮೋನದಿಂದುಂಡು, ೧೩೨

---

1 ಮಟ್ಟಿತ್ತಲತ್ತಚಪ್ಪಟೆ (ಕ) ಸಂವೆತ್ತಲ್ಕೆಟ್ಟಲೆತ್ತಚಪ್ಪಟೆ (ಬ)
2 ಸೆಟ್ಟಿಯು ಮೊಗವಂ ನೋಡಿ ನೋಂಪಿ (ಗ)
3 ತಿಗುಣಿ, ಕಳೆದ ಪೊಂಚೆಸಱ ತೊವೆಯುಂ (ಗ)
4 ಪಲವು ಭಕ್ಷ್ಯಂಗಳ್ವೆರಸು (ಗ)

ಮೆಱುದಿನವೊಪ್ಪೊತ್ತಪ್ಪಿನ
[ಮೆಱುಕೆಯ ನೀರೂಟತಂಬುಲಂಗಳ ಮಾತಂ।
ತೊಱೆದು ಮತಿಮಱೆದು ಮನೆಯೊಳ್
ಪೊಱಮಡದೋದುತ್ತುಮಿರ್ಪುದಿರುಳುಂ ಪಗಲುಂ ॥ ೧೩೩

ಸಲೆಮೆಱೆಯೊಳ್ಪಡುವುದು ಮೈ
ಮಲವೇಱಿತ್ತೆಂದು ಮಿಾಯಲಾಗದು ಪಲ್ಲಂ।
ಸುಲಿಯದೆ ವನಿತೆಯುರಂ ಪಂ
ಬಲಿಸದೆ ತಲ್ಲಣಿಸದಿರ್ಪುದತ್ಯುತ್ಸವದಿಂ ॥ ] ೧೩೪

ಮತ್ತಂ [ನೋಂಪಿಯ] ಪ್ರಾರಂಭದೊಳಂ ನೆಱವಿಯೊಳಂ [ಮಂದರದಂತೆ ಧೈರ್ಯಂಬೆರಸು, ಲಾಭಂಬೆತ್ತ ಪರದನಂತುತ್ಸಾಹಂಬೆರಸು, ಪಂದೆಯುಂತು ನೋವಿಂಗಳ್ಕದೆ, ತಣಿಯುಂಡನಂತೆ ಸಾಲ್ಗುಮೆನ್ನದೆ ದೃಢಚಿತ್ತದಿಂದಿರ್ದು] ತಲೆಯ ರೋಮಂಗಳೆಲ್ಲಮಂ [2] ಪಱಿಯಿಸಿ ರಾಗದಿನೆಮಗೀವುದಿತ್ತು ಮನದೊಳುಮ್ಮಳಿಸದೊಂದೆಡೆಯೊಳ್ ಮುನ್ನಿನ ವಿನೋದಂಗಳಂ ಮಱೆದಪ್ಪುದಂ ನೆನೆಯದೆ ಸ್ವಾಧ್ಯಾಯಪರನಾಗಿ ಬೀಡಿನೊಳಾದಿನಿತಕ್ಕಂ ವಿಸ್ಮಯಕ್ಕಂ ವಸ್ತ್ರಕ್ಕಮುಪೇಕ್ಷೆಯಿಂದೆಳಸದಿಂತೆರಡುತಿಂಗಳ್ವರಂ ಎಮ್ಮ ಪೇಟ್ಟೋಜೆಯಿಂ [ಕ್ರಮಂದಪ್ಪದೆ] ನೋಂಪುದೆಂದುಪೇೞ್ವುದುಂ, ೧೩೫

ಒಳಗಱಿಯದನಿತುಮಂ ಸಂ
ಚಲಚಿತ್ತಂ ಮಾಱ್ವನೆಂದು ಪೂಣ್ದಂ ತನ್ನೊಂ।
ದಳವಱಿಯದೆ ಕಡುಲೋಭದಿ
ನೆಳಗಱು ಭಯಮಱಿಯದೆಂಬವೊಲ್ತದ್ವಿಪ್ರಂ ॥ ೧೩೬

---

1 ನೀರ್ತಂಬುಲಮೂಟಮುಂಬಿನಂ ಬಯಸದೂರೊಳಗಣ ವಿನೋದಮಂ ವಿಳಾಸಮಂ ಪೊಡಿಸುಮಂ ಸೀರೆಯುಮಂ ಪಂಬಲಿಸದಿರ್ಪುದು (ಗ)

2 ಪಱಿದೆಮಗೀವುದೀಮಾರ್ಗದಿಂದೆಮ್ಮ ಪೇಳ್ದಾಜೆ (ಗ)

ಆಱಯ್ದು ನೋಡಿ ನಗುವವ
ರಾರೆನ್ನಂ ದೂರದೇಶಮಾಂ ನೋಂಪೆನಿದಂ ।
ಸ್ವೈರಣೆಯಿಂ ಚೆಂಬೊಂಗಳ
ನೋರಂತಿರೆ ಬೇಡಿಕೊಳ್ವೆನೆನ್ನಾರ್ಪನಿತಂ । ೧೩೭

ಉಸಿರದೆ ಗಳಗೆವರಂ ಸ್ವೈ
ರಿಸಿ ತಲೆಯಂ ಪಱಿಸಿಕೊಂಡು ಚೆಂಬೊನ್ನಂ ಸಂ ।
ತಸದಿಂ ಕೈಕೊಳ್ವಂ ಭಾ
ವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ ॥ ೧೩೮

ಉಂಬುದು ಕಳವೆಯ ಕೂೞ್ಗಡ
ತಂಬುಲಮಿರ್ಪೊತ್ತಿನುಣಿಸು ಮಾಹಂ ಕೇಳ ।
ಲ್ಲೆಂಬಿನಿತೆ ಗಡಂ ತಿಂಗಳು
ಮೆಂಬುದು ತಾಂ ದೂರಮಾಯ್ತು ಪೇೞೀಂಗಹನಂ ॥ ೧೩೯

ಎಂದು ತನ್ನೊಳ್ ರಾಗಿಸುತ್ತಿರೆ ವಣಿಗ್ವಂಶಲಲಾಮಂ [1] ಬೀಡಿನ ಪ್ಪಯಣಂಮಾಡಿ ಮಱುದಿವಸಂ ಸಮಸ್ತದುರಿತವಿಳಯನಪ್ಪ ಜಿನಸ್ವಾಮಿಗೆ ತೂರ್ಯರವಮೆಸೆಯೆ ಮಹಾಭಿಷೇಕಪೂಜೆಯಂ ಮಾಡಿಸಿ ವಸುಭೂತಿಯಂ ಬಡಗಮುಖನಾಗಿ ಕುಳ್ಳಿರಿಸಿ, ೧೩೦

ತಲೆಯಂ ಬಲುದಡಿಗರ್ಕಳ್
ನಿಲಲಾಱದೆ ಸುಂಟದಿಂದ ಕೋಡಗದಂತು ।
ಮ್ಮಳಿಸಿ ಕಳವಳಿಸಿ ನೋವಿಂ
ತಲೆಯಂ ತಿರಿಪುತ್ತುಮಂಜಿ ಕೆಟ್ಟೆನೆನುತ್ತುಂ ॥ ೧೪೧

ನಡುಗೆ ಶರೀರಂ ಪಲ್ಲಂ
ಗಿಡಿಗಿಱಿದೆರ್ದೆ ಗೂಡುವಾಯೆ ಪಂದೆಯುಮೇಲ್ಪಾ ।

1 ಬಿಡಂಪಯಣಂಮಾಡಿ (ಬ)

ವಡದ೯ಂತಿರೆ ದೇಹಂ ಮರ
ವಡೆ ಕಣ್ಣೀರ್ಸುರಿಯೆ ತಳದಿನದನೊತ್ತುತ್ತುಂ ॥ ೧೪೨
ಬೀದಾಡುಗರ್ಚಿ ನೋವಿಂ
ದಡಿಗಡಿಗಹಹಾ ಯೆನುತ್ತುಮಡಗಯ್ಯಿಂದಂ ।
ತಡವರಿಸುತ್ತುಂ ಸಾಸವೆ
ಗುಡಿದಂತಿರೆ ಕರಮೆ ಮಱುಗಿ ತಳವೆಳಗಾದಂ ॥ ೧೪೩

ಮತ್ತಂ ಕುದುರೆಯೇರ್ದ ಕುಂಬಂಬನಂತೆ ನಡುಗುತ್ತುಂ, ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತುಂ, ಬಿನ್ನಪಂಗೆಯ್ವ ವೊಕ್ಕಲಿಗನಂತೆ ಬಿಕ್ಕುತ್ತುಂ, ಸಾಕ್ಷಿಯಿಲ್ಲದೆ ಸಾಲಂಗೊಟ್ಟೊ [ಕ್ಕಲಿಗ] ನಂತೆ ಸುಯ್ಯುತ್ತುಂ, [1] ಸಿಕ್ಕಿದ ಕಳ್ಳನಂತೆ ಪಲವಂ ನೆನೆಯುತ್ತುಂ, ಗ್ರಹಪೀಡಿತನಂತೆ ತೂನೆಯುತ್ತುಂ, ಪೇನುಳ್ಳನಂತೆ ತಲೆಯಂ ತುಱಿಸುತ್ತುಂ [2] ಕಱುಸತ್ತಾವಿನಂತೆ ಮಱುಗುತ್ತುಂ, ತಾಯ್ಸತ್ತ ಶಿಸುವಿನಂತೆ ಬಾಯ್ವಿಡುತ್ತುಂ, ಕೆಸಱೊಳ್ ಬಿದ್ದನಂತೆ ಮಿಡುಕುತ್ತುಂ, ಮಗನಿಲ್ಲದರ್ಥಪತಿಯಂತೆ ಬೆವೆಬೆದೆಬೇಯುತ್ತುಂ, ಸೂಲಮೇಱಿದನಂತೆ ಕಾಲಂ ನೀಡುತ್ತುಂ, ಕೂಸ್ವಡೆಯದನಂತೆ ಬಂಬಲ್ಬಡುತ್ತುಂ, [3] ಮುಳ್ಪೊಕ್ಕವನಂತೆ ಕುಸಿಯುತ್ತುಂ, ಸೂಳೆಯುಳ್ಳವನಂತೆ ಕವಿದು ಬೀೞುತ್ತುಂ, ಮೋನಂಗೊಂಡ ಚಪಳನಂತುಮ್ಮಳಿಸುತ್ತುಂ, [ಚಿತ್ತದೊಳಂಳ್ಳಳ್ಕುತ್ತುಂ, ನಿಲಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ ಬಾಳ ಮೋಹಕ್ಕೆ ಶಿಸುವಂ ಪಿಡಿದರೆಂಬ ನಾಣ್ಣುಡಿಯಂತೆ ಪೊನ್ನ ಮೋಹಕ್ಕೆ ಮನಮಂ ಬಲ್ವಿಡಿದು] ನಿಶ್ರೇಯಸಶ್ರೀಯ ವಿವಾಹಗೇಹದ ಭೂಮಿಶೋಧನೆಯೆನಿಪ ಲೋಚನಂ ತಾನುಂ ಸ್ಥೈರಿಸಿ, ॥ ೧೪೪

[4] [ವಿನಯಪಯೋನಿಧಿ ಸತ್ಯದ
ಮನೆಯೆನಿಸಿದ ಸೆಟ್ಟಿ ಪೇೞ್ದ ಮಾರ್ಗದೊಳಂತಂ ।

---

1 ದ್ರೋಹನತಾಯಂತೆ ಚಿಂತಿಸುತ್ತುಂ. (ಗ) 2 ತಾಗಿದನಂತೆತಲೆಯ ನೊರಸುತ್ತಿರಬುಂ (ಗ), ಕೆಟ್ಟಬೀಡಿನಂತೆ ತಲ್ಲಣಿಸುತ್ತುಂ (ಬ) 3 ಕೆಮ್ಮಸ್ಟಳ ನಂತೆತೇಂಕುತ್ತುಂ, (ಗ) 4 ಮಱುದಿವಸಂಸೆಟ್ಟಿಕರೆಯೆ ಮನೆಗೆ ವೋಗಿ ವಣಿಗ್ವಂಶಲಲಾಮಂ ಪೇಳ್ದೊಚೆಯೊಳ್ ನಿಂದು. (ಗ)

ದಿನದಿನಮುಪವಾಸಮೆನಿ
ರ್ದನುನಯದಿಂದೇಕಚಿತ್ತದಿಂ ಮೞದಿವಸಂ ॥ ೧೪೫

ಆಯಾಚಿತವ್ರತಮಪ್ಪುದಱಿಂ ಸೆಟ್ಟಿ ನಿಱಿಸೆ ಮನೆಗೆ ಪೋಗಿ ವೈಶ್ಯೋತ್ತಮಂ ಪೇೞ್ದೊಜೆಯಿಂ ನಿಂದಿರ್ದು ಪಾಣಿಪಾತ್ರದೊಳ್ ಶರ್ಕರೆವೆರಸಿದ ಪಾಲಂ ಕುಡಿದು ತದನಂತರಂ,] ೧೪೬

ಸೊಗಯಿಪ ಘೃತಪೂರಂ ಪೋ
ಳಿಗೆ ಮಂಡಗೆ ತಱಗು ನಾಡೆ ರುಚಿವೆರಸಿದ ಉ ।
ಪ್ಪುಗೆ ಚಕ್ಕುಲಿ ಗಾರಿಗೆ ಪೂ
ರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ॥ ೧೪೭

ಆಜ್ಯಯುತಮಪ್ಪವಂ ಮೆಲ್ದು [ತೊಜೆಯೊಳ್ ಪೋಸಂಗೆ ತೆಪ್ಪವನಿಕ್ಕಿದಂತಿಕ್ಕಿದ ಗಟ್ಟಿಗೊಂಡ ಬಳ್ಕ್ರಸರಂ ಕೊಂಡು ಪದುಳಿಸ ನಿಂದ ಬಟ್ಟಕ್ಕಂ,] ೧೪೮

ಕಳವೆಯ ಕೂಟ್ಮಗಮೆಗಿಸುವ
ತಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ಮಾಪೋ ।
ಜ್ಜ್ವಳಮಪ್ಪ ಕಂಪಿನಿಂಪಿನ
ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯುಂ ॥ ೧೪೯

ಅಂತಮೃತದೊಳ್ [ಮಚ್ಚರಿಸುವ, ರಸಾಯನದೊಳ್] ಪುರುಡಿಸುವ ದಿವ್ಯಾಹಾರಮಂ [ಕಯ್ಯೊಳಕ್ಕುವ್ರದುಮಾಕಂಠಂ] ಉಂಡು ಬೞಿಕ್ಕೆವೋಗಿಪ್ಪುದುಂ, ೧೫೦

ಬಾೞೆಯ ಕರ್ಜೂರದ ಕಿ
ತ್ತೀಳೆಯ ಕಂಪುರದ ರಂಜಿಪಿಮ್ಮಾವಿನ ಪೇ ।
ರೀಳೆಯ ನಾರಂಗದ ಕಂ
ಚೀಳೆಯ ತನಿವಣ್ಣನಿಕ್ಕೆ ಮೆಲ್ದಾದರದಿಂ ॥ ೧೫೧

[ಕಯ್ಯಂ ಕರ್ಚಿಕೊಂಡು][1] ತಣ್ಣರಗದ ತಣ್ಣೋಡುವಾಲಿನೀರಂ ಆರ್ಪನಿತಂ ಕುಡಿದು ಸಂತೋಷದಿಂ ನುಡಿದು ವಸುಮಿತ್ರಸೆಟ್ಟಿಯು ಧ್ಯಕ್ಷಂ ಬೆರಸು ವಿಹಾರಕ್ಕೆ ಬಂದು [ಕಾಷ್ಠಾಸನದೊಳ್] ಕುಳ್ಳಿರ್ದು [ತನ್ನೊಳ್ ॥ ೧೫೨

ಇವು ಲೇಸವುಲೇಸೆಂಬೀ
ವಿವರದೊಳೇಂ ಸಕಲಭಕ್ಷ್ಯಮುಂ ಬಾಡುಗಳುಂ ।
ಸವಿಯೊಳ್ ಸಾಸಿರಮಡಿ ಮಿ
ಕ್ಕುವು ಭಾವಿಸಿನೋೞ್ಪೊಡಿಂದ್ರನುಣ್ಬಮೃತಮುಮಂ ॥ ೧೫೩

ಎಂದು ತನ್ನ ತೂಟಂ ತನಗೆ ಜನ್ಮಾಪೂರ್ವಮಪ್ಪುದಱಿಂ ಮಹಾವಿಸ್ಮಯಮುಂ ಬಟ್ಟು] ಇರುಳ್ಕಂಡ ಕನಸುಗಳಂ ಪಗಲ್ನೆನೆವಂತೆ ನೆನೆಯುತ್ತುಂ [ಪಗಲೆಲ್ಲಂ ಸಂತಸದಿಂದಿರ್ದು] ನೇಸರ್ಪಟ್ಟೊಂದು ಜಾವಕ್ಕೆ ತೊಟ್ಟನೆ ॥ ೧೫೪

ಅಸದಳಮೆನಿಸುವ ತೀವ್ರದ
ತೃಷೆ ಮೊಕ್ಕಳಮಾಗೆ ನಾಡೆಯುಂ ಮನದೊಳ್ಸೈ ।
ರಿಸಲಾಱದೆ ತಲ್ಲಣದಿಂ
ಬಿಸುಸುಯ್ದುಮ್ಮಳಿಸಿ [3]ಬಾೞಲರಿದಾಯ್ತೆನುತುಂ ॥ ೧೫೫

ಕೋಡಗಮಂ ಪುಲ್ಲೊಳ್ ಮುಚ್ಚಿ ಸಿಡಿಮಿಡಿಗೊಂಬಂತೆ ಸಿಡಿಮಿಡಿಗೊಳುತ್ತುಂ ಪೆಱರ್ಗೆ ಪೇೞಲಂಜಿ ಲಜ್ಜೆಯಿಂ ಮೂಗಿಯ ಕೋಗಿಲೆಯಂತೆ ಬಾಯ್ವಿಟ್ಟಾಡದೆ ಮಳಲೇರಿಯಂತೆ [ಜಟ್ಟನೆ] ಜರಿದು, ॥ ೧೫೬

ಬಿಡುಗುಂ ಬಾಯುಂ ನೆಲದೊಳ್
ಪಡುಗುಂ ಪೊಱಗಣ್ಗೆ ಪೋಗಿ ತಣ್ಪಪ್ಪೆಡೆಯೊಳ್ ।
ಪಡುಗುಂ ತಂಪಿಲ್ಲದೊಡೆರ್ದೆ
ಗಿಡುಗುಂ ವಸುಭೂತಿ ಧೈರ್ಯಮಿಲ್ಲದೆ ಮನದೊಳ್ ॥ ೧೫೭

1 ವಣಿಗರಗದ (ಗ) 2 ತನ್ನುಂಡೂಟಮುಂ (ಗ) 3 ಕಟ್ಟನಳಿದೆನೆನುತ್ತುಂ (ಗ)

ತರುವಲಿಯ ತಲೆಯ ಕಿರೀಟಮನಾಲಿಕಲ್ಲ ಮೆಱೆ ಕೊಂಡುದೆಂಬಂತೆನಗೀಮುನ್ನಿನಿರುಳ್ಗಳಂ ನೋಡಲಿಂದಿನಿರುಳ್ಪಿರಿದಾಯ್ತೀವ್ರೊ ಕೆಟ್ಟೆನೆಂದು, ॥ ೧೫೮

ನೀರಱ್ಕೆ ಪೆರ್ಚೆ ನಿಲಲುಂ
ಸೈರಿಸಲುಂ ಬಾರದಳ್ಕಿ ತನ್ನಿಂದಂ ತಾ ।
ನೋರಂತೆ ಕುದಿದು ಮಱುಗುವ
ಸಾರಂಗದ ಪೋಱಿಯಂದಮಂ ನೆಱೆ ಪೋಲ್ತಂ ॥ ೧೫೯

ಅಂತಿರುಳ್ ನಾಲ್ಕುಂ ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯಂ ನೋಡುತ್ತುಂ, ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ, ಜಾವದ ಕಾಪಿನವರಂತೇಱುತ್ತುಂ, ಜಂಘಾಬಲವಿಲ್ಲದನಂತೆ ಕುಳ್ಳಿರುತ್ತುಂ, ಮರುಳನಂತೆ [1]ತನ್ನೊಳ್ತಾನೆ ನುಡಿಯುತ್ತುಂ, ಮಱೆಯಂಪಾರ್ವಕ್ಕಲಿಗನಂತೆ ಗಗನಮಂಡಲಮಂ ನೋಡುತ್ತುಂ, ನೂತನಶ್ರೀಮಂತನಂತೆ ಮುಯ್ಯಱಿಯದೆ ಬಳ್ಕುತ್ತುಂ, ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ, ದಾಹಜ್ವರಂಬೆತ್ತಂತೆ ಗಾಳಿಗಾಸೆಗೆಯ್ಯುತ್ತುಂ, ಕಪ್ಪೆಯಂತೆ ತಣ್ಪಪ್ಪೆಡೆಯೊಳ್ ಪತ್ತುತ್ತುಂ, ಚೊಚ್ಚಲ್ಪೆಱುವಳಂತೆ ತೊೞಲುತ್ತುಂ, ಪಲ್ಲಿಯಂತೆ ಕೇರಂ ಪತ್ತುತ್ತುಂ, ಎಲೆವಳ್ಳಿಯಂತೆ ಕಂಬಮಂ ಸುತ್ತುತ್ತುಂ, ಪಾದರಿಗೆಯಂತೆ ಪೆಱರ್ಗಂಜುತ್ತುಂ, [2] ಸೂಳೆವೆತ್ತರಂತೆ ಪೊರಳುತ್ತುಂ, ಕಳ್ಗುಡಿದರಂತೆ ಮತಿಗಿಡುತ್ತುಂ, ವೃದ್ಧನಂತೆ ತಡವರಿಸುತ್ತುಂ, ಲತೆಯಂತಲ್ಲಾಡುತ್ತುಂ, ಕಣ್ಣೊಳ್ ಬಳಗಾಗೆ, ೧೬೦

ನಿಲಲಾಱದಲಸಿ ಪೋದೊಡೆ
ಪಲವುಂ ಚೆಂಬೊನ್ನ ಪಡಪು ಕೆಟ್ಟಪುದು ಕರಂ ।
ಕಲಿಯಾಗಿ ನಿಂದೆನಪ್ಪೊಡೆ
ನಿಲಲಾಱದು ನೀರ ದೆಸೆಯನುಱದಸುವಿನಿಸುಂ ॥ ೧೬೧

ಎಂದೆರಕಕ್ಕೆ ಬಿಟ್ಟ ಕರುಪಿನಂತೆ ಮಱುಗುತ್ತುಂ [ಇರ್ದ ಮತ್ತಂ ದಯಾಮಿತ್ರಸೆಟ್ಟಿ ನಿಱಿಸೆ ಮನೆಗೆ ಪೋಗಿ ಮನದ ಕಾಂಕ್ಷೆಯಿಂ ಮುನ್ನಿ

---

1 ಜಿನುಗುತ್ತುಂ (ಗ)    ಪಸುಗೂಸಿನಂತೆತೆವಳುತ್ತುಂ (ಗ)

ನಂತುಂಡು ಮುನ್ನಿನ ಸುಖಾಕದಿಂದಿಮ್ಮಡಿ ಮಖುಕಮಾಗೆ ಮಖುದಿ ವಸಂ] ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು, ಪಾಲಿಂಗೆ ಬೆರ್ಚಿ [1] ತುಪ್ಪಕ್ಕಿನಿಸ ಪ್ಪೊಡಂ ಮನಂದರಲಾಱದೆ [ತೃಷೆಯೊಳಾದ ಭೀತಿಯಿಂದೊಲ್ಲೆನೆಂ ಬುದುಂ ವೈಶ್ಯವಂಶಲಲಾಮನಿಂತೆಂದಂ :— ೧೬೨

ಅಂತಿತೆನ್ನದೆ ಮುಂಪೇ
ೞ್ದಂತುಸಿರದೆ ಮೋನದಿಂದಮುಣ್ಬುದು ನಾನೇ ।
ನಂ ತಂದಿಕ್ಕಿದೊಡಂ ಗುಣ
ವೆಂತಕ್ಕುಂಲದೆಱಡೆಯುರೆಸಿಪ ನಿಮಗಿದು ಪಿರಿದೇ ॥ ೧೬೩

ಅಱುಸರಪ್ಪ ರಿಸಿಯುಮೊಂದಲಾಗಿಯುಸಿರದೆಮ್ಮ ಪೇೞ್ದಂತೆ ಮೋನದಿಂದುಂಬರೆಂದೊಡೆ, ಕುಲಜರುಂ ಭೂದೇವರುಮಪ್ಪ ನಿಮಗಿದಾ ವುದರಿವಾಯ್ತು ಸಿರದಿರಿಪುಂಬುದುಂ ಮಱುಮಾತುಗುಡಲಱಿಯದುಮ್ಮ ಳಿಸಿ ಬೆಮರ್ತುಸಿರದುಣುತ್ತುಮಾಮಾರ್ಗದಿಂದೇ ಂಟುದಿನಸವಿರ್ದಿರ ಲಾಱದೆ ತಲ್ಲಣಿಸಿ] ನಿಂದುಣಿಸಿನಂವಕ್ಕಲಸಿ " ಕಯ್ಯೊಳುಂಬುದು ರಯ್ಯ ಮಲ್ಲವು, ಬತ್ತಲೆಯಿರವು [2] ನಿತ್ತರಿಸಲರಿವು, ನೆಲೆವಕ್ಕ ಸಲೆಕಷ್ಟಂ " ಎಂದು ಸ್ಯೆರಣೆಗೆಟ್ಟು, ೧೬೪

[ನಸುಗುನ್ನಿ ಮುಟ್ಟಿದಂತಿರೆ
ಬಸಮಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈ ।
ರಿಸಲಾಱದೆರಡುಕಯ್ಯಿಂ
ಮಸಗಿ ಮನಂಗೆಟ್ಟು ಮರುಳವೊಲ್ತುಱಿಸುತ್ತುಂ ॥] ೧೬೫

ಕುಂದದಿನಿಸಂ ಮನಕೆ ಬಂದುಣಿಸನುಂಡು ಪದ
ಪಿಂದೆ ಪೆಱತೇಂ ಕೆಱೆಗೆ ಪೋಗಿ ತಿಳಿನೀರಂ ।
ಮಿಂದು ಬಿಡದೂರೊಳಗಣೊಂದುಲಿವ ಮಾತುಗಳ
ದಂದುಗದೊಳಾರ್ತಸಗಿ ಕೂರ್ತಿರದೆ ನಿಱಕಂ ॥ ೧೬೬

1 ಸಾಲೆ (ಗ) 2 ನಿರ್ಗ್ರಂಥದಿರವು (ಕ. ಬ.)

ನಿಂದುಣಿಸಿನಿಂದೊಡಲದೊಂದುತಿನಿಸಿಂ ತೃಷೆಯ
ದೊಂದುಕುದಿಪಿಂ ತಿಗುಳನಾಡ ಸೆಱೆಯಂ ತಾ ।
ನೊಂದಿದತಿ [1] ದುಃಖದೊಳ್ ಬೆಂದು ನಿಲಲಿನ್ನರಿದಿ
ದೆಂದು ವಸುಭೂತಿ [2] ಸೆಡೆದಳ್ಕಿ ಬಡವಾದಂ ॥ ೧೬೭

[ಅಂತು ಬೆಗಡುಗೊಂಡು ನಿಲಲುಂ ನಿತ್ತರಿಸಲುಮಾಱದೆ] ಗಾಳಿಗೊಡ್ಡಿದ ಸೊಡರಂತೆ ನಡುಗಿ, [3] ಸೂಳೆಯ ಕೊರಳಂತೆ ಕರ್ಗಿ, ಪಿಡಿವೆತ್ತ ಕಳ್ಳನಂತೆ ತಲ್ಲಣಿಸಿ, ಬಡಿವೆತ್ತ [ಬಡವ] ನಂತೆ ಶಕ್ತಿಗೆಟ್ಟು, ಮಟದ ಬೆಕ್ಕಿನಂತೊಳಗಣ್ಗೋಡಿಯಾಡಿ, ಪಟದ ಸೀರೆಯಂತಲ್ಲಾಡಿ, ಬಲ್ಲದ ಪೆಂಡತಿಯಂತೆ ಸುಯ್ದು, ಮಲ್ಲರೊಳ್ತೊಡರ್ದರಂತೆ ತಳ್ಗಿ, ಗರ್ಭಿಣಿಯಾದ ಗಂಡೆಯಂತೆ ಬಾಯಂ ಬಿಟ್ಟು, ಪರ್ವತವೇಱಿ ಬಿದ್ದರಂತೆ ನಿರ್ಜೀವನಾಗಿ, ಪಗಲ ಚಂದ್ರನಂತೆ ತೇಜಂಗೆಟ್ಟು ಜಗಳಗಂಟಿಯಂತೆ ಮಿಡುಮಿಡುಮಿಡುಕಿ, ಬೇಸಗೆಯ ಕೋಣನಂತೆ ನಾಲಗೆಯನುರ್ಚಿ, ಹಾಸುಗೊಂಡ ನಾಯಂತೆ ಸಿಡಿಮಿಡಿಗೊಂಡು, ಕಿಚ್ಚು ತಗುಳ್ದ ಮರದಂತೆ ನಯಂಗೆಟ್ಟು, ನಚ್ಚುಗೆಟ್ಟ ಬಡವನಂತೆ ಬೆಂಬಿರ್ದು, ದೆಸೆಗೆಟ್ಟರಂತೆ ಚಿಂತಿಸಿ, ಸಿಸುಗೆಟ್ಟರಂತೆ ಮಱುಗಿ, ಹುಣಿಸೆಯ ಕಾಯಂ ತಿಂದರಂತೆ ಚಳಿತು, ಪಣ್ತ ಕಬ್ಬಿನಂತೆ ನೆಲನಂ ಪತ್ತಿ, ಸೆಱೆಸಿಕ್ಕಿದನಂತುಮ್ಮಳಿಸಿ, ನೆಱವಿಲ್ಲದನಂತೆ ಕುಂದಿ, ಕೂರ್ಪರನಗಲ್ದರಂತೆ ಬೆದೆಬೆದೆಬೆಂದು, ಸರ್ಪನಂ ಮೆಟ್ಟಿದರಂತೆ ಭಯಂಗೊಂಡು, ಬಂಧನಕ್ಕೆ ಬಂದಾನೆಯಂತೆ ಜೂಂಕರಿಸಿ, ಬಡವರೊಡಲಂತೆ ಜೋಲ್ದು, ಏರ್ವಡೆದ ಪಂದೆಯಂತೆ ತಲ್ಲಣಿಸಿ, ಮೊಱುವಡೆಯದ ಪರದನಂತೆ ಕಂದಿ, ತಣ್ಪೇಱಿದ ಪಱೆಯಂತೆ ದನಿ ಪೊಱಮಡದೆ, ಮಣ್ಪತ್ತಿದ ಮೂಲಿಗನಂತೆ ದೂರಿಸಿ, ಬಯಲೊಳಿಕ್ಕಿದ ಮೀನಂತೆ ಮಿಡುಕಿ, ತಳಾಱನಂತೆ ನಿದ್ರೆಗೆಟ್ಟು, ಸಮ್ಯಕ್ತ್ವಚೂಡಾಮಣಿಗಿಂತೆಂದಂ :— ೧೬೮

---

1 ತೋರೊಂದಿದತಿದುಃಖ (ಕ)

2 ದುಃಖದೊಳಿಂದೆನಿಲಲಾಱದರದೆಂದು (ಬ, ಗ.)

3 ಗಾಳಿಯಂತೆನಡುಗಿ (ಬ)

ಪುಲಿಯ ಮೀಸೆಯನಂಜದುಯ್ಯಲನಾಡಲಪ್ಪುದು ನಂಜನಂ
ಜಱಿಸಲಪ್ಪುದು ಸಿಂಹಮಂ ಪಿಡಿದೇಱಲಪ್ಪುದು ಕಿಚ್ಚಿನೊ |
ಳ್ತೊಲಗದೊರ್ಮೆಯೆ ಪಾಯಲಪ್ಪುದು ಸೊಕ್ಕಿದಾನೆಗೆ ಸಂದು ಮಾ
ರ್ಮಲೆಯಲಪ್ಪುದು ನಿನ್ನ ನೋಂಪಿಗೆ ಗಂಡನಾವನೊ ಸ್ವೈರಿಪಂ ‖

[ತ್ರಿಸೆ ಮೆಯ್ಯೊ ತಿನಿಸು ನೆಱೆ ಸ್ವೈ
ರಿಸಬಾರದ ತಲೆಯನೋವು ಮತ್ತತ್ತಲ್ ಮುಂ |
ಏಸುಕದಿರವೆಂಬವಿನಿತುಂ
ಪುಸಿಯಲ್ತೊಂದೊಂದೆ ಕಿಡಿಸಲಾಱವೆ ನರರಂ ‖] ೧೨೦

ಕೇಳೊಂದನೆ ಪೆಱಗಣ ಪೋ
ದೇೞೆಂಟುಂದಿವಸವೆಂಬವೆನಗುಮ್ಮಳದಿಂ |
ದೇೞೆಂಟು ವರ್ಷಮಾದುವು
ಕೇಳೀ ದುಃಖಕ್ಕೆ ಸ್ವೈರಿಸಿರ್ಪವನಾವಂ ‖ ೧೨೧

ಪೇಱಿನ ಮೇಲೆ ಪಾಸಱೆ ಯೇಱಿನ ಮೇಲೆ ಬಡಿಗೋಲ್ ಕೊಲೆಯ ಮೇಲೆ ಕವರ್ತೆ ಯೆಂಬಂತೆ ಸಂತಾಪದ ಮೇಲೆ ಸಂತಾಪಮಂ ಮಾೞ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನ ಮೆಯ್ಯನೊಡ್ಡಲಾಱೆಂ ; ಮತ್ತ ಮೊಂದೆರಡು ತಿಂಗಳ್ ವಿಶೇಷಮಾಗಿ ನೋಂತುಕೊಟ್ಟಪೆಂ, ಪಿರಿದಪ್ಪೆನ್ನ ಮ್ಮಳಕೆ ಪೋಪಂತು ನಿಮ್ಮಧ್ಯಕ್ಷಂಬೆರಸು ಕೆಱೆಗೆ ಪೋಗಿ ಮೆಯ್ಯಂ ಕರ್ಚಿಕೊಂಡೊರ್ಮೆಯಿರ್ಮೆ ನೀರಂ ಕುಡಿದು ನಿಮ್ಮ ಬೀಡಿನೊಳೊಂದೆರಡುಗಳಿಗೆ ಸುಖದಾಡುವಂತು ಮಾೞ್ಪುದೆನೆ, ದಯಾಮಿತ್ರಸೆಟ್ಟಿ ಬಾಯ ತಂಬುಲಂ ಸೂಸೆ ಕಳಕಳಿಸಿ ನಕ್ಕು, ೧೨೨

ಕಲಿತನದಿಂದಂ ಲೋಗರ್
ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ತಾಮೊಂ |
ದಿಲಿಯಂ ಪಿಡಿದೊಡಮದು ಪೆ
ರ್ಬುಲಿಯೆಂಬರ್ದುರ್ಜನರ್ಗೆ ತಾನಿದು ಸಹಜಂ ‖ ೧೨೩

[ಪಾಪಿಲ್ಲದೆಡೆಯೊಳ್ ಕಷ್ಟಗಳ್ ತಮ್ಮ ಗಜಱೆ ಗಱಱಂಗಿರ್ಪುವು, ಪಾವು ಬರೆ ಗಜಱುಗೆಟ್ಟು ಸತ್ತಂತಿರ್ಪುವು. ಅಂತೆ ಮಹಾಪರೀಷಹಂಗಳ್ ತಮ್ಮ ಮನಮಂ ಕನಡದನ್ನಂ ಕುತ್ತಿತರ್ ತಮ್ಮ ನೆಗೞ್ತೆಯ ಪಿರಿದೆಂದು ಪೊಂಗುತ್ತಿರ್ಪರ್, ಪರೀಷಹಂಗಳಡಸಿದಂದು ದೆಸೆಗೆಟ್ಟು ಬಾಯ್ಗೆಟ್ಟು ಮಱುಗುತ್ತಿರ್ಪರ್,] ೧೭೪

ಕಡುಮೊರ್ಖರ್ತಮ್ಮಿಚ್ಛೆಗೆ
ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ ।
ನಡೆಯಲ್ ಬಕರ್ಮಮ ಬಾರದು
ಕಡಲೆಗಳಂ ತಿಂಬ ಪೊಗು ಕಲ್ಗಳೊಳಂಟೇ ॥ ೧೭೫

ಇಂತು ನೆಗೞಲ್ಕರಿದಾದುವುಂ ಫಲದೊಳ್ ಪಿರಿಯುವುಮಪ್ಪ ಪನ್ನೆರಡು ತೆಱದ ತಪಮುಮಂ[1] [ನಿಲಲುಂ ನಿತ್ತರಿಸಲುಂ ಬಾರದಿಪ್ಪತ್ತೆರಡು ಮಹಾಪರೀಷಹಂಗಳುಮಂ, ಮೋಕ್ಷನಿಶ್ರೇಣಿಗಿವು ಮೆಟ್ಟೆನಿಸಿ ರ್ಪಿಪ್ಪತ್ತೆಂಟು ಮೂಲಗುಣಂಗಳುಮಂ, ಮಹಾವ್ರತಕ್ಕಿವು ವಜ್ರಪ್ರಾಕಾರಮೆನಿಸಿ ನೆಗೞ್ತೆವಡೆದ ಪಂಚಾಚಾರನುಮಂ, ರತ್ನತ್ರಯಕ್ಕೆ ಕಾಪಾಗಿ ಬಳಸಿದ ಕೋಂಟೆಯಿದೆನಿಸಿರ್ಪ ಪದಿಮೂಱು ಚಾರಿತ್ರಮುಮಂ, ಸಕಲಗುಣಂಗಳೆಂಬ ರತ್ನಂಗಳ್ಗೆ ಕರಂಡಮೆನಿಸುವ ದಶಧರ್ಮಮುಮಂ, ಬರ್ಮಗಳಪ್ಪೊಡಂ ತಪ್ಪಲೀಯದೆ] ಮರಣಪರ್ಯಂತಂ [ಬೆಂಬೀೞದ ಲಸದೋಸರಿಸದಾಱೆನೆನ್ನದೆ ಬೆಚ್ಚದೆ] ನಡೆಯಿಸುವ ಮಹರ್ಷಿಗಳ ಮನದ ಧೈರ್ಯಮಂ ಬಣ್ಣಿಸನಾವನವರ್ಗೊಳ್ಕಱಿಯುವಪ್ಪೆಂದೆರಡು ಪರೀಷಹಂಗಳ್ಗೆ ಬೆಂಬಿರ್ದಿರಕ್ಕುಬಾಯೆಂಬುದುಂ ವಸುಭೂತಿ ವಿಸ್ಮಯಂ ಬಟ್ಟು, ೧೭೬

ಅಳಪಿಂದಮೆಳಯು ಬರ್ದಗೆ
ಯುಳಯುಂ ಕುಡಿಯಿಸಿದರೆಂಬ ತೆಱದಿಂ ಮುನಿಸಂ ।

---

1 ಪಲವು ನೆಗಳ್ತೆಗಳಂ

ಕುಳಮುಮನನುಕರಿಸಿಂದಂ
ಪಳಿದೊಡೆ ಮುನಿದೆನ್ನ ಸಿಟ್ಟನೆನ್ನೊಳ್ ಕಳಪಂ ‖ ೧೭೭

ಕಟಕಪ್ಪಂ ಕಂಡಱಿಯದವಂಗೆ ಪಳ್ಳಿ ಪಿರಿಯೂರಾಗಿ ತೋರ್ಪಂತೆ ಧೈರ್ಯಾನ್ವಿತರಪ್ಪ ಮಹರ್ಷಿಯರ ತಪ್ಪೋಮಾರ್ಗಮನಱಿಯದೆನಗೆ ಮೆಕ್ಕ[1] ಚಾರಿತ್ರಮು ಪಿರಿದಾಗಿರ್ದುದು ಸಹಜಮಾದೊಡಂ "ಪರದರೊಳ್ಕರುಳಿಲ್ಲ, ಸೂಳ ಸಾಧುವಲ್ಲ" ಎಂಬ ನಾಣ್ಣುಡಿಯುಂಟಪ್ಪುದಱಿಂದೀತಂ ಮರುಳಲ್ಲಮೀತನ ಪಿಡಿದ ಧರ್ಮಮೆ ಧರ್ಮಮೆಂಬುದು, ೧೭೮

ಆರುಮಿದಕ್ಕೆ ನಿತ್ತರಿಸಲಾಱರೆನಿಪ್ಪ ಪರೀಷಹಂಗಳಂ
ಸ್ಥೈರಣೆಯಿಂದೆ ಗೆಲ್ವ ಮುನಿಮುಖ್ಯರ ಸಾದ್ರ ಜಿನೇಂದ್ರಧರ್ಮಮಂ
ಸಾರಮೆನಿಪ್ಪುದಂ ತಿಳಿದು ನಂಬಿದರನ್ಯರನೇಕ ಪೂರ್ವಮರ್
ಮೇರುವನೇಱಿ ನೋಡಿದವರ್ಗೀಧರೆ ತಾಂ ಕಿಱಿದಾಗಿ ತೋರದೇ ‖೧೭೯

[2] [ಎಂದು ತನ್ನೊಳ್ ವಿಚಾರಿಸಿ ವಾತ್ಸಲ್ಯರತ್ನಾಕರಂಗೆ ಕೈಗಳಂ ಮುಗಿದು ನಿಮ್ಮ ಪಿಡಿದ ಧರ್ಮಮು ಲೇಸೆಂಬುದನೀಗಳಱಿದೆಂ ನೀನೆನಗೆ ಧರ್ಮದೊಳಾದಭಿಪ್ರಾಯಮನಱಿಯೆ ಪೇಱಲ್ವೇಕ್ಕೆಂಬುದುಂ ಸೆಟ್ಟಿಯಿಂತೆಂದಂ:—] ೧೮೦

ಪರಮಾರ್ಥಮಪ್ಪುದಂ ಮ
ಚ್ಚರಿಸದೆ ಕೋಪಿಸದೆ ಡಂಗೆಗೊಳ್ಳದೆ ಪಕ್ಷ ।
ಚ್ಚರಿದೇಳದೊಂದೆಮನದಿಂ
ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ ‖ ೧೮೧

[ಕನ್ನಡಿಯುಂ ನೋಡುವವಂ
ತನ್ನಯು [3] ಪೆಱಗಣ್ಣ ಕಾಣಲಾರ್ಪನೆ ರೂಪಂ ।

---

1 ಅನ್ಯರ ಚರಿತ್ರಮೆ ಪಿಱಿದಾಗಿ ತೋರದತುಂ ಪರವರೊಳ್ (ಕ)

2 ಸೆಟ್ಟಿಗೆ ಕೈಮುಗಿದು ನೀಂ ಧರ್ಮಮುಂ ಬೆಸಸಿಮೆಂಬುದುಮೆಮ್ಮ ಧರ್ಮಮನಂತು ಪೇಳುವೆನೆಂದು ಮೆಲ್ಲನಿಂತೆಂದಂ (ಗ)     3 ತನ್ನಂ, (ಕ.ಬ)

ಮುನ್ನಮೆ ಬಱಿದೊಳಱುವವಂ
ಸನ್ನುತಸದ್ಧರ್ಮಮಪ್ಪುದಂ ತಾನಱಿಯಂ ॥] ೧೮೨

ಬನಲಿಯಂತೆ ಪೊಲ್ಲಮೆಯುಮಂ ಪಿಡಿಯದೆ, ಕೋಣನಂತೆ ಕದಡದೆ, ಬಕನಂತೆ ಧೂರ್ತನಾಗದೆ, ನರಿಯಂತೊಡನೊಡನೊದಱದೆ, ಜಡನಂತವಿಚಾರಿಯಾಗದೆ, ಪಾಣ್ಬಯಂತೆ ಮತ್ತೊಂದು ಮನಮಾಗದೆ, ನಪುಂಸಕನಂತೆರಡಕ್ಕಾಸೆಗೆಯ್ಯದೆ, ಗಿಳಿಯಂತೆ ಪಲವಂ ಗೞಪದೆ, ಸವತಿಯಂತೆ ಪುರುಡಿಸದೆ, ಪುಲಿಯಂತೆ ಮೋಲ್ವಾಯದೆ, ಪೆಱೆಯಂತೆ ವಕ್ರನಾಗದೆ, [1] ಸಿಡಿಲಂತೆ ಭಯಂದೋಱದೆ, ಲಂಚಗಾಱನಂತೆ ನುಡಿಗೆಡಿಸದೆ, [ಏಕಚಿತ್ತದಿಂ] ಕೇಳ್ವರಪ್ಪೊಡೆ ಪೇೞ್ದಪೆನೆಂಬುದುಂ, [2] ವಸುಭೂತಿ ನಿಮ್ಮ ಬೆಸಸಿದಂತೆ ಪೆಱತು ಭಾವನೆಯಿಲ್ಲದೊಂದೆಬುದ್ಧಿಯಿಂ ಕೇಳ್ದಪೆನೆಂಬುದುಂ, ಸುಖಕ್ಕಾಗರಮೆನಿಸುವ ಸದ್ಧರ್ಮಮಂ ಸೆಟ್ಟಿಯಿಂತೆಂದು ಪೇೞ್ದಂ ॥ ೧೮೩

ನೆರೆದೆಲ್ಲರ್ ಕಳ್ಗುಡಿಯು
ತ್ತಿರೆ ಬಡವರ್ಗಲ್ಲಿ ಧರ್ಮಗಳ್ಕೆಂದೆಱೆವರ್ ।
ಧರೆಯೊಳಗದುವಂ ಧರ್ಮಮ
ನಿರುತಂ ಪೇೞ್ಣ್ಣ ನೀನೆ ಭಾವಿಸಿ ಮನದೊಳ್ ॥ ೧೮೪

ಪರವನಿತೆಗೋತು ಸ್ವೈರಿಸ
ಲರಿದಾಗಿಂಬಾಗಿ ತೋರ್ಪ ಧರ್ಮಂ ನಿನಗ ।
ಕ್ಕೆರಡಿಲ್ಲದೆಂದು ನಂಬಿಸಿ
ನೆರೆವರ್ಸದ್ಧರ್ಮಮಪ್ಪುದೇ ಕೇಳದುವುಂ ॥ ೧೮೫

ಬಸಮಲ್ಲದ ರುಚಿಯುಂ ಸ್ವೈ
ರಿಸಲಾಱದೆ [3] ಧರ್ಮಮಣ್ಣ ಕೊಲ್ಲನೆ ದಯೆಯಿಂ ।

1 ಮೇದನಂತೆ ಸೀಳತ್ತರ (ಗ)
2 ನೀಮೆಂದಂತೆ ಕೇಳ್ದಪೆಂ ಬೆಸಸುವೆ ನ ಸೆಟ್ಟಿಯಿಂತೆಂದಂ (ಗ)
3 ರುಚಿಯಿಂ ಜೀವಿಸಲಾರದೆ (ಕ., ಚ)

ನೆಸುಮತಿಯೊಳಱಿವರದುವುಂ
ಮಿಸುಗುವ ಸದ್ಧರ್ಮವೆಂದು ನಂಬುವುದೆ ಬುಧಂ ॥ ೧೪೬

[ಧರೆಯೊಳ್ ಕಳವುಂ ಕೊಲೆಯುಂ ಪ್ರಸಿದ್ಧ ಪಾಪಂಗಳಾಗಿರ್ದುಂ] ಕವರ್ದು ತಂದ ಧನಮುಮಂ [ಬೇಂಟೆಯೊಳ್] ಕೊಂದು ತಂದಡಗುಮಂ ತಮ್ಮೊಳ್ ಧರ್ಮದಿಂ ಪಚ್ಚಿಕೊಡಿಮೆಂಬರದುವುಂ ಧರ್ಮಮಕ್ಕುಮೆ, ೧೪೭

ಅರಸೆಂಬ ಪೆಸರ್ ಪಗರಣ
ದರಸಂಗಂ ಧಾರಿಣೀಶ್ವರಂಗಂ ಕರಮಾ ।
ದರದಿಂದಮೆಕ್ಕುಮನಿತಱೊ
ಳರಸನದೊಂದಾಜ್ಞೆ ಬಗೆವೊಡಾತಂಗುಂಟೇ ॥ ೧೪೮

[1] [ಪಿಟ್ಟೆಂಬ ಪೆಸರ್ ಕಳವೆಯು
ಪಿಟ್ಟಂಗಂ ಭೂತಳಾಗ್ರದೊಳ್ವ್ಯಾಪಿಸೆ ಬೆಳ್ ।
ಪಿಟ್ಟಂಗಮಕ್ಕುಮಾದೊಡೆ
ಪಿಟ್ಟನೊಳಪ್ಪೊಂದುರುಚಿಯುನದು ತಳದಪ್ಪುದೇ ॥ ೧೪೯

ಕಬ್ಬೆಂಬಭಿಧಾನಂ ಕಾ
ಡ್ಬಬ್ಬಿಗಂ ನೆಗೞ್ದ ಮೆಲ್ವ ಕಬ್ಬಿಂಗಂ ಕೇ ।
ಳುರ್ಬರೆಯೊಳಕ್ಕುಮಾದೊಡೆ
ಕಬ್ಬಿನೊಳುಂಟಾದ ರುಚಿಯುನದು ತಳದಪ್ಪುದೇ ॥ ೧೫೦

ಪೊನ್ನೆಂಬ ಪೆಸರ್ ಕನಕ
ಕ್ಕನ್ನೆಯದಿಂ ಮೆದ್ದುಗುಣಿಕೆಗಂ ಸಮನಕ್ಕುಂ ।
ಪೊನ್ನೆಲ್ಲಿಗಮೆಸೆವಂತಿರೆ
ತಾನ್ನೆಱೆ ಸಂದಪುದೆ ಮೆದ್ದುಗುಣಿಕೆಯುಮಿಳೆಯೊಳ್ ॥] ೧೫೧

1 ಕಳವೆಯ ಪಿಟ್ಟುಮಂ ಬೆಳ್ವಟ್ಟುಮಂ ಪಿಟ್ಟೆಂಬರಾವಿನತಪ್ಪುಮುಮಂ ಕೇರತಪ್ಪುಮುಮಂ ತಪ್ಪುಮೆಂಬಂತೆ ಪಾಪಿಗಳ್ಗಂ ಕುತ್ಸಿತಧರ್ಮಮೆ ಧರ್ಮಮಾಗಿ ತೋರ್ಕುಮದು ಧರ್ಮಮಲ್ಲದು (ಗ)

ಪಾಲೆಂಬ ನಾಮಮೊವಿನ
ಪಾಲಿಂಗಂ ನಾಯುವಟದ ಕಳ್ಳಿಯೊಳಾದಾ ।
ಪಾಲಿಂಗಮೆಕ್ಕುಮೊದೊಡೆ
ಪಾಲೊಳ್ಪಂ ಸವಿಯುಮದಱೊಳೇಂ ಸಮನಿಕುಮೋ ॥ ೧೯೦

[ತುಪ್ಪವೆಂಬ ಪೆಸರಾವಿನ ತುಪ್ಪಕ್ಕಂ ಗೇರ ತುಪ್ಪಕ್ಕಮುಂಟ ಪ್ಪೊಡಂ, ತುಪ್ಪದಂತಿನಿದಕ್ಕುಮೋ ? ಕುದುರೆಯೆಂಬ ಪೆಸರ್ ಬಿಸಿಲ್ಗು ದುರೆಗಂ ಜಾತ್ಯಶ್ವಕ್ಕಮುಂಟಾವನಿತಱೊಳ್ ಕುದುರೆಯಂತಕ್ಕುಮೋ, ಧರ್ಮವೆಂಬ ಪೆಸರ್ ಸದ್ಧರ್ಮಕ್ಕಂ ಕುಧರ್ಮಕ್ಕಂ ಸಮನಿಸುಗುಮೆನಿ ತಱೊಳ್ ಸದ್ಧರ್ಮದೊಳಾದೈಶ್ವರ್ಯಮಂ ಪಡೆಯಲಾರ್ಕುಮೋ ಪಡೆಯ ಕೂಡದದುಕಾರಣದಿಂ ॥ ೧೯೧

ರಸಮಂ ಪೊರ್ದಿ ಸಮಂತು ಲೋಹನಿಕರಂ ಪೊನ್ನಪ್ಪವೋಲುರ್ವಿಯೊಳ್ ರಸವೆಂಬೀ ಪೆಸರಿಂಗೆ ಕೇರ ರಸದೊಳ್ ಪೊನ್ನಕ್ಕುಮೇ ನೋಡ ಪೊ ರ್ದಿಸಿ ಸದ್ಧರ್ಮಮನೇನು ನಂಬಿ ಸುಖಮುಪ್ಪಂತಣ್ಣ ನೀಂ ನೋಡ ಭಾ ವಿಸಿ ಪೊರ್ದಿದೊಡೆ ಕೊಲ್ವಧರ್ಮದೊಳದೇಂ ಕೈಸಾರ್ಗುಮೋ ತತ್ಸುಖಂ

ಮರುಳ ಪಯಣಕ್ಕೆ ತಱಗೆಲೆಯ ಸಂಗಡಿಗನೆಂಬಂತೆ ಪಾಪಿ ಯುಪ್ಪಂಗೆ ಕುತ್ಸಿತಧರ್ಮಮೆ ಸದ್ಧರ್ಮಮಾಗಿ ತೋರ್ಕುಂ ॥] ೧೯೪

ಎಲ್ಲೆಲ್ಲ ಸುಖಂಗಳೊಳಂ
ನಿಲ್ಲದೆ ನೆರೆದಿರ್ಪೆನೆಂಬ ಮನಮುಳ್ಳೊಡೆ ತ ।
ಳ್ಪಿಲ್ಲದೆ ಪಿರಿದಾದರದಿಂ
ಕೊಲ್ಲದ ಧರ್ಮಮನೆ ಪಿಡಿಗೆ ನಂಬುಗೆಯಿಂದಂ ॥ ೧೯೬

ಆ ಕೊಲ್ಲದ ಧರ್ಮಂ ಜೈನಾಗಮದೊಳಲ್ಲದಱಿಯಲ್ಬಾರದಾ ಪರ ಮಾಗಮಮುಂ [1] ನಿರ್ದೋಷಿಯಪ್ಪ ಪರಮಾತ್ಮನ ಮುಖಕಮಲದಿಂದ ಲ್ಲದೆ ಪೊಱಮಡದಾದೇವನೆಂತಪ್ಪನೆಂದೊಡೆ:— ೧೯೭

1 ಪೂರ್ವಾಪರವಿರುದ್ಧಮಲ್ಲದ ಪರಮಾಗಮಮಲ್ಲದಱಿಯಲ್ಬಾರದು ಮುಕ್ತಿ ಶ್ರೀಯ ತವರ್ಮನೆಯೆನಿಸುವ ಆ ಪರಮಾಗಮಮುಂ (ಕ)

ಮರಣಂ ಚಿಂತೆ ಭಯಂ ಮದಂ ಮುಳಿಸು ಮೋಹಂ ಖೇದ ರೋಗಂ ಬೆಮ
ರ್ಜರೆ ನೀರಡಿಕೆ ವಿಷಾದಮೂಟ ಜನನಂ ಲೋಭಂ ಮಹಾವಿಸ್ಮಯಂ
ಸ್ಮರಬಾಣಾಹತಿ ನಿದ್ರೆಯೆಂಬಿವಿನಿತಂ ಗೆಲ್ದಾತನೇ ತಾಂ ಜಿನೇ
ಶ್ವರನಿಂದ್ರಾರ್ಚಿತಪಾದನಾತನೆ ವಲಂ ಸೌಖ್ಯಕ್ಕೆ ತಾಂ ಕಾರಣಂ॥೧೯೮

ಆ ಪರಮೇಶ್ವರನನಱಿವರೆತ್ತಾನುಮೊರ್ವರಪ್ಪರದೆಂತೆನೆ:- ೧೯೯

ಕಕ್ಕನ ಪವಳದ ಮಣಿಗಳ
ನಿಕ್ಕುವವರ್ಪಲರೊ ಮುತ್ತಿನ್ಸರಮಂ ಕೇ |
ಳಿಕ್ಕುವವರ್ಪಲರೊ ಕರಂ
[1] ನಿಕ್ಕುವಮಾರ್ಪುದು ನೋಱ್ಪಡವನೀತಳದೊಳ್ ॥ ೨೦೦

[2] ನಿಕ್ಕುವದಿಂ ತಾಳೋಲೆಯು
ನಿಕ್ಕುವವರ್ಪಲರೊ ನೋಡ ಪೊನ್ನೋಲೆಯುನಂ |
ತಿಕ್ಕುವವರ್ಪಲರೊ ಮನ
ಕ್ಕಕ್ಕೆವಮಂ ಪೂರ್ದಲೀಯುದಿದನಾರಯ್ಸಿಂ ॥ ೨೦೧

ವರರತ್ನಮನಱಿವವರು
ರ್ವರೆಯೊಳ್ಕೆಲ್ಲರೊ ಕಲ್ಲುಮಂ ಪುಲ್ಲುಮನು |
ರ್ವರೆಯೊಳಱಿವವನೇಕರೊ
ಪರಿಕಿಸಿ ನೋಡಣ್ಣ ನಿನ್ನ ಮನದೊಳ್ ನಯದಿಂ ॥ ೨೦೨

ಮರನನಱಿವಂತು ಬಲ್ಲರೆ
ಸಿರಿಖಂಡವನಣ್ಣ ಪಗಿನನಱಿವಂತಿರೆ ಕ |
ರ್ಪುರಮಂ ಬಲ್ಲರೆ ಕುತ್ಸಿತ
ಸುರರಂ ನರರಱಿವ ತೆಱದಿನಱಿವರೆ ಜಿನನಂ ॥ ೨೦೩

[ಅದಱಿಂಸು] ವಸ್ತುವನಱಿವರುಂ ಸುವಸ್ತುವಂ ಕೊಡುವವರುಂ ಕೆಲಂಬರ್; ಕುವಸ್ತುವನಱಿವರುಂ ಕುವಸ್ತುವಂ ಕೊಡುವವರುಂ ಪಲಂ

[1] ಪಿಕ್ಕಿದನಾರ್ಪುದು (ಕ)  [2] ಬಕ್ಕುದಿಯಿಂತಾಳೋಲೆ (ಗ)

ಬಂದೊಡಂ [ಸುವಸ್ತು] ವಸ್ತುಪರೀಕ್ಷಕರಿಂವಲ್ಲದಱಿಯಲ್ಬಾರದು,[1] ಕು ವಸ್ತುವಾದೊಡೆ ಹಲಧರಗೋಪಾಲಾದಿಗಳಱಿತಕ್ಕೊಳಗಾದುದಱಿಂ [2] ಸರ್ವಜ್ಞನುಂ ಸುವಸ್ತುವಪ್ಪುದಱಿಂ ವಸ್ತುಪುರುಷರ್ಗಲ್ಲದಱಿಯಲ್ಬಾರದು

[3] ಪರಮಾರ್ಥಂ ನಿರ್ದೋಷಿಯೆ
ಪರಮೇಶ್ವರನಾತನೆಂದುದಾಗಮಮಂತಾ ।
ಪರಮಾಗಮದರ್ಥಂ ವಿ
ಸ್ತರದಿಂದಂ ತತ್ವಮೆಂಬ ನಂಬುಗೆಯೆ ವಲಂ ॥ ೧೦೫

ಸಮ್ಯಕ್ತ್ವಮಾಸಮ್ಯಕ್ತ್ವಮೇಗೆಯ್ದುಂ ದೊರೆಕೊಳ್ಳದದು ಪುಣ್ಯದಿಂ ದೊರೆಕೊಂಡುದಪ್ಪೊಡನಂತಸುಖದೊಳ್ಕೂಡುಗುಮೆಂದು ಮಣಿಗ್ವಂಶಲಲಾಮಂ ಪೇೞೆ, ವಸುಭೂತಿ [ಕೇಳ್ದು] ತಾಗಿ ಬಾಗಿದನಂತೆ [ಮುನ್ನಿನ] ದರ್ಪಂಗೆಟ್ಟು ಕದಡಿ ತಿಳಿದ ನೀರಂತೆ [ಮನದೊಳ್] ನಿರ್ಮಳನಾಗಿ ಸಮ್ಯಗ್ದರ್ಶನಂ ದೊರೆಕೊಂಡುದಕ್ಕೆ [4] [ಮನದೊಳಾನಂದಂಬೆತ್ತು ಸಮ್ಯಕ್ತ್ವಚೂಡಾಮಣಿಯುಂ ನಾನಾವಿಧದಿಂ ಪೊಗೞ್ದು] ದರ್ಶನದೊಳ್ ದೃಢನಾಗಿರ್ದನನ್ನೆಗಮಿಕ್ಷ್ವಾನ್ವಯಪವಿತ್ರಂ ಮೞಿದಿವಸಂ ಬೀಡನೆತ್ತಿ ಕತಿಪಯಪಯಣಂಬೋಗಿ ನಂದ್ಯಾವಲಿಯೆಂಬ ಪೇರಡವಿಯೊಳ್ ಬೀಡಂ ಬಿಡುವ್ರದುಂ, ೧೦೬

ನೆರೆದು ವನಚರರುಮೊರ್ಮೆಯೆ
ಭರವಶದಿಂ ತಾಗೆ ಸೆಟ್ಟ ಪಿರಿದಪ್ಪ ಬಲಂ ।
ಬೆರಸಿದಿರನದಿರದಣ್ಮಿಂ
ಕರಿಯೊಡ್ಡಂ ಸಿಂಹದೊಡ್ಡು ತಾಗುವ ತೆಱದಿಂ ॥ ೧೦೭

---

1 ಪರೀಕ್ಷೆಯಿಂದಲ್ಲದರಿಯಲ್ 2 ಕುವಸ್ತುಗಳ್ಗೋಪಾದಿಅರತಕ್ಕೊಳಗಾಗ್ದವು (ಗ) 3 ಅದಱಿಂನಿರ್ದೋಷಿಯೆ ದೇವನಾತನೆಂದುದಾಗಮಂ ಆ ಪರಮಾಗಮದರ್ಥಮೆ ತತ್ವಮೆಂದು ನಂಬುವುದುಂ ಸಮ್ಯಕ್ತ್ವಂ. (ಗ)

4 ದರ್ಶನರತ್ನಂ ದೊರೆಕೊಂಡುದಕ್ಕೆ. (ಕ)

ತಾಗಿ ಕಿಚ್ಚುಂ ಕಿಡಿಯುಮಾಗಿ ಕಾದುತ್ತುಮಿರೆ]
[1] ದೂರದೊಳಿರ್ದ ವಸುಭೂತಿಯುಂ, ೧೦೮

ಅಂಬರಿಗುಮಾಯುತಪ್ಪಿದೊ
ಡೆಂಬೀ ನಾಣ್ಣುಡಿಯನಲ್ಲಿ ಪುಸಿಮಾಡದೆ ಕಾ ।
ರಂಬೊಂದು ಬಂದು ನಡೆ ನೋ
ವಿಂ ಬಿದ್ದಂ ಸಾವ ಪೊತ್ತನಾವಂ ಬಲ್ಲಂ ॥ ೧೦೯

[ಅಂತು ಬೀಱುವುದುಮತ್ತಮುಬ್ಬಿರ್ದ ಬೇಡರ ಗರ್ವದಗುರ್ವಂ ಕೆಡಿಸಿ ಕಾಳಗಮಂ ಗೆಲ್ದು ಬೀಡಂ ಪೊಕ್ಕು ನೊಂದಿರ್ದ ವಸುಭೂತಿಯುಂ ಕಂಡು ಧರ್ಮಪಕ್ಷಪಾತದಿಂಗೇಱು ಪಿರಿದಪ್ಪುದಱಿಂ] [2] ಸನ್ಯಸನಮಂ ಕೊಟ್ಟು ಪಂಚನಮಸ್ಕಾರಮಂ ಪೇೞುತ್ತಿರ್ಪುದುಂ, [ಮತ್ತೆನಿಸದೆ ತನಗೆ ಜಿನನೆ ದೈವಮೆಂಬ] [3] ಭಾವನೆಯಿಂ ವಸುಭೂತಿ [ದಯಾಮೂಲ ಮಪ್ಪ ಧರ್ಮಮಂ ನೆನೆಯುತ್ತೆ ಮುಡಿಪಿ ದರ್ಶನಫಲದಿಂ ಸೌಧರ್ಮ ಕಲ್ಪದೊಳ್ ಮಣಿಪ್ರಭಾವಿಮಾನದೊಳ್ ಮಣಿಕುಂಡಲನೆಂಬ ದೇವ [4] ನಾಗಿ [ ಪುಟ್ಟುವುದುಂ, ೧೧೦

ಇದು ನಿನ್ನಿರ್ಪ ಮಹಾಪ್ರಭೋರ್ಜಿತವಿಮಾನಂ ನೂತ್ನಲಾವಣ್ಯದಿಂ
ದೊದವಿರ್ದೀ ದಿವಿಜಾಂಗನಾಸಮಿತಿ ಪೆಂಪಿಂ ನಿನ್ನ ಕಾಂತಾಜನಂ ।
ಮುದದಿಂದೀ ವಿಬುಧಾಳಿ ನಿನ್ನ ಪರಿವಾರಂ ದೇವ ಕೈಕೊಂಡು ಕಾ
ವುದು ನೀನೆಂದು ಸುರಾಳಿ ಬಿನ್ನವಿಸೆ ತದ್ದೇವಂ ಮಹಾಚಿೋದ್ಯದಿಂ॥ ೧೧೧

ಆನಾರೀಲೋಕಮಾವುದೀ ಕೇಳಿಸುತ್ತಿರ್ದ ಪರಿಜನಮಾರೆಂದು ಕುಱುಂಬನರಸುಗಂಡಂತೆ ನೋಡುತ್ತುಮಿರ್ಪನ್ನೆಗಂ ಭವಪ್ರತ್ಯಯ

---

1 ರಾಗಿಸಿ ವಾತ್ಸಲ್ಯರತ್ನಾಕರನಂ ಪಲವು ತೆರದಿಂ ಪೊಗಳ್ದು ಸಮ್ಯಕ್ತ್ವದೊಳ್ ಧೃಢನಾಗಿರ್ದನನ್ನೆಗಂ ಸೆಟ್ಟಿ ಮರುದಿವಸಂ ಬೀಡನೆತ್ತಿಸಿ ನಂದ್ಯಾವಲಿಯೆಂಬ ಅಡವಿಯೊಳ್ ಬಿಡುವುದುಂ ಬೇಡರ್ ಬೀಡಂ ಪತ್ತಿ ಕಾವುತ್ತಿರ್ಪಲ್ಲಿ (ಗ)

2 ಸೆಟ್ಟಿ ಬೇಡರೊಕ್ಕಲಂ ಗೆಲ್ದು ಬಂದು ನೊಂದಿರ್ದ ವಸುಭೂತಿಗೆ ಧರ್ಮವಾತ್ಸಲ್ಯದಿಂ. (ಗ) 3 ಶುಭಭಾವನೆ. (ಗ) 4 ಸಾಮಾನಿಕದೇವ. (ಗ).

ಜ್ಞಾನಂ ಪುಟ್ಟೆ ತಜ್ಞಾನದಿಂ ಪೆಱಗಣ] [1] ಭವಮನಱಿದು ಬೆಱಗಾಗಿ, ೨೧೨

ಆನೆತ್ತ ದೇವಲೋಕದ
ನೂನಸುಖಾಸ್ಪದಮಿದೆತ್ತ ಬಗೆವೊಡಿದೆಲ್ಲಂ ।
ಮೂನಿತದರ್ಶನದಿಂದಂ
ತಾನಾದುದು ಭಾಪು ದರ್ಶನಂ ಕೇವಳಮೇ ॥ ೨೧೩

ಪುಸಿದೆನ್ನಂ ಪೊನ್ನಿಂ ಬಂ
ಚಿಸಿ [2] ವೈಶ್ಯನುಪಾಯದಿಂದೆ ದರ್ಶನಮಂ ಬ ।
ಣ್ಣಿಸೆ ನಂಬಿ ದೇವನಾದೆಂ
ವಸುಧೆಗೆ ಸಮ್ಯಕ್ತ್ವಮುಳ್ಳ ಮನುಜನೆ ದೇವಂ ॥ ೨೧೪

ಆವಾವುಪಾಯದಿಂದಂ
ಜೀವಕ್ಕೋರಂತೆ ಧರ್ಮಮಂ ಪೇೞ್ದು ಸುಖ ।
ಕ್ಕಾವಗಮಯ್ದಿ ಪರದಱಿಂ
ಶ್ರಾವಕರಿಂ ರುಷಿಯರಿಂ ಕೃತಾರ್ಥರುಮೊಳರೇ ॥ ೨೧೫

ಎಂದು ಮಹಾವಿಭೂತಿಯಿಂ [ ವಸುಭೂತಿಚರಾಮರಂ ] ಬಂದು ದಯಾಮಿತ್ರಸೆಟ್ಟಿಗೆ ಪೊಡೆಮಟ್ಟು ನಿನ್ನ ಪ್ರಸಾದದಿಂದಾಂ ದೇವನಾದೆನೆಂದು ತನ್ನ ಮಹಿಮೆಯಂ ತೋಱಿ ದೇವಲೋಕಕ್ಕೆ ಪೋಗಿ [ ಷೋಡಶಕಲ್ಪಂಗಳ ನಂದೀಶ್ವರದ್ವೀಪದ ಮೇರುಗಿರಿಯ ಜ್ಯೋತಿರ್ಲೋಕದ ವ್ಯಂತರಲೋಕದ ಭವನಲೋಕದ ಮಣಿಕನಕಮಯಮಪ್ಪಕೃತ್ರಿಮಚೈತ್ಯಾಲಯಂಗಳಂ ದರ್ಶನವಿಶುದ್ಧಿಯಿಂದಿಂದ್ರಾದಿಪಂಚಕದೊಳ್ಪುಟ್ಟುವ ದೇವರುಮಂ ಕಂಡು ಬಲ್ಲಿತ್ತಂ ಕರ್ಬೊನ್ನೊಳ್ [3] ಕಟ್ಟಿಸಿದಂತೆ ಸಮ್ಯಕ್ತ್ವದೊಳ್ ದೃಢನಾಗಿ, ] ೨೧೬

ಎಲ್ಲಿ ಜಿನಭವನಮೊಳವಂ
ತಲ್ಲಿಯೆ ಮನದೆಱಕದೋಲಗಂ ಮುದದಿಂ ಮ ।

---

1 ಭವಪ್ರತ್ಯಯಜ್ಞಾನದಿಂ ಮುನ್ನಿನ. (ಗ)
2 ನಂಬಿಸಿ. (ಗ) 3 ಕಬ್ಬುನದೊಳ್ (ಕ) ಕರ್ಬೊಂನದೊಳ್ (ಬ)

ತ್ತಲ್ಲಿಯೆ ಭೋಗಂ ನೆಲೆಯುಮ
ದಲ್ಲಿಯೆ ರಾಗಂ [1] ಸುರಾಧಿಪಂಗತಿಶಯದಿಂ ॥ ೧೧೭

ಅಂತು ದೇವಲೋಕದ ಸುಖಮನೊಂದು [2] ಸಾಗರೋಪಮಕಾಲಮನನುಭವಿಸಿ ಬಂದಿಲ್ಲಿ ನಿನಗಂ ನಿನ್ನಗ್ರಮಹಿಷಿಗಂ ನಂದಶ್ರೀಗಮಭಯಕುಮಾರನಾಗಿ ಪುಟ್ಟಿ [ ವನಧಿಯಂತೆ ಗಂಭೀರನುಂ, ದಿನಕರನಂತೆ ತೇಜಸ್ವಿಯುಂ, ಚಂದ್ರನಂತೆ ಸೌಮ್ಯನುಂ, ಮನೋಜನಂತೆ ಸುಭಗನುಂ, ಸಕಲಶಾಸ್ತ್ರಪ್ರವೀಣನುಂ, ಜಾಣನುಮಾಗಿ, ] [3] ಪ್ರತ್ಯಕ್ಷಮಿದರ್ಪಂ; ವಿನೀತನುಂ ಮಹಾಮಂಡಲಿಕರ್ ತಪಂಬಡುವರೆಂಬಾದೇಶಮಂ ಕೇಳ್ದು ತಪಂಬಟ್ಟು ಮುಡಿಪಿ ಸರ್ವಾರ್ಥಸಿದ್ಧಿಯೊಳ್ಪುಟ್ಟುವನೆಂದು ಗಣಧರಸ್ವಾಮಿಗಳ್ಪೇೞ್ದುದುಂ, ದರ್ಶನದೊಳಾದ [4] ಪ್ರತ್ಯಕ್ಷಫಲಮಂ ಕಂಡು ನಂಬಿ, ೧೧೮

ಪಿರಿದುಂ ಸಂತೋಷದಿಂದಂ ತನಗೆ ಸಕಲಸಾಮ್ರಾಜ್ಯಮುಂ ಕೈಗೆವಂದಂತಿರೆ ಪೆರ್ಚಿರ್ದೊಂದು ಮುಯ್ಯಿಲ್ಲದೆ ನಲಿದನನಂಗಾಂತಕಂ ಶೀಲರತ್ನಾ

1 ತಲ್ಲಿಯೆನೆಲೆಯುಲ್ಲಿಯೆಪಡೆಪಲ್ಲಿಯೆರಾಗಂ (ಕ)

2 ನೆರಡುಸಾಗರೋಪಮ(ಕ)

3 ಸುಖಮನನುಭವಿಸುತ್ತಮಿರ್ದನಿರೆ,

ನಿನಗಂ ಪರಿಗ್ರಹಕ್ಕಂ
ಜನನಿಗಮುರ್ವೀತಳಕ್ಕಮಭಯನೊಳಾದಂ ।
ದನವರತಂ ಸ್ನೇಹಂ ನೆ
ಟ್ಟನೆ ಪಿರಿದಾಗಿಕ್ಕುಮಿವನ ಪುಣ್ಯೋದಯದಿಂ ॥

ಈತನ ಗರ್ಭದೊಳ್ ನಂದನಶ್ರೀಗಮಭಯಘೋಷಣೆಯುಮಾಳ್ಪ ಬಯಕೆ ತಿಣ್ಣಮಾದೊಡೆ, ನೀನದಂ ತೀರ್ಚಿದಂ ಬಳಿಕ ಪೆತ್ತಳ್. ಆತಂ ದಯಾಮೂರ್ತಿಯಪ್ಪುದಱಿಂದಭಯಕುಮಾರನೆಂದು ಪೆಸರನಿಟ್ಟೊಡೀತನುಂ ಮಹಾಮಂಡಳಿಕನುಂ ತಪಂ...... (ಕ)

4 ಮುನೀಂದ್ರೋಕ್ತಮಂ ಪೇಳೆ ಕೇಳ್ದು ಸಮ್ಯಕ್ತ್ವದೊಳಾದ (ಗ)

ಭರಣಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಿನೀರಾಜಹಂಸಂ ॥೧೧೯

ಇದು ನಿಖಿಳದಿವಿಜಪರಿವೃಢಮಕುಟತಟಘಟಿತಮಣಿಗಣನಿಕರವಿಲುಳಿತಕಿರಣ
ಚುಂಬಿನೀಯಪರಮಜಿನಚರಣಯುಗಳಸರಸೀರುಹಮತ್ತಮಧುಕರ
ನಿರುಪಮಸಹಜಕವಿಜನಪಯಃಪಯೋಧಿಹಿಮಕರನುತಭಾವ
ಯುತದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನವ್ಯಾವರ್ಣನಂ 1
ಪ್ರಥಮಾಶ್ವಾಸಂ.

---

1 ದರ್ಶನಾಂಗವ್ಯಾವರ್ಣನಂ (ಗ)

# ದ್ವಿತೀಯಾಶ್ವಾಸಂ

---

ಶ್ರೀಗಿದು ಮುಕುರಂ ಮುಕ್ತಿ
ಶ್ರೀಗಿದು ಲಾವಣ್ಯಮೆಸೆವ ದರ್ಶನರತ್ನಂ ।
ಬೇಗಂ ದೊರೆಕೊಳೆ ಪಿರಿದುಂ
ರಾಗಿಸಿದಂ ಸುಕವಿನಿಕರಪಿಕಮಾಕಂದಂ ॥ ೧

ಅಂತನರ್ಘ್ಯಮೆಪ್ಪ ದರ್ಶನರತ್ನಮಂ ಸಂಶಯಚೋರರ್ ಪುಗದಂತು ನಂಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ, ೨

[ ಮಗಧಾವನೀಶ್ವರಂ ಕೈ
ಮುಗಿದುತ್ಸವದಿಂ ಮುನೀಂದ್ರವಂದ್ಯಕ್ರಮರಂ ।
ಜಗತೀಮಂಡನರಂ ಮಿ
ಕ್ಕಗಣಿತಗುಣಗಣರನರ್ತಿಯಿಂ ಗೌತಮರಂ ॥ ] ೩

ಮುಂದಣ ನಿಶ್ಶಂಕೆಯ ಕಥೆಯಂ ಬೆಸಗೊಳ್ವುದುಂ ಇಂತೆಂದು ಪೇೞ್ದರ್ [1] :—

ಅವೞ್ವತ್ತರಂತೆ ಕಾಡಿಗೆಯೆಚ್ಚುವರಂತೆ ಅಂದುಗೆಯಿಡುವರಂತೆ ಬತ್ತಂಗಟ್ಟುವರಂತೆ ಕುದುರೆಯೇಱುವರಂತೆ ಮದುವೆಯ ಮನೆಯಂತೆ ಮೀಸೆಯಂ ತಿದ್ದುವರಂತೆ ಪೊಱಜಿಗಟ್ಟುವರಂತೆ ಉಳುವರಂತೆ ಬಂಡಿ ಹೂಡುವರಂತೆ ತೋರಣಂಗಟ್ಟುವರಂತೆ ಬಾಗಿಲ್ಕಾಪುವರಂತೆ ಸುರಿಗಿ

---

1 ನಿಶ್ಶಂಕೆಯ ಕಥೆಯನೆನಗೆ ತಿಳಿವಂತಾಗೆ ಬೆಸಸಿಮೆಂಬುದುಂ ಸುಗತಿವಿಳಾಸಿನಿಯ ವಿಳಾಸದ ಪ್ರಾಂತ (?) ಮೆನಿಸುವ ನಿಶ್ಶಂಕೆಯ ಕಥೆಯನಿಂತೆಂದು ಪೇೞ್ದರ್. (ಕ)

ಚಳನುತಿ ಬಿಡಗಾರುಮನೊ
ಬ್ಬಳತವ್ರಡಿಂಗಾಗದಂತು [1] ಬಯ್ವಂ ಪೊಯ್ವಂ ॥ ೧೬

[ಕಂಡವರೆದೆ ನಡುಗಲ್ತಾಂ
ಮಿಂಡುಗಳಂ ಪಿಡಿದು ನಾಯುಮಂ ಪಂದಿಯುಮಂ ।
ಮಿಂಡರುಮಂ ಪೆಂಡಿರುಮಂ
ಗುಂಡೆಲ್ಲಂ ನೆರೆದು ನೋಡೆ ಕಾದಿಸುತಿರ್ಪಂ ॥] ೧೭

ಪುರದೊಳಗುಂ ಸೂಳೆಯರೆ
ಲ್ಲರುಮಂ ಪಿಡಿದೆಳೆದು ತರಿಸಿ ರುಕ್ಮಿಯ ಮುಂದಾ ।
ದರದಿಂದಿರುಳೆಲ್ಲಂ ಜಾ
ಗರಮಿರಿಸುವನವನ ಸೊರ್ಕನಿನ್ನೇವೇಳ್ವೆಂ ॥ ೧೮

[ಮತ್ತಮುಂರ್ಕಂದಕ್ಕಂದಳವಾಯ್ದ ಶ್ವಾನಮಂ ಮಿಂಡುಗಳಂ ನೆರೆದು ಪಿಡಿದು,] ೧೯

ತಿರಿದುಂಬ ತಿರಿಕರಂ ನಿ
ಷ್ಕರುಣದಿನಾರಿಯುಟ್ಟ ಪಿಡಿದು ಸುಂಕಮನಿಕ್ಕಂ ।
ದರವರಿಸದೆ ಕಾಡುವನು
ರ್ವರೆಯುಗಿವಿನಮೂರೊ ಬಗೆವೊಡವನವ್ರೊಲಿಳಯೊಳ್ ॥ ೨೦

[ಮತ್ತಂ ಮಂತ್ರವಾದಿಯುಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯಂ ಪೊಕ್ಕು, ೨೧

ಕೊಡದೆಣ್ಣೆಯೆಲ್ಲಮಂ ಕೂ
ಗಿಡೆ ದೂರ್ತಿಂ ಸೂಱೆಗೊಂಡು ಬಂದು ನಿತಾಂತಂ ।
ಸೊಡರಂ ಯಕ್ಷಿಯ ಮನೆಯೊಳ್
ತಡೆಯದೆ ಪೊತ್ತಿಸುವನೆಯ್ದೆ ಬಳಗಪ್ಪಿನೆಗಂ ॥ ೨೨

[1] ಬಬ್ಬಳಸಾವೆಗ ಪೋಗದಂತು (ಬ.ಕ.)

ಮತ್ತಂ ಕಾಗೆಯುಂ ಕಂಡ ಕೋಗಿಲೆಯುಂತೆ ಮಾಲೆಗಾಱರ್ಕೆರ್ ದೆಸೆಗೆಟ್ಟು ಪರಿಯೆ ಪೂವಿನ ಸಂತೆಯುಂ ಪೊಕ್ಕು, ೬೩

ಸುರಗಿ ಮಲ್ಲಿಗೆ ಜಾಜಿ ಸಂಪಗೆ ಮೊಲ್ಲೆ ಕೇದಗೆ ಸಂದ ಪಾ
ದರಿಯ ಪೂಗಳನಾವಗಂ ನಱು ಸೂಱೆಗೊಂಡ ತಿಪರ್ಪದಿಂ
ದರದೆ ತನ್ನೊಡನಿರ್ದ ಧೂರ್ತಜನಾಳಿಯುಂ ಸಲೆ ತಾನುಮೊ
ಪ್ಪಿರೆ ತುಱುಂಬಿ ವಿನೋದದಿಂ ನಗುವರ್ಕರುಳ್ಪುಱಿವಸ್ನಗಂ ॥ ೬೪

ಮತ್ತಂ ಪುಲಿಯುಂ ಕಂಡ ಪುಲ್ಲೆಯ ಪಿಂಡಿನಂತೆ ಕಂಚುಗಾಱರ್ಭಯದಿಂ ಮನೆಯುಂ ಬಿಟ್ಟು ಪೋಗೆ ಕಂಚುಗಾಱಗೇರಿಯುಂ ಪೊಕ್ಕು, ೬೫

ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲ
ಗ್ಗಳದ ಕೈಮಳ ತಾಳಮೊಪ್ಪುವ ಗಿಣ್ಣಲಂಬಿವನಾವಗಂ ।
ಕಳದುಕೊಂಡೊಡನಿರ್ದ ಧೂರ್ತಜನಕ್ಕೆ ಜೀವಿತಮೆಂದು ತ
ನ್ನೊಳೆ ವಿಚಾರಿಸಿ ನಿಚ್ಚಲುಂ ಕುಡುವಂ ನೃಪಾತ್ಮಜನರ್ತಿಯಿಂ ॥ ೬೬

ಮತ್ತಂ ಸಿಂಹಮುಂ ಕಂಡ ಕಱಿಘಟೆಯಂತೆ ಕಂಡರ್ಬೆಗಡುಗೊಂಡು ನಿಂದ ನೆಲೆಯುಂ ಬಿಟ್ಟೋಡೆ ಪಸ್ಕರುಣಾಡುಂ ಬಂಕೊಂಡು, ೬೭

ಕಳ್ಳಸಿಗಗೇರಿಯೊಳಗಣ
ಕಳ್ಳಲ್ಲಮನೆಪ್ಪದು ತರಿಸಿ ಪೊಸಗಣ ಬನದೊಳ್ ।
ಕಳ್ಳರ್ಗಂ ಧೂರ್ತರ್ಗಂ
ಭಿಲ್ಲರ್ಗಂ ಸೂಱೆಗೊಡುವನಿದುವ ವಿನೋದಂ ॥ ೬೮

ಮತ್ತಂ ಬಗೆವಂದ ಗೊಡ್ಡಾಟಮನಾಡಲೆಂದು ದುರ್ಜನಪರಿವೃತನಾಗಿ, ] ೬೯

ವರಭೂಷಣಮುಂ ತೊಟ್ಟಿರ
ನರವಿಗೆ ಲೇಸಾಗಿ ತೊಡಿಸುವಂ ದಿವ್ಯಸ್ತ್ರೀ ।
ಯುರನಟ್ಟಿ ಪಿಡಿದು ನೀರಂ
ತರಿಸುವನೂರಂತ ದೂರ್ತಿನಿಂ ಲಲಿತಾಂಗಂ ॥ ೭೦

[ಎಸೆವ ಕೊಳಂಗಳೊಳಂ ರಂ
ಜಿಸುವ ಮಹೋದ್ಯಾನರಮ್ಯವನಗಳೊಳಂ ಶೋ |
ಭಿಸಿ ಪುರದ ಸೂಳೆಯರ್ವೆರ
ಸಸಹಾಯುಂ ಮನಕೆ ಬಂದವೋಲ್ ಕ್ರೀಡಿಸುವಂ || ೩೧

ಮತ್ತಮಾತಂಗೆ ಧೂರ್ತವಿನೋದಮೆ ವಿನೋದಮಪ್ಪುದಱಿಂ ದುರ್ಜನಪರಿವೃತನಾಗಿ ಬಂದಂಗಡಿಯುಂ ಪುಗೆ ತೋಳನಂ ಕಂಡ ಕುಱಿ ವಿಂಡಿನಂತೆ ಪರರ್ ಪಱದುವೋಗೆ, ೩೨

ದೂಸಿಗರಂಗಡಿಯಂ ಪೊ
ಕ್ಕಾಸುರಮಾಗೊದಱಿ ಪಿಡಿದು ವಿಂಡುಂ ತಾನುಂ |
ಲೇಸಪ್ಪ ವಸ್ತ್ರನಿಕರಮ
ನೋಸರಿಸದೆ ಸೂಱೆಗೊಂಡು ಜಾಗಂಗೆಯ್ವಂ || ೩೩

ತಾನುಣ್ಬುದ ಪೆಱರ್ಗಿಕ್ಕದ
ಪೇನಿಯು ಪಚ್ಚಡಿಕೆಯೆನಿಪ ಲೋಭಿಯ ಪೊನ್ನಂ |
ತಾನೊಂದುಮುಱೆಯದಂತಿರೆ
ಹೀನಗುಣಂ ಕವರ್ದುಕೊಂಡು ಜಾಗಂಗೆಯ್ವಂ || ೩೪

ಮತ್ತಂ ಮಣಿಗಾಱರ ಪಸರಮಂ ಪೊಕ್ಕು ಓಡಲಿಂಬಿಲ್ಲದೆ ಕೈಗಳಂ ಮುಗಿದು ನಿಂದಿರ್ದವರಂ ಲೆಕ್ಕಿಸದೆ, ೩೫

ತಕ್ಕಿನ ಪವಳದ ಸಂಕೆಯು
ಟಿಕ್ಕೆಯು ಮಣಿಗಳನನೇಕಮಂ ಕೊಂಡವನುಂ |
ಡೊಕ್ಕರಿಸದೆ ಕರುಣಿಸಿದಯು
ಶಕ್ಕಂದದೆ ಸೂಱೆಗೊಳ್ವನವನುತ್ಸವದಿಂ || ೩೬

ಮಸಗಿದನಿತುಂ ವಿಂಡುಂ ತಾನುಂ ಭಯಂಕರಮಾಗೆ ಬಂ
ದಸಗವೊಳೆಯಂ ಪೊಕ್ಕೊಳ್ವೊಸೆಂದು ಕೂಗಿಡುವನ್ನೆಗಂ |
ಕುಸಿಯುವದಟಿಂ ವಸ್ತ್ರವ್ರಾತಂಗಳಂ ನೆಱೆ ಕೊಂಡು ಸಂ
ಕಿಸದೆ ತುಡುವಂ ತನ್ನಂ ಸುತ್ತಿರ್ದ ಧೂರ್ತಜನಕ್ಕವಂ || ೩೭

ಸ್ಮರತಾಪಂ ಪೆಱಪಿಂಗೆ ಸೂಳೆಯರೊಳಂಗಂವೊಂದಿ ಕೂಡಿರ್ದ ಗಂ
ಡರನಾಟಂದಲೆದಟ್ಟಿ ಪೊಯ್ದು ಕಳದೋರ್ಪಂದಾಂತೊಡಂ ತೂಳ್ದಿ ನಿ
ಷ್ಠುರಕೋಪಂ ಪಿಡಿದೊತ್ತಿ ಸೂಳೆಯರೊಳಗ್ರಾಟೋಪದಿಂ ಬಲ್ಮೆಯಿಂ
ನೆರೆವಂ ಭೂಭುಜನಂದನಂ ಪಿರಿವರುಳ್ಳಳ್ಕಿರ್ಪಿನಂ ದರ್ಪದಿಂ ॥ ೩೮

ಮತ್ತಂ ಮೆಸಗಿರ್ದ ಸಿಂಗದಂತೆ ಮಿಂಡುಗಳ್ ತಂಡತಂಡದಿಂ ಸುತ್ತಿ ಮುತ್ತಿ ಬರೆ ಬಂದವರೊಳ್ ಕಂಡು ನಿಂದಿದ ನಿಂದಿರ್ದಲ್ಲಿಯೆ ಕುಳ್ಳಿರ್ದರ್ ಕುಳ್ಳಿರ್ದಲ್ಲಿಯೆ ಕಂಪಿತರಾತೆ ಬೆಟ್ಟೋಡದಿರೆ ಸೂಳಗೇರಿಯುಂ ಪೊಕ್ಕು, ೩೯

ಸೂಳೆಯರೊಲ್ವ ಬೋಜುಂಗರ
ನಾಳಾಪದಿನಟ್ಟಿ ಕಳವೆನಬ್ಜಾನನೆಯರ್ ।
ಕೇಳೂಲ್ಲವ ವಿಟರಂ ಕಡು
ಲೀಲೆಯಿನವರೊಡನೆ ನರೆಸುವಂ ದೂತಿಗಂದಂ ॥ ] ೪೦

ಈ ಕೇರಿಯ ಬಲವಣ್ಣಳ
ನಾಕೇರಿಯುವಂದಿರೊಡನೆ ಕೂಡುವೆನಿರದಂ ।
ತಾಕೇರಿಯ ಬಲೆವಣ್ಗಳ
ನೀಕೇರಿಯುವಂದಿರೊಡನೆ ಕೂಡುವನದಟಿಂ ॥ ೪೧

[ಕರಮೊಱೆಯುಟ್ಟಿ ದುಷ್ಟವಿಟಸಂಕುಲಮಂ ಪಿಡಿದೋರ್ವರಿಂದವೊ
ರ್ವರ ತಲೆಯಂ ಕಱುತ್ತರಿಸುತುಂ ಛಲದಿಂದಿರದೋರ್ವರಿಂದವೊ ।
ರ್ವರನಿಱಿಸುತ್ತೆ ತೂಕಿಱಿದು ಬೊಬ್ಬಿಱಿದಾಡುವನೋರ್ವರಿಂದವೊ
ರ್ವರನಱಿಯಟ್ಟಿ ಮೋದಿಸುತುಮೀತೆಱಸಿಂ ನಗುತಿರ್ಪನಾವಗಂ ॥ ೪೨

ಅಂತುರ್ಕಿ ಸೊರ್ಕಿಂದಕ್ಕಂದಲೆವಾಯ್ದು ದೂತಿಗಂ ಕಣ್ಗಾಣದೆ ಸೂಳಗೇರಿಯುಂ ಪೊಕ್ಕು ತಾಂ ಮೊಬ್ಬುಬ್ಬರಕ್ಕೆ ಅಬ್ಬರಂ ಪಿರಿದಾಗೆ ಕಡೆಯ ಮನೆಯ ಕುಂಟಣಿಯೊರ್ವಳ್ ಸಜ್ಜೆವನೆಯುಂ ಪೊಕ್ಕು, ೪೩

ತಡೆಯದೆ ಮೊಗಳೆಂದಳಿಯನ
ನಡುವಂ ತಳ್ಕೈಸಿ ಕೊಂಡು ಹಿತ್ತಲ ದೆಸೆಯೊಳ್।

ಯ್ಯಿಟ್ಟು ಲಲಿತಾಂಗನಿಱಿದಂ
ಕೆಟ್ಟನೆನುತ್ತೋಡುವಾತನಂ ಮತ್ತೊರ್ವಂ [1] ॥ ೫೬

ತಾಂ ಕಂಡು ದಿಟವೆಂದೆ ಬಗೆದು ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕುಗೊಂಬಾತನ ತುಱುಂಬಂ ಪಿಡಿದು ತಡೆಯೆ ಪೆಱಗಂ ನೋಡಲಣ್ಮದೆ, ೫೭

ಬಿಡು ನಿನ್ನ ಧರ್ಮವಿನ್ನಿಂ [2]
ನುಡಿಯೆಂ ಮತ್ತೆಂಟುಮಕ್ಕಳೊಳವೆನಗಾಂ ಸ ।
ತ್ತೊಡೆ ಪೆಱಗೀ ವೃಂದಮನ
ಪ್ಪೊಡೆ ಪೊರೆವರಿಲ್ಲವಾಂ ದೇಸಿಗನಂ ॥ ೫೮

ಅಂತುರಿಯುತ್ತುಮಿರ್ದ ಲಲಿತಾಂಗನ ಪೊಲ್ಲಮೆಯುಂ ಕಂಡು ಬುದ್ಧಿವಂತರಿಂತೆಂದರ್ :— ೫೯

ಅರಸನ ಮಗನುರ್ಕಿಂದು
ವರೆಯುರಿವೊಡಮಾನೆ ಸೂರ್ಕಿ ಕೊಲ್ವೊಡೆ ಕಿಚ್ಚ ।
ಚ್ಚರಿಯಾಗಿ ತಾಪೆ ಸುಡುವೊಡೆ
ಕರಮವನಡ್ಡೈಸಿ ತಾಗಿ ಮಾಕೊರ್ಳ್ವವರಾರ್ ॥ ೬೦

ಮತ್ತಂ ಕೆಲಂಬರ್ ವಿವೇಕಿಗಳಿಂತೆಂದರ್ :— ೬೧

ಸುತನೆಂದು ನೃಪಂ ಕ್ಷಿತಿ
ಪತಿ ತುಪ್ಪದ ಕೊಡನ ಮೇಗಣಿಲಿಯಾತಂ ಗ ।
ರ್ವಿತನಾದನೆಂದೊಡವನು
ದ್ಧತಿಯಿಂದೀ ಮಹಿಯೊಳಂಜದಿರ್ಪವನಾವಂ ॥ ೬೨

ಎಂದಿಂತು] [3] ಪೊಱಲೆಲ್ಲಮುಮಲ್ಲೋಲಕಲ್ಲೋಲಮಾಗೆ ಕನಸಿನೊಳಂ ಲಲಿತಾಂಗನ ಭಯಮನು ತಿಣ್ಣಮಾಗೆ, ಬೆಗಡುಗೊಂಡೆರಡು

---

[1] ಮಾತನಂನೆರಯಿಸಗಂ (ಕ) [2] ಧರ್ಮಫಲಮಂ (ಕ)
[3] ಅಂತುಲಲಿತಾಂಗಂ ಮಾಡುವದೂತರ್ಪ ಟಕ್ಕಪೊಳಲೆಲ್ಲಂ. (ಗ)

ಬೆಟ್ಟದ ನಡುವೆ ಪರಿವ ಪೆರ್ದೊಱೆಯಂತೆ ಮೊಗಂ ಬಾಯುಮಂ ಪಿಡಿದೊತ್ತಿದಂತೆ[1] ಕರಮುಮ್ಮಳಿಸಿ ನೆರೆದೆಲ್ಲಮೊಂದಾಗಿ ರಾಜಮಂದಿರದ ಬಾಗಿಲ್ಗೆ ಬಂದು ಪುಯ್ಯಲಿಡುವುದುಮಾ ಪುಯ್ಯಲನೋಲಗದೊಳಿರ್ದರಿ ಮಥನಮಹಾರಾಜಂ ಕೇಳ್ದು ನಿಜರಂ ಕರವೇೞ್ದು ಪುಯ್ಯಲಿದೇನೆಂದು ಬೆಸಗೊಳ್ವುದುಂ ಬಿನ್ನಪಮೆಂದು ಕೈಮುಗಿದವರಿಂತೆಂದರ್ :— ೬೩

ದೇವ ಭವತ್ಪುತ್ರಂ ಕರ
ಮೋವದೆ ಸಂಕಿಸದೆ ಮಿಂಡುವಡೆವರಸವಟಂ ।
ದೋವ್ರೋವೆಂದೆಳಱೆ ಜನಂ
ದಾವಾನಲನಂತೆ ಸುಡುವನಿರುಳುಂ ಪಗಲುಂ ॥ ೬೪

[ ದೇವಾ ಮತ್ತಂ ನಿಮ್ಮಕುಮಾರನಿನಾದ ಪೊೞಲೊಳಗಣ ಮಹಾಭಯಮಂ ಪೇೞ್ವೊಡೆ, ೬೫

ಪೊಱಮಟ್ಟಂ ಲಲಿತಾಂಗನೆಂದೊಡಮವರ್ಬಳ್ಕುತ್ತು ಮಳ್ಕುತ್ತೆ
ಪೊಚ್ಚಱಿಗೆಟ್ಟೋಡುವರಿರ್ವರೊಂದೆಡೆಯೊಳಂ ಮಾತಾಡಲಣ್ಮರ್ವಿಟ
ರ್ನೆಱೆ ಬೆರ್ಚಿಂ ಬೆಲೆವೆಂಡಿರೊಳ್ನುಡಿಯಲಣ್ಮರ್ಭೀತಿಯಿಂ ಬೀರಮಂ
ಮಱೆದುಂ ಪಾಡಿಸಲಣ್ಮರಂಕಮನರ್ಬಿಟ್ಟೋಡಲಣ್ಮರ್ಭಟರ್ ॥ ೬೬

ಮತ್ತಮಾತಂ ಮಾಡುವನಾಚಾರಮಂ ಪೇೞ್ವೊಡೆ ತಂಬುಲಿಗರ ನಂಬಲಿಯುಂ ಮಟ್ಟೆಗಟ್ಟುವರಂತೆ ಕೋಡಗಗಟ್ಟಂಗಟ್ಟಿ ಕಾಡುವಂ ; ಚನ್ನಿಗರಂ ಮನ್ನಿಸಿಮೆಂದು ಬಡಿದು ಬಾಯ್ತೀವೆ ಪುಡಿಯುಂ ಪೊಯ್ಸುವಂ ಸೊಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ ; ಬಿರುದರ್ಗರಿದೆನಿಸುವ ಬಾಧೆಯುಂ ಮಾಡಿಸುವಂ ; ವೀರರ ಪಡಪಂ ಪಾಱಿಸುವಂ ; ಮಿಂಡರನಂಪಲೆದೇಳಿಸುವಂ ; ಬಂಟರಂ ಕೊಂಡಾಡುವರ ಗೆಂಟಲೊಳ್ ನೇಣನಿಕ್ಕಿ ತೆಗೆಯಿಸುವಂ ; ಗಂಡರಂ ಕೊಂಡಾಡುವರ ಮಂಡೆಯನಣೆಸುವಂ ; ಬಲ್ಲರಂ ಕೊಲ್ಲವ ಕೊಲೆಯಿಂ ಬಾಧಿಪನಂತು ಮಲ್ಲದೆಯುಂ, ೬೭

[1] ಬಡೆಯೊತ್ತಿದಂತೆ. (ಗ)

ಮರುಳ ಪಡೆಯಂತೆ ಮಿಂಡ
ರ್ವೆರಸತಿಮುದದಿಂದೆ ಕೇರಿಕೇರಿಗಳೊಳ್ ಕೂ ।
ಗಿಡೆ ಪೆರ್ಚಿ ಸೊರ್ಕಿ ಪುಲ್ಗಳ
ನುರಿಪುತ್ತುಂ ಬಡಿಸುತಿರ್ಪನಿದುವೆ ವಿನೋದಂ ॥ ] ೬೮

ಮತ್ತಂ ಕುಮಾರನ ಭಯಮಂ ಪೇೞ್ವೊಡೆ ಪಾರ್ವರುಮೊಡೆಯರಿಲ್ಲದಂತೆ ನಡುನಡುಗೆ, ಪರದರ್ದಱಿಯಮರದಂತಲ್ಲಾಡೆ, ದೂಸಿಗರ್ದೇಸಿಗರಂತೆ ಭಯಂಗೊಳ, [ ಬಳಗಾಱರಳವುಗೆಟ್ಟ ಕುದುರೆಯಂತೆ ನಿಲೆ, ಕಂಚುಗಾಱರ್ ಮಿಂಚುಗಂಡ ಶಿಶುವಿನಂತಂಜೆ ] ರಾಜಕುಮಾರರ್ ಭೋಜನಂಬಡೆಯದರಂತೆ ಬಡವಾಗೆ, ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ [ಬೆಕ್ಕಸಂ] ಬೆಱಗಾಗೆ, ಬಂಟರ್ ನಂಟರಂಕಂಡ ಬಡವನಂತೊಳಸಾರೆ, ಬಿರುದರ್ ಕುರಿಗಿಕ್ಕಿದ ಕಳ್ಳನಂತೆ ಜರಿಯೆ, ಬೀರರ್ ದಾರಿಗೆಟ್ಟರಂತೆ ಬೆದಱೆ, ಮಿಂಡರ್ ದಂಡಂದೆತ್ತೊಕ್ಕಲಿಗನಂತೆರ್ದೆಗಿಡೆ, ತೆಲ್ಲಿಗರ್ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲವರಿಯೆ, ಸೂಳೆಯರ್ ಗಾಳದ ಮೀನಂತಳವಳಿಯೆ, ಮಣಿಗಾಱರ್ ಗುಣಂಗೆಟ್ಟ ಋಷಿಯಂತೆ ಚಿಂತಿಸೆ, [ ಕುಂಬಾಱರ್ ಸಂಬಳವಿಲ್ಲದ ದುಡಿನಾಳಂತ ಬೆರ್ಚೆ, ಅಸಗರ್ ದೆಸೆಗೆಟ್ಟರಂತೆ ಬಾಯ್ವಿಡೆ, ] ಬೇಡರ್ ಬೀಡಂ ಬಿಟ್ಟೋಡೆ,[1] ಬೆಸದವರ್ ಬಸವಲ್ಲದವರಂತಂಜಿ ಉಳಿಯೆ, ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ, ಬಚ್ಚರ್ ಕಿರ್ಚುಮುಟ್ಟಿದ ತುಪ್ಪದಂತೆ ಬಲ್ಪುಗಿಡೆ, ಜಂತಿಗರ್[2] ಸಂತತಿಗೆಟ್ಟರಂತೞಲೆ, ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ, ಚೊಲ್ಲೆಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ, ಸರ್ವಾಂಗದ್ರೋಹರಂ ಕವರ್ವಂತ ಸರ್ವಸ್ವಾಪಹರಣಂಮಾಡಿ ತನ್ನೊಡನಿರ್ದ ೬೯

ಕಸವಿಂಗಂ ಕಳುಚೆಂಗಂ
ಡಸಿಕಿಂಗಂ ದೂರ್ತವಡೆಗಮತಿಚಪಳರ್ಗಂ ।

---

ಪೊಲೆಯರ್ ಬಲೆಯೊಳ್ತೊಡರ್ದ ಪಕ್ಕಿಯಂತೆ ಮಿಡು ಮಿಡು ಮಿಡುಕೆ, ಮಾದೆಗರ್ ಮೋದುವತ್ತಭಿಮಾನಿಯಂತೆ ಉಮ್ಮಳಿಸೆ (ಗ)

2 ಪಂತವಳೆಯರ್ (ಬ. ಕ.)

ಪುಸಿವರ್ಗಂ ಸಿತಗರ್ಗಂ
ವಸುಧೇಶ್ವರ ಕೇಳ ಕುಡುವನುಕಿರ್ಗ ಕುಮಾರಂ ॥ ೭೦

ಮತ್ತಂ ಮನೆಮಾಡುವವರಂತೆ ಮುಂದಿರ್ದೆಲ್ಲರುಮಂ ಕವರೆನುತ್ತುಂ, ಪಯಣಂಬೋಪರಸಿಯಂತೆ [ಕಂತಕಂತರಂ ತೂಳ್ದಟ್ಟಿ] ಪಿಡಿಯೆನುತ್ತುಂ, ಸಾಲಂಗೊಟ್ಟವರಂತೆ ಕಾಡಿ ಪೊಡೆಯೆನುತ್ತುಂ, ಬಡಗಿಯಂತುಳಿಯೆನುತ್ತುಂ, [1] ಸಾಲಿಗನಂತೇಟಿನುತ್ತುಂ, ಕಳ್ಳನಂತೆ ಕೊಳ್ಳೆನುತ್ತುಂ, ರಸವಾದಿಯಂತೆ ಕೊಲ್ಲೆನುತ್ತುಂ, ಕುತ್ತಂಗುಳಿಯಾಟದಂತೆ ಕಟ್ಟೆನುತ್ತುಂ, ಕೋಟೆಗಾಳಗದಂತೆ ಪತ್ತೆನುತ್ತುಂ, ಪೊಸತಾಗಿ ಬಂದೊಕ್ಕಲಿಗನಂತೆ ಮುಟ್ಟೆನುತ್ತುಂ, ಕುಳಿಯೊಳ್ ಬಿರ್ದನಂತೆ ತೆಗೆಯೆನುತ್ತುಂ, [2] ನಗೆಗಾಱನಂತೆ ಕಾಡೆನುತ್ತುಂ, ಪಗೆಗಾಱನಂತೆ ಪಾಡೆನುತ್ತುಂ, ಪೊಲೆಯನಂತೆ ಕೊಯ್ಯೆನುತ್ತುಂ, ಮಾದೆಗನಂತೆ ಮೆಟ್ಟೆನುತ್ತುಂ, ತಿರಿಕನಂತಿಕ್ಕೆನುತ್ತುಂ, ಮಾಸಾಳ್ಗಳಂತೆ ಬೀಡೆನುತ್ತುಂ, ಹರಿಕಾಱರಂತೆ ಕಾಸೆನುತ್ತುಂ, ಪಿತ್ತಾಧಿಕನಂತೆ ಬೀಸೆನುತ್ತುಂ, [3] [ಬಿಕ್ಕಿಗನಂತೆ ತಿವಿಯೆನುತ್ತುಂ,] ತೊಱೆಯಂತಹೋರಾತ್ರಂ ಪರಿಯುತ್ತುಂ, ಈ ಮಾರ್ಗದಿಂ ಬಾಧೆಯುಂ ಮಾಡೆ, ಪಳ್ಳಿಯುಂ ಮನ್ನೆಯರಾಳ್ ಸುತ್ತಿರ್ದಂತೆ, ಕುಱುವಿಂಡಂ ತೋಳಂ ಪೊಕ್ಕಂತೆ, ಗರ್ಭಿಣಿಯನೆಮ್ಮೆ ತಗುಳ್ದಂತೆ, ತಾವರೆಗೊಳನಂ ಮಂಜು ಪೊಕ್ಕಂತೆ, [ಬಡವರ ಮನೆಯನರಸಾಳ್ ಪೊಕ್ಕಂತೆ,] ಗೂಗೆಯುಂ ಕಾಗೆ ಸುತ್ತಿದಂತೆ, ಪೂಮರನಂ ಕೋಡಗವೇಱಿದಂತೆ, ಕಬ್ಬಿನ ತೋಂಟಮಂ ನರಿ ಪೊಕ್ಕಂತೆ, ಬೆಳದ ಕೆಯ್ಯಂ ಕಿಚ್ಚು ತಗುಳ್ದಂತೆ, ಪೂತ ಪುಣಿಸೆಯುಂ ಗಾಳಿ ಪೊಕ್ಕಂತೆ, [ಕಂಚುಗಾಱನ ಪಸರ ಮನೆತ್ತು ಪೊಕ್ಕಂತೆ,] ಮದುವೆಯ ನೆರವಿಯುಂ ಕಡಂದುಱು ಕವಿದಂತೆ,

---

1 ಪೊಲೆಯನಂತೆ ಕರೆಯೆನುತ್ತುಂ, ಪಡಿಹಾರನಂತೆ ನೂಂಕೆನುತ್ತುಂ, (ಗ)

2 ಕಮ್ಮಾಱನಂತಡೆಯೆನುತ್ತುಂ (ಗ)

3 ಎರಲೆಗಂಡ ತೆಲುಗನಂತಿಱಿಯೆನುತ್ತುಂ, ತೆಲ್ಲಿಗನಂತೆ ಕುಸಿಯೆನುತ್ತುಂ, ಋಷಿಯರಂತೆ ಕಟ್ಟೆನುತ್ತುಂ, ಸಿಂಬಿಗನಂತೆ ಬಳಸೆನುತ್ತುಂ, ವ್ಯವಹಾರಿಯಂತ ಮುತ್ತೆನುತ್ತುಂ, ಸೀರೆಗಟ್ಟುವನಂತೆ ಸುತ್ತೆನುತ್ತುಂ, ತಿಱುಳನಂತೆ ಪೊಯ್ಯೆನುತ್ತುಂ (ಕ.)

ಪಂದೆಯುಂ ಪೆಣಂ ತಗುಳ್ದಂತೆ, ಗೋಷ್ಠಿಯುಂ ಪಾವು ಪೊಕ್ಕಂತೆ, ಬೀಡಂ ಕಳ್ಳರ್ಕವಿದಂತೆ, ಪಸುಮಕ್ಕಳಂ ಗೂಳಿ ತಗುಳ್ದಂತೆ, ಪತ್ತಿಯುಂ ಕಿಚ್ಚು ತಗುಳ್ದಂತೆ, ಗೋವುವಿಂಡಂ ಪುಲಿ ಪೊಕ್ಕಂತೆ, ಜೋಳದ ರಾಸಿಯುಂ ಪೊನಲ್ಕವಿದಂತೆ, [ಬೆಲ್ಲದ ಪೇಱಸಿಲಿ ಪೊಕ್ಕಂತೆ,] ಕಲಸುಗೂಟಂ ಕಾಗೆ ಸುತ್ತಿದಂತೆ, ಬೆಳ್ಳಿಲಿಯು ಬಿಲದೊಳ್ ನೀರ್ಪೊಕ್ಕಂತೆ, ಪೊಟಲೊಳಗಣ ಪ್ರಜೆಯೆಲ್ಲಮುಂ ಮಹಾಭಯಜ್ವರಂಗೊಂಡು, ಕುಮಾರನಾಡುವಾಟಕ್ಕಂ, ಮಾಡುವ ಮಾಟಕ್ಕಂ, ನಿಲಲುಂ ನಿತ್ತರಿಸಲುಮಾಱದೆಮಗೆ॥ ೨೧

ಬೆಸನಾವುದು ಧರಣೀಶ್ವರ -
ಬೆಸಸೆನೆ ತನಯಂಗೆ ನಾಡೆಯುಂ ಮುನಿದು ನೃಪಂ ।
ಮಿಸುಗುವ ದಂತಮರೀಚಿಗ
ಳಸೆವಿನಮಂಬುಧಿನಿನಾದದಿಂದಂ ನುಡಿದಂ ॥ ೨೨

ನೀವಿದನೆಮಗಱಿಪಿಮೆರ್ು
ನ್ನೀ ವಾರ್ತೆಯುನಱಿಯೆವಿದಱ ದೆಸೆಗಿನಿಸಾನುಂ ।
ನೀವೆಂಬೆಜೀಡ ಸುಖಮಿರಿ
[1] ಮಾವಿದನೆಣಿಸುವವರಲ್ಲಮತಿಶಯದಿಂದಂ ॥ ೨೩

ಎಂದರಿಮಥನಮಹಾರಾಜಂ ಕಿಱಿಯುರ್ಪಿರಿಯರೆನ್ನದೆ ಮನ್ನಣೆಯಿಂ ಕರ್ಪುರಸಹಿತಂ ವೀಳೆಯಂಗೊಟ್ಟು ಪೋಗಲ್ವೇಳ್ದು, ಪ್ರಧಾನರ್ಗಂ ಸೌಂದರಿಮಹಾದೇವಿಗಮಿಂತೆಂದಂ:— ೨೪

[ಇನಿಸುಂ ಮಾಣದೆ ದುಶ್ಶಾ
ಸನಶಕುನಿದಿವಾಕರಾತ್ಮಜರ್ ಕೂಡೆ ಸುಯೋ ।
ಧನನಳಿದನೆಂದೊಡೇಂ ದು
ರ್ಜನರಪ್ಪವರೊಡನೆ ಕೂಡಿ ಕೆಡದವರೊಳರೇ ॥ ೨೫

---

1 ಪಾವಂಕಂಡಂತೆಬೆಚ್ಚದಿರಿಯತಿಶಯದಿಂ (ಕ).
ಮಾವಿದಸೈರಿಸುವರಲ್ಲಸುತನಾಶದೊಡಮೇಂ (ಖ).
ಮಾವಿದನೆಣಿಸುವದಲ್ಲಮತಿಶಯದಿಂದಂ (ಗ).

ಮೊದಲಿಂ ಪಂದಿಗಳೊಡನಾ
ಡಿದ ಕಱುವುಂ ಪಂದಿಯಂತೆ ಪೇಲಂ ತಿಂಗೆಂ ।
ಬುದು ನಾಣ್ಣುಡಿ ತಾನದು ತ
ಪ್ಪದು ಸಿತಗರ ಕೂಟದಿಂದೆ ಕೆಡದವರೊಳರೇ ॥] ೭೬

ಆರಯ್ದು ನೋಡೆ ತೊಱೆಗಳ
ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ ।
ಸಾರಂಗೆಟ್ಟುಪ್ಪಪ್ಪವೊ
ಲಾರುಂ ದುರ್ಜನರ ಕೂಟದಿಂದಂ ಕೆಡರೇ ॥ ೭೭

ಕಡುತಣ್ಪು ಕೆಟ್ಟು ಕಿಚ್ಚಿನೊ
ಳೊಡಗೂಡಿದ ನೀರ್ ಬೞಿಕ್ಕೆ ತೀವ್ರತೆಯಿಂ ಕೈ ।
ಸುಡುವಂತೆ ನೋಡೆ [1] ದುರ್ಜನ
ರೊಡಗೂಡಿದ ಮಾನಿಸರ್ಗೆ [2] ಸದ್ಗುಣಮುಂಟೇ ॥ ೭೮

[ಅದುಕಾರಣದಿಂ. ಕುಮಾರನೊಳಾದ ದೂರ್ತೆಲ್ಲಮೆಮ್ಮಿಂದಾದು
ಪಾತನೊಳ್ ದೋಷಮಿಲ್ಲೆಂತೆನೆ] ೭೯

ಪುದಿದ ಸುತಮೋಹದಿಂದೋ
ದಿದೊಡಂ ಮುನಿಜನದ ಸಾರೆ ಬಸದಿಯೊಳಿರ್ದಾ ।
ಡಿದೊಡಮಿಂವನಲಸುಗೆಂದಾ
ನಿದನಱಿಯದೆ ದುಷ್ಟಕಷ್ಟರೊಡನಾಡಿಸಿದೆಂ ॥ ೮೦

[ಇನಿತುಂ ಮೋಹಂ ಕೇಳೀ
ತನ ಮೇಲಿಂ ಪಿರಿದುಮೆನ್ನೊಳುಂಟಪ್ಪುದಱಿಂ ।
ದನಿಯಿತಿಕೆಯಿಂದೆ ನಡೆಸ
ಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ ॥] ೮೧

ಕಸದೊಡನೆ ಕೂಡಿ ಪೆರ್ಚಿದ
ಸಸಿಯುಂ ಶಿಕ್ಷಿಸದ ಮಕ್ಕಳುಂ ಮಾಣದೆ ಬೆಂ ।

1 ಯ್ರುಡಬಾರಧಂತೆ ದುರ್ಜನ (ಗ.) 2 ಸಜ್ಜನರ್ಗೆ (ಗ.)

ತಿಸದೋದಮಂ ಸಲವಂ ಭೂ
ವಿಸುತಿರ್ಪನ ತಪಮುಮೊಪ್ಪಲಾರ್ಕುವೆ ಕಡೆಯೊಳ್ ‖ ೪೦

ಮತ್ತಂ, “ ಪುತ್ರಂ ಚ ಶಿಷ್ಯಂ ಚ ತಾಡಯೇನ್ನ ತು ಲಾಲಯೇತ್ ’ ಎಂಬ ಪೂರ್ವಾಚಾರ್ಯೋಕ್ತಿಯಂ ಕೈಕೊಳ್ಳದೆ ಮೋಹದಾಕೆವ್ರೋತಿಯಾದಳಂಬಂತೆ ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿನಿಂತಾಯ್ತೆಂದರಸಂ ತಲೆಯಂ ತೂಗಿ ಬೆರಲಂ ಮಿಡಿದು ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬಟಿಕ್ಕಮಿಂತೆಂದಂ [1] :— ೪೧

ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾಯ್ದು ತ
ಸ್ಕರರಂ ಬಾರಿಸಿ ಕಷ್ಟರಂ ಕೆಡಿಸಿ ದಂಡಂಗೊಂಡು ಮಿಂಡರ್ಕಳಂ
ಭರದಿಂ ಬಂಧಿಸಿ ಶಿಷ್ಟರಿಷ್ಟಫಲಮಂ ಸಂತೋಷದಿಂದಿತ್ತು ಧೂ
ರ್ತರ ಬೇರಂ ನೆಱೆ ಕಿೞ್ತು ಪಾಲಿಪುದಣೆ ಧಾತ್ರೀಚಕ್ರಮಂ ಕ್ಷತ್ರಿಯಂ ‖

ಸಿಸುವಂ ತಾಯ್ಸುರಸೌಖ್ಯಮಂ ಬಯಸುವಂ ಚಾರಿತ್ರಮಂ ಶೀಲಮಂ
ವಸುವಂ ತಾಂ ಬಿಡದರ್ಥಲೋಭಿ ಸಸಿಯಂ ಶೂದ್ರಂ ತಳಾಱಂ ಸಮಂ
ತೊಸೆದೂರಂ ಗುಣಮಂ ಮಹಾಪುರುಷರೊಳ್ಸಂ ಶೌಚಿ [2] ಕೇಳಂತು ರ
ಕ್ಷಿಸುವಂ ಮೋಹದಿನಂತೆ ರಕ್ಷಿಪುದು ಧಾತ್ರೀಚಕ್ರಮಂ ಕ್ಷತ್ರಿಯಂ ‖

ಶಶಿಕಿರಣಂಗಳಂತು ಕುಮುದಾಳಿಗಳಂ ರವಿರಶ್ಮಿಯೆಂತು ರಂ
ಜಿಸುವ ಸಹಸ್ರಪತ್ರನಿಕುರುಂಬಮನೊಪ್ಪಲರ್ಚಿ ನಾಡೆ ಸಂ
ತಸಮನೆ ಮಾೞ್ಪವಂತೆ ಖಳರೆಂದುದನೆನ್ನದೆ ತನ್ನ ಭೂಮಿಗಂ
ಮಿಸುಪ ವಚೋಂಶುವಿಂ ಮುದಮನೊಪ್ಪಿರೆ ಮಾೞ್ಪುದು ಧಾರಿಣೀಶ್ವರಂ‖

ನಯಮುಳ್ಳುದಱಿಂ ಚಂದ್ರೋ
ದಯದೊಳ್ ಬೆಳಗುವುವು ತಾರೆ ಸೂರ್ಯೋದಯದೊಳ್ ।
ಜಯದಿಂದದೃಶ್ಯಮಪ್ಪುವು
ನಿಯತಂ ಕೇಳ್ಮಗನೆ ತೀವ್ರತೆಯುನೆಯ್ದುವರೇ ‖ ೪೫

---

1 ಮೆಲ್ಲನಿಂತೆಂದಂ (ಗ)
2 ದಾನಿ (ಖ,ಕ.)

ಏಳಿದರ ಪುಯ್ಯಲಂ ಕರೆ
ದಾಳೋಚಿಸಿ ತಿರ್ದಿ ಸಂತಸಂಬಡಿಸದೆ ಬ ।
ಲ್ಲಾಳಪ್ಪರ ಕೊರ್ವಂ ಜಡಿ
ದಾಳಾಪಂಗೆಯ್ದು ಕೆಡಿಸಿದಂ ನೃಪಸುತನೇ ॥ ೮೮

ಎಂಬೀ ರಾಜನೀತಿಯಂ ನೀನಱಿಯದೆ ಲೋಕಯಿಸರದ ಮೇಲೆ ಬಂಡಿ ಪರಿದಂತೆ ಪೊೞಲೆಲ್ಲಮಂ ನಿರಾಳವಟ್ಟಮಂ ಮಾಡಿದೆಯಾದೊಡೇನಾಯ್ತು ಪೋದುದಿಂ ಪೋಗಲಿ ಪೆಱಗನೆಣಿಸಲಾಗದು ಮುಂದಣ್ಗೆ,॥ ೮೯

ಇಂದು ಮೊದಲಾಗೆ ನೀಂ ಸೊ
ರ್ಕಿಂದಂ ಪೊೞಲೊಳಗೆ ಕೇಳ ಬಾಧೆಗಳಂ ದೂ ।
ರ್ತಿಂದಂ ಮಾಡಿದೆಯಪ್ಪೊಡೆ
ಕಂದಾ ಕಡುಮುನಿವನೆನಗೆ ನೀಂ ಮಗನಲ್ಲಯ್ ॥ ೯೦

ಮತ್ತಮೆಮ್ಮನ್ವಯಧರ್ಮಮಪ್ಪೊಡೆ ಶುದ್ಧಸ್ಫಟಿಕದ ದೋಣಿಯೊಳಱಿದ ಪಾಲಂತೆ ನಿರ್ಮಳಮಪ್ಪ ಜೈನಧರ್ಮಮದಂ ಚೆನ್ನಾಗಿ ತಿಳಿದು [1] ಪಾಪಾನುರಾಗಮಂ ಪತ್ತುವಿಟ್ಟು ದುರ್ಜನರೊಡನಾಟಮಂ ಮಾಣ್ಬುದೆನ್ನಾಣೆಯೆಂದು ತನ್ನಂ ಮುಟ್ಟಿಸಿಕೊಂಡು ಮಗನ ಕದಪಂ ಕರ್ಚಿ ಪಸಾಯನಮಂ ಕೊಟ್ಟರಿಮಥನಮಹಾರಾಜಂ ಸಂತಸದಿನಿರ್ಪುದುಂ, ॥ ೯೧

ತೆಂಗಿನ ಪೊಸನೇಣಿಂದಱು
ದಿಂಗಳ್ವರಮುಡಸಿ ಕಂಬಿಯಿಂ ಕಟ್ಟಿದೊಡಂ ।
ತಾಂ ಗಡ ಬಿಟ್ಟೊಡೆ ಮತ್ತಂ
ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ ॥ ೯೨
ಮನ್ನಿಸದೆ ತಂದೆಯಂ ಪೊೞ
ಲಂ ನೆಱೆ ಕಾಡುತ್ತುಮೞಲಿಸುತ್ತುಂ ದೂರ್ತಿಂ ।
ದಂ ನೃಪಸುತನಿರೆ ಮತ್ತಂ
ತನ್ನಾಣೆಯನುೞಿದುದರ್ಕೆ ಮುಳಿದು ನರೇಂದ್ರಂ ॥ ೯೩

1 ಧರ್ಮಮದನಱಿಯದೆಂಪಾಪಾ (ಗ)

ಲಲಿತಾಂಗನಂ ಬರಿಸಿಕೊಂಡು ಮಗನೆ ಪಲ್ಲಿಂಗೆ ಪಾಲಂ ಬಿಟ್ಟೊಡೊಸಡೆಲ್ಲಮಂ ದೈವಂ ತಿಂದುದೆಂಬಂತೆ ಮೋಹದಿಂ ನೀಂ ಮಾಡಿದ ಪಲವು ಪೊಲ್ಲಮೆಗಳಂ ಸೈರಿಸಿರ್ದೊಡಂ, ನೀಂ ಕೊರ್ವಿ ಗಾಳಿಯೊಳ್ಕ್ಕಡಿದ. ಕಿರ್ಚಿನಂತೆ ದಳ್ಳುರಿದು ಪೊಱಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ ರಮಂ ಮಾಡಿದೆಯಿಂತು, ॥ ೯೪

ಕೆಟ್ಟಪೆಯೆಂದಾನೀಕ್ಷಿಸೆ
ನೆಟ್ಟನೆ ನೀನೆತ್ತಿಕೊಂಡ ಕಳ್ಳಂ ಬಾಯುಂ ।
ಸುಟ್ಟೋಡಿದನೆಂಬಂತಿರೆ
ದುಷ್ಟಾ ನೀಂ ಪಿಱಿ ನೆಗಪ್ದೆಯೆನ್ನಾಣೆಯುಮಂ ॥ ೯೫

ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತನೆಂಬಂತೆ ಮತ್ತಿನ ಮಕ್ಕಳಮುದಾಸೀನಂಗೆಯ್ದು ನಿನಗೆ ರಾಜ್ಯಮಂ ಕುಡಲೆಂದಿರ್ದೆನ್ನ ಚಿತ್ತಕ್ಕೆ ಸಂತಾಪಮಂ ಮಾಡಿದೆಯಿನ್ನೆನ್ನ ಮೇಲೆ ಪಳಿಯುಂ ಪಾಪಮುಮಿಲ್ಲ ॥ ೯೬

ಕಡುಲೇಸೆಂದೊಡಂ ಪಿಡಿ
ದೊಡೆ ಕೈ ಮಸಿಯಪ್ಪ ಮಾರ್ಗದಿಂ ದುರ್ಜನರಂ ।
ಕಡುಮೋಹದಿನೊಳಕೊಂಡಿ
ರ್ದೊಡೆ ಕೆಡುಗುಂ ತನ್ನೊಳಾದ ಗುಣಮೆನಿತನಿತುಂ ॥ ೯೭

ಅದುಕಾರಣದಿಂ ದುರ್ಜನನಾಗಿರ್ದ ನಿನ್ನನೊಳಕೊಂಡಿರ್ದೊಡೆ ನಗಿಹದೊಳಿರ್ಪ ಕೀರ್ತಿಯುಂ ಪರದೊಳಪ್ಪ ಸದ್ಗತಿಯುಂ ಕಿಡುಗುಮಿನ್ನೆನ್ನಾಳ್ವ ದೇಶದೊಳಿರದೆ ಪೊಱಮಟ್ಟು ಪೋಗೆಂದು ಜಡಿದು ನುಡಿದೊಡರಸನ ಮಾತಿಂಗೆ ಲಲಿತಾಂಗನೆೞ್ದು ಸೌಂದರಿಮಹಾದೇವಿಯಲ್ಲಿಗೆ ಬಂದು ತನ್ನ ದೇಶತ್ಯಾಗವೃತ್ತಾಂತಮಂ ಪೇೞೆ ಕೇಳ್ದಂತೆಂದಳ್:— ೯೮

ಜಗದೀಶಂ ಸ್ನೇಹದಿಂದಂ ಕಱುವೆ ಬಿಡುವುದೀ ದೂರ್ತನೆಂದಾರ್ತನೇ ಕೈ
ಮುಗಿದಾನುಂ ಪುತ್ರ ಮಾಣೀ ಖಳರ ಕೆಳೆಯನೆಂದಾರ್ತನೇ ಮಂತ್ರಿವರ್ಗಂ

ಮಿಗೆಯಾವೇನೆಂದೆವೆಂದಂತಿರೆ ನೆಱೆ ನೆಗೞೆಂದಾರ್ತರೇ ನಿನ್ನ ಸೊರ್ಕಂ
ಮಗನೇ ನೀಂ ಮಾಡಿಕೊಂಡೈ ನೃಪನ ಮೊಳಸನಾನೇಗುವೆಂ ಕೂರ್ತ
ಕಂದಾ ॥೯೯

ಕ್ಷಿತಿಪಂ ನಿನ್ನ ಸಮಸ್ತಪ್ರೊಲ್ಲಮೆಗಳಂ ಕಣ್ಣಾರೆ ಕಂಡುಂ ಮಹೋ
ನ್ನತಚಿತ್ತಂ ಸುತವೋಽಪದಿಂ ಪಲವುಸೂೞೆನ್ನಾಣೆ ಮಾಣೆಂದೊಡಂ
ಸಿತಗಂ ಮಾಣದೆ ದುಷ್ಟಸಂಗತಿಯನೇವಂ ಭೂಪನೆಂದಿರ್ಪ್ಪೋರಂ
ಟುತನಂ ಕಣ್ಗೆಳಿವಾಯ್ತು ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ॥೧೦೦

ಕಡುಗಾಯ್ದುಂ ನೀರ್ ಮನೆಯಂ
ಸುಡಲಱಿಗುಮೆ ಮಗನೆ ಮೊಳಸಿನಿಂ ನಿಮ್ಮಯ್ಯಂ ।
ನುಡಿದನಿತಱಿಂದೆ ಕಳವನೆ
ಬಿಡುವುದು ದುರ್ಗುಣಮನಣ್ಣ ಪಿಡಿವುದು ಗುಣಮಂ ॥ ೧೦೧

ಎಂದು ಸೌಂದರಿಮಹಾದೇವಿ ನುಡಿದ ನುಡಿಗಳಂ ಕೊೞೆವಾವು
ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು, ೧೦೨

ಇಂಬಾಗಿ ತಂದೆಗಂ ತಾ
ಯ್ಗಂ ಬಗೆವೊಡೆ ನಚ್ಚಿದೆಮ್ಮ ಕೋಣನನೀದ ।
ತ್ತೆಂಬಂತೆ ಮಾಡಿದೈ ಗುಣ
ಮಂ ಬಗೆಯದೆ ಮಗನೆ ದುಷ್ಟಸಂಗತಿಯಿಂದಂ ॥ ೧೦೩

ಕಾಗೆಯು ಮಱಿಯೆಂದಱಿಯದೆ
ಕೋಗಿಲೆ ಕೈಗೊಂಡು ಕೂರ್ಮೆಯಿಂ ನಡಪಿದೊಡಂ ।
ಕಾಗಾಯೆಂದುದು ಮತ್ತಂ
ಕಾಗೆಗಳೊಡಗೂಡಿತೆಂಬವೋಲ್ನೀಂ ಮಗನೇ ॥ ೧೦೪

ಕಳ್ಳಂ ಕುಡಿದರಂತೆ ಸೊರ್ಕಿ, [1] ದೊಗ್ಗಳೆಯಂತುರ್ಬಿ [ಬಳವ
ಮೊಲೆಯಂತೆ ಕೊರ್ವಿ,] ಎಳವೆಱೆಯಂತೆ ವಕ್ರನಾಗಿ, ಸೂಳೆಯಂತೆ

1 ಕಾಯ್ದು ಪಾಲಂತುರ್ಕಿ (ಗ)

ಕಾಪಿಲಾಗಿ, ಮುಳ್ಳ್ಮುಕ್ಕಿಯಂತೆ ಕ್ರೂರನಾಗಿ, ಸತ್ತುರಂತೆ ವ್ಯೈವಿಟ್ಟು [1] ಪಗರಣಿಗನಂತೆ ವಿಪರೀತನಾಗಿ, ಪಚಕೋರಿತಿಯಂತೆ ಪಲವುಂಬಣ್ಣ ಮಾಗಿ ಬಾಗೆಯಂತೆ ನಿಸ್ಸಾರನಾಗಿ, ಅಶೋಕೆಯಂತೆ ನಿಷ್ಫಲನಾಗಿ, ತಱಿಯದ ಮರದಂತೆ ನೇರಿದನಲ್ಲದೆ, ಬಡಸನಂತೆ ಪುರುಳಿಲ್ಲದೆ, ಕಾಗೆಯಂತೆ ಮತಿಯಿಲ್ಲದೆ [2] ಪಂಡೆಯಂತೆ ಪತಿಯಿಲ್ಲದೆ, ಕಾಲ್ಗೆಟ್ಟನಂತೆ ಗತಿಗೆಟ್ಟು, ಬೆಸನಿಯಂತೆ ಪೆಂಪಂ ಬಿಟ್ಟು, ಕುದುರೆಯಂತೆ ಕೀಲಂ ಕೈಕೊಂಡು, ತೇಱುನಂತೆಲ್ಲಾ ಪಳಗವೊಳಗಾದ್ಯೈ, ನಿನ್ನ ಕೇಡಿಂಗಳಲ್ಬಾರದು, ನೀನಱಿವೈಯೆಂಬುದುಂ, ವಿಜಯಪುರಮಂ ಪೊಱಮಟ್ಟು ಪೋಗಿ ನೇಪಾಳದೇಶಮಂ ಪೊಕ್ಕಲ್ಲಿ, ೧೦೫

ಪಾವಿನ ನಂಜುಮನವರುಮ
ನೋವಿನಿಸಂ ತೂಗಿ ನೋಡೆ ದುಷ್ಟತನಕ್ಕಾ ।
ಪಾವಿನ ಪಲ್ಲ ವಿಷಕ್ಕಂ
ಭಾವಿಸೆ ಮಿಗಿಲೆನಿಪ ಕಳ್ಳರೊಳ್ ಲಲಿತಾಂಗಂ ॥ ೧೦೬

[ಕೂಡಿ ಕೆಳಗೊಂಡು ಬಿಡದೊಡ
ನಾಡಿ ನೃಪಾಚಾರಮೆಲ್ಲಮಂ ಮಱೆದೊಡನಂ ।
ಡೋಡಾಡಿ ಕೆಟ್ಟು ದೂರ್ತಿಂ
ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ ॥ ೧೦೭

ಅಂತು] ಮುನ್ನ ಬಂದ ಕಿವಿಯಿಂದಂ ಬೞಿಕಂ ಬಂದ ಕೋಡು ಕೂರಿತ್ತೆಂಬ ನಾಣ್ಣುಡಿಯಂತೆ ಮುನ್ನಿನ ಕಳ್ಳರೆಡೆಗೆ ತಾನೆ ಪ್ರಸಿದ್ಧನಾಗಿ ತನಗವರ್ಕರ್ಮೆಯಿಂದುಪದೇಶಂಗೆಯ್ದಂಜನಘುಟಿಕೆಯಂ ಸಾಧಿಸಿ ತದ್ಘುಟಿಕಾಪ್ರಯೋಗದಿಂದದೃಶ್ಯರೂಪಂ ಕೈಕೊಂಡು ಜಗಮೆಲ್ಲಮಂ ಮೊಟ್ಟನಾಗೆ [3] ಕಳ್ವಂಜನಚೋರನೆಂಬ ಪೆಸರೆಸೆಯೆ ನೆಗೞ್ದು, ೧೦೮

1 ಪಗರಣಿಗನಂತೆ ಬೋಡಾಗಿ, ಬಂದವಮಾಪಿನಂತೆ ವಿಪರೀತನಾಗಿ (ಗ)
2 ಶುಚಿಯಿಲ್ಲದ (ಬ)
3 ಲೋಕಮೆಲ್ಲಮುಂ ಸಿವಾಳಿ ಪ್ಟಮೂಡಕಳ್ವ (ಗ)

ಕಳವುಂ ಜೂಜುಂ ಮೋಸದೆ
ಮಳಿನತೆಯುಂ ಮಾಬ್ಬು ಬೇಂಟೆಯುಂ ಪರಸತಿಗ।
ಳ್ಗಳಸುವುದುಂ ಬ್ರತವಿಲ್ಲದೆ
ಬೆಲೆವೆಣ್ಣೊಡನಿರ್ಪುದೋತು ಕುಡಿವುದು ಕಳ್ಳಂ ॥ ೧೦೯

ಅಸುಗತಿಯನೆಯ್ದಿಸಲ್ಕವು
ಮಿಸುಪ ಮರುಜ್ಜವದ ತುರಗಮೆನಿಸುವೆ ಸಪ್ತ।
ವ್ಯಸನಮನೆ ಬಿಡದೆ ಕೈಕೊಂ
ಡೆಸಗಿ ಸದಾಚಾರಮೆಲ್ಲಮಂ ನೆಱೆ ಮಱೆದಂ ॥ ೧೧೦

ಎಲ್ಲಿ ವಿನೋದಮೆಲ್ಲಿ ವಿಟರೆಲ್ಲಿ ಮನಂ ನಡುಗೆಲ್ಲಿ ದುಷ್ಟರಂ
ತೆಲ್ಲಿ ಕನಿಷ್ಠರೆಲ್ಲಿ ಗಣಿಕಾಜನಮೆಲ್ಲಿ ಪುಳಿಂದಗೋಷ್ಠಿ ಮ
ತ್ತೆಲ್ಲಿ ಜಡಾತ್ಮರೆಲ್ಲಿ ಚಪಳಾರ್ಕರಮೆಲ್ಲಿ ವಿಶೇಷಕಳ್ಳರಂ
ತಲ್ಲಿಯೆ ರಾಗಮಲ್ಲಿಯೆ ಮಹೋತ್ಸವಮಲ್ಲಿಯೆ ತಾಣಮಾಗಳುಂ ॥ ೧೧೧

ಅಂತು ತನ್ನ ಮನಕ್ಕೆ ಬಂದಂತೆ ನೆಗೞುತ್ತುಂ ಕರಟದ ಕದಿರಂತೆ ತಿಱ್ಱನೆ ತಿರುಗುತ್ತುಮಾರ್ವ ರಾಜಗೃಹಮೆಂಬ ಪುರಕ್ಕೆ ಬಂದು ತತ್ಪುರದ ಸೂಳೆಗೇರಿಯುಂ ಪೊಕ್ಕಾಡುವಂ ಮೆಚ್ಚದೆ ಪೋಗುತ್ತುಮಿರ್ದು ಮನಸಿಜನ ಕಯ್ಯ ಮಸೆದಸಿಯುನನುಕರಿಸುವ ಅನಂಗಸೌಂದರಿಯೆಂಬ ಸೂಳೆಯುಂ ಕಂಡು ಕಣ್ಬೇಟಂಗೊಂಡೊತ್ತೆಗಟ್ಟಾಕೆಯು ಮೇಲೆ ಮೋಹಮುಂ ಸ್ನೇಹಮುಂ ತಿಣ್ಣಮಾಗೆ,[1] ॥ ೧೧೨

ಓಪಳ ಕೂಮೆಯೊಳಜ್ಜ
ದ್ವೀಪದ ಗುಳ್ಳಯವೊಲಗಲಲಾಱದೆ ಸಲೆ ನಿ।
ಕ್ಷೇಪದ ಪೊನ್ನಂ ಕೈಕೊಂ
ಡೇಪೊತ್ತುಂ ನೋಡುತಿರ್ಪ ಪಾಪಿನ ತೆಱದಿಂ ॥ ೧೧೩

1 ಪುರದಲ್ಲಿ ಕಾಮನ ಕೈಯ ಕೂರಸಿಯೆನಿಪ್ಪನಂಗಸೌಂದರಿಯೆಂಬ ಸೂಳೆಗೆ ಕೂರ್ತು (ಗ)

ಇರುತಿರ್ಪಾಕೆಯೆನಿತರ್ಥಮಂ ಬೇಡಿದೊಡನಿತುಮಂ ಪ್ರೀತಿಯಿಂ ಕೈದೆಗೆಯುದೆರಡುಗೇಳದೆಯನವರತಂ ಕುಡುತ್ತುಮಿರ್ಪುದುಮಾತನೋರಂತೀವ ಕೋಡಿಂಗನಂಗಸೌಂದರಿ ಬೆಱಗಾಗಿ ತನ್ನೊಳಿಂತೆಂದಳ್ : ೧೧೪

ಸುರಪತಿಯುಂ ಸಿರಿಯೊಳ್ಮೆ
ಚ್ಚರಿಸುವ ಧರಣೀಶರುತ್ತರಾಶಾಧಿಪನೊಳ್ [1] |
ದೊರೆಯೆನಿಪ ವೈಶ್ಯಜರ್ಭಾ
ಸುರತೇಜರ್ವಿರ್ಕ್ಕ ಗಂಡರೆನ್ನ ಬೊಜಂಗರ್ || ೧೧೫

ಅಂತಪ್ಪವರೊಳಮೀತನೊಂದುದಾರತೆಯುಂ ಕನಸಿನೊಳಾದೊಡಂ ಕಂಡಱಿಯೆನೀತಂಗೆ ಪೊಱಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆತ್ತಣಿಂ ಬರ್ಪುದಿದನಾರಯ್ವೆನೆಂದು ಪುಸಿಗೂರ್ಮೆಯಿಂದನೇಕಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ, ಮೈಮಱೆದು ತನ್ನ ಕಳವಿನ ಮಾರ್ಗಮೆಲ್ಲಮಂ ಪೇೞೆ, ಕೇಳ್ದನಂಗಸೌಂದರಿ ಬೆಱಗಾಗಿರ್ಪುದುಂ, ಮಱುದಿವಸಮರಸನರಸಿಯರ್ಬೆರಸು ತೂರ್ಯತ್ರಯಮೊಪ್ಪೆ ಜಲಕ್ರೀಡೆಗೆ ಪೊಱಮಟ್ಟು ಪೋಗುತ್ತಿರೆ, ೧೧೬

ತರಣಿಯ ಕಿರಣಾವಳಿಗಂ
ಸರಸಿಜವೈರಿಯ ಮಯೂಖತತಿಗಂ ಮಿಗಿಲ |
ಚ್ಚರಿ ಕಾಂತಿಯೆನಿಪ ಬೆಳಗಿಂ
ಸ್ಪುರಿಯಿಪ ಸದ್ರತ್ನನಿಕರದಿಂದೊಪ್ಪುವುದಂ || ೧೧೭

ಪಟ್ಟದ ಮಹಾದೇವಿಯುರದೊಳೊಪ್ಪುತ್ತಿರ್ಪ ಜ್ಯೋತಿಪ್ರಭಮೆಂಬ ಪದಕಮಂ ಕಂಡನಂಗಸೌಂದರಿಯಾಪದಕದ ಮೇಲೆ ಪ್ರೀತಿಬಟ್ಟು, [2]ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದುಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದಾಪದಕಮನೆನಗೆ ಕೂರ್ತೆಯಪ್ಪೊಡೆ ಬೇಗದಿಂ ತಂದೀವುದೆಂದು ಲಲ್ಲೆಗೈದು

1 ಉರಗಾಧಿಪನೊಳ್ (ಗ)   2 ಅಂಕಮಾಗೆ ಪ್ರೀತಿಯಿಂದಂಜನ (ಕ)

ಪ್ರಾರ್ಥಿಸುವುದುಮದು ಪೊಱಗಾಗೆ ನೀನೇನಂ ತರವೇೞ್ದಪೆಂ ತಂದಿತ್ತ ಪೆನಿದೊಂದು ಮಾತ್ರಂ ಬೇಡದೇಕೆನೆ, ೧೧೮

ಆ ಪದಕಂ ಬಂದೊಡೆ [1] ಕೇ
ಳೆಪ್ಪೊತ್ತುಂ ತೊಡಲೆವೇೞ್ಕುಮೞಿದೊಡೆ ನಿನ್ನಂ ।
ಭೂಪತಿ ಕೊಲ್ಗುಂ ಕವರುಗು
ಮೇಪಡಿಮಾತದಱ ಪಂಬಲಂ ಬಿಡು ನಯದಿಂ ॥ ೧೧೯

ಎಂಬುದುಮಂಜನಚೋರಂಗೆ ಮುಳಿದು ಪಾಸಿನ ಮೇಲಿಂ ನೆಲಕ್ಕೆ ಬೀೞಲೊದೆದು, ಕಾಲೊಳಂ ಕೈಯೊಳಂ ಮೊಡೆಗಟ್ಟುವಂತೆ ಮೋದಿ, ಕೋಪಾನಳನಿಂ ಕಣ್ಗಾಣದೆ ಕೆಲದೊಳಿರ್ದ ಜಂತದ ಪಾವುಗೆಯಿಂದ ಮಿಟ್ಟು, ೧೨೦

ತೊಡವೆನಗಪ್ಪೊಡೆ ಲಕ್ಕಂ
ಬಡೆವವು ಪಲವೊಳವು ನಂಬೆಯಪ್ಪೊಡೆ ನೋಡೀ ।
ಗಡೆ ಕೂರ್ಪೆಯೆಂದು ನಾಂ ಪೇ
ೞ್ದೊಡೆ ಗಂಡರ ಬೂತೆ ನುಡಿವುದೇ ಪೆಱಪೆಱತಂ ॥ ೧೨೧

ಸಿತಗೆಯೆ ನಾನೆಮ್ಮಬ್ಬೆಯ
ಮತಮಂ ಬಂಧುಗಳ ವಚನಮಂ ಮೀಱಿ ಮಹೋ ।
ನ್ನತಿಯಿಂ ನಿನ್ನೊಡನೋತಿ
ರ್ದತಿಚಪಳಗೆ ಭಾವಿಪಂದಿದಾವುದು ಚೋದ್ಯಂ ॥ ೧೨೨

[ ಎನ್ನಂದ ಮಾತನಂತಿಂ
ತೆನ್ನದೆ ತಡೆದಿರದೆ ಕೂಡುವಚ್ಚಿಗಮಂ ಕೇಳ್ ।
ನಿನ್ನೊಡನಿರ್ದ ಬೋಜಂಗರ್
ನಿನ್ನಂತಿರೆ ಬಂಜರಲ್ಲರದಟರ್ಕಳವರ್ ॥] ೧೨೩

ಎಡೆಯನರಸಾದೊಡೆ ಕೊಡೆಯು ಕಾವು ಮೇಗಾದುದೆಂಬಂತೆ ದೇಸಿಗನಪ್ಪ ನಿನಗೆರಡಿಲ್ಲದೆ ಸ್ನೇಹಮಂ ಮಾಡಿ ಕೂಡಿರ್ದನಗೆ ಸಂತೋ

1 ನಿಸಗಾಪೊತ್ತುಂ (ಕ)

ಷಮಂ ಮೊಱದ್ದೈ [ಎಂದಾತನೆರಡಿಲ್ಲದೆ ಕೂರ್ತುದನಱಿದನಪ್ಪುದನ ಱಿದು] ಕಡೆಗಣ್ಣ ನೋಟದೊಳ್ ಶೃಂಗಾರರಸಮುಮಂ ಮೆಲ್ನುಡಿಯೊಳ್ ಕಾರುಣ್ಯರಸಮುಮೊಡನೊಡನೆ ಪೆರ್ಚೆ ನುಡಿಯಲಿನ್ಮನಿದಪಳೆಂದಂಜನ ಚೋರಂ ಭಯಂಗೊಂಡು ನಲ್ಲಳ ಪಾದಮಂ ತಲೆಯೊಳ್ ಪೊತ್ತು ಕೊಂಡು [ಎನ್ನ ಮುಂದೆ ಮುನಿಯದಿರಿದಾವ ಗಹನಂ] ನಿನಗದಂ ತಂದೀ ವೆನಂಜದಿರೆಂದು ಸಂತಸಂಗೊಳಿಸಿ ಕಳ್ತಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ಣುಡಿಯಂ ನನ್ನಿಮಾಡಿ ಶುಕ್ಲಪಕ್ಷಂ ಪೋಪಿನಮಿರ್ದು ಕೃಷ್ಣಪಕ್ಷದ ಷ್ಟಮಿಯಂದು, ೧೨೪

ತುಱಿಪದಿನಂಜನಮಂ ವಿ
ಸ್ತರದಿಂದಂ ಕಣ್ಣೊಳಚ್ಚಿ ಕೊಂಡಾವರದಿಂ ।
ಭರದಿಂದದೃಶ್ಯರೂಪಿಂ
ದರಮನೆಯಂ ಪೊಕ್ಕು ಪದಕಮಂ ಕೊಂಡಾಗಳ್ ॥ ೧೨೫

ಪೊಱಮಟ್ಟು ಪೆರ್ಚಿನಿಂ ಮ
ಯ್ಯಱಿಯದೆ ಬರೆ ರತ್ನದೀಪ್ತಿ ದೆಸೆದೆಸೆಗೆಲ್ಲಂ ।
ಮಿಱುಗೆ ರವಿಕಿರಣನಿಕರದ
ತೆಱದಿಂ ತೊಳಲುತ್ತುಮಿರ್ಪ ದಂಡಕನೆಂಬಾ ॥ ೧೨೬

ತಳಾಱಂ ಕಂಡಱಿದಾತನಂಜನವಿದ್ಯೆಯಂ ಕೆಡಿಸಿ ಬೆನ್ನಟ್ಟಿಬರೆ ಭಯದಿಂದಂಜನಚೋರಂ ಪದಕಮನೀಡಾಡಿ[1]ಯಾ ಪುರದ ಕೋಂಟೆಯುಮಂ ವಿದ್ಯಾಧರಕರಣದಿಂ ಲಂಘಿಸಿ, ದೆಸೆಗೆಟ್ಟೋಡುವಾತನಂದು ಶ್ಮಶಾನಭೂಮಿ ಯೊಳಾಲದ ಮರದ ಕೆಳಗುರಿವ ಸೊಡರಂ ಕಂಡಲ್ಲಿಗೆ ಬಂದು ನಿಂದು ನೋಡುವಾಗಳಾಲದ ಮರದ ಕೊಂಬಿನೊಳ್ ನೂಱೊಂದು ಕಾಲ ನೆಲ ಪಂ ಕಟ್ಟಿ ನೆಲಪಿನ ಕೆಳಗೆ, ೧೨೭

ಪರಶು ಬಿಲು ಕೊಂತಮುಸಿ ತೋ
ಮರ ಮುದ್ಗರ ಭಿಂಡಿವಾಳ ಚಕ್ರಂ ಶೂಲಂ ।

1 ಬೆನ್ನಟ್ಟಿಹಾರಮನೀಡಾಡಿ (ಗ)

ಸುರಿಗಿ ಮೊದಲಾಗೆ ಮೂವ
ತ್ತೆರಡಾಯುಧಮಂ ಮಹೋತ್ಸವಂಬೆರಸಿನಿತಂ ॥ ೧೨೮

ನಿಲಿಪಿ ಪೂಜಿಸಿ ನೆಲಪಿನ ಕಾಲಂ ಕೊಯ್ಯಲಣ್ಮದೇಱುತ್ತುಮಿೞಿಯುತ್ತುಮಿರ್ಪನಂ ಕಂಡಂಜನಚೋರನವನಂ ಪಿಡಿದು ನೀನಾರ್ಗೆ ನೀಂ ಸಾಧಿಸುವ ವಿದ್ಯೆಯ ಪೆಸರೇನಿದನುಪದೇಶಂಗೆಯ್ದರಾರ್ ಪೇೞ್, ಪೇೞದಂದು ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಿಗಿಯಂ ಕಿೞ್ತು ಗಂಟಲ್ಗೆ ಪೂಡುವುದುಂ, [1] ಪ್ರಾಣಭಯದಿಂ ಬೆರ್ಚಿ, ೧೨೯

ಎನ್ನ ಪೆಸರ್ವರಸೇನಂ
ಸನ್ನುತಮೀವಿದ್ಯೆ ಗಗನಗಾಮಿನಿಪೆಸರಿಂ ।
ಮುನ್ನಿದನುಪದೇಶಂಗೆ
ಯ್ದನ್ನಱಿ ಜಿನದತ್ತಸೆಟ್ಟಿ ನಿರ್ಮಳಚರಿತಂ ॥ ೧೩೦

ಎಂಬುದುಮಂಜನಚೋರಂ ವರಸೇನನ ಮಾತಿಂಗೆ ಮುಗುಳ್ನಗೆ ನಕ್ಕು [2] [ಸಕಲಸದ್ಗುಣನಿಳಯನುಂ ಸದ್ಧರ್ಮಜಲನಿಧಿಚಂದ್ರನುಂ ಸತ್ಯನಿಧಿಯುಂ ದಯಾನಿಧಿಯುಮೆನಿಸಿ ನೆಗೞ್ದ ಜಿನದತ್ತಸೆಟ್ಟಿಯೆ ಮಂತ್ರೋಪದೇಶಂಗೆಯ್ದನೆನೆ, ನಿನಗೆ ಪಂದೆತನಮೆ ತಾನಾದೊಡಿನಿತಾನುಂ ಭಯಮಿಲ್ಲಮೊರ್ಮೆಯೆ ನೆಲಪಿನ ಕಾಲೆಲ್ಲಮಂ ಕೊಯ್ವೆಂ ನೀನಾದೊಡೇಱುತ್ತುಮಿೞಿಯುತ್ತುಮಿಂತೇಕಿರ್ದಪೈ ಭಯಂಬೇಡೆನೆ, ವರಸೇನನಿಂತೆಂದಂ :— ೧೩೧

ಎತ್ತಲಱಿವರ್ಮನುಷ್ಯ
ರ್ಚಿತ್ತಮನಾರಯ್ವನಾನಿವಂ ಕೊಯ್ದಗ್ಗಿಂ ।
ಸತ್ತೊಡೆ ಬೞಿಕ್ಕೆ ಕನಸಿನ
ಬತ್ತಕ್ಕೆಚ್ಚತ್ತು ಗೋಣಿಯಾಂತಂತಕ್ಕುಂ ॥ ೧೩೨

1 ಮೋದುವುದುಂ (ಗ) 2 ಚೋರನಾ ಮಾತಿಂಗೆ ಖಮಖಮಿಸಿ ನಕ್ಕು (ಗ)

ಸತ್ತು ಕೊಳ್ವ ಸ್ವರ್ಗದಿಂ ಬರ್ದು ಕೊಳ್ವ ನರಕಂ ಲೇಸು। [ಎಂಬುದು ನಾಣ್ಣುಡಿ.] ಜೀವಮುಳ್ಳೊಡೆ ಹಾಡಿ[1] ಕೊಂಡುಣಲಕ್ಕುಮೆಂಬ ನೀತಿಯುಂ ಬಿಟ್ಟು ಮಾರಿಯುಂ ಬಳಾರಿಯುಂ ಸಾಯುಗ್ಗಮಾನಾದೊಡೊಲ್ಲೆನೆನೆ, ಲಲಿತಾಂಗಂ [ತನ್ನಂತರಂಗದೊಳಿಂತೆಂದಂ:—ಮುಗಿಲಂ ಮುಟ್ಟಿದುದಱ ನೀಳ್ವಮಂ, ಮಕ್ಕಳ್ಪೆತ್ತಳ ಮದುವೆಯುಂ, ಪಟ್ಟಂಗಟ್ಟಿದನ ರಾಜ್ಯಮಂ, ಗೆಲ್ದಂಕದ ಗೆಲ್ಲಮಂ, ಮೋಕ್ಷಮನೆಯ್ದಿದನ ತಪಮಂ, ಪರ್ವತಮನೆತ್ತಿದನ ಸಾಹಸಮಂ], ಸಮುದ್ರಮಂ ಲಂಘಿಸಿದನಾರ್ಪಂ, ಇಂದ್ರತ್ವಮಂ ಪಡೆದವನ ಜಿನಭಕ್ತಿಯುಂ, ಕಾಮನನೊಲಿಸಿದಳ ಸೊಬಗಂ, ತ್ರಿಭುವನವಿಜಯಿಯ ವೀರಮಂ, ಚಕ್ರವರ್ತಿತ್ವಮನೆಯ್ದಿದನ ವಿದ್ಯೆಯುಮಂ ಬೆಸಗೊಂಬವನ ಬೆಳ್ತನದಂತೆ,[2] ೧೩೩

ಜಿನದತ್ತಂ ಜಿನಪಾದಪದ್ಮಮಧುಪಂ ದುಷ್ಕರ್ಮದಾವಾಗ್ನಿ ಸ
ಜ್ಜನಚೂಡಾಮಣಿ ಸರ್ವಜೀವಹಿತನಿಂದ್ರಾದ್ರಿಕ್ಷಮಂ ನಿರ್ಮಳಂ
ವಿನಯಾಲಂಕೃತನಾಗಮಾನ್ವಿತನುದಾರಂ ಸತ್ಯವಾಕ್ಯಂ ಜಗ
ಜ್ಜನಸಂಸ್ತುತ್ಯನಣುವ್ರತೈಕನಿಳಯಂ ವಾತ್ಸಲ್ಯರತ್ನಾಕರಂ ॥ ೧೩೪

[ಬಂದಿಱಿಂಬೆಯು ಪ್ರಾಣಕ್ಕಂ ತಪ್ಪದಾತಂ ನಿನ್ನ ಪ್ರಾಣಕ್ಕೆ ತಪ್ಪುವನೆ? ತಪ್ಪಲಱಿಯಂ, ನಾನಾತಳಾಱನ ಕೈಯೊಳ್ಸಾಯುದಲ್ಲಿ ಪರಿಚ್ಛೇದಮಂ ಮಾಡೆನ್ಸೆಂದು] ೧೩೫

ಕೊಡು ಮಂತ್ರಮನೆಲೆ ಬೇಗಂ
ಕುಡದಿರ್ದೊಡೆ ನಿನ್ನನಿಲ್ಲಿ ದೆಸೆವಲಿಗೆಯ್ವೆಂ।

---

[1] ಹಾಡಿಯುಣಲಪ್ಪುದೀ ನಿಶಿತಾಸ್ತ್ರಂಗಳ ಮೇಲೆ ಬಿರ್ದು ಮಾರಿಯುಂ (ಗ)

[2] ಬೆಳ್ತನದಂತೆ ದಯಾನಿಧಿಯುಂ ತತ್ವವಿದನುಂ ಮಹಾಪುರುಷನುಂ ಪಂಚಾಣುವ್ರತನಿಳಯನುಮಪ್ಪ ಜಿನದತ್ತಸೆಟ್ಟಿಯ ವಚನಮನವಿಶ್ವಾಸಂಮಾಡಿದಪೆ. ನಿನ್ನಂ ಬಿಟ್ಟು ಶೂನ್ಯಹೃದಯನುಂ, ನಿರ್ಭಾಗ್ಯರುಂ ಲೋಕದೊಳಿಲ್ಲೆಂದು ಜಿನೇಡಾಡಿ ಬೈದು ಬಗ್ಗಿಸಿ, ಕೊಡು ಮಂತ್ರಮನೆಲೆ ... (ಗ)

ತಡೆಯದೆನೆ ಪಂದೆಯುಂ ಪಾ
ವಡರ್ದಂತಿರೆ ಬೆರ್ಚಿ ನಾಡೆಯುಂ ವಗಸೇನಂ ॥ ೧೩೬

ಜಿನದತ್ತಸೆಟ್ಟಿ ಮುನ್ನಂ
ತನಗೆಂತಳವಡಿಸಿ ಪೇೞ್ದನಂತಾ ತೆಱದಿಂ ।
ಮನದ ಮಹಾಭಯದಿಂದಂ
ಜನಚೋರಂಗಱಿಯೆ ಪೇೞೆ ತಿಳಿಪಾದರದಿಂ ॥ ೧೩೭

ಪರಮಜಿನೇಶ್ವರಪದಮಂ
ಸ್ಮರಿಯಿಸಿ ಜಿನದತ್ತಸೆಟ್ಟಿಗಾದರದಿಂದಂ ।
ಕರಯುಗಮಂ ಮುಗಿದುಂ ನಿ
ರ್ಭರಚಿತ್ತಂ ಪಂಚಪದಮನುಚ್ಚರಿಸುತ್ತುಂ ॥ ೧೩೮

ಏೞು ನೆಲಪಂ ಮನಂಬಿಡೆ
ತೋಱುವ ನೂಱೆಂಟು ತೆಱದ ನೆಲಪಿನ ಕಾಲಂ ।
ಕೀೞಿಡದೆ ಶಂಕೆಯಿಂದಂ[1]
ಬೇೞೊಂದಂ ನೆನೆಯದನಿತುಮಂ ಲಲಿತಾಂಗಂ ॥ ೧೩೯

ಚೆಕ್ಕನೆ ಕೊಯ್ವುದುಂ, ಆಯುಧಾಗ್ರಮಂ ಮುಟ್ಟವೆಂದು ತಾಗದೆ ಪೋಗಣ್ಗೆ ನೆಗೆಯೆ ತದ್ವಿದ್ಯಾದೇವತೆ ಮುಂದೆ ನಿಂದು ಕಯ್ಯಂ ಮುಗಿದು ಬೆಸಸು ಬೆಸಸೆನೆ, ಲಲಿತಾಂಗಂ ಬೆಸನೇನೆನ್ನಂ ಸುಕವಿನಿಕರಪಿಕಮಾಕಂದನಲ್ಲಿಗೊಯ್ವುದೆಂಬುದುಂ ಅಂತೆ ಗೆಯ್ವೆನೆಂದು ಮೇರುಗಿರಿಯ ಭದ್ರಸಾಲನಂದನವನದೊಳಿರ್ದ ಜಿನದತ್ತನಂ ತೋಱಿ ನೆಲಕ್ಕಿೞಿಪಿ ವಿದ್ಯೆ ಪೋಪುದು[2] ಮಂಜನಚೋರಂ ಮೇರುಗಿರಿಯುಂ ನೋಡಿ ॥ ೧೪೦

1 ಶಂಕೆಯಿಲ್ಲದೆ (ಕ)

2 ಪೆಱತು ಬೆಸನಿಲ್ಲೆನ್ನಂ ಜಿನದತ್ತಸೆಟ್ಟಿಯಲ್ಲಿಗೊಯ್ಯೆಂಬುದುಂ ಲಲಿತಾಂಗನಂ ಮೇರುಗಿರಿಗೊಯ್ದು ಭದ್ರಸಾಲನಂದನವನದೊಳಿರಿಸಿ ಸರ್ವ್ವಚೈತ್ಯಚೂಡಾಮಣಿಯುಂ ದೂರದೊಳಿರ್ದು ತೋಱಿ ಪೋಪುದುಂ (ಕ)

ಏಂ ಭಕ್ತಿಯಿಂ ವಿಧಾತ್ರಂ
ತಾಂ ಭಾವಿಸಿ ನೋಡಿ ಮಾಡಲೆನಿಸಿದ ಮಾನ ।
ಸ್ತಂಭಮೆನಿಸಿರ್ದುದೊಳ್ಳಿಂ
ಶುಂಭಚ್ಛೋಭಾಕರಂ ಸುರೇಶ್ವರಶೈಲಂ ॥ ೧೪೧

ಎಂದು ಪೊಗೞ್ದು, ೧೪೨

ಅಗಣಿತಮಪ್ಪ ಕೆಂದಳಿರ ಗೊಂದಣದಿಂ ತುಱುಗಿರ್ದ ಮಾವು ಸಂ
ಪಗೆ ಸುರಹೊನ್ನೆ ಮನ್ಮಥನ ಬೀಡಿನ ಕೆಂಗುಡಿಯೆಂಬ ಚೆಲ್ವಿನಿಂ
ಸೊಗಯಿಪ ಪಲ್ಲವಪ್ರಕರದಿಂ ನೆಱೆದೊಪ್ಪುವಶೋಕೆ ನಾಗಸಂ
ಪಗೆ ಹರಿಚಂದನಂ ಬಗೆಗೆವಂದುವು ಮೇರುನಗೋಪಕಂಠದೊಳ್ ॥ ೧೪೩

ಪಾಡುವ ತುಂಬಿಯಿಂ ಕುಕಿಲ್ವ ಕೋಗಿಲೆಯಿಂ ಕಡುರಮ್ಯಮಾಗಿರಲ್
ತೀಡುವ ದಕ್ಷಿಣಾನಿಳನಿನಱ್ಕರಿನೋತಿರದೊರ್ವರೊರ್ವರೊಳ್
ಕೂಡುವ ದೇವದಂಪತಿಗಳಿಂದೆಡೆಯಾಡುವ ಖೇಚರಾಳಿಯಿಂ
ದಾಡುವ ಕೇಕಿಯಿಂ ಮನಮನಿರ್ಕುಳಿಗೊಳ್ವುದು ನೋೞ್ಪಡೀಬನಂ ॥

ಎಂದು ಮೆಚ್ಚಿ ಪೊಗೞುತ್ತುಮತಿರಮಣೀಯಮಪ್ಪ ನಂದನವನದೊಳ್ ಶುದ್ಧಸ್ಫಟಿಕದ ನೆಲಗಟ್ಟಿಂ ಪಚ್ಚೆಯ ಕಂಬಂಗಳಿಂ ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಗೆಯಿಂ ವಜ್ರದ ಸೋಪಾನಂಗಳಿಂ ಪವಳದ ಕಿಲ್ಗಳಿಂ ಪೊನ್ನ ಕೇರ್ಗಳಿಂ ವೈಡೂರ್ಯದ ಪಡಿಗಳಿಂ ಸೂರ್ಯಕಾಂತದ ದ್ವಾರಬಂಧಂಗಳಿಂ ಪದ್ಮರಾಗದ ಕಲಶಂಗಳಿಂ ಪುಷ್ಯರಾಗದಮಕರತೋರಣಂಗಳಿಂ ಮುತ್ತಿನ ಸೂಸಕಂಗಳಿಂ ಮಾಣಿಕದ ಪ್ರತಿಮೆಗಳಿಂದೊಪ್ಪುವಕೃತ್ರಿಮಚೈತ್ಯಾಲಯಂಗಳಂ ಕಣ್ಣಣಿವಿನಂ ನೋಡುತ್ತುಂ, ಜಿನಪ್ರತಿಮೆಗಳಂ ಭಕ್ತಿಯಿಂ ಪಲತೆಱದರ್ಚನಾದ್ರವ್ಯಂಗಳಿಂದರ್ಚಿಸುತ್ತುಂ ಬಲಗೊಂಡು ಪೊಡೆಮಡುವ ದೇವವಿದ್ಯಾಧರಸಮೂಹಮಂ ನೋಡುತ್ತುಂ ಪೊಗೞುತ್ತುಂ ಉತ್ತಮವೈರಾಗ್ಯದ ಪೆರ್ಚುಗೆಯಂ ತಡೆಯದೆ ಸೆಟ್ಟಿಯನೆಯ್ದೆವಂದು, ೧೪೫

ಅಳಿನಿಕುರಂಬಮಶೋಕೆಯ
ತಳಿರಂ ಮುಸುಕುವವೊಲಂಘ್ರಿಪಲ್ಲವಮಂ ಕಂ |
ತಳತತಿಗಳ್ ಮುಸುಱೆ ಮಹೋ
ಜ್ಜ್ವಳತೇಜಂ ವೈಶ್ಯಜಂಗೆ ತಾಂ ಪೊಡೆವಟ್ಟಂ || ೧೪೬

ಅಂತು ತನಗೆ ಪೊಡೆವಟ್ಟಂಜನಚಕೋರನಂ ಜಿನದತ್ತಸೆಟ್ಟಿ ನೋಡಿ ಬೆಱಗಾಗಿ ತನ್ನೊಳಿಂತೆಂದಂ :— ೧೪೭

ಬಱಿದೆ ಕುಣಿವಂಗೆ ಮತ್ತಂ
ಪಱೆಯುವನುಂ ಕೂಡಿದಂತೆ ಧಾರಿಣಿಯಂ ಮು |
ನ್ನಱಿಯಟ್ಟಿ ಕಳ್ವ ಕಳ್ಳಂ[1]
ಗಱಿಕೆಯ ಸದ್ವಿದ್ಯೆ ಯಾರ ದೆಸೆಯಿಂದಾಯ್ತೋ || ೧೪೮

ಮೂಗಿನೊಳುಳ್ವಾತಂಗೆ ನೇಗಿಲಂ ಕೊಟ್ಟರೆಂಬಂತೆ [ಗಾಳಿಯಂ ಮೆಲ್ವನ ಬಾಯ್ಗೆ ವಲಂ ಪೊಯ್ದರೆಂಬಂತೆ ಬಡಿದುಕೊಳ್ವಂಗೆ ಸಾಲಂ ಗೊಟ್ಟರೆಂಬಂತೆ ಕೊಲಲ್ಬರ್ಪಂಗಿದಿರ್ವೋದರೆಂಬಂತೆ] ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ ಪಿಡಿಯಬಂದಂಗೆ ಕೈನೀಡಿ ಕೊಟ್ಟರೆಂಬಂತೆ ಲೋಕದೊಳೀತಂ ಮಾಯಾವಿದ್ಯೆಯುಪ್ಪಂಜನಘುಟಿಕೆಯಿಂ ಜನರ ಸರ್ವಸ್ವಮಂ ಕಳ್ವನೀತಂಗೆ ಗಗನಗಾಮಿನೀವಿದ್ಯೆ ಸಾಧ್ಯಮಾದುದೀತನಿನ್ನು ನಾಡೆಲ್ಲಮಂ ನಿವಾಳಿವಟ್ಟಂಮಾಡಿ ಕಳದೆ ಮಾಣನೆಂದು ಪಾಪಭೀರುತ್ವದಿಂ ಬೆರ್ಚಿ ಲಲಿತಾಂಗನ ಮೊಗಮಂ ನೋಡಿ,[2] ೧೪೯

---

1 ಕೊಲ್ವಕಷ್ಟಂಗಱಿಕೆಯ [ಗ]

2 [ಎನಗೆ ಕಪಟಂ ಬೇಡೀ ಸದ್ವಿದ್ಯೆಯಂ ಮನದಳ್ಕಱಿಂ
ನಿನಗೆ ನಯದಿಂ ಕೊಟ್ಟರ ಪೇೞಾರುಮಂಬುದುಮಗಳಾ
ಜನಪತನಯಂ ಕೀರ್ತಿಶ್ರೀವಲ್ಲಭಂಗೆ ಜಿನಾಂಘ್ರಿಕೋ
ಕನದಮಧುಪಂಗೆಂದಂ ತನ್ನೊಂದಾವಿದ್ಯೆಯ ಮಾರ್ಗಮಂ] ೧೪೭

ನಿನಗೆಂತು ಬಂದುದೀ ಪೇ
ದಿನಿಪೂಜಿತವಪ್ಪ ಪಿದ್ಯೆ ಪೇಳೆಂಬುದುಮಂ ।
ಜನಚೋರನದಱ ಕಥೆಯಂ
ವಿನಯದಿನಂದಱಿಪಿ ಬಳಿಕಮಿಂತೆಂದಂ ॥ ೧೫೦

ಜಿನದತ್ತ ನಿನ್ನ ನುಡಿಯಂ
ಜಿನವಚನಮೆ ತಿಬ್ಬವೆಂದು ನಂಬಿದ ಫಲಮಂ ।
ಮನವಾರೆ ಕಂಡೆನದಱಿಂ
ದೆನಗೆ ಶರಣ್ಣೆನರ ನಿಮ್ಮ ಚರಣಯುಗಂಗಳ್ ॥ ೧೫೧

ಕರ್ಮೋದಯದಿಂ ತಂದೆಯ
ಕೂರ್ಮೆಯುಮಂ ತಾಯ ಮಾತುಮಂ ಬಗೆಯದೆ ಸ ।
ದ್ಧರ್ಮಮುಮಂ ಬಿಸುಟುರ್ಕಿಂ
ದುರ್ಮತಿಯಾಂ ಖಳರ ಗೋಷ್ಠಿಯಿಂದಂ ಕೆಟ್ಟೆಂ ॥ ೧೫೨

ಮೊಱೆಯಱನೆಂಬಿವನೇನುಂ
ದಱಿಯೆಂ ಮತಿಗೆಟ್ಟು ದುಷ್ಟಸಂಗತಿಯಿಂದಂ ।
ಮಱೆದು ಗುಣಮೆಲ್ಲಮಂ ಮೆ
ಯ್ಯಱಿಯದೆ ಕೆಟ್ಟಾಡಿದೆಂ ಮಹಾಪಾತಕನೆಂ ॥ ೧೫೩

ತಡೆಯದೆ ಮುದದಿಂದಮೃತಂ
ಬಡೆದುಮುಣಲ್ಪಡೆಯರೆಂಬ ನಾಣ್ಣುಡಿಯೆನ್ನೊಳ್ ।
ದೃಢಮಾದುದು ಸದ್ಧರ್ಮಂ
ಬಡೆದುಂ ಮರುಳಾಗಿ ಕಾಲಮಂ ವ್ಯಥೆಗಳೆದೆಂ ॥ ೧೫೪

ಸೊಂಬನಂಗಡಿಯಂತೆ ಪಸರಮಿಲ್ಲದೆ, ಪುೞು ಮುಟ್ಟಿದ ಸಸಿಯಂತೆ ನಯಮಿಲ್ಲದೆ, ಬಿಲ್ಲಂ ಬಿಟ್ಟನಂತೆ ಗುಣಮಿಲ್ಲದೆ, ಸೂಳೆಯಂತೆ ಸಜ್ಜನಿಕೆಯಿಲ್ಲದೆ, ಬೂತಿನಂತೆ ಪೆಂಪಿಲ್ಲದೆ, ತೃಣದಂತೆ ಬಿಣ್ಪಿಲ್ಲದೆ, ಪಾಪಿಯಂತು ತ್ತಮದಾನಮಿಲ್ಲದೆ, ನ್ಯಾಯಮಿಲ್ಲದರಸಿನೂರಂತೆ ಮರ್ಯಾದೆಯಿಲ್ಲದೆ,

ಕಳ್ಳರ ಕೋಟ್ಟದಂತೆ ಧರ್ಮಮಿಲ್ಲದೆ, ಗಹ್ವರದಂತೆ ಸನ್ಮಾರ್ಗಮಿಲ್ಲದೆ [ ಪುಟ್ಟುಗುರುಡನಂತೇನುಮಂ ಕಾಣದೆ ] ಕೆಟ್ಟೆನೆಂದು ತನ್ನಂ ತಾನೆ ನಿಂದಿಸಿಕೊಂಡು, ಜಿನವಚನದೊಳಾದ ದೃಷ್ಟಾಂತಮುಮಂ, ಸಮ್ಯಕ್ತ್ವ ಚೂಡಾಮಣಿಯೊಳಾದ ಮಹಾಗುಣಮುಮಂ, ಪೊಗೞ್ದು [1] ಬೞಿಕ್ಕಿಂತೆಂದಂ :—ನಿಮಗೆ ಪಂಚನಮಸ್ಕಾರಮಲ್ಲದುೞಿದ ಮಂತ್ರಮುಂ ಅರ್ಹತ್ಪರಮೇಶ್ವರನಲ್ಲದುೞಿದ ದೈವಮುಂ ಕೈಕೊಳ್ವುವಲ್ಲ; ಸಮ್ಯಕ್ತ್ವಚೂಡಾಮಣಿಯೆಂದು ಪ್ರಸಿದ್ಧರಾಗಿರ್ಪ ನಿಮಗೀವಿದ್ಯೆ ತಾನೆಂತು ಬಂದುದೆನೆ, ವಣಿಗ್ವಂಶಲಲಾಮನಿಂತೆಂದಂ :— ೧೫೫

ನೀಂ ಪೇೞ್ದಂತುಟೆ ಜಿನನಿಂ
ದಂ ಪೆಱತೆನಗಿಷ್ಟದೈವಮಿಲ್ಲನುನಯದಿಂ ।
ಪೆಂಪಿನ ಪಂಚನಮಸ್ಕೃತಿ
ಯಿಂ ಪೆಱತೆನಗೊಂದುಮಿಲ್ಲ ವರಮಂತ್ರಂಗಳ್ ॥ ೧೫೬

ಈ ಗಗನಗಾಮಿನಿಯೆಂಬ ವಿದ್ಯೆ ಯೆನಗೆ ಬಂದ ವೃತ್ತಾಂತಮಂ ಕೇಳಿದಿನ್ನೊಳ್ ಪೇೞ್ವೆನದೆಂತೆನೆ : — ೧೫೭

[ಮುದದಿಂದಂ ಜಿನಪದಮಂ
ಬುದು ನಾಡಾ ನಾಡಿನೊಳಗೆ ನಾಡೆ ಬೆಡಂಗಿಂ ।
ಪುದಿದೊಪ್ಪಿರ್ದುದು ಬಹುಜನ
ದೊದವಿಂದಂ ಭೂಮಿತಿಲಕಮೆಂಬುದು ನಗರಂ ॥ ೧೫೮

ಅದನಾಳ್ವಂ ನರಪಾಲನೆಂಬರಸನಾತನ ರಾಜಶ್ರೇಷ್ಠಿ ಸೌಂದರನೆಂಬನಾತನ ಭಾರ್ಯೆ ಸುನಂದೆಯೆಂಬಳಂತವರಿರ್ವರ್ಗಂ ಶ್ರೀವರ್ಮಂ ಜಯವರ್ಮಂ ಜಿನವರ್ಮಂ ಜಿನದತ್ತಂ ಜಿನದಾಸಂ ಧನ್ವಂತರಿಯೆಂಬೈರ್ ಮಕ್ಕಳಾಗಿ ಬಳೆಯುತ್ತಿರೆ, ಆ ನರನಾಥನ ಪುರೋಹಿತಂ ಸೋ

---

1 ನಿಂದಿಸಿಕೊಂಡು ಸಟ್ಟುಯುಂ ಪೊಗೞ್ದು (ಗ)

ಮಶರ್ಮನೆಂಬ ಬ್ರಾಹ್ಮಣಂಗಮಾತನ ಪೆಂಡತಿಯಗ್ಗಲೆಗಂ ವಿಶ್ವಾನು ಲೋಮನೆಂಬ ಮಗನಾಗಿ ಬಳೆಯೆ] [1] ॥ ೧೫೯

ಕರಮೊದರದಿಂ ಧನ್ವಂ
ತರಿಗಂ ವಿಶ್ವಾನುಲೋಮದ್ವಿಜಗಂ ಸ್ನೇಹಂ ।
ಪಿರಿದಾಗೆ ಕೂರ್ಮೆಯಿಂ ದಿ
ರ್ವರುಮಿರ್ಪರ್ಪಾಲ ನೀರ ಕೂಟದ ತೆಱದಿಂ ॥ ೧೬೦

ಅಂತಿರ್ವರುಂ ನಖಮಾಂಸಂಗಳಂತೆ ಸಂಪ್ರೀತಿಯಿಂ ಕೂಡಿ ಬಳೆಯುತ್ತುಂ, ದುರ್ಜನಸಂಸರ್ಗದಿಂ ಸಪ್ತವ್ಯಸನಪರರುಂ ದುಶ್ಚರಿತರು ಮಾಗೆ, ಸೌಂದರಸೆಟ್ಟಿಯುಂ ಸೋಮಶರ್ಮನುಮೆಲೆಗೆಯುಂ ದುಷ್ಟ ತನಮಂ ನಿವಾರಿಸಲಾಱದೆಯರಸನ ಮುಂದೆ ತೋಱಿದು ಕಳವುದುಮವ ರಿರ್ವರುಂ ತಂದೆತಾಯ್ಗಳನಗಲ್ದಲ್ಲಿರ್ದು ॥ ೧೬೧

ಅರಮನೆಯುಂ ಪೊಕ್ಕವರಿ
ರ್ವರುಮೊಯ್ಯನೆ ಕಳ್ದು ದಿವ್ಯರತ್ನಂಗಳನೊ ।
ಪ್ಪಿರೆ ಪೊಱಮಡಲವರಂ ನಿ
ಷ್ಠುರಕೋಪಂ ಕಂಡು ಜಡಿದು ಕೊಂಡು ತಳಾಱಂ ॥ ೧೬೨

ಅರಸಂಗೊಪ್ಪಿಸೆ ಭೂಪಂ
ಕರಮೆಲ್ಲದೆ ಮುನಿದು ಕೊಲೆಯನೊರ್ಮೆಗೆ ಮಾಣ್ದಂ ।
ನಿರುತಂ ನೀವಿರ್ವರುಮೀ
ಪುರದಿಂ ಪೊಱಮಟ್ಟು ಪೋಗಿಮಿದೊರ್ಡೆ ಕೊಲ್ವೆಂ ॥ ೧೬೩

ಎಂಬುದುಮವರಿರ್ವರುಂ ತಮ್ಮ ಜನನಿಯರ ಪೆಂಡಿರ ಮೋಹದಿಂ ತಂದೆಯುಂ ಬಂಧುಗಳುಮಱಿಯದಂತಾಗೆ ಕಳ್ದು ಬಂದು ತಮ್ಮ ದೇಶ ತ್ಯಾಗಮನವರ್ಗಱಿಪೆ ॥ [2] ೧೬೪

---

1 ಜನಪದದವೊಂಬ ದೇಶದೊಳ್ ಭೂತಿಳಕವೆಂಬುದು ಪುರಮದನಾಳ್ವಂನರ ಪಾಲನೆಂಬರಸನಾತನ ರಾಜಶ್ರೇಷ್ಠಿ ಸುಂದರಜಿನಭಕ್ತನೆಂಬನಾತನ ಮಗಂ ಧನ್ವಂ ತರಿಯೆಂಬಂ; ಮತ್ತಮಾ ನರಪಾಲನ ಪುರೋಹಿತಂ ಸೋಮಶರ್ಮನೆಂಬನಾತನ ಮಗಂ ವಿಶ್ವಾನುಲೋಮಂ. (ಗ)

2 ಎಂಬುದುಮವರ್ ಪೊಱಮಟ್ಟು ಪೋಗೆ ಜನನಿಯರ್ ಕಳ್ದು (ಗ)

ಕಡುಮೋಹದಿನಾತ್ಮಜರಂ
ಬಿಡಲಾಱದೆ ನೆಱೆಯೆ ತೊಱೆದು ನಂಟರುಮಂ ನೇ ।
ರ್ಪಡೆ ಗಂಡರುಮಂ ತಾಮುಮ
ರೊಡಮೆಂದರ್ಮೋಹದಿಂದೆ ಕಿಡದವರೊಳರೇ ॥ ೧೬೫

ಇನಿಯರ ಮೇಗಣ ಮೋಹದಿ
ನನುಜರ ಬಂಧುಗಳ ತಾಯ ತಂದೆಯ ಮಾತಂ ।
ಮನದೊಳ್ ಭಾವಿಸಲೊಲ್ಲದೆ
ವನಿತೆಯರುಂ ಗಂಡರೊಡನೆ ಕೆಟ್ಟೊಡಮೆಂದರ್ ॥ ೧೬೬

ಅಂತಾಗಳಿರ್ವರುಂ ತಮ್ಮ ಪೆಂಡಿರುಂ ತಾಯ್ಗಳುಂ ವೆರಸು ಗಜಪುರಕ್ಕೆ ಪೋಗಿ, ಯಮದಂಡನೆಂಬ ತಳಾಱನಂ ಸಾರ್ದೋರೊರ್ವರಯ್ವರ್ಗಂ ನಾಯಕರಾಗಿ ಪರದೇಶಂಗಳೊಳ್ ಕಳ್ದು ತಂದು ವಿಷಯಸುಖಂಗಳಂ ಸಲಿಸುತ್ತುಮಿರ್ದೋರ್ವರ್ ವಿಶ್ವಾನುಲೋಮಂ ಧನ್ವಂತರಿಗಿಂತೆಂದಂ ॥ ೧೬೭

ಆನೊಂದಂ ಬೇಡಿದಪೆಂ
ನೀನದನೆನಗೀವುದಣ್ಣ ಮಾರ್ಕೊಳ್ಳದೆ ಪೋ ।
ನೀನೆನ್ನದೆ ಮುನಿಸಿಲ್ಲದೆ
ಮೋನಂಗೊಂಡಿರದೆ ಬಿಚ್ಚತಿಕ್ಕೆಯೊಳನಿಸಂ ॥ ೧೬೮

[1] ಅದಾವುದೆಂದೊಡೆ, ನೀಂ ಮುನ್ನಿನಂತೆ ಮರುಳಾಗಿ ಬಸದಿಗೆ ಪೋಪುದುಮಂ ಋಷಿಯರೊಡನೆ ಮಾತಾಡುವುದುಮಂ ಮಾಣ್ಬುದೇಕೆಂ

---

1 ನಿಮ್ಮಯ್ಯನಂತೆ ಬಸದಿಗೆ ಪೋಪುದುಮಂ, ಋಷಿಯರ್ ಶ್ರಾವಕರೊಡನೆ ನುಡಿವುದಂ ಮಾಣೆಂದು ಬೇಡಿಕೊಂಡು ನೂರುಳ್ಗೊಂಡೊಡಂಬಡಿಸಿ ಸುಖಮಿರ್ದೊಂದುದಿವಸಂ ತೊಱೆಗೆ ಪೋಗಿ ಬರುತ್ತುಮಾನೆಯ ಭಯದಿಂ ಪುರದ ಪೊಱಗಣ ಸಹಸ್ರಮಂಡಿತಮೆಂಬ ಬಸದಿಯಂ ನೋಡಿ ಪೊಕ್ಕನೆಯುಂ ಪೋದ ಬೞಿಕ್ಕಂ ಪೋಪೆನೆಂಬುದುಂ ಮಱೆ ಪಿರಿದಾಗೆ ಪೋಗಲಱಿಯದೆ ಅಲ್ಲಿರ್ದು ಪರ್ವೋಪವಾಸಂಗೆಯ್ವ ಶ್ರಾವಕರ್ಗೆ ಧರ್ಮಾಚಾರ್ಯರ್ ಧರ್ಮಶ್ರವಣಂಗೆಯ್ಯುತ್ತುಮಿರೆ ಧನ್ವಂತರಿ ವಿಶ್ವಾನುಲೋಮನುಂ ನಿದ್ರೆಗೆಯ್ಸಿ ಮೆಲ್ಲನೆರ್ದು ತಾಂ ಕೇಳ್ದನಗೊಂದು ವ್ರತಮಂ ದಯೆಗೆಯ್ವುದೆಂಬುದುಂ, ಅಪರಾಸನ್ನಭವ್ಯನೆಂದಱಿದು, ತರಂಟುವದೞೆಯಂ ಕಂಡಲ್ಲದುಣಲ್ವೇಡೆಂದು ಕುಡೆ, ಕೈಕೊಂಡು ಬಂದು ದಿವಸವುಣಲ್ಬಂದವಸರಿಸಿ ನೆರೆಮನೆಯ ಕುಂಬಾರನ ತರಂಟನಪ್ಪುದನಱಿದು ಮಣ್ಣಕುೞಿಗೆ ಪರತಂದು ಕಂಡೆನೆಂದು ಬರೆಯಾತಂ ಕಂಡ ಪೊನ್ನಂ ಕಂಡನೆಂದು ತಂದೊಪ್ಪಿಸಿ, ಆನೀಪೊನ್ನಂ.... (ಗ)

ದೊಡೆ, [ಎಮ್ಮ ಪಿರಿದಪ್ಪ ಭೋಗಕ್ಕಂತರಾಯಮಕ್ಕುಮದಱಿಂ ಮು ನ್ನಮೆ ಪೇೞ್ವೆನೆಂದು ಕೈಯಂ ಮುಗಿದು] ಸೂರುಳ್ಗೊಂಡೊಡಂಬಡಿಸಿ ಸಂತಸದಿಂದಿರೆ, ಕೆಲವುಂದಿವಸಂ ಕಳಯಲೊಂದುದಿವಸಂ ॥ ೧೬೯

ಪುರದಿಂ ಪೊಱಮಟ್ಟಿರ್ವರು
ಮುರುಮುದದಿಂ ಕೆಱೆಗೆ ಪೋಗುತಿರೆ ಮದದಿಂದಂ ।
ಕರಿಯೊಂದು ಸೊರ್ಕಿ ಪಲರಂ
ನಿರಂಕುಶಂ ಮಸಗಿ ಕೊಲುತೆ ಬರ್ಪವಸರದೊಳ್ ॥ ೧೭೦

ಕಂಡಿರ್ವರುಮೆಯ್ದೆ ಭಯಂ
ಗೊಂಡೋಡಲುಮತ್ತಲಿತ್ತಲೆಡೆಯಿಲ್ಲದೆ ವೇ ।
ತಂಡಂ ಪರಿತರೆ ಭೋಂಕನೆ
ಬೆಂಡಾಗಿ ಮಹಾಪ್ರತಿಜ್ಞರಿರ್ವರುಮಾಗಳ್ ॥ ೧೭೧

ಕೆಲದೊಳಿರ್ದ ಸಹಸ್ರಕೂಟಮೆಂಡಿತಮೆಂಬ ಜಿನಾಲಯಮನೋ ಡಿಪೋಗಿ ಪೊಕ್ಕಾಸಯು ಭಯಂ ಪಿಂಗುವಿನಮಿರ್ದು ಪೋಗಲೆಂದಿ ರ್ಪುದುಂ, ಮಟೆ ಪಿರಿದಾಗಿ ಬರೆ, ಮತ್ತೆಯುಂ ಪೋದ ಬಟಿಕ್ಕಂ ಪೋಪೆ ವೆಂದಿರ್ಪುದುಂ, ನೇಸಱ್ ಪಡುವುದುಂ, ಪುರದ ಬಾಗಿಲ ಪಡಿ ಕೀ ಱುವುದುಂ, ಪೋಗಲ್ಕಡದೆ, ಬಸದಿಯೊಳ್ ಧನ್ವಂತರಿ ವಿಶ್ವಾನುಲೋ ಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದ ನನ್ನೆಗಂ ಪರ್ವೋಪವಾಸಮಿರ್ದ ಭವ್ಯಜನಕ್ಕ ॥ ೧೭೨

ವರಧರ್ಮರೆಂಬ ಮುನಿಪರ್
ದುರಿತಹರರ್ ಧರ್ಮಮಂ ಮನಂಬಿಡೆ ಪೇೞು ।
ತ್ತಿರೆ ಮೆಲ್ಲನೆ ಧನ್ವಂತರಿ
ಪದಪಿಂದೆಚ್ಚತ್ತುಮಿರ್ದನಿರ್ಪನ್ನೆವರಂ ॥ ೧೭೩

ನೆಲದೊಳ್ಪಟ್ಟಿರ್ದ ವಿಶ್ವಾನುಲೋಮನಂ ತಡವರಿಸಿ ನೋಡಿ ಮರ ವಟ್ಟಿರ್ದನೆಂಬುದನಱಿದು ಕಿವಿಯ ತೂಂತಂ ಕಳದು ಮೆಲ್ಲನೆೞ್ಚು ಕುಳ್ಳಿ ರ್ದು ಕೇಳ್ವ ಪ್ರಸ್ತಾವದೊಳ್ ॥ ೧೭೪

ಪರಧರ್ಮಮನುತ್ಸವದಿಂ
ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ ।
ಪರಧರ್ಮಮನಱಿವಿಂದಂ
ಸ್ಥಿರಮನನಾಗಱಿಯಲೊಲ್ಲದಾತನೆ ಬಱಿಯಂ ॥ ೧೭೫

ಎಂಬುದಂ ಕೇಳ್ದು ಕರ್ಮೋಪಶಮದಿಂದವರಂ ಸಾರ್ದನ ಗೊಂದು ವ್ರತಮಂ ದಯೆಗೆಯ್ಯೆಮೆಂಬುದುಂ ಪರಧರ್ಮಭಟ್ಟಾರಕರ ದಿವ್ಯಜ್ಞಾನಿಗಳಪ್ಪುದಱಿಂದಾಸನ್ನಭವ್ಯನೆಂದಱಿದು, ವಾತ್ಸಲ್ಯದಿಂ ನಿಚ್ಚಲುಂ ತಱಂಟುವಲೆಯಂ ಕಂಡಲ್ಲದುಣಲ್ವೇಡೆಂಬುದುಂ ಅಂತೆ ಗೆಯ್ವೆ ನೆಂದು ವ್ರತಮಂ ಕೈಕೊಂಡು ಮನೆಗೆ ಪೋಗಿ, ಕೆಲವುದಿವಸಮದೆ ರೀತಿಯೊಳಿರ್ದೊಂದು ದಿವಸಮುಣಲ್ಬಂದು ॥ ೧೭೬

ತೊಟ್ಟನೆ ನೆನೆದಂ ವ್ರತಮಂ
ಕೆಟ್ಟೆನನುತ್ತಂತೆ ತನ್ನ ಮನದೊಳ್ ಪೇವಂ ।
ಪುಟ್ಟೆ ಮುನಿ ಪೇೞ್ದ ಮಾತಂ
ಬಿಟ್ಟೊಡೆ ಪಿರಿದಪ್ಪ ದೋಷಮುಂಡಾದರದಿಂ ॥ ೧೭೭

ನೆರೆಮನೆಯ ಕುಂಬಾಱಂ ತಱಂಟುವಲೆಯನಪ್ಪುದಱಿಂ ಮನೆಯೊಳಱಸಿ ಕಾಣದೆ ಮಣ್ಣ ಕುೞಿಗೆ ಪೋಗಿ ದೂರದೊಳಾತನ ಬೋಳ ಮಂಡೆಯಂ ಕಂಡು ಕಂಡೆನೆಂದು ಸಂತಸದಿಂ ಕೂಗಿ ಬರೆ, ಕಾಕತಾಳೀಯ ನ್ಯಾಯದಿಂದಾತಂ ತನ್ನ ಕಂಡ ನಿಕ್ಷೇಪಮಂ ಕಂಡನಕ್ಕುಮೆಂದಗಿದು ನಡುವಿರುಳಪ್ಪುದುಮಾತಂ ಕಂಡ ಪೊನ್ನಂ ತಂದೊಪ್ಪಿಸಿ ಕೈ ಮುಗಿದು ॥

ಆನೀ ಪೊನ್ನಂ ಕಾಣ್ಬುದು
ಮಿಾ ನೀನೊಡನಡಸಿ ಕಂಡೆನೆಂದೊಡೆ ಭಯದಿಂ ।
ದಾನಂಜಿ ತಂದು ಕೊಟ್ಟೆಂ
ನೀನಱಿವೈ ಮುನಿದು ಕೊಲ್ವೊಡಂ ರಕ್ಷಿಪೊಡಂ ॥ ೧೭೮

ಎನೆ ಧನ್ವಂತರಿ ಮುನಿಯಂ
ನೆನೆದು ಮಹಾಹರ್ಷಚಿತ್ತದಿಂದಾ ವ್ರತಮಂ ।

ನೆನೆದು ಮುನಿಪತಿಯು ಪೇಚನದಿ
ನಿನಿತಾದುದು ಪಡೆವು ಸುವ್ರತಂ ಕೇವೞಮೇ ‖ ೧೭೦

[1] ಎಂದಾತಂಗೆ ಸಾಲ್ವನಿತು ಪೊನ್ನಂ ಕೊಟ್ಟು ಕೞುಪಿ ಮಱುದಿವಸಂ ಬಸದಿಗೆ ಬಂದು ಪರಧರ್ಮಭಟ್ಟಾರಕರಂ ವಂದಿಸಿ ತನ್ನ ಲಾಭಮಂ ಪೇೞ್ದನಗಿನ್ನೊಂದು ವ್ರತಮಂ ದಯೆಗೆಯ್ಯಿಮೆಂದು ‖ ೧೭೧

ಕರಮುಗಿದು ಬೇಡುವುದುಂ ಮುನಿ
ವರನೆಂದಂ ಬೇಡ ಮಗನೆ ಪೆಸರಱಿಯದ ಭೂ ।
ಮಿರುಹಂಗಳ ಪಣ್ಗಳನಾ
ದರದಿಂ ಮೆಲಲೆಲ್ಲಿಯುಮಾದೊಡಂ ಪಸಿವಿಂದಂ ‖ ೧೭೨

ಎಂಬುದುಂ; ಮಹಾಪ್ರಸಾದಮಂತೆ ಗೆಯ್ವೆನೆಂದು ಪೊಡೆವಟ್ಟು ಮನೆಗೆ ಬಂದು ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬರಸು ಪರದೇಶಕ್ಕೆ ಪೋಗಿ ಕಳ್ದು ಬಹುದ್ರವ್ಯಂ ಬಸಮಾದುದಱಿಂ ಪೆರ್ಚಿ ಮಗುೞ್ದು ಬರುತ್ತುಮೊಂದಡವಿಯೊಳ್ ಬೀಡಂ ಬಿಟ್ಟು ಕೈಯೊಳ್ ಸಂಬಳಮಿಲ್ಲದೆ ಮಱುಗಿ ಸೈರಿಸಲಾಱದೆ ಪಸಿವಿಂ ತಂತಮ್ಮ ಭೃತ್ಯರ್ಗೆ ಪೇರಡವಿಯೊಳ್ ಪಣ್ಫಲಂಗಳನಱಿಸಿ ತನ್ನಿಮೆಂದು ಪೇೞ್ವುದುಮವರ್ಪೋಗಿ ‖ ೧೭೩

ಸಾರಂ ಕಂಪಿನೊಳಿವು ಕ
ರ್ಪೂರಮುಮಂ ಗೆಲ್ವವೆಸಿಸಿ ಕಂಂಕುಮರುಚಿಯಿಂ ।
ದೋರಂತೊಪ್ಪುವವಂ ಕಾಂ
ಚೀರಮಹೀರುಹದ ಪಣ್ಗಳಂ ಕಂಡಾಗಳ್ ‖ ೧೭೪

1 ಎಂದವರಲ್ಲಿಗೆ ಪೋಗಿ ಮತ್ತೊಂದು ಬ್ರತಮಂ, ಕರಮುಗಿದು (ಗ)

2 ಎಂಬುದುಂ ಕೈಕೊಂಡು ಪೋಗಿ ಪಲವುಕಾಲಕ್ಕೂ ವೆರ್ ಕಳ್ದು ಬರುತ್ತುಂ ಸಂಬಳಮಿಲ್ಲದೆ ಬಂಟರೆಲ್ಲಂ ಕರದು ಪಣ್ಗಳಂ ತನ್ನಿಮೆಂದು ಪೇೞ್ವುದುಮವರ್ ರಿದು ಪಣ್ಣನೆಲ್ಲಿಯುಂ ಪಡೆಯದೆ ಮಗುೞ್ದು ಬರುತ್ತುಂ, ಸಾರಂ ಕಂಪಿನೊಳಿವು (ಗ)

ಸಂತಸದಿಂ ತಿಱಿದು ತಂದು ಧನ್ವಂತರಿವಿಶ್ವಾನುಲೋಮರ ಮುಂದೆ ರಾಸಿಗೆಯ್ವುದುಂ, ಅವಱ ಪೆಸರನಱಿಯದವನಪ್ಪುದಱಿಂ ಧನ್ವಂತರಿ ಮೆಲಲೊಲ್ಲದುಸಿರದಿರ್ಪುದುಂ, ವಿಶ್ವಾನುಲೋಮನಿಂತೆಂದಂ [1] :—
೧೮೫

ಆವಾವುಪಾಯದಿಂದಂ
ತಾವುಣ್ಣದೆ ಪೋಪುದಲ್ಲದುಳಿದರುಮಂ ನಾ ।
ನಾವಿಧಕಲ್ಪನೆಯಿಂದಂ
ಭಾವಿಸೆ ತಮ್ಮಂತು ದುಃಖಿತಂಮಾಡುವುದೇ ॥ ೧೮೬

ಸರ್ವಜ್ಞರಂತಪ್ಪ ಧೂರ್ತರನೀಲೋಕದೊಳ್ ಕಾಣೆನಾಕಾಕುಗಳಪ್ಪರ ಮಾತಂ ತಾನಾವನಿಕ್ಕುಯುಮೆಂದು ನುಡಿದೊಡಂ, ಪಣ್ಣಂ ಮೆಲ್ಲದಿರ್ಪುದಱಿಂ ತಾನುಮೊಲ್ಲದಿರೆ, ಭೃತ್ಯರೆಲ್ಲಂ ನೀವಿರ್ವರುಂ ಸರ್ವಜ್ಞರುಳ್ಗೊಂಡು ಸಾಯಿಮೆಂದು, ೧೮೭

ಪಸಿದಿರಲಾಱದೆ ಪಣ್ಣಂ
ಮಸಗಿ ಜಡತೆಯಿಂದು ಸಾಯೆ ಕಂಡಾಗಳ್ ಸಂ ।
ಕಿಸಿ ಬೞಿಮೆಂದು ಮಿಗೆ ಸಂ
ತಸದಿಂ ತಂತಮ್ಮ ಭೃತ್ಯನಿಕರದ ಪೊನ್ನಂ ॥ ೧೮೮

ತಾಮಿರ್ವರುಂ ಪಟ್ಟಿಕೊಂಡು ಪೋಗಿಲ್ಲೆಂದು ಲಾಭದ ಪೆರ್ಚಿಂ ಬಸದಿಗೆ ಬಂದು ವರಧರ್ಮಭಟ್ಟಾರಕರಂ ಕಂಡು ತನ್ನ ಪಡಪುಮಂ ಸುವ್ರತದ ಫಲದಿಂ ಬದ್ದಂಕಿದುದುಮಂ ಪೇೞ್ದನ್ನೊಂದುವ್ರತಮಂ ಪಾಲಿಸಮೆಂಬುದುಂ, ಪಿಟ್ಟನೆತ್ತುಮಂ ಬಂಡಿಯುಮಂ ತಿನವೇಡೆಂಬ ವ್ರತಮಂ ಕುಡೆ ಕೈಕೊಂಡು ಮನೆಗೆ ಪೋಗಿ ಕೆಲವುದಿವಸಮಿದೊಂದು ದಿವಸಂ, ೧೮೯

---

1 ಕೊಂಡುಬಂದು ಕುಡೆ ಧನ್ವಂತರಿ ಪೆಸರಱಿಯದೆ ಮೆಲಲೊಲ್ಲದಿರ್ಪುದುಂ ವಿಶ್ವಾನುಲೋಮನುಂ ಮುನಿದು ಆವಾ···· (ಗ)

ತಾನುಂ ತತ್ಸಖನುಂ ಭೃ
ತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ ।
ತಾನಧಿಕಲಾಭಮಾದೊಡ
ನೂನಗುಣರ್ ಮಗುೞ್ದು ಲಾಭದಿಂದಂ ಬರುತುಂ ॥ ೧೯೦

ನಟ್ಟಡವಿಯ ನಡುವೆ ಪಸಿವುಂ ನೀರಡ್ಕೆಯುಂ ತಿಣ್ಣಮಾಗೆ ಬಂದವರ್ ಸಮೀಪದೊಳಿರ್ದ ನಾಗಾಲಯದ ಮುಂದಣ ತಾವರೆಗೊಳಕ್ಕೆ ನೀರ್ಗುಡಿಯಲೆಂದು ಪೋಗಿ ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಪಿಟ್ಟನೆತ್ತುಮಂ ಬಂಡಿಯುಮಂ ತಂದು ತೋಱೆ ಧನ್ವಂತರಿ ಮೆಲಲೊಲ್ಲದಿರೆ, ವಿಶ್ವಾನುಲೋಮನುಮೊಲ್ಲದಿರ್ಪನ್ನೆಗಂ, ಭೃತ್ಯರ ನಿಬರುಂ ಸ್ವೈರಣೆಗೆಟ್ಟು, ೧೯೧

ಇರುಳುರಗಂ ಪುತ್ತಿಂದಂ
ತ್ವರಿತದೆ ಪೊಱಮಟ್ಟು ಕಾಱಿ ವಿಷಮಂ ಪಿಟ್ಟಂ ।
ಪರಿದೆಂಜಲಿಸಲ್ವಿಷದು
ಬ್ಬರದಿಂ ನಂಜುರುಳಿಯೆನಿಸಿ ಮೆಱೆವಾ ಪಿಟ್ಟಂ ॥ ೧೯೨

ಮೆಲ್ದು ಗತಪ್ರಾಣರಾದುದಂ ಕಂಡಚ್ಚರಿವಟ್ಟಿರ್ದಯುಂ ನೀವಿ ಕೊಂಡು ತಂತಮ್ಮ ಭಂಟರರ್ಥಮುಂ ತೆರಳ್ಚಿ ಕಟ್ಟಿಕೊಂಡು ಪೊೞಲ್ಗೆ ವಂದು ಪಡಪಿನ ಪೆರ್ಚುಗೆಗಚ್ಚರಿವಡುತ್ತೆ ಬಸದಿಗೆ ಪೋಗಿ ವರಧರ್ಮಭಟ್ಟಾರಕರಂ ವಂದಿಸಿ ಪ್ರಪಂಚಮೆಲ್ಲಮುಂ ಬಿನ್ನಪಂಗೆಯ್ದು ನಿಮ್ಮಯ ಪ್ರಸಾದದಿಂದನೂನಮಪ್ಪ ಲಾಭಮಾದುದಿನ್ನೊಂದು ವ್ರತಮುಂ ದಯೆಗೆಯ್ಯಿಮೆಂಬುದುಂ, ೧೯೩

ಎರಡುಂ ಪರ್ವಂಗಳೊಳಂ
ಸ್ಥಿರಮಪ್ಪಷ್ಟಮಿಯೊಳಂ ಚತುರ್ದಶಿಯೊಳಮೋ ।
ಸರಿಸದೆ ಕರಮೆಳಪಿಲ್ಲದೆ
ಪರಿಹರಿಪುದು ಮಗನೆ ಕಳ್ಳುಮಂ ಮಾಂಸಮುಮಂ ॥ ೧೯೪

ಎಂಬುದುಮಾವ್ರತಮುಂ ಪೆಱತೊಂದುಮಂ ಬಗೆಯದೆ ಮುನಿವಚನಮಂ ನಿಶ್ಚಯದಿಂ ನಂಬಿ ಕರಮತಿಶಯದಿನೊಸೆದು ಕೈಕೊಂಡು ಸುಖದಿನಿರ್ದೊಂದುದಿವಸಂ, ೧೯೫

[ಬರವೇೞ್ದು ಯ್ಯನೆ ತನ್ನ ಕಾರ್ಯಭರಮಂ ವಿಶ್ವಾನುಲೋಮಂಗೆ ವಿಸ್ತರದಿಂದೆಲ್ಲಮನೊಂದುಗುಂದದ ಋಪಿದೋರೆರಂತೆ ತಾಂ ರಾಗದಿಂ ಕರೆದಾಗಳ್ ನಿಜತಂತ್ರಮಂ ಕನಕದಿಂ ತಾಂಬೂಲದಿಂ ವಸ್ತ್ರದಿಂ ಪಿರಿದುಂ ಮನ್ನಿಸಿ ಪೋಪದೊಂದು ಸಮಕಟ್ಟಂ ಚೋರಸ್ಯೆನ್ಯಾಧಿಪಂ] ॥ ೧೯೬

ಪೋಗಿ ಪರದೇಶಮಂ ಪೊಕ್ಕು ಕಳ್ದು ಕಳವಿನೊಳಾದ ಲಾಭದಿಂ ನೆಗೞ್ದು ಬರುತ್ತುಮೊಂದುಗಿರಿತಟದೊಳ್ ಬೀಡಂ ಬಿಟ್ಟು, ೧೯೭

ಪಲವುಂ ದಿವಸಂ ಕಳ್ದುಂ
ಪೊಲಸುಂ ದೊರೆಕೊಂಡುದಿಲ್ಲ ಪಯಣದ ಕತದಿಂ ।
ದೆಲೆ ನೋೞ್ಪೊಡೆ ಸಂಸಾರದ
ಫಲಮಾವುದೊ ಬಿಸುಟು ಕಳ್ಳುಮಂ ಮಾಂಸಮುಮಂ ॥ ೧೯೮

ಎಂದು ವಿಶ್ವಾನುಲೋಮಂ ತನ್ನೈನೂರ್ವರ್ ಬಂಟರೊಳ್ ನಾಲ್ವರಂ ಕರೆದು ನೀವೀಪರ್ವತದ ತಟದೊಳದ ಬೇಡವಳ್ಳಿಗೆ ಪೋಗಿ ಕಳ್ಳಂ ಕೊಂಡು ಬನ್ನಿಮೆಂದಟ್ಟುವುದುಂ, ಧನ್ವಂತರಿಯುಮಂತ ನಾಲ್ವರಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿಮೆಂದಟ್ಟುವುದುಂ ವಿಶ್ವಾನುಲೋಮನ ಮಾನಿಸರ್ ಪೋಗಿ ಕಳ್ಳಂ ಕೊಂಡು ಬರುತ್ತೆತಮ್ಮೊಳಿಂತೆಂದರ್ :— ೧೯೯

ಇರದೀ ಕಳ್ಗಳ್ ವಿಷಮಂ
ಬೆರಸಿ ದಿಟಂ ಕೂರ್ಪರಂತೆ ನಾಮೆಂಜಿದವರೆ ।
ಲ್ಲರುಮಂ ಕೊಂದಿಕ್ಕಿ ಬೞಿ
ಕ್ಕುರುಮುದದಿಂದವರ ಪೊಂಗಳಂ ಕೈಗೊಳ್ವಂ ॥ ೨೦೦

ಎಂದು ತಮ್ಮೊಳ್ ಚರ್ಚಿಸಿ ಕಳ್ಳರ್ ವಿಷಮಂ ಬೆರೆಯಿಸಿ ಕೊಂಡು ಬಂದವರನ್ನೆಗಮಿತ್ತಲ್, "ಪರಚಿಂತಾ ಗರೀಯಸೀ" ಎಂಬ ನಾಣ್ಣುಡಿಯಂತೆ ಧನ್ವಂತರಿಯುಂ ಮಾನಿಸರುಂ ಪೋಗಿ ಮಾಂಸಮಂ ಕೊಂಡು ಬರುತ್ತುಂ ತಮ್ಮೊಳಿಂತೆಂದರ್ :— ೨೦೧

ಅಡಗಿನೊಳು ಬೆರೆಸಿ ವಿಷಮಂ
ಕಡುಗೂರ್ಪಿಂದಿಕ್ಕಿ ಬಂಟರಂ ನಾಯಕರಂ ।
ಮಡಿಪಿ ಪೆಱತೇನೊ ನಾಮವ
ರೊಡವೆಗಳಂ ಪಱಿಕೊಂಡು ಸುಖದಿಂ ಪೋಪಂ ॥ ೨೦೨

ಎಂದು ಸಮಕಟ್ಟಿನಿಂ ವಿಷಮಂ ಮಾಂಸದೊಳಿಕ್ಕಿಕೊಂಡು ಬಂದೊಪ್ಪಿಸುವುದುಂ, ಅಂದಿನ ದಿವಸಂ ಚತುರ್ದಶಿಯುಪ್ಪುದಱಿಂ ಕಳ್ಳುಮಂ ಮಾಂಸಮುಮಂ ಧನ್ವಂತರಿಯೊಲ್ಲದಿರ್ದುದುಂ, ವಿಶ್ವಾನುಲೋಮನುಮೊಲ್ಲದೆ ಬಿಡುವುದುಂ, ೨೦೩

ಇವರವರ್ಗೆ ಕಪಟದಿಂದಂ
ಸವಿನಯದಿಂದೆಱೆಯೆ ಕಳ್ಳನಾದರದಿಂ ಮು ।
ತ್ತುವರಿವರ್ಗೆ ತಂದು ಪೊಲಸಂ
ಸವಿನಯದಿಂದಿಕ್ಕೆ ಕುಡಿದು ತಿಂಪಂತಾಗಳ್ ॥ ೨೦೪

ಸಾವುದುಮವರ ಪೆಣಂಗಳ
ನೋವದ್ಭುತಮೆಂದು ನೋಡಿ ಸುವ್ರತದೊಳ್ಪಂ ।
ಭಾವಿಸಿ ನಗುತೆಂದಂ ಮುಸಿ
ಸೇವನೆಯುಂ ಬಿಟ್ಟು ಪಱತು ಲಾಭಮುಮೊಳವೇ ॥ ೨೦೫

ಎಂದವರ ದ್ರವ್ಯಂಗಳಂ ಕೊಂಡು ಪೋಗಲಾ ಮಱುದಿವಸಂ ಚೈತ್ಯಾಲಯಕ್ಕೆ ಬಂದು ಭಕ್ತಿಯಿಂ ವರಧರ್ಮಭಟ್ಟಾರಕರಂ ವಂದಿಸಿ, ತನ್ನ ವೃತ್ತಾಂತಮೆಲ್ಲಮಂ ಪೇೞ್ದೆನಗನ್ನೊಂದು ವ್ರತಮಂ ಕರುಣಂಗೆಯ್ಯಿಮೆಂದು ಪ್ರಾರ್ಥಿಸುವುದುಂ, ನೀನಾವ ಪ್ರಾಣಿಗಾದೊಡಂ

ಮುನಿಪತಿ ಪೆಱಗೇೞಿಡಿಯುಂ ಪಿಂಗಿ ಬೞಿಕ್ಕಂ ನಿನ್ನ ಮೆಚ್ಚಿದಂತೆ ಮಾಡೆಂಬುದುಮಂತೆ ಗೆಯ್ವೆನೆಂದು ಕಳಿಂಗದೇಶಕ್ಕೆ ಪೋಗಿ ಕಳ್ದಾರು ತಿಂಗಳ್ವರಮಿರ್ದು ಬರುತ್ತುಂ, ಪೆಱರ ಪೆಂಡಿರ್ಗರ್ಥಕ್ಕಮೆಳಸಿ ಕಾಲಂ ಪೋಪುದೆನಗೆ, ಎನ್ನ ಪೆಂಡಿರ್ಗರ್ಥಕ್ಕಮೆಳಸುವರಾರಾನು ಮೊಳರೋ ಮೇಣಿಲ್ಲರೋ ಚೋದ್ಯಮಿದನಾರಯಲ್ವೇೞ್ಕುಮೆಂದು ನಾಲ್ಕೆಂಟುದಿನಮಂ ಮುನ್ನಿಸಿ ಗಜಪುರಮಂ ಪೊಕ್ಕು ವಿಳಾಸದಿನಿರ್ದೊಂದುದಿನಂ ಪಸುಣಂಬೋಪೆನೆಂದುಸಿರ್ದು ಪೊಱಮಟ್ಟು ಪೋಗಿ, ಜಿನಮಂದಿರದೊಳ್ ನಡುವಿರುಳಪ್ಪಿನಂ ಪೂಜಾವೈಭವಮಂ ನೋಡುತ್ತಿರ್ದು ತನ್ನ ಮನೆಗೆ ಬಂದು ಕವಾಟೋದ್ಘಾಟನವಿದ್ಯೆಯಿಂ ಪಡಿಯಂ ತೆಗದು [1] ಪೊಲ್ಲನೊಳಪೊಕ್ಕು ನೋೞ್ಪಾಗಳ್, ಪಾಸಿನ ಮೇಲೆ ಪಟ್ಟಿರ್ದ ತಾಯುಮಂ ಪೆಂಡತಿಯುಮಂ ಕಂಡು ಪಾದರಿಗನೆಂದಿೞಿದುಬಂದು ವ್ರತಮಂ ನೆನೆದೇೞಿಡಿಯುಂ ಪಿಂಗುಪಸಮುಚ್ಚರ್ತುಬ್ಬಸಮಪ್ಪನತ್ತೆಯುತ್ತಮತ್ತ ಸಾರಿಮೊಂದು ಗರ್ಭಿಣಿಯಪ್ಪ ತನ್ನ ಪೆಂಡತಿ ಪೊದೆದ ಸೀರೆಯುಂ ಕಳವುದುಮಿವರ್ರುಮಂ ಕಂಡು ಬೞಿಗಾಗಿ, ೨೦೬

[ಯತಿಪೆಂಪ್ಯಂ ಕೊಟ್ಟ ವ್ರತಮಂ
ವ್ರತದೊಳಮನಗೆಯ್ದ ಲಾಭಮಾದುದು ಪಿರಿದು ।
ನ್ನತಿಯಿಂದಮೆಂದು ತನ್ನೊಳ
ಗತುಳಬಳಂ ಪೆರ್ಚೆ ನಚ್ಚಿ ಪೊಗೞ್ದಂ ಮುನಿಯಂ] ॥ ೨೦೭

ಮುನಿಪತಿ ಕೊಟ್ಟ ವ್ರತಮಂ
ನೆನೆಯದೆ ಕಡುಗೋಪದಿಂದಮಿಱಿದೊಡೆ ಪೆಱತೇಂ ।
ಜನನಿಯುಂ ಗರ್ಭಿಣಿಯಪ್ಪೀ
ವನಿತೆಯುಮೊಡನಳಿದರೇಂ ಮಹಾಪಾತಕಮೋ ॥ ೨೦೮

ಎಂದು ಮುನ್ನಿನ ನಾಲ್ಕುವ್ರತದಂದಮುಮೀ ವ್ರತದ ಪಡಪೆ ಮಿಗಿಲದೆಂತೆಂದೊಡೆ, ೨೦೯

---

1 ಕವಾಟೋದ್ಘಾಟನವು ಬ ಚೂರ್ಣಮಂ ತಳಿವುದುಂ ಪಡಿ ತೆಱೆಯೆ (ಕ)

ಮುಂದಣ ಸುಗತಿಯುಮೀಗಳ್
ನೊಂದುಜ್ಜ್ವಲಮಪ್ಪ ಜಸಮುಮೀವ್ರತದಿಂದಂ ।
ನಿಂದುದು ಮಿಕ್ಕಂದೀವಧೆ
ಯಿಂದಿಹಪರಮೆರಡುಮೆನಗೆ ಕೆಡುವುದು ಪುಸಿಯೇ ॥ ೨೧೦

ಎಂದು ಮನದೊಳಾದ ಹೇವದಿಂ ನಿಚ್ಚಟಗತಿಯಪ್ಪುದುಂ ಪರಿಚ್ಛೇದಿಸಿ ತಂದರ್ಥಮೆಲ್ಲಮುಮಂ ತಾಯ್ಗಂ ಪೆಂಡತಿಗಂ ತಕ್ಕನಿತಂ ಕೊಟ್ಟು ಉೞಿದುದಂ ಬಡಶ್ರಾವಕರ್ಗಂ ಜಿನಪೂಜೆಗಂ ಕೊಟ್ಟು ವರಧರ್ಮಭಟ್ಟಾರಕರಲ್ಲಿಗೆ ಬಂದು ಪೊಡೆಮಟ್ಟು ನಿಮ್ಮಡಿಯ ಪ್ರಸಾದದಿಂದೆನಗೆ ಮಹಾಪಾತಕಂ ಪಿಂಗಿ ಪೋದುದೆಂದು ಪೆಱಗಣ ವಾರ್ತೆಯೆಲ್ಲಮಂ ಪೇೞ್ದು ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದೊಡಾ ಮುನೀಂದ್ರೋತ್ತಮರಿಂತೆಂದರ್:— ಮಗನೆ, "ಕೆಟ್ಟು ನೂಱುಂ ತಪಂಬಟ್ಟು ನೂಱು" ಎಂಬ ನಾಣ್ಣುಡಿಯುಂಟು ; "ಪುಟ್ಟಿದೆಡೆಯ ಪೊನ್ನುಱುವುದು; ಪೋದೆಡೆಯ ತಪಮುಱುವುದು" ಎಂಬುದಱಿಂ ನೀನಿಲ್ಲಿ ತಪಂಬಡವೇಡ; ಕೇಳೀ ಕಾಂತ ವಿಷಯದ ಧರಣೀಭೂಷಣಪರ್ವತದೊಳಮ್ಮ ಸಧರ್ಮಿಗಳ್ ಶ್ರೀವರ್ಮಭಟ್ಟಾರಕರಿರ್ಪರವರಲ್ಲಿಗೆ ಪೋಗಿ ದೀಕ್ಷೆಯಂ ಕೊಳ್ಳೆಂಬುದುಮಂತೆಗೆಯ್ವೆನೆಂದು, ವಿಶ್ವಾನುಲೋಮನನೆನ್ನಲ್ಲಿಗಟ್ಟುವುದೆಂದು[1] ತಾಯ್ಗೆ ಪೇೞ್ದು ಬಂದು, ೨೧೧

ಆ ಗಿರಿಯನೆಯ್ದಿ ಬೇಗಂ
ಯೋಗೀಂದ್ರಂಗೆಱಗಿ ಕಾರ್ಯಮಂ ಪೇೞೆ ಮಹೋ ।
ದ್ಯೋಗಿಗೆ ಜಿನದೀಕ್ಷೆಯನಂ
ತಾಗಳ್ ದಯೆಗೆಯ್ದು ಕೊಂಡು ತಪದೊಳ್ನಿಂದಂ ॥ ೨೧೨

ಇತ್ತಲ್ವಿಶ್ವಾನುಲೋಮಂ ಧನ್ವಂತರಿಯ ಪೋಗನಾರಯ್ದಱಿಯೆ ಪೇೞೆ ಕೇಳ್ದು ಮಱುಗಿ ನಿಲಲಾಱದೆ ಎನಗೆನ್ನ ಕೆಳೆಯನ ಗತಿಯೆ ಗತಿಯೆಂದು ಬಂದು ಸಹಸ್ರಜಟಿಯೆಂಬ ತಾಪಸಂ ತೋಱೆ, ಸೂರ್ಯಪ್ರತಿಮೆನಿಂದ ಧನ್ವಂತರಿಮುನಿಯುಂ ಮಾರ್ಗಮನಱಿಯದೆ ನುಡಿಸು

1 ಧರಣೀಭೂಷಣಗಿರಿಗಟ್ಟುವೆಂದು (ಗ)

ವುದುಂ ನುಡಿಯುದಿರ, [1] ಎನ್ನೊಡನೆ ನುಡಿಯನೆಂದು ಮುನಿದು ಮಗುಳ್ದು ಬಂದಾ ತಾಪಸಂಗೆ ಶಿಷ್ಯನಾಗಿರೆ ಮಱುದಿವಸಂ ಧನ್ವಂತರಿಮುನಿ ವಿಶ್ವಾನು ಲೋಮನಲ್ಲಿಗೆ ಬಂದು ಸಂಭಾಷಣೆಯಂ ಮಾಡೆ ಮಿಥ್ಯಾತ್ವಕರ್ಮ ದುದಯದಿಂ ಮುನ್ನಮೆನ್ನೊಡನೆ ನುಡಿಯದಿರ್ದನೆಂಬ ಕೋಪದಿಂ ಮೋನಂಗೊಂಡಿರೆ ವಾತ್ಸಲ್ಯರತ್ನಾಕರನಿಂತೆಂದಂ :— ೧೧೩

ಸಲೆ ನಿನ್ನ ತಪದ ಫಲಮುಮ
ನೆಲೆ ಸಖ ಕೇಳೆನ್ನ ತಪದ ಫಲಮುಮನುರ್ವೀ |
ವಲಯಂ ಬಣ್ಣಿಸೆ ಕಡೆಯೊಳ್
ಫಲದಲ್ಲಿಯೆ ಕಾಣಲಕ್ಕುಮೆಂದಲ್ಲಿಂದಂ ‖ ೧೧೪

ಬಂದುಗ್ರೋಗ್ರತಪಮಂ ಮಾಡಿ ಸಮಾಧಿಮರಣದಿಂ ಮುಡಿಪಿ ಧನ್ವಂತರಿಮುನಿನಾಥನಚ್ಯುತಕಲ್ಪದೊಳಮಿತಪ್ರಭ
ನಾಗಿ ಪುಟ್ಟಿದಂ ; ವಿಶ್ವಾನುಲೋಮನುಂ ಸ
ವಿದ್ಯುತ್ಪ್ರಭನೆಂಬ [2] ವಾಹನದೇವನಾಗಿ-
ದ್ವೀಪದೊಳಚ್ಯುತೇಂದ್ರಂ [ವಿಶ್ವಾ
ವಾಹನದೇವನಂ] ಕಂಡು,

ಕರೆವುದುಮಾತಂ ಭಯದಿ
ಪರಿತಂದತ್ಯಂತಭಕ್ತಿ
ಕ್ಕಿರೆ ನಕ್ಕು ದೇವ
ಚರಣದಿನಂದವ

ವಿಶ್ವಾನುಲೋ
ನದೇವನಱಿದು ಬೆಱಗಾ
ತ್ತಿಯ ಫಲಮನವಧಾರಿಸಿ

---

1 ಅನಿತರೊಳ ಮಗ

2 ವಿಜಯನೆಂಬ ವ್ಯ

ರೊಳರೆಂಬುದಲ್ಲೆಮ್ಮಲ್ಲಿಯುಮೊಳ್ಳಿದರೊಳರೆನ್ನಂ ನೋಡವೇಡೆನೆ; ನಿಮ್ಮಲ್ಲಿಯೊಳ್ಳಿದರುಂಟಪ್ಪೊಡೆಮಗೆ ತೋಱಿಮೆಂಬುದುಂ ಕರಹಾಟದೇಶದ ಪಶ್ಚಿಮಭಾಗದೊಳಿರ್ಪ ಚಂದ್ರಿಕಾರಣ್ಯದೊಳಿರ್ದ ಜಮದಗ್ನಿ [ಯೆಂಬ ಜಟಾಧಾರಿ] ಯಂ ತೋಱಿ,[1] ೧೧೭

ಆಪಾದಮಸ್ತಕಂಬರ
ಮೇಂ ಪಡಿಮಾತೆಯ್ದೆ ಬಳ್ಳಿಯುಂ ಪುತ್ತುಗಳುಂ।
ವ್ಯಾಪಿಸಿದುವು ಲೋಕದೊಳಿ
ನ್ನೀ ಪಾಂಗಿಂ ತಪದೊಳಸಗುವನ್ನರುಮೊಳರೇ ॥ ೧೧೮

ಎಂಬುದುಂ, ಕಡುಪೆರ್ಚಿನಿಂದಿಂದ್ರನಿಂತೆಂದಂ :— ೧೧೯

ಬಡವನ ಸುಖಮುಂ ಪಂದೆಯ
ಕಸುನುಡಿಗುಂ ಮುಗಿಲ ನೆೞಲುಮೋಪರ ಮುನಿಸುಂ।
ಪವುಂ ನೋ
ಪ್ಪವೆರಸು ನಿಲಲಱಿದಪ್ಪುವೇ ॥ ೧೨೦

ದ್ಯೆಗಳಿಂ ಸಿಸ್ನ ತಪಸ್ವಿಯ ನಚ್ಚಿನ
ಗೀಜಗವಕ್ಕಿಗಳಂ ವಿಗುರ್ವಿಸೆಯಾ
ರ್ಪುದುಂ, ಮತ್ತೊಂದು ಗೀಜಗನವ
ಕೇಯನ ಮದುವೆಗೆ ಬನ್ನಿಮೆನೆ,
ಪೆನೆನೆ, ನೀಂ ಗರ್ಭಿಣಿ ಬರ
ಅಂದು ದ್ವಿಜಾಂಗನೆಯೊಳ್
ನೆನೆ, ನಿನ್ನ ಮೆಚ್ಚಿನ
ದು[2] ೧೨೧

---

ಜಮದಗ್ನಿರಾಮನೆಂಬ ಜಟಾ

ನೋಡೆಂದೆರಡುಗೀಜಗಂಗಳಿಂ
ಕ್ಷಿ ಬಂದಾಗೀಜಗನಂ ನಾಳೆ
ಾಡೆ, ಗರ್ಭಿಣಿಯಪ್ಪ ಗೀಜ
ತ್ತಿವರ್ಗಳೊಳ್ ನೆರೆವೆಯೆನೆ,
ದುಂ (ಗ).

ಆನಲ್ಲದೆ ಪೆಱಪೆಱರಂ
ನೀನಳಿಪಿಂ ಮದನತಾಪದಿಂ ನೆರೆದೊಡೆ ಮು ।
ತ್ತೀನುಂ ಸೂರುಳನೊಲ್ಲೆಂ
ನೀನೀ ತಾಪಸನ ಪಡೆದ ಗತಿಯುಂ ಪಡೆವೈ ॥ ೧೧೧

ಎಂಬುದುಂ, ಕೃತಕಗೀಜಗನೆರಡೆಱಂಕೆಯಿಂದೆರಡುಂ ಕಿವಿಗಳಂ ಮುಚ್ಚಿಕೊಂಡು ಪೊಲ್ಲದಂ ನುಡಿದೈ, ತಡೆಯದೆ ಈ ತಪಸ್ವಿಯ ಗತಿಗೆ ನೀನುಂ ನಿನ್ನಾಳ್ದರುಂ ಪೋಗಿಮೆನೆ, ಜಮದಗ್ನಿಮುನಿ ಮುನಿದು ಪಕ್ಕಿಗಳಂ ಕರತಳದೊಳ್ಪಿಸೆದು ಕೊಲಲುದ್ಯೋಗಿಸುವುದುಂ, ಅದೃಶ್ಯರೂಪದಿಂ ನೆಲಕ್ಕೆ ಪಾಯ್ದರೆ, ೧೧೩

[1]ಪಕ್ಕಿಗಳಲ್ಲಿವು ದೈವಂ
ನಿಕ್ಕುವಮೆಂದಿರ್ದು ಭಕ್ತಿಪೂರ್ವಕಮಾಗಳ್ ।
ಪಕ್ಕಿಗಳೆರಡಱ ಪಾದಯು
ಗಳ್ಕೆಱಗಿ ಪತಂಗ ನುಡಿದೆಯಾಂ ಪಾತಕನೇಂ ? ॥ ೧೧೪

ಕೊಲಲ್ಬಗೆದೆಂ, ಕ್ಷಮೆಯಿಂದುಳಿದೆಂ ; ಕೇಳ್ಕೆ ಪೂರ್ವದೊಳಾಂ ರಾಜರ್ಷಿಯೀಗಳಪ್ಪೊಡೆ ಮಹಾತಪಸ್ವಿಯಾಂ ಪೋಪ ಗತಿಗೆ ನೀವೇತಕ್ಕೆ ಪೋಗಲೊಲ್ಲಿರೆಂಬುದುಂ, ಮಾಯಾದ್ವಿಜಂಗಳಿಂತೆಂದರ್—ನೀನಪ್ಪೊಡೆ ಪುತ್ರಮುಖಮಂ ಕಾಣದೆ ತಪಮಂ ಕೈಕೊಂಡೈ ; "ಅಪುತ್ರಸ್ಯ ಗತಿರ್ನಾಸ್ತಿ" ಯೆಂಬುದಱಿಂ ನಿನ್ನ ಪೋಪ ಗತಿಯನೊಲ್ಲೆವೆನೆ, ನಿಶ್ಚಯಮೆಂದು ತನ್ನಂ ತಾನೆ ಬಯ್ದುಕೊಂಡು ಪಕ್ಕಿಗಳಂ ಬಲಗೊಂಡು ನಿಮ್ಮ ಧರ್ಮದಿಂ ಗತಿಗಂಡೆನೆಂದು ತಮ್ಮ ಮಾವನಪ್ಪ ಪೂತಿಮಹಾರಾಜನಲ್ಲಿಗೆ ಬಂದು, ಕೂಸಂ ಬೇಡುತುಂ ಮದುವೆನಿಂದನತ್ತಲಚ್ಯುತೇಂದ್ರಂ ವಾಸನದೇವನ ಮೊಗಮಂ ನೋಡಿ ಮುಗುಳ್ನಗೆನಗುತಿಂತೆಂದಂ.—

---

[1] ದೇವತೆಗಳೆಂದು ಪೊಡೆಮಟ್ಟೆನ್ನ ಪೋಪ ಗತಿಗೆ ದೂಷಣೆಯಂ ಮಾಡಿದಿರೆಂತೆನ ನೀಂ ಮಕ್ಕಳ್ವಡೆಯದೆ ತಪಂಬಟ್ಟೀ ನಿನ್ನ ಪೋಪೆಡೆಗೆ ಮಾರಿ ಪೋಕೆಂಬುದುಂ ತನ್ನ ಮಾವನಪ್ಪ ಪೂತಿರಾಜನಲ್ಲಿಗೆ ಬಂದು, ಕೂಸಂಬೇಡಿದನಿತ್ತ (ಗ)

ಪಲಕಾಲಂ ತಪದಿಂದಂ
ಚಲದಿಂ ಸಂದಿರ್ದ ನಿನ್ನ ನಚ್ಚಿನ ಮುನಿಯುಂ ।
ತೊಲಗಿಸಿದೆನೊಂದು ವಚನದಿ
ನೆಲೆ ಕೇಳ್ಮಿಥ್ಯಾತ್ವದಲ್ಲಿ ಪುರುಳೇನುಂಟೇ ॥ ೧೧೬

ಎಱಗಲನಾಪೇಳಿದೊಡ
ಮೆಱಗುಗುಮೆಱಿಯಲ್ಕೆ ಮೇಲೆ ಮತ್ತೆಱಗದು ಸಂ ।
ದಱಿಕೆಯು ಕರ್ಪೂರಮಿದೊಡ
ಮೆಱಿವಿಲ್ಲದ ಜಡರುಮದಱ ಸಮನಾಗಿರ್ಪರ್ ॥ ೧೧೭

ಅದಱಿಂದಜ್ಞಾನಿಗಳಪ್ಪರ ತಪದೊಳ್ ಫಲಮಿಲ್ಲೆಂದು ಬಸಿಱಂ ಪೊಸೆದು ನಕ್ಕಿನ್ನಾಗಮಾಭ್ಯಾಸಿಗರಪ್ಪ ಮಹರ್ಷಿಯರಂತಿರ್ಕೆ, ಎಮ್ಮಲ್ಲಿ ಗೃಹಸ್ಥನಪ್ಪಾತನಂ[1] ಕೆಡಿಸಿದೆಯಪ್ಪೊಡೆ ಎಮ್ಮಂ ಬಿಟ್ಟಜ್ಞಾನಿಗಳಿಲ್ಲೆಂದು ನುಡಿದು ರಾತ್ರಿಪ್ರತಿಮಾಯೋಗದೊಳ್ನಿಂದೆನ್ನ ತೋಱಿದ ಗೃಹಸ್ಥನಪ್ಪೀತನಂ ಕೆಡಿಸಿದೆಯಪ್ಪೊಡೆ ನೀನೆ ಪಿರಿಯನೆಂದೆನೆ[2] ವಾಹನದೇವಂ ಮುನಿದು, ೧೧೮

ಪೊಡೆವ ಸಿಡಿಲಿಂ ಮಿಂಚಿಂ ಭೋರೆಂದು ಬೀಸುವ ಗಾಳಿಯಿಂ
ಕೆಡೆವ ಮರದಿಂ ಪಾವಿಂ ತೇಳಿಂದಿರುಂಪೆಗಳಿಂ ಮನಂ
ಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬ
ಲ್ದಿಗಮರುಳಿಂ ಕಿರ್ಚಿಂ ಕಾಡಾನೆಯಿಂದಳವಿಂಡಿನಿಂ ॥ ೧೧೯

ಜಡಿದು ಕರದಿಂ ಪೊ ಪೋ ಪೋಗೆಂದು ನೂಂಕುವ ಬೇಡರಿಂ
ಬಡಿಯುಲಿಱಿಯುಲ್ ಪೊಯ್ಯಲ್ ಮೇಲ್ವೀೞ್ವ ರಾಕ್ಷಸತಂಡದಿಂ
ದಡದರ್ದ ತನುವಂ ಮತ್ತಂ ನುಗ್ಗಾಗೆ ತಿಂಬ ಕಡಂದುಱಿಂ
ಕೆಡೆವ ಮರದಿಂ ನೂಂಕುತ್ತೊತ್ತುತ್ತೆ ಬರ್ಪ ಪೊನಲ್ಗಳಿಂ ॥ ೧೨೦

---

1 ಗೃಹಸ್ಥನಪ್ಪೀ ಜಿನದತ್ತನಂ (ಗ)

2 ಕೆಡಿಸಿದೆಯಪ್ಪೊಡೆನ್ನಂಬಿಟ್ಟನ್ನ್ಯಾಯಿಗಳಿಲ್ಲೆಂದು ರಾತ್ರಿಪ್ರತುಮೆನಿಂದನಂ ತೋಱುವುದುಂ (ಗ.)

ಇವು ಮೊದಲಾದನೇಕೋಪಸರ್ಗಂಗಳಂ ಮಾಡಿಯುಂ, ತೊಲಗಿಸಲಾಱದೆ ಧರ್ಮಮುಮಂ ದೇವರುಮಂ ತಿರಸ್ಕರಿಸಿಯುಂ, ಬಂಧುಗಳ ರೂಪುಮಂ ಕೈಕೊಂಡು ಬಂದು ಮನೆಯುನರಸಂ ಕವರ್ದಂ ಪಿರಿಯು ಮಗಂ ಸತ್ತನೆಂದುಮೇಗೆಯ್ದುಂ ತೊಲಗಿಸಲಾಱದೆ ಶ್ರಾವಕರ ಗುಣ ಮಿಂತುಟೆನಲ್ ಜ್ಞಾನಿಗಳಪ್ಪ ಮಹರ್ಷಿಯರ ಗುಣಮನಂತಿಂತೆಂದು ಬಣ್ಣಿಸಲ್ಬಾರದೆಂದು ಮೆಚ್ಚಿ ಮಿಥ್ಯಾತ್ವಮಂ ಬಿಟ್ಟು ಸದ್ದೃಷ್ಟಿಯಾದನ ಚ್ಯುತೇಂದ್ರನೀ ಗಗನಗಾಮಿನೀವಿದ್ಯೆಯಂ ಸಂತಸದಿಂದೆನಗೆ, ೨೩೧

ಶಿವದ ಶಾಶ್ವತಮಪ್ಪ ಸೌಖ್ಯಮನೀಯಲಾರ್ಪ ಜಿನೇಶ್ವರ
ಪ್ರವರಪಾದದೊಳಲ್ಲದರ್ತಿಯುಮೆಯ್ದೆ ಪತ್ತಿದ ಮೋಹಮುಂ
ನಿಮಗಿಪತ್ರದ ಸೌಖ್ಯಹೇತುಗಳಪ್ಪ ಮಂತ್ರ ಕುವಿದ್ಯೆಯಿಂ
ಬಿಮಜೊಳಿಲ್ಲಣಮೆಂಬುದಂ ನೆಱೆ ಬಲ್ಲನಾದೊಡಮೆಲ್ಕಱಿಂ ॥ ೨೩೨

ಅಕೃತ್ರಿಮಚೈತ್ಯಾಲಯಮಂ ಪರ್ವದಿನಂಗಳೊಳ್ ಪೋಗಿ ವಂದಿಸಲಕ್ಕುಮೆಂದು ಪೊಡೆಮಟ್ಟು ಪ್ರಾರ್ಥಿಸಿ ಕೊಟ್ಟು ತಾಂ ಬಂದ ವೃತ್ತಾಂತಮನಱಿಪಿ ಪೂಜಿಸಿ ದೇವಲೋಕಕ್ಕೆ ಪೋದನೆನಗೆ ಗಗನ ಗಾಮಿನೀವಿದ್ಯೆ ಬಂದುದಿಂತೀ ವಿದ್ಯೆಯುನೆಮ್ಮ ದೇಹಾರದ ಮಾಣಿವರಸೇ ನಂಗೆ ವಾತ್ಸಲ್ಯದಿಂ ಕೊಟ್ಟೆನೆಂಬುದುಂ, ಲಲಿತಾಂಗಂ ಬೆಱಗಾಗಿ, ೨೩೩

ಆತಂ ದೇವಾಧೀಶ್ವರ
ನೀತಂ ಕಿಱುಕುಳಮನುಷ್ಯನೀತಂಗಾತಂ।
ಪ್ರೀತಿಯೊಳೆಱಗಿದನೆಂದೊಡೆ
ಭೂತಳದೊಳ್ಧರ್ಮದಿಂದಮಗ್ಗಳಮುಂಟೇ ॥ ೨೩೪

ಜಿನದತ್ತಂ ಗುಣವಾರ್ಧಿ ತಪ್ಪೇಱಿಯುಂ ಜೀವಾದಿಗಳ್ಗಂಬ ಭಾ ವನೆಯಿಂಗಾನಿನಿತೊಂದು ಪೆಂಪುವಡೆದೆಂ ದೇವಾಧಿದೇವಂ ಜಗ

ಜ್ಜನಪೂಜ್ಯಂ ಜಿನನಂ ಜಿನಾಗಮಮುಮಂ ನಿಶ್ಶಂಕೆಯಿಂ ನಂಬುವಾ
ತನ ಸೌಖ್ಯೋನ್ನತಿಯುಂ ಮಹಾಮಹಿಮೆಯುಂ ಪೇೞ್ಬಣ್ಣಿಸಲ್ಬರ್ಕುಮೇ ||
ಎಂದು ದರ್ಶನದೊಳ್ ನಿಶ್ಶಂಕನಾಗಿ || ೧೩೬

ಕಡುದೂರ್ತಿರ ಮುಂ ದುಷ್ಟರ
ಗಡಣಂಗೊಂಡಳವೆ ಸಾಲ್ಗು ಮಿನ್ನಳಿಪಿಂದಂ |
ಪಿಡಿಯೆಂ ಖಳಸಂಸ್ಕೃತಿಯುಂ
ಬಿಡುವೆಂ ಪಿಡಿವೆಂ ಜಿನೇಂದ್ರಪದಸರಸಿಜಮಂ || ೧೩೭

ಎಂದು [ ತನ್ನ ವೈರಾಗ್ಯಂ ಧನ್ವಂತರಿಯ ಕಥೆಯಿಂದಿರ್ಮಡಿಯಾಗೆ ಸಂಸಾರಭೋಗಕ್ಕೆ ಪೇಸಿ ] ದೇವರ್ಷಿಯರೆಂಬ ಚಾರಣರ್ಷಿಯರಲ್ಲಿ ಜಿನದೀಕ್ಷೆಯುಂ ಕೈಕೊಂಡು ತತ ಣದೊಳ ಚಾರಣರ್ಧಿಯನೆಯ್ದಿ ಪನ್ನಿರ್ತರದ ತಪದೊಳುತ್ತರೋತ್ತರಂ ನೆಗೞ್ದು, ಅಷ್ಟಾಪದಗಿರಿಯೊಳಷ್ಟವಿಧ[1] ಕರ್ಮಂಗಳಂ ನಿರ್ಮೂಲಮಾಗೆ ಕೆಡಿಸಿ ತ್ರಿಲೋಕಶಿಖರಿಶೇಖರನಾದನಿಂತು, ೧೩೮

ಕೇಡಿಲ್ಲದೊಂದು ಸುಖಮಂ
ಮಾಡುವೊಡರ್ಹತ್ಪದಾಂಬುಜಾತಮೆ ಮಾೞ್ಕುಂ |
ಮಾಡವು ಪೆಱವೆಂಬೀ ಬಗೆ
ಕೂಡಿದೊಡಾತಂ ಕೃತಾರ್ಥನಾತನೆ ಧನ್ಯಂ || ೧೩೯

ಎಂದು ಗೌತಮಸ್ವಾಮಿಗಳ್ [2]ನಿಶ್ಶಂಕೆಯ ಕಥೆಯುಂ ಪೇೞ್ದುದಂ, ಪಿರಿದೊಂದುತ್ಸಾಹದಿಂ ನಂಬುಗೆ ಮನದೊಳಗುರ್ವಾಗೆ ಕೈಗಣ್ಮಿ ಪೊಣ್ಮುತ್ತಿರೆ ಮಿಥ್ಯಾತ್ವಂ ಸಡಿಲ್ವೊರ್ಮೆಯೆ ಪಱಿವಡೆ ನಿರ್ವಾಣಸಾಮ್ರಾಜ್ಯಮಾಗಳ್

[1] ಕೈಲಾಸಪರ್ವತದೊಳಷ್ಟವಿಧ (ಗ) [2] ಎಂದು ಮುನಿರಾಜಹಂಸಂ (ಗ)

ದೊರೆಕೊಂಡಂತಾಗೆ ರಾಗಂಬೆರಸು ನಲಿದನಂದೆಯ್ದೆ ತ್ರೈವಿದ್ಯಲಕ್ಷ್ಮೀ
ಶ್ವರಪಾದಾಂಭೋಜಭೃಂಗಂ [1] ಸುಕವಿಜನಮನಃಪದ್ಮಿನೀ ರಾಜಹಂಸಂ ॥
೨೪೧

[2] ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿನಿಕರವಿಲುಳಿತ
ಕಿರಣಚುಂಬನೀಯಪರಮಜಿನಚರಣಯುಗಳಸರಸಿರುಹ
ಮತ್ತಮಧುಕರ ನಿರುಪಮಸಹಜಕವಿಜನಪಯಃ
ಪಯೋಧಿಹಿಮಕರನುತಭಾವಯುತ ದಿಗಂಬರ
ದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತ ಮಪ್ಪ
ಧರ್ಮಾಮೃತದೊಳ್
ದರ್ಶನಪ್ರಥಮಾಂಗವ್ಯಾವರ್ಣನಂ
ದ್ವಿತೀಯಾಶ್ವಾಸಂ

---

1 ಚಿತ್ತೋತ್ಸವಂ ಪುಟ್ಟಲತ್ಯಾ | ದರದಿಂ ತ್ರೈವಿದ್ಯಚೂಡಾಮಣಿವಿಮಳ
ಪದಾಂಭೋಜಭೃಂಗಂ ಸರಾಗಂ | ಬೆರಸಿರ್ದಂ ಯೋಗಿವಂದ್ಯಂ ಸುಕವಿ(ಗ)

2 ಇದು ಸಮಸ್ತಸುರಕಿರೀಟಮಣಿಗಣಮಯೂಖಾಲಂಕೃತಪರಮಜಿನ (ಬ)

# ತೃತೀಯಾಶ್ವಾಸಂ.

ಶ್ರೀಕಾಂತೆಯನೊಲಿಪ ಗುಣ
ಕ್ಕೇಕಮನೀಯಪ್ರಣೂತನಿಶ್ಶಂಕೆ ಲಸ |
ತ್ಪ್ರಾಕಾರವೆಂದು ಪೇರ್ಕೆಗೆ
ಕ್ಕೈಕೊಂಡಂ ಸುಕವಿನಿಕರಪಿಕವಾಕಂದಂ ‖ ೧

ಅಂತಾಪ್ತಾಗಮಪದಾರ್ಥಂಗಳೊಳ್ ನಿಶ್ಶಂಕಮನನಾಗಿ ಮುಂದಣ ನಿಷ್ಕಾಂಕ್ಷೆಯ ಕಥೆಯುಂ ಬೆಸೆಸಿಮೆಂದು ಗೌತಮಗಣಧರರ್ಗೆ ಪೊಡೆ ಮಟ್ಟು ಮುಕುಳಿತಕರಕಮಲನಾಗಿರ್ಪುದುಂ [1] ಗೌತಮಗಣಧರಸ್ವಾಮಿಗ ಳಿಂತೆಂದು ಪೇೞ್ದರ್:— ತಂಬುಲದಂತೆ ಸಂಗೀತದಂತೆ ದಿವಸದಂತೆ ಮುತ್ತುಗದಂತೆ ವಜ್ರದಂತೆ ಲೋಕದಂತೆ ವೀಣೆಯಂತೆ ಗಾಳಿಯಂತೆ ವಿಪ್ರರಂತೆ [2] ಸಿದ್ಧರಂತೆ ತ್ರಿಸರದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಮೆಂಬ ಮೂವರೊಳಂ ಕೂಡಿ ಮಹೋತ್ಸಾಹದಿಂ ನಡೆ ವುದು. [3] [ಇನ್ನಾ ಕಥೆಯ ಮಹಿಮೆಯೆಂತಪ್ಪುದೆಂದೊಡೆ, ೨

---

1 ನಿಶ್ರೇಯಸಶ್ರೀಯ ಮನದ ಕಾಂಕ್ಷೆಯ ಕಥೆಯುಂ ಶ್ರೇಣಿಕಂಗೆ ಗೌತಮ ಸ್ವಾಮಿಗಳಿಂತೆಂದು ಪೇಳಲೊಡಗಿದರ್ (ಕ) ; ಬೆಸಸಿಮೆಂಬುದುಮಿಂತೆಂದು ಪೇೞ್ದರ್ (ಗ)

2 ಲಂಕೆಯಂತೆ (ಗ)

3 ಕರವೊಪ್ಪುವ ನಿಷ್ಕಾಂಕ್ಷೆಯೊಳೆರಡಿಲ್ಲದೆ ನೆರೆದು ಶುಭದೊಳೞಗುವ ಮನುಜಂ |
ಗರಿದುಂಟೆ ಜಗತ್ರಯದೊಳ್ಪರಮಾರ್ಥಂ ಮುಕ್ತಿಗದು ತವರ್ಮನೆಯಲ್ತೇ ‖

ಇನ್ನದಱೈಶ್ವರ್ಯಮೆಂತೆಂದೊಡಂ, ಅಂಗವಿಷಯದ ಚಂಪಾಪುರದೊಳ್ ಪ್ರಿಯದತ್ತನೆಂಬಪರದನಿರ್ಪನಾತನ ಮನೋಹರಿಯನಂಗಮಾಲೆಯೆಂಬಳವರಿರ್ವರ್ಗಂ ಪ್ರಿಯನಂದನೆ ಗುಣರತ್ನಾಭರಣೆಯೆನಿಸಿಪನಂತಮತಿಯೆಂಬಳ್, ಮತಿವಂತೆ ಬಗೆಗೆ ಬಂದು (ಗ)

ಅಗಣಿತಮಪ್ಪ ಪೆರ್ಗೆಱೆಗಳಿಂ ನೆಱೆ ವಾರಿಜಷಂಡದೊಳಿಯಿಂ
ಸೊಗಯಿಸುತಿರ್ಪ ಕೆಯ್ವೊಲದಿನಾಡುವ ಗೋಕುಲದಿಂ ಕುಬೇರನಿಂ
ಮಿಗಿಲೆನಿಪ್ಪೊಕ್ಕಲಿಂ ವಿಬುಧಸಂಕುಳದಿಂ ತುಱುಗಿರ್ದ ನಂದನಾ
ಳಿಗಳಿನಳುಂಬಮುನ್ನತಿಯಿನಂಗಮಹೀವಳಯಂ ಧರಿತ್ರಿಯೊಳ್ ॥ ೩

ಅಂತೊಪ್ಪುವಂಗವಿಷಯದೊಳ್ ಧರಾಂಗನೆಯ ಕೈಯ ಮಣಿದರ್ಪ
ಣದಂತೆ, ೪

ಸುತ್ತಿದ ನಂದನವನದಿಂ
ಮುತ್ತಿದ ಕೆಯ್ವೊಲದಿನೆಸೆವ ಪದ್ಮಾಕರದಿಂ ।
ದುತ್ತುಂಗಜಿನಾಲಯದಿಂ
ದುತ್ತಮಪುರಮೆನಿಸಿ ನೆಗೞ್ದ ಚಂಪಾಪುರದೊಳ್ ॥ ೫

ಜಿನಸಮಯವಾರ್ಧಿಸೋಮನುಂ ವೈಶ್ಯವಂಶಲಲಾಮನುಮಪ್ಪ
ಪ್ರಿಯದತ್ತನೆಂಬ ವಣಿಗ್ವಂಶಕುಲತಿಲಕನಪ್ಪನಾತನ ಮನೋಹರೆ
ಯಂಗಮತಿಯೆಂಬಳಂತವರಿರ್ವರ್ಗಂ ಪ್ರಿಯನಂದನೆ ಗುಣಗಣಾಭರಣೆ
ಯನಂತಮತಿಯೆಂಬಳ್, ] ೬

ಅತಿಚೆಲ್ವೆ ಬಗೆಗೆವಂದುದ
ನತಿಶಯದಿಂ ಪಲವುಮಕ್ಕಳುಂ ತಾನುಂ ಸಂ ।
ತತಮುಂ ಮಹಿಮೆವೆರಸುತಾ
ಡುತುಮೀತೆಱದಿಂದೆ ಪೋಗೆ ಪಲವುಂ ದಿವಸಂ ॥ ೭

ಒಂದುದಿವಸಮನಂತಮತಿಯೊಡನಾಡುವ ಮಕ್ಕಳೆಲ್ಲಂ ರಾಗದಿಂ
ಮದುವೆಮಾಡುವೆಮೆಂಬುದ್ಯೋಗದಿಂ ತರಿಸಿ ಬೊಂಬೆಯನೊಂದಂ,

ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ
ಸೋಲೆ ಕತ್ತುರಿಯ ಬೊಟ್ಟನಿಟ್ಟು ಪೊ
ನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂ
ಮಾಲೆಯಂ ಮುಡಿಯಿಸುತ್ತುಮರ್ತಿಯಿಂ ॥ ೯

ಇಂತು ನೆಱೆಯೆ ಪಸದನಂಗೊಳಿಸಿ, ೧೦

ಮದವಣಿಗನೆಂದು ಪಂಕಜ
ವದನೆಯು ಸಾಱಿರಿಸಿ ರಾಗಮೊದವಿರೆ ಮನದೊಳ್ ।
ಮುದದಿಂ ಕೈಪಱಿಗುಟ್ಟು
ತ್ತೊದವಿಂದಂ ಮಕ್ಕಳಾಡುತಿರ್ಪನ್ನೆವರಂ ॥ ೧೧

ಪ್ರಿಯದತ್ತಸೆಟ್ಟಿ ಬಸದಿಗೆ ದೇವರಂ ಕಾಣಲ್ಪೋಗುತ್ತೆ ಕಂಡು ಸಮೀಪಕ್ಕೆ ಬಂದು ಬೊಂಬೆಯ ಕೆಲದೊಳಿರ್ದ ಮಗಳನೆತ್ತಿಕೊಂಡು ಮುಂಡಾಡಿ ಕದಪಂ ಕರ್ಚಿ ಬೞಿಕಮಿಂತೆಂದಂ[1]: — ೧೨

ಸ್ನೇಹದಿಂ ಗುಡಿಗಟ್ಟಿದೆ ಪೆರ್ಮಂಗಳತೂರ್ಯರವಂಗಳು
ತ್ಸಾಹದಿಂದಮದೊರ್ಪ್ಪದೆ ನಂಟರ್ ಬಾರದೆ ಪಾವನರತ್ನಸಂ
ದೋಹದಿಂದೆಸೆವಂತು ವಿವಾಹಮಂ ಕರಮೊಪ್ಪಿರೆ ಮಾಡದಾಂ
ಮೋಹದಿಂ ನೆಱೆ ನೋಡದೆ ನೀನಾತ್ಮೇಶನನಕ್ಕಱೊಳರ್ತಿಯಿಂ ॥ ೧೩

ಇಂತು ಕದ್ದು ಮದುವೆಯಪ್ಪುದುಚಿತಮಲ್ತೆಂದು ತ್ರಸ್ತರಿಯಾಡುತ್ತುಂ ಮುದ್ದಾಡಿ ಜಿನಾಲಯಕ್ಕೆ ಬಂದು ಸ್ವಾಮಿಯಂ ಕಂಡು ಭಟ್ಟಾರಕರಂ[2] ವಂದಿಸಿ ನಿತ್ಯವ್ರತಮಂ ಕೈಕೊಂಡು [3]ಕಿಱಿದುಬೇಗಂ ಧರ್ಮಶ್ರವಣಂಗೆಯ್ದು ಬೞಿಕ್ಕಮಿಂತೆಂದಂ : -- ೧೪

ನೋಡಿರೆ ಚೋದ್ಯಮನಕ್ಕನ
ಮಾಡಿದುದಂ ನಂಟರಱಿಯದಾನಱಿಯದೆ ಮುಂ ।
ಮಾಡದೆ ಜಿನಪೂಜೆಯನೊಡ
ನಾಡುವ ಕೂಸುಗಳುಮೆಯ್ದೆ ತಾನುಂ ಕಳವಿಂ ॥ ೧೫

ಸಮಕಟ್ಟಿಂ ಮದುವೆಯಾದಳ್ ; ನಿಮ್ಮ ಗುಡ್ಡಿಗೆ ಬ್ರಹ್ಮಚರ್ಯವ್ರತಮಂ ಕುಡಿಮೆಂಬುದುಂ, ವರದತ್ತಭಟ್ಟಾರಕರ್ ನಗುತ್ತುಂ ನಿನ

---

1 ಮಕ್ಕಳೆಲ್ಲಮೊಂದುದಿವಸಮನಂತಮತಿಕುಮಾರಿಯ ಕೆಲದೊಳೊಂದು ಬೊಂಬೆಯನಿರಿಸಿ ಮದವಣಿಗನುಂ ಮದವಣಿಗೆಯುಮೆಂದು ಕೈಪಱೆಗುಟ್ಟುತ್ತೆ ನೆರೆದಾಡುತ್ತುಮಿರೆ ಪ್ರಿಯದತ್ತಸೆಟ್ಟಿಯುಂ ಕಂಡು ಬಂದೆತ್ತಿಕೊಂಡು ಕದಪಂ ಕರ್ಚಿ ಮುದ್ದಾಡಿಸಿ ಮಗಳ್ಗಿಂತೆಂದಂ (ಗ)

2 ವರದತ್ತಭಟ್ಟಾರಕರಂ (ಗ) 3 ಸಿದ ಶೇಷೆಯಂ ಕೊಂಡು ಕಿಱಿದು (ಕ)

ಗಿಂದು ಮೊದಲಾಗೆ ಬ್ರಹ್ಮಚರ್ಯವ್ರತಮಂ ಕೊಟ್ಟವೆಂಬುದುಂ ಮಹಾ ಪ್ರಸಾದಮೆಂದು ಕೈಕೊಂಡು ತನ್ನ ಮನದೊಳಿಂತೆಂದಳ್:— ೧೬

ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ಕೂಪದೊಳ್
ಕೆಡೆವಂಗಡ್ಡಯಿಪಡ್ಡಗೊಂಬು ರುಜೆಯೊಳ್ಬೀವಂಗೆ ದಿವ್ಯೌಷಧಂ
ಬಿಡದೀ ಸಂಸೃತಿಯೊಳ್ ದುರೌಘವಶದಿಂ ಬೀವರ್ಗೆ ತತ್ಸುವ್ರತಂ
ಗಡ ಕೈಸಾರ್ದೊಡೆ ಭಾವಿಸಂದವನೆ ಧನ್ಯಂ ಭೂರಿಭೂಚಕ್ರದೊಳ್ ॥ ೧೭

ತರುನಿಕರಂಗಳೊಳ್ಮಲಯಜಂ ಭಗಣಂಗಳೊಳಬ್ಜವೈರಿ ಭೂ
ಧರನಿಚಯಂಗಳೊಳ್ಸುರನಗಂ ದೃಷದಾವಳಿಯೊಳ್ಸುರತ್ನಮು
ರ್ವರೆಗಧಿನಾಥರೊಳ್ನೆಗಟ್ದ ಚಕ್ರಿಗಳಯ್ದೆ ನಿಳಿಂಪರೊಳ್ಸುರೇ
ಶ್ವರನಿರವೆಂತುಟಂತುಟೆ ಧರಿತ್ರಿಯ ದೇವರೊಳಂ ಜಿನೇಶ್ವರಂ ॥ ೧೮

[ಇಂತಾರ್ಗಮಪೂರ್ವಮೆನಿಸಿದ ಜಿನೇಶ್ವರಂ ಮುನ್ನಿನ ಪುಣ್ಯೋದಯದಿಂದೆನಗೆ ಕುಲಸ್ವಾಮಿಯಾದಂ ; ಮತ್ತಂ][1] ರೂಪುಂ ಸ್ನೇಹಮುಮುಳ್ಳ ಸ್ತ್ರೀಯುಂ, ಕಾರುಣ್ಯಮುಂ ಕೋಡುಮುಳ್ಳಾಳ್ದನುಂ ಬೆಳಸುಮಾಜ್ಞೆಯುಮುಳ್ಳ ದೇಶಮುಂ, ಪಾಲುಂ ಶೀಲಮುಮುಳ್ಳಾವುಂ, ನಿರ್ವೇಗಮುಂ ವ್ರತಮುಮುಳ್ಳ ತಪಮುಂ, ಶ್ರೀಯುಮಾಯುವುಮುಳ್ಳ ಬಾಳುಂ, ಶಕ್ತಿಯುಂ ಭಕ್ತಿಯುಮುಳ್ಳ ದಾನಮುಂ, ಚೆನ್ನುಂ ಪೊನ್ನುಮುಳ್ಳ ಸೊಬಗುಂ, ಗೆಲ್ಲಮುಮುದಟುಮುಳ್ಳ ತೇಜಮುಂ, ತೀರ್ಚುವ ಬುದ್ಧಿಯುಂ ಸತ್ವಮುಂ, ಸಮ್ಯಗ್ದರ್ಶನಮುಂ ವ್ರತಮುಮುಳ್ಳ ಪುಣ್ಯಮುಂ ಪಡೆಯಲರಿದದುಕಾರಣದಿಂ, ೧೯

ಬಾಲತೆಯೊಳ್ದರ್ಶನಮುಂ
ಮೇಲೆನಿಪೀ ವ್ರತಮುಮೊಡನೆ ಸಂಭವಿಸಿದುವಾ ।
ನಾಲಸ್ಯದಿನಿವನುಳಿದೊಡೆ
ಮೇಲೆನಗಿಂತಪ್ಪ ಪುಣ್ಯದೊದವಾದಪುದೇ ॥ ೨೦

---

1 ಮತ್ತಮೆನ್ನಭಾಗ್ಯದಿಂ ತವುಡಿಂಗಂ ಮಾಣಿಕಂ ದೊರೆಕೊಂಡುದೆಂಬಂತೆ ರೂಪುಂ (ಬ. ಕ.)

ಕೆಱೆಯನೊಡೆದು ತೊಱೆಯಂ ತೀವುವ, ಮನೆಯನೞಿದು ಬೇಲಿಯನಿಕ್ಕುವ, ಹಾಸನೞಿದು ಕಂಥೆಯಂ ಪೊಲಿಸುವ, ಮೆದೆಯಂ ಸುಟ್ಟುರಳಂ ಕುಱುಕುವ, ತುಪ್ಪಮನೊಕ್ಕು ಸಗಣಮಂ ಕೊಳ್ವ, ಕಸ್ತೂರಿಯಂ ಬಿಸುಟು ಕೆಸಱಂ ಕೊಳ್ವ, ಬಂಡಾರಮಂ ಈಡಾಡಿ ಕಾಚಂ ಸಂವರಿಸುವ, ಬಟ್ಟೆಯಂ ಬಿಟ್ಟು ಕಾಡಂ ಪುಗುವ, ಕೆಯ್ಯಂ ಬಿಟ್ಟು ಪುಲ್ಲಂ ಕೊಳ್ವ, ಪೊನ್ನಂ ಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವೆನೀ ದರ್ಶನಮಂ ವ್ರತಮುಮಂ ಬಿಟ್ಟೆನಪ್ಪೊಡೆಂದು ಮನಮಂ ತಿಬ್ಬಂ ಮಾಡಿ, ೭೧

[ಎಂದು ಮನದೊಳ್ಮಹೋತ್ಸವ
ದಿಂದಂ ಮುನಿಪತಿಗೆ ಭಕ್ತಿಯಿಂ ವಂದಿಸಿ ಪೆ ।
ರ್ಚಿಂದಂ ಗೃಹಕ್ಕೆ ಬೇಗಂ
ಬಂದು ಮನೋಮುದದಿನಂಬುಜಾನನೆಯಿರ್ದಳ್ ॥ ೭೨

ಇರ್ಪುದುಂ ಮನೆಯವರೆಲ್ಲರ ಪ್ರಹಸನದಿಂದಂ ಬ್ರಹ್ಮಚಾರಿಯೆಂಬ ಪೆಸರೆ ಪ್ರಸಿದ್ಧಮಾಗೆ][1] ೭೩

ಸಿಸುವಂ ತಾಯೊಕ್ಕಲಿಗಂ
ಸಸಿಯಂ ನೆಲನಂ ಮಹೀಭುಜಂ ಕಡುಲೋಭಂ ।
ಕಸವರಮಂ ಭೀತಂ ತ
ನ್ನಸುವಂ ನೆಱೆ ಶೀಲಮಂ ಮಹಾಸತಿಯುಪ್ಪಳ್ ॥ ೭೪

ರಕ್ಷಿಸುವಂದದಿಂ,[2] ೭೫

ಸನ್ನುತಗುಣಗಣನಿಳಯೆ ಮ
ಹೋನ್ನತೆ ಬಿಡದೈದುವರ್ಷದಿಂ ತೊಡಗಿ ಕರಂ ।
ಪನ್ನೆರಡಬ್ದಂವರೆಗಂ
ಭಿನ್ನಾಂಬುಜವದನೆ ರಕ್ಷಿಸುತ್ತುಂ ವ್ರತಮಂ ॥ ೭೬

---

[1] ಮನೆಗೆವೋಗಿ ಬ್ರಹ್ಮಚಾರಿಣಿಯೆಂಬ ಪೆಸರಸೆಯೆ (ಗ).

[2] ತನ್ನಸುವಂ ರಕ್ಷಿಸುವ ತೆಱದಿನೀಸುವ್ರತಮುಂ, ಸನ್ನುತ (ಗ)

ಇದೊರ್ಂದುದಿನಂ ಪೆಱಗಣ ನಂದನವನದೊಳ್ [ಪೊಱ್ತು ಪೋಗಿಂಗೆ ಪರಿಚಾರಕಿಯರುಂ ತನ್ನೊಡನಾಡುವ ಕುವರಿಯರುಂ ಬೆರಸು ಪೋಗಿ, ಮನಕ್ಕೆ ಬಂದ ಪೂವಿನಾಭರಣಮಂ ತೊಟ್ಟು ಚೂತಮಹೀಜದ ಕೆಳಗಣ ಪೊನ್ನ] ಯ್ಯಲನೇಱಿ, ೨೭

ಅಳಿನಿನಾದಮುಮುಯ್ಯಲ ಧ್ವನಿಯುಂ ಮನೋಹರಮಪ್ಪಿನಂ
ಜಳಜನೇತ್ರೆಯರೊಯ್ಯನೊಯ್ಯನೆ ತೂಗುತುಂ ನೆರೆದೊಂದಿ ಕೋ
ಮಳನಿನಾದದಿನಾದಿದೇವರ[1] ವಸ್ತುರೂಪಗುಣಸ್ತವಂ
ಗಳನೆ ಪಾಡೆ ವಿನೋದದಿಂ ತರಳಾಕ್ಷಿಯಾಡುತುಮಿರ್ಪಿನಂ ‖ ೨೮

[ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಕಿನ್ನರಗೀತಮೆಂಬ ಪೊೞಲನಾಳ್ವ] ಕುಂಡಲಮಂಡಿತನೆಂಬ ವಿದ್ಯಾಧರಂ ತನ್ನಗ್ರಮಹಿಷಿ ಸುಕೇಶಿನಿವೆರಸು ಆಕಾಶಮಾರ್ಗದೊಳ್ ಕಾಮವಿಹಾರಾರ್ಥಂ ಬರುತ್ತುಂ [ಉಯ್ಯಲಾಡುತ್ತುಮಿರ್ಪನಂತಮತಿಕುಮಾರಿಯಂ] ತೊಟ್ಟನೆ ಕಾಣ್ಬುದುಂ; ೨೯

ವಿರಹಾನಲನಳುಱೆ ಮಿಯ
ಖಚರರಾಜಂ ನಿಲಿಸಲಾಱದೊಪಲಂ ದಾಹ |
ಜ್ವರಮಾದರಂತೆ ಕಾಯ್ಪಿಂ
ದುರಿಯುತ್ತುಂ ಬೆಯ್ವ ತೈಲಮಿರ್ಪಂತಿರ್ದಂ ‖ ೩೦

ಅರಲಸರಲ್ಕೈದೆಂಬಕಾರ್ಮಂಗೆ ಲೋಕದ ಮಾನಿಸರ್
ತೊಲಗದರಲಂಬಾತಂಗೈದಪ್ಪೊಡೆನ್ನನೆ ಪೋಗದ

---

1 ನಿನಾದದೆ ದೇವವಂದ್ಯನ (ಬ. ಕ.)

ಒಡನೊಡನೆಕಾಮಬಾಣಂ
ನಡುಕೊಲ್ವರಮೂರ್ಛೆಬೆಗಡುಗೊಂಡತ್ತಿತ್ತಲ್ |
ಮಿಡುಕದೆನಿಲಿಸಿವಿಮಾನಮ
ನಡಿಗಡಿಗಳ್ಕುತ್ತನೋಡಿವಾರಿಜಮುಖಿಯಂ ‖ ೩೦
ತನ್ನೊಳಿಂತೆಂದಂ:–(ಬ, ಕ) ೩೧

ಗ್ಗಲಿಸಿ ನಡುವೆಂಬೋವೊವತ್ಯದ್ಭುತಂ ಶತಕೋಟಿಗಂ
ಪಲವುಪಲವೆಂದಾಗಳ್ವಿದ್ಯಾಧರಂ ಮನಮಿಕ್ಕಿದಂ ॥ ೩೩

ಇವಳ ಕಡೆಗಣ್ಣೆಂಬೀ ಲೇಸಪ್ಪ ಕೂರ್ಪಿನ ಬಾಣದಿಂ
ದಿವಳ ಮುಖಮೆಂಬಗ್ಗಂಬೆತ್ತಿರ್ದ ಪೆಂಪಿನ ಚಕ್ರದಿಂ
ದಿವಳ ನಳತೋಳೆಂಬೀ ತೀವ್ರಾಸಿಯಿಂ ಸ್ಮರನಂಜಿಪಂ
ಕುವಿಟನದಟಂದೆನ್ನಂ ತಾನೊರ್ವನಂಜಿಸಲಾರ್ಪನೇ ॥ ೩೪

ಎಂದು ಕಾಮಸಂತಾಪದಿಂ ಪಲುಂಬಿ ಪಂಬಲಿಸುತ್ತುಂ ಪೆಂಡತಿಯಪ್ಪ ಸುಕೇಶಿನಿ ತನ್ನೊಡನಿರ್ದಳಪ್ಪುದಱಿಂ ನೆಲಕ್ಕಿೞಿದು ಕುಮಾರಿಯಲ್ಲಿಗೆ ಪೋಗಲಣ್ಮದೆ, ಕುದಿವ ಕೂೞಂತೆ ಕುದಿದು ದಗೆಯೇಱಿದ ಕೋಡಗದಂತೆ ಬೆಱಗಾಗಿ ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಱನಂ ಕಂಡ ಕಳ್ಳನಂತೆ ಕುಸಿದು ಪೇಳಗೆಯೊಳಗಣ ಪಾವಿನಂತುಮ್ಮಳಿಸಿ ಬೇಸಗೆಯ ಸೂರ್ಯನಂತೆ ಕಾಯ್ದು ಪಿರಿದಾಗಿ ತೆಱುವ ಒಕ್ಕಲಂತೆ ನೆಲನಂನೋಡಿ ನೀರ್ವಡೆಯದ ಗಿಡುವಿನಂತೆ ಮುಖಂಬಾಡಿ ಎಣ್ಣೆಮುಟ್ಟದ ಕುಂಬಳಕಾಯಂತೆ ಒಳಗೊಳಗೆ ಕೊೞೆತು ಕುದಿವ ನೀರಂತೆ ಮಱುಗಿ ದರಿಯುಮೊರದಂತಲ್ಲಾಡಿ ಆನೆಯ ಪರಿಕಾಱನಂತೆ ಪಲಪಂ ಚಿಂತಿಸಿ ಕಳನನೇಱಿದಂಕದವನಂತೆ ಬೆಱಗಂನೋಡಿ ಬಕವೇಸಿತನದಿಂದೊಡಲ ಸೂಡಿಂಗಿರಲಾಱದೆ ಪುಸಿಗೂರ್ಮೆಯಿಂದೋಪಳನಪ್ಪಿಕೊಂಡು [ಮೆಲ್ಲನಿಂತೆಂದಂ:— ೩೫

ಇತ್ತಲಪ್ಪೊಡೆ ನಮ್ಮ ಕಾಣದ ನಾಡುಗಳ್ಪಲವಿಲ್ಲ ಕೇ
ಳತ್ತಲೇವುದೊ ಪೊಕ್ಕು ನಾಳ್ ವಿನೋದದಿಂದೊಡನಿರ್ವರುಂ
ಮುತ್ತಿನಾಭರಣಂಗಳಂ ನೆಱೆ ತೊಟ್ಟು ಚೀನಮನುಟ್ಟು ಕೇ
ಳುತ್ತರಾಶೆಗೆ ಪೋಗಿ ಭೋಗಿಸುವಂ ಸುರೇಂದ್ರಗಿರೀಂದ್ರದೊಳ್ ॥ ೩೬

ಎಂದು ಕೃತಕವಚನದಿಂ ನಂಬೆ ನುಡಿದು ಪೊೞಲ್ಗೆ ಪೋಗಿ ಮಂದಿರಮಂ ಪೊಕ್ಕು ನಲ್ಲಳಂ ವಂಚಿಸಿ ಪೋಪ ಬಗೆಯಂ ನೆನೆದು, ಸುಕೇಶಿನಿಗೆ ಮಣಿಕುಂಡಲಮಂಡಿತನಿಂತೆಂದಂ:—][1] ೩೭

[1] ಪುರಕ್ಕೆ ಮಗುಳ್ದು ಪೋಗಿ (ಗ)

ನೀನಿಲ್ಲಿರ್ ಮೇರುನಗ
ಕ್ಕಾನೊರ್ವನೆ[1] ಪೋಗಿ ಬಂದಪೆಂ ರಮಣೀಯು ।
ಸಾ ನಂಗಳಡೆಯುನಱಿದೆಂ
ದಾ ನೀರೆಗೆ ಕೂರ್ಪನಂತೆ ನುಡಿದಾ ಖಚರಂ[2] ॥ ೩೮

[ವಿಮಾನಮನೇಱಿ ಪುರಮಂ ಪೊಱಮಟ್ಟು ಬಡಗಣದೆಸೆಗೆ ತನ್ನ ಪೋಗಂ ತೋಱಿ ಕಿಱಿದೆಡೆಯಂ ಪೋಗಿ ಮಗುಟ್ದು ತೆಂಕಮುಖನಾಗಿ ಮರುಜ್ಜವದಿಂ] ಚಂಪಾಪುರಕ್ಕೆ ಬಂದುಯ್ಯಲನೇಱಿರ್ದನಂತಮತಿಯಂ ತನ್ನ ವಿಮಾನದೊಳೇಱಿಸಿಕೊಂಡು ಆಕಾಶಕ್ಕೆ ನೆಗೆದು ಕನ್ನೆಯ ರೂಪಂ ನೋಡಿ, ೩೯

ಎಳಲತೆಯಿನೆ ಬಿದಿ ಲೋಕಮ
ನೞಲಿಸಲೆಂದರ್ತಿವೆಟ್ಟು ವನಿತಾರೂಪಂ ।
ಗಳಯಿಸಿದನಱಿದೆನಲ್ಲದೊ
ಡುಳದಂತಂಗನೆಯರಿಂತು ಚೆಲ್ವೆಯರೊಳರೇ ॥ ೪೦

ಕಂತುವಿನಾರಾಧಿಪ ದೈ
ವಂ ತಡೆಯದೆ ಕಾಮನಿಸುವ ಸರಲೆನಿಸಿದಾ ।
ಕಾಂತೆ ದೊರೆಕೊಂಡಳೆನಗೆ
ನ್ನಂತಾವಂ ಸ್ತ್ರೀಗೆ ನೋಂತವಂ ಖೇಚರರೊಳ್ ॥ ೪೧

[ಮತ್ತಂ, ಲೋಕದೊಳ್ನೋಡದ ಪೆಂಡರಿಲ್ಲ ಆಡು ಮುಟ್ಟದ ಗಿಡುವಿಲ್ಲ; ಈ ಕಾಂತೆಯಂತೆ ಚೆಲ್ವೆಯಂ ಕನಸಿನೊಳಪ್ಪೊಡಂ ಕಂಡ ಱಿಯೆಂ ॥ ೪೨

ಸಿರಿಯೊಳೊಪ್ಪುವ ರೂಪನಿಂದ್ರನ ಕಾಂತೆಯೊಳ್ಕಡುಚೆಲ್ವನಂ
ಬುರುಹದೊಳ್ಮುಖಬಿಂಬಮಂ ಶಿಶುಚಂದ್ರನೊಳ್ ನೊಸಲಂ ಮೃಗೇ
ಶ್ವರನೊಳೊಳ್ನಡುವಂ ಮನೋಜನ ಬಾಣದೊಳ್ಬೆರಲಂ ಮನೋ
ಹರಿಯಿವಳ್ಸೆಱೆಗೊಂಡಳೋ ನೆಱೆ ಸೂಱೆಗೊಂಡಳೊ ಪೇೞಿದಂ ॥ ೪೩

1 ದಕ್ಷಿಣದೆಸೆಗಾನೊರ್ವನೆ (ಗ)
2 ಆ ನಾರಿಗೆ ನಂಬಿ ನುಡಿದು ಖಚರಾಧೀಶಂ (ಗ)

ಎಂದು ಕುಮಾರಿಯ ಹಾವಭಾವವಿಲಾಸವಿಭ್ರಮಂಗಳಂ ನೋಡಿ ತನ್ನೊಳ್ ಪೊಗೞುತ್ತುಂ, ಮನದೊಳ್ ಸಂತಸದಂತವನೆಯ್ದೆ ನೋಡು ತ್ತುಮಿರ್ಪನ್ನೆಗಮನಂತಮತಿಕುಮಾರಿ, ೪೪

ನಯದಿಂ ಜಿನೇಂದ್ರಚರಣ
ದ್ವಯಮಂ ಚಿತ್ತದೊಳ್ ನಿಲಿಸಿ ಶೌಚಕ್ಕೆನಗಿಂ ।
ನಿಯತಂ ವೇಳೆಯೆನುತ್ತುಂ [1]
ಭಯದಿಂದಂ ನೋಡಿ ನಾಡೆ ನಡುಗುತ್ತಿರ್ದಳ್ (?) ॥ ೪೫

ಅಂತು] [2] ಪೆಣನಂ ಕಂಡ ಪಂದೆಯಂತೆಯಂಜುತ್ತುಂ, ರೌದ್ರನಂ ಕಂಡ ಸಾಧುವಿನಂತೆ ಮಿಡುಕಲಣ್ಮದೆ ನೆಲನಂ ನೋಡುತ್ತುಂ, ಬೆಟ್ಟದ ನಪ್ಪರಸಿನ ನಾಡಂತೆ ಬೆಬ್ಬಳಿಸುತ್ತುಂ, ಎಱೆಯ ಕೆಱೆಯಂತೆ ಮೊಗಂ ನೀರೋಡುತ್ತುಂ, ಮಕ್ಕಳಂತೆ [3] ವಿಮಾನಮಂ ಬಿಡದೆ ಪತ್ತುತ್ತುಂ, ಮಹಾ ಮಂತ್ರಿಯಂತೆ ವ್ರತರಕ್ಷಣೋಪಾಯಮಂ ಚಿಂತಿಸುತ್ತುಂ,ಬೊಜಂ ಗಂಗೆ ಬೇಸತ್ತ ಸೂಳೆಯಂತೆ ವಿಮಾನದೊಂದೆಸೆಯಂ ನೆಮ್ಮುತ್ತುಂ, ಮುಳ್ಮರದ ಕೆಳಗಿರ್ದ ಲತೆಯಂತೋಸರಿಸುತ್ತುಂ, ಸುಂಕಿಗನಂ ಕಂಡ ಭಂಡಮುಳ್ಳನಂತೆ ಸಂಕಿಸುತ್ತುಂ, ಆಜ್ಞಾಪರನಪ್ಪರಸಿನಂತೆ [4] ಮನಮಂ ಸಂತೈಸುತ್ತುಂ, [5] ಕೂರ್ಪರಂ ನೆನೆವಂತೆ ಜಿನಾಗಮಮಂ ಭಾವಿಸುತ್ತುಂ ಭಯಮುಳ್ಳ ಬಟ್ಟೆಯಂ ಪೋಪರಂತೆ ಇರ್ಕೆಲನಂ ನೋಡುತ್ತುಂ, ಕ್ಷಮಾನ್ವಿತೆಯುಂ ಸಾಗರದಂತೆ ಗಂಭೀರೆಯುಮಾಗಿರ್ಪುದುಮತ್ತಲ್, ೪೬

ಶತಪತ್ರಾನನೆ ಖಚರನ
ಸತಿ ಕೂರ್ಪುದಱಿಂದೆ ಖೇಚರೇಂದ್ರನೊಳಾದಾ ।
ಕೃತಕಮನಱಿಯದೆ ತಡೆದಂ
ಪತಿಯಿದನಾರಯ್ವೆನೆಂದು ಮನದಾದರದಿಂ ॥ ೪೭

---

1 ಚಿತ್ತದೊಳನಿಲಿಸಿ ಶೌಚಕ್ಕಾನಿಂನಿಯತಂವೇಳೆ (ಕ, ಖ.)

2 ಎಂದು ಮನದೊಳ್ ರಾಗಿಸುತಿರ್ಪನ್ನೆಗಂ ಅನಂತಮತಿ (ಗ)

3 ಸನ್ಯಾಸಿಯಂತೆ (ಕ) 4 ಅನ್ಯಾಯವಿದನೂರಂತೆ (ಗ)

5 ಮಹರ್ಷಿಯಂತೆ ಶುಭಭಾವನೆಯಂ ಭಾವಿಸುತ್ತುಂ, ಕೂರ್ಪರ ಬರವಂ ಪಾರ್ವರಂತೆ ವಿಮಾನದೊಂದೆಸೆಯಂ ನೆಮ್ಮುತ್ತುಂ, ಜಿನಾಗಮಮಂ ನೆನೆಯುತ್ತುಂ, ಭಯಮುಳ್ಳ (ಕ.ಖ)

ಅವಳೋಕಿನೀವಿದ್ಯೆಯುಂ [ನೆನೆದು ಬರಿಸಿ ಮದ್ವಲ್ಲಭನೇಂಕಾರಣಂ ತಡೆದನೋ ಬೇಗವೂರಯ್ದು ಬರ್ಪುದೆಂದು ಪೇೞ್ವುದುಂ, ಪೋಗಿ ಖಚರನಿರ್ದೆಡೆಯುನಱಿದು ಬಂದು ತದ್ವೃತ್ತಾಂತಮನೊಂದುಗುಂದದಂತೆ ಪೇೞ್ವುದುಂ,] [1] ಸುಕೇಶಿನಿ ಕೇಳ್ದು ತುಂಬುರುಗೊಳ್ಳಿಯುಂ ಕಂಬದೊಳ್ವೊಯ್ದಂತ ಸಿಡಿಲ್ದು [ಕಿಡಿಕಿಡಿವೋಗಿ] ೪೮

ಕರಮೆನ್ನನುಱದೆ ಪೋದಂ
ಬರಚರನುಮನವನ ಕೂರ್ಪ ವನಿತೆಯುಮಂ ಚಕ್ರ।
ಚ್ಛರದಿಂ ಕೊಲ್ಲದೆ ಮಾಣ್ದೊಡೆ
ಧರೆಯೊಳ್ ಖೇಚರಿಯೆಯಲ್ಲ ನಾಂ ಗೋಚರಿಯೆ * ॥ ೪೯

[ಎಂದು ರೌದ್ರರೂಪೆಯುಂ ಪಾಪಿಯುಮಪ್ಪುದಱಿಂ ವಜ್ರದಂಡಮನುರದೊಳಮರ್ಚಿಕೊಂಡು ಕಿತ್ತು ಬಾಳ್ವರಸು ಬರ್ಪಾಕೆಯುಂ ದೂರದೊಳ್ ಕಂಡು ಬೆಗಡುಗೊಂಡು ಕುಂಡಲಮಂಡಿತಂ ಬೇಗದಿಂ ಪರ್ಣಲಘುವಿದ್ಯೆಯುಂ ಬರಿಸಿ ನೀನೀಕನ್ನೆಯುಂ ನೆಲಕ್ಕಿೞಿಪಿ ಬರ್ಪುದೆಂಬುದುಂ ತದ್ವಿದ್ಯಾದೇವತೆ, ೫೧

ವನಜಾನನೆಯುಂ ಪಿಡಿದೊ
ಯ್ಯನೆ ವಸುಮತಿಗಿೞಿಪಿ ಭೀಮವನವೆಂಬ ಮಹಾ।
ವನದೊಳಗೆ ಸೊಗಯಿಸುವ ಮಾ
ವಿನ ವನದೊಳಗಿರಿಸಿ ಮರಳಿ ಪೋಪುದುಮಾಗಳ್] [2] ॥ ೫೨

1 ಅಟ್ಟುವುದುಮದಾತನವೃತ್ತಾಂತಮುನಱಿದು ಪೇಳೆ ಸುಕೇಶಿನಿ (ಗ)

* ಎಲ್ಲಲ್ಲತೆಱದಿನೆನ್ನಂ ಮೆಲ್ಲನೆ ಠಕ್ಕಿಕ್ಕಿ ಪೋದ ಧೂರ್ತನುಮಂ ತ। (೫೦)
ದ್ವಲ್ಲಭೆಯುಮನಾದರದಿಂ ಕೊಲ್ಲದೊಡಿವು ಮೊಲೆಗಳಲ್ತು ಯೆಕ್ಕೆಯಕಾಯ್ಗಳ್(ಕ)

2 ಎಂದು ಮಸಗಿ ಬರ್ಪಳಂ ಕಂಡು ಕುಂಡಲಮಂಡಿತನಂಜೆ ಪರ್ಣಲಘುವೆಂಬ ವಿದ್ಯೆಯುನನಂತಮತಿಕುಮಾರಿಯುನಪ್ಪಯಿಸಿ ಪೋಗಲಾವಿದ್ಯೆ ಭೀಮವನವೆಂಬಾರಣ್ಯದೊಳಿರಿಸಿ ಪೋಪುದುಂ, ಪಾಪಿಯು (ಗ)

ಪಾಪಿಯ ಮುಖದಂತೆ ಕತ್ತಲಿಪ ಕೊಳಂಗಳಿಂ, ಕೋಪಿಯ ಹೃದಯದಂತುರಿವ ಕಾೞ್ಗಿಚ್ಚಿನಿಂ, ಕೊಂಡೆಯನಂತೆ ಪತ್ತುವ ಚಿಕ್ಕಡಿನಿಂ, ಕಡುಘಾತಕನಂತೆ ನೋಯಿಸುವ ಪೆರ್ನೊಣಂಗಳಿಂ, ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ವ ಪೆರ್ಬುಲಿವಿಂಡಿಂ, [ಧೀರನ ಪೆಂಡಿರಂತೆ ಬಾಯ್ವಿಡುವ ಸೀರ್ನಾಯ್ಗಳಿಂ] ಬಡಸೂಳೆಯಂತೆ ಬಿಳಿಯದಂತಂಗಳಿಂದೊಪ್ಪುವಾನೆಗಳಿಂ, ಮಹಾಪಾಪಿಯ ಕೋಡಿನಂತೆ ಪಲವುಕೋಡಿಸಿಂದೊಪ್ಪುವ ಸಾರಂಗವಿಂಡಿನಿಂ, ಬಲ್ಲಿದರೊಡ್ಡಿನಂತೆ ಮಾರ್ಮಲೆವ ಕಾಡೆಮ್ಮೆಗಳಿಂ, ಜಿನದ್ರೋಹರ ನರಕಗಮನಮಂ ತೋರ್ಪಂತೆ ಗಿರಿಶಿಖರದಿಂದಿೞಿವ ನೀರ ಧಾರೆಗಳಿಂ, ಕ್ರೂರನ ಮನದಂತ ಪೊಗೆವ ದೆಸೆಗಳಿಂ, ಬಿಂಬಿಮ್ಮೆಂಬ ಪೇರಡವಿಯಂ ನೋಡಿ, ೫೩

ಜಲಜಮುಖಿ ನಾಡೆಯುಂ ತ
ಲ್ಲಳದಿಂ ಭೋರೆಂದು ಸುಯ್ದು ತನ್ನಂ ದುಃಖಾ |
ನಳನಳುರೆ ತನ್ನೊಳಂದಳ್
ಫಲಮಾದುದು ಮುನ್ನಮೆನ್ನ ಮಾಡಿದ ಕರ್ಮಂ || ೫೪

ನಡೆದೊಡೆ ಕಾಲ್ನೊಂದಪ್ಪುದೆಂ
ದಡಿಗಡಿಗಾರಯ್ದು ತಡೆಯಿಮೆಂದಾಳಿಯರಂ | [1]
ಜಡಿವಾ ಜನನಿಯುಮೆಯ್ದನು
ಕಡುಮೋಹೋದಯದಿನೀಗಳಲ್ಲಿರ್ದಪರೋ || ೫೫

ಪರಿಚಾರಕಿಯರನೊಪ್ಪಿರೆ
ಕರಮಕ್ಕನ ಮನಮನಱಿದು ಬಸಗೆಯ್ವುದು ಚಿ |
ಚ್ಚರಮೆಂದು ಪೇೞ್ವ ಮತ್ತೋ
ದರರಾನಿರಲಿತ್ತಲತ್ತಲಾರ್ಗೆಂದಪರೋ || [2] ೫೬

---

1 ನಡೆಯವೇಡೆಂದೆನ್ನಂ (ಕ)

2 ಪೇೞ್ವತಾಯುಂ ಕರಪಯ್ಯನುಮೆನ್ನಗಲ್ಕೆಗೇಂ ಗೆಯ್ದಪರೋ (ಕ)

ತನಯತಾಯ್ತಂದೆ ಸುಹೃ
ಜ್ಜನವಿಷ್ಟಬಾಂಧವರ್ಗಮಜ್ಜಂ ಪಜ್ಜಂ ।
ತನುಜಕಾಂತೆಯರೊಡವು
ಟ್ಟನವರ್ ಬೇಱಂಬ ಜಿನಮತಂ ತಪ್ಪುಗುಮೇ ॥ ೫೭

ತಂತ್ರಂ ಬಹುವಿಧಮುಪ್ಪು
ಮಂತ್ರಂ ನಾನಾಪ್ರಕಾರದಿಂದಿರ್ದ ಮಹಾ ।
ಯಂತ್ರಂ ಕೇಡಡಸಿದೊಡವು
ಜಂತ್ರದ ಕೀಲ್ಕಳಚಿದಂತೆ ಕಳಕುಳಮಕ್ಕುಂ ॥ ೫೮

ಕರಿಸಂದೋಹಂಗಳಶ್ವಪ್ರತತಿಗಳದಟಿಂದಿರ್ದ ಬಲ್ಲಾಳ್ಗಳುರ್ವೀ
ಧರಮಂ ಪೊಕ್ಕಿರ್ದ ಬಲ್ಕೋಂಟೆಗಳಕಟಕಟಾ ತಮ್ಮ ರಕ್ಷಿಪ್ಪುವೇಂನಿ
ಷ್ಠುರಕೋಪಂ ಕಾಲರಾಜಂ ಮಸಗಿ ಕೊಲೆ ದಿಟಂ ಧರ್ಮವೊಂದಲ್ಲ
ದನ್ಯರ್
ಶರಣಲ್ಲೆಂಬೀ ಜಿನೇಂದ್ರೋದಿತವಚನಮನಾಂ ನಿಶ್ಚಯಂ ಕಂಡೆನೀಗಳ್॥
೫೯

ಕಡುಗೂರ್ಪಿಮ್ಮಿಕ್ಕೆ ತಾನೆಲ್ಲಿವಳೊಡವಿನ ಮೋಹೋದಯಂ ಪೆರ್ಚಿ
ಮುದ್ದಿಂ
ನಡಸುತ್ತಿರ್ದಯ್ಯನೋವೆಲ್ಲಿದನನುನಯದಿಂದೊಂದಿ ಕೂಡಿರ್ದ ನೆಂಟ
ರ್ಗಡೆಗೊಂಡಾನಂದದಿಂದಾಡುವ ಪರಿಜನಮಿನ್ನೆಲ್ಲಿದರ್ಭಾವಿಪಂದೆ
ನ್ನೊಡನಾರುಂ ಬಾರರೀ ಪೇರಡವಿಗೆ ದುರಿತಾಟೋಪದಿಂದಾನೆ ವಂದೆಂ ॥
೬೦

ದಿವದೊಳ್ ಭೋಗಿಪ್ಪೊಡಂ ಮಹಾನರಕದೊಳ್ ದುಃಖಾಗ್ನಿಯಿಂ
ಬೆಯ್ವೊಡಂ
ನವೆಯುತ್ತಿರ್ಪೊಡಮೆನ್ನ ಕೂಡಿ ತಿರಿಕಪ್ರಾತಂಗಳೊಳ್ ನಾಡೆ ಸಂ

ಭವಮಾಗಿರ್ಪೊಡೆ ಮತ್ತಮಾ ಮನುಜರೊಳ್ ಪುಟ್ಟಿರ್ಪೊಡಂ ಜೀವನು
ತ್ಸವದಿಂದೊರ್ವನೆ ಬೆಯ್ಯುಗ್ಗಮೆಂಬ ಜಿನರ ಶ್ರೀವಾಕ್ಯಮಂ ನಂಬಿದಂ ೬೧

ಧರೆ ರಾಜ್ಯಂ ರೂಪು ವೀರಂ ಮಹಿಮೆ ತನು ವಿಲಾಸಂ ಬಲಂ ಜೀವಿತತ್ವಂ
ಸಿರಿ ಸೌಭಾಗ್ಯಂ ಧನಂ ಯೌವನಮೆಳವು ಬಳಂ ಸೌಖ್ಯಮೆಂದಿಂತಿವೆಲ್ಲಂ
ಸುರಚಾಪಾಕಾರದಂದಂ ದರಿಯುಮಹಿಜದಂದಂ ಕಳಂ ಕಷ್ಟಮೆಂದುಂ
ಸ್ಥಿರಮಲ್ಲೆಂಬೊಂದು ಜೈನೋಕ್ತಿಯ ಮಹಿಮೆಯನಿಂದಾನೆ[1] ಕಣ್ಣಾರೆ ಕಂಡೆಂ ॥ ೬೨

[ಎಂದು ಧೃವಮಂ ಭಾವಿಸಿ] ೬೩

ಸಿರಿವಂತನಾಗಿಯುಂ ಸಿರಿ
ಪರಿಹರಿಪುದುಮೊರ್ವ ಬಡವನಾಗಿಯು ಮತ್ತಾ |
ದರದಿಂ ಕುಮಾರನಾಗಿಯು
ಮಿರದೊರ್ವಯೆ ವೃದ್ಧನಾಗಿಯುಂ ತಿರಿತರ್ಕುಂ ॥ ೬೪

ಕಡುಸುಖಿಯಾಗಿಯುಮೊರ್ವಯೆ
ಕಡುದುಃಖಿಯುಮಾಗಿ ವೀರನಾಗಿಯು ಮತ್ತಂ |
ಕಡುಪಂದೆಯಾಗಿಯುಂ ಬಿಡ
ದೊಡನೊಡನಘವಶದಿನಿಂತು ಸುಳಿವಂ ಜೀವಂ ॥ ೬೫

[ಎಂದು ಸಂಸಾರದೊಳಾದ ನಾನಾಪ್ರಕಾರದ ದುಃಖಂಗಳಂ ಭಾವಿಸಿ,] ೬೬

ಬಡಲಿದಱಂದಮಂ ಬಗೆದು ನೋಳ್ಪೊಡೆ ಪೇಲ ಪಣಂಬೆ ಕುತ್ತಮಿ
ರ್ಪೆಡೆ ನರದಾಗರಂ ಮಿದುಳ ಪುತ್ತು ಕಷಾಯದ ರಾಶಿ ಮೂಳೆಯೊಂ

1 ಮಹಿಮೆಯನೋವಾರೆ (ಗ).

ದಡಗಿನ ಪುಂಜದಿಂ ತೊವಲೆನೆಲ್ವಿನಿಮಗ್ಗದ ನೆತ್ತಱಿಂ ಮೆನಂ
ಬಿಡೆ ಸಮೆದಿರ್ದ ಪೆರ್ಮನೆ ಶರೀರಮಿದಂ ಪಿಡಿವಂದಮಾವುದೋ [1] ||
೬೭

ಎಂದು ಶರೀರದೊಳಾದಶುಚಿತ್ವಮಂ ನೆನೆದು ಪೆಱ್ಱದೆಸೆಗೆ ನಾಡೆಯುಂ ಪೇಸಿ, ನರಕದೊಳ್ ಜೀವಂಗಳ್ಗಪ್ಪ ದುಃಖಂಗಳನಿಂತೆಂದು ಬಗೆದಳ್ [2] || ೬೮

ಕಿಱಿಕಿಱಿದಾಗಿರೆ ಮೆಯ್ಯಂ
ಕೊಱಿಕೊಱಿದುಂ ಪುಳ್ಗಯಟ್ಟು ಕದಪಂ ಕೈಯಿಂ |
ದಿಱಿದಿಱಿದು ನಿಷ್ಠುರರ್ವೆ
ಯ್ಮಱುಗುವಿನಂ ಪಿಡಿದು ಬಡಿದು ಕಿಚ್ಚಿನೊಳಡುವರ್ || ೬೯

ಗರಗಸದಿಂದಂ ಮಿಗೆ ನಿ
ಷ್ಕರುಣಿಗಳೊಡಸಿಕ್ಕಿ ನೆತ್ತಿಯಿಂದಂ ಪಾದಂ |
ಬರೆಗಂ ಸೀಳ್ದು ಭಾಗಮ
ನುರಿವೆಣ್ಣೆಯೊಳಿಕ್ಕಿ ತೆಗೆಸುವರ್ಮಱುಗುವಿನಂ || ೭೦

ಉಪ್ಪಿಲ್ಲಣಿಂಗು ಸಾಸವೆ
ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ |
ಚಪ್ಪರಿಸಿ ಬಡಿದು ಮೆಯ್ಯಂ
ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ || ೭೧

ನಾರೆತ್ತುವ ತೆಱದಿಂ ಕೈ
ಯಾರೆ ಕುಕಿಲ್ದಾರ್ದು ಪೊಯ್ದು ಮೆಯ್ಗಳ ತೊವಲಂ |
ಕ್ರೂರತನದಿಂದಮೆತ್ತುವೆ
ರೋರಂತೊಱಲುವಿನಮಂಜಿ ಬಾಯ್ವಿಡುವಿನೆಗಂ || ೭೨

---

1 ಶುಚಿಯೆಂದು ನಂಬುವರೋ (ಗ.)

2 ಎಂದು ಸಂಸಾರವಿಚಿತ್ರತೆಗಳಂ ಭಾವಿಸಿ ನರಕದೊಳಾದ ಮಹಾದುಃಖಗಳಂ ಇಂತೆಂದು ಚಿಂತಿಸಿದಳ್ (ಗ.)

ಪೆತ್ತಂ [ಬಾರಿಬಾರಿಗೆ ಗಾಣದೊಳಟ್ಟು ಪಿೞಿದುಂ, ನೋಡೆ ನೋಡೆ ಗಾಣದೊಳಿಕ್ಕಿ ತೆಗೆದುಂ, ಪುಯ್ಯಲಿಡೆ ಸುಡವೊತ್ತಿಸಿಯುಂ, ಸಂದುಸಂದುಗಳೊಳ್ ಸೂಜಿಯಂ ಪೆಟ್ಟಿಯುಂ, ಒಡಲೊಳುಳಿಗಳಂ ಸೇರಿಸಿಯುಂ, ನಾಲಗೆಯಂ ಪೆಡತಲೆಯೊಳುರ್ಚಿಯುಂ, ಮೆಯ್ಯಂ ಕಿಱಿ ಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ, ದೆಸೆದೆಸೆಗೆ ಸೀಳ್ದೀ ಡಾಡಿಯುಂ, ಬಾಯೊಳಗೆ ದಸಿಯಂ ಪೆಟ್ಟಿಯುಂ, ಪೆಡಗಯ್ಯಂ ಕಟ್ಟಿ ಕಿಚ್ಚಿನೊಳ್ಪುರಳ್ಚಿಯುಂ, ಬಸಿಱನಿಬ್ಬಗಿಮಾಡಿ ಕುದಿದೆಣ್ಣೆಯಂ ಪೊಯ್ದುಂ, ಮಿಡಿಯೆರಡುಮಂ ಕುಂಟಾಗೆ ಕೊಯ್ದುಂ, ಒಳಱುವಿನಂ ಗಂಟಲಂ ಮುಱಿದುಂ, ಪೆಳಱುವಿನಂ ಜಡಿದುಂ, ಬಾಳೊಳ್ಪೊಯ್ದುಂ, ಪುಣ್ಣೊಳ್ ಲೋಹರಸಮಂ ಪೊಯ್ದುಂ, ಕಣ್ಣೊಳ್ ಕೆಂಡಮನಿಟ್ಟುಂ, ಮೂಗುಂಬಾಯುಮುಸಿರ್ಮಿಡುಕಗುಡದೆ ಪಿಡಿದುಂ, ಬಾಚಿಯಿಂ ತಡಂಗಡಿದುಂ, ಕೊಂತದಿಂ ತಗುಳ್ದಿಱಿದುಂ, ಖಡ್ಗದಿಂ ಪೂಣಿಸಿ ಪೊಯ್ದುಂ, ಬೆಟ್ಟೀಱುಗಳಂ ಪರಿತಂದಿಟ್ಟುಂ, ಪರಸಿನೊಳೆರ್ದೆಯಂ ಸೀಳ್ದುಂ, ಗಜಂಗಳಂದಿಕ್ಕಿ ಮೆಟ್ಟಿಸಿಯುಂ, ಸೈಱಿಸಲಾಱದೆ, ಪುಲಿವಿಂಡುಗಳಂ ಬಿಟ್ಟುಂ, ಸೀರ್ನಾಯ್ಗಳಿಂ ದಂಡಿಸಿಯುಂ, ಪೆರ್ನೊಣಂಗಳಿಂ ತಗುಳ್ದರಿಸಿಯುಂ, ಕಾವಲಿಯೊಳಿಕ್ಕಿ ವಾಱಿಸಿಯುಂ, ಇಂತನೇಕವಿಧದಂಡನೆಗಳಿಂ ದಂಡಿಸಿಯುಂ, ಸೈಱಿಸಲಾಱದೆ ] ಅರಿಸಿನದಂತೆ ಮೆಯ್ವತ್ತಿ ಪಿಣಿವರ್, ಕಾಱೆಯಂತೆ ಕೊರಲಂ ಪತ್ತಿ ಕೊಯ್ವರ್, ಗರಗಸದಂತೆ ಮೆಯ್ಯಂ ಕೊಱೆವರ್, ಪಣಿಗೆಯಂತೆ ತಲೆಯಂ ಪತ್ತಿ ತೆಗೆವರ್, ಮೊಲೆಯಂ ತೆರ್ದೆಯಂ ಪತ್ತಿ ನೆತ್ತಱಂ ಕುಡಿವರ್, ಉಗುರಂತೆ ಬೆರಲಂ ಪತ್ತಿ ಕೀಳ್ವರ್, ನಿಱಿಯಂತೆ ತೊಡೆಯಂ ಪತ್ತಿಯುಡಿವರ್, ಪೂಱೆಯಂತೆ ಮೊಣಕಾಲಂ ಪತ್ತಿ ಮುಱಿವರ್, ಸೀರೆಯಂತೆ ನಡುವಂ ಪತ್ತಿ ನೆಲಕ್ಕಿಕ್ಕುವರ್, ಬಾಸೆಯಂತೆ ಬಸಿಱಂ ಪತ್ತಿ ಕರುಳನುಗಿವರ್, ಕೂಸಿನಂತೆ ಮೊಲೆಯಂ ಪತ್ತಿ ತಿಂಬರ್, ತಿಲಕದಂತೆ ನೊಸಲಂ ಪತ್ತಿ ಕಡಿವರ್, ಓಲೆಯಂತೆ ಕಿವಿಯಂ ಪತ್ತಿ ಪಱಿವರ್, ಕೇಶದಂತೆ ಬೆನ್ನಂ ಪತ್ತಿ ಬಾರನುರ್ಚುವರ್, ಮಲ್ಲರಂತೆ ಬರಿಯಂ ಪತ್ತಿ ಕಳಲೆಗಟ್ಟುವರ್, ಪೇನಂತೆ ತಲೆಯಂ ಪತ್ತಿ ಪಲ್ಕಡಿವರ್, ತೇರ

ಣದಂತೆ ತಳಸಿಂ ಪತ್ತಿ ಕತ್ತರಿಸುವರ್, ಕಂಕಣದಂತೆ ಮುಂಗೈಯುಂ ಪತ್ತಿ ಕೊಱೆವರ್, ಕಾಡಿಗೆಯಂತೆ ಕಣ್ಣಂ ಪತ್ತಿ ಬೆರಲೊಳಱೆವರ್, ಕಂಪಿನಂತೆ ಮೂಗಂ ಪತ್ತಿ ಕೊಯ್ವರ್, ತಂಬುಲದಂತೆ ಪಲ್ಲಂ ಪತ್ತಿ ತಿವಿವರ್, ಸವಿಯಂತೆ ನಾಲಗೆಯುಂ ಪತ್ತಿ ಮೆಲ್ವರ್, ಕೆರ್ಪಿನಂತೆ ಕಾಲಂಪತ್ತಿ ಕಡಿವರ್ ಅಂದುಗೆಯಂತೆ ಮೇಗಾಲಂ ಪತ್ತಿ ಸೊಪ್ಪುಗುಟ್ಟುವರ್, ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್, ಸಿಪ್ಪಿಗನಂತೆ ಪೊಲಿವರ್, ಕಮ್ಮಾಱನಂತೆ ಕಾಸಿ ಬಡಿವರ್, ಮೇದನಂತೆ ಸೀಳ್ವರ್, ಬಡಗಿಯಂತೆ ಕೆತ್ತುವರ್, ಅಗಸನಂತೆ ಬೀಸಿ ಪೊಯ್ವರ್, ಒಕ್ಕಲಿಗನಂತೆ ಮೆಟ್ಟಿ ಪರಗುವರ್, ಅಂಕದಂತೆ ಕುತ್ತುವರ್, ಮಲ್ಲರಂತೆ ಪೋಱುವರ್, ಲೇಖಕನಂತೆ ಕೀಸುವರ್, ಮಾದೆಗನಂತೆ ಬಾರೆತ್ತುವರ್, ನಾಯಂತೆ ಕಚ್ಚಿ ತೆಗೆವರ್, ಗೂಳಿಯಂತೆ ತಗುಳ್ದಱೆವರ್, ಗಜದಂತಿಕ್ಕಿ ಮೆಟ್ಟುವರ್, ರಕ್ಕಸರಂತಡಸಿ ನುಂಗುವರ್, ಕಾಳಗದಂತೆ ತಳ್ತಱೆವರ್, ಬಿರುದಂಕದಂತೆ ಪೋಗದೆ ಕಾದುವರ್, ಜಿಗುಳೆಯಂತೆ ನೆತ್ತರಂ ಕುಡಿವರ್, ಮಾಂಸಾಹಾರಿಯಂತಡಗಂ ತಿಂಬರ್, ನಱೆಯಂತೆ ಕರುಳಂ ತೆಗೆವರ್, ತಗುಣಿಯಂತೆ ಮೆಯ್ಯಂ ತಿಂಬರ್, ಪುಲಿಯಂತೆ ಗಂಟಲಂ ತಿಂಬರ್, ಜಂತಿನಂತೆ ಬಸಿಱಂ ತಿಂಬರ್, ಪಂದಿಯಂ ತೆತ್ತುವರ್, ಗುಲ್ಮದಂತೊತ್ತುವರ್, ಪೋಱಿಕಾಱನಂತೆ ಬಿಗಿದುಕಟ್ಟುವರ್ ಗುಡಿಯುನೆತ್ತುವರಂತೆ ಗೂಂಟವುಂ ಪೆಟ್ಟುವರ್, ಪರ್ದಿನಂತೆ ಕೀೞ್ವರ್, ತೇಱನಂತೆ ನೋಯಿಸುವರ್, ಕೋಱಿಯಂತೆ ಕೆದಕುವರ್, ಸಿಡಿಲಂತೆ ಪೊಡೆವರಂತುಮಲ್ಲದೆ, ೭೩

ಅಲ್ಲಲ್ಲಿಗೆ ತೇಱೊಳಗ
ಳಲ್ಲಲ್ಲಿಗೆ ಕೂರಿತಪ್ಪ ಕಂಟಕತತಿ ಮ ।
ತ್ತಲ್ಲಲ್ಲಿಗೆ ತೀವ್ರಾಯುಧ
ಮಲ್ಲಲ್ಲಿಗೆ ಪರಿಯುತಿರ್ಪ ಱುಂಪೆಯ ತೊಂಡಲ್ ॥ ೭೪

ಅಲ್ಲಲ್ಲಿಗೆ ಕಾಱ್ಗಿಚ್ಚುಗ
ಳಲ್ಲಲ್ಲಿಗೆ ಪತ್ತಿ ಕಡಿವ ತುಂಬಿಗಳುಂ ಮ ।

ತ್ತಲ್ಲಲ್ಲಿಗೆ ಮುಳ್ವಟ್ಟೆಗ
ಳಲ್ಲಲ್ಲಿಗೆ ಸುತ್ತಿ ಮುತ್ತಿ ತಿಂಬ ಕಡಂಪುೞು

ಅಲ್ಲಲ್ಲಿಗೆ ಸುಣ್ಣದ ಪೊನ
ಉಲ್ಲಲ್ಲಿಗೆ ರಾಸಿಗೆಯ್ದ ಕೆಂಡಂಗಳ್ಮ ।
ತ್ತಲ್ಲಲ್ಲಿಗೆ ತೀವ್ರಾಯುಧ
ಮಲ್ಲಲ್ಲಿಗೆ ಪರಿವ ಲೋಹ ನರಕದೊಳೆಲ್ಲಂ ॥ ೭೬

ಮತ್ತಂ ಪಾತಕಜೀವಂಗಳ್ ಎಳ್ಳನಂತೆ ಗಾಣಕ್ಕೆವಂದು, ಕಳ್ಳರಂತೆ ಶೂಲಕ್ಕೆವಂದು, ಪುಳ್ಳಯಂತೆ ಕಿಚ್ಚಿಂಗೆವಂದು, ಕಬ್ಬೊನ್ನದಂತೆ ಇಕ್ಕುೞಿಗೆವಂದು, ಕಬ್ಬಿನಂತೆ ಕಡಿಹಕ್ಕೆವಂದು, ದ್ರೋಹಿಯಂತೆ ದಂಡನೆಗೆವಂದು, ಲೋಭಿಯಂತೆ ನಿಗ್ರಹಕ್ಕೆವಂದು, ಕುಸುಱಿಯಂತೆ ಕಟ್ಟಿಂಗೆವಂದು, ಪುಲ್ಲಂತೆ ಸೂಡಿಂಗೆವಂದು, ಕುಂಬಾರನ ಮಣ್ಣಿನಂತೆ ಮಿದಿಹಕ್ಕೆವಂದು, ಧಾನ್ಯದಂತೆ ಹಗೇವಕ್ಕೆವಂದು, ನಾರಂತೆ ಹೊಸೆಹಕ್ಕೆವಂದು, ವೊಲನಂತೆ ಬಡಿಹಕ್ಕೆವಂದು, ಮುಡಿಯಂತೆ ಮುರಿಹಕ್ಕೆವಂದು, ಎಲೆಯಂತರಿಹಕ್ಕೆವಂದು, ತಪ್ತಮಾಂಸದಂತೆ ಕುದಿವೆಣ್ಣೆಗೆವಂದು, ಸತ್ತರ ಮನೆಯಂತೆ ಅೞಲಿಂಗೆವಂದು, ಪರ್ದಿನಂತೆ ಕಂಡಕ್ಕೆವಂದು, ಮಡಿಸೀರೆಯಂತೆ ಗಟ್ಟಣೆಗೆವಂದು, ಮೈಲಗೆಯಂತೊಗೆಹಕ್ಕೆವಂದು, ಹಕ್ಕಲಂತೆ ಬಡಿಹಕ್ಕೆವಂದು, ಮುಯ್ಯಿಲ್ಲದೊಕ್ಕಲಂತೆ ಬಡುಗುಲಿಗೆವಂದು, ಬೇಡನಂ ತೀಡಿಂಗೆವಂದು, [ಬಿಲ್ಗಾಱನಂತೆ ಬಟ್ಟೇಱಿಂಗೆವಂದು] ತಿಱನೆ ತಿರಿವುವಿಂತು ೭೭

[ಕೆಲಕೆಲವು ನಾಯ್ಗಳುರ್ಕಿಂ
ತೊಲಗದೆ ಪಾಯ್ದುಗಿದು ತೆಗೆದು ತಿನೆಯುಂ ಮತ್ತಂ ।
ಕೆಲಕೆಲವು ನಾಯ್ಗಳೊರ್ಮೆಯೆ
ಮಲೆದಿಪ್ಪನೆ ಪೊಯ್ದು ಕಚ್ಚಿ ತಿನೆ ಪೆರ್ಗರುಳಂ ॥ ೭೮

ಪಿರಿದಪ್ಪೆರೆಯಂ ಕೊರಲೊಳ್
ಭರದಿಂದಂ ಕಟ್ಟಿ ಮೆಟ್ಟಿ ಕೊಳ್ಗಸರೊಳ್ ನಿ ।

ಷ್ಮರದಿಕ್ಕಿ ಮೆಟ್ಟಿ ಪುೞುಗಳ್
ಕರಮೆಲ್ಲೆಡೆ ಪತ್ತಿ ಬಗಿದು ತಿನೆ ಮಯ್ಯೆಡಗಂ ॥ ೭೯

ಪೊಱಮಟ್ಟು ಸುೞಿಯೆ ಪಕ್ಕಿಗ
ಳಱಿಯುಟ್ಟಿ ಮಿಗೆ ತಗುಳ್ದು ವಜ್ರತುಂಡದಿನೋರಂ ।
ತಿಱಿಯೆ ಬಿಡದಲ್ಲಿಗಲ್ಲಿಗೆ
ಮಱುಗುತ್ತುಂ ಬೆಂದು ನೊಂದು ಪೊಳಱುತ್ತಿರ್ಪರ್ ॥] ೮೦

ಮತ್ತಂ ಗ್ರಹದಂತೆ ಪುಯ್ಯಲಿಡುವರ್, ತುಂಬಿಯಂತಾಱಿಗೊಳ್ವರ್, ಕೊಳ್ಪಟ್ಟರಂತೊಳಱುವರ್, ನ್ಯಾಯಮಿಲ್ಲದನೂರಂತೆ ಮೊಱೆಯಿಡುವರ್, ತುಳುನಾಡ ಸತ್ತಮನೆಯಂತೆ ಪೞಯಿಸುವರ್, ಕುತ್ತಂ ಬಡೆದರಂತೆ ಬೀೞ್ವರ್, ಬಡಗೊಂದೆಯಂತೆ ದಡದಡಿಸುವರ್, ಪಾವಿನಂತೆ ಪೊರಳ್ವರ್, ನೊಂದ ಕರಡಿಯಂತೆ ಮಲ್ಲಾಯ್ವರ್, ಪುಣ್ಪಡಿಸಿಕೊಳ್ವರಂತೆ ಮಿಡುಮಿಡುಮಿಡುಕುವರ್, ಬಡಿವೆತ್ತರಂತೆ ಸುಯ್ವರ್, ಕೆಟ್ಟೊಕ್ಕಲಂತೆ ನಿಲಲಾಱದೆ ನಡುಗುವರ್, [1]ಕಂಪವಾತರೋಗಿಗಳಂತೆ ಕಂಪಿಸುವರ್, ತೊನ್ನರಂತೆ ರಸಿಗೆಸುರಿವರ್, ಪೆಱವರಂತೇಱಿಲಾಱೆವೆಂಬರ್, ಇಂತು ನರಕದೊಳಾವೆಡೆಯೊಳ್ ನೋೞ್ಪಡಂ, ೮೧

ಎಂದವಧಿತೀರ್ಗುಮದುತೀ
ರ್ದಂದುವರಂ ಮಾಣದೆಲ್ಲಿಯುಂ ಪಾಪಿಗಳಂ ।
ಕುಂದದೆ ನಾರಕರೀವಿಧ
ದಿಂದಂ ಬಾಧಿಸುತುಮಿರ್ಪರಿರುಳುಂ ಪಗಲುಂ ॥ ೮೨

ತೊಱೆಯೆಂದು ಸಾರೆ ಮಾಯದ
ತೊಱೆಗಳ್ಕಾಯ್ದೆಣ್ಣೆಯಾಗಿ ಪತ್ತಿ ಸುಡಲ್ಕೆ ।

1 ಪಾದರೋಗನಂತೆ ಬೆಚ್ಚುವರ್, ಕಣ್ಣ ಬೇನೆಯುಳ್ಳವರಂತೆ ಕೂಗಿಡುವರ್, ದಾಳಿಬರ್ಪೂರಿನಂತೆ ಕಳವಳಿಸುವರ್, ಕಳ್ಳಂ ಪೊಕ್ಕ ಮನೆಯಂತೆ ತಲ್ಲಣಿಸುವರ್, ಕಾಳಗದೊಳ್ ಕೆಟ್ಟರಂತ ಕಾಲ್ ನಡುಗುವರ್, ಮುದುಕನಂತೆ ಕೈನಡುಗುವರ್, ಕಂಪವಾತಮುಳ್ಳರಂತ ಮೈನಡುಗುವರ್, ತೊನ್ನರಂತೆ (ಕ)

ಯ್ಯೇಱಿಯದೆ ಕರ್ಬುನದಂತಿರೆ
ನೆಱೆ ಬೆಯ್ಯುತ್ತಿಂತು ಮಱುಗುವರ್ ಸಲವುದಿನಂ ॥ ೮೩

ಬನವೆಂದು ಪೊರ್ದೆ ಮಾಯದ
ವನವೆಂತುಂ ಪೋಗಲೀಯದಂಬಿನ ಸರಿಯಿಂ ।
ಘನಮಾಗಿ ಸುರಿಯೆ ದುಃಖದಿ
ನೆಸಿತಾನುಂಕಾಲಮಿರ್ಪರೋವೋಯೆನುತುಂ ॥ ೮೪

ಮರನೆಂದು ಪೋಗಿ ಸಾರ್ವುದು
ಮುರಿಗಳ ನಾಲಗೆಗಳಂತೆ ಮರದೆಲೆಯೆಲ್ಲಂ ।
ಪಿರಿದಪ್ಪ ತೀಱ ರೂಪಿಂ
ದರೆಯುಟ್ಟಿ ಮುಟ್ಟಿ ಕಡಿವುವು ಮುಳಿಸಿಂ ॥ ೮೫

ಮತ್ತಂ ಇಲಿಯು ಬೆಕ್ಕಿನ, ಪುಲಿಯು ಪುಲ್ಲೆಯ, ತಳಾಱನ ಕಳ್ಳನ, ನವಿಲ ಪಾವಿನ, ಸಿಂಗದಾನೆಯು, ನಾಯ ಮೊಲದ, ಕುದುರೆಯ ಕೋಣನ, (ಮುಳಿಸಿಂ) ನಾಯ್ ನಾಯೊಳ್, ಕೋಣಂ ಕೋಣನೊಳ್ ಕೋೞಿ ಕೋೞಿಯೊಳ್, ಆನೆಯಾನೆಯೊಳ್, ಮೂರ್ಖಂ ಮೂರ್ಖನೊಳ್, ತಗರ್ ತಗರೊಳ್, ಮಲ್ಲರ್ ಮಲ್ಲರೊಳ್, ತಾಗುವಂತೆ ಕಿಚ್ಚಿಂ ಕಿಡಿಯುವಾಗಿ [ತಂತಮ್ಮೊಳ್ ತಾಗಿ ದುಃಖಂಬಡುವರೆಂದು ನರಕದೊಳಾದ ಮಹಾದುಃಖಮಂ ಭಾವಿಸಿ], ೮೬

ಆ ದುಃಖದೆಡೆಗೆ ಭಾವಿಪೊ
ಡೀದುಃಖಂ ಪಿರಿದೆ ಕರ್ಮವಶದಿಂದಾಸಿಂ ।
ತಾದೆಂ ಕೇಳನಗಿಂ ಜಿನ
ಪಾದಮೆ ಶರಣೆಂದು ಕಣ್ಣ ಸಿಚ್ಚಯಿಸುತ್ತುಂ ॥ ೮೭

[ಕರಿ ಬನಮಂ ಮದಾಳಿ ವನಜಾಕರಮಂ ಶಿಶು ತಾಯನೊಲ್ದು ಗಂಡರನಬಲಾಜನಂ ನೆನೆವ ಮಾರ್ಗದಿನಿಂದ್ರನರೇಂದ್ರವಂದ್ಯನಂ ಪರಮಜಿನೇಂದ್ರನಂ ನೆನೆಯುತಂ ಜಿನಪೂಜೆಯನಾಗಳುಂ ಸವಿಸ್ತರದೊಳ ಕೇಳಿ ಭಾವಿಸುತೆ ಮಾಡುತ ಜೈನಗುಣಸ್ತವಂಗಳಂ॥] ೮೮

ಅಂತಿರ್ಪನ್ನೆಗಂ, ೮೯

ಕರಿಘಟೆಯುಂ ಮೃಗೇಂದ್ರತತಿಯುಂ ಪುಲಿವಿಂಡುಗಳುಂ ಮೃಗಂಗಳುಂ
ಶರಭಸಮೂಹಮುಂ ಹರಿವಿರೋಧಿಗಳುಂ ಫಣಿಯುಂ ನವಿಲ್ಗಳುಂ
ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱೆದಿರ್ದ್ದ ವೈರಮಂ
ನೆರೆದೊಡಸಿರ್ದವೆಂಬುರುಹಲೋಚನೆಯಿರ್ದ ವನಾಂತರಾಳದೊಳ್ ॥೯೦

[ಅಂತು, ಪಗೆಕೆಳೆಯಿಲ್ಲದೆಲ್ಲಾಮೃಗಂಗಳುಂ ಮಿತ್ರತ್ವದೊಳಿರೆ, ವನದೊಳ್ ಶಾಂತಿರಸಮೆಸೆಯೆ, ಕುಮಾರಿಯಿರ್ಪುದುಂ, ಶಂಖಪುರದೊಳೊರ್ವ ವನಚರನುಂ ಬೇಡಿತಿಯುಂ, ೯೧

ಪೊಲಕಾಗಿ ಬರುತುಮೊರ್ಮೆಯೆ
ಲಲಿತಾಂಗಿಯನೊರ್ಮೆ ಕಂಡು ದೇವತೆ ನಮ್ಮಂ ।
ತೊಲಗಿದೊಡೆ ಪಿಡಿದು ಕೊಳ್ಗುಂ
ದೆಲೆ ಮಿಡುಕದೆ ನಿಂದು ಪೊರ್ದಿ ಬಂದಾದರದಿಂ ॥ ೯೨

ತಮ್ಮ ಪೊತ್ತುತಂದಿಪ್ಪಿಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಯ್ದು ಪೊಡೆವಟ್ಟು ಪೋಗಿ ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳಲ್ಲಿಗೆ ಪೋಗಿ ನಿಮ್ಮ ಬೇಳ್ಪ ವರಮಂ ಬೇಡಿಕೊಳ್ಳಿಮೆಂದು ಬಿನ್ನಪಂಗೆಯ್ವುದುಂ, ೯೩

ಬೇಡರಸಂ ಕೇಳ್ದಾಗಳ
ನೀಡಿಲ್ಲದೆ ತದ್ವನಕ್ಕೆ ಬಂದಾ ಸತಿಯಂ ।
ನೋಡಿಯೆಮೆಯಿಕ್ಕುವುದಱಿಂ
ನಾಡೆಯುಮೀವನಿತೆ ದೇವಕನ್ನಿಕೆಯಲ್ಲಂ ॥ ೯೪

ಎಂದೇಱೆಯುಮಿೞಿಯೆಯುಂ ನೋಡಿ ತಾನಾಕೆಗಾಸಕ್ತನಾಗಿ ಕನ್ನೆಯನರಮನೆಗೊಡಗೊಂಡು ಪೋಗಿ ತನ್ನ ಮಹಿಮೆಯುಂ ಸಿರಿಯುಮಂ ತೋಱಿ ಮೆಲ್ಲನೆ,][1] ೯೫

---

1 ಅಂತುಪಶಾಂತರಸಮೆಸೆಯೆ ಕನ್ನೆಯಿರ್ಪುದುಂ ಭೀಮನೆಂಬ ಕಿರಾತನಾಯಕಂ ಕಂಡು ತನ್ನ ಪುರಕ್ಕೆ ಕೊಂಡುಪೋಗಿ ತನ್ನ ಮಹಿಮೆಯಂತೋಱಿ(ಗ)

ನಿನ್ನಂತೆ ನೋಂತ ಸತಿಯಾ
ರೆನ್ನಂತಪ್ಪ ಪ್ರತಾಪಿಯುಂ ಪಡೆದೈ ರೂ ।
ಪೋನ್ನತಿಯಿನೆನುತೆ ಮಾಣದೆ
ತನ್ನಲ್ಲಿಗೆ ಕರವುದುಂ ತಳೋದರಿ ಮನದೊಳ್ ॥ ೯೬

ಬೆಱಗಾಗಿ ಚಿಂತೆಯಿಂ ಬಾ
ಯ್ಬಿಱಬಱಬತ್ತುತ್ತುಮೋವ್ವೊ ಕೆಯ್ಕೊಂಡೀ ವ್ರತಮಂ ।
ತೊಱೆವುದಱಿಂ ಸಾವುದು ಕರ
ಮುಱುವುದು ಚಿಃ ಕಷ್ಟಮೆಂದು ನಿಶ್ಚಲಮತಿಯಿಂ ॥ ೯೭

ಮೋನಂಗೊಂಡು [ಪಂಚನಮಸ್ಕಾರಮಂ ಜಪಿಸುತ್ತುಮುಸಿರದಿರ್ಪುದುಂ, ಕಿರಾತರಾಜನೆನಿತಾನುಂ ತೆಱದಿಂದೊಡಂಬಡಿಸಲಾಱದೆ ಮುನಿದು ಕಿಡಿಕಿಡಿಯಾಗಿ ಮೀಸೆಯಂ ಕಡಿದು,][1] ೯೮

ಕೂಸೆಂಬುದು ತಪ್ಪದು ನಿ
ನ್ನಾಸೆಯೊಳಾಂ ನಿನಗೆ ಸಕಲರಾಜ್ಯಶ್ರೀಯಂ ।
ಲೇಸಾಗಿ ಮಾಡದಿರ್ದೊಡೆ
ದೇಸಿಗತನದಿಂದೆ ನಮೆವುದೊಂದನೆ ಬಗೆವಾ ॥ ೯೯

ಎಂದು ಮಸಗಿ ಬಡಿದೊವರ್ಿಯೆ ನಿನಗೆ ಮುನಿವೆನಲ್ಲಿಂದಿನಿರುಳನೊಳಗೆ ನಿನ್ನ ಮನಮಂ ಸೈತುಮಾಡು, ಮಾಡದೊಱಂಟುತನಮಂ ಮಾಡಿದೆಯಪ್ಪೊಡೆ ನಿನಗೆ ತಕ್ಕ ವಿಧಿಯಂ ನಾಳೆ ಮಾಳ್ಪೆನೆಂದು ಬಲ್ಗಾಪಂ ಪೇೞ್ದು ಪೋದನನ್ನೆಗಮಿತ್ತಲ್ ಕುಮರಿ,[2] ೧೦೦

ಪಿಡಿದೀ ವ್ರತಮಂ ನಾಂ ಸಾ
ವೊಡೆ ಸಾವೆಂ ಬಿಡುವೆನಲ್ಲವೆಂದೊಡೆ ಮೂರ್ಖಂ ।

---

1 ಇರ್ದಳಿರ್ಪುದುಂ (ಗ)

2 ಎಂದು ಪಲವುದಿವಸವೊಡಂಬಡಿಸಲಾಱದೆ ಕಿನಿಸಿ ಮೀಸೆಯಂ ಕಡಿದು ನಾಳೆ ನಿನ್ನಂ ದೆಸೆವಲಿಗೆಯ್ವುದಲ್ಲದೆ ಮಾಣೆನೆಂದು ಬಲ್ಗಾಪಂ ಪೇೞ್ದು ಪೋಪುದುಂ (ಗ)

ಮಡಿಪದ ಮಾಣಂ ಬಲ್ಪಿಂ
ಪಿಡಿವೆಂ ಜಿನಪದಮನಿದುವೆ ಕಜ್ಜಂ ಪೆಱತೇಂ ॥ ೧೦೧

ಎಂದಾಳೋಚಿಸಿ ಕಳೆಯಬಾರದುಪಸರ್ಗಮಿದು ಪಿಂಗುವಿನಮಾಹಾರಶರೀರನಿವೃತ್ತಿಯೆಂದು ಪರಿಚ್ಛೇದಿಸಿರ್ಪುದುಂ,[1] ಯಕ್ಷಿಗಾಸನಕಂಪಮಾಗೆ ಬಂದು ಕನ್ನೆಯ ಮನಮಂ ನೋಡಲೆಂದು ಕಿರಾತರಾಜನ ರೂಪುಗೊಂಡು, ೧೦೨

[ವನರುಹಮುಖಿಯಲ್ಲಿಗೆ ತೊ
ಟ್ಟನೆ ಪಿರಿದಪ್ಪೊಂದುಲೀಲೆಯಿಂ ಬಂದೊಡನಿ ।
ರ್ದನಿಬರುಮೊಡನೆಸೆದಿರೆ ತ
ನ್ನನೆ ಪೊಗೞುತ್ತಿರ್ದನಂ ಕಿರಾತಂ ನುಡಿದಂ ॥] ೧೦೩

ರತಿ ರಂಭೆ ತಿಲೋತ್ತಮೆ ಭಾ
ರತಿ ಯೆಂಬಿವರ ದೊರೆಗೆ ಮಿಗಿಲೆನಿಸಿದ ಮ ।
ತ್ಸತಿಯರ್ಪಲರಿರ್ದಪರು
ನ್ನತಿಯಿಂದಂ ನಂಬೆಯಪ್ಪೊಡಂ ನೀನಿವರಂ ॥ ೧೦೪

[2] [ನೋಡೆಂದು ತನ್ನ ಕೃತಕದಿಂ ಪಡೆದೊಳ್ಪಂಡಿರಂ ತೋಱಿ ಮತ್ತಂ] ೧೦೫

ರೂಪಿಲ್ಲೆನಗಿನ್ನೆಂಬೊಡೆ
ರೂಪಂ ಪ್ರತ್ಯಕ್ಷಕಾಮದೇವನೆ ನಾನಿಂ ।
ಚಾಪಳನಯನೆ ಮನೋಹರ
ರೂಪೆ ಮನೋಮುದದಿನೆನ್ನ ರೂಪಂ ನೋಡಾ ॥ ೧೦೬

---

1 ಕೈ ಮುಟ್ಟುಕೊಂಡಿರ್ಪುದುಂ (ಗ)

2 ಆರ್ಯೆದು ನೋಱಿಸ್ಪೃಹೆಯಪ್ಪೊಡೆ ವಾರಿಜಮುಖಿ ಖಚರಪತಿಯ ಸುರರಾಜನ ಭಂ। ಡಾರಕ್ಕಮೆನ್ನಭಂಡಾರಕ್ಕಂ ಪಿರಿದಿಂತು ನಂಬೆಯಪ್ಪೊಡೆ ನೋಡಾ ॥ (ಗ)

[ಎಂದು ತನ್ನ ವಿಗುರ್ವಿಸಿದ ಕಾಮರೂಪಂ ತೋಱಿ, ಸಿರಿ ಬರೆ ಮೊಣಕಾಲನೊಡ್ಡಿದರೆಂಬಂತಿರೆ ಮರುಳ್ ಭಾವಿಪ್ಪೊಡೆನ್ನೊಳಾವ][1] ಕೊಱತೆಯಾಗಿರ್ದುದಂತಿಂತೆನ್ನದೆನಗೊಡಂಬಡುವುದೆಂಬುದುಮನಂತಮತಿ ತನ್ನೊಳ್, ೧೦೭

ಜಿನಪಾದಭಕ್ತಿಯಿಂ ನೆ
ಟ್ಟನೆ ಮೋಕ್ಷಶ್ರೀಲತಾಂಗಿ ದೊರೆಕೊಳ್ಗನೆ ಮ |
ತ್ತಿನ ಸಿರಿಯುಂ ಗಿರಿಯುಂ ನೆ
ಟ್ಟನೆ ಸುಖಮುಂ ಗಿಖಮುಮಪ್ಪುದಾವುದು ಗಹನಂ || ೧೦೮

ಎಂದು ಶುಭಭಾವನೆಯಿಂದವಱ ಮೇಲೆಳ್ಳನಿತುಮಪ್ಪ ಮನಮಿಲ್ಲದೆ ಪಂಚಪದಂಗಳಂ ನೆನೆಯುತ್ತುಂ ಮಱುಮಾತು ಗುಡದಿರ್ಪುದುಂ ಯಕ್ಷಿ[2] ಮೆಚ್ಚಿ ತನ್ನ ದಿವ್ಯಸ್ವರೂಪಮಂ ತೋಱಿ, ೧೦೯

ಜಿನನಾಥನಿಷ್ಟದೈವಂ
ನಿನಗಂ ಮತ್ತೆನಗಮೆಂಬ ಕಱುಮೋಹದಿನೀ |
ವನಚರನಿಂದುಪಸರ್ಗಂ
ನಿನಗಾದುದನಱಿದು ಪಿಂಗಿಸಲ್ವೇಡಿ ಕರಂ[3] || ೧೧೦

---

1 ತುರಗದಳಂಗಳ ನಾಯ್ಗಳ ನೆರವಿಯನಾಭರಣನಿಕರಮಂ ಕರಿಘಟೆಯಂ |
ವರವಸ್ತ್ರನಿಚಯಮಂ ಪಂಕರುಹಾನನೆ ನೋಡು ನಿನ್ನ ಕಣ್ತಣಿವಿನೆಗಂ ||
ಗೋಪಿಂಡುಗಳಂ ಮೊಲೆತೊರೆದಾವುಗಳಂ ಪೇೞ್ಕೆಗೇಳ್ವ ತೊೞ್ತಿರ್ಕಳ ಸ |
ದ್ಭಾವಮನೆಮ್ಮಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ ಚಿತ್ತೋತ್ಸವದಿಂ ||
ಸಿರಿಯೆನ್ನೊಳಾವ ಕೊಱತೆ (ಗ)

2 ಮನದೊಳೆಳ್ಳನಿತುಮಪ್ಪೊಡಮವಱ ಮೇಲೆ ಕಾಂಕ್ಷೆಯಿಲ್ಲೆಂದು ಮುಸಿರದಿರೆ ಯಕ್ಷಿ (ಗ)

3 ಅಱಿದು ಮಾಣಿಸಲ್ಕಾಂ ಬಂದೆಂ, ಅಂಜದಿರೆಂದು ಸಾಂತ್ವಿಸಿ ಮಱೆದ ಪಟ್ಟಿರ್ದ ಭೀಮನಲ್ಲಿಗೆ ಪೋಗಿ ರೌದ್ರರೂಪಂ ತೋಱಿ (ಗ)

ಬೇಗಂ ಬಂದೆನಿದರ್ಕಂಜವೇಡೆಂದು ಸಂತೈಸಿ ಪೋಗಿ ಮಱೆದೊಱಗಿದ ಕಿರಾತರಾಜನ ತಲೆಯಂ ಪೊಯ್ದವನನಂಜಿಸಲ್ವೇಡಿ ರೌದ್ರರೂಪಂ ವಿಗುರ್ವಿಸಿ ತೋಱಿ, ೧೧೧

ಆನಪ್ಪೊಡೆ ದೇವತೆಯೆಂ
ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ।
ಮಾನಿಸೆಯೆ ಗೆತ್ತು ನುಡಿದೈ
ನಾನಾವಿಧದಿಂದಮಾದೊಡೇನಾಯ್ತಿನ್ನುಂ ॥ ೧೧೨

ನಿನ್ನ ಪೊಲ್ಲಮೆಯಂ ಕೈಕೊಳ್ಳನೆನ್ನಂ ನಾಳೆ ಪೂಜಿಸಿ ಪೊಡೆಮಟ್ಟು ನೀನುಂ ನಿನ್ನ ಪರಿಜನಮುಂ ಕಾಂತಾರಮಂ ಪೊಱಮಡಿಸಿ ಬೇಗಮಯೋಧ್ಯಾಪುರದ ಬಟ್ಟೆಯಂ ತೋಱಿ ಮಗುೞ್ವುದಲ್ಲದಂದು ನಿನಗೆ ನೀಸೆಯಱಿವೆಯೆಂದು ದೇವಿಯದೃಶ್ಯಮಪ್ಪುದುಂ ಬೆರ್ಚಿಯಾಗಳಶ್ಚತರ್,[1] ೧೧೩

[ಭಯದಿಂ ಕನಸಲ್ಲಿದು ನಿ
ಶ್ಚಯಮೆಂದಳ್ಕಳ್ಕಿ ನೋಡಿ ಮನೆಯೊಳ್ತಾಂ ಶಂ ।
ಕೆಯಿನಾಗಳ್ಪರಿಜನಮಂ
ನಯದಿಂ ಬರವೇೞ್ದು ಪೇೞ್ದು ಬೆಳಗಾದಾಗಳ್ ॥] ೧೧೪

ಬಂದು ಕಿರಾತರಾಜನಾ ಕನ್ನೆಯ ಪಾದಂಗಳಂ ಪಲತೆಱದಿಂದರ್ಚಿಸಿ ಬಿಜಯಂಗೆಯ್ವುದೆಂದು ಕೈಮುಗಿದು ಪುಲ್ವಟ್ಟೆಯಿಂ ಪೇರಡವಿಯಿಂ ಪೊಱಮಡಿಸಿ ಕಿಱಿದುಂ ದೂರಂ ಪೋಗಿ ಇದೆ ತೋರ್ಪುದಯೋಧ್ಯೆಯ ಬಟ್ಟೆಯೆಂದು ತೋಱಿ ಮಗುೞ್ದು ಪೋದನಿತ್ತಲನಂತಮತಿ ಬಂದೊಂದು ಬಸದಿಯೊಳ್ ದೇವರಂ ವಂದಿಸುತ್ತಿರ್ಪನ್ನೆಗಮಯೋಧ್ಯಾಪುರದಿಂ ಪುಷ್ಪಕನೆಂಬೊರ್ವಂ, ೧೧೫

ವರವೈಶ್ಯನಂದನಂ ವಿ
ಸ್ತರದಿಂದಂ ಪರದುವೋಪ ಸಮೆಕಟ್ಟಿಂ ಮಾ ।

1 ನಿನ್ನಂ ಸೀಳ್ದು ಪರಪುವನೆನೆ, ಭಯಂಗೊಂಡಪ್ಪ (ಗ)

ಣ್ದಿರದೆ ಪಿರಿದಪ್ಪ ತಂತ್ರಂ
ಬೆರಸು ಮನೋಮುದದಿನಲ್ಲಿ ನಿಂದಾದರದಿಂ ॥ ೧೧೬

[1] ದೇವರಂ ಬಂದಿಸುತಿರ್ದನಂತಮತಿಯುಂ ಕಂಡು ಧರ್ಮವಾತ್ಸಲ್ಯದಿಂ ಬೀಡಿಂಗೊಡಗೊಂಡುಪೋಗಿಯುಚಿತಪ್ರತಿಪತ್ತಿಯುಂ ಮಾಡಿ ತದನಂತರಂ ನಿಮ್ಮ ದೇಶವಾವುದು ಊರಾವುದು ತಂದೆಯಾರೆಂದು ಬೆಸಗೊಳ್ವುದುಂ, ೧೧೭

ಕ್ಷಮೆಯೆ ಕೆಳೆಯುಂ ಶೀಲಂ ಪುತ್ರಂ ಸದಾಚರಿತಂ ಧನಂ
ವಿಮಳದಯೆ ತಾಯ್ಸತ್ಯಂ ಪಕ್ಷಂ ಗುಣಂಗಳ ಸೋದರರ್
ಕ್ರಮದೆ ತನಯಳ್ ತತ್ತ್ವಂ ಸಮ್ಯಕ್ತ್ವವೊಪ್ಪುವ ತಂದೆ ಸಂ
ಯಮಮೆ ಭವನಂ ದೇಶಂ ಮೋಕ್ಷಂ ಜಿನೋಕ್ತಿಯೆ ಪಟ್ಟಣಂ ॥ ೧೧೮

ಎಂಬೀ ನುಡಿಯಿಂದೀಕನ್ನೆ ದರ್ಶನವಿಶುದ್ಧೆಯೆಂದು ಮೆಚ್ಚಿ ಮನೆಗೊಡಗೊಂಡು ಬಂದು ತನ್ನ ಭಾರ್ಯೆ ಗುಣವತಿಗೀಬಾಲೆಯುಂ ನಿನ್ನ ಮಗಳೆಂದು ಭಾವಿಸಿಯಾಂ ಮಗುಳ್ದು ಬರ್ಪಿನಂ ಪ್ರಯತ್ನದಿಂ ನಡೆಪುವುದೆಂದೊಪ್ಪಿಸಿ ಪುಷ್ಪಕಂ ಮಗುಳ್ದು ಪೋಪುದುಂ ಗುಣವತಿ ಕನ್ನೆಯುಂ ನೋಡಿ, ೧೧೯

ಸುರವನಿತೆಯರಾನುಮಂಬರ
ಚರಿಯರಾನುಂ ಕೃತಕದಿಂದಮೀ ರೂಪಿಂ ಮೆ ।
ಯ್ಗರೆದಿರ್ದಳಲ್ಲದಿಂದಿನ
ನರವನಿತೆಯರಿನ್ನರೊಳರೆ ರೂಪಿಂ ಚೆಲ್ವಿಂ ॥ ೧೨೦

1 ದೇವರಂ ಕಾಣಲೆಂದು ಬಂದು ಜಿನಾಲಯಮಂ ತ್ರಿಃಪ್ರದಕ್ಷಿಣಮಂ ಗೆಯ್ದು ನಿಷಿದ್ಧಿಯಿಂದೊಳಗಂ ಪೊಕ್ಕು ನಾನಾವಿಧದರ್ಚನೆಯಿಂ ಪರಮೇಶ್ವರನನರ್ಚಿಸಿ ಶತ ಸಹಸ್ರಂಗಳಿಂ ಪರಸಿ ಸ್ತುತಿಯಿಸಿ ಬಳಿಕಂ,

ಚಲಿಯಿಸದಾಸನಮಂ ಸಂಚಲಿಸದೆ ಪೆಱತೊಂದುಚಿತ್ತಮಿಲ್ಲದೆ ಕರಮಂ ।
ಮ್ಮುಳಿಸದೆ ಜಿನಪದಪದ್ಮಂಗಳನರ್ತಿಯೊಳೊಲ್ದುನೋಡುತುಂ ಸುಸ್ವರದಿಂ ॥

ದೇವರಂ ಬಂದಿಸುತ್ತಿರ್ದ (ಕ).

[ಎಂದು, ಅಱಿಗಣ್ಣವರಾದಿತ್ಯನಂ ನೋೞ್ಪಂತೆ ಕನ್ನೆಯ ರೂಪ ನಗಿದು ನೋಡಿ ಮನದೊಳಂಜಿ,] ೧೨೧

ಎನಗಪ್ಪೊಡೆ ಮುನ್ನಿನ ಜ
ವ್ವನಮುಂ ಲಾವಣ್ಯಮುಂ ವಿಳಾಸಮುಮಿಲ್ಲೀ ।
ವನಿತೆಯಿರಲೋವೊ ಪೆರ್ಗಣ
ಮನಿಕ್ಕಿ ಮನೆಮಾಡುವಂದಮುಕ್ಕುಂ ಕಡೆಯೊಳ್ ॥ ೧೨೨

[ಎಂದು ತನ್ನ ಪುೞುಕುಮನದಿಂ] ದಿರಿಸಿಕೊಳಲಣ್ಮದೆ ವ್ಯಾಳಿಯೆಂಬ ಕುಂಟಣಿಗೆ ಮಾಱುವುದುಮಾಕೆ [ಸಹಸ್ರಪೊನ್ನಂ ಕೊಟ್ಟು ಮನೆಗೊಡಗೊಂಡು ಪೋಪುದುಂ, ಕುಮಾರಿ ತನ್ನೊಳ್, ೧೨೩

ಖಳಕವರ್ಗೋದಯದಿಂದಂ
ಗಳಯಿಸುವೀ ದುಃಖಮೆನ್ನನೆನಿತೊಂದಿದೊಡಂ ।
ಚಳಮಾಗೆನ್ನ ಪಿಡಿದು
ಜ್ಜ್ವಳಸುವ್ರತಕೋವೊ ಭಂಗಮಂ ಮಾಡುವೆನೇ ॥ ೧೨೪

ಎನುತ್ತುಂ ವ್ರತದೊಳ್ ದೃಢೆಯಾಗಿರ್ಪುದುಂ, ವ್ಯಾಳಿ ಪತ್ತೆಂಟು ದಿವಸಂ ಪೋದಿಂಬೞಿಯುಂ ಮೆಲ್ಲನೆ ಕನ್ನೆಗಿಂತೆಂದಳ್ :— ೧೨೫

ಮರುಳಂತೆ ಮರುಳ ತಲೆಯುಂ
ಪರಪಿರದೆ ಮನೋನುರಾಗದಿಂ ಮುಡಿ ಮುಡಿಯುಂ ।
ಪರವಶಮಾದರ ತೆಱದಿಂ
ಇರದೆ ಸರೋಜಾಕ್ಷಿ ನಲ್ಮೆಯಿಂ ನುಡಿ ಪೆಱರೊಳ್ ॥ ೧೨೬

ಬಲ್ಲಿದರ್ಗೊಡಮೊಲ್ವರಂತಿರೆ ನೋೞ್ಪುದನ್ಯರ ಚಿತ್ತಮಂ
ಮೆಲ್ಲಮೆಲ್ಲನೆ ನೋಟದಿಂ ನಗೆಯಿಂದಮಿರ್ಕುಳಗೊಳ್ವುದಂ
ತಲ್ಲಿಗಲ್ಲಿಗೆ ತಪ್ಪುದಂ ನೆಱೆ ಮಾಡಿ ಮೆಲ್ವಚನಂಗಳಿಂ
ಚಲ್ಲವಾಡುವುದಾರೊಳಾದೊಡಮೊಲ್ವಳೀ ವಧುವೆಂಬಿನಂ ॥ ೧೨೭

ತರಳಲೋಚನೆ ಮುಂಗುಱುಂಗಳೊಳಾದ ಚೆಲ್ವುಗಳಂ ಮುಖಾಂ
ಬುರುಹದೊಂದು ವಿಲಾಸಮಂ ನಳಿತೋಳ ಭಂಗಿಗಳಂ ಪದಾಂ
ಬುರುಹಪಲ್ಲವಮಂ ಕುರುಳ್ಗಳೊಳಾದದೊಂದು ಬೆಡಂಗನೊ
ಪ್ಪಿರೆ ವಿಟರ್ಗನುರಾಗಮಾಗೆ ಸರೋರುಹಾನನೆ ತೋಱು ನೀಂ ॥ ೧೭೮

ಕುರುಳ ಪಂತಿಗಳಂ ಮನಂಬಿಡೆ ತಿರ್ದು ಚಂದನಪಂಕಮಂ
ಸರಸಿಜಾನನೆ ಪೂಸು ಮೆಚ್ಚುವ ಪೊನ್ನ ಮುತ್ತಿನನೇಕಮಾ
ಭರಣಮಂ ತುಡು ದಿವ್ಯವಸ್ತ್ರಮನರ್ತಿಯಿಂದುಡು ರಾಗದಿಂ
ಸುರಗಿಯುಂ ಮುಡಿ ರೂಪನೇತಕೆ ಕುಂದಿಪೌ ಮರುಳಂದದಿಂ ॥ ೧೭೯

ರೂಹಿಲ್ಲದೊಡಂ ಕೆಲಬರ
ಸಹಾಯದಿಂ ಬಱಿದೆ ತೊನೆದು ಕೆಮ್ಮನೆ ವಿಟಸಂ ।
ದೋಹಮನೊಲಿಸುವರೆಂದೊಡೆ
ರೂಹಂ ಪಡೆದೇಕೆ ಮರುಳ ನೀಂ ವ್ಯಥೆಗಳ್ವೈ ॥ ೧೮೦

ಕರೆವುದು ಕೆಲಕೆಲಬರ ನೆಱೆ
ನೆರೆವುದು ಭಾವಿಪ್ಪೊಡೊಂದೆ ನರರೊಳ್ ಭಾಗ್ಯಂ ।
ಮರುಳ್ ಸುರಸೊಳ್ ಧರೆಯೊಳ್
ಪರರ್ಗುಂಟೆ ಮನಕ್ಕವೆಂದ ಭೋಗಮದಾರ್ಗಂ ॥ ೧೮೧

ಪೊಸದುಡುಗೆ ನಿಚ್ಚನಿಚ್ಚಂ
ಪೊಸಗಂಡರ್ ಚೆಲ್ವರಪ್ಪ ಪೊಸವಸ್ತ್ರಂ ಭಾ ।
ವಿಸುವಂದು ಮೆಯ್ಸುಖಂ ರಂ
ಜಿಸೆ ಬೆಲೆವೆಣ್ಗಕ್ಕುಮುೞಿದ ಸತಿಯರ್ಗುಂಟೇ ॥ ೧೮೨

ಅದುಕಾರಣದಿಂ ಮೀವುದುಣ್ಬುದುಡುವುದು ಮೋನದಿಂದಿರವೇಡೆಂದು ಬುದ್ಧಿವೇಳ್ದೆ ಕನ್ನೆ ತನ್ನೊಳ್ ನಕ್ಕು, ೧೮೩

ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ವಿರಿಂಚನ
ಚ್ಚರಿಯಪ್ಪಂತಿರದೊಂದುಮಾಡಿ ಸಮೆವರ್ ಕಲ್ಲಲ್ಲಿ ನಾರೆತ್ತುವರ್

ತ್ವರಿತಂ ಬಿನ್ನಣದಿಂ ಬಿಸಿಲ್ಗುಮರೆಯುಂ ತಂದೇಱುವರ್ ಮೇರುವಂ
ಭರದಿಂದಂ ಪಿಡಿದೆತ್ತುವರ್ ಮಳಲೊಳಂ ಸೀವರ್ಮಾಡುವರ್ ಜೋಡೆಯರ್ ॥
೧೩೪

ಕುಂಟಣಿಯೆಂಬಳ್ ಸಾಮಾನ್ಯೆಯಲ್ಲದಱಿಂದಿವಳನ್ನನೇನೆಂದೊಡ ಮೆನಗೆ ಮೋನದಿಂದಿರ್ಪುದೆ ಬುದ್ಧಿಯೆಂದುಸಿರದಿರೆ, ಕೆಲವುದಿನಮಾಗೆ ಯುಂ ಬಾಯುಂ ಬಡಿದೊಡಂಬಡಿಸಲಾಱದೆ, ೧೩೫

ಹರಿಣಾಕ್ಷಿ ನುಡಿಯಳಂತುಂ
ಮರುಳಾಗದೆ ಬೇಗಮೊಯ್ದು ಕುಡುವೆಂ ಭೂಪಂ ।
ಗುರುಮುದದಿನರ್ಥಲಾಭಂ
ಪಿರಿದಕ್ಕುಂ ಭೂಮಿಪಾಲನುಂ ಕರಮೊಸೆಗುಂ ॥ ೧೩೬

ಎಂದಾ ಪುರಮನಾಳ್ವ ಸಿಂಹರಥನೆಂಬರಸನಲ್ಲಿಗೊಯ್ದು ಸ್ತ್ರೀ ರತ್ನಮಂ ದೇವರ್ಗೆ ಪಾಗುಡಂತಂದೆನೆಂದೊಪ್ಪಿಸುವುದುಮರಸಂ ವ್ಯಾಳಿಗೆ ಸಾಲ್ವನಿತು ಪೊನ್ನಂ ಕೊಟ್ಟು ಕನ್ನೆಯ ರೂಪಂ ಭಾವಿಸಿ ನೋೞ್ಪುದುಂ] [1] ೧೩೭

ಶತದಳಮುಖಿಯುಂ ಮೆಱೆಗೊಂ
ಡತನು ಕರಂ ಮುಳಿದು ಪೂವಿನಂಬುಗಳಂ ಸಂ ।
ತತಮೆಚ್ದರ್ ಪೊಗದಿಸುವುದು
ಮತಿಗೆಟ್ಟೆಳ್ಳೆಕ್ಕ ಸಿಡಿದು ನೊಂದು ಮಹೀಶಂ ॥ [2] ೧೩೮

1 ಆಕೆ ಕೊಂಡು ತನ್ನ ಮಾತಂ ಕೇಳ್ದೊತ್ತೆಗೊಳಲೊಲ್ಲದೆ ಮೋನಂಗೊಂಡಿರೆ ಬೇಸತ್ತಾ ಪುರಮನಾಳ್ವ ಸಿಂಹರಥನೆಂಬರಸಂಗೆ ಕುಡುವುದುಮರಸಂ ನೋಡಿ (ಗ)

[ಮಿಸುಕದೆ ಮೆಯ್ಯಿಕ್ಕದೆ ವನಿತಾರತ್ನಮಂ ವಜ್ರಬೇಸದೊಳ್ಪೆತ್ತಿದಂತೆ ನಟ್ಟ ದಿಟ್ಟಿಯಂ ತೆಗೆಯಲಾಱದೆ ನೆಱೆ ನೋಡಿ ತನ್ನೊಳಿಂತೆಂದು ಭಾವಿಸಿದಂ :—

ಇವಳ ಪದಪಲ್ಲವಂಗಳ ನಯದಿಂ ಪೊಲ್ತಿರ್ಪಂದಶೋಕೆಗೆ ಬಿದಿ ಕಾ।
ಪವನೀಯ ಕೇಳ ಫಲಮಾಗವು ಭಯದಿಂ ಬಿಗಡುಗೊಂಡಶೋಕೆಗಳಿನ್ನುಂ ॥ ೧೩೯

ನೊಗೆಯಿಸುವೀ ಸತಿಯುಂಗುಟದುಗುರ್ಗಂಗಜಸಿತ್ತನಂಗಕಿಂಣದ ಚೆಲ್ವಂ।
ಬಗೆಯದಿನಿಸಿಂದೆ ಮುಳಿಸಿಂ ಪಗೆಯಂ ಕಂಡಂತೆ ಕಾಯ್ವನಿನ್ನುಂ ಸೂರ್ಯಂ ॥ ೧೪೦

ಈ ವನಿತೆಯ ಮೆಯ್ಗಾಲ ಜಸಾವೆಯ ಚೆಲ್ವುಗೆಳನೀಯೆ ಭಯದಿಂ ವನವಂ ।
ತಾವಂಜೆ ಪೊಕ್ಕುವೆನೆ ವಯಂ ಕಾಲಿಂ ಪೊಱಗಾವೆಯೆಂಬವಡವಿಯೊಳ್ಗಳವೇ ॥ ೧೪೧

ರಂಭೆಯ ಮಡವಿನ ಶೋಭೆಯನಂಬುಜಭವನೀಕಗೀಯೆ ಸಾವಿರಕಣ್ಣಿಂ ।
ದಂ ಬಿಡದೆ ನೋಲ್ಪನಬ್ಜಜನೆಂಬುದು ಪುಸಿಯಲ್ಲವಿನಿತುಕಣ್ಸುರಗೊಳವೇ ॥ ೧೪೨

ಈ ವನಿತೆಯ ಗುಲ್ಫಂ ಪರಿಭಾವಿಸುವಂದೆನ್ನ ಸತಿಯ ಗುಲ್ಫಕ್ಕಂ ಕೇ ।
ಳ್ತ್ಯಾವಧಿಕವೆಂದು ಮನದೊಳ್ ಗೋವಿಂದಂ ಮಱುಗಿ ಕಱಿಯನಾದಂ ನೋವಿಂ ॥

ಎನ್ನ ದೊರೆಯೊಳ್ಪನಜನೀ ಕನ್ನೆಯ ಕಿಱುದೊಡೆಗೆ ಕೊಟ್ಟನೆಂಬೀ ಸಿಗ್ಗಿಂ ।
ತನ್ನಂ ಪೆಱರ್ಗೆ ತೋಱಂ ಮುನ್ನಂ ಕಾವಂಗೆ ದೇಹವಿರ್ದುದು ಪುಸಿಯೇ ॥೧೪೪

ಕಂಡಱಿಯದಂತು ಪಱಿತಂದಂಡಲೆದಜಸಿವಳ ತೊಡೆಗೆ ಮದ್ವಲ್ಲಭೆಯಂ ।
ಕೊಂಡಿತ್ತನೆಂಬ ನೋವಿಂ ಬೆಂಡಾದುದು ಬಾಱಿ ಬಾಱಿಗಂ ಬೆಂಡೊಳವೇ ॥ ೧೪೫

ಈ ಕಮಳಮುಖಿಯ ಜಘನಕ್ಕಾ ಕಮಳಜನಿತ್ತನೆಮ್ಮ ಮಸ್ತಕದೆಸೆಯಂ ।
ದಾಕಾರಮನೆಂದಿರದತಿಭೀಕರದಿಂ ವನಮನಿಭಸಮೂಹಂ ಪೊಕ್ಕುವು ॥ ೧೪೬

ಈಕೆಯ ಪೊಕ್ಕುೞ ಚೆಲ್ವೀ ಲೋಕದೊಳತಿಸೇವ್ಯಮಿದಱ ಪೊರೆಯೊಳ್ ನಾವಿ ।
ನ್ನೇಕಿರ್ಪೆವೆಂದು ನೆಱೆ ನೀರಾಕರಮಂ ಪೊಕ್ಕುವೀವದಿಂ ಶಂಖಂಗಳ್ ॥ ೧೪೭

ಈ ನಾರಿಯ ಬಾಸೆಗೆ ಚತುರಾನನನೆಱೆದೀಯೆ ತನ್ನ ಶೋಭೆಯನಾರ್ತ ।
ಧ್ಯಾನದಿನೆಲೆ ಮರುಳಾದುವು ನೂನಂ ಮರುಳಿರುಪೆಯೆಂಬುವುಂ ಮುನ್ನೊಳವೇ॥೧೪೮

ಈ ವನಿತೆಯ ನಡುವಿಂಗಜನಾವಗವೆಱೆದೀಯೆ ತನ್ನ ಮಾಧ್ಯದ ಸೊಬಗಂ।
ತಾವಂಜೆ ಬಳ್ಳಿವೊದರಂ ನೋವಿಂದಂ ಪೊಕ್ಕುವಂದು ವಾರಣಾರಿಪುಗಳ್ ॥ ೧೪೯

ಈ ಸಸಿವದನೆಯ ತೆಳ್ವಸಿರ್ಗಾ ಸರಸಿಜಗರ್ಭನೀಯೆ ತಮ್ಮೊಳ್ಪ್ಪಮನಿಂ ।
ದೇಸತ್ತು ಪುಯ್ಯಲಿಡುವುವು ದೇಸಿಗರಂತೀಗಳುಂ ಸುರಂಭಾದಳಗಳ್ ॥[1] ೧೫೦

ಎಲೆ ಪೋಲ್ತಿನಿರ್ಕಿಕೆಯ ಮೊಲೆಯುಂದಮನೆಂದು ಜಕ್ಕವಕ್ಕಿಗೆ ಮುಳಿಸಿಂ ।
ಜಲಜಭವನೀಯೆ ಶಾಪಮನೊಲವಿಲ್ಲದಗಲ್ದು ಪೋಪುವಿರುಳೊಳ್ ವಿಧುನಂ॥ ೧೫೧

ಕರವೊಪ್ಪುವುದೀ ಕನ್ನೆಯ ಕೊರಲೆನ್ನದೆಗೇದು ನೋಡಿ ಬೆಱಗಾಗಿ ವಸುಂ ।
ಧರೆಯೊಳ್ ಮೆಯ್ಯಱಿಯದೆ ನಿಸ್ತರದಿಂ ಮತಿಗೆಟ್ಟು ಬಳೆದವಡಕೆಯ ಸಸಿಗಳ್॥೧೫೨

1 ಧೇಸಿಗರಂತಿನ್ನು ಪುರುಳಿಗಳ್ ಭಯಮಕದಿಂ (ಕ).

ಎಱೆದೀವುದುಮಜನೀಕೆಯ ನಳಿತೋಳಿಂಗೊಲ್ದು ತಮ್ಮ ಚೆಲ್ವಿಕೆಯಂ ಕಂ |
ಪೆಳಲತೆಗಳ್ಪೂವುಗಳಂ ತಳೆದಿರ್ದುಂ ತಳೆಯದಿರ್ಪುವಾ ಫಲಿವತೆಯಂ || ೧೫೩

ಜಳಜಭವನೊಲಿದು ಕನ್ನೆಯ ತಳಕಂ ತಂದೀಯೆ ವಾರಿಜಂಗಳ ಕೆಂಪಂ |
ಬಿಳಿಯುಸರಸಿರುಹವಾದುವು ಬಿಳಿಯ ಸರೋಜಾತವೊಳವೆ ಮುನ್ನಿನ ಯುಗದೊಳ್

ಜನನೆನ್ನ ಸತಿಯ ಬೆರಲೊಪ್ಪಮನೀವಧು ಕೊಂಡಳೆಂದು ಕರಿವಾಜಿಗಳಂ |
ಬಿವನೀಱದೆ ತುಳಿಸಿಂದೀಱುವನಿನ್ನುಂ ಕೋಣನಂ ಮಹಾವ್ರತದಿಂದಂ || ೧೫೫

ಒಳ್ಪಿದಳೆಂದಜನೀಕೆಯ ನೆಳ್ಪುಗುರಿಂಗೀಯೆ ತನ್ನ ಚೆಲ್ವಂ ಪಿರಿದಂ |
ತಲ್ಲಣದಿಂ ಕೇದಗೆಗಳ್ ಮುಳ್ಗಳ್ ಪೊಕ್ಕಿರ್ಪವಿನ್ನುಮತಿಭಯದಿಂದಂ || ೧೫೬

ಬಿದಿ ತಮ್ಮ ಬೆನ್ನ ಚೆಲ್ವಂ ಪದಪಿಂದೀವನಜಮುಖಿಯ ಜಂಗೆಗೀವುದುಮ |
ಗ್ಗದ ನಾಗಕನ್ನೆಯರ್ಸಂಪದಮಂ ಬಿಸುಟೋಡಿ ರಸೆಯೊಳಿರ್ದಪರಿನ್ನುಂ || ೧೫೭

ಜಳರುಹಗರ್ಭನೀಕೆಯಧರಕ್ಕೆ ಮನೋಹರಮಪ್ಪ ತಮ್ಮ ಪ
ಣ್ಗಳ ಚೆಲುವಂ ಕರುತ್ತೆಱದು ಕೊನ್ದೊಡೆ ಬೆರ್ಚಿ ವಟೋರ್ವಿಜಾಂಗಳೀ
ಗಳಮೊಡಗೂಡಿ ಕರ್ಪುವೆರಸಿರ್ಪುವು ಪೆರ್ಗಲದಿಂದಮಲ್ಲದಂ
ದುಱುಬೆಸರಕ್ಕೆ ಬೀಳಲಿನಿತೇಕಣಮಾಗವು ನೋಡೆ ಲೋಕದೊಳ್ || ೧೫೮

ಈ ಸತಿಯ ದಂತಪಂಕ್ತಿಗೆ ಭಾಸುರತರಮಪ್ಪ ತಮ್ಮ ಚೆಲ್ವುಗಳಂ ಸಂ |
ತೋಷದಿನಿತ್ತುದಱಿಂದಂ ಲೇಸಾಗಿರೆ ಮುತ್ತು ಪೂಜ್ಯಮಾದುವು ಧರೆಯೊಳ್ ||೧೫೯

ವರುಣಾನಿಯ ಬಾಯ್ದೆಱೆಗೀ ತರುಣಿಯ ಬಾಯ್ದೆಱೆಯ ಚೆಲ್ವನೆಂಬೀ ಚೆಲ್ವಂ |
ನೆರೆದೀಶನುಡುಪನಾದಂ ಪರಿಕಿಸುವಂದಮರರೊಳಗೆ ಕುಂಟರುಮೊಳರೇ || ೧೬೦

ಈಕೆಯ ಕದಪಿನ ಶೋಭೆಯನೇಕಂಜವೆ ಪೋಲ್ತಿರೆಂದು ಶಾಪಮನೀಯಲ್ |
ಕೋಕನದಸುತಂ ಪಲರುಂ ಪೋ ಕೆಮ್ಮನೆ ಚಲದಿನಱಿವರೆಲೆಗಳ ಮಾಗಂ || ೧೬೧

ವಾರಿಜೋದ್ಭವನೀಸರೋಜದಳಾಯತಾಕ್ಷಿಯ ಮೂಗಿನಾ
ಕಾರಮಂ ನೆಱೆ ಪೋಲ್ತಿರೆಂದುಱೆ ನೋಡಿ ಸಂಪಗೆಗಳ್ಗೆ ನಿ
ಷ್ಠಾರಣಂ ಮುನಿಸಿರ್ದನಪ್ಪುದಱಿಂದದೇಂ ಮನದಲ್ಕೆಱಿಂ
ಸಾರಲಣ್ಮದೆ ಭಾವಿಪಂದವನೊಂದುಪೊರ್ದುವು ತುಂಬಿಗಳ್ || ೧೬೨

ಎಮ್ಮ ಕಣ್ಗಳ ಚೆಲ್ವನೀಕೆಯ ಕಣ್ಗೆ ಪದ್ಮಜನಿತ್ತನೆಂ
ಬುಮ್ಮಳಂ ಪಿರಿದಾಗೆ ಪುಲ್ಲೆಯ ವಿಂಡುಗಳ್ ಕಡುಚಿಂತೆಯಿಂ

ಸ್ಥೈರಿಸಲಾಱದೆ, ॥ ೧೬೨

---

ಸುಮ್ಮನಾಗಿ ಜಡತ್ವದಿಂದಕಟ ನೀವೀ ಚಿತ್ತದ ಬಲ್ಪಿಗೆ
ಬೆಚ್ಚಿ ನಿಮ್ಮಯ ಕಡುವೀರವಿಲ್ಲದೆ ಪೋದೆಱಗಿದು ಧಾತ್ರಿಯೊಳ್ ॥ ೧೬೩

ಜಳಜಜನೀಕಯ ತುಱುಗಲೆಗಳನು. . . ..... . . ............... ....
ಪುಳಿಸಿ ಪೆಱಗಾಗಿ ಓರಿಡುವಮ್ಮಳಿಸಿಂದವೊಯ್ಕ್ಕ ರವಮರಕನ್ಯೆಯರಿನ್ನುಂ ॥ ೧೬೪

ವನರುಹಗರ್ಭನೀಕ್ಷಿಸಿ ಮೃಗಾಕ್ಷಿಯ ಕರ್ಣಯುಗಕ್ಕೆ ಕಱತರ್ದ ಮೆ
ಲ್ಲನೆ ಬಡಿದೀಯೆ ನಮ್ಮ ಚೆಲುವಂ ಭರದಿಂದಿರಲಣ್ಮದೊಯ್ಯನಿಂ
ತನವರತಂ ಕರಂ ಮಾಗಿದು ನೀರೊಳಗಿರ್ದಿರುಳೆಲ್ಲಮಬ್ಜಗ
ರ್ಭನನ ಮುಕೋತ್ಸವಂಬೆ ಸುಭಾವಿಸುತಿರ್ಪುವು ನೆಯ್ದಿಲಾಗಳುಂ ॥ ೧೬೫

ಈ ವನಿತೆಯ ಪುರ್ಬುಗಳಂ ನೀವಂಜದೆ ಪೋಲ್ತಿರೆಂದು ಸರಸಿಜಗರ್ಭಂ ।
ಬೇವಿನ ಮರಕ್ಕೆ ಶಾಪಮನೀವುದುಮದು ಕೈಪೆಯಾದುದ ವನಿತಳದೊಳ್ ॥ ೧೬೬

ನಯದಿಂದೀಕೆಯ ಚೆಲ್ವನಪ್ಪ ನೊಸಲಂ ಪದ್ಮೋದ್ಭವಂ ತನ್ನ ಕೂ
ರ್ಮೆಯಿನೋರಂತಿರೆ ನೋಡಿನೋಡಿದನೆಲೇ ಲೋಕಕ್ಕೆ ದಾಕ್ಷ್ಯ ಯರ್ದಮ
ಪ್ರಿಯಮಲ್ಲಾನಿದಱಿಂದಮಂ ಧರಿಯಿಸಲ್ವೇೞ್ಕೆಂದು ನೀಲೋತ್ಪಲ
ಪ್ರಿಯನಿನ್ನುಂ ನೆಱೆ ಪೆರ್ಚಿತಂ ಕುಸಿಯುತಂ ತಾನಿರ್ದನಭ್ಯಾಸದಿಂ ॥ ೧೬೭

ಸರಸಿಜಭವನೀಕಾಂತೆಯ ಕುರುಳೊಳೀಗೆ ತಮ್ಮ ಚೆಲ್ವನಿತ್ತುದಱಿಂ ಪ।
ಲೆಮ್ಮರೆವುನಳಿನಿಕರಮಿನ್ನುಂ ಸರಸಿಜಸಂಭವನನಱಿಸಿ ಕಡುಮುಳಿಸಿಂದಂ ॥ ೧೬೮

ಆ ಸರಸಿಜಭವನೀಕೆಯ ಕೇಶಕ್ಕೊಲಿದೀಯೆ ತಮ್ಮ ಚೆಲ್ವಂ ಮುನಿದೀ।
ದೇಶದೊಳಿರಲೊಲ್ಲದೆ ಮಲೆದೇಶದೊಳಿಂತಪ್ಪುವಂಬೆ ಸೀರೆಯ ತರುಗಳ್ ॥ ೧೬೯

ಮಾದದಿಂ ಬಗೆಯದೆ ನೀಪೀ ಸುವತಿಯ ಬಣ್ಣಮನೆ ಪೋಲ್ತಿರಂದ ಶಿವಮದದಿಂ ।
ಬಿದಿ ಶಾಪಮನಿತ್ತುದಱಿಂ ಬಿದಿಗಳ್ ಫಲಮಾಗಲೊಡನೆ ಸಾವುವು ಧರೆಯೊಳ್ ॥ ೧೭೦

ಅತಿಶಯಮೀಕೆಯ ಮೆಯ್ಗಂದದಿ ಕರ್ಣಯಮಂ ಪೋಲ್ತಿರೆಂದು ಮಲಯಜತಕ್ಕ।
ರ್ಧತಿಯಿಂ ಶಾಪಮನಿತ್ತೊಡೆ ಚತುರಾಸ್ಯಂ ತಯ್ದು ಬೊಟ್ಟನಿಡುವರ್ದಲರುಂ ॥ ೧೭೧

ಎಂದನಂತಮತಿಕುಮಾರಿಯ ರೂಪನಾಶ್ಚರ್ಯಂಬಟ್ಟಾಪಾದಮಸ್ತಕಂಬರೆಗಂ
ನೋಡಿ ನಾನಾವಿಧದಿಂ ಪೊಗಳ್ದು (ಬ.ಕ.)

ಧರೆಗಂ ಭಂಡಾರಕ್ಕಂ
ಪರಿಜನಕಂ ಭೃತ್ಯಸಂಕುಳಕ್ಕಂ ಮತ್ತಂ ।
ನ್ನರಸಿಯುಗ ವಿಾಪುರಕ್ಕಂ
ನಿರುತಂ ನೀನೊಡೆಯನಾಗಿ ಸುಖಂ ಬರ್ ನಯದಿಂ ॥೧೩೩

[ಲಲನೆಯರಿಕ್ಕೆ ಚಾಮರಮನಂದಣಮಂ ಪದಪಿಂದಮೇಱಿ ಭೂ
ತಳದೊಳಗುರ್ವುವರ್ಪಿ ಕರಮೊಪ್ಪಿರೆ ಪಾಡುವ ಗೇಯದೊಂದು ಮೆ
ಲ್ಲುಲಿ ಕಿವಿಯಂ ಪಳಂಚಲೆಯೆ ಮಂತ್ರಿಗಳುಂ ನೃಪರುಂ ಕುಮಾರರುಂ
ಸಲೆ ಬಸಗೆಯ್ಯೆ ನೀನೆನಗೆ ವಲ್ಲಭೆಯಾಗಿರು ರಾಜ್ಯಲಕ್ಷ್ಮಿವೋಲ್] ॥೧೩೪

ಎಂದು ನುಡಿದು ಕಯ್ಯಂ ಪಿಡಿದು ತಲೆಯ ಮೇಲಿಟ್ಟುಕೊಂಡು, ೧೩೫

ಉಸಿರದಿರವೇಡ ಕಾಮಂ
ಮಸಗಿ ಕನಲ್ದಾರ್ದು ಕುಸುಮಸಾಯಕದಿಂ ಸೈ ।
ರಿಸದೆಚ್ಚಪನೆನ್ನಂ ಸಂ
ಕಿಸದಿನಿಸಂ ನುಡಿದು ಕಿಡಿಸು ನೀನವನೇಸಂ ॥ ೧೩೬

ಎಂದನಂತಮತಿಯುಂ ತನ್ನಿದಿರ್ಗಾಸನಕ್ಕವರೆ ತೆಗೆದಪ್ಪುಕೊಂಡು ಮೊಗಮಂ ನೋಡಿ [ಕಡುಮೋಹದಿಂ], ೧೩೭

ಆಯುಂಗಿಡೆ ಕಾಮಂ ಕೈ
ಗಾಯದೆ ನಿಂದಾರ್ದು ಮುತ್ತಿ ಕೊಂದಪನೆಲೆ ನೀ ।
ನೀಯವಸರದೊಳ್ ಕಾಯುತೆ
ಬಾಯೊಳ್ ತಂಬುಲಮನಿಕ್ಕು ಮದಗಜಗಮನೇ ॥ ೧೩೮

ಎಂದನೇಕಮೆಲ್ನುಡಿಗಳಿಂದೊಡಂಬಡಿಸಲಾಱದೆ, ೧೩೯

ಎಳವಿದಿರಂದಮಂ ತನು ಸರೋರುಹದಂದಮನಾನನಂ ಮಹೋ
ಜ್ಜ್ವಳಲತೆಯಂದಮಂ ನಿವಿರ್ದ ತೋಳ್ಗಳ್ ಸುಪಾಲದ ಪಣ್ಣಿನಂದಮಂ
ಪೊಳವಧರಂ ಕರಂ ನೆಱೆಯೆ ಪೋಲ್ವುದಱಿಂದರವಿಂದವಕ್ತ್ರೆ ) ಕೋ
ಮಳ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದಾ ॥೧೪೦

ಎಂದೊದವಿದ ಕೂರ್ಮೆಯಿಂ ನೋಯೆ ನುಡಿಯಲಾಱದೆ ಸರಸದಿಂ ನುಡಿವುದುಂ ಅನಂತಮತಿ ತನ್ನೊಳಿಂತೆಂದಳ್ :— ೧೯೧

ಚಂದನಂಗಳ ಪುಳ್ಳಿಯಿಂದಡುವಂತೆ ಜೋಳದ ಕೂಳನಾ
ನಂದದಿಂ ಕಡಿದೊಟ್ಟಿ ಸುಟ್ಟು ಸುರೇಂದ್ರಭೂವಿರುಹಂಗಳಂ
ತಂದು ಸಾವೆಯನಲ್ಲಿ ಬಿತ್ತುವರಂತೆ ಮೋಕ್ಷದ ಸೌಖ್ಯಮಂ
ಕುಂದದೀವ ಮಹಾವ್ರತಂಗಳನೋವೊ ನಾಂ ಬಿಡಲಾರ್ಪೆನೇ ‖ ೧೯೨

ಪಾಲನೊಲ್ಲದೆ ನಾಯಿಗಳ್ಳಿಯ ಪಾಲನುಣ್ಬನುವೊಲ್ದು ಭೂ
ಪಾಲವರ್ಗಮನೊಲ್ಲದುದ್ಧತವೃತ್ತಿಯಿಂ ಕಡುರಾಗದಿಂ
ಕೀಳನೋಲಗಿಪಾತನುಂ ಜಿನಧರ್ಮಮಂ ಬಿಸುಟರ್ತಿಯಿಂ
ಪಾಳಪಾತನುಮಿಂದ್ರಿಯಂಗಳ ಭೋಗಮಂ ಮರುಳಲ್ಲನೇ ‖ ೧೯೩

ಸಿರಿಯ ಮಹಿಮೆಗೆ ರೂಪಿನೇಳ್ಗೆಗೆ ಮುಯ್ಯನಾಂತಱಬುದ್ಧಿಯಿಂ
ಸ್ಥಿರಮಿದೆಂದು ಮನುಷ್ಯಜನ್ಮಮನಣ್ಣ ನಂಬಿ ಜಡರ್ ಕೆಲರ್
ಪರಮಧರ್ಮಮನುತ್ತಮವ್ರತಸಂಕುಳಂಗಳನೊಲ್ಲದೋ
ಸರಿಸಿ ಭೋಂಕನೆ ಸತ್ತು ನಾರಕದುಃಖಮಂ ನೆಱೆ ತಾಳ್ದುವರ್ ‖ ೧೯೪

ಬಿಸುಟು ಧರ್ಮಮನೊಲ್ಲದಗ್ಗಳಮಪ್ಪ ಸುವ್ರತಮಂ ಮನಂ
ಕುಸಿದು ಜೈನರ ಪೇಳ್ಕೆಗಂಜಿ ವಿಶೇಷಸಚ್ಚರಿತಕ್ಕೆ ಸಂ
ಕಿಸಿ ಜಿನೋಕ್ತಿಗೆ ಕಾವಿಯಪ್ಪವರಿಂದ್ರಿಯಂಗಳನೆಯ್ದೆ ಪೆ
ರ್ಚಿಸಿ ವಿನೋದದಿನೆಯ್ದುವರ್ ನರಕಂಗಳಂ ಕಡೆಯೊಳ್ಪಲರ್ ‖ ೧೯೫

ಮುಗಿಲಂತಸ್ಥಿರಮಪ್ಪ, ಗಾಳಿಯಂತೆ ನಿರ್ನೆರಮಪ್ಪ, ಮಳಲೇರಿಯಂತೆ ಲಯಮಪ್ಪ, ಕಬ್ಬಿನದ ಕಡಲೆಯಂತೆ ಬೆಟ್ಟಿತಪ್ಪ, ಸುಣ್ಣದಂತೆ ತೀವ್ರಮಪ್ಪ, ಕತ್ತರಿವಾಜೆಯಂತೆ ಸಾರಲರಿದಪ್ಪ, ರಾಜಕನ್ಯೆಯಂತೆ ಬಯಸಲರಿದಪ್ಪ, ಮುಳ್ಳುಳ್ಳ ಬಟ್ಟೆಯಂತೆ ನಡೆಯಲರಿದಪ್ಪ ರಕ್ಕಸಿಯಂತನುಭವಿಸಲರಿದಪ್ಪ, ನಡುವಗಲಾದಿತ್ಯನಂತೆನೋಡಲರಿದಪ್ಪ, ಸುರಚಾಪದಂತೆ ಕ್ಷಣಿಕಮಪ್ಪ. ಬಯಲ್ಯೊನಲಂತೆ ಕಿಡುವೆಂತಪ್ಪ, ಪರಿವೆಂಬಿನಂತೆ ಕಡಿದಪ್ಪ, ಬಿದಿರಡವಿಯಂತೆ ಪುಗಲರಿದಪ್ಪ, ಸಮುದ್ರ

ದಂತೆ ದಾಂಟಲರಿದಪ್ಪ, ನಸುಗುನ್ನಿಯಂತೆ ಸಾರಲರಿದಪ್ಪ, ಮದದಾನೆ ಯಂತೆ ಪಿಡಿಯಲರಿದಪ್ಪ, ಕಿಚ್ಚಿನಂತೊಳಗೊಳಲರಿದಪ್ಪ, ಬಲ್ಲಿದನಾಣೆ ಯಂತೆ ಮೀಱಲರಿದಪ್ಪ, ಚಕ್ರದಂತೆ ತಪ್ಪಿಸಲರಿದಪ್ಪ, ಸೂಜಿಯಮೊನೆ ಯಂತೆ ಕೂರಿತಪ್ಪ, ಕಾಳಗದಂತೆ ಪುಗಲರಿದಪ್ಪ, ಮಸಣದಂತಿರಲರಿದಪ್ಪ, ಬಿಸಿಲ್ಗುದುರೆಯಂತೆ ಮಾಯಮಪ್ಪ, ಐಂದ್ರಜಾಳಿಕನಂತೆ ಬಹುಪ್ರಕಾರ ಮಪ್ಪ, ಪೊಲಸಿನಂತಶುಚಿಯಪ್ಪ, ವಾತದಂತೆ ನಡುಕಮಪ್ಪ, ನೀರಿನಂತೆ ಕಟ್ಟಲರಿದಪ್ಪ, ಮೋಕ್ಷದಂತಱಿಯಲರಿದಪ್ಪ, ಸಂಕ್ರಾಂತಿಯಂತೆ ನಿಟ್ಟಿಸ ಲರಿದಪ್ಪ, ಮರುಳಂತೆ ಕೊಂಡಾಡಲರಿದಪ್ಪ[1], ಪಱಿವ ತೊಱೆಯಂತೆ ಮಾ ಣಿಸಲರಿದಪ್ಪ, ರಾಜದ್ರವ್ಯದಂತೆ ಕುಂದಿಸಲರಿದಪ್ಪ, ಕೊಡದ ನೀರಂತೆ ಪೆರ್ಚಿಸಲರಿದಪ್ಪ, ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆಯೆಂದು ವ್ರತಪರಿರಕ್ಷಣೋಪಾಯಮಂ ಚಿಂತಿಸು ತ್ತಿರ್ದಳರ್ಪಣ್ಣೆಗಂ, ೧೮೬

ಕಡುಚಪಳತೆಯಂ ಬಿಟ್ಟು
ನ್ನೊಡಗೂಡೊಡಗೂಡದಂದು ದೆಸೆವಲಿಗೆಯ್ವಂ ।
ತಡೆಯದೆನೆ ಕನ್ನೆ ತಾಂ ನಡು
ನಡುಗುತ್ತುಂ ಜಿನರ ಪದಮನನುಱೆ ಸೆಱೆವಿಡಿದಳ್ ॥ ೧೮೭

ಅರಸನ ಕೋಪಂ ಪಿರಿದೋ
ಸರಿಸಿದೆ ಮಾರ್ಕೊಳ್ವದಾಗದೆನ್ನದೆ ಪಲವಂ ।
ಸ್ಮರಿಯಿಸದೆ ಕೂಡು ಕೂಡದೊ
ಡರವರಿಸುವೆನಲ್ಲನಕ್ಕ ಕೊಲ್ಲದೆ ಮಾಣಂ ॥ ೧೮೮

ಆರ ಮಗಳಂದು ಭೂಭುಜ
ನಾರಯ್ಯದೆ ನಿನ್ನನರಸಿಮಾಡಿದನೆಂಬೀ ।
ಕಾರುಣ್ಯಂ ಕೇವಳಮೇ
ಧಾರಿಣಿ ಬೆಸಗೆಯ್ಯೆ ಬಾೞ್ವುದಿದು ಬೇವಸಮೇ ॥ ೧೮೯

ಎಂದು ಕಂಡಕಂಡವರೆಲ್ಲಂ ಗಲ್ಲಂಗುರಿಗೊಳ್,[2] ನವಿಲ್ ಕಾರ್ಗಾ

---

1 ಮುಕ್ಕಳಂತೆ ಸಂತಯಿಸಲರಿದಪ್ಪ (ಗ) 2 ಗಲ್ಲಗುಗ್ಗುರಿಗೊಳ್ (ಗ)

ಲಮುಂ, ಹಂಸೆ ಸರೋವರಮುಂ, ಮದದಾನೆ ಬನಮುಂ, ಪಸುಗೂಸು ಮೊಲೆಯುಂ, ಪೆಣ್ಗೂಸು ತವರ್ಮನೆಯುಂ, ತುಂಬಿ ತಾವರೆಯುಂ, ಕಱು ಕೆಚ್ಚಲಂ, ನಲ್ಲಳ್ ನಲ್ಲನಂ, ವ್ಯವಹಾರಿ ಪಡಪಂ, ಕೊಡುಗೂಸು ಮದುವೆಯುಂ ಬೆಳಸುಳ್ಳಂ ಮೞೆಯುಂ, ನೆನೆವಂತು ಜಿನಪಾದಾಂಭೋಜಂಗಳಂ ನೆನೆಯುತ್ತುಂ ಪರಿಚ್ಛೇದಿಸಿರ್ದಳಪ್ಪುದುಂ, ಸಿಂಹರಥಮಹಾರಾಜಂ ಮುನಿದು ಅಚ್ಚು ಳಾಯಿಲರಂ ಬರವೇೞ್ದು ಇಚಪಳಯುಂ ಸಾಯೆ ಮೋದಿಯೆಂಬುದುಂ, ೧೯೦

ಕಟ್ಟಿನೆ ಕಱಿಯುವರಾಗಳ
ಗಟ್ಟಿನೆ ಪರಿತಂದು ಮೋಣದಚ್ಚುಳಕೋಲಿಂ |
ತಿಟ್ಟಿನೆ ತಿರಿಪಿ ದುರಾತ್ಮರ್
ಚಟ್ಟನೆ ಕನ್ನೆತ್ತರೊಗೆಯೆ ತೊಲಗದೆ ಬಡಿದರ್ || ೧೯೧

ಮುಳಿಸಿಂದೊಡನೊಡನೆ ಛಳಿ
ಲ್ಛಳಿಲೆನೆ ಸೂಳಾಯ್ತುರಟ್ಟೆ ಪೊಯ್ವುದುಮಾಗಳ್ |
ಕಳವಳಿಸದೆ ಬೆಂಬೀೞದೆ
ಮುಳಿಸಿಲ್ಲದೆ ಕನ್ನೆ ಮಂದರಾದ್ರಿವೊಲಿರ್ದಳ್ || ೧೯೨

ಕ್ಷೋಣೀಶನ ಬೆಸದಿಂ ಕ
ಣ್ಗಾಣದೆ ಸೂಳಾಯ್ತುರಟ್ಟೆ ಮೋದುತ್ತಿರಲುಂ |
ಮಾಣದೆ ಜಿನೇಂದ್ರಪದಮಂ
ಜಾಣೆ ಮಹೋತ್ಸಾಹದಿಂದೆ ನೆನೆಯುತ್ತಿರ್ದಳ್ || ೧೯೩

ಶರಣೆನಗೀಯವಸರದೊಳ್
ಪರಮಜಿನೇಶ್ವರಪದಾಂಬುಜಾತಮೆ ಪೆಱತಿಂ |
ಶರಣಿಲ್ಲೆಂದುಱೆ ಪಿಡಿದಳ್
ಸುರುಳಲ್ಲದೆ ಬಂದಿವಿಡಿವವೊಲ್ಜಿನಪದಮಂ || ೧೯೪

[ಅಂತು ತನ್ನೊಂದುನೋವಂ ಬಗೆಯದೆ ವ್ರತಂ ಕೆಟ್ಟಪ್ಪುದೆಂಬ ನೋವೆ ಪಿರಿದಾಗೆ ವ್ರತಮಂ ರಕ್ಷಿಪ್ಪುದಱಿಂ ಸಾವಂ ನಿಶ್ಚಯಿಸಿ ದೇಹಾ

ಭಿಲಾಷೆಯುಂ ಬಿಟ್ಟು[1] ಪಂಚನಮಸ್ಕಾರಮಂ ಜಪಿಸುತ್ತಿರ್ದಳನ್ನೆಗಂ ಆ ಪುರದ ನಗರದೇವತೆಗಳ್ಗೆ ಸಾನುಕಂಪವಾಗೆ ಬೇಗಮಱಿದು ನೆರೆದು ಬಂದನಂತಮತಿಯುಮಂ ಕಂಡು ದೃಢವ್ರತೆಯೆಂದಱಿದು ಕೈಮುಗಿದು ನಾನಾಪ್ರಕಾರದಿಂ ಪೊಗೞ್ದು ಮತ್ತಮಿಂತೆಂದರ್ :— ][2] ೧೯೫

ನಿಲ್ಲೋ ಕುಮಾರಿ ತಲ್ಲಣ
ಮಿಲ್ಲದೆ ಮುಳಿಸಿಲ್ಲದೊಂದೆಮನದಿಂದಂ ನೋ ।
ಮಿಲ್ಲದೆ ಪದಪಿಂ ತ್ರಿಭುವನ
ವಲ್ಲಭನಂ ನೆನೆವ ಮಹಿಮೆಯಿದು ಕೇವಳಮೋ ॥ ೧೯೬

ಧನಮುಳ್ಳನುಮಂ ಬಿಡದೊ
ಯ್ವನೆ ಸಾಯದೆ ಬಂದಿವಿಡಿದವಂ ಬಾೞ್ಗುಂ ।
ದನವರತಂ ಜಿನರಂ ಪಿಡಿ
ದ ನರಂಗೆರಡುಂಟೆ ಬಗೆವೊಡಿನ್ನೀ ಜಗದೊಳ್ ॥ ೧೯೭

ನರೆ ಬಂದನಿತಱೊಳ್ ನರರ್
ಪಿರಿಯರೆ ಜಿನನಾಥಸೇವೆಯುಳ್ಳ ಮನುಷ್ಯರ್ ।
ಧರೆಯೊಳ್ ಕೂಸಾದೊಡಮವ
ರೆರಡಿಲ್ಲದೆ ಪಿರಿಯರವರೆ ಧನ್ಯರ್ ಮಾನ್ಯರ್ ॥ ೧೯೮

ಪಿರಿದು ಕಿವಿ ಕೋಡಿನಂತಿರೆ
ಪಿರಿದಪ್ಪುದೆ ಬಲ್ಪಿನೆಡೆಗೆ ಜಿನಸೇವನೆಯು ।
ಳ್ಳರೆ ಕಿಱಿಯರಾದೊಡಂ ಕೇ
ಱ್ಪಿರಿಯರಿವರ್ ಕಿಱಿಯರೆಂತುಮದನೊಲ್ಲದವರ್ ॥ ೧೯೯

---

1 ವ್ರತಮುಂ ಕಿಡಿಸುವುದು ಕಜ್ಜಮಲ್ಲೆಂದು ಸಾವಂ ಪರಿಚ್ಛೇದಿಸಿ ತನ್ನ ದೇಹಾಭಿಲಾಷೆಯುಂ, ಬಿಟ್ಟು (ಕ).

2 ಆಗಳನಂತಮತಿಕನ್ನೆಗಾದುಪಸರ್ಗಮಂ ನಗರದೇವತೆಗಳಱಿದು ಚೆಚ್ಚರಂ ಬಂದು ನೋಡಿ (ಗ)

ಪಾಲಲ್ಲದೆ ಪಿರಿದಪ್ಪುದೆ
ಮೇಲಪ್ಪುದೆ ತುಪ್ಪದೆಡೆಗೆ ಧರ್ಮಮನೋಲ್ವಾ ।
ಕೀಳುಂ ಮೇಲದನೊಲ್ಲದ
ಮೇಲುಂ ಕೀಳಕ್ಕುಮಲ್ಲಿ ಸಂದೆಯಮುಂಟೇ ॥ ೨೦೦

ಬಱಿಯ ಜಿನಭಕ್ತಿಯುಲ್ಲಿದು
ತಱಿಸಲ್ವುವು ನೆಱೆಯೆ ಪೆಂಪುಮೊಪ್ಪುಂ ಮನದೊಂ ।
ದಱಿವುಂ ವ್ರತದುನ್ನತಿಯುಂ
ಪೆಱತೇನೀ ಕನ್ನೆಯಧಿಕಗುಣಯುತೆಯಕ್ಕುಂ ॥ ೨೦೧

ಎಂದು ಪೊಗೞ್ದು ಕನ್ನೆಯ ನೋವೆಲ್ಲಮನರಸನ ಪಟ್ಟದರಸಿಯರ ಪರಿಜನದ ಕುಮಾರರ ಪ್ರಧಾನರ ಮೇಲಿಕ್ಕುವುದುಂ ॥ ೨೦೨

ಎಲ್ಲರ ಮೆಯ್ಗಳೊಳಂ ತಳು
ವಿಲ್ಲದೆ ಬಾಸುಳ್ಗಳೊಗೆಯೆ ಕಡುನೋವಿಂದಂ ।
ಪಲ್ಲಂ ಗಿಡಿಗಿರಿದಳುತುಂ
ನಿಲ್ಲದೆ ನೆತ್ತರನೆ ಕಾಱಿ ಕೆಡೆದರ್ ನೆಲದೊಳ್ ॥ ೨೦೩

ನೋವಿಂಗನಿಸಿರಲಾಱದೆ
ಸಾವಾಯ್ತೆಂದಳ್ಕಿ ಬೆಚ್ಚಿ ಗೋಳಿಟ್ಟಳುತೋ ।
ವೋವೆಂದು ಧೈರ್ಯಮಿಲ್ಲದೆ
ಭೂಪಾಳಮಾಧಿಪನ ಮುಂದೆ ಪೊರಳುತ್ತಿರ್ದರ್ ॥ ೨೦೪

ಧರಣೀಶಂ ತಾಂ ನೋವಿಂ
ಗಿರಲಾಱದೆ ನೊಂದು ನಡುಗಿ ತಲ್ಲಣದಿಂದಂ ।
ಸೊರೆಯೊಳಗಿಲಿ ಪೊಕ್ಕಂತಿರೆ
ಪರಿವರಿದಲ್ಲಲ್ಲಿಗುರುಳುತಿರ್ದಂ ಭಯದಿಂ ॥ ೨೦೫

ಅಂತು ಜ್ವರಮೊದರಂತೆ ಕುಂಬಿಕ್ಕುವರಸನುಮಂ ಮಗುವಿನಂತೆ ಪೊರಳ್ವರಸಿಯರುಮಂ ನರಡಾದೆತ್ತಿನಂತೆ ನಾಲಗೆಯನುಱ್ಚುವ ಪರಿಜನ

ಮುಮಂ [ಕುಂದಗಾವಿನಂತೆ ಕಾಲಂ ಬಡಿವ ಪುರಜನಮುಮಂ] ಮೈಲಾ
ರದ ಗೊರವನಂತೆ ತಂತಮ್ಮನೆ ಬಡಿದುಕೊಳ್ವಚ್ಚಳಾಯಿಲರುಮಂ
ಕೊರಲ್ಬಿಗಿದ ಕಳ್ಳುವಿನಂತೆ ಗೋಳಿಡುವ ವಿಳಾಸಿನಿಯರುಮಂ ಕಱು ಸತ್ತೆ
ಮ್ಮೆಯಂತೊಱಲುವ ಕುಮಾರರುಮಂ, ಜನ್ಮಾಭಿಷೇಕದಂದಿನ ಮಂದ
ರದಂತಿರ್ದ ಕುಮಾರಿಯುಮಂ ನಗರದೇವತೆಗಳ್ ಕಂಡು ಕಯ್ಯಂ
ಪೊಯ್ದು ಕಳಕಳಿಸಿ ನಕ್ಕು, ೧೦೬

ಆವಾವ ನೋವು ಬಂದೊಡ
ಮಾವಾವ ಪರೀಷಹಂಗಳಡಸಿದೊಡಂ ಮ ।
ತ್ತೇವೋಯೆನ್ನದೆ ಜಿನಪದ
ಭಾವನೆಯಿಂದಿರ್ಪ ಜೈನರಿಂ ಮಿಗಿಲೊಳರೇ ॥ ೧೦೭

ಕೇಡಾದುದೆಂದು ಬೆಚ್ಚದೆ
ಬಾಡದೆ ಬೆಂಬೀೞದಂಜೆ ಚಿಂತಿಸದೆರಡಂ ।
ಮಾಡದೆ ಮನಮಂ ಶುಭದೊಳ್
ಕೂಡಿರ್ಪ ಜಿನಾಗಮಜ್ಞರಿಂ ಮಿಗಿಲಾವಂ ॥ ೧೦೮

ಏಗೆಯ್ವುದೆಂದು ನೆಗೞದೆ
ರಾಗಮನೊಡರಿಸುವ ಬುದ್ಧಿಯಿಲ್ಲದೆ ಪಾಪೋ ।
ದ್ಯೋಗಮನೆ ಬಿಸುಟು ಧರ್ಮೋ
ದ್ಯೋಗದೊಳಡರಿರ್ಪ ಜೈನರಣ್ಣ ವಿದಗ್ಧರ್ ॥ ೧೦೯

ಕಿಡುವೊಡಲಂ ಧನಮಂ ಬಿ
ಟ್ಟೊಡರಿಸಿ ಸದ್ಧರ್ಮಮಂ ಮಹಾದುಷ್ಕೃತಮಂ ।
ಕೆಡಿಸಿ ನಿರಂತರಸುಖಮಂ
ಪಡೆವೊಡೆ ಕೇಳ್ ಜೈನರಲ್ಲದಾರ್ ಸುಮತಿಯೊಳ್ ॥ ೧೧೦

ಸುರಗತಿಯುಂ ನಿರ್ವೃತಿಯುಂ
ದೊರೆಕೊಳ್ವೆಡೆ ಧರ್ಮದಿಂದೆ ದೊರೆಕೊಳ್ಗುಂದಾ ।

ದರದಿಂ ಧರ್ಮದೊಳಸಗುವ
ಪರಮಗುಣಂ ಜೈನರಲ್ಲಿ ನೆಲಸಿದುದಲ್ತೇ ॥ ೨೧೧

ಸಿರಿಯೊಂದೊದವೆಂ ಜವ್ವನ
ಭರವೆಂ ನಚ್ಚಿರ್ದು ಕೆಡುವರೇ ಕನ್ನೆಯವೊಲ್ ।
ಸುರಗತಿಯಂ ನಿರ್ವೃತಿಯಂ
ಪರಮಾರ್ಥಂ ಪಡೆಯಲಱಿವರೇ ಜಡಮತಿಗಳ್ ॥ ೨೧೨

ಎಂದು ದೇವದುಂದುಭಿಗಳಸೆಯೆ ಜಯಜಯನಿನಾದದಿಂ ಪುಷ್ಪವೃಷ್ಟಿಯಂ ಸುರಿದು ತಮ್ಮ ರೂಪಂ ತೋಱಿ ಜನವೆಲ್ಲಮಾಶ್ಚರ್ಯಂಬಡೆ ಕುಮಾರಿಗೆ ಪೊಡೆಮಟ್ಟುಪಸರ್ಗಮಂ ಪಿಂಗಿಸಿ ಪೋದರ್. ಇತ್ತಲ್ ಸಿಂಹರಥ ಮಹಾರಾಜನುಂ ಪುರಜನಂಗಳುಂ ಜಿನಭಕ್ತಿಯೊಳಾದ ಮಹಾಮಹಿಮೆಯಂ ಕಂಡು ಅನಂತಮತಿಕುಮಾರಿಯುಂ ಪೂಜಿಸಿ ಪೊಡೆಮಟ್ಟು ಸಕಲರುಂ ಶ್ರಾವಕವ್ರತಮಂ ಕೈಕೊಂಡು ಸಮ್ಯಕ್ತ್ವಸಮನ್ವಿತರಾದರ್. ಅನಂತಮತಿಯುಂ ರಾಜಶ್ರೇಷ್ಠಿಯಪ್ಪ [ಜಿನೇಂದ್ರದತ್ತನುಂ ಮನ್ನಣೆಯಿಂ ತನ್ನ ಮನೆಗೊಡಗೊಂಡು ಪೋಗಲೆಂದಿರ್ಪನ್ನೆಗಂ, ೨೧೩

ನಾನಾವಿಧದರ್ಚನೆಯಿಂ
ದಾನಾರಿಯ ಪಾದಪದ್ಮಮಂ ಪೂಜಿಸಿ ನೀ ।
ನಾನಂದಮೂರ್ತಿ ದಿವಿಜಾಂ
ಗನೆ ನೀಂ ಕೈಕೊಂಡು ರಕ್ಷಿಸೆಮ್ಮಂ ದಯೆಯಿಂ ॥ ೨೧೪

ಎಂದರಸನುಂ ಸಕಲಪರಿಜನಂಬೆರಸು ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ ಒಂದುಮಂ ಕೈಕೊಳಲೊಲ್ಲದೆ ಮನದೊಳ ನಕ್ಕು ಧರ್ಮದೊಳಂ ದೃಢರಪ್ಪುದೆಂದರಮನೆಯಿಂ ಪೊಱಮಟ್ಟು ಬರ್ಪಳಂ ಧರ್ಮವಾತ್ಸಲ್ಯದಿಂ ರಾಜಶ್ರೇಷ್ಠಿಯಪ್ಪ] ಜಿನೇಂದ್ರದತ್ತಂ ಮನ್ನಣೆಯಿಂ ತನ್ನ ಮನೆಗೊಡಗೊಂಡು ಪೋಗಿ ನೀನೆನಗೆ ತಾಯು ಸಮಾನಳಾಗಿ ಸುಖಮಿರ್ಪುದೆಂದು ಪ್ರಾರ್ಥಿಸುವುದುಂ ಅಂತೆ

ಗೆಯ್ವೆನೆಂದು ಮನೆಯೊಳಗಿರದೆ ಸೆಟ್ಟಿಯು ದೇಹಾರಮಂ ಪೊರ್ದಿ ಕಮಲ
ಶ್ರೀಗಂತಿಯರಂ ಸಾರ್ದು; ೨೧೫

ಪರತತ್ವವಿಚಾರದಿನ
ಚರಿಯಾಗೆ ಜಿನೇಂದ್ರಭಕ್ತಿಯಿಂ ಸಂದ ಮಹಾ |
ಪುರುಷರ ಕಥೆಗಳ ಕೇಳ್ವಾಯಿ
ನರವಿಂದದಳಾಕ್ಷಿ ಪಲವುಮೊಳ್ನೋಂಪಿಗಳಂ || ೨೧೬

ಅಲಸದೆ ಮನದೊಳ್ ಚಿಂತಿಸಿ
ಪಲುಂಬಿ ಪಂಬಲಿಸದಿನಿಸನಪ್ಪೊಡಮೊಂದು |
ಮ್ಮೆಳಿಸದೆ ಭೋಗಂಗಳ ಪಂ
ಬಲನೊಲದೆ ಜಿನರನೆಯ್ದೆ ಪಂಬಲಿಸುತ್ತುಂ [1] || ೨೧೭

ಇರೆ, ಜಿನೇಂದ್ರದತ್ತನುಮಾತನ ವಲ್ಲಭೆ ವಸುದೇವಿಯುಮರಸನು
ಮರಸಿಯುರುಮೆಮ್ಮ ಗುರುವೆಂದು ಕೊಂಡಾಡುತ್ತಿರೆ ಕಾಲಮಂ ಕಳೆ
ಯುತ್ತುಮಿರ್ಪುದುಮತ್ತಂ ಚಂಪಾಪುರದೊಳ್ ಪ್ರಿಯದತ್ತಸೆಟ್ಟಿಯುಮಂಗ
ಮತಿಯುಂ ಬಂಧುವರ್ಗಮುಮನಂತಮತಿಯ ಪೋಗಿಂಗೆ ವಿಸ್ಮಯಂ
ಬಟ್ಟು, ೨೧೮

ತರುಣಿಯ ರೂಪಿಂಗಾರುಂ
ಸರಿದೊರೆಯೆನಿಪನ್ನರಿಲ್ಲ ಧಾರಿಣಿಯೊಳ್ಪಂ |
ಕರುಹಾನನೆಯಂ ವಿದ್ಯಾ
ಧರನೊರ್ವಂ ಬೇಗಮುಯ್ದನಾಗಲೆವೇಳ್ಕುಂ || ೨೧೯

ಅಲ್ಲದಂದಿಂತು ನೋಡೆನೋಡೆ ಅದೃಶ್ಯಮೆಂತಾದಳೆಂದು ಪ್ರಿಯ
ದತ್ತಸೆಟ್ಟಿ ಸೈರಿಸಲಾಱದೆ, ೨೨೦

---

1 ಮೊಳ್ಪಂ ಪಲವುಂತೆಱದುಪಭೋಗಮನೊಲವಿಂ ಬಯಸದೆ ಸರೋರುಹಾ
ನನೆ ಭರದಿಂ (ಕ)

ನಿನ್ನ ರೂಪನೆ ನೋಡಿ ಬಾೞುವೆನಾಗಳುಂ ಮನದರ್ತಿಯಿಂ
ನಿನ್ನ ಮುದ್ದನೆ ನೞ್ಚಿ ಮೆಚ್ಚುವೆನಾಗಳುಂ ಪ್ರಿಯಚಿತ್ತದಿಂ
ನಿನ್ನ ಮೆಲ್ವಚನಂಗಳಂ ನೆಱೆ ಕೇಳ್ದು ಮುಯ್ಯನೆ ಮಾಡುವೆಂ
ನಿನ್ನಗಲ್ಕೆಯೊಳಿಂತು ಸೈರಿಸುವೆಂ ಸರೋಜದಳಾನನೇ ॥ ೨೨೧

ನಿನ್ನುಡುವ ವಸ್ತ್ರಚಯಮುಮಂ
ನಿನ್ನನ್ನತಿವೆತ್ತ ಪಲವು ರನ್ನದ ತೊಡವಂ ।
ನಿನ್ನಾಡುವೆಡೆಗಳಂ ಮಾ
ನೋನ್ನತೆ ನೆನೆನೆನೆದು ದೇಹಮುರಿದಪುದಿನ್ನುಂ ॥ ೨೨೨

ಒಡನುಣಲಾರಂ ಕರೆವೆಂ
ತೊಡೆಗಳನನುನಯದಿನಾರನೇಱಿಸಿಕೊಳ್ವೆಂ ।
ಕಡುಗೂರ್ಮೆಯಿನಾರಂ ಮೆ
ಲ್ನುಡಿಯಿಂ ಮುದ್ದಾಡಿಪೆಂ ಸರೋರುಹವದನೇ ॥ ೨೨೩

ಜಿನಪೂಜೆಗಳಂ ಮಾಡದೆ
ಮುನಿಗಳ್ಗಾಹಾರದಾನಮಂ ಮಾಡದೆ ಭೋಂ ।
ಕನೆ ಪೋಗಲಾಗ ಮಗಳೇ
ಮನಕತಮಂ ಮಾಡಿ ಪೆತ್ತವರ್ಮಱುಗುವಿನಂ ॥ ೨೨೪

[ಸಿರಿಗೆನ್ನೊಡನಾದೊರೆಸರಿ
ಕರಮಿಂತಪ್ಪೆನಗೆ ಪುಟ್ಟಿಯುಂ ಮಗಳ್ ಮಸುಂ ।
ಧರೆ ಪೊಗೞೆ ದಾನಮಂ ನೀಂ
ಜಿನಪೂಜೆಯುನೊಲ್ದು ಮಾಡದುಸಿರದೆ ಪೋಪಾ] ॥ ೨೨೫

ಎಂದು [ಪೊಳ್ಮರನಂ ಕಿಚ್ಚೞುರ್ವಂತೆ ದುಃಖಾಗ್ನಿ ತನ್ನಂ ಸುಡೆ]
ಪ್ರಿಯದತ್ತಸೆಟ್ಟಿ ಪಱಿಯಿಸಿ ಮೋಹ್ಬುದುಮಂಗಮತಿ, ೨೨೬

ಪರಮಜಿನೇಂದ್ರಪೂಜೆಗಳನೞ್ಕರಿಯಾಗಿರೆ ಮಾಡಿ ಬಂಧುಗ
ಳ್ನರೆದೊಡಗೂಡಿ ನೋಡೆ ಪಱೆ ಭೋರೆನೆ ಬಾರಿಸೆ ಪೊನ್ನತೋರಣಂ

ಕರಮನುರ್ದೊಪ್ಪಿ ಕಟ್ಟಿ ಗುಡಿಗಟ್ಟಿ ವಿವಾಹಮನರ್ತಿವಟ್ಟು ಪಂ
ಕರುಹದಳಾಕ್ಷಿಗಾಗಿಸುತೆ ನೋೞ್ಪನಿತಂ ನೆಱ ನೋಂತೆನಿಲ್ಲ ನಾಂ॥ ೧೨೭

ಬಸದಿಗೆ ಪೋಗಿ ದಿವ್ಯಮುನಿಪುಂಗವರಂ ಮನದರ್ತಿಯಿಂದೆ ಬಂ
ದಿಸಿ ಜಿನನಾಥನಂ ಸ್ತುತಿಶತಂಗಳಿನಾದರದಿಂದೆ ಕೂರ್ತು ಬ
ಣ್ಣಿಸಿ ಮನೆಗಾಗಳಂತೆ ಪರಿತಂದವರೆಂಬುದನರ್ತಿವಟ್ಟು ರಾ
ಗಿಸಿ ಕೊರಲಪ್ಪಿ ಪೇೞ್ವ ವಿಮಳಾಂಗಿಯ ನಾನಿರದೆಲ್ಲಿ ಕಾಣ್ಬೆನೋ ॥ ೧೨೮

[ಎಂದು ಪೞಯಿಸಿ]

ಲತೆಯಂ ತತ್ತರಳಾಕ್ಷಿಯಂಗಮೆನುತುಂ ನೀರೇಜಪತ್ರಂಗಳಂ
ಸತತಂ ಕನ್ನೆಯ ನೇತ್ರಯುಗ್ಮಮೆನುತುಂ ಮತ್ತಾಳಿಸಂದೋಹಮಂ
ಮತಿಗೆಟ್ಟಾಕೆಯ ಕುಂತಳಂಗಳೆನುತುಂ ನಾನಾ ಪ್ರಕಾರಂಗಳಿಂ
ಸುತೆಯೆಂದಾವನಮೆಲ್ಲಮಂ ಮನದ ನೋವಿಂ ನಾಡೆಯುಂ[1] ನೋಡಿದಳ್ ॥
೧೨೯

ಅಂತು ದುಃಖಾಗ್ನಿಯಿಂ ಬೆಂದು ಪೋಗಿ ಪೞಯಿಸುವಂಗವತಿಯುಮಂ ಪ್ರಿಯದತ್ತಸೆಟ್ಟಿಯುಮಂ[2] ವರದತ್ತಭಟ್ಟಾರಕರ್ ಬಂದು ಸಂತೈಸಿ[3] ಧರ್ಮಮನಿಂತೆಂದು ಪೇೞ್ದರ್:— ೧೩೦

ಸುರಗಜೇಂದ್ರಮೆ ವಾರಣಂ ಪಿಡಿವಾಯುಧಂ ವರವಜ್ರಮು
ಚ್ಚರಿಸುರಾಳಿಯೆ ಸಂದ ಜೀವಿತದಾಳ್ಗಳರ್ಕೆಯ ಕೋಟೆಯೊ
ಪ್ಪಿರೆ ನೆಗಪ್ತೆಯ ಸ್ವರ್ಗಮೀದೊರೆಯೂರ್ಧ್ವಲೋಕದ ಚಕ್ರಿಗಂ
ಮರಣಮಾಗದೆ ಮಾಣ್ದೆಂದೊಡೆ ಗೆಲ್ವನಾವನೊ ಮೃತ್ಯುವಂ ॥ ೧೩೧

ನರರುಂ ಖೇಚರರುಂ ಸುರಪ್ರತತಿಯುಂ ಪೂಣ್ದಾಳ್ವ ಸಂಗೆಯ್ವರು
ರ್ವರೆ ಷಟ್ಖಂಡವಿಭೂಳಿಗಂ ಕುದುರೆಗಂ ಸ್ತ್ರೀಸಂಕುಳಕ್ಕಂ ನಿಜಾ
ದರದಿಂ ಮೇರೆಗಳಿಲ್ಲೆನಿಪ್ಪಧಿಕಲಕ್ಷ್ಮೀವಲ್ಲಭಂ ಚಕ್ರಿಗಂ
ಮರಣಂ ಬಾರದೆ ಮಾಣ್ದುದೆಂದೊಡುಚಿವರ್ಗೆಲ್ವನ್ನರಾರ್ ಮೃತ್ಯುವಂ ॥

1 ಮನದೊಳಗಳ್ಕಡೆಯುಂ (ಗ)
2 ನೋವಿಂ ಬಿಕ್ಕನೆ ಬಿರಿದ ಬಂಧುಗಳುಮಂ ವರದತ್ತ (ಗ)
3 ಸಂಬೋಧನಾರ್ಥಂ ಧರ್ಮ (ಕ)

ಎಂಬುದುಮವರ ವಚನವೆಂಬಮೃತದಿಂ ತಮ್ಮ ದುಃಖಾಗ್ನಿ [ನಂದೆ ಕೆಲವಾನುಂ ದಿವಸಂ ಪೋಗೆ ಪ್ರಿಯದತ್ತಸೆಟ್ಟಿ ಮಗಳಾಡುವೆಡೆಗಳಂ ನೋಡಿ ಕಡುನೋವಿಂ ಸೈರಿಸದುಮ್ಮಳಿಸಿ ನಂಟರ್ಗರಿಪಲೊಲ್ಲದಾಪು ರದಿಂ ಪೊಱಮಟ್ಟು ಕತಿಪಯದಿನಂಗಳಿಂದಯೋಧ್ಯೆಗೆ ಬಂದು ಜಿನೇಂದ್ರ ದತ್ತಸೆಟ್ಟಿಯ ಮನೆಯುಂ ಪೊಕ್ಕು ತನ್ನ ತಂಗೆಯಪ್ಪ ವಸುದೇವಿಗವ ನಂತಮತಿಯ ಪ್ರಪಂಚಮಂ ಪೇೞ್ವುದುಂ, ೧೩೩

ತೊಟ್ಟನೆ ಕೊಳೆ ಕೇಳ್ದು ಮನಂ
ಗೆಟ್ಟು ಮಹಾದುಃಖದಿಂದಮಿರಲಾಱದೆ ಬಾ |
ಯ್ವಿಟ್ಟೞಲ್ದು ನೊಂದು ಸೈರಣೆ
ಗೆಟ್ಟತ್ತಳ್ಳನೆದು ನೆನೆದು ಕನ್ನೆಯ ಗುಣಮಂ ‖ ೧೩೪

ಅಂತು ದುಃಖಾನಳಂ ಸುಡೆ ಕಡುನೋವಿಂದೞುತ್ತುಮಿರ್ಪ ತಂಗೆ ಯುಂ ಧರ್ಮಶ್ರವಣದಿಂದೆಂತಾನುಂ ಮಾಣಿಸಿ ] [1] ಮಱುದಿವಸಂ ದೇಹಾ ರಕ್ಕೆ ದೇವರಂ ಕಾಣಲೆಂದು ಬಂದು ದೇಹಾರದ ಮುಂದಣಾ ‖ ೧೩೫

ಸುರಮಹೀರುಹದೋಳಿಯಿಂ ಸಹಕಾರಭೂಜನಿಕಾಯದಿಂ
ಸರಸಿಜಾಕರದಿಂ ಲತಾಭವನಂಗಳಿಂ ಧ್ವಜದಿಂ ಫಲೋ
ತ್ಕರದಿನಿಂದ್ರವಿಮಾನದಿಂ ಹರಿಚಂದನಂಗಳ ಜೊಂಪದಿಂ
ಸುರನಗಂಗಳ [2] ಪಂಕ್ತಿಯಿಂದೆಸೆದಿರ್ದ ಪೂವಿನ ಮಾಲೆಯಿಂ ‖ ೧೩೬

ರಮಣೀಯಮಪ್ಪ ರಂಗವಲಿಯುಂ ಕಂಡೀ ಹಸ್ತಕೌಶಲಮನಂತ ಮತಿಗಕ್ಕುಮುೞಿದರ್ಗಾಗದ ಕಾರಣಮಿಲ್ಲಿರ್ಪಾಕೆಯೆ ನಿಕ್ಕುವಮನಂತ ಮತಿಯಕ್ಕುಮೆಂದು ನೋಡಲ್ಕೆ[3] ೧೩೭

---

1 ದುಃಖಾಗ್ನಿ ಮಗ್ಗೆ ಕೆಲವಾನುಂ ದಿವಸಂ (ಗ) 2 ಘನಂಗಳ ಪಙ್ತಿ (ಕ)

3 ರಂಗವಲ್ಲಿಯುಂ ಕಂಡು ವಿಸ್ಮಯಂ ಬಟ್ಟವೆಲ್ಲಮಕ್ಕನ ಕೈದಾಗೆಂದು ಮನದೊಳ್ ಬಗೆಯುತ್ತುಮೊಳಗಣ್ಗೆ ಪೋಗಿ ದೇವರಂ ಕಂಡು ಬಂದಿಸಿ ಮನೆಗೆ ವಂದು ರಸಾಯ ನದಮೃತದ ದೊರೆಯೆಂಬಾಹಾರಮನುಂಡು ಕೈಗರ್ಚಿಕೊಂಡು ಪಾಸಿನ ಮೇಲೆ ಕುಳ್ಳಿರ್ದು ಕಣ್ಣನೀರ್ಗಳಂಗನೆಗೆ ಸುರಿದು ಭೋರೆಂದು (ಕ). ಈ ಹಸ್ತಕೌಶಲ್ಯಂ ತಪ್ಪದನಂತಮತಿಯದಾಗಲೆ ವೇಳ್ಕುಮೆಂದು ನೋಡಿ ನೋಡಿ (ಗ)

ಘೋರೆಂದು ಸುಯ್ದು ಮನದೊಳ್
ದೂರಿಸಿ ಸಂಬಳಿಸಿ ಮಱುಗಿ ಚಿಂತಿಸಿ ನೆನೆದಂ ।
ಭೋರುಹಮುಖಿಯಂ ಮನ್ಮಥ
ವಾರಣಗಮನೆಯನನಂತಮತಿಯಂ ಸುತೆಯಂ ॥ ೨೩೮

[ಅಱುತಿರ್ಪಣ್ಣನಂ ವಸುದೇವಿ ಕಂಡು ನೀವಿದೇಕಱ್ತಪಿರೆಂದು ಬೆಸಗೊಳ್ವುದುಂ, ಪ್ರಿಯದತ್ತಸೆಟ್ಟಿಯೆಂದನಿಂದಾನುಂಡೂಟಮುಂ ನಿಮ್ಮ ದೇಹಾರದ ಮುಂದಣ ರಂಗವಲಿಯುಮನಂತಮತಿಯ ಹಸ್ತಕುಶಲತೆಯುಂ ಪೋಲ್ತುವಪ್ಪುದಱಿಂ ಮಗಳಂ ನೆನೆದಱಲಾಯ್ತೆಂಬುದುಂ ದೇಹಾರದೊಳಿರ್ದ ಕುಮಾರಿಯನೊಡಗೊಂಡು ಬಂದು ತೋ ಪುದುಂ,] [1] ೨೩೯

ಸುತೆಯಪ್ಪುದನಱಿದು ಮಹೋ
ನ್ನತಿಯಿಂ ದುಃಖಾಗ್ನಿ ಪೋಗೆ ಮನದೊಳ್ ಲೋಕ ।
ತ್ರಿತಯುಮನಾಳ್ದಂತೆ ವಣಿ
ಕ್ಪತಿ ಬರೆತಗೆದಪ್ಪಿಕೊಂಡು ಮೋಹೋದಯದಿಂ ॥ ೨೪೦

[ತೊಡೆಯನೇಱಿಸಿಕೊಂಡು 'ಕದಪಂ ಕರ್ಚಿ ಬಡವಂಗೆ ಕಡಾರಂ ಕೈಸಾರ್ದಂತಾನುಂ, ಶಿಱಿದುಂಬವಂಗೆ ರಾಜ್ಯಂ ದೊರೆಕೊಂಡಂತಾನುಂ ಮಗಳಂ ನೋಡಿ ಪಿರಿದಪ್ಪ ಸಂತೋಷದಿಂ, ೨೪೧

ವನಜಾನನೆ ನಿನ್ನಂ ಕಂ
ಡೆನಗೀಗಳ್ಕನದ ನೋವು ಪೋದುದು ಮುನ್ನಂ ।
ಮನಕತದಿಂ ಕಣ್ಗೆಟ್ಟವೊ
ಲನವರತಂ ಬೆಂದು ನೊಂದು ಮಱುಗುತ್ತಿರ್ದೆಂ ॥ ೨೪೨

ಮಗಳೇ ನೀನಿಲ್ಲದೆ ಮನ
ಬಗೆವಂದೆನಗಟ್ಟಿ ತಿಂಬ ಪೆಱುವಾದುದು ನೋ ।

---

1 ಒಳಗೆ ಪೊಕ್ಕು ಸುಚಿತ್ತದಿಂ ನೋಡುತ್ತುಮಿರ್ದು (ಗ)

ವಗಣಿತಮಪ್ರದಱಿಂದ
ಲ್ಲಿಗೆ ದುಃಖಕ್ಕಂಜಿ ಪಳ್ಳ ಬಂದಾನಿರ್ದೆಂ ॥ ೧೪೩

ಎಂದು ತನ್ನ ದುಃಖಮನಱಿಯೆಯುಂ ತೆಱೆಯೆಯುಂ ಪೇೞ್ವುದುಮನಂತಮತಿಯುಂ, ೧೪೪

ಮಾಣದೆ ಕೆಡುನೋವಿಂ ಕ
ಣ್ಗಾಣದೆ ಬಾಷ್ಪಾಂಬು ನೆಗೆಯೆ ಸೈಗಣೆಗೆಟ್ಟ ।
ಕ್ಷೂಣಗುಣೆ ಕುಟಿಲಕುಂತಳೆ
ಜಾಣೆ ಮನೋಭವಮದೇಭಗಾಮಿನಿ ಬೇಗಂ ॥ ೧೪೫

ತನ್ನಂ ಕುಂಡಲಮಂಡಿತಖೇಚರನೊಯ್ದುದು ಮೊದಲಾಗೆ ಜಿನೇಂದ್ರದತ್ತನ ದೇಹಾರಮಂ ಪೊರ್ದಿದುದುಮಂ ನಡುವೆಡೆಯೊಳಾದ ತತ್ಪ್ರಪಂಚಮೆಲ್ಲಮುಮಂ ಪೇೞೆ ಸವಿಸ್ತರಂ ಕೇಳ್ದು ಪ್ರಿಯದತ್ತಸೆಟ್ಟಿ ಪೆಱಗಾಗಿ, ೧೪೬

ಪಿರಿದಪ್ಪಪತ್ತೆಲ್ಲಮ
ನರವಿಂದದಳಾಕ್ಷಿ ಬಿದಿರ ಗಂಟಂ ಕಡಿವಂ ।
ತಿರೆ ಕಡಿದು ಬರ್ದುಕಿ ಬಂದೈ
ದೊರೆ ನಿನಗಾಪುಣ್ಯದೇೞ್ಗೆಯೊಳ್ಪೇರ್ಮೆಗಳೇ ॥ ೧೪೭

ಎಂದು ಮಗಳ ದುಃಖಮನಾಱೆನುಡಿದು ಪಿರಿದುಮುತ್ಸಾಹದಿಂ ಜಿನಾಭಿಷೇಕಪೂಜೆಯುಂ ಮಾಡಿ ಪತ್ತೆಂಟುದಿವಸಂ ಪೋದಿಂಬೞಿಕ್ಕಂ ಬಂದುದಿವಸಂ ಮಗಳಂ ನೋಡಿ, ೧೪೮

ಇನ್ನಿರಲಾಗದು ಜವ್ವನ
ಮುನ್ನೆಱೆದುದು ಮೃಗನಿಭಾಕ್ಷಿಗಂಬುಜಮುಖಿಗಂ ।
ದುನ್ನತಚಿತ್ತಂ ಮದುವೆಯ
ನಿನ್ನೀಕೆಗೆ ಮಾಡವೇೞ್ಕುಮೆಂದುತ್ಸವದಿಂ ॥ ೧೪೯

ತನ್ನ ಸೋದರಳಿಯಂ ಶ್ರುತಸಾಗರಂಗೆ ಕುಡಲ್ವೇಡಿ ಬಂಧುಗಳೆಲ್ಲರ ಬೞಿಗಟ್ಟಿ ವಿವಾಹಮಂಟಪಮಂ ತಳಿರ ಕಾವಣಮುಮಂ ಮಾಡೆ, ೧೫೦

ಪೊಳೆವ ದುಕೂಲದ ಗುಡಿಯುಂ
ಮೞೆಯುಜದೆಳೆವಳಿರ ತೋರಣಂಗಳ್ ಮುಕ್ತಾ ।
ವಳಿಯುಂ ಪೊಸರಂಗವಲಿಯು
ವಿಳಸಿತವಾಗಿರ್ದವೆತ್ತಲುಂ ತದ್ಗೃಹದೊಳ್ ॥ ೨೫೧

ಮತ್ತಂ ಜಿನಾಭಿಷೇಕಕ್ಕೆ ಬಂದಿಕ್ಷುರಸ ಕ್ಷೀರ ದಧಿ ಘೃತಕುಂಭಕಾದಿ ಘಟಂಗಳುಮಂ ಬಳಗಜವಳಿಗೆಂದು ಬಂದ ಚೀನದುಕೂಲದ ಹಾರಾವಳಿಯು ಪಲವುದಿಂಪುಗಳುಮಂ ಯಾಚಕಕೋಟಿಗೆ ಬೇಡಿದುದ ನೀಯುಲೆಂದು ಪೂಜಿಸಿದ ಪೊನ್ನರಾಶಿಯುಮನನಂತಮತಿ ನೋಡಿ ತಂದೆಯನಿದೇನೆಂದು ಬೆಸಗೊಳ್ವುದುಮಿಂತೆಂದಂ :— ೨೫೨

ಪಿರಿದುತ್ಸವದಿಂದುಱೆ ಜೇಂ
ಕರಿಸಿ ಬುಧರ್ನಚಿ ಮಚಿ ಬಣಿ ಸ್ ಕರವಾ ।
ದರದಿಂ ನಂಟರ್ಜೀಯೆನೆ
ಸರಸಿಜಮುಖಿ ನಿನ್ನ ಮದುವೆಯಂ ಮಾಡಿಪೆಂ ॥ ೨೫೩

ಎಂಬುದುಮನಂತಮತಿ ಮುಗುಳ್ನಗೆ ನಕ್ಕು ತಂದೆಗಿಂತೆಂದಳ್ :—] [1] ೨೫೪

ವಿಮಳಜಿನೇಂದ್ರಸಾಕ್ಷಿಯೊಳು ಸೀಮನಗಂ ಕಿಱಿಯಂದು ಮಿಕ್ಕ ಸಂ
ಯುಮಜಲರಾಶಿಯಪ್ಪ ಮದದತ್ತಮುನೀಶ್ವರರಿಂದೆ ಬ್ರಹ್ಮಚ
ರ್ಯಮನನುರಾಗದಿಂ ಕೊಡಿಸಿದಿರ್ಮಱೆಯುಲ್ಮಿ ಮಗಾಗದಾನುಮು
ಶ್ರಮದೊಳ ತಾಳ್ದಿದೆಂ ಮುದದಿನೀಯೆಡೆಯೊಳ್ಕಿಡಿಸಲ್ಕ ತಕ್ಕುದೇ ॥
[ಎಂಬುದುಮಾಗಳ್ ವೈಶ್ಯಕು
ಲಾಂಬರರವಿ ಮಗಳ ಮಾತಿನಂದಕ್ಕೆ ಕರಂ ।

---

1 ಸಂತೋಷಂಬಟ್ಟರ್ಪುರದಂ, ಕುವರಾರಿ ವಿದ್ಯಾಧರನ ಮೊಯಿದ್ದುದು ಮೊದಲಾಗಿ ಜಿನೇಂದ್ರದತ್ತನು ಕಂಡಲ್ಲಿ ನರಮಾದ ಪ್ರಪಂಚವುಲ್ಲವು ಪೇಳ್ವುದ ಮೊಲ್ಲರುವುಱಿದು ಪರಮಸ್ನೇಹಿತರಾಗಿ ಪತ್ತೆಂಟುದಿವಸಂ ಪೋದಿಂಬಳಿಯುಮನಂತಮತಿಗಂ ವಸುದೇವಿಯು ಮಗನಪ್ಪ ಶ್ರುತಸಾಗರಂಗಂ ಮದುವೆಯಂ ಮಾಡಲೇದಿರ್ಪುದುಮನಂತಮತಿ ಕಂಡಿಂತೆಂದಳ್ (ಗ)

ತಾಂ ಬೆಱಗಾಗಿ ಮಹಾನೋ
ದದಿಂ ಬೈದುಂ ಸುಯ್ದು ವಿಧಿಯು ಮನದಱಲಿಂದಂ ||[1] ೨೫೬

ನೋಡ ಮರುಳ್ಮಗಳ ದಿಟಂ
ಮಾಡುವುದೆಗ್ಗಲ್ತೆ ನಿನ್ನನಕ್ಕರೊಳಾಂ ಮು |
ಪ್ಪಾಡಿಸೆ ಮುನಿಸನ್ನಿಧಿಯೊ
ಳ್ಕಡಿದುದಂ ಛಾಂದಸಿಕ್ಕೆಯೊಂದೊದವಿಂದಂ || ೨೫೭

ಎಂಬುದುಮನಂತಮತಿ ತಂದೆಗಿಂತೆಂದಳ್ :— ೨೫೮

ತಿರಿದುಂಬಂಗೆ ನಿಧಾನಂ
ದೊರೆಕೊಳೆ ಕಡೆಗಣಿಸಿ ಪೋದೊಡಂ ಸಂಸೃತಿಯೊಳ್ |
ತಿರಿವ ನರಂಗಂ ಧರ್ಮಂ
ದೊರೆಕೊಳೆ ಕಡೆಗಣಿಸಿ ಬಿಟ್ಟೊಡಂ ಸುಖಮುಂಟೇ || ೨೫೯

ಕುರುಡಂಗೆ ಪುಣ್ಯದಿಂ ಕ
ಣ್ದೊರೆಕೊಳ್ವವೊಲೀಮಹೋಗ್ರಸಂಸಾರದೊಳಂ |
ವರಧರ್ಮಮದೆಂತಾನುಂ
ದೊರೆಕೊಂಡೊಡೆ ನೆಗೞಲೊಲ್ಲದಾತನೆ ಗಾಂಪಂ || ೨೬೦

ಸನ್ನುತಜಿನಧರ್ಮಂ ನೆಱೆ
ತನ್ನಿಂದಂ ತಾನೆ ಬಂದೊಡೊಲ್ಲದೆ ಬಿಡುವಾ |
ತಂ ನೆಱೆ ಪೋಲ್ಕುಂ ಜಗದೊಳ್
ಪೊನ್ನಂಬಂ ನೀರೊಳಿಕ್ಕಿ ಕಿಡಿಸುವ ಮರುಳಂ || ೨೬೧

ಸದಮಳಧರ್ಮಂ ದೊರೆಕೊಳ
ಲದನೊಲ್ಲದೆ ಮತ್ತೆ ಬಿಸುಡುವ ಜಡಮತಿ ಪೋಲ್ಕುಂ |
ಮುದದಿಂದೋಲಗದೊಳ್ಪಡೆ
ದುವನಿಂಬಿನೊಳಿರಿಸುವಲ್ಲಿ ಕಿಡಿಸುವ ಮರುಳಂ || ೨೬೨

---

1 ಎಂಬುದುಂ ಪ್ರಿಯದತ್ತಸೆಟ್ಟಿ ಬೆಱಗಾಗಿ ವಿಧಿಯುಂ ಬೈದು (ಗ)

ಅದು ಕಾರಣದಿಂ ಧರ್ಮದಿನನಂತಸುಖಮಕ್ಕುಮೆಂಬುದಂ ಅಧರ್ಮದಿನನಂತದುಃಖಮಕ್ಕುಮೆಂಬುದಂ ಸಂಸಾರಸುಖಮಲ್ಪಮೆಂಬುದಂ ನೀಮಿಂಬಾಗಿ ಬಲ್ಲಿರಿಂತು ಬಳಲ್ದಮೆನ್ನ ಮೇಲಣ ಮೋಹದಿಂದೀಮಾತಂ ನುಡಿವಿರಾದೊಡಂ ಧರ್ಮಾಭಿಪ್ರಾಯಮನಱಿವ ನೀವೆಮಗಿದಂ ನುಡಿಯಲಾಗದೆಂಬುವಂ ಮಗಳೊಳಾದ ಕಡುಮೋಹದಿಂ ಪ್ರಿಯದತ್ತ ಸೆಟ್ಟಿ ಇಂತೆಂದಂ :— ೧೬೩

ಮದಗಜಗಾಮಿನಿ ಮಾಣಿ
ಕ್ಯದ ಮುತ್ತಿನ ಪೊನ್ನ ಪದ್ಮರಾಗದ ಮೃತೂ ।
ಯರ್ವದ ಜಿನಚೈತ್ಯಾಲಯಮಂ
ಮುದದಿಂದಂ ಪಲವನರ್ತಿಯಿಂ ಮಾಡಿಸು ನೀಂ ॥ ೧೬೪

ಪೊಂಗಳಸದಿಂದೆ ಪಲವು ಜ
ಪಂಗಿನ ಬಾವಾರದಿಂದಮೊಪ್ಪುವ ಜಿನಗೇ ।
ಹಂಗಳನನೇಕಮಂ ಪಲ
ವಂ ಗಱಿಪದೆ ಮಾಡಿಸರ್ತಿಯಿಂ ವನಜಮುಖೀ ॥ ೧೬೫

ಪಾಲಿಂದಂ ಮೊಸರಿಂದಂ
ಮೇಲೆನಿಸುವ ತುಪ್ಪದಿಂದಮಿಡುಗೆಗಳಿಂದಂ ।
ಲೀಲೆಯೊಳ್ ಮುನಿಕದಂಬಮ
ನೋಲಾಡಿಸು ಮಗಳೆ ನಿನ್ನ ಕಣ್ತಣಿವಿನೆಗಂ ॥ ೧೬೬

ಮದುವೆಯಾಗಲೆ ವೇಟ್ಕುಮೆಂದು [ಮೇಲುದಂ ಪಾಸಿ] ಬೇಡುತ್ತಿದುಂ [ಅನಂತಮತಿ ನಕ್ಕು] ನೀಂ ಮುಂ ಪೇೞ್ದನಿತುಂ ಪುಣ್ಯಕ್ಕೆ ಕಾರಣಮಕ್ಕುಮಾದೊಡಂ ಎನ್ನ ಕೈಕೊಂಡ ವ್ರತಮನೇಗೆಯ್ದುಂ ಕಿಡಿಸುವೆನಲ್ಲೆಂದು ಮಱುಮಾತಿಂಗೆಡೆಯಿಲ್ಲದಂತು ನುಡಿವುದುಂ, ಪ್ರಿಯದತ್ತಸೆಟ್ಟಿ ಮಗಳ ಪರಿಚ್ಛೇದಮನಱಿದುಸಿರದಿರ್ದನನ್ನೆಗಂ ಮಾವನಪ್ಪ ಜಿನೇಂದ್ರದತ್ತಸೆಟ್ಟಿಯುಮತ್ತೆಯಪ್ಪ ಸುದತ್ತೆಯುಂ ಬಂದಿಂತೆಂದರ್ :-- ೧೬೭

ಬೇಡ ಕಡುಮೂರ್ಖತನಮಂ
ಮಾಡದೆ ಪಿಡಿಯುಱು ಪಿಡಿದು ಮುನ್ನಿನ ಮಾತಂ ।
ನೋಡದೆ ಫಲಮಂ ಕೈಕೊಂ
ಡಾಡದೆ ನೀಂ ಮಗಳ ಮದುವೆಯಾಗಲೆ ವೇೞ್ಕುಂ ॥ ೧೬೮

ಎಂಬುದುಮನಂತಮತಿ [ಮಾವಗಮತ್ತಗಂ] ಇಂತೆಂದಳ್ :—
೧೬೯

ಸಾರಮಸಾರಮಿದೆಂದು ವಿ
ಚಾರಿಸಿ ಕೈಕೊಂಡು ಕಿಡಿಸಲಾರ್ಪುದೆ ಚಿಃ ನಿ ।
ಷ್ಕಾರಣಮುದಱಿಂದನ್ಯರ್
ಬಾರಿಸೆ ಮಾಣ್ಬೊಂದು ಮಾವ ಕಂಚಿನ ದನಿಯೇ ॥ ೧೭೦

ಪಿಡಿದೀ ಸುವ್ರತಮಂ ಮು
ತ್ತೆಡೆಯೊಳ್ ಕಿಡಿಸುವನೆ ಕಿಡಿಸಲಱಿಯೆಂ ಬಗೆವಂ ।
ದುಡುವಿನ ನಾಲಗೆಯಂತಿರೆ
ದೃಢವ್ರತಗೊಂದಲ್ಲದೆಂಡುನಾಲಗೆಯೊಳವೇ[1] ॥ ೧೭೧

ಎಂಬುದುಮವರ್ ಮಾತುಗುಂದದಿರೆ ಕುಮಾರಿ ಪ್ರಿಯದತ್ತಸೆಟ್ಟಿ ಮೊದಲಾಗೆ ಬಂಧುಗಳೆಲ್ಲರುಮನೊಡಂಬಡಿಸಿ [ಜಿನಪೂಜೆಯಂಮಾಡಿ] ಮರದತ್ತಭಟ್ಟಾರಕರೆ ಗುರುಗಳಾಗೆ ಕಮಳಶ್ರೀಗಂತಿಯರಲ್ಲಿ ಜಿನ ದೀಕ್ಷೆಯಂ ಕೈಕೊಂಡು, ೧೭೨

ಮನದೊಳರತ್ರಿಯು ಸುಖಮಂ
ನೆನೆಯದೆ ಜಿನಚರಣಕಮಲಮಂ ನಂಬುಗೆಯಿಂ ।
ದನವರತಂ ಮೆಱೆಯದೆ ಭೋಗಂ
ಕನೆ ಸೆಡೆಯದೆ ತಪದೊಳಾದ ನೋವಿಂಗಿನಿಸಂ ॥ ೧೭೩

ಪೆಱವೆಱಸುಖಮಂ ಮನದೊಳ್
ಮೆಱೆದುಂ ಚಿಂತಿಸದೆ ಶಂಕೆಯಿಂ ಮಿಥ್ಯಾತ್ವ ।

1 ದೃಢವ್ರತಂಗತ್ತೆಯುರಡು (ಗ)

ಕ್ಕಱಗದೆ ಮುನಿಸೊಸಗೆಗಳಂ
ತೊಱೆದು ಕಷಾಯಂಗಳಂ ಮನಂಬಿಡೆ ಬಿಡುತುಂ ॥ ೨೩೪

ಪರಮಾಗಮಮಂ ಕರ್ಮದ
ಪರಿಣತಿಯಂ [1] ಮುನ್ನಮೊಳ್ಪನಿಂ ನೆಗೞ್ದ ಮಹಾ ।
ಪುರುಷರ ಕಥೆಗಳುಮಂ ತಾಂ
ಸ್ಮರಿಸುತ್ತುಂ ಪೊೞ್ತುಗಳೆಯುತ್ತೀ ತೆಱದಿಂದಂ ॥ ೨೩೫

ಖಳಕರ್ಮರಾಜನೊದವಿದ
ಬಳಮಂ ಕೆಡಿಸಲ್ಕೆ ವೇಡಿ ತೊಟ್ಟದಾ ಕ ।
ತ್ತಳಮಂ ಪೋಲ್ತುದು ನೋಡಲ್
ಮಳಮೋರಂತಮರ್ದು ಕೂಡೆ [2] ಸರ್ವಾಂಗಮುಮಂ ॥ ೨೩೬

ಆಂ ಬೇಱೆ ದೇಹಮುಪ್ಪೊಡೆ
ತಾಂ ಬೇಱೆಂದೆಂಬ ಸಿಚ್ಛಯಂ ಮಿಗೆ ಮೋಹಾ ।
ಡಂಬರಮನುೞಿದು ತನುವಂ
ಪಂಬಲಿಸದೆ ಮೋಕ್ಷಸುಖಮನಾಪೇಕ್ಷಿಸುತುಂ ॥ ೨೩೭

ಅಱಿಯೊಡಲಂ ನಂಬದೆ ಮಿಗೆ
ಯುಱಿಸೊಗಮಂ ಪಗೆಯ ಕಂಡ ತೆಱದಿಂ ಕಾಣು । [3]
ತ್ತುಱಿಲಿಂ ಪಲವುಪವಾಸಂ
ಗಳನೋನದೆ ದೇಹಮಂ ಕರಂ ಕುಸಿಯಿಸುತುಂ ॥ ೨೩೮

ತಪದೊಳುತ್ತರೋತ್ತರಂ ನೆಗೞ್ದು ಕಡೆಯೊಳ್ ಸಮಾಧಿವಿಧಿಯಿಂ ಶರೀರಮಂ ಬಿಸುಟು ಪನ್ನೆರಡನೆಯ ಸಹಸ್ರಾರಕಲ್ಪದೊಳ್ ಪದಿನೆಂಟು

---

1 ಜನಪದ ಸರಸಿಜಮಂ (ಕ)

2 ಪತ್ತಿರ್ದಾತನ್ಮಳಮೋರಂತಮರ್ದು ಕೂಡೆ (ಖ)
ಪೊತ್ತಿರ್ದುದು ತಾಂ ಮಳಮೋರಂತಮರ್ದು ಕೂಡೆ (ಕ)

3 ಅಳಿಯೊಡಲನಂಬಿಸುಂ ಪಿಡಿದಳಿವೆನೆತತ್ಸುಖಮನೆಂದು ಪಥೆಯಂ ಕಂಡಂ ತಳಲು (ಗ)

ಸಾಗರೋಪಮಾಯುಷ್ಯಕೊಡೆಯಂ ಸುಕಾಂತನೆಂಬ ಮಹತ್ತರದೇವ
ನಾಗಿ ಪುಟ್ಟಿದಳಿಂತು, ೬೭೯

ದುರಿತವಿರೋಧಿಸೇನೆಯುನಪತ್ರಿಬಿದಗ್ಗದ ಮೋಕ್ಷಲಕ್ಷ್ಮಿಯೊ
ಳ್ಪರೆಪೆಸಪೋಷಿಪಂಬ ಪುರುಷಂ ಮನದೊಳಗ್ ಪರಿಲ್ಲವಾಗಳುಂ [1]
ಪರಮಜಿನೇಂದ್ರಪಾದದೊಳ್ ಕಾಂಕ್ಷಿತನಪ್ಪುದು ಮತ್ತಮಲ್ಲಿಯುಂ
ಪರಿಹರಿಸಿರ್ಕೆ ತತ್ವಮನೆ ಭಾವಿಸುತುಂ ಪರಮವ್ರತಂಗಳಂ ॥ ೬೮೦

[ಚತುರ್ಗತಿಗಳೊಳಾದ ಸುಖಮಂಬನಿತುಮಂ ಬಿಟ್ಟು ಮೋಕ್ಷ
ಸುಖಮನೆ ಬಯಸುವುದೆಂದು ನಿಷ್ಕಾಂಕ್ಷೆಯ ಕಥೆಯಂ ಗಣಧರದೇವ
ರ್ಪೇಳ್ದರ್] [2] ೬೮೧

ಪಿರಿಯಂ ಸಂತುಷ್ಟನಾವಂ ಮದನಶರಭಭೀರುಂಡನುದ್ಯದ್ಗುಣಂ ಮಂ
ದರಧೈರ್ಯಂ ವಾಗ್ವಧೂವಲ್ಲಭನಮಳಯಶೋರಾಶಿ ಸವ್ಯಕ್ತ್ವರತ್ನಾ
ಭರಣಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಸೀರಾಜಹಂಸಂ॥ ೬೮೨

ಇದು ನಿಖಿಳರಿಪಿಜನಪರಿವೃಢಮಕುಟತಟಘಟಿತಮಣಿನಿಕರವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ಸಿರುಹಮನವಜಕವಿಜನಪಯಃಪಯೋಧಿಹಿಮಕರ ನುತಭಾವ
ಯುತ ದಿಗಂಬರದಾಸ ನೂತ್ನ ಕವಿತಾವಿಲಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧರ್ಮಾಮೃತದೊಳ್

ದರ್ಶನದ್ವಿತೀಯಾಂಗವ್ಯಾವರ್ಣನಂ

ತೃತೀಯಾಶ್ವಾಸಂ.

---

1 ತೊಡದಳಿಲ್ಲದೇಗಳುಂ (ಕ)

2 ಎಂದು ನಿಷ್ಕಾಂಕ್ಷೆಯ ಕಥೆಯ ಫಲಮಂ ಮುನಿಕುಂಜರಂ ಪೇಳೆ ಕೇಳ್ದು(ಗ)

# ಚತುರ್ಥಾಶ್ವಾಸಂ

---

ಶ್ರೀನಿರ್ವಾಣಶ್ರೀಗಿದು
ತಾನಗ್ಗದ ತೊಡವೆನಿಪ್ಪ [1] ನಿಷ್ಕಾಂಕ್ಷೆಯುನ |
ತ್ಯಾನಂದದಿನಱಿದಂ ಪಿಬು
ಧಾನಂದಂ ಸುಕವಿನಿಕರಪಿಕಮಾಕಂದಂ || ೧

ಅಂತು [ನಿಷ್ಕಾಂಕ್ಷೆಯ ಕಥೆಯಂ ಲೇಸಾಗಱಿದು ಮತ್ತಂ ಗಣಧರಸ್ವಾಮಿಗಳ್ಗೆ ಮಗಧನಾಯಕಂ ಪೊಡೆವಟ್ಟು ಕೈಗಳಂ ಮುಗಿದು ಮುಂದಣ ನಿರ್ವಿಚಿಕಿತ್ಸೆಯ ಕಥೆಯನೆನಗೆ ನಿಮ್ಮಡಿಗಳಱಿವಂತಾಗೆ ಬೆಸಸುವುದೆಂಬುದುಂ ಮೋಕ್ಷಲಕ್ಷ್ಮಿಯ ಲಾವಣ್ಯೋತ್ಕರ್ಷಮೆನಿಪ ನಿರ್ವಿಚಿಕಿತ್ಸೆಯುನಿಂತೆಂದು ] [2] ಪೇೞ್ದರ್:—

ಪದ್ಯದಂತೆ, [ ಮಂಟಪದಂತೆ ಪ್ರಾರಬಂಧದಂತೆ ] ಶ್ರುತಯಂತ್ರದಂತೆ [ವಸ್ತ್ರದಂತೆ] ಮಂದರದಂತೆ ಶ್ರೀಮಂಚದಂತೆ ರಾಜನೀತಿಯಂತೆ ಧರ್ಮದಂತೆ ದಾನದಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಮೆಂಬ ನಾಲ್ಕುಗುಣಂಗಳಿಂ ಕೂಡಿ ಶುದ್ಧಚಿತ್ತದಿಂ ನಡೆವುದು. ೨

ನಿರ್ವಿಚಿಕಿತ್ಸೆಯೊಳಱಿದಾ
ತುರ್ವರೆ ಕೈಕೊಂಡು ಬಣ್ಣಿಸಲ್ಕೆಗೞ್ದ ನರಂ |
ನಿರ್ವಾಣಪದದೊಳಿರಿಸುವ [3]
ಸರ್ವಜ್ಞಶ್ರೀಗೆ ಪೊತ್ತುವೊದಲಿಗನಕ್ಕುಂ || ೩

---

1 ಸೊಬಗನಿಪ್ಪ (ಬ-ಕ)

2 ನಿಷ್ಕಾಂಕ್ಷೆಯುಂ ಕೇಳ್ದು ಮುಂದಣ ನಿರ್ವಿಚಿಕಿತ್ಸೆಯ ಕಥೆಯಂ ಬೆಸಸಿಮೆಂಬುದುಮಿಂತೆಂದು (ಗ)      3 ಪದದೊಳಿರಿಸುಗು (ಗ)

ಇನ್ನದಱ ಪೆಂಪಂ ಪೇೞ್ವೊಡೆ:— ೪

[ಭರತಕ್ಷ್ಮಾವನಿತೆಗೆ ಪಂ
ಕರುಹಭವಂ ನಚ್ಚಿ ಮೆಚ್ಚಿ ಮಾಡಿದ ಮಣಿನೂ :
ಪುರಮೆನಿಸಿ ಶೋಭೆಯಿಂದಂ
ಕರಮೊಪ್ಪುವುದಿಂದ್ರಕಚ್ಛೆಯೆಂಬುದು ವಿಷಯಂ || ೫

ಆವಿಷಯದೊಳ್, ೬

ಪೊಱವೊೞಲ ಶೋಭೆಯಿಂ ಸು
ತ್ತಿಱಿದಿರ್ದ ಜಿನೇಂದ್ರಭವನದೋಳಿಗಳಿಂ ಪೆ |
ರ್ಗೞಿಗಳ ಚೆಲ್ವಿಂ ಫಲದಿಂ
ತುಱುಗಿದ ತರುನಿಕರದಿಂದಮೊಪ್ಪುವ ವನದಿಂ || ೭

ಅಂತೊಪ್ಪುವುದು ರೌರವಪುರಮಾಪುರಮನಾಳ್ವನೊದ್ದಾಯನ ಮಹಾರಾಜನೆಂಬ ಮಹಾಮಂಡಳಿಕನಾತಂ ೮

ಶರಣೆಂದಂಗೆ ಪಯೋಧಿಯುನ್ನನದಟಿಂ ಮಾಱಾಂತು ಕೈಕೊಳ್ಳದಿ
ರ್ದರಿಭೂಪರ್ಗೆ ಗಜಾರಿಯುನ್ನಸಳಿಪಿಂ ಕಯ್ವಾಂತ ಮರ್ತ್ಯರ್ಗೆ ಭಾ
ಸುರಕಲ್ಪದ್ರುಮದನ್ನನೂರ್ಜಿತಯಶಂ ಭೂಪ್ರೋನ್ನತಂ ಧೈರ್ಯಮಂ
ದರನುದ್ಯದ್ಗುಣವಂತರಾಜರ ಮನೋಜಂ ಭೂರಿಭೂಮೀಯುತಂ || ೯

ಪರಮಜಿನಪೂಜೆಯಂ ನಿ
ರ್ಭರತರಭಕ್ತಿಯೊಳ್ ಮಾಡುವೆಡೆಗೀತನೊಳಾ |
ಭರತೇಶ್ವರನುಂ ದೊರೆಯೇಂ
ದೊರೆಯಾಗಿರಸೆಂದು ಪೊಗೞ್ದು ಕೊನೆವುದು ಲೋಕಂ || ೧೦

ಸೊಗಯಿಪ ದರ್ಶನದೊಳ್ಸಲೆ
ಮಿಗಿಲೆನಿಪ ಸನತ್ಕುಮಾರಚಕ್ರಿಗಮಂತಾ |
ಸಗರಾಧಿಪಂಗಮೀತನೆ
ಮಿಗಿಲೆಂದೋರಂತೆ ಪೊಗೞುತಿರ್ಪುದು ಭುವನಂ || ೧೧

ನೆಗಳ್ದ ಚತುರ್ವಿಧದಾನ
ಕ್ಕಗಣಿತಗುಣನೀತನಿಂದೆ ಶ್ರೇಯಾಂಸಂ ತಾಂ ।
ಮಿಗಿಲಿಲ್ಲವೆಂದು ಪೊಗೞ್ವುದು
ಜಗತೀಚಕ್ರಂ ನಿರಂತರಂ ಪದಪಿಂದಂ ॥ ೧೨

ಅಂತು ಪೊಗೞ್ಕೆವೆತ್ತ ಉದ್ದಾಯನಮಹಾರಾಜಂಗೆ ಪಟ್ಟದರಸಿ ಪ್ರಭಾವತಿಯೆಂಬಳ್ ॥ ೧೩

ವರಗುಣದೊಳ್ಸುರೇಂದ್ರವಧುವಿಂಗೆಸೆವಿರ್ಮಡಿ ಜೈನಭಕ್ತಿಯೊಳ್
ವರವಧುವಪ್ಪ ರೋಹಿಣಿಗೆ ಮುಮ್ಮಡಿ ರೂಪಿನೊಳಬ್ಜವಾಸೆಗಂ
ಪರಿಣತರಪ್ಪವರ್ಬಗೆದು ನೋೞ್ಪೊಡೆ ನಾಲ್ಮಡಿ ಶೀಲದೇೞ್ಗೆಯೊಳ್
ಧರಣಿಜೆಗಂ ಸಹಸ್ರಮಡಿ ಭಾವಿಪೊಡಗ್ಗಳಮೀಧರಿತ್ರಿಯೊಳ್ ॥ ೧೪

ಎನಿಸಿ ನೆಗೞ್ತೆವಡೆದ ಪ್ರಭಾವತೀದೇವಿ ಮೊದಲಾಗೆಣ್ಟಾಸಿರ್ವರರಸಿಯರೊಳ್ ಕೂಡಿ ಸುಖಸಂಕಥಾವಿನೋದದಿಂದೊದ್ದಾಯನಮಹೀವಲ್ಲಭಂ] [1] ರಾಜ್ಯಂಗೆಯ್ಯುತ್ತುಮಿರ್ಪುದುಮೊರ್ಮೆ ಸೌಧರ್ಮಕಲ್ಪದೊಳ್ ಸೌಧರ್ಮೇಂದ್ರಂ ಸುಧರ್ಮೆಯೆಂಬ ಸಭೆಯೊಳ್ [2] ೧೫

[ಸುರವಿಳಾಸಿನಿಯರ್ ಮನೋಹರರೂಪೆಯರ್ ಗಜಯಾನೆಯರ್
ತರಳಲೋಚನೆಯರ್ ವಿದಗ್ಧೆಯರಿಕ್ಕೆ ಚಾಮರಮಂ ಸುರರ್
ಸುರುಚಿರಾಭರಣಂಗಳುಪ್ಪೆ ಮನೋಜಸನ್ನಿಭನರ್ತಿಯಿಂ
ನೆರೆದು ಕುಳ್ಳಿರೆ ಸುತ್ತಲುಂ ರಸಗೀತಮುಣ್ಮೆ ಪೊದೞ್ಕೆಯಿಂ ॥ ೧೬

ಅಂತೋಲಗಂಗೊಟ್ಟಿರ್ದ ಸುರರಾಜಂಗೆ ಸಮಸ್ತದಿವಿಜನಿಕಾಯಮುಮಂ [ವಿನಯವಿನಮಿತರಾಗಿ] [3] ಕೈಗಳಂ ಮುಗಿದು ಬಿನ್ನಪಮೆಂದಿಂತೆಂದರ್:— ೧೭

---

1 ಇಂದ್ರಗೞ್ಟೆಯೆಂಬುದು ವಿಷಯಮೂವಿಷಯದೊಳ್ ಸೌರಾಷ್ಟ್ರಪುರಮೆಂಬುದು ಪುರಮವನಾಳ್ವರಸನೊದ್ದಾಯನ ಮಹಾರಾಜನೆಂಬ ಮಂಡಳಿಕನಾತನರಸಿ ಪ್ರಭಾವತಿಯೆಂಬಳಂತವರ್ಸುಖಸಂಕಥಾವಿನೋದದಿಂ ರಾಜ್ಯಂ (ಗ)

2 ಸಭೆಯೊಳಿರೆ ಸಮಸ್ತದಿವಿಜ (ಗ) 3 ಪೊಡಮಟ್ಟು (ಗ)

ನಿರುಪಮಮಮುಕ್ತಿಶ್ರೀಗಾ
ಭರಣಮಿದೆನಿಸಿರ್ದ ಜೀವಹಿತಮಂ ನುತಮಂ ।
ಪರಮಜಿನಾಗಮಮಂ ದೇ
ವರೆ ಬಲ್ಲಿರಿ ಪೆಱರ್ಗಮಱಿಯಲೇಂ ಮೊಗ್ಗಾಯ್ತೇ ॥ ೧೮

ಅದುಕಾರಣಂ ದೇವರೆಮಗೆ ಸದ್ಧರ್ಮಮಂ ತಿಳಿವಂತಾಗೆ ಬೆಸಸಲ್ವೇೞ್ಕುಮೆಂಬುದುಂ, ಅಮರರಾಜಂ ಸುಖನಿಧಾನದೀಪವರ್ತಿಯೆನಿಪ ಸದ್ಧರ್ಮಮನಿಂತೆಂದು ಪೇೞ್ದಂ :— ೧೯

ವರಸದ್ಧರ್ಮಮೆ ಜೀವೋ
ತ್ಕರಕ್ಕೆ ಶರಣನ್ಯವಸ್ತುಗಳ್ಕ್ಷಯದಿಂ ।
ಶರಣಲ್ಲಮೆಂಬುದಂ ವಿ
ಸ್ತರದಿಂದಂ ತಿಳಿದು ಧರ್ಮಮಂ ಪಿಡಿಗೆ ಬುಧಂ ॥ ೨೦

ಪುಸಿವವದಂ ಕೊಲ್ವವರಂ
ಬೆಸನಿಗಳಂ ಕಳ್ಳರಪ್ಪರಂ ಕಂಡೊಡೆ ಸಂ ।
ಕಿಸುವರ್ ಪುರುಷರ್ ಪಾಪಂ
ವಸುಮತಿಯೊಳ್ಕಷ್ಟಮೆಂದು ಸಾಱುವ ತಱದಿಂ ॥ ೨೧

ಪಿರಿದಪ್ಪ ತಪದೊಳೊಡಲಂ
ವರಧರ್ಮದೊಳರ್ಥಮೆಲ್ಲಮಂ ತವಿಸುವರಂ ।
ಧರೆ ನಚ್ಚಿ ಮೆಚ್ಚಿ ಬಣ್ಣಿ ಪು
ದೆರಡಿಲ್ಲದೆ ಧರ್ಮಮೊಳ್ಳಿತೆಂದಱಿಪುವವೋಲ್ ॥ ೨೨

ಅದುಕಾರಣದಿಂ ಸ್ವರ್ಗಾಪವರ್ಗಸುಖಕ್ಕೆ ಧರ್ಮಮೆ ಕಾರಣಮೆಂಬುದುಮಂ [1] ನರಕತಿರ್ಯಗಾದಿಮಹಾದುಃಖಕ್ಕೆ ಪಾಪಮೆ ಕಾರಣಮೆಂಬುದುಮಂ [1] ನೀವಱಿದುದುಮಱಿಗೆ, ೨೩

ಪೊಲೆಯರ್ ಭಾವಿಸುವೊಡೆ ದು
ಷ್ಕುಲರನುಪಮ [2] ಶುದ್ಧವೃತ್ತಿಯೊಳ್ನಡೆವೊಡೆ ಭೂ ।

1 [illegible] 2 [illegible]

ತಲವೆಲ್ಲಂ ಬಣ್ಣಿಸುವುದು
ಕುಲದಿಂದಂ ಧರ್ಮಮಧಿಕವೆಂದಱಿಪುವವೊಲ್ ॥ ೨೪

ಕುಲಮುಳ್ಳಂ ಚಾರಿತ್ರ
ಕ್ಕಲಸಿ ಮಹಾವ್ಯಸನಿಯಾಗಿ ನಡೆವೊಡೆ ಧರಣೀ ।
ವಲಯಂ ಮುನಿವುದು ಧರ್ಮಂ
ಕುಲದಿಂದಂ ಪೂಜ್ಯಮೆಂದು [1] ಸಾಱುವ ತೆಱದಿಂ ॥ ೨೫

ಅದುಕಾರಣದಿಂ ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗೞ್ದ ಧರ್ಮಮು ಸದ್ಧರ್ಮಂ ಪೊಲ್ಲಮೆಯೊಳೊಂದಿ ದುಶ್ಚಾರಿತ್ರದೊಳ್ಕೂಡಿ ಸಲ್ವ ಧರ್ಮಮು ಕುಧರ್ಮಮೆಂಬುದುಮನೀನುಡಿಗಳಿಂದ ಱಿಗೆ; ೨೬

ಪೆಸರುಂ ರೂಪುಂ ನುಡಿಯುಂ
ವಸುಮತಿಯೊಳ್ ಕೇಳ ಮಾನಿಸರ್ಗೆಲ್ಲಂ ಭಾ।
ವಿಸುವೊಡೆ ಸಮಾನಮೆನಿಸಿತಱೊ
ಳ್ ಸಮಾನರೆ ಮನುಜರಣ್ಣ ಕೀೞ್ಕೆಲಿಲ್ಲಾ ॥ ೨೭

ಅನ್ವಯದಿಂದಪನೆಱಿಯದೆ ಬರುತ್ತಿರ್ಪ ಶುದ್ಧಚಾರಿತ್ರದಿಂದಿವರ್ ವಿಪ್ರಾದಿ[2] ಮೇಲ್ಜಾತಿಗಳ್ ದುರಾಚಾರದಿಂದಿವರ್ಕಿರಾತಾದಿಕೀೞ್ಜಾತಿಗಳೆಂದಱಿವಂತೆ ಸದಾಚಾರರಪ್ಪ ಮಹಾತಪೋಧನರ [ತದ್ಭಕ್ತರಪ್ಪ] ಗೃಹಸ್ಥರ ನಡೆವಳಿಗಳುಮಂ ದುರಾಚಾರರಪ್ಪ ತಪೋಧನಲಿಂಗಿಗಳ [3] [ತದ್ಭಕ್ತರಪ್ಪ] ಗೃಹಸ್ಥರ ನಡೆವಳಿಗಳುಮಂ ಕಂಡಿದು ಮೋಕ್ಷಕ್ಕೆ ಕಾರಣಮಪ್ಪ ಧರ್ಮಮೆಂದಱಿಗೆ. ೨೮

ಬಸಗೆಗಮುತ್ಸಾಹಕ್ಕಂ
ಸಸಿಯುದಯಂ ರಂಜಿಪಂತೆ ಕಳ್ಳಂಗಂ ಮ ।

1 ಸಾರಮೆಂದು (ಕ. ಬ.)
2 ಬ್ರಾಹ್ಮಣಾದಿ (ಗ.) 3 ದುಶ್ಚಾರಿತ್ರರಪ್ಪ, ಕುತ್ಸಿತರಪ್ಪ ತಪಸ್ವಿಗಳ (ಕ. ಬ)

ಬೆರ್ಸನಿಗವೊತೆಱದಿಂ ರಂ
ಜಿಸಲಕ್ಕುಮೆ ಬಗೆದು ನೋೞ್ಪೊಡವನೀತಳದೊಳ್[1] ॥ ೨೯

[ಸಕಲಸುಖಕ್ಕೆ ನೆಲೆಯಾದ ಸದ್ದೃಷ್ಟಿಗೆ ರಂಜಿಸುವ ಸದ್ಧರ್ಮಂ ಬಹುವಿಧವಾಗಿರ್ಪ ನರಕದುಃಖಂಗಳನನುಭವಿಸಲ್ವೇಡಿರ್ಪ ಕುದೃಷ್ಟಿಗೆಂತಾನುಂ ರಂಜಿಸಲಾಱದು.] [2] ೩೦

ಕನ್ನಡಿಯುಂ ತೋಱದೊಡ
ತ್ಯನ್ನತಸಲ್ಲಕ್ಷಣಂಗೆ ಮುನಿಸಾಗದು ಮ ।
ತ್ತನ್ನದೆ ಮೂಕೊಱೆಯುಂಗಾ
ಕನ್ನಡಿಯುಂ ತೋಱೆ ಬಡಿವನಿಱುವಂ ಕೊಲ್ವಂ ॥ ೩೧

ಅಂತು ನಿಷ್ಪಾಪಂಗೆ ಸದ್ಧರ್ಮಂ ರುಚಿಯಾಗಿರ್ಕುಂ ಮಹಾಪಾತಕಿಗೆ ಕೈಪೆಯಾಗಿರ್ಕುಂ. ೩೨

ಜರಗನೊಯ್ಯನೆ ಕರ್ಚಿ ರಾಶಿಯ ಮಣ್ಣೊಳೊಪ್ಪುವ ಪೊನ್ನನ
ಚ್ಚರಿಯೆನಲ್ಕೆಱೆ ಕಾಣ್ಬವೊಲ್ಕೃತಿವಂತರುಂ ಮರುಳಾಗಿ ಮ
ಚ್ಚರಿಸದಾಪ್ತನನೈದಿ ತತ್ವಮನಂತೆ ಧರ್ಮಮನಾಗಳೊ
ಪ್ಪಿರೆ ವಿಚಾರಿಸಿ ನೋಡಿ ನಂಬುಗೆಯಿಂದೆ ಮಾೞ್ಪುದು ಧರ್ಮಮಂ ॥ ೩೩

ಶುದ್ಧಮಪ್ಪ ಪೊನ್ನೊಳ್ ದುಷ್ಕರಪ್ಪವರ್ ತಮ್ಮಲಾಭದಾಸೆಯಿಂ ಕಿಸು ಬೆಳ್ಳಿಯೆಂಬಿವಂ [3] ಬೆರೆಯಿಸಿ ಪೆಱರ ಕಣ್ಗಟ್ಟಿ ತಿರಿಪಿ ಮೇಲಪ್ಪ ಪೊನ್ನೆಂದು ತೋಱಿಸುವತೆಱದಿಂ [4]

---

1 ಬಸಗೆಯೊಳೆಸಗುವ ಮನುಜಂ ಸಸಿಯುದಯಮನೊಲ್ವನೊಲ್ವನೇ ಪಾದರದ । ವ್ಯಸನಮನೆ ಪಿಡಿದು ರಾಗದಿನೆಸಗುಗೆಮಸಂಗತಿಯ ನೋಡ ಬಯಸುವ ಖಳನುಂ॥ (ಗ)

2 ಅಂತು ಮೋಕ್ಷಕಾರಣಮಪ್ಪ ಚಾರಿತ್ರಮಿದೆಂದು ಪುರುಷಂ ಸದ್ಧರ್ಮಮನೊಲ್ವನಲ್ಲದೆ ನರಕದುಃಖಕ್ಕೆ ಭಾಜನನಪ್ಪ ಪುರುಷಂಸದ್ಧರ್ಮಮನೊಲ್ಲಂ (ಗ)

3 ಕಿಸುವುಮಂ ಬೆಳ್ಳಿಯುಮಂ (ಗ) 4 ಪೊನ್ನೆಂಬಂತೆ (ಗ)

[ದಯಾಮೂಲಮಾದ] ಸದ್ಧರ್ಮದೊಳಾದ ನೆಗೞ್ತೆಗಾಱದಸರಪ್ಪವರ್ ತಮ್ಮ ಮೆಯ್ಯ ಸುಖಕ್ಕೆ [1] ಪಾಪಹೇತುಗಳಪ್ಪ ಕುಧರ್ಮಮಂ ಪೇೞ್ದ ಪೆಱರಂ ಮಱುಳ್ಮಾಡಿ ಧರ್ಮಮೆಂದು ನೆಗೞಿಸುವರದುಕಾರಣಮಾರಯ್ದು ನೋಡವೇೞ್ಕುಂ, [2] ೩೪

ಪಿತ್ತಳೆಯ ತೊಡವು ಪೊಲೆಯ
ಗರ್ತ್ತಮೆಮೆಸಿಸಿರ್ದ ಪೊನ್ನ ತೊಡವೆನಿಸುವವೋಲ್ ।
ಚಿತ್ತದೊಳುತ್ಸಾಹದಿನ
ತ್ಯುತ್ತಮಮಾಗಿರ್ಕುಮಘಯುತರ್ಗಂ ಪಾಪಂ ॥ ೩೫

ಅದಱಿಂ ಪಾಪಹೇತುವಪ್ಪ ದುರ್ಮಾರ್ಗಮಂ ಪಿಡಿಯಚುವಿಡಿಯದೆ, ಪರದರೆಂತು ಕಿಸುಗಟ್ಟುಮಂ ಕಳ್ಳಚ್ಚುವಂ [ಕಂಚುವಂ] ಮಾಣ್ದೊರೆಗಂ [3] ತೂಕಕ್ಕಂ ಬರ್ಪ ಪೊನ್ನಂ ಕೊಳ್ವರಂತೆ ಸುಖಹೇತುವಪ್ಪ ಸನ್ಮಾರ್ಗದೊಳ್ನೆಗೞ್ವುದು :— ೩೬

ನಡೆವೆಡೆಯೊಳ್ ಪಡುವಡೆಯೊಳ್
ಮಡಿಸೀರೆಯನೆಂತು ದೂಳಿ ದಿನದಿನದೊಳ್ [4] ನೋ ।
ಪ್ಪೊಡೆ ಪೊರ್ದುಗಂತೆ ಚಪಳರ
ನಡೆನುಡಿಯೆಂಬಿವೆಱೊಳ್ಪೊಂದುಗುಂ ಪಾಪಚಯಂ ॥ ೩೭

ಪೊದೆದಾತನಱಿಯದಂತೆ ಪೊದೆದ ಮಡಿ ಬಟ್ಟೆಯಂ ಧೂಳಿಯೊಳ್ ಮಾಸಿಯುಸಗನ ಬಾರಿಯೊಳ್ಬರ್ದು ನಿಗ್ರಹಕ್ಕೊಳಗಪ್ಪಂತೆ ಚಪಳರ್ ಜಿನತಪಸ್ವಿಗಳಂ ಜಿನತತ್ವಮನಿಂತುಟಿಂತುಟೆಂದು ಬಾಯ್ಗೆ ವಂದಂತಣ ಕಚಣಕಂಗೆಡೆದು ನಗೆನಗೆಯೊಳ್ ಪಾಪಮಂ ಪೊರ್ದಿ ನಾರಕಬಾಧೆಗೊಳಗಾಗಿ ಪಲಕಾಲಂ ದುಃಖಂಬಡುವರ್. ೩೮

ಕಿಸುವೆಂ ಮೂಲಿಕೆಯಂ ಪೊ
ರ್ದಿಸೆ ನಗೆಯೊಳ್ ಹೇಮಮಪ್ಪ ತೆಱದಿಂದಂ ಸಂ ।

---

1 ಮನೆವಾೞ್ತೆಯಸುಖಕ್ಕೆ (ಕ.) 2 ಅದುವನಾರೈದುನೋಡಾ (ಗ).
3 ಬಿಸುಟೊರೆಗಂ (ಗ) 4 ಮಿಗೆನುಡಿಯೊಳ್ (ಕ) ನಸೆನಗೆಯೊಳ್ (ಬ).

ಕಿಸದೆ ವರಧರ್ಮದೊಳ್ ಕೂ
ರ್ತೆಸಗುವ ನರನುಂ ವಿಶೇಷಸುಖಿಯಾಗಿರ್ಕುಂ ॥ ೩೯

ಬಾಳೆವಣ್ಗೆ ನಿದಪ್ಪುದೆಂತು ಸಹಜಂ, ಸಕ್ಕರೆಗೆ ಸಿಹಿಯಹಾಗಿರ್ಪುದೆಂತು ಸಹಜಂ, ಮಾವಿನಪಣ್ಗೆ ರುಚಿಯಪ್ಪುದೆಂತು ಸಹಜಂ ಅಂತೆ ಚಕ್ರವರ್ತಿಯ ದೇವೇಂದ್ರನ ಸರ್ವಜ್ಞನ ಪದವಿಯನೆಯ್ದುವ ಪುರುಷಂಗೆ ಸದ್ಧರ್ಮದೊಳಾದ ನಿರ್ದೋಷಿಯಪ್ಪ ದೇವನೊಳಾದ ದಿವ್ಯವಾನಿಗಳೊಳಾದ ಪ್ರೀತಿಯುಂ ಕೊಂಡಾಟಮುಂ, ಭಕ್ತಿಯುಂ ಸಹಜಮಾಗಿರ್ಕುಂ; ಬೇವಿಂಗೆ ಕೈಪೆಯೆಂತು ಸಹಜಂ ಅಣಿಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರಮೆಂತು ಸಹಜಂ ತಾನಂತೆ ಬಡತನದ ಪೀಡೆಯುಂ ಸದ್ಧರ್ಮದೊಳಾದ ಮುನಿಸುಂ ದೂಷಣಮುಂ ಔದಾಸೀನ್ಯಮುಂ ನರಕದುಃಖದೆಡೆಗೆ ಸಲ್ವ ಪುರುಷಂಗೆ ಸಹಜಮಾಗಿರ್ಕುಂ ॥ ೪೦

ಬೋಳಾದ ತಲೆಯ ರೋಮಂ
ಮೇಲೆನಿಸದ ಬೆರಳ ಮುಱಿದ ಸೆಳ್ಳುಗುರುಂ ಸ ।
ಲ್ಲೀಲೆಯೊಳ್ ಬಳೆವ ತೆಱದಿಂ
ಕೋಲಾಹಲವಿಲ್ಲದೊದವುತಿರ್ಕುಂ ಪಾಪಂ ॥ ೪೧

ಬೋಳ ಮಂಡೆಯ ರೋಮಮುಂ ಮುಱಿದುಗುರುಂ ಮೆಲ್ಲನಾರುಮಱಿಯದಂತೆ ದಿವಸಕ್ರಮದಿಂ ಬಳೆದು ತುಱುಂಬುಂ ಸೆಳ್ಳುಗುರುಮಪ್ಪಂತೆ ದುರ್ಜನರುಂ ಪಾಪಿಗಳುಂ ಧರ್ಮದ್ರೋಹಿಗಳುಂ ತಮ್ಮನಱಿಯಲೀಯದೆ ದಿವಸಕ್ರಮದಿಂ ಬಳೆದ ಪಾಪದಿಂದಂ ಮಹಾನರಕದೊಳ್ಬರ್ದ ಬಹುದುಃಖಮನುಣ್ಬರ್ ॥ ೪೨

ಸಸಿಯುಂ ಕೌಂಗಿನ ತೆಂಗಿನ
ಸಸಿಯುಂ ನೆಱೆ ಬೆಳೆದು ಮೇಲೆ ಫಲಮಂ ಕುಡುವಂ ।
ತೆ ಸಮೆಂತು ಧರ್ಮಮುಂ ಸಂ
ತಸಮಂ ಮೇಲೆಯ್ದೆ ಮಾಡುಗುಂ ಕ್ರಮದಿಂದಂ ॥ [1] ೪೩

ದಿನದಿನಕ್ಕನಿತನಿತು ಬಳೆದುದೆಂದೊರ್ವರ್ಗಮಱಿಯಬಾರದುದಾಗಿಯುಂ ಬೆಳೆದು ಫಲವಂ ಕೊಡುವ ಕೆಯ್ಯ ಕೌಂಗಿನ ತೆಂಗಿನ ತೋಂಟದಂತೆ ದಾನಪೂಜೆಯೊಳ್ ಕೂಡಿದ ಸದ್ಧರ್ಮಂ ಪ್ರತ್ಯಕ್ಷಫಲಮಂ ತೋಱದುದಾಗಿಯುಂ ನಿಂದು ಮೇಲೆಮೇಲೆ ಫಲವಂ ಕುಡುಗುಂ ॥ ೪೪

ಕೂರ್ಮೆಯೊಳಲಸದೆ ಜೀವ
ಕ್ಕಾರ್ಮಂ ಪೆಱತಿಲ್ಲ ದುಃಖದಿಂದೆತ್ತುವ ಸ ।
ದ್ಧರ್ಮಮೆ ಹಿತಮೆಂದೇಳಿಸ
ದೊರ್ಮೊದಲಱಿದಾರ್ತು ಧರ್ಮಮಂ ಪಿಡಿಗೆ ಬುಧಂ ॥ [1] ೪೫

ಆ ಧರ್ಮದೊಳ್ ನೆಗೞ್ದ ಭವ್ಯನೆಂತಪ್ಪನೆಂದೊಡೆ, ಕುದುರೆಯಂತೆ ಕೀಲಿಂ ಕೈಕೊಳ್ಳದೆ, ಗೃಪವಂತೆ ಮಂತ್ರಕ್ಕೆಱಗದೆ, ಕಟ್ಟರಸನಂತೆ ತಂತ್ರಕಾಸೆಗೆಯ್ಯದೆ, ಮೂಸದಂತೆ ಪಕ್ಷಮಿಲ್ಲದೆ, ದೀಪವರ್ತಿಯಂತೆ ಪೊಂಗೆರಗದೆ [ಅಱುಬಾಗಿಯಂತೆ ಪೊಗೞ್ತೆಗಾಸೆಗೆಯ್ಯದೆ,] ಬೆಸದವರಂತೆ ಮುಯ್ಪಂ ನೋಪದೆ, ತೇರಂಟೆಯಂತೆ ಕುಮತಕ್ಕೆ ಸೂರುಳದೆ, ಬನಲಿಯಂತೆ ಪೊಲ್ಲಮೆಯಂ ಪಿಡಿಯದೆ, ತೊಱೆಯಂ ತೊರ್ಮೆ ಪೆರ್ಚಿ ಮತ್ತೊರ್ಮೆ ಕುಂದದೆ [2], ಚಂದ್ರನಂತೆ ಕಳಂಕನಾಗದೆ, ಮಕ್ಕಳಂತೆ ಕಂಡಕಂಡವಕ್ಕೆಱಗದೆ, [ಗಿಳಿಯಂತೆ ಪೆಱರ ಶಿಕ್ಷೆಯಂ ಕಲಿಯದೆ,] ಕೋಗಿಲೆಯಂತೊರ್ಮೆ ನುಡಿದೊರ್ಮೆ ಮೂಣದೆ, [3] ಬಹುರೂಪಿಯಂತೆ ಪೊತ್ತಿಂಗೊಂದಂದಮಾಗದೆ, ಕಬ್ಬಿನ ತೋಂಟದಂತೆ ನಿಸ್ಸಾರನಾಗದೆ, ಪಾದರಿಗನಂತೆ ಪಲರ ಮುಂದೆ ನಾಣ್ೞದೆ, ಲೋಭಿಯಪ್ಪರಸಿನಂತವಿಚಾರಿಯಾಗದೆ, [4] ಶ್ರುತಮಿಲ್ಲದ ಲಿಂಗಿಯಂತೆ ಮೂರ್ಖನಾಗದೆ, ದೂರವೆಂದೆಯಂತೆ ತಲ್ಲಣಿಸದೆ, ತುಂಬಿಯಂತೆ ರಸಜ್ಞನುಂ ಭಂಡಾರದ ಪೊನ್ನಂತೆ ಶುದ್ಧನುಂ, ಬೆಟ್ಟನಂತೆ ಸ್ಥಿರನುಂ, ಮದದಾನೆಯಂತೆ ಮಹಾದಾನಿಯುಂ, ಸ್ಫಟಿಕದಂತೆ ನಿರ್ಮಳನುಂ, ಬಿಲ್ಲಂತೆ ಗುಣಧರನುಂ,

1 ದುಃಖದಿಂದೆಂತುಂಸ । ದ್ಧರ್ಮದಿನಗ್ಗಳಮೆಂದೋಸ । ದೊರ್ಮೆಯುಮಱಿಯದೆಬಿಡದೆ ಪತ್ತುವುದಱಿಂ (ಗ) 2 ಮಾಗಿಯತೊಱೆಯಂತೆಕುಸಿಯದೆ (ಗ)
3 ಕೋಗಿಲೆಯಂತ ಬಾಪೞಿಸದೆ (ಗ) 4 ಬಱುಬಾಗಿಯಂತೆ ಮುಯ್ಪಂನೋಡದೆ (ಗ)

ಸುಕವಿಯಂತೆ ಕುಮಾರ್ಗದೂರನುಂ, ಮಾಣಿಕಭಟ್ಟನಂತೆ ಪರೀಕ್ಷ ಕನುಂ, [ಮಹಾಕ್ಷತ್ರಿಯನಂತೆ ವಿಚಾರಪರನುಂ,] ದೇವರಂತೆ ಸುಮನನುಂ, ಪಾರ್ಥನಂತೆ ಧರ್ಮಪ್ರಿಯನುಂ, ಸಂಯಮಿಯಂತೆ ದಯಾಪರನುಂ, ಕವಿಯಂತೆ ಯತಿಪ್ರಿಯನುಂ, ಸಾಗರದಂತೆ ನಿಸ್ಸಾರದೂರನುಂ ನಿಚ್ಚಗಲಿಯಂತೆ [ಧರ್ಮದೊಳ್]ನಿಶ್ಶಂಕನುಮಪ್ಪುದು. ೪೬

[ಇವರಿಂ ಸ್ತ್ರೀವಶ್ಯಮಕ್ಕಿನ್ನಿವರಿನೆನಗೆ ಮಂತ್ರೋಪದೇಶಂಗಳಕ್ಕಿನ್ನಿವರಿಂ ದಿವ್ಯಂ ಫಲಿಕ್ಕಿನ್ನಿವರಿನೆನಗೆ ದಿವ್ಯೋಪದೇಶಂಗಳಕ್ಕಿನ್ನಿವರಿಂದೀಕಾರ್ಯಮಕ್ಕಿನ್ನಿವರಿನೆನಗೆ ಪೊನ್ನಕ್ಕುಮೆಂದಱಿಂ ಮಾಡುವ ದಾನಂ ದಾನಮಲ್ಲಂತದು ಬಗೆವೊಡೆ ಮುಯ್ಬಂಧುಗಳ್ಗೀವುದಕ್ಕುಂ ] ॥ ೪೭

ಕೂಳಿರ್ದಂತಱಗಂಜಿಯುಂ ಕುಡಿವ ಪೊನ್ನಿರ್ದಂತೆ ಕರ್ಗಲ್ಲನತ್ಯಾಳಾಪಂ ಬಗೆಗೆಟ್ಟು ಕೊಳ್ವ ಧರಣೀಸಾಮ್ರಾಜ್ಯಮಿರ್ದಂತೆ ಬಂದಾಳಾಗಿರ್ದ ವಿಭೂತಿಯಂ ಬಿಸುಟು ಭೃತ್ಯಕ್ಷಂಗೊಂಡು ತಾನುಣ್ಬ ಬೆಳ್ಳಾಳಂ ಪೋಲನೆ ಮಂತ್ರವೈದ್ಯವಳಿಪಿಂ ಕೇಡೆಯ್ದಿಪಂ ಧರ್ಮಮಂ ॥

ಮಱೆಯುಳ್ಳೊಡೆ ಕೆಯ್ಗೆ ತೊೞಗ
ಳ್ವಳಾಸದಿಂ ತೀವಿ ಕೋಡಿವರಿವಂತವನೀ ।
ತಳದೊಳ್ ಪುಣ್ಯಂ ತನಗ
ಗ್ಗಳಮುಳ್ಳೊಡೆ ತನಗೆ ತಾನೆ ಬಾರದೆ ಸಿರಿಯುಂ ॥ ೪೮

[ ಮತ್ತಂ ] ಕಾವಿಲ್ಲದೆ ಕೊಡೆವಿಡಿವೆನೆಂಬಂತೆ, ಬಂದಿಗೆಯಿಲ್ಲದೆ ಸುರಿಗಿ [2] ವಿಡಿವೆನೆಂಬಂತೆ, ನಾಡುವಿಡಿಯದರಸುಗೆಯ್ವೆನೆಂಬಂತೆ, ಘೃತವಿಲ್ಲದೂರನೂಡುವೆನೆಂಬಂತೆ, ಮದವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ, ಬಟ್ಟೆಯನಱಿಯದೆ ಪೊಲಂಬಿಗನಪ್ಪೆನೆಂಬಂತೆ, ಮಾತಱಿಯದೆ ಬಿನ್ನಪಂಗೆಯ್ವೆನೆಂಬಂತೆ, ಸುರಿಗಿಯಿಲ್ಲದೆ ಕಳನೇಱುವೆನೆಂಬಂತೆ, ಮಡಕೆ

1 ಬಂಧುಗಳ್ ಕೂಲಿಯಕ್ಕುಂ (ಬ.ಕ) 2 ಹರಿಗೆ (ಗ).

ಯಿಲ್ಲದಡುವೆನೆಂಬಂತೆ, ಸೂಳೆಯಿಲ್ಲದೆ ಬೋಜಂಗರಂ ಕರೆವೆನೆಂಬಂತೆ, ಮುನ್ನಿನ ಭವದೊಳಾದ ಜಿನಪೂಜೆಯಿಂ ದಾನದಿಂ ವ್ರತದಿಂ ತಪದಿಂದಾದ ಪುಣ್ಯಮಿಲ್ಲದೆ ಸಿರಿಯುಮಂ ಪೊನ್ನುಮಂ ಸುಖಮುಮಂ ಆಯುಷ್ಯಮುಮಂ ಮಂತ್ರ [ತಂತ್ರ ವೈದ್ಯಂ] ಗಳಿಂ ಪಡೆವೆನೆಂದು ದೆಸೆಗಿಡಲ್ವೇಡ; ಮಱುಗಿದೊಡಂ ಫಲಮಿಲ್ಲಂ. ೫೦

ಆ ರಾಮರಾಧೀಶರುಂ ಪಾಂಡವರಖಿಳಮಹೀವಲ್ಲಭರ್ ಕರ್ಮದಿಂ ಸಂ
ದಾರಣ್ಯಕೊಕ್ಕು ಕಾಂತಾಪರಿಭವದೞಲಿಂ ಬೆಂದು ನೊಂದಿರ್ದರಂತಾ
ಭೂರಾಮಾಧೀಶ್ವರರ್ಕೇಳೞಿಯರೆ ನಯದಿಂ ಮಂತ್ರಮಂ ವೈದ್ಯಮಂ ನೀ
ನೋರಂತೇಕಣ್ಣ ಬಾಪ್ಪಾಸೆಯೊಳಱಿದಪ್ಪೆ ಕರ್ಮದಿಂ ಬಲ್ಲಿತುಂಟೇ॥೫೧

ಆ ಸಗರೇಶನಾಭರತನಾದ್ಯುಮಸೇನನುದಾರವೀರದಿಂ
ದೀಸಕಲೋರ್ವಿಯುಂ ತನಗೆ ಮಾಡಿದ ಪೆಂಪಿನ ಚಕ್ರವರ್ತಿ ಶಾಂ
ತೀಶರಿವರ್ಗೆ ದಿವ್ಯಸುಖಮಾದುದು ಮುನ್ನಿನ ಪುಣ್ಯದೇೞ್ಗೆಯಿಂ
ಭಾಸುರಪುಣ್ಯಮಂ ನೆರಪೆ [1] ಪುಣ್ಯಮೆ ತಾರದೆ ಸರ್ವಸೌಖ್ಯಮಂ ॥೫೨

[ಇಂತು ಮಂತ್ರೌಷಧಂಗಳಿಂ ಕಾವೊಡಮಾಯುಷ್ಯಮಿಲ್ಲದ ನರಂಗೆ ಸಫಲಮಾಗವೆಂತೆ ಮಂತ್ರದಿಂ ಗ್ರಹಂ ಪೋಪುದೆಂಬೀ ನುಡಿಯುಂ ನಂಬದೆ ಪುಣ್ಯಮೊಂದೆ ಕಾರಣಂ ಪುಣ್ಯದಿಂ ಮಿಗಿಲಪ್ಪುದೊಂದುಮಿಲ್ಲೆಂದು ಶಾಶ್ವತಸುಖಮನೀವ ಸದ್ಧರ್ಮದೊಳ್ ಬುದ್ಧಿಯುಂ ಸಿಕ್ಷೆಯುಂ ಗೆಯ್ದಿರ್ಪುದು; ಮಣಿಮಂತ್ರೌಷಧಂಗಳೊಳಪ್ಪಾಶೆಯಂ ಬಿಡುವುದು]

ಏನಾನುಮನುದ್ದೇಶಿಸ
ದಾನಂದಂ [2] ಬೆರಸು ಭಕ್ತಿಪೂರ್ವಕದಿಂದಂ ।
ತಾನೊಸೆದು ಮಾಳ್ಪ ದಾನಂ
ತಾನದು ಮುಂಪಣ್ಗೆ ಕುಡುವುದಕ್ಷಯಸುಖಮಂ ॥ ೫೪

---

1 ಮಾಡುವ ಮಂತ್ರದಿನಕ್ಕೆ ವೈದ್ಯದೊಂದಾಸೆಯಿನಕ್ಕೆ ಪೇೞ್ದರುಳ್ವಪುಣ್ಯಮೆ (ಕ. ಖ.) 2 ಉಳ್ಳನಿತುಮನಾನಂದಂ (ಗ)

[ರಾಜ್ಯಕ್ಕೆ ಚತುರಂಗವುಂ ಮಂತ್ರಕ್ಕೆ ಚತುರ್ವಿಧೋಪಾಯ ಮುಮೊಪ್ಪುವಂತಾದಾನಕ್ಕೆ ಶಾಸ್ತ್ರಾದಿದಾನಚತುಷ್ಟಯಮೊಪ್ಪುಗು ಮಿಂತು, ೫೫

ಪರಮಾಗಮದಿಂದಲ್ಲದೆ
ಪರತ್ರಯಂ ಪಡೆವುಪಾಯಮಿಲ್ಲದಱಿಂದಂ ।
ವರಶಾಸ್ತ್ರಂ ಮಿಗಿಲೆಂದಾ
ದರದಿಂ ಮಾಡುವುದು ಶಾಸ್ತ್ರದಾನಮನಳಿಪಿಂ ॥ ] ೫೬

ಶ್ರುತವನಿತೆಯೆ ಮುಕ್ತಿಶ್ರೀ
ಸತಿಯಲ್ಲಿಗೆ ಬೇಗಮುಯ್ವ ದೂದವಿಯೆಂಬೀ ।
ಮತಮನಱಿದೋತು ಮಾಡುವು
ದತಿಶಯದಿಂ ಶಾಸ್ತ್ರದಾನಮಂ ಪದಪಿಂದಂ ॥ ೫೭

[1] [ ಶ್ರುತಭಾವನೆಯೊಳಮತಿಮನ
ದ್ಯುತಿ ನಿರ್ಮಲಮನದಿನಘಹರಂ ತದ್ದುರಿತ ।
ಕ್ಷತಿಯಿಂ ಕೈವಲ್ಯಶ್ರೀ
ಸತಿ ಸಾರ್ಗುಂ ಶಾಸ್ತ್ರದಾನದುನ್ನತಿ ಕಿಱಿದೇ ॥ ] ೫೮

ಏಗೆಟ್ಟತ್ತೆನ್ನದೆ ಮನ
ಮೋಗಡಿಸದೆ ತೀರದಾಱಿನೆಂದುಡುಗದೆ ನಿ ।
ರ್ವೇಗಂ ಚಿತ್ತದೊಳಣಮಿನಿ
ಸಾಗದೆ ತಾಂ ಮಾಳ್ಪುದನ್ನದಾನಮನಱಿವಿಂ ॥ ೫೯

[ ಕರಮಾದರದಿಂದನ್ನಮ
ನುರುಮುನಿಯೊರ್ವಂಗೆ ಕೊಟ್ಟ ತತ್ಫಲದಿಂದಂ ।

---

1 ನಾಲ್ಕುಂ ಮಹಾದಾನಮನೆಯ್ದಿದ ಸಿರಿಷೇಣಮಹಾರಾಜ ರುಗುಮಿಣಿ ಮಹಾದೇವಿಯು ನಾರಾಯಣನ ಸ್ವಯಂಭುವ್ವನ ಕಥೆಗಳಂ ಕೇಳ್ದು ನಂಬಿ ಮಾಡು ವುದು. ಪರಮಾಯಂ (ಗ)

ಶಿರಿಷೇಣನೃಪತಿ ಶಾಂತೀ
ಶ್ವರನಾದಂ ನೋಟ್ಪೊಡನ್ನದಾನಂ ಕಿಱಿದೇ ॥ ] ೬೦

ತನ್ನವರೆನ್ನವರೆನ್ನದೆ
ಸನ್ನುತಮತಿಯಾಗಿ ಸಕಲಜೀವಂಗಳುಮಂ ।
ತನ್ನಂ ರಕ್ಷಿಸುವಂತಿರೆ
ಬಿನ್ನಣಮೇನಱಿದು ರಕ್ಷಿಪುದು ಸತ್ಪುರುಷಂ ॥ ೬೧

[ ನೆಗಟ್ದಭಯದಾನಫಲದಿಂ
ಮೃಗನಯನೆ ವಿದಗ್ಧೆ ಸಂದ ರುಕ್ಮಿಣಿ ಲೋಕಂ ।
ಪೊಗಟೆ ಕಡುಜಸಮನಾಂತಳ್
ಜಗತೀವಳಯಕ್ಕೆ ಸೌಖ್ಯಭಾಜನೆಯಾದಳ್ ॥ ೬೨

ಉಕ್ಕೆವಮಿಲ್ಲದೆ ಮನದೊಳ್
ಕೊಕ್ಕರಿಸದೆ ಪೆಱರ ಮೇಲೆ ನೆವಮಿಕ್ಕದೆ ಕೈ ।
ಮಿಕ್ಕೊಳ್ಳಿಂ ಚಾತುರ್ವ
ರ್ಣ್ಯಕ್ಕಂ ಮಾಡುವುದು ರುಜೆಗೆ ದಿವ್ಯೌಷಧಮಂ ॥ ೬೩

[ಫಲಮಿನೌಷಧದಾನದ
ಫಲದಿಂ ತೀರ್ಥಕರನಪ್ಪ ಪುಣ್ಯಂ ಬೇಗಂ ।
ಫಲಿಯಿಸಿತು ವಿಷ್ಣುಗದಱಿಂ
ದಲಸದೆ ಭೈಷಜ್ಯದಾನಮಂ ಮಾಳ್ಕುಱಿಮಂ ॥ ] ೬೪

ಪರಮಾಯುಂ ಶ್ರೀಯು ಪೆಂಪುಂ ವನಿತೆಯರೊಲವುಂ ಕೀರ್ತಿಯುಂ ಧೈರ್ಯಮುಂ ಸುಂ
ದರರೂಪುಂ ವೀರಮುಂ ಭೋಗಮುಮೆಸೆವ ಮಹಾವೀರ್ಯಮುಂ ಚಾಗಮುಂ ವಿ
ಸ್ತರದಿಂ ಸದ್ಬುದ್ಧಿಯುಂ ತೇಜಮುಮಳವು ಮಪ್ಪೈಶ್ವರ್ಯಮುಂ ದಿವ್ಯ ಸೌಖ್ಯೋ
ತ್ಕರಮುಂ ಸಜ್ಞಾನದಿಂದಂ[1] ನರರ್ಗೆ ಸಮನಿಕುಂ ಸಂತತೋತ್ಸಾಹದಿಂದಂ ॥ ೬೫

[1] ಧರ್ಮದಿಂದಂ (ಗ)

ಹೀನಾಯುಮಂ ಕಷ್ಟರೂಪುಂ ಬಡತನದೊದವುಂ ಕುತ್ತಮುಂ ಪೀಡೆಯುಂ ವಿ
ಜ್ಞಾನಂಗೆಟ್ಟಪ್ಪುದುಂ ಕೂಟ್ಟಡೆಯದೆ ಮಱುಗುತ್ತಿಪ್ಪುದುಂ ಲೋಗರಿಂದೊಂ
ದಾನಂದಂಗೆಟ್ಟು ಚಿಂತಿಪ್ಪುದುಮನವರತಂ ಪೆಂಡರಿಂ ಮಕ್ಕಳಿಂ ಸ
ನ್ಮಾನಂಗೆಟ್ಟಪ್ಪುದುಂ ಕೂಡುಗುವೊದವಿದ ಪೂರ್ವಾರ್ಜಿತಾಘೌಘದಿಂದಂ ‖ ೬೬

ಎಂದಿಂತು ಕಿಱಿದಿನೊಳ್ ಧರ್ಮಮಂ ಪೇೞೆ ಕೇಳ್ದಱಿದು ಸಂತಸಂಬಟ್ಟು ದೇವನಿಕುರಂಬಂ ಸೌಧರ್ಮೇಂದ್ರಂಗೆ ಪೊಡೆಮಟ್ಟು ಬಿನ್ನಪಮೊಂಧಿಂತೆಂದರ್:— ೬೭

ಅರಿದು ನೆಗೞ್ತೆಗೆ ಫಲದೊಳ್
ಪಿರಿದಕ್ಷಯಲಕ್ಷ್ಮಿಯಿರ್ಪ ನೆಲೆ ಯೆನಿಸಿರ್ದೀ ।
ನಿರುಪಮನಿರ್ವಿಚಿಕಿತ್ಸೆಯ
ಯರಿವು ಗುಣಂಗಳೊಳಗೆ ಬಗೆವೊಡೆ [1] ಜಗದೊಳ್ ‖ ೬೮

[ಅದುಕಾರಣದಿಂ] ಕಲಿಕಾಲಮಹೋರಗವಿಷಪೂರಿತಮುಂ ಸದ್ಧರ್ಮನಿವಾರಿತಮುಮಪ್ಪ ಭರತಕ್ಷೇತ್ರದೊಳ್ ಗುಣಹೀನರೆಯಲ್ಲದೆ ಗುಣವಂತರುಂ ಪಾಪಹರರುಂ ಪ್ರಚುರವಿಲ್ಲದೊಪಂ ನಿರ್ವಿಚಿಕಿತ್ಸೆಯೊಳ್ ನೆಗೞ್ವರಂ ದೇವರೆಮಗೆ ಬೆಸೆಸಿಮೆನೆ ದಿವಿಜರಾಜನಿಂತೆಂದಂ:— ೬೯

[ರೌರವಪುರೇಶನಮಳನು
ದಾರಂ ಜಿನಪಾದಪದ್ಮಮಧುಪಂ ಸತ್ಯಾ ।
ಧಾರಂ ಧರಣೀಸ್ತುತ್ಯಂ
ಚಾರುಚರಿತ್ರಂ ನೃಪಾನ್ವಯೈಕಪವಿತ್ರಂ ‖] ೭೦

---

[1] ಪಿರಿದಮೃತಶ್ರೀಯಾಗೇಹಮೆನಿಸುವ ಪೆಂಪಂ । ಧರಿಸಿದ ನಿರ್ವಿಚಿಕಿತ್ಸೆಯು ಮರಿದುಗುಣಂಗಳೊಳಿನೋಡಬಗೆವೊಡೆ (ಗ)

ಬದ್ರಿಯನವಮಹಾರಾಜನೀಗಳಾ ಭರತಕ್ಷೇತ್ರದೊಳ್ ಪ್ರಸಿದ್ಧನೆಂ ಬುದುಂ ಅಮರಸಮಿತಿ ಮೆಚ್ಚಿ ಕೈಗಳಂ ಮುಗಿದು ನಾನಾಪ್ರಕಾರದಿಂ ಪೊಗೞುತಿರ್ಪುದುಮವರೊಳ್ ವಾಸವನೆಂಬ ದೇವಂ ದೇವೇಂದ್ರನ ಮಾತಿಂಗೆ ಬೆಱಗಾಗಿ, ೩೧

ನಿಶ್ಚಯಗುಣರೊಳರೆಂಬುದಿ
ದಾಶ್ಚರ್ಯಂ ಭರತಭೂಮಿಯೊಳ್ ಸುರಪತಿ ತಾಂ ।
ನಿಶ್ಚಲಗುಣಿಗಳನಲ್ಲದೆ
ದುಶ್ಚರಿತರನಘಸಮೇತರಂ ಪೊಗೞ್ದಪನೇ ॥ ೩೨

[ಪೊಗೞಲಱಿಯಂ ಭರತಕ್ಷೇತ್ರದೊಳೀಗಳಪ್ಪೊಡೆ ಕುದೃಷ್ಟಿಗಳ ನಲ್ಲದೆ ಸದ್ದೃಷ್ಟಿಗಳಂ ಕಾಣಲರಿದು, ಚಂಚಲಚಿತ್ತರನಲ್ಲದೆ ದೃಢಚಿ ತ್ತರಂ ಪಡೆಯಲರಿದು, ಕುಮಾರ್ಗಾನುರಾಗಿಗಳನಲ್ಲದೆ ಸನ್ಮಾರ್ಗಾನು ರಾಗಿಗಳಂ ಕೇಳಲ್ಬಾರದು, ವಿಚಾರಿಸುವೊಡಿಂದ್ರನ ನುಡಿಗೆ ನಗೆ ವಿಸ್ಮ ಯಮಾದಪುದಿದನಾರಯ್ದು ನೋಡವೇೞ್ಕುಮೆಂದು ದೇವಲೋಕದಿಂ ] [1] ರೌರವಪುರಕ್ಕವತರಿಸಿ ಋಷಿರೂಪಂ ಕೈಕೊಂಡು, ೩೩

ಬಡವಾಗಿರ್ದೊಡಲೇೞ್ಗೆಗೆಟ್ಟು ನಡು ನೀರ್ ಘೋರೆಂದು ಪಾಯ್ವಕ್ಷಿ ನೋ
ಡ್ಪೊಡೆ ಕೀವಿಂ ಕೊಳೆಯಿಂ ಮಹಾರಸಿಗೆಯಿಂ ಪೊಂಗಿರ್ದ ಪುಣ್ಗಂ ಟುಗಾ
ಲೊಡೆದೋರಂತಿರೆ ಸೋರ್ವ ರಕ್ತಮಧಿಕಂ ಕಂದಿರ್ದ ಮೆಯ್ಪೊನ್ನಿನಿಂ
ದುಡುಗಿರ್ದಂಘ್ರಿ ಕರದ್ವಯಾಂಗುಳಿಚಯಂ ಕುಂದಿರ್ದ ಹೀನಸ್ವರಂ ॥ ೩೪

ಮತ್ತಮೊಱತೆಯಂತೆ ಮೆಯ್ಯಿಂದೊಱೆವ ರಸಿಗೆಯುಂ, ದುರ್ಜ ನನ ನುಡಿಯಂತೆ ಕೊಂಕಿ ಪರಿದ ಜಡೆಗಳುಂ, ಕುಟಿಲನ ಚಿತ್ತದಂತೆ ಬಹುಪ್ರಕಾರಮಾದ ಮೆಯ್ಯ ಬಣ್ಣಮುಂ, ಒಂಟೆಯ ಕೊರಲಂತೆ ನೀಳ್ದ ಕೊರಲುಂ, ನೀತಿವಿದನಲ್ಲದರಸಿನ ನಾಡಂತೆ ಅಸಿಯಮಾದ

1 ಅದಂ ನೋಡುವೆನೆಂದಾರೌರವಪುರ (ಗ)

ಕಾಲ್ಗಳುಂ, ಊದುವ ತಿದಿಯಂತೆ ಪೊಂಗಿರ್ದ ಪುಣ್ಗಳುಂ, ಮುಖ ರೋಗದವರಂತೆ ಬಿಡದೆ ಸುರಿವ ಶ್ಲೇಷ್ಮಮುಂ, ಅಟಿಗಣ್ಣವರಂತೆ ಕೊಟೆ ಗಣ್ಗಳುಂ, ಮಾಗಿಯ ದೇಸಿಗನಂತೆ ಬೂದಿವೆರಸಿರ್ದೊಡಲುಂ, ಎಱೆಯ ಕೆಱೆಯಂತೆ ಬತ್ತಿರ್ದ ಗಲ್ಲಮುಂ, ಆನೆ ಮೆಟ್ಟಿದ ಸಂಬಳಿಗೆಯಂತೆ ಬತ್ತಿದ ಮೂಗುಂ, ಪೂಲಿಯ ಪಣ್ಣಂತೆ ಪೊಱವಾಯ್ವ ಕೀವುಂ, ಮುದು ಕರಂತೆ ಲೋಳಸುರಿವ ಬಾಯುಂ, ಕೀವುಗಿವಿಯವರಂತೆ ಕೀವು ಸುರಿವ ಕಿವಿಯುಂ, ಬೇತಾಳನಂತೊಳಸಾರ್ದ ಬಸಿಱುಂ, ಪಡಿಕೆಯಂತೆ ನಾಱು ತಿರ್ಪ ಪೆಬ್ಬುಣ್ಗಳುಂ, ಕೆಮ್ಮುಳ್ಳರಂತೆ ಮೇಲೆತ್ತುವ ಶ್ವಾಸಮುಂ, ಗುಡಿಲಂತೆ ಬಾಗಿದ ಬೆನ್ನುಂ, ಪುಟ್ಟನಂತೆ ಬೆರಲ್ಗಳಿಲ್ಲದ ತಳಮುಂ, ಅದ್ಭುತಮಾಗೆ ಮೂಱುಂಲೋಕದ ಭೀಭತ್ಸಮನೆಲ್ಲಮನೊಂದುಮಾಡಿ ವಿಧಾತ್ರಂ ರೂಪುಮಾಡಿದನೆಂಬಂತೆ ಹೀನರೂಪಂ ಕೈಕೊಂಡು ॥ ೭೫

ನೊಳಗಳ್ಮುಸುಂಕಿ ಮಾಣದೆ
ಬಳಸಿಯುಮೋರಂತೆ ಸುತ್ತಿ ನೆಱೆ ದುರ್ಗಂಧ ।
ಕ್ಕೆಳಸಿ ಮುನಿಪತಿಯನಗಲದೆ
ಸುೞಿವುವು ಜುಮ್ಮೆಂದು ಕಂಡವೆರ್ಪೇಸುವಿನಂ ॥ ೭೬

ಅಂತು ವಿಗುರ್ವಿಸಿದ ಕಿಸುಕುಳ ರೂಪಿಂ ಕೃತಕರ್ಷಿಯಾಗಿ ಪೌರವಪುರದೊಳಗೆ ಚಂದ್ರಗತಿಯಿಂ ಚರಿಗೆವೊರ್ದುಂ [1] ಕಂಡಕಂಡ ರೆಲ್ಲಂ, ಜಂತೆತ್ತಿದರಂತೋಕರಿಸುತ್ತುಂ, ಬಯಕೆವೆಂಡಿರಂತುಗು ೞುತ್ತುಂ, ನೀರೊಳಗೆ ಮುೞುಂಗುವರಂತೆ ಮೂಗಂ ಮುಚ್ಚಿಕೊ ಳ್ಳುತ್ತುಂ, ಬೆಳದ ಕೆಯ್ಯಂತೆ ತಲೆಯಂ ತೂಗುತ್ತುಂ, ಅಳಿಯನಂ ಕಂಡ ತ್ತೆಯಂತೆ ತೊಲಗುತ್ತುಂ, [ಋಷಿಯರಂತೆ ಕೊಕ್ಕರಿಸುತ್ತುಂ,] ಓಡಿ ಬಂದ ಬಂಟನಂ ಕಂಡೊಡೆಯನಂತೆ ಚೀಃ ಎನುತ್ತುಂ, ದಾಳಿಯಂ ಕಂಡರಂತೆ ಮೊಗದಿರಿದುತ್ತುಂ, ಬಲ್ವಗೆಯಂ ಕಂಡಂತೆ ಮೊಗಂದಿ ರುವುತ್ತುಂ, ಮುದುಪಜೊಜಂಗನಂ ಕಂಡ ಬೆಲೆವೆಣ್ಣಿನಂತೊಳಸಾ

1 ಚರಿಗೆಗುಡುವುದುಂ (ಗ)

ರುತ್ತುಂ, ಪೊಲ್ಲವೆಣ್ಣೆಯು ಸೆಱೆಯುಂತುಮ್ಮಳಿಸುತ್ತುಂ, ವೃದ್ಧನ ಕುತ್ತ ಮನೋವ್ಯಥೆ ತರುಣಿಯುಂತೆ ಪೇಸುತ್ತುಂ, ಪೇಳಿಗೆಯೊಳಿರ್ದ ಪಾವಿನಂತೆ ದುರ್ಗಂಧಕ್ಕೆ ಮಿಡುಕುತ್ತುಂ, [ಪಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ :— ‖ ೭೭

ಈ ತೊನ್ನಂಗೀಕಷ್ಟಂ
ಗೀತೊಡವಿದೇಕೆ ಬಗೆವೊಡೆ ಮಯ್ಗ |
ಟ್ಟಾತಂಗೆ ಕೂಟಿನಾವಂ
ಪ್ರೀತಿಯೊಳಿಕ್ಕಿದಪನೆಂದು ತಮ್ಮೊಳ್ ನಗುತುಂ ‖ ೭೮

ಇಂತಿರ್ಪಿನಂ ನೆರೆದ ನೆರವಿಯುಂ ಕಳೆದು ಕಿಱಿದಂತರಮಂ ಬರಲೆಡೆಯೊಳೊರ್ವಂ ಜಾತಿಮೂಢನಿಂತೆಂದಂ :— ೭೯

ಒಡಲೆಲ್ಲಂ ಕೆಟ್ಟುದು ಮಯ್
ಬಡವಾದುದು ಕಾಲ ಕೈಯ ಬೆರಲೆಲ್ಲಂ ತ |
ಮ್ಮಡೆಯಿಂ ಪೋದುವು ಪೇೞ್ಸಿ
ತ್ತೊಡೆ ಪುಟ್ಟರೆ ತನಗಿದೇಕೆ ಬಾೞ್ಕೆಯ ಮೋಹಂ ‖ ೮೦

ಎನುತ್ತುಮಿಪ್ಪುರ್ದುಂ ದುರ್ಗತಿಸಮನ್ವಿತಂಗೆ ಯೀಮಾತು ತಕ್ಕುದೆಂದು ನಗುತ್ತುಂ ಬರೆ ಪಚ್ಚಪಸಿಯೊಗ್ಗರೆಲ್ಲಂ ನೆರೆದಿಂತೆಂದರ್:— ೮೧

ಈ ದುಃಖಂ ತನಗೇಕೆ ಪೇೞಿ ಮನಸಂ ಸೈತಿಟ್ಟು ಬಾಟ್ವಾಸೆಯಿಂ
ಬಂದಂಬಿಟ್ಟು ವಿಮೋಹಮಂ ಬಿಸುಟು ಕಣ್ಣಂ ಮುಚ್ಚಿ ವೀರರ್ಕಳಿ
ನ್ನಾದಂ ಬಣ್ಣಿಸೆ ಕಿಚ್ಚನಿಕ್ಕಿ ಜಲಮಂ ಮೇಣಕ್ಕೆ ಪಾಯ್ದಣ್ಮಿ ಸ
ತ್ತೀದುಃಖಾಗ್ನಿಯನೋವೊ ನೀಗದಿರಲಿಂದೀ ಬಾೞ್ಕೆ ಮೇಣ್ಪಟ್ಟಮೋ ‖

ಎಂಬ ಮಾತಂ ಕೇಳ್ದು ಸಂಸಾರಸಮುದ್ರದೊಳ್ ಓಲಾಡುವವರ್ಗೀ ವಚನಮೆ ಪೂಜ್ಯಮೆಂದು ಪೋಗುತ್ತಿರೆ ವಿಚಾರಪರರಪ್ಪವರಿಂತೆಂದರ್: — ೮೨

ಪಸಿವುಂ ನೀರಡ್ಕೆಯುಮುಂ ದುರ್ವ್ಯಸನಮುಮಧಿಕಂ ಪೆರ್ಚುಗುಂ ತೊನ್ನರಪ್ಪ
ರ್ಗೆ ಸಮಂತೀಜೈನಮಾರ್ಗಂ ಕರಮರಿದದನಿಂತೋವೊ ತಾಳ್ದರ್ಮತ್ತಂ
ಪಸಿವಂ ನೀರಡ್ಕೆಯಂ ದುರ್ವ್ಯಸನಮುಮನಣಂ ಧೈರ್ಯದಿಂನಾಡೆಯುಂಸೈ
ರಿಸಿ ಶುದ್ಧಾಚಾರದಿಂದಂ ನಡೆವ ಗುಣದೊಳೀ ಯೋಗಿನಾಥಂ ಕೃತಾರ್ಥಂ ॥ ೮೪

ಎಂದು ನುಡಿವ ಮಾತಂ ಕೇಳ್ದು ಕರ್ಮೋಪಶಮಮುಮುಳ್ಳವರ್ಗಳ್ ಚಿತ್ತವಿದು ಮೇಣಲ್ಲಮೆಂದು ಮೆಲ್ಲಮೆಲ್ಲನೆ ನಡೆಯೆ ಜಾತಿಕರುಣಿಗಳಿಂತೆಂದರ್ :— ೮೫

ಕುರುವೊಂದೇಱಲ್ ಮೊದಲಾ
ಗಿರೆ ಸೈರಿಸಲಾರದೀ ಮಹಾಪುರುಷಂ ನಿ ।
ಷ್ಠುರಮಪ್ಪೀ ಪೆರ್ಗುತ್ತದ
ನಿರೋಧಮಂ ತಾಳ್ದಿ ಮಱುಗದೆಂತಿರ್ದಪನೋ ॥ ೮೬

ಎಂದು ಕೈಮುಗಿದವರಂ ಕಂಡು ದೇವಗತಿಗೆ ಸಲ್ವಂತಪ್ಪೀ ಲಘು ಕರ್ಮಿಗಳ್ಗೀ ವಚನಮೆ ಬರ್ಕುಮೆಂದು ಪೋಗೆ ಶ್ರಾವಕರೊಡನಾಡುವರಿಂತೆಂದರ್ : — ೮೭

ಈ ಕುಚಿಯೊಂದುವೇದನೆಗೆ ಬೆಚ್ಚದೆ ಕಾಂಕ್ಷಿಸಿ ತನ್ನ ಮೆಚ್ಚಿದಾ
ಹಾರಮುಮಕ್ಕೆ ಬಂದೊಡರೆಪಲ್ದಿಱಿದೋವದೆ ಕಂಡಕಂಡರಂ
ಸೈರಣೆಗೆಟ್ಟು ಬೇಡದೆ ಜಿನಾಗಮದೋಜೆಯೊಳೋಜೆದಪ್ಪದೀ
ವೀರನ ವೀರವೃತ್ತಿಯೊಳಮಂ ನೆಱೆ ಬಣ್ಣಿಸಲಾರ್ಪನಾವನೋ ॥ ೮೮

ಎಂದು ಬಣ್ಣಿಸುವವರಂ ಕಂಡು ನೇರಿದರ ನೀತಿ ಸುರಲೋಕಮಂ ಬುದು ತಪ್ಪದೆನುತ್ತುಂ ಪೋಗೆ ಮುಂದೆಡೆಯೊಳುರ್ವ ದುರ್ಜನರೊತ್ತ ನಾಡುವ ಚಪಳನಿಂತೆಂದಂ:— ೮೯

ಲೋಕದೊಳಾಂ ಕಾಣದರಿ
ಲ್ಲೀಕುತ್ತಂ ಪೊರ್ದಿ ನಮೆವ ಮೌನಿಸರಂ ಕೇ ।
ಳೀಕಷ್ಟನಂದದಿಂ ಮೆ
ಯ್ಯಾಕಾರಂಗೆಟ್ಟು ನಮೆವರಂ ಕಂಡಱಿಯೆಂ ॥ ೯೦

ಎಂಬುದುಂ ದುರ್ಜನಸಂಗತಿಯುಪ್ಪೀತಂಗೀ ನುಡಿಯೆ ಸೇವ್ಯ ಮೆಂದು ನುಡಿಯೆ, ಋಷಿಯರ ಮಾರ್ಗಮನಱಿದವರಿಂತೆಂದರ್:—೯೧

ಕರುಣಿಸಿ ಲೋಗರೀರುಜೆಗೆ ಮದ್ದುಗಳಂ ಮನವೊತು ಮಾಱೆಪ್ಪಡಂ
ಕರಮರಿದಣ್ಣ ನಾಮಱಿವೆವೀಮುನಿಪುಂಗವರೊಂದುಮಾರ್ಗಮಂ
ಕರಮತಿಭಕ್ತಿಯಿಂ ನಿಲದೆಯುಣ್ಬುದು ನೂರ್ಮಯು ಮುಂತೆಸಾಪೊಡಂ
ಪರಿಹರಿಸಲ್ಕೆವೇಱ್ಕುಮಳಪಿಲ್ಲದೆ ನೋಡ ಸಮಸ್ತವಸ್ತುವಂ ॥೯೨

ಎಂದು ಪೇೞ್ವುದುಮವರಂ ಕೃತಕರ್ಷಿ ನೋಡಿ ನೀರ ತಡಿ ಕೆಸಱಿಕ್ಕುವೆಂಬುದು ತಪ್ಪದೆಂದು ಪೊಗೞುತ್ತಿರೆ ಬುದ್ಧಿವಂತರ್ಕಂಡಿಂ ತೆಂದರ್ :— ೯೩

ಮಾತೇಂ ಕಡುದುಃಖಿತನ
ಪ್ಪೀತಂ ಮೊದಲಾದ ಜೈನಮಾರ್ಗಮನೆಂತುಂ ।
ಭೂತಳದೊಳ್ಬಡನೆನಲುಪ
ಮಾತೀತಂ ಜೈನರಿಂದಮಗ್ಗಳರೊಳರೇ ॥ ೯೪

ಮತ್ತೊಂದೆಡೆಯೊಳ್ ಜಡಮತಿಗಳಿಂತೆಂದರ್ :— ೯೫

ಆದರದಿಂದೀ ಮುನಿಪಂ
ಪೋದೊಡಮಾಪುರದೊಳವರ ತನುವಿನ ಮರ್ಗಂ ।
ಧೋದಯಮೆಱುದಿಂಗಳ್ಗಂ
ಪೋದಪುದೆ ಪೋಗಲಱಿಯದೆನುತ್ತುಂ ನಕ್ಕರ್ ॥ ೯೬

1 ನಿಲದಲುಣ್ಬುದು ನೋರ್ಮಯಿ ಮತ್ತೆಸಾಪೊಡಂ (ಕ. ಖ.)

ಮತ್ತೊಂದೆಡೆಯೊಳ್ ಶೂನ್ಯಹೃದಯರಿಂತೆಂದರ್ :—] ೯೭

ವ್ಯಾಧಿಯೊಳೆಲ್ಲಂ ಕುಷ್ಠ
ವ್ಯಾಧಿಯೆ ಕಡುಕಷ್ಟಮಿದಱ ವೇದನೆಯೆಂಬಂ ।
ಬೋಧಿಯೊಳಗಿರ್ದುದೇನಂ
ಸಾಧಿಸಲಿರ್ದಪನೊ ಬಿಡದೆ ಜೀವಮನೀತಂ ॥ ೯೮

ಮತ್ತೊಂದೆಡೆಯೊಳ್ ಬದ್ಧಮಿಥ್ಯಾದೃಷ್ಟಿಗಳಪ್ಪವರಿಂತೆಂ
ದರ್ :— ೯೯

ಶ್ರಾವಕರಪ್ಪವರ್ಗೆರೆದು ನಿಶ್ಚಯದಿಂ ಮುನಿಗಳ್ [1] ಕೊರ್ತು ನಾ
ನಾವಿಧಭಕ್ಷ್ಯದಿಂ ಪಲವುಬಾಡುಗಳಿಂ ತಿಳಿದುಪ್ಪದಿಂ ಸಮಂ
ತಾವಗಮಾವರೊಳ್ಗುಣಿಸನೆಂಬಖಿಲಾಷೆಯೊಳೀರುಜಾನ್ವಿತಂ
ಭಾವಿಸಿಕೊಂಡನೀತಪಮನೆಂದು ಜಡರ್ ನುಡಿಯುತ್ತುಮಿರ್ಪಿನಂ ॥೧೦೦

ಅನಂತಕಾಲಮುಂ ದುಃಖಭಾಜನರಪ್ಪವರ್ಗಮಾವುದು ಮಾರ್ಗ
ಮೆಂದು ಪೋಗುತ್ತುಮಿರ್ಪುದುಮೊರ್ವನಜ್ಞಶ್ರಾವಕಂ ಕಂಡು, ೧೦೧

ಬಾಯೊಳ್ ತಂಬುಲಮಿರ್ದಪು
ದೀಯೆಡೆಯೊಳ್ ಕೆಪ್ಪುಗಾಲೊಳಿರ್ದಪನೆಂದಾ । [2]
ಮಾಯಾವಿ ನಿಲಿಸಲಾಱದು
ಪಾಯದಿನೊಳಸಾರ್ದು ಪೊಕ್ಕನೊಂದಂಗಡಿಯಂ ॥ ೧೦೨

ಮತ್ತೊರ್ವಂ ಸಂಶಯಶ್ರಾವಕಂ ಕಂಡು, ೧೦೩

ಕರಮೆನ್ನ ಸತಿಯ ಮುಂದಾಂ
ಪರಮಶ್ರಾವಕನೆನೆಂದು ಬೀಱುವೆನಿವರಂ ।
ಭರದಿಂ ನಿಲಿಸದೊಡೆನ್ನಂ
ವರವಧು ನಗುಗೆಂದು ಕಾಣನೆಂಬಂತಿರ್ದಂ ॥ [3] ೧೦೪

ಮತ್ತೊರ್ವಂ ಮಿಶ್ರಶ್ರಾವಕಂ ಕಂಡು, ೧೦೫

---

1 ರುಷಿಯರ್ಗೆ (ಬ. ಕ.) ನಿಲಿಸನಿಲ್ಲರಣಮಿಲ್ಲೆಂದಾ (ಗ) 3 ನಿದ್ರೆಗೆಯ್ದಂ
ತಿರ್ದಂ (ಬ. ಕ)

ಲಲನೆಗೆ ನೀನೀ ಮುನಿಯಂ
ನಿಲಿಸೆನೆ ನಾನಱಿಯೆನೋವ್ರೊ ನೀನೇ ಮುನಿಯಂ । [1]
ನಿಲಿಸೆಂದಿರ್ವರುಮೊಗಳ್
ಕಲಹಂಗೆಯ್ಯುತ್ತುಮಿರ್ಪುದುಂ ಮುನಿ ಪೋದಂ ॥ ೧೦೬

[ಮತ್ತೊಂದೆಡೆಯೊಳೊರ್ವಂ ಪೊಸಶ್ರಾವಕಂ ಕಂಡು, ೧೦೭

ಆಮನೆಯವರಾಮನೆಯವ
ರೀಮನೆಯವರಟ್ಟ ನಾರ್ಪ ದುರ್ಗಂಧಕ್ಕಂ ।
ತೀ ಮುನಿಯಂ ನಿಲಿಸಿದರಿ
ಲ್ಲೀಮೊತೊ ನಾನುಮೊಱೆನೆಂದೊಳಗುಱಿದಂ ॥ ೧೦೮

ಮತ್ತೊರ್ವಂ ಕೇಳ್ಪಯಿಲ್ಲದ ಶ್ರಾವಕಂ ಕಂಡು, ೧೦೯

ಮುನಿಪನ ಬರವಂ ದೂರದೊ
ಳನುನಯದಿಂ ಕಂಡು ನಿಲಿಸಲಾಱದೆ ತಾಂ ತ ।
ನ್ನಿನಿಯಳನಿವರಂ ನಿಲಿಸೆನೆ
ವನಜಾನನೆ ಪಿತ್ತಲತ್ತಲೋಡಿದಳಾಗಳ್ ॥] ೧೧೦

ಮತ್ತೊರ್ವಂ ಯಶೋರ್ಥಿಶ್ರಾವಕಂ ಕಂಡು, ೧೧೧

ನೆರೆವನೆಯೊತನೆನ್ನೊಡನುದಾರಗುಣಕ್ಕೆ ಜಸಕ್ಕೆ ನಾಡೆ ಮ
ಚ್ಚರಿಸುತುಮಿರ್ಪನೀ ಮುನಿಯನಾಂ ಕರಮಾದರದಿಂದೆ ತಾಂಗಲೋ [2]
ಸರಿಸದೊಡಟ್ಟದೊಱುಗುಮವಂ ಮನೆಗೀಗಳೆ ಬಾರನನ್ನೆಗಂ
ತ್ವರಿತದೆ [3] ಪೋಪೆನೆಂದುಣಿಸುಮಂ ಬಿಸುಟೋಡಿದನಾತ್ಮಗೇಹದಿಂ॥೧೧೨

ಮತ್ತೊರ್ವನಱಿತಕ್ಕೆ ಬೀಗುವ ವೃಥಾಶ್ರಾವಕಂ ಕಂಡು, ೧೧೩

---

1 ಯಾನಾಱೆಸೊವೊಬಲ್ಲೊಡನೀನೇ (ಗ)

2 ಮುನಿಯನಾದರದಿಂದಮೆತಾಂಗಲೊಲ್ಲದೋ (ಗ)   3 ಬಾರದಾಂಸವಿಸ್ತರದೊಳ್‌ಪೋಪೆ (ಬ. ಕ.)

ಅಱಿವವರೆನ್ನನೊಂದೆಕೊರಲಿಂ ಪೊಗೞ್ವರ್ ಧರೆಗೆಲ್ಲಮಾನುಮಿ
ನ್ನಱಕೆಯು ಜೈನನಂ ನಿಲಿಸಲೊಲ್ಲದೆ ಮಾಣ್ದುೞಿದಿರ್ದನಪ್ಪೊಡಂ
ನಿಱಿಸದ ಕಷ್ಟನೆಂದುಲಿವರಿಲ್ಲಿಗುಪಾಯಮಿದೆಂದು ಬುದ್ಧಿಯಿಂ
ಪೊಱಮಡದಿರ್ದನಾತ್ಮಗೃಹದಿಂ ಕಳದಾಮುನಿ ಪಿಂಗಿ ಪೋಪಿನಂ ॥ ೧೧೪

[ಮತ್ತೊರ್ವಳ್ ಶ್ರಾವಕಿಯಿಂತೆಂದಳ್ :— ೧೧೫

ಶ್ರಾವಕನ ಸತಿಯೆ ನಾನುಂ
ಶ್ರಾವಕನಪ್ಪವನ ಮಗಳಯುಗ್ರೋಗ್ರತೆಯಿಂ ।
ದೇವರೆನಿಪಿವರ ಕಂಡೆಂ
ಭಾವಿಸುವೆಂದಿನಿಸುಪೇಸುತಪಮಂ ಕಾಣೆಂ ॥ ೧೧೬

ಮತ್ತಮೇನುಮಿಲ್ಲದ ನಿಱಿಶ್ರಾವಕಿ ಕಂಡು (ಇಂತೆಂದಳ್) :— ೧೧೭

ಓದಿನೊಳಂ ರೂಪಿನೊಳಂ
ಬಾದೇಂ ನಮ್ಮೊರೊಳಿರ್ದ ಮುನಿಗಳವೋಲೀ [1] ।
ಮೇದಿನಿಯೊಳೊಳರೆ ಮುನಿವರ
ರೀದೀನನ ತೆಱದಿನಟ್ಟಕೊಳ ನಾರ್ತಪರೇ] ॥ ೧೧೮

ಮತ್ತೊರ್ವಂ [ಪ್ರವೀಣನಪ್ಪ] ಬಡಶ್ರಾವಕನಿಂತೆಂದಂ :— ೧೧೯

ಬಡಲೆಂತುಂ ಕಿಡಲಿರ್ದುದು
ಕಿಡುವೊಡಲಂ ತವಿಸಿ ಕಿಡದ ಮುಕ್ತಿಶ್ರೀಯುಂ ।
ಪಡೆಯಲ್ಕೀಜಿನರೂಪಂ
ದೃಢಮನದಿಂ ಪಿಡಿವೊಡಱಿವರಿವರೆ ಕೃತಾರ್ಥರ್ ॥ ೧೨೦

ಮತ್ತೊರ್ವಂ ಬರ್ದನ ಶ್ರಾವಕಂ ಕಂಡು (ಇಂತೆಂದಂ) :— ೧೨೧

ಈ ರೂಪಿಂದಲ್ಲದೆ ಸಂ
ಸಾರದೊಳೊದವಿರ್ದ ದುಃಖಮಂ ಗೆಲಲರಿದೆಂ ।
ದಾರಯ್ದು ಜೈನರೂಪಂ
ಧೀರತೆಯಿಂ ಧರಿಸಿದಂ ಧರಾಧರಧೈರ್ಯಂ ॥ ೧೨೨

ಮತ್ತೊಂದೆಡೆಯೊಳ್ ನೆರೆದಿರ್ದ ನೀತಿವಿದರ್ಕಳಿಂತೆಂದರ್ [2] :— ೧೨೩

---

1 ರುಷಿಯುರವೋಲೀ (ಬ. ಕ.) 2 ಮತ್ತಂವಿವೇಕಿಗಳ್ ಕಂಡು (ಗ)

ಅರಸರೊಳಪ್ಪ ಬಾಧೆಗಳನಿಷ್ಟರಗಲ್ಕೆಯಿನೊಲ್ಲೆನೆಂಬ ಪೆಂ
ಡಿರ ದೆಸೆಯಿಂ ದರಿದ್ರತೆಯಿನೊತ್ತುವ ಕುತ್ತದಿನೆಂತುಮೆಕ್ಕುಮ
ಚ್ಚರಿಯೆ ಮಹೋಗ್ರದುಃಖತತಿ ಕರ್ಮಫಲೋದಯದಿಂದಮಾ ಮಹಾ
ಪುರುಷನೆ ಧನ್ಯನೀರುಜೆಯೊಳೀ ತಪಮಂ ನೆಱೆ ತಾಳ್ದಿದೋಳೆಱೆಯಿಂ॥ ೧೬೪

ಎಂದು ನಾನಾಪ್ರಕಾರದಿಂ ನುಡಿವ ಬಹುಜನದ ಮಾತುಗಳುಮಂ ಪಲವುಂತೆಱದ ಪರಿಣಾಮಂಗಳುಮಂ ಕಂಡು ಕೇಳ್ದು [ಕೃತಕರ್ಷ ತನ್ನೊಳಿಂತೆಂದಂ :—] ೧೬೫

ಮರನೆಂಬೀಪೆಸರೆಲ್ಲಾ
ತರುಗಳ್ಗಂ ತಾಂ ಸಮಾನಮೆನಿತಱೊಳಲ್ಲಾ ।
ತರುಗಳ ಪಣ್ಣುಂ ಪೆಸರಂ
ತಿರೆ ನೋಡ ಸಮಾನಮಾಗಲಱಿಗುಮೆ ಸಪಿಯೊಳ್ ॥ ೧೬೬

ಬಾಳೆಯ ಪಣ್ಣದೊಂದು ರುಚಿ ನೇಱಿಲ ಪಣ್ಣೊಳಗುಂಟೆ ಭಾವಿಸಂ
ದಿಳೆಯ ಪಣ್ಣದೊಂದು ರುಚಿ ಮಾವಿನ ಪಣ್ಣೊಳಗುಂಟೆ ಸಂದ ಕಿ
ತ್ತೀಳೆಯ ಪಣ್ಣದೊಂದು ರುಚಿ ಬೇವಿನ ಪಣ್ಣೊಳಗುಂಟೆ ತಾನಣಂ
ತಾಳಫಲಂಗಳೊಂದು ರುಚಿ ತುಂಬುರ ಪಣ್ಣೊಳಗುಂಟೆ ಲೋಕದೊಳ್ ॥ ೧೬೭

ಅಂತು ಮಾನಿಸರ್ಗೆ ಮಾನಿಸರೆಂಬ ಪೆಸರ್ ಸಮಾನಮಾದೊಡಂ ಮಾತುಗಳುಂ ಪರಿಣಾಮಮುಮಂ ಬೇಱೆವೇಱೆಯುಕ್ಕುಮದಱಿಂ ॥ ೧೬೮

ಪಾದಱಿಯದೊಂದು ಕುಸುಮಾ
ಮೋದಂ ಪೊರ್ದಲ್ಕೆ ನೀರ್ ಸುಗಂಧಮದಕ್ಕುಂ ।
ಬಾದೇಂ ಬೇವಿನ ಕುಸುಮಾ
ಮೋದಂ ಪೊರ್ದಲ್ಕೆ ಕಯ್ಪೆಯಕ್ಕುಂ ತೋಯಂ ॥ ೧೬೯

[ಅಂತೆ ಲೋಕದ ಜೀವಂಗಳ್ಗಂ] ಶುಭಕರ್ಮದ ಪೊರ್ದುಗೆಯಿಂ ಸುಬುದ್ಧಿಯುಮಶುಭಕರ್ಮದ ಪೊರ್ದುಗೆಯಿಂ ದುರ್ಬುದ್ಧಿಯುಮಕ್ಕುಮೆಂದು ತನ್ನೊಳ ಭಾವಿಸುತ್ತುಂ ॥ ೧೭೦

ಪರಮಜಿನೇಶ್ವರಚರಣಾಂ
ಬುರುಹದ್ವಯಮತ್ತಮಧುಪನೊದ್ಧಾಯನಭೂ |
ವರವಲ್ಲಭನರಮನೆಗಾ
ಗಿರೆ ಕೃತಕಮುನೀಂದ್ರನೊಯ್ಯನೊಯ್ಯನೆ ನಡೆದಂ [1] ‖ ೧೩೧

ಅನ್ನೆಗಂ ‖ ೧೩೨

ವರರತ್ನದ ದೀವಿಗೆಗಳ್
ಕರಮಲ್ಲದೆ ತೊಳಗಿ ಬೆಳಗಿ ಮಿಂಚಂ ಸುತ್ತಂ |
ಪರಪಿದವೊಲೆಸೆಯೆ ನಾನಾ
ವಿರಚನೆಯಿಂದೊಪ್ಪಿ ತೋರ್ಪ ಸಿಂಹಾಸನದೊಳ್ ‖ ೧೩೩

[ಇದು ಪೂರ್ವಾಚಲಮಲ್ಲದಿನ್ನಿದು ಸುರೇಂದ್ರಾಶಾದ್ರಿ ಭಾವಿಪ್ಪೊಡಿ
ನ್ನಿದು ನೋಡೊಪ್ಪುವ ಮೂಡಲಲ್ಲದಿದು ತಾಂ ಮೂಡಲ್ಕನೋರಾಗದಿಂ
ದಿದನೇಱಿರ್ದವನಲ್ಲನಂಬುಜಸಖಂ ಪ್ರತ್ಯಕ್ಷಶೀತಾಂಶು ಕೇ
ಳಿದನೇಱಿರ್ದವನರ್ಕನೆಂದೆನಿಸಿ ತಾಂ ಸೌಂದರ್ಯದಿಂ ಭೂಭುಜಂ ‖೧೩೪

ಅವಷ್ಟಂಭದೊಳ್] ಕುಳ್ಳಿರೆ, ೧೩೫

ತೊಳಗುವ ಶಶಿಮಂಡಲಮಂ
ಬಳಸಿದ ತಾರಾಳಿಯಂತೆ ಸುತ್ತಿರ್ದು ಭೂ |
ತಳಪತಿಯುಂ ನೃಪಸುತರುಂ
ವಿಳಾಸದಿಂ ಮಕುಟಬದ್ಧರುಂ ಪಂಡಿತರುಂ ‖ ೧೩೬

ಮುತ್ತಿನಹಾರಮೊಪ್ಪೆ ಕುಚಮಂಡಲದೊಳ್ ಪೊಸಜಾದಿ ಚೆಲ್ವನೀ
ಯುತ್ತಿರೆ ದೇಸಿಯಿಂ ಸಿಮಿರ್ದ [2] ಸೋರ್ಮುಡಿಯೊಳ್ ನೊಸಲಲ್ಲಿ
ಶೋಭನಂ
ಚಿತ್ತಿರೆ ಚಾರುಚಂದನದ ಬೊಟ್ಟು ದುಕೂಲಮಮರ್ಕೆವೆತ್ತು ಚೆ
ಲ್ವಿತ್ತಿರ ಪೆಂಡವಾಸದೊಳಮೆಂಡಿರಲಂಕೃತಿಯಿಂದಮಿರ್ಪಿನಂ ‖ ೧೩೭

---

1 ವರನಪ್ರಸಾದಸರಸಿಜ | ನರಮನೆಗೆ ಮನೋನುರಾಗದಿಂ ಬರೆ ಮುನಿಪಂ (ಬ. ಕ.)

[illegible] (ಗ) 2 [illegible] (ಗ)

ನಾರಂಗಸ್ತನೆಯರ್ ಮನೋಹರೆಯರಂಭೋಜಾಕ್ಷಿಯರ್ ಬಿಂಕದಿಂ
ದೋರಂತೊಪ್ಪಿ ವಿಳಾಸಮಂ ಮೆಱೆಯುತುಂ ಲಾವಣ್ಯಮಂ ಬೀಱುತುಂ
ಹಾರಾದ್ಯಾಭರಣಂಗಳಿಂ ವಿವಿಧವಸ್ತ್ರಾನೀಕದಿಂದಂ ಚಮ
ತ್ಕಾರಂ ಕೈಮಿಗೆ ಪೊನ್ನ ಚಾಮರಮನುರ್ವೀವಲ್ಲಭಂಗಿಕ್ಕಿದರ್ ॥ ೧೩೮

ಪಡೆವಳನಾಗೆ ಹಾರಮಮರ್ದೊಪ್ಪುವ ಪೆರ್ಮೊಲೆ ತಂತ್ರಮಾಗೆ ಪೊಂ
ದೊಡವಿನೊಳಾದ ನಿಸ್ವನಮೆ [1] ದುಂದುಭಿಯಾಗೆ ವಿಳಾಸಲೋಚನಂ
ಕಡುಪಿನ ಬಾಣಮಾಗೆ ಧನುವಾಗೆ ನೆಗಟ್ಟೆಯ ಪುರ್ಬು ಮೇಲುದುಂ
ಗಡಗುಡಿಯಾಗೆ ಕಾಂತೆಯರನಂಗನ ಪೆರ್ವಲದಂತಿರೊಪ್ಪಿದರ್ ॥ ೧೩೯

ಕೊಸಗಿನ ಪೂವಿನೊಂದು ರುಚಿಯಂ ತನು ತುಂಬಿಯ ಬಂಬಲಂ ಕುರು
ಳ್ಪೊಸದಳಿರಂದಮಂ ಕರತಳಂ ದನಿ ಕೋಗಿಲೆಯಂ ನುಗುಳ್ಗಳಂ [2]
ಮಿಸುಗುವ ದಂತಪಂಕ್ತಿ ಲತೆಯಂ ನಳಿತೋಳ್ಗಳೆ ಪೋಲ್ತು ನಾಡೆ ರಂ
ಜಿಸುವ ವಿಳಾಸಿನೀನಿಕರದಿಂ ಪೊಸಸುಗ್ಗಿವೊಲಿರ್ದುದೋಲಗಂ ॥ ೧೪೦

ಚಾರುವಿಶಾಲಲೋಚನಯುಗಂ ಕಣೆಯಂ [3] ಪೊಲೆ ಚಕ್ರಮಂ ಕಚಂ
ಸಾರಮಸಿಪ್ಪ [4] ಚೆಂಬರಿಗೆಯಂ ನಳಿತೋಳಸಿಯಂ ಸಮಂತು ಪೋ
ಲ್ತಾರಮಣೀಸಿಕಾಯುದಿನನಂಗನ ನಚ್ಚಿನ ದಿವ್ಯಶಸ್ತ್ರಭಂ
ಡಾರದ ಗೇಹಮಂ ಸೊಬಗಿಂ ಪೋಲ್ತುದು ಭೂಮಿಸಿತೇಶನೋಲಗಂ॥೧೪೧

[ನಿಱಿದಲೆ ನೀಳ್ದ ಪುರ್ಬು ನಳಿತೋಳ್ನಡುಗಣ್ ಸುಲಿಪಲ್ ಘನಸ್ತನಂ
ತುಱುಗೆಮೆ ಕೋಮಲಾಂಗನುಳವಟ್ಟ ಕುರುಳ್ಪವಳಾಧರಂ ಕರಂ
ಮಿಱುಗುವ ದಂತಪಂಕ್ತಿ ನೆಯನಂ ಗೆಡೆಗೊಂಪ ಮುಖಂ ನಖಂ ಕಚಂ
ನೆಱೆ ರಮಣೀಯಮಾಗೆ ರಮಣೀನಿಕರಂ ನೆರೆದಿರ್ದುದೊಪ್ಪದಿಂ ॥]೧೪೨

ಬೆರಲೊಳು ರತ್ನಮುದ್ರಿಕೆ ವಿರಾಜಿಸೆ ಕಂಠದೊಳೊಪ್ಪೆ ಮುತ್ತಿನೈ
ಸರಮುಳವಟ್ಟ ಹಸ್ತಯುಗದೊಳ್ ಮಣಿಕಂಕಣಮೆಯ್ದೆ ಶೋಭಿಸು

---

1 ಬೆಳ್ಪೊಡರಿಪನೂಪುರಸ್ವರಮೆ (ಗ). 2 ಕೋಗಿಲೆಮೌಕ್ತಿಕಂಗಳಂ (ಗ)
3 ವಿಳಾಸನೇತ್ರಯುಗಳಂ ಸರಲಂ (ಗ) 4 ನೇರಿದವಪ್ಪ (ಗ)

ತ್ತಿರೆ ಕಟಿಸೂತ್ರಮೊಪ್ಪೆ ಕಟಿಯೊಳ್ ತಲೆಯೊಳ್ ನೆಱೆ ಚೆಲ್ವ ಪೂಗಳೊ
ಪ್ಪಿರೆ ಗಣಿಕಾಜನಂ ಸ್ಮರನ ದೀಪದ ಪುಲ್ಲೆಯೊಲಿರ್ದುದೊಪ್ಪದಿಂ॥ ೧೪೩

[ಪೂಸಿದಗೊಂದು ಕುಂಕುಮಮಂ ತಾಂ ತಿಮಿರಾಗೆ ಲಲಾಟಪಟ್ಟದೊಳ್
ಭಾಸುರಮಪ್ಪುದೊಂದು ತಿಲಕಂ ತಿಲಕಕ್ಕೆಣೆಯಾಗೆ ಸೆಳ್ಳುಗುರ್
ದೇಸಿಯಿನೊಪ್ಪುಪತ್ತ್ರಮಿರ್ದ ಕೂರಲಗಾಗೆ ವಿಳಾಸದಿಂದಮಿ
ರ್ದಾ ಶಶಿವಕ್ತ್ರೆಯರ್ನೆಗಟ್ದ ಕಾಮನ ಮಾಸಮಳಂಬೊಲೊಪ್ಪಿವರ್ ॥]

ಪೊಳೆವ ವಿಶಾಲಲೋಚನದ ಮುತ್ತಿನಹಾರದ ಬೆಳ್ಪು ನೀಲಕುಂ
ತಳದ ಪೊದಱ್ದ ಕಾಡಿಗೆಯಕಪ್ಪಧರಂಗಳ ಪಾಣಿಪಲ್ಲವಂ
ಗಳ ಗಡೆಗೊಂಡ ಕೆಂಪು ಕರಮೊಪ್ಪಿರೆ ಶೋಭೆಯಿನೊಪ್ಪುವಾಳ್ದ [1] ಕೋ
ಮಳೆಯರನಂಗರಾಜನ ವಿನೋದದ ಚಿತ್ರಪಟಂಬೊಲೊಪ್ಪಿದರ್ ॥ ೧೪೪

[ಧರಣೀಧ್ರನೋಲಗಕ್ಕಂ
ಸುರಪತಿಯೊಡ್ಡೋಲಗಕ್ಕಮಿದುಮಿಗಿಲೆಂಬೋಲ್ ।
ಕರಮೊಪ್ಪಿರ್ದುದು [2] ಸಭೆಯಾ
ತರಳಾಕ್ಷಿಯರಿಂ ಪೊದಱ್ದ ನೂರ್ಮಡಿಚೆಲ್ವಂ ॥] ೧೪೫

ರಸದ ಮೞೆ ಕರೆದಪುದು ಸಂ
ತಸದಿಂ ಮಾಣದೆ ರಸಾಯನದ ಕೂಸದೊಳಂ ।
ಬೆಸಕದಿನಸದಳಮೆಸೆದುದು
ರಸಗೀತಂ ವಸುಮತೀಶನಾಸ್ಥಾಯಿಕೆಯೊಳ್ ॥ ೧೪೬

ಇವು ಮತ್ತೇಭಂಗಳುದ್ದಂನುಡಿಯುದೆ ಭಯದಿಂದಟ್ಟಿದಂ ಮಾಳವಂ ಮ
ತ್ತಿವು ಜಾತ್ಯಶ್ವಂಗಳುರ್ಕಂ ಬಿಸುಟು ವಿನಯದಿಂದಟ್ಟಿದಂ ಪಲ್ಲವಂ ಮ
ತ್ತಿವು ನಾನಾರತ್ನಮಂ ಮುಂತೊಱೆದ ಮಹಿಮೆಯಿಂದಟ್ಟಿದಂ ಚೌಳಕಂ ತಾ
ನಿವು ಕಾಶ್ಮೀರೇಶನೊಲ್ದಟ್ಟಿದ ನಿರುಪಮವಸ್ತೂತ್ಕರಂ ದಿವ್ಯವಸ್ತ್ರಂ ॥

---

ಶೋಭಗ ಮುಖ್ಯಮಾದ (ಗ)    ವಿವರಗುಣಸಾ । ಗರಮೊಪ್ಪಿರ್ದುದು (ಬ. ಕ.)

ಎಂದು ಪರದೇಶಾಧೀಶ್ವರರಟ್ಟಿದ ಕಪ್ಪಮುಮಂ ಬಂದ ದೂತರುಮಂ ತೋಱಿ ಬಿನ್ನಪಂಗೆಯ್ಯೆ ದೌವಾರಿಕರಿಂ [ದಮೆಸೆದುದು; ಮತ್ತಂ. ೧೪೯

ಮನಸಿಜರಾಜಂ ನೋೞ್ಪ
ಜನಕ್ಕೆ ಲೇಸಾಗಿ ಠಕ್ಕನಿಕ್ಕಿದನೆಂಬಂ ।
ತನವರತಂ ರಂಜಿಸಿದುವು
ಜನಪತಿಯೋಲಗದೊಳಾದ ಪಲವುಂ ನೃತ್ಯಂ ॥ ೧೫೦

ವಾರಸ್ತ್ರೀನಿಕುರಂಬದಿಂ ಮುಕುಟಬದ್ಧಾನೀಕದಿಂ ಭವ್ಯರಿಂ
ಭೂರಾಮಾಧಿಪರಿಂ ಬುಧಪ್ರತತಿಯಿಂ ಸಾಮಂತರಿಂ ಜಾಣರಿಂ
ಶೂರರ್ಧೀರರುದಾರರಪ್ಪ ಪಲಬಱ್ಚಾತುರ್ಯರಿಂ ವೀರರಿಂ
ದೋರಂತೊಪ್ಪಿದುದುನ್ನತಿಕ್ಕೆಯೊದವಿಂ ಭೂಪಾಲನೋಡ್ಡೋಲಗಂ ॥

ಅಂತಮರೇಂದ್ರಲೀಲೆಯಿಂದೊಡ್ಡೋಲಗಂಗೊಟ್ಟಿರ್ದೋದಾಧ್ಯನ] [1] ಮಹಾರಾಜಂ ತನಗೆ ಮುಕ್ತಿಶ್ರೀಯಟ್ಟಿದ ದೂತನಂತೆ ಬರ್ಪ ಕೃತಕರ್ಷಿಯುಂ ಕಂಡು, ೧೫೧

ಮನದೊಳ್ ರಾಗಂ ಭೋಂಕನೆ
ತನಗಾಗಳ್ ಪುಟ್ಟೆ ಹಸ್ತಕಮಲದ್ವಯಮಂ ।
ಜನನಾಥಂ ಮುಗಿದು ಮುನೀಂ
ದ್ರನನಿದಿರ್ಗೊಳಲೆಂದು ಭಕ್ತಿಪೂರ್ವಕದಿಂದಂ ॥ ೧೫೨

ದುಕೂಲವಸ್ತ್ರದುತ್ತರಾಸನಂಬರಸಿ ಇದಿರಾಗಿ ಬಂದು, ೧೫೩

ವರಮುಕ್ತಿಶ್ರೀಯಲ್ಲಿಗೆ
ಭರವಶದಿಂದೇೞಲೆಂದು ನಿಜ ಣಿಗೆಯ್ಯನೂ ।



1 ಮೇಲೆ ಬರ್ಪ ಪಾವನಪುರುಷನುದಯಿಸಿರ್ದ ಒಡ್ಡೋಲಗದ ಮಹಿಮೆಯಿಂದಿರ್ದ ಬುದಾಧ್ಯನ (ಗ)
ವಸ್ತ್ರಮನುತ್ತರಾಸನಮನಿಕ್ಕಿ ಕೊಂಡು (ಬ.ಕ.)

ಪ್ಪಿರೆ ಪಿಡಿವ ಮೊಱಕ್ಕಯಿಂದಂ
ನರೇಶ್ವರಂ ಪಿಡಿದನಾ ಮುನೀಂದ್ರನ ಕಾಲಂ ‖ ೧೫೫

[ತಾಂ] ಗುಣನಿಧಾನದೀಪವರ್ತಿಯುಪ್ಪುದಱಿಂ ಗುಣನಿಳಯನ ಪಾದಕ್ಕೆಱಗಿ ಪೊಡೆಮಟ್ಟು ನಿಲಿಸಿ [ರಾಗದಿನೊಡ] ಗೊಂಡು ಬಂದುಚ್ಚಾಸನದೊಳ್ಕುಳ್ಳಿರಿಸುವುದುಂ, ೧೫೬

ನಿಲಲಾಱದೆ ದುರ್ಗಂಧ
ಕ್ಕಲಸಿ ಕೆಲರ್ಜಗುಲ್ದು ಪೋದರಪನಿಪನಲ್ಲಿಂ ।
ತೊಲಗಿದೊಡೆ ಕೊಲ್ಗುಮೆಮ್ಮಂ
ಮುಳಿದೆಂದುಂ ಕೆಲಬರಂಜಿ ಪೋಗದೆ ನಿಂದರ್ ‖ ೧೫೭

ಮೊಗೊಡದಂತಿರೆ ತಳೆಯುಂ
ಬಾಗಿ ಕೆಲನೆರ್ೀಡಲಾಱದಿರ್ದವರ್ನದೊಳ್ ।
ರಾಗಂಗೆಟ್ಟು ಕೆಲಂಬರ್
ಮೊಗಂ ಮುಚ್ಚಿರ್ದರಾಱದುಮ್ಮಳಿಸುತ್ತುಂ ‖ ೧೫೮

ಮತ್ತಂ ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ, ಪರಿಚಾರಕಿಯರಿರಲಾಱದೆ ನುಸುಳ್ದೊಡೆ, ಬಾಣಸಿಗರಿದೇನ್ಪ್ರಾಣ ಪುತ್ತೆಂದು ಪೋಗೆ, ಕರವಳರರಿದಾಯ್ತೆಂದು ಪಿಂಗೆ, ಡವಕೆಯವರ್ ಶ್ರಮಂಗೊಂಡ ಪಾತ್ರದಂತುಮ್ಮಳಿಸೆ, ಚಾಮರಿಯ ದರ್ವಮಂಪೊಕ್ಕ ಕಣ್ಣಂತೆ ನೋಡಲಾಱದಿರೆ, ಅರಸಿಯರ್ ಪರವಶಮಾದರಂತೆ ಕೇರ್ಗಳಂ ನೆಮ್ಮೆ, ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ, ವಿಳಾಸಿನಿಯರ್ ವಿಳಾಸಂಗೆಟ್ಟರಂತೆ ಕುಂದೆ, ನಾರಿಯರ್ ವಾರಿಸ ಲಾಱದಕ್ಕರಿಗರಂತೆ ಮಿನುಕೆ [1], ಸಂತೋಷದಾಳಿಯರ್ [2] ತೊಂತು ವೋದ ಪರವಿಯಂತೆ ಬಿಟ್ಟು ಪರಿಯೆ, ಪ್ರಭಾವತೀಮಹಾದೇವಿ ತನ್ನೊಳಿಂತೆಂದಳ್:— ೧೫೯

1 ಪಾಡಿಸಲಱಿಯದಕ್ಕರಿಗರಂತೆ ಮಿಸುಕದಿರೆ (ಬ. ಕ.)
ಸಂತೋಷವಾರಿಯರ್ (ಬ,ಕ,ಗ,)

ವೆರರತ್ನಂ ಪೇಲೊಳ್ ಬಿ
ದ್ದಿರೆಯದು ಪೊಲ್ಲೆಂದು ಬಿಸುಡಲಪ್ಪುದೆ ತಪದೊಳ್ ।
ಪಿರಿಯರೆನಿಸಿದರ ರುಜೆಗೋ
ಸರಿಸುವುದೆ ಜಿನೇಂದ್ರಮಾರ್ಗದೊಳಗಂ ಬಲ್ಲಂ ॥ ೧೬೦

ಎಂದು ತನ್ನ ಮನದೊಳ್ ಕೊಕ್ಕರಿಕೆಯಿಲ್ಲದೆ ದರಿದ್ರಂ ನಿಧಾನಮಂ ಕಂಡಂತೆ ಸಂತೋಷದಿಂದೊರ್ವಳ ನಿಲ್ವುದುಂ [1], ಸಮ್ಯಕ್ತ್ವಚೂಡಾಮಣಿ ನವವಿಧಪುಣ್ಯದೊಳಂ ಸಪ್ತಗುಣಂಗಳೊಳಂ ನೆರೆದು ಮುನಿಗಾಹಾರದಾನಮಂ ಕುಡುವುದುಂ ಕಂತಪ್ರಮಾಣಮುಂಡು, ೧೬೧

ಮಱುಗೆ ಶರೀರಂ ಕಣ್ಗಳ್
ಪೊಱಮಡೆ ಮೇಲ್ಸ್ವಾಸಮೆತ್ತೆ ಸೆಡೆದಳ್ಕೆ ಬಲಂ ।
ಪಱಿವಡೆ ಜೊಮ್ಮನ ಜೋಲ್ದಂ
ತೆಱಪಂ ಪಾರ್ದಿರದೆ ತಡೆಯದೊರ್ಮೆಯೆ ಮುನಿಪಂ ॥ ೧೬೨

ಕರಮಲ್ಲದೆ ದುರ್ಗಂಧಂ
ಪಿರಿದಾಗೆ ನಗಾಗ್ರದಿಂದೆ ಧಾರಾಜಲಮುಂ ।
ವರೆಗೀಱಮಂತೋವೆಂದೋ
ಕರಿಸಿ ನರೇಶ್ವರನ ಮೇಲೆ ಕಾಱಿದನಾಗಳ್ ॥ ೧೬೩

ಅಂತು ಕಾಱುವುದುಂ, ೧೬೪

ಶಿರದಿಂದಂ ಮುಖದಿಂದಂ
ಕೊರಲಿಂದಂ ಕುಚಯುಗಂಗಳಿಂದಂ ಪಾದಂ ।
ಬರೆಗಂ ಪೆರ್ವೊನಲಂತಿರೆ
ಪರಿತಂದುದು ಮುಚ್ಚಿ ಮುಸುಱಿಕೊಂಡವನಿಪನಂ ॥ ೧೬೫

ಕೊಚೆಯುಂ ಬಿಣ್ಪಂ ಲೋಳೆಯು
ಮಳವಲ್ಲದ ವಜ್ರಲೇಪದಂತಿರೆ ಧಾತ್ರೀ ।
ತಳಪತಿಯು ಮೆಯ್ಯೊಳೆಲ್ಲಂ
ತಳಪಂ ತಳೆದಂತೆ ಕೂಡಿ ಪತ್ತಿತ್ತಾಗಳ್ ॥ ೧೬೬

1 ಕಾಂಡಂತೆರಾಗಿಸುತ್ತಿರೆ, (ಗ)

ಅಂತು ತನಗೆ ಸುಗತಿವನಿತೆ ಮೋಕ್ಷಪದಕ್ಕಡ್ಡಮಾದ ಕರ್ಮರಾಜನೊಡ್ಡಂ ಕಿಡಿಸಿ ಬಂದೆನ್ನೊಳ್ ಬೇಗಂ ನೆರೆಗೆಂದು ತನ್ನ ಕೂರ್ಮೆಯಿಂದಟ್ಟಿದ ವಜ್ರಕತ್ತಳದಂತಿರ್ದ ಲೋಳೆಗೆ ಕೊಕ್ಕರಿಸದೆ, ಮುನಿಪತಿಗೆ ಛರ್ದಿಯಾದುದಕ್ಕೆ ನಾಡೆಯುಂ ಮನದೊಳ್ ನೊಂದು, ೧೬೭

ಕೆಟ್ಟೆಂ ಮುನೀಂದ್ರನಿಚ್ಛೆಯು
ನೋಟ್ಟಜೆಯಿಂದಱಿಯದೇಂ ಮಹಾಪಾತಕನೋ ।
ತೊಟ್ಟನೆ ಕೊಳಲನ್ನಿಚ್ಛೆಗೆ
ನೆಟ್ಟನೆ ಬಡ್ಡಿಸಿದೊಡಿನಿತುನೋವಾಯ್ತೀಗಳ್ ॥ ೧೬೮

ಎಂದು ತನ್ನಂ ತಾನೆ ನಿಂದಿಸಿಕೊಂಡು ತಡವರಿಸಿ ಬೀೞ್ವ ಮುನಿನಾಥನಂ ಬೀೞಲೀಯದೆ ತಕ್ಕೈಸಿಕೊಂಡು ಕಣ್ಗಳಂ ತಳಂಗಳಿಂದಂ ನೀವಿ ಮೆಯ್ಯೊಳಾದ ಲೋಳೆಯೆಲ್ಲಮಂ ತೊಳೆದು ಕಳೆದು ; ೧೬೯

ಪಿರಿದಪ್ಪ ಶ್ರಮದಿಂ ನಿ
ತ್ತರಿಸದೆ ತಲೆತಿರುಗಿ ಮಱುಗಿ ಮೇಲುಸಿರಿಟ್ಟು ।
ಧರೆಗೆ ಕೆಡೆದುರುಳ್ವ ಮುನಿಪನ
ನರಸಂ ತಾಳ್ದಿರ್ದನೊಂದುಜಾವೆಂಬರೆಗಂ ॥ ೧೭೦

ಅಂತಿರ್ದು ಶ್ರಮಂ ಪೋದಿಂಬೞಿಕ್ಕ [ ಮೊಯ್ಯನೆ ಮಾಯಾರುಷಿಯುಂ ತಾನುಂ ಪ್ರಭಾವತೀಮಹಾದೇವಿಯುಂ ಮಜ್ಜನದಮನೆಗೊಯ್ದು ಬಿಸಿನೀರಿಂ ] ಮೆಯ್ಯೆಲ್ಲಮಂ ಕರ್ಚಿ [ ಮೆಯ್ಯ ನೀರಂ ದುಕೂಲಾಂಬರದಿಂ ತೊಡೆದು ಕಳೆದು, ೧೭೧

ಪಿರಿದಪ್ಪದೊಂದು ಮಣೆಯೊಳ್
ವರಮುನಿಯುಂ ತಂದು ಕುಳ್ಳಿರಿಸಿ ನೃಪನೆಂದಂ ।
ಪಿರಿದಪ್ಪ ಕ್ಲೇಶಂ ನಿಮ
ಗಿರದೆನ್ನಿಂ ಪಾಪಕರ್ಮನಿಂದಾಯ್ತಿನಿಸುಂ ॥ ೧೭೨

ಎಂದು ವಿನಯದಿಂ ಪೊಡೆವಟ್ಟು ಪ್ರಭಾವತೀಮಹಾದೇವಿ ಮಜ್ಜನಂಬೊಕ್ಕು ದಿವ್ಯವಸ್ತ್ರಮನುಟ್ಟು ಮಗುಳ್ದು ಬಂದು ಕೃತಕರ್ಷಿಯ ಕಾಲನೊತ್ತುತ್ತುಮಿಂತೆಂದಳ್. - ][1] ೧೬೩

ತನುವಂ ಭಾವಿಸುವೊಡಮೆ
ಲ್ಲೆನಿತುಂ ಶುಚಿಯಲ್ಲಮಶುಚಿದೇಹಮನಿದನಿ ।
ನ್ನನುಪಮಮೆಂದೆನಲಾಗದು
ಜಿನಮತದೊಳ್ಪೊಂದಿಯಱಿವಿನೊಳ್ನೆಗಳ್ದ ನರಂ ॥ ೧೬೪

ಪುತ್ತ್ರಂಮಾಡುವ ಒಱಲೆಯಂತೆ ಪಾಪಮಂ ನೆಱಪುವುದು, ಕಿರ್ಚಿನಂತೆ ಪೊರ್ದಿದರಂ ಕಿಡಿಸುವುದು, ಪಂದೆಯಂತೆ ಪೆಱಗುಱುವುದು, ಬಡತನದಂತೆ ಬಗೆದುದನೀಯದು, ಪುಣ್ಣಿನಂತೆ ನೋವಂ ಮಾಱ್ಪುದು, ಗ್ರಹದಂತೆ ಪೀಡೆಯಂ ಮಾಱ್ಪುದು, ಬಸಿಱ ಕುತ್ತದಂತೆ ನವೆಯಿಸುವುದು, ಪಂದಿಯಂತೆ ಜೊಪ್ಪಂಗೊಳ್ವುದು, ಕೃಷ್ಣಪಕ್ಷದಂತೆ ಶುಭಮನೊಲ್ಲದು, ಪಗೆಯಂತೆ ಭಯಮಂ ಮಾಱ್ಪುದು, ಕೂಸಿನಂತೆ ಕೂಡದುದಂ ಬಯಸುವುದು, ಪುಲ್ಲ ಕಿಚ್ಚಿನಂತೆ ಸ್ಥಿರಮಲ್ಲದು, ಪೊಳ್ತಿನಂತೆ ನಿಲಿಸಲರಿದಪ್ಪುದು, ತೊಱೆಯಂತೆ ಪಾಯಲರಿದಪ್ಪುದು ಗಾಳಿಯಂತೆ ಪಿಡಿಯಲರಿದಪ್ಪುದು, ಪೊಲೆಗೇರಿಯಂತೆ ಮೂಳಯಮಯಮಪ್ಪುದು, ಕೆರ್ಪಿನಂತೆ ತೊಗಲನುಳ್ಳುದು, ಬೀಣೆಯಂತೆ ನರದೊಳ್ ಕೂಡಿದುದು, ತಿಪ್ಪೆಯಂತೆ ಪೇಸುಪತಮಪ್ಪುದು, [ ಪಡಿಕೆಯಂತೆ ದುರ್ಗಂಧಮಪ್ಪುದು,] ಕೋೞಿಯಂತೆ ಕ್ರಿಮಿಪ್ರಿಯನಪ್ಪುದು, [ ಜಿಗುಱೆಯಂತೆ ನೆತ್ತರಪ್ರಿಯನಪ್ಪುದು], ನೊಳವಿನಂತೆ ಶ್ಲೇಷ್ಮಪ್ರಿಯನಪ್ಪುದು, ಪಶುವಿನಂತೆ ಮೂತ್ರಪ್ರಿಯನಪ್ಪುದು, ತೊನ್ನಿನಂತೆ, ರಸಿಗೆಯನುಳ್ಳುದು ಸೊಂಬನಂತೆ ಅಲಸಮಪ್ಪುದು, ಮೂರ್ಖನಂತಪ್ಪುದಂ ಮಾಡದು, ಬೆಟ್ಟೀಱಕಾಱನಂತೆ ಧರ್ಮಮನೊಲ್ಲದು, ಪಿಶಾಚಿಯಂತೊಳ್ಳಿತ್ತಂ ಮಾಡದು,

---

1 ಮಣಿಯುಮೇಲೆ ಕುಳ್ಳಿರಿಸಿ ತಾಮಿರ್ವರುಂ ಮಜ್ಜನಂ ಬೊಕ್ಕು ಬಂದು ಕೃತಕರುಷಿಯ ಕಾಲನೊತ್ತುತ್ತುಮಿಂತೆಂದಳ್ (ಗ).

ಪೆಣನಂತೆ ಬಾರ್ತೆಯಲ್ಲದು, ಮೊಳೆಯಂತೆ ಭಂಪಮಲ್ಲದು, ಪೊಲೆಯ ನಂತೆ ವರ್ಣಕ್ಕೆ ಸಲ್ಲದು, ಕೆಡುವ ಭಂಡದಂತೆ ಮಾಱುವೋಗದು, ಪೇನಂತೆ ಪತ್ತುವಿಡದು, ಬಣಗಿನಂತೆ ನೇರಿತಲ್ಲದು, ಬಗೆವಂದೀ ಶರೀರಂ ಕಷ್ಟಮಿದಂ ಬಿಟ್ಟು ರತ್ನತ್ರಯಭಾವನೆಯಿಂ ಸ್ವಸ್ವರೂಪದೊಳ್ ಕೂಡುವುದೆಂದು ಧರ್ಮಮಂ ಪೇೞ್ದರಸಿನಂದಕ್ಕೆ ವಾಸವಂ ವಿಸ್ಮಯಂ ಬಟ್ಟು ತನ್ನೊಳಿಂತೆಂದಂ : — ೧೭೫

ಸುರಪತಿಯ ಪೊಗೞ್ತೆಗಮೀ
ನರನಾಥಂ ಸಚ್ಚರಿತ್ರದೊಳ್ [1] ಭಾವಿಪೊಡು ।
ಮ್ಮ(?)ೞೆಯೊಳ್ ನೂರ್ಮಡಿ ಪಿರಿಯಂ
ಧರಣೀಂದ್ರನುಮೀವನ ಗುಣಮನಾರ್ಪನೆ ಪೊಗೞಲ್ ॥ ೧೭೬

ಎಂದು [ ಪೊಗೞ್ದು, ] ೧೭೭

ಪರಮಜಿನಚರಣಸೇವನೆ
ವೆರಸಿರ್ದವನಂತ್ಯಕಾಲದೊಳ್ ಕಷ್ಟಕಳೇ ।
ವರಮಂ ಬಿಸುಟ್ಟು ದಿವ್ಯ
ಸ್ವರೂಪನಪ್ಪಂತು ವಾಸವಂ ತತ್ಕ್ಷಣದೊಳ್ ॥ ೧೭೮

ಕೃತಕರೂಪಮಂ ಬಿಟ್ಟು, ೧೭೯

ತನುರುಚಿ ಮಂದರಾಚಳದ ಪೊಂಗೆಣೆಯಾಗಿ ಪಳಂಚಿ ಮಿಂಚೆ ಸೂರ್ಯನ ಕಿರಣಂಬೊಲೊಪ್ಪೆ ಪೊಳವಾಭರಣಾವಳಿ ದಿವ್ಯವಸ್ತ್ರದಿಂ ಬಿನೊಳಮದೊರ್ಪ್ಪಿ ಶೋಭಿಸೆ ಸುರೇಶ್ವರನಾಗಳ ದಿವ್ಯಮಪ್ಪ ಮುನ್ನಿನ ನಿಜದೇಹಮಂ ನೆಱಿಯೆ ತಾಳ್ದು ನರೇಂದ್ರನ ಮುಂದೆ ನಿಲ್ವುದುಂ ॥

[ ಉದ್ದಾಯನಮಹಾರಾಜಂ ಮುನ್ನಿನ ಋಷಿರೂಪಮಂ ಬಱಿಕ್ಕನ ದಿವ್ಯಸ್ವರೂಪಮಂ ತೊಟ್ಟನೆ ಕಂಡು ವಿಸ್ಮಯಂಬಟ್ಟಪ್ಪುದುಂ ತದ್ದೇವನಿಂತೆಂದಂ ·—] [2] ೧೮೧

1 ಶುದ್ಧವೃತ್ತಿಯೊಳ್ (ಗ.)

2 ಅರಸನುಮರಸಿಯುಂ ನೋಡುತ್ತುಮಿರ್ಪುದುಮಿಂತೆಂದಂ (ಗ)

ಸುರರಾಜನ ಸಭೆಯೊಳ್ ದೇ
ವರ ತಂಡಂ ದರ್ಶನದ ತ್ರಿತೀಯಾಂಗದೊಳಾರ್ ।
ಭರತಕ್ಷೇತ್ರದೊಳುಳ್ಳದ
ರೆರಡಿಲ್ಲದೆ ದೇವ ಪೇೞ್ವುದೆನೆ ದೇವೇಂದ್ರಂ ॥ ೧೪೨

ಒದ್ದಾಯನ ಮಹಾರಾಜನೊಳ್ಳದ [ನೆಂದು ಕೊಂಡು ಕೊನೆದು,

ಪೊಗೞೆ ಸುರಸಮಿತಿ ನೆಱೆ ಕೈ
ಮುಗಿವುದುಮೆನಗಮರಪತಿಯ ಮಾತಿಂಗೆ ಕರಂ ।
ಜಗತೀವಿಸ್ಮಯಮುಮಂ ಕೈ
ಮಿಗೆ ನಿನ್ನಂ ನೋಡಲೆಂದು ಬಂದೆಂ ದಿವದಿಂ ॥] [1] ೧೪೪

ಎನ್ನ ಪೆಸರ್ಮಾಸವನೆಂಬುದು [ಸಕಲಗುಣಂಗಳೊಳಂ ನೀನಾ ಸೌಧರ್ಮೇಂದ್ರನ ಪೊಗೞ್ತೆಗಂ ಸಾಸಿರ್ಮಡಿ ಮಿಗಿಲ್ ;] ನಿನ್ನ ಗುಣಮ ನಾರಯ್ವೆನೆಂಬಾತಂ [2] ಚಾಮೀಕರಶೈಲಮಂ ಗುದ್ದಲಿಯಿಂದಗುೞ್ದು [ಕೆಡೆಯೆ] ನೂಂಕುವೆನೆಂಬೆಗ್ಗನಂ ಪೋಲ್ಕುಮೆಂದು ಪಲತೆಱದಿಂ ಸ್ತುತಿಯಿಸಿ ಪ್ರಭಾವತೀಮಹಾದೇವಿಯ ಮೊಗಮಂ ನೋಡಿ, ೧೪೫

ಎನಿಸುಜ್ಜ್ವಳಮಾದೊಡೆ [3] ಚಂ
ದ್ರನ ತೇಜಂ ರವಿಯ ತೇಜಮಂ ಗೆಲ್ಗುಮೆ ಪೆ ।
ಣ್ಣೆನಿತೊಳ್ಳಿದಳಾದೊಡೆ [4] ಪುರು
ಷನೊಳಾದ ಮಹಾಗುಣಂಗಳಂ ಪೋಲ್ತಪಳೇ ॥ ೧೪೬

[ಅದುಕಾರಣದಿಂ ಪ್ರಭಾವತೀಮಹಾದೇವಿಯ ಗುಣಮಂ ಮತ್ತಿನ ವನಿತೆಯರೊಳ್ ಪೋಲಿಸಲ್ಬಾರದು ;] ೧೪೭

---

1 ನೊಳ್ಳಿದನೆನೆ ಕೇಳ್ದು ನೋಡಲ್ಬಂದೆಂ (ಗ)
2 ನಿನ್ನ ಸಮ್ಯಕ್ತ್ವಮಂ ಪರೀಕ್ಷಿಸುವನೆಂಬಾತಂ (ಗ)
3 ಮಾದೊಡ (ಗ),
ಮಾದೊಡಂ (ಗ)

ನರಪತಿ ಕೇಳೀ ವನಿತೆಯ
ಪರಮಗುಣಂಗಳನೆ ನೆಱೆಯೆ ಬಣ್ಣಿಪೆನೆಂಬಂ ।
ದುರಗಾಧಿಪತಿಗಮರಿದೆನೆ
ನರರಾರ್ತಪರೆಂದು ನುಡಿವುದೊಂದೆಗ್ಗಲ್ತೇ ॥ ೧೮೮

[ಅದೆಂತೆಂದೊಡೆ, (ಈ) ಪುಣ್ಯಮೂರ್ತಿಗೆ ಶೀಲವತಿಯೆಂಬೀ ಪೆಸರ್ ಪ್ರಸಿದ್ಧವಾದ ಪ್ರಪಂಚಮೆಲ್ಲಮಂ ಲೇಸಾಗಿ ಪೇೞ್ವೆಂ] [1] ಕೇಳೆ ವೆಂದಿಂತೆಂದಂ :— ೧೮೯

ಪರದೇಶಾಧೀಶ್ವರರಂ
ಧುರದೊಳ್ ತಳ್ತಿಱಿದು ಕಪ್ಪಮಂ ಕೊಳಲೆಂದೋ ।
ಸರಿಸದೆ ಸೆಡೆದಿರದೆ ಮಹೀ
ಶ್ವರ ನೀನದಟಿಂದಮೆತ್ತಿ [2] ಪೋಪುದುಮಿತ್ತಲ್ ॥ ೧೯೦

ನಾರಾಯಣವತ್ತೆಯೆಂಬಳ್ ಪ್ರಭಾವತೀಮಹಾದೇವಿಯ ಬಾಲ್ಯ ಕಾಲದ ಕೆಳದಿ ಕಿಱಿಯಂದೆ ರಂಡೆಯಾಗಿ ತರ್ಕಶಾಸ್ತ್ರಂಗಳನೋದಿ ಪಂಡಿತೆ [ಯೆಂದು ಪೆಸರನಿಟ್ಟುಕೊಂಡು ಬ್ರಹ್ಮಚಾರಿಯಾಗಿ ಶಾಪಾನು ಗ್ರಹಸಮರ್ಥೆಯರೆನ್ನಂ ಬಿಟ್ಟು ಪೆಱರೊರ್ವರುಮಿಲ್ಲೆಂದು ತನ್ನಂ ತಾನೆ ಲೋಕದೊಳಗುರ್ವುಮಾಡಿಕೊಂಡಿರೆ, ೧೯೧

ನಾಡವರೆಲ್ಲಂ ನೆರೆದುಂ
ನೀಡಿರದಚ್ಚರ್ತು ಭಕ್ತಿಪೂರ್ವಕದಿಂ ಕೊಂ ।
ಡಾಡೆ ಗುರುವೆಂದು ಧರೆಯೊಳ್
ಕೂಡೆ ಮಹಾರೂಢಿಯಾಗೆ ಪೆಂಪೊದವುವಿನಂ ॥ ೧೯೨

ಸುತ್ತಲುಮಿರ್ದೊಂದುದಿವಸಂ ಪ್ರಭಾವತೀ ಮಹಾದೇವಿಯು ತನ್ನ ಕಿಱಿಯಂದಿನ ಕೆಳತನಮಂ ನೆನೆದು ತನ್ನೊಳಿಂತೆಂದಳ್:— ೧೯೩

1 ಈ ಮಹಾಸತಿಗೆ ಶೀಲವತಿಯೆಂಬ ಪೆಸರಾದ ವೃತ್ತಾಂತಮಂ. (ಗ)

2 ಶ್ವರನಾದರದಿಂದಮೆತ್ತಿ. (ಗ)

ವಿನಯದಿನವಳ ಶ್ರಾವಕ
ತನಮಂ ಲೇಸಾಗಿ ಕಿಡಿಸಿ ತಿಳಿಪಿ ಬಳಿಕ್ಕಾ ।
ವನಿತೆಯನೇಗೆಯ್ದುಂ ಮ
ಲ್ಲನೆ ನಯದಿಂದೆನ್ನ ಧರ್ಮದೊಳ್ಪತ್ತಿಸುವೆಂ ॥ ೧೯೪

ಎಂದು ಪೂಣ್ದು ರೌರವಪುರಕ್ಕೆವಂದರಮನೆಯ ಬಾಗಿಲೊಳ್ ನಿಂದು ಪಡಿಯರರಂ ಕರೆದು ನಿಮ್ಮ ಬಾಲಸಖಿಯಪ್ಪ ನಾರಾಯಣದತ್ತೆ ನಿಮ್ಮಂ ಕಾಣಲೆಂದು ಬಂದಳೆಂದು ಪ್ರಭಾವತೀಮಹಾದೇವಿಗೆ ಪೇಳಿಮೆಂಬುದುಂ, ಅವರ್ಪೋಗಿ ಪೊಡೆಮಟ್ಟು ಬಿನ್ನಪಮೆಂದಿಂತೆಂದರ್:—

ಅಣುಗಿನ ಕೆಳದಿಯೆ ನಾಂ ಸ
ದ್ಗುಣಿಯೆನಿಸಿದ ನಿಮ್ಮ ರಾಜಪತ್ನಿಯ ನಾರಾ ।
ಯಣದತ್ತೆಯೆಂಬೆನೆನ್ನಂ
ಕ್ಷಣದಿಂದೊಯ್ದನ್ನ ನಿಮ್ಮ ಕಾಣಿಸವೇಳ್ಕುಂ ॥ ೧೯೫

ಎಂಬುದುಂ, ಮುನ್ನಮೆ ತಂದು ಕಾಣಿಸಲಣ್ಮದೆ ದೇವಿಯಲ್ಲಿಗೆ ವಂದೆಮಗೆ ಬೆಸನಾವುದು ಎನೆ ಪ್ರಭಾವತೀಮಹಾದೇವಿ ನಾರಾಯಣದತ್ತೆ ಮುನ್ನಿನಂತೆ ಶ್ರಾವಕಿಯೆಂದು ಧರ್ಮವಾತ್ಸಲ್ಯದಿಂ ತಂದು ಕಾಣಿಸಿಮೆಂಬುದುಂ, ಪಡಿಯರರ್ ತಂದು ಕಾಣಿಸುವುದುಂ, ಅರಸಿ][1] ನಾರಾಯಣದತ್ತೆಯ ಮಿಥ್ಯಾವೇಷಮಂ ಕಂಡು [ಮನ್ನಿಸದು]ದಾಸೀನಂಗೆಯ್ದಿರ್ಪುದುಂ [ನಾರಾಯಣದತ್ತೆ] ಮುನಿದು, ೧೯೬

ಉರಗನ ವಿಷಮೇಱಿದರುಂ
ಸಿರಿಯುಳ್ಳರು ಮದ್ದುಗುಣಿಕೆಯುಂ [2] ತಿಂದವರುಂ ।
ಪಿರಿದುಂ ಪಿತ್ತಾಧಿಕರುಂ
ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ ॥ ೧೯೭

---

1 ಯೆಂಬ ಪೆಸರೆಸೆಯೆ, ತೊಳಲುತ್ತಿರ್ಪಕೆ ರೌರವಪುರಕ್ಕೆ ವಂದರಸಿಯಂ ಕಾಣ್ಬುದುಂ (ಗ)

2 ಮತ್ತಕುಣಿಕೆಯುಂ (ಗ)

[ನೀನೆನಗಾಬಾಲ್ಯಕಾಲದೊಳ್ ಮಾಡುವ ಮನ್ನಣೆಯನೀಗಳ್ ಸಿರಿಯಿಂದುದಾಸೀನಂಗೆಯ್ದ ಯೆಂಬುದುಮರಸಿ ಮಱುಮಾತುಗುಡಲೊಲ್ಲದುಸಿರದಿರ್ಪ್ಪುದುಂ] [1] ಕೆಲದೊಳಿರ್ದ ವಿದಗ್ಧಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನಱಿದು ಆಕೆಯ ಬಾಸೆಯೊಳಿಂತೆಂದಳ್ [2] :—

ವಾರಿಜಷಂಡಮಂ ಪದೆದು ಪೊರ್ದಿ ಪೆರ್ಮೊಲ್ ಕಳಹಂಸೆ ತಿಪ್ಪೆಯಂ
ಸಾರಮಿದೆಂದು ಪೊರ್ದುಗುಮೆ ತಾರಗೆಗಳ್ಕೆಱೆವಿಂದುವಂ ಸವಿ
ಸ್ತಾರದೊಳೊಂದುವಂತೆ ಪದೆದೊಂದುಗುಮೇ ರವಿಯಂ ಸುಧರ್ಮದೊಳ್
ಧೀರರೆನಿಪ್ಪರುಂ [3] ಮರುಳ್ ಪೊರ್ದ ಪೆರೇ ಜಡರಂ [4] ದುರಾತ್ಮರಂ ॥೨೦೦

[ಎಂಬುದುಮಾಕೆಯ ಮಾತಿಂಗೆ ನಾಡೆಯುಂ ಸಿಗ್ಗಾಗಿ ತನ್ನ ನೆಲೆಗೆಪೋಗಿ ಪ್ರಭಾವತೀಮಹಾದೇವಿಯ ಶ್ರಾವಕತ್ವಮಂ ಕಿಡಿಸುವ ಉಪಾಯಮಂ ಚಿಂತಿಸಿ ತನ್ನೊಳಿಂತೆಂದಳ್ :—] [5] ೨೦೧

ಕೇರಳಮಂಡಲಾಧಿಪತಿಯಪ್ಪೊಡೆ ಜೈನನುದಗ್ರನಪ್ಪ ಕಾ
ಶ್ಮೀರಮಹೀಶನಪ್ಪೊಡೆ ಜಿನೇಶ್ವರಧರ್ಮದೊಳೊಳ್ಳಿದಂ ಗುಣಾ
ಧಾರನುದಾರನಂಗಧರಣೀಶ್ವರನಪ್ಪೊಡೆ ಜೈನಮಾರ್ಗದೊಳ್
ಸಾರನಪೂತಿಪಾಂಡ್ಯಧರಣೀಶ್ವರನಪ್ಪೊಡೆ ಧರ್ಮತತ್ಪರಂ ॥ ೨೦೨

[ಮತ್ತಮುಱಿದ ದೇಶಾಧೀಶ್ವರರುಂ ಧರ್ಮಾನುರಾಗಿಗಳಲ್ಲದೆ ಪರಾಂಗನಾಪೇಕ್ಷಕರಲ್ಲರವರಲ್ಲಿಗೆ ಪೋದೊಡಮೆನ್ನೆತ್ತಿಕೊಂಡ ] [6] ಕಾರ್ಯಂ ತೀರದು, [ ಮಾಳವೇಶ್ವರನಪ್ಪ ] ಚಂಡಪ್ರದ್ಯೋತನಿಂ ತೀರ್ಗುಮಾತಂ, ೨೦೩

---

1 ಎಂದೊಡರಸಿ ನುಡಿಯದಿರೆ (ಗ)

2 ಮನವುನಱಿದು ವಕ್ರೋಕ್ತಿಯಿಂದಮಿಂತೆಂದಳ್ (ಗ)

3 ನೇರಿದರಪ್ಪರುಂ (ಗ) 4 ಖಳರಂ (ಗ)

5 ಎಂಬುದುಂ ಮುನಿದು ಪೋಗಿ ಪ್ರಭಾವತಿದೇವಿಯಂ ಬ್ರತವಂ ಭಂಗ ಮಾಡುವೆನೆಂಬ ಬಗೆಯಿಂ (ಗ) 6 ಅವರೊಳಮೆನ್ನ (ಗ)

ಸ್ತ್ರೀಯೆಂಬೀಪೆಸರಿಂ ಪೆಣ್
ನಾಯಾದೊಡಮೊಲ್ವ ಕಷ್ಟನೀಪ್ರತ್ಯಕ್ಷಂ ।
ಸ್ತ್ರೀಯಂ ಸುರವಧುವಂ ಪೋ
ಲ್ವೀಯುವತಿಯನಱಿದೊಡೊಲ್ಲೆನೆಂಬವನಲ್ಲಂ ॥ ೨೦೪

ಎಂದು ಪ್ರಭಾವತಿಯ ರೂಪಂ ಪಟದೊಳ್ ಸವಿಸ್ತರಂ ಬರೆದು ಕೊಂಡುಜ್ಜಯಿನಿಗೆ ಪೋಗಿ ಚಂಡಪ್ರದ್ಯೋತಂಗೆ ತೋಱುವುದು ಮಾತಂ ಕಂಡು, ೨೦೫

ಮಸೆದಲರ ಪೊಳೆವ ಬಾಣದಿ
ನಸದಳವೊಡನೊಡನೆ ಸೆರಗುವಾದೊರ್ಮೆಯುಸ್ಸೈ ।
ಏಸದಿಸೆ ಮನೋಜರಾಜಂ
ವಸುಧೀಶಂ ಗಂಡುಗೆಟ್ಟು ಬೆಂಡಾಗಿರ್ದಂ ॥ ೨೦೬

[ಇರ್ದಿದಾರ ರೂಪು ನೀವಿದನಿಲ್ಲಿಗೇಂ ಕಾರಣಂ ತಂದಿರೆನೆ, ನಾರಾಯಣದತ್ತೆ ನೃಪನೊಲವನಱಿದಿಂತೆಂದಳ್:—] [1] ೨೦೭

ಕೌರವಪುರಾಧಿನಾಥನ
ನಾರಿಯ ರೂಪಿದು ಮಹೀಶ ಭಾವಿಸುವೆಂದಾ ।
ನಾರಿ ಮನೋಜನ ಸತಿಗಂ
ಶ್ರೀರಮಣಿಗಮಿಂದ್ರವನಿತೆಗಂ ಮಿಗಿಲಪ್ಪಳ್ ॥ ೨೦೮

[ನಿನಗಾಕೆ ಪ್ರಾಣವಲ್ಲಭೆಯಾಗಲೆವೇೞ್ಕುಂ ನಿನಗೆ ತಕ್ಕಳೆಂಬುದನಱ್ಕರಿಂ ಪೇೞಲೆಂದು ಬಂದೆನೆಂಬುದುಂ, ನಾರಾಯಣದತ್ತೆಗಂಗ ಚಿತ್ರವುಂ ಕೊಟ್ಟು ಸಂತಸಂಬಡಿಸುವುದುಂ ತನ್ನ ಬಗೆ ತೀರ್ದುದೆಂದು ರಾಗಿಸಿ ಶಕುನಮೊಂದು ಸೆಱಗಂ ಗಂಟಿಕ್ಕಿಕೊಂಡು ಮಾಳವೇಶ್ವರಂಗಿಂತೆಂದಳ್ :— ೨೦೯

1 ಇದಾರ ಪಟವೊಂದು ಬೆಸಗೊಳ್ವುದುಂ (ಗ)

ಪಲವೇನೊದ್ದಾಯುನಭೂ
ಲಲನೇಶನುಮೂರೊಳಿಲ್ಲ ಪಿರಿದುಂ ನೀಂ ಪೆ ।
ರ್ವಲದಿಂದಲ್ಲಿಗೆ ಪೋದೊಡೆ
ಲಲಿತಾಂಗಿ ಮನೋನುರಾಗದಿಂ ಕೈಸಾರ್ಗುಂ ॥ ೨೧೦

ಇಂದು ನಾಳೆಯೆಂದೆಣಿಸದೆಯಿರ್ದೆಯಪ್ಪೊಡೆ, ಒದ್ದಾಯನವ ಹಾರಾಯನನ್ನಗಂ ಬರ್ಪನಾತಂ ಬಂದನಪ್ಪೊಡೆ ನಿನಗಾಸ್ತ್ರೀರತ್ನಂ ದೊರೆಕೊಳ್ಳಳೆಂಬುದುಂ, ಆ ಮಾತಿಂಗೆ ಒಡಂಬಟ್ಟನ್ನೇಳಿಸಿಪುರ್ದು ಚಿತವೊಲ್ಲೆಂದು ಚತುರ್ಬಲಂವೆರಸೆತ್ತಿ ಕತಿಪಯಪ್ರಯಾಣಂಗಳಿಂ ಬಂದು ರೌರವಪುರಮಂ ಮುಱುಸೂಳಾಗಿ ಮುತ್ತಿಕೊಂಡು ಸಾಳಂ ಕಾರನೆಂಬ ತನ್ನ ಪೆರ್ಗಡೆಯಂ ಬರಿಸಿ ಪ್ರಭಾವತಿಯಲ್ಲಿಗಟ್ಟುವುದುಂ ಅವಂ ಬಂದಿಂತೆಂದಂ :—][1] ೨೧೧

ಎಮ್ಮರಸಂ ಮಾಳವಪತಿ
ಸಮ್ಮತಮಪ್ಪಂತು ನಿಮಗೆ ಸುಖಮಪ್ಪಂತಿ ।
ನ್ನೆಮ್ಮಂ ನಿಮ್ಮಡಿಯಲ್ಲಿಗೆ
ತಾಂ ಮುದದಿಂದಟ್ಟಿದಂ ಮಹೋತ್ಸವದಿಂದಂ ॥ ೨೧೨

ಅಂತಿಂತೆನ್ನದೆ ಪಲವಂ
ಚಿಂತಿಸದೆ ಪೊಡರ್ಪನುಡುಗಿ ನಿಮಗಂ ತಮಗಂ ।
ಸಂತಸದಿಂದಂ ಸುಖಮ
ಪ್ಪಂತಿರೆ ಕೈಕೊಳ್ವುದೆಮ್ಮ ನುಡಿಯಂ ನಯದಿಂ ॥ ೨೧೩

[ಎಂದೊರ್ಮೆಯೆ ತಮ್ಮ ಕಾರ್ಯಮಂ ಪೇೞದೆ ವಿನಯದಿಂ ದುಚಿತವಚನಂಗಳಿಂ ನುಡಿದು ಬೞಿಯಂ ತಮ್ಮರಸನ ಮಹಿಮೆಯನಿಂ ತೆಂದು ಪೊಗೞ್ದಂ :—][2]

---

1 ನಿನಗರಸಿಯಾಗಲ್ತಕ್ಕಳಾಕೆಯು ಗಂಡನೂರೊಳಗಿಲ್ಲ; ನಿನಗಿದವಸರವೆನೆ ದಾಳಾದಾಳಿಯಿಂ ಬಂದು ಪುರವಂ ಮೂಱುಸುತ್ತಾಗಿ ಸುತ್ತಿಕೊಂಡು ಸಾಳಂಕಾಯ ನೆಂಬ ಪೆಗ್ಗಡೆಯನಟ್ಟುವುದುಮಾತಂ ಪ್ರಭಾವತಿದೇವಿಯಲ್ಲಿಗೆ ಬಂದಿತೆಂದಂ. (ಗ)

2 ಎಂದುಮತ್ತಮಿಂತೆಂದಂ (ಗ)

ಸಿರಿಗೆಮ್ಮರಸಂ ಮಘವನ
ದೊರೆಯರುಮಂ ಭರತರಾಜನನ್ನರುಮಂ ಖೇ।
ಚರಪತಿಯನ್ನರುಮಂ ದೇ
ವರಾಜ[1] ನನ್ನರುಮನೇಳಿದಂಗೆಯ್ದಿರ್ಪಂ ॥ ೨೧೫

ಅನುಪಮಭರತಾಧೀಶ್ವರ
ನನುಜನುಮಂ ಸಂದ ಕಾಮದೇವನುಮಂ ರೂ।
ಪಿನೊಳಾದಂ ಭಂಗಿಸಿ ತ
ಜ್ಜನಪಂ ಕೈಕೊಳ್ಳನಾವನಂ ಬಣ್ಣಿಪುದಂ[2] ॥ ೨೧೬

ಸುರಭೂರುಹಮುಮನಗ್ಗದ
ಸುರಭಿಯುಮಂ ಚಾಗಗುಣದೊಳೆಮ್ಮರಸಂ ತ್ರ।
ಸ್ತರಿಯಾಡುವನೆಂದೊಡೆ ಪೋ
ಲ್ವರಾರೊ ಮತ್ತಿನ ಮಹೀಭುಜರ್ಗೀಭಾತ್ಮರ್ ॥ ೨೧೭

ಪರದೇಶಾಧೀಶ್ವರರೆ
ಮ್ಮರಸನ ಪೆಸರ್ಗೊಂಡೊಡಳ್ಕಿ ಭಯದಿಂದಂ ಬೆ।
ಳ್ಳರಲೆವೊಲೋಡುವರಾತನ
ಬಿರುದಂ ಮಾರ್ಕೊಳ್ವ[3] ಗಂಡರಾರ್ ವಸುಮತಿಯೊಳ್ ॥ ೨೧೮

[ಎಂದು ಪೊಗಳ್ವುದುಂ, ಪ್ರಭಾವತೀಮಹಾದೇವಿ ನಕ್ಕು "ಬಹುರತ್ನಾ ವಸುಂಧರಾ" ಎಂದು ಲೋಕದೊಳ್ ಕವಿಗಳುಂ ಚಾಗಿಗಳುಂ ಬರ್ಪರೊರ್ವರ್ಗೆ ನಿಡಿಯರ್ಗೆ ಸಿಡಿಯರೊಳರದೇನಪೂರ್ವಮೆನ್ನೆಗಂ ನಿಮ್ಮ ಬಂದ ಕಾರ್ಯಮಂ ಪೇೞಿಮೆನೆ, ಪೆರ್ಗಡೆಗಳಿಂತೆಂದರ್:— ೨೧೯

ತರಳಾಕ್ಷಿ ನಿಮ್ಮ ರೂಪಂ
ಬರೆಯುತ್ತುಂ ಪಟದೊಳೆಮ್ಮ ಮಹಿಪತಿಗದನ।

1 ಖೇಚರಾಧಿಪತಿಯನ್ನರುಮಂ | ಸುರರಾಜನುಮಂ ಮಹಾಭರತರಾಜ (ಗ)
2 ರೂ | ಪಿನೊಳಾವಭಂಗಿಗಸ್ಮಜ್ಜನಪತಿ ಕೈಕೊಳ್ಳನವರನಾರ್ಬಣ್ಣಿಪುದಂ(ಗ)
3 ಬೆಂಕೊಂಬ (ಬ. ಕ.)

ಚ್ಚರಿಯಾಗಿ ತೋಱುವುದುಮ
ಮ್ಮರಸನದಂ ಕಂಡು ಸೋಲ್ತು ವಿರಹಾನಳನಿಂ ॥ ೨೨೦

ಬೆಂದು ನೊಂದು ತಾಂ ಪ್ರತಾಪಿಯಪ್ಪುದಱಿಂದೆತ್ತಿ ಬಂದನಿಲ್ಲಿ ಸೆರಗಂ ಪಾರ್ವ ಗಂಡನಲ್ಲ; ನಿಮ್ಮಡಿ ಮತ್ತೊಂದಂ ಬಗೆಯದೆ ಬೇಗ ಮೆಮ್ಮರಸಂಗೆ ಮನೋನಯನವಲ್ಲಭೆಯಾಗಿರ್ಪುದೆನೆ ಪ್ರಭಾವತಿಯಿಂ ತೆಂದಳ್:—][1] ೨೨೧

ಪರವನಿತೆಗೆಱಗಿದಾತಂ
ಗುರುಮುದದಿಂ [2] ನೋಡ ಕೈದು ಬೆಸಕೆಯ್ವುದು ನಿ।
ಷ್ಠುರತೆಯಿನೆಂದೊಡೆ ಚಿಃ ಸ
ತ್ಪುರುಷಂ ಪರವನಿತೆಗೆಱಗೆ ಪರವನಿತೆ ವೆಲಂ [3] ॥ ೨೨೨

[ಅದು ಕಾರಣದಿಂ ನಿಮ್ಮರಸನಪ್ಪೊಡೆ ಮಹಾಪುರುಷನಿಂತಪ್ಪುದಕ್ಕೆ ಬಯಸಲಾಗದು] ಎಂಬುದುಮವರಿಂತೆಂದರ್:— ೨೨೩

ದಿವದೊಳ್ ಭೋಗಿಪೆನೆಂದೀ
ಭವದ ಮಹಾಸೌಖ್ಯಮೆಲ್ಲಮಂ ಕಿಡಿಸಿ ಶರೀ।
ರವನೊಕ್ಕು ಕುದಿದು ಕೆಮ್ಮನೆ
ಸವಣಮರುಳ್ಗಳ್ದರಸಿ ಸುಖಮನೆ ಬಗೆಯಾ ॥ ೨೨೪

---

1 ಎಂಬುದುಮರಸಿ 'ಬಹುರತ್ನಾ ವಸುಂಧರಾ' ಎಂದು ಲೋಕದೊಳ್ ನಿಡಿಯರ್ಗೆನಿಡಿಯರೊಳರದಚ್ಚರಿಯಲ್ಲದನ್ನೆಗಂ ನಿಮ್ಮ ಬಂದ ಕಾರ್ಯಮಂ ಪೇಳಿಮೆನೆ, ಶಾಳಂಕಾಯನಿಂತೆಂದಂ:—ನಾರಾಯಣದತ್ತೆ ನಿಮ್ಮ ರೂಪಿನ ಪಟಮನೆಮ್ಮರಸಂಗೆ ತೋಱಿದೊಡೆಮ್ಮರಸನುಂ ನಿಮ್ಮ ಭಾಗ್ಯದಿಂ ನಿಮಗೆ ಸೋಲ್ತು ನಿಮ್ಮ ಮೋಹದಿಂ ಬಂದನಲ್ಲಿ ಸಂಗುಮಂ ಬೆರಗುಮಂ ಪಾರ್ವ ಗಂಡನಲ್ಲೆಂಬುದುಮರಸಿಯಿಂತೆಂದಳ್ (ಗ)

2 ಪರವನಿತೆಗೆ ಸೋಲ್ತಾತಂಗಿರತ್ರಯೊಳ್ (ಬ. ಕ.)

3 ಪರವನಿತೆಗೆಱಗಲಪ್ಪುದೆಧರೆಯೊಳ್ (ಬ. ಕ.)

ಎಂಬುದುಂ, ಪ್ರಭಾವತಿಯಿಂತೆಂದಳ್ :— ೧೧೫

ಖಳರಂ ಪಾದರಿಗರನೀ
ಗಳ ನೋಡಿರೆ ಕಂಡೊಡಪ್ಪಿ ಜಡಿವರ್ಬಡಿವರ್ ।
ಮುಳಿಸಿಂ ಕೊಲ್ವರ್ ನರಕ
ಕ್ಕಿಳಿವುದನಿಂಬಾಗಿ ತೋಱಿ ಸಾಱುವ ತೆಱದಿಂ ॥ ೧೧೬
[ಅದಱಿಂ ಪಾದರಂ ಕಷ್ಟಮೆನೆ ಪೆರ್ಗಡೆಗಳಿಂತೆಂದರ್ :–] [1] ೧೧೭

ತಡೆಯದೆ ನೀನಮ್ಮರಸನ
ನೊಡಗೂಡೊಡಗೂಡಲೊಲ್ಲದೊಂದಕ್ಕೊಂದಂ ।
ನುಡಿಯುತ್ತಿರ್ದೊಡೆ ಕಡೆಯೊಳ್
ಕಡುಚಪಳನ ಗೋಣೆ ಬಱಿದೆಯಾದಂತಕ್ಕುಂ [2] ॥ ೧೧೮
ಎನೆ ಪ್ರಭಾವತೀಮಹಾದೇವಿಯಿಂತೆಂದಳ್ :— ೧೧೯

ಮರಣಕ್ಕಂಜದೆ ಗುಣಮುಂ
ಪರಿಹರಿಸದೆ ಶೀಲರತ್ನಮಂ ರಕ್ಷಿಸಿ ಸ ।
ತ್ತರ ಸಾವು ಸಾವೆ ಶೀಲಮು
ನುರವಣೆಯಿಂ [3] ಬಿಟ್ಟ ಖಳರ ಬಾಳುಂ ಬಾಳೇ ॥ ೧೨೦
ಎನೆ ಸಾಳಂಕಾರನಿಂತೆಂದಂ :— ೧೨೧

ಉಡುವುದು ದಿವ್ಯಾಂಬರಮಂ
ತುಡುವುದು ಭೂಷಣಮನುಣ್ಬುದೊಳ್ಳುಣಿಸಂ ತಾಂ ।
ಪಡೆದೊಡೆ ದೊರೆಕೊಂಡೊಡಮಂ
ಬಿಡುವುದದೇಂ ಕೇಳ್ ಪರತ್ರೆಯುಂ [4] ಕಂಡವರಾರ್ ॥ ೧೨೨
ಎನೆ ಸಮ್ಯಕ್ತ್ವರತ್ನಾಕರೆಯಿಂತೆಂದಳ್ -— ೧೨೩

---

1 ಎನೆಸಾಳಂಕಾರಯನಿತೆಂದಂ (ಬ. ಕ.)

2 ಬಱಿದೆಯಾದುದನಱಿಯಾ (ಗ) 3 ಉರಿವರಿಯಿಂ (ಗ)

4 ಬಿಡುವುದೆ ಮೋಳಣಪರತ್ರೆಯುಂ (ಗ)

ಕುರುಡಂ ಮುಂದಿರ್ದಿಭಮುಮ
ನೆರಡಿಲ್ಲದೆ ಕಾಣದಂತೆ ದುರಿತೋದಯದಿಂ ।
ನರಕಂಬೊಗಲಿರ್ದವರುಂ
ಪರತ್ರೆಯುಂ ಕಾಣರೆಂಬುದೇನಚ್ಚರಿಯೋ ॥ ೨೩೪

[ಅದುಕಾರಣದಿಂವಱಸಿಲ್ಲ, ಜೀವಸಿಲ್ಲ, ಪರತ್ರೆಯಿಲ್ಲೆಂಬ ಜಡರ ನುಡಿ ಪ್ರಮಾಣಮಲ್ಲೆಂಬುದುಂ, ಪೆರ್ಗಡೆಗಳಿಂತೆಂದರ್ ;—] [1] ೨೩೫

ಜಳಜಮುಖಿ ಪಲವುಮಾತಂ
ಗಳಪದೆ ಮದ್ವಲ್ಲಭಂಗೆ ವಲ್ಲಭೆಯಾಗೀ ।
ಪೊೞಲಂ ನಾಡಂ ಕಿಡಿಸದೆ
ಕಳಕುಳಮಂ ಪ್ರಜೆಗೆ ಮಾಡದೀಗಳ ಬೇಗಂ ॥ ೨೩೬

ಪರಿಸುಗುಮಿಲ್ಲಿ ಭೋರ್ಗರೆವ ನೆತ್ತರ ಪೆರ್ವೊನಲಂ ಧಗದ್ಧಗೆಂ
ದುರಿಸುಗುಮುಗ್ರಕೋಪಶಿಖಿಯಿಂ ಪುರಮೆಲ್ಲಮನಟ್ಟಿ ಮೆಟ್ಟಿ ಸಂ
ಗರದೊಳನೇಕರಂ ತಱಿದು ಖಂಡದೊಳಿಂಡೆಯನಾಡುಗುಂ ಮನೋ
ಹರೆ ಬಿಡು ನಿನ್ನ ದರ್ಪಮನವಂಗಿದಿರಾಗಿ ಬರ್ದುಂಕುವನ್ನರಾರ್ ॥ ೨೩೭

[ಎಂದು ಭಯಮಂ ತೋಱಿ ನುಡಿಯೆ, ವನಿತಾರತ್ನೆ ಯಿಂತೆಂದಳ್:—] [2] ೨೩೮

ಧರಣಿಜೆಯನುಯ್ದ ಲಂಕಾ
ಪುರೇಶನಂತಪ್ಪ ಗಂಡರುಂ ಸತ್ತರ್ ನಿ ।
ತ್ತರಿಸದೆನೆ ಕೇಳ ಮತ್ತಿನ
ಧರೆಯರಸರ್ ಪರವಧೂಪ್ರಿಯರ್ ಬೞ್ದಪರೇ ॥ ೨೩೯

ಎಂಬುದುಂ, ಸೌಳಂಕಾರಂ ಮುನಿದು ಎನ್ನ ಮಾತಂ ಕೇಳಲೊಲ್ಲದ ಖಳನಂ ತಡೆಯದೆ ಕಾಣ್ಬೆಯೆಂದು ಪೊಱಮಟ್ಟು ಪೋದನ

1 ಎನೆ ಸೌಳಂಕಾಯನಿಂತೆಂದಂ (ಗ) 2 ಎಂಬುದುಂ ಸಮ್ಯಕ್ತ್ವ ಚೂಡಾಮಣಿ ಯಿಂತೆಂದಳ್ (ಗ)

ನ್ನೆಗಮುಗ್ರಸೇನನೆಂಬ [1] ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸಮಕಟ್ಟಿಂದಿರ್ಪುದುಂ ಪ್ರಭಾವತೀಮಹಾದೇವಿ, ೨೪೦

[ಪಿರಿದುಂ ಬಲಸ್ಥನಿವನೀ
ಧುರದೊಳ್ ಸಿಲ್ವನ್ನರಿಲ್ಲ ಮದ್ವಲ್ಲಭನುಂ ।
ಪರದೇಶದೊಳಿರ್ಪನಿಂ
ದರಿದಾಯ್ತೆಂದಳ್ಕಿ ಕಾಂತೆ ತಳವೆಳಗಾದಳ್ ॥ ೨೪೧

ಆನೀಗಳ್ ] ಜಿನಪೂಜೆಯಂ ಮಾಡಿ, ಘೋರೋಪಸರ್ಗಮಿದು ಪಿಂಗುವಿನಂ ಆಹಾರಶರೀರನಿವೃತ್ತಿಯೆಂದು ಕೈಯಂ ಸಿಕ್ಕಿಕೊಂಡಿರ್ದಳನ್ನೆಗಂ, ೨೪೨

[ಪೊನ್ನ ವಿಮಾನಮನೇಱಿ ಮ
ಹೋನ್ನತಿಯಿಂ ದೇವಲೋಕದಿಂ ಮೇರುನಗ ।
ಕ್ಕಾನ್ನಯದಿಂದಂ ಪೋಗುತೆ
ಸನ್ನುತಜಿನಭವನಮೆಲ್ಲಮಂ ಪೂಜಿಸಿದೆಂ ॥ ೨೪೩

ಪೂಜಿಸಿ ಮತ್ತಂ ನಂದೀಶ್ವರದ್ವೀಪಮಂ ಕಾಣಲೆಂದು ಭಕ್ತಿಯಿಂ ಪೋಗುತ್ತಿರಲೆನ್ನ ವಿಮಾನಮಿಾಪುರದ ಮೇಲೆ ಪೋಗದೆ ಕೀಲಿಸಿ ನಿಲ್ವುದುಂ, ಅವಧಿಲೋಚನದಿನೀಸತಿಗಾದುಪಸರ್ಗಮನಱಿದು,] [2] ೨೪೪

ಮುಳಿಸಾಗೆ ಮಾಳವೇಶನ
ಬಳಮೆಲ್ಲಮನುಯ್ದು ಪುಡುಕುನಿರಳ್ದವೆನೆಂ (?)
ಬಳಮಾಗಿ ಮತ್ತೆ ಮಾಣ್ದೆಂ
ತಿಳಿದಾಂ ಸದ್ದೃಷ್ಟಿಯಪ್ಪ ಕಾರಣದಿಂದಂ [3] ॥ ೨೪೫

---

1 ಎನೆ ಸಾಳಂಕಾಯನುಮಂ ಮನಿದು ನೀನಿದಱ ಫಲಮಂ ಕಾಣ್ಬೆಯೆಂದು ಪೋದನಿತ್ತಲುಗ್ರಸೇನನೆಂಬ (ಗ)

2 ಆಸನ್ನಕಾಂಪದಿಂದದನಱಿದು ಬಂದು (ಗ)

3 ಬಳಲಾಗಿಮನವೆದಯೆಯುಂ । ಮುಳಿಸಂ ಮಾಣ್ದವನಬಲಮನವಯಾವಧಿಂ (ಗ)

[ಅಂತು ಕರುಣಿಸಿ ಚಂಡಪ್ರದ್ಯೋತನ ಬಲಮೆಲ್ಲಮಂ] ಮಹಾ ವಾಯು ತಱಗೆಲೆಯನೆತ್ತುವಂತೆತ್ತಿಕೊಂಡುಯ್ದುಜ್ಜಯಿನಿಯ ಮಹಾ ಕಾಳದೊಳರಿಸಿ, ೨೪೬

ಈರಮಣಿಯ ಶೀಲಮನಿದ
ನಾರಯ್ವೆಲ್ವೇೞ್ಕುಮೆಂದು ತದ್ಭೂಮಿಪನಾ ।
ಕಾರಮನೆ ಕೊಂಡು ಪುರಮಂ
ವಾರಿಧಿಯೊಲ್ಸುತ್ತಿ ಮುತ್ತಿಕೊಂಡುಗ್ರತೆಯಿಂ ॥ ೨೪೭

ಪ್ರೊಟಿಲೆಲ್ಲಮಂ ಮಾಯಾನಿದ್ರೆಯೊಳಿಕ್ಕಿ [ ಚತುರಂಗಬಲಮಂ ವಿಗುರ್ವಿಸಿ ಕೋಂಟೆಯಂ ಕೊಂಡು, ] ೨೪೮

ಉರಿವಂತೆ ಪುರವರಂ ಸಂ
ಗರದೊಳ್ ಕೆಡೆವಂತೆ ಪರ್ವಲಂ ಬೀದಿಗಳೊಳ್ ॥
ಪರಿವಂತೆ ರಕ್ತಮವನಿಪ
ನರಮನೆಯಂ ಸುಟ್ಟು ಸೂಱೆಗೊಳ್ವಂತೆ ಭಟರ್ ॥ ೨೪೯

[ಚಮತ್ಕಾರಮಂ ಮಾಡಿ ಭಯಮುಮುದ್ಭೂತಮುಮಾಗೆ ಪ್ರಭಾ ವತೀಮಹಾದೇವಿಯಲ್ಲಿಗೆವಂದು ಮುಂದೆ ನಿಂದಿರ್ದು, ೨೫೦

ಎನಗಿದಿರಾಂಪವರಾರ್ವೀ
ದಿನಿಯೊಳ್ ನಾಂ ಮುನಿದೊಡಂ ಜವಂ ಮುಳಿದೊಡಮು ।
ರ್ಬಿನೊಳಾಂತು ಸೆಣಸಿ ಕಾದುವ
ಜನಪಂಗೆಂಟೆರ್ದೆಯೆ ಮರುಳ್ ನೀನೆತ್ತಱಿವೌ ॥ ೨೫೧

ಮತ್ತಂ] ನಿನ್ನ ಪ್ರಾಣವಲ್ಲಭನಪ್ಪುದಾಯನಮಹಾರಾಜನ ಬಿಂಕಮಂ ಸುಂಕಂಗೊಂಡು ವೀರಮಂ ದೂರಂಮಾಡಿ [ಬೆಳ್ಳರಲೆಯಂ ಬೆಂಗೊಂಬಂತೆ ತಗುಳ್ದು] ಪಿಡಿದುಕೊಂಡು ಕೋಡಗಗಟ್ಟುಗಟ್ಟಿ ತಂದೆಂ; ನಂಬೆಯಪ್ಪೊಡೆ [ಯಿವನಂ ನೋಡೆಂದೆನೆ ಕಾಂತೆ,] ॥ ೨೫೨

ಎನ್ನಾಣ್ಮನದಟನುಡುಗಿಸು
ವನ್ನರ್ಪಱರೊಳರೆ ಗಂಡರವನೀತಳದೊಳ್ ।
ಪನ್ನಗನೀಕಡುದುರ್ಜನ
ನೆನ್ನಂ ನುಡಿಸಲ್ಕೆವೇಡಿ ಮಱುಗಿಪನಱಿವೆಂ [1] ॥ ೧೫೩

[ಈತನೊಡನೆ ಮಾರಿಯುಂ ಬಳಾರಿಯುಂ ನುಡಿಗೆ ಯಾನೇನಂ ಮಾಡಿದೊಡಮೆನ್ನ ಶೀಲಮನೇಗೆಯ್ದುಂ ಕಿಡಿಸುವೆನಲ್ಲೆಂದು ಪರಮಜಿನ ಚರಣಮನೆ ಮನದೊಳ್ ತಾಳ್ದಿ ಪಂಚನಮಸ್ಕಾರಮನೋದುತ್ತುಂ ಮುನ್ನಿನ ಮಹಾಪುರುಷರ ಕಥೆಗಳಂ ಭಾವಿಸುತ್ತುಮಿರೆ,] [2] ೧೫೪

ನಿನ್ನುರಿಪದಿಂದೆ ಪುರವರ
ಮೆನ್ನಾಡುಂ ಕೆಟ್ಟು ವೊಟ್ಟನಾದದು ಮತ್ತಂ ।
ನಿನ್ನಾಣ್ಮಂಗೀವಿಧಿಯಾ
ಯ್ತಿನ್ನಿರವೇಡೆನ್ನೊಳಕ್ಕಱಿಂದಂ ಕೂಡಾ ॥ ೧೫೫

ಆನಳಿಪುವನ್ನರೊಳರೇ
ಮಾನಿನಿಯರ್ನಿನ್ನ ಪುಣ್ಯದಿಂದಂ ನೀರೇ ।
ಜಾನನೆಯಾಂ ದೊರೆಕೊಂಡೆಂ [3]
ಹೀನತೆಯಂ ಬಿಸುಡು ಮೋಹದಿಂ ಕೂಡೆನ್ನೊಳ್ ॥ ೧೫೬

ಪತಿ ಬಂದಪನೆಂಬಾಸೆಯೊ
ಳತಿಶಯದಿಂದಿರ್ಪೆಯಪ್ಪೊಡಂ ನಿನ್ನ ಮಹೀ ।
ಪತಿಯುಮೆನಾಂ ಪಿಡಿದೆಂ ಸಿತ
ಮತಮಂ ಬಿಟ್ಟೆನ್ನೊಳಕ್ಕಱಿಂದಂ ಕೂಡಾ ॥ ೧೫೭

---

1 ನುಡಿಯಿಸಲು ವೇಡ ನುಡಿದಪನಱಿವೆಂ (ಗ) 2 ತನ್ನೊಡನೆಪೋದ ಪಡೆಮಾತಿನ ನುಡಿಗೆ ತಾನೇನಂ ಮಾಡಿದೊಡಮಾನೆನ್ನ ಶೀಲಮನಳಿವೆನಲ್ಲೆಂದು ಸಿರ ದಿರ್ಪುದುಂ (ಗ) 3 ಪತಿಯಾದಪೆನಾಂ (ಗ)

ತರುಣವಯಸಿನೊಳ್ ಮೆಚ್ಚಿದ
ಪುರುಷರೊಳೊಡಗೂಡಿ ಕಾಲಮಂ ಕಳೆಯದೆ ಪಂ ।
ಕರುಹಾಕ್ಷಿ ಶೀಲಮಂ ಪಿಡಿ
ದುರವರಿಯಿಂ ಬಂದ ಸುಖಮನೆಡೆಯೊಳ್ ಕಿಡಿಪೌ [1] ॥ ೨೫೮

[ಎಂದು ನಾನಾಪ್ರಕಾರದಿಂ ನುಡಿದೊಡಂ ಮಾರ್ನುಡಿಯದಿರೆ ಮೆಚ್ಚಿ ಮನದೊಳ್ ಪೊಡೆಮಟ್ಟೆನ್ನ ದಿವ್ಯಸ್ವರೂಪಮಂ ತೋಱಿ ನಿಮ್ಮುಪಸರ್ಗಂ ಪೋಯ್ತು ಕೈಯನೆತ್ತಿಕೊಳ್ಳೆಂದು ಪುರದೊಳಗಣ ಮಾಯಾನಿದ್ರೆಯಂ ಮಾಣಿಸಿ ಪಗುರ್ವಣೆಯನುಡುಗಿಸಿ ಸುರತರುಕುಸುಮದಿಂ ಪೂಜಿಸಿ ಶೀಲವತಿಯೆಂಬ ಮಾಂಗಲ್ಯನಾಮಮನಿಟ್ಟು ದೇವಲೋಕಕ್ಕೆ ಪೋದೆನೀವಸಿತಾರತ್ನಂ ಕೇವಳಮಲ್ಲೆಂದು ಪೊಗೞ್ದು ತದನಂತರಂ,] [2] ೨೫೯

ವಿವಿಧರತುನಂಗಳಿಂದೊ
ಪ್ಪುವ ಸಿಂಹಾಸನಮನಾಗಳಾಕ್ಷಣದಿಂ ತ ।
ದ್ದಿವಿಜಂ ಮಾಡಿ ಧರಿತ್ರೀ
ರಮಣನನರಸಿಯುಮನಿರಿಸಿ ಪಿರಿದುತ್ಸವದಿಂ ॥ ೨೬೦

ಅರಲ ಮಳೆ ಕರೆಯೆ ಭೋರೆನೆ
ಸುರದುಂದುಭಿ ಮೊೞಗೆ ತೆಂಕಣೆಲರೆಸಗೆ ಮನೋ ।
ಹರಮಾಗೆ ಮೃದುನಿನಾದಂ
ಕರಮೆಸೆದಿರೆ ಪಾಡೆ ದೇವಿಯರ್ಮಂಗಳಮಂ ॥ ೨೬೧

ಸುರುಚಿರರತ್ನದಿನೊಪ್ಪುವ
ಸುರರ ವಿಮಾನಂಗಳೊಂದು ತಿಂತಿಣಿಯಿಂದಂ ।

---

1 ಶೀಲಮಂ ಬಿಟ್ಟರತ್ರಿಯೊಳ್ಬಂದ ಸುಖಮನೇಕೆಯೊ ಕಿಡಿಪೈ (ಬ.ಕ.)

2 ಅಂತನೇಕೋಪಸರ್ಗಮಂ ಮಾಡಿದೊಡಮೊಡಂಬಡದಿರೆ ಮೆಚ್ಚಿ ಸ್ವರೂಪಂ ತೋಱಿ ಪಿರಿದಪ್ಪುಪಸರ್ಗಮಂ ಪಿಂಗಿಸಿ ಸುರತರುಪುಷ್ಪಂಗಳಿಂ ಪೂಜಿಸಿ ಪೊಡೆವಟ್ಟು ಶೀಲವತಿಯೆಂಬ ಪೆಸರನಿಟ್ಟು ಪೋದೆನದುಕಾರಣದಿಂದೀಸತಿ ಮಹಾಸತಿಯೆಂದು ಪೊಗೞ್ದು (ಗ)

ಬರವೆಲ್ಲಂ ತೀವಿರ್ದುದು
ನರನಾಥನ ಕೀರ್ತಿಲತೆಯ ಪೂಗಳ ತೆಱದಿಂ ॥ ೧೫೧

ಅಂತು ಜನವೆಲ್ಲಂ ಬೆಱಗಾಗೆ ಜಿನಭಕ್ತಿಯೆಂಬ ಬೆಳಸಿನ ರಾಶಿಯುಂ ತೋರ್ಪಂತೆ ಪಾಲ ಸಮುದ್ರದ ನೀರಿಂದಭಿಷೇಕಂಮಾಡಿ ಪೂಜಿಸಿ [1] ಸಮ್ಯಕ್ತ್ವಚೂಡಾಮಣಿಯುಂ ವಾತ್ಸಲ್ಯರತ್ನಾಕರನುಂ ಸುಕವಿಸಿಕರಪಿಕಮಾಕಂದನುಂ ಸಹಜಕವಿಮನೋಹರೋದ್ಯಾನಕಳಹಂಸ ಕಳಕಂಠನುಮೆಂಬೀ [2] ಪ್ರಶಸ್ತನಾಮಂಗಳನಿಟ್ಟು ತಣಿಯುಂಡ ಭೂತವಂತೆ ಪಲತೆಱದ ಪೊಗಳ್ತೆಗಳಿಂ ಪೊಗೞ್ದು ವಾಸವಂ ದಿವಿಜನಿವಾಸಕ್ಕೆ ಪೋದನಿಂತು, ೧೫೨

ಪುರುಷರತುನಂ ಪುರಾತನ
ಚರಿತಂ ಜಿನಚರಣಕಮಲಭೃಂಗಂ ಸತ್ಯಾ |
ಭರಣಂ ದಯಾಂಬುನಿಧಿ [3] ಮಂ
ದರಧೈರ್ಯಂ ನೃಪಕಿರೀಟಘಟ್ಟಿತಚರಣಂ ॥ ೧೫೩

ಧರೆ ಕೊಂಡುಕೊನೆದು ಬಣ್ಣಿಪು
ವರಿದೆ ಗುಣೋನ್ನತಿಯಿನೀ ಮಹಾತ್ಮಂ ಧರೆಗ |
ಚ್ಚರಿಯಾಗೆ ಭಕ್ತಿಯಿಂದಂ
ಸುರರಿಂದಂ ಪೂಜೆವಡೆದನಿನ್ನರುಮೊಳರೇ ॥ ೧೫೪

ಎಂದೊದ್ದಾಯನಮಹಾರಾಜನಂ ಲೋಕಮೆಲ್ಲಂ ಬಂದೆ ಕೊರಳೊಳ್ ಕೊಂಡಾಡೆ [4] [ಸದ್ಗುಣದೊಳ್ ಕೂಡಿ] ಪಲಕಾಲಂ ರಾಜ್ಯಂಗೆಯ್ದೊಂದುದಿವಸಂ [ತನ್ನೊಳಂತೆಂದಂ :—] ೧೫೫

1 ಅಂತಗುರ್ವಾಗೆ ವಿಗುರ್ವಿಸಿ ಕ್ಷೀರಜಲಧಿಯ ನೀರಂ ಪೊಂಗಳಸಂಗಳಿಂ ತಂದಭಿಷೇಕಂಗೆಯ್ದು ನರೇಶ್ವರಂಗೆ ಮೆಚ್ಚಿ ಸಮ್ಯಕ್ತ್ವ, (ಬ. ಕ.)

2 ಮಾಕಂದನುಂ, ಸುಕವಿಜನಮನಃಪಯಃಪಯೋಧಿಹಿಮಕರನುತಭಾವಯುತದಿಗಂಬರದಾಸಂ ಜಿನಶ್ರೀಚರಣಾಲಂಕಾರಶೀರ್ಷನುಮೆಂಬ (ಗ)

3 ಜಿನಸಮಯವಾರ್ಧಿವರ್ಧನಚಂದ್ರಂ | ಪರಮಗುಣಾಭರಣಂ (ಗ)

4 ಕೈವಾರದಿಂಪೊಗೞೆ (ಬ. ಕ.)

ಮತಿಗೆಟ್ಟನ್ನೆವರಂ ಸಂ
ಸೃತಿಯೊಳ್ ನಾಂ ತೊಡರ್ದು ಮುಟ್ಟುಗೆಟ್ಟಿರ್ದೆಂ ಸಂ ।
ಸೃತಿಯುಂ ಬಿಟ್ಟಂ ನಾಂ ನಿ
ರ್ವೃತಿಯುಂ ಸಾಧಿಸುವುಪಾಯಮುಮಂ ಚಿಂತಿಸುವೆಂ ॥ ೧೬೭

[ತನುವಪ್ಪೊಡೆ ನಿಲ್ಲದು ಜ
ವ್ವನಮಪ್ಪೊಡೆ ನೀರ ಬೊಬ್ಬುಳಿಕೆ ಕಡುಗೂರ್ಪಂ ।
ಗನೆಯರ್ ನಂಟರ್ ತನುಭವ
ರನುಜಾದಿಗಳಪ್ಪರೇ ಶರಣ್ಯಾವೆಡೆಯೊಳ್ ] ॥ ೧೬೮

ಎಂದು ಬಗೆದು [1] ಸಂಸಾರಕ್ಕೆ ಪೇಸಿ [ವೈರಾಗ್ಯಂ ಪುಟ್ಟೆ ತನ್ನ] ಪಿರಿಯ ಮಗನಪ್ಪರಿಂಜಯಂಗೆ [ರಾಜ್ಯಾಭಿಷೇಕಂಮಾಡಿ] ಧರಾಭಾರಮನೊಪ್ಪಿಸಿ, ೧೬೯

ಧರೆಯುಂ ನೋಯಿಸದಿರ್ ಜಿನೇಶ್ವರಪದಾಂಭೋಜಾತಮಂ ಭಾವಿಸು
ತ್ತಿರು ಜೈನಾಗಮದೋಜೆಯಿಂ ನಡೆ ಬುಧವ್ರಾತಕ್ಕೆ ಲೇಸಾಗು ಮಾ
ಣ್ದರದಿರ್ಧರ್ಮಮನುಗ್ರರಂ ಪಿಡಿಯದಿರ್ ಧೂರ್ತಾದಿದೋಷಂಗಳಂ
ಭರದಿಂ ಪೊರ್ದದಿರೊಲ್ದು ಮಾಡು ಮುನಿಸಂದೋಹಕ್ಕೆ ನೀನರ್ತಿ
ಯಂ ॥ ೧೭೦

ಎಂದಪ್ಪೈಸಿ ರಾಜ್ಯಮಂ [ಕೊಳೆವ ದಕ್ಕಂ ತೊಱೆವಂತೆ] ತೊಱೆದು ವೀರಸ್ವಾಮಿಯ [2] ಪಾದಮೂಲದೊಳ್ ಜಿನದೀಕ್ಷೆಯಂ ಕೈಕೊಂಡು ಘೋರೋಗ್ರತಪಶ್ಚರಣದಿಂದಷ್ಟವಿಧಕರ್ಮಂಗಳಂ ನಿರ್ಮೂಲಂಮಾಡಿ [3] ನಿಶ್ರೇಯಸಶ್ರೀಯೊಳ್ ಕೂಡಿದಂ. ಶೀಲವತೀಮಹಾದೇವಿಯುಂ ಸುವ್ರತಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು [ಕರಮರಿದೆನಿಸುವ ತಪದೊಳ್ ನೆಗೞ್ದು] [4] ಸನ್ಯಸನವಿಧಿಯಿಂ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತುಸಾಗರೋಪಮಕಾಲಮಾಯುಷ್ಯಕಮೊಡೆಯ [ಮಹರ್ಧಿಕದೇವ] ನಾಗಿ ಪುಟ್ಟಿದಳ್. ೧೭೧

1 ಎಂದು ವೈರಾಗ್ಯದೊದವಿಂ (ಗ) 2 ವರ್ಧಮಾನಸ್ವಾಮಿಯ (ಗ)
3 ಕಿಡಿಸಿ (ಗ) 4 ಕಡೆಯೊಳ್ (ಗ)

ಅದಱಿಂ ನಿರ್ವಿಚಿಕಿತ್ಸೆಯೆ
ವಿದಿತಂ ಕೈವಲ್ಯಸತಿಗೆ ತಿಲಕಂ ಸೌಖ್ಯಾ ।
ಭ್ಯುದಯಂ ಸಮಸ್ತದುಷ್ಕೃತ
ಮದೇಭಕೇಸರಿ ಗುಣಕ್ಕೆ ರತ್ನದ ಕಲಶಂ ॥ ೧೭೧

ಎಂದು ನಿರ್ವಿಚಿಕಿತ್ಸೆಯೊಳಾದ ಫಲಮಂ ಗಣಧರಸ್ವಾಮಿಗಳ್
ಪೇೞ್ದುದಂ, ೧೭೨

ಧರಣೀಸ್ತುತ್ಯಂ ಗುಣಾಂಭೋನಿಧಿ ಜಿನಚರಣಾಂಭೋಜಮತ್ತಾಳಿ
ಧಾತ್ರೀ
ಧರಧೈರ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ಮಳಂ ನಿಷ್ಕ
ಷಾಯಂ
ವರಭವ್ಯಾಂಭೋಜಸೂರ್ಯಂ ನಿರುಪಮನೊಸೆದಂ ಕೇಳ್ದು ತ್ರೈವಿದ್ಯ
ಚಕ್ರೀ
ಶ್ವರಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ [1] ॥

ಇದು ನಿಖಿಲದಿವಿಜಪರಿವೃಢಮುಕುಟತಟಘಟಿತಮಣಿಕಿರಣವಿಲುಳಿತ
ಚುಂಬಿತೋಭಯಪರಮಜಿನಚರಣಯುಗಳಸರಸಿರುಹಮತ್ತ
ಮಧುಕರ ನಿರುಪಮಸಹಜಕವಿಜನ ಮನಃಪಯಃ
ಪಯೋಧಿಹಿಮಕರ ನುತಭಾವಯುತ
ದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನತೃತೀಯಾಂಗವ್ಯಾವರ್ಣನಂ
ಚತುರ್ಥಾಶ್ವಾಸಂ.

---

1 ಪರಮಶ್ರೀಜೈನತತ್ವಪ್ರಿಯನಮಳಯಶೋಭಾಜನಂ ಲೋಕಪೂಜ್ಯಂ
ಧರಣೀಸ್ತುತ್ಯಂ ಗುಣಾಂಭೋನಿಧಿ ಜಿನಸಮಯವ್ಯೋಮಶೀತಾಂಶು ಸತ್ವಾ
ಭರಣಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ಜಿನಶ್ರೀ
ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಿನೀರಾಜಹಂಸಂ ॥ (ಗ)

## ಪಂಚಮಾಶ್ವಾಸಮ್.

ಶ್ರೀಮನ್ನಿರ್ವಿಚಿಕಿತ್ಸೆಯ
ಮಾಮ್ಪೈಮೆಯೆ ಮೋಕ್ಷದಲ್ಲಿಗುಯ್ಯಲ್ ಸಾಲ್ಗುಂ ।
ದೇವಾತ್ಮೊ ಮನದೊಳೂಸೆದಂ
ಶ್ರೀಮಹಿತಂ ಸುಕವಿನಿಕರಪಿಕಮಾಕಂದಂ ॥ ೧

ಅಂತು [ನಿರ್ವಿಚಿಕಿತ್ಸೆಯೊಳಾದ ಫಲಮಂ ಲೇಸಾಗಿ ಅಱಿದು ಮತ್ತಂ ಗೌತಮಸ್ವಾಮಿಗಳ್ಗೆ ಮಗಧನಾಯಕಂ ಪೊಡೆಮಟ್ಟು ಮುಂದಣಮೂಢದೃಷ್ಟಿಯ ಕಥೆಯುಂ ನಿಮ್ಮಡಿ ಬೆಸಸಲ್ವೇಱ್ಕುಮೆನೆ ಗಣಧರಸ್ವಾಮಿಗಳ್ ನಿರ್ವಾಣಶ್ರೀವನಿತೆಯ ಕುಚದೊಳಲಂಕರಿಸಿರ್ದ ಹಾರಯಷ್ಟಿಯಿದೆನಿಸುವ ಅಮೂಢದೃಷ್ಟಿಯ ಕಥೆಯನಿಂತೆಂದು] [1] ಪೇೞ್ದರ್ :– ಜಿನರಂತೆ [ಸಿಂಹದಂತೆ] ಗರುಡನಂತೆ ಕಾಮನಂತೆ ಭೋಜನಂತೆ [2] ಕರ್ಮಭೂಮಿಯಂತೆ ಮನುಷ್ಯರಂತೆ [3] ಸಂಯುತನಂತೆ ಮಹಾವ್ರತಂಗಳಂತೆ ಪಾಂಡುಕುಲದಂತೆ [4] ಜ್ಯೋತಿರ್ಲೋಕದಂತೆ ವ್ಯಾಕರಣದಂತೆ ಜೋಯಿಸದಂತೆ ಸಪ್ತಮತೀರ್ಥಕರಧರಣೀಂದ್ರನಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಮೆಂಬಸ್ದುಱೊಳಂ ಕೂಡಿ ಶೋಭಿಸುವುದು ॥ ೨

ಮೂಢತೆಯಂ ಬಿಟ್ಟು ಪೆಱರ್
ಮಾಡುವ ಡೊಂಬಿಂಗೆ ಬೇಗಮೆಱಗದೆ ಮೂರ್ಖರ್ ।
ಮಾಡುವುದಂ ಲೇಸೆನ್ನದೆ
ಕೂಡುವುದಾರಯ್ದಮೂಢದೃಷ್ಟಿಯೊಳಱಿವಂ ॥ ೩

---

1 ನಿರ್ವಿಚಿಕಿತ್ಸೆಯಂ ಕೇಳ್ದು ಮುಂಪಣಮೂಢದೃಷ್ಟಿಯ ಕಥೆಯಂ ಬೆಸಸುವುದೆಂಬುದುಮಿಂತೆಂದು (ಗ) 2 ಪ. ಗದಂತೆ ಸುಭೋಜನಂತೆ ಸಂಯಮಿಯಂತೆ (ಗ)
3 ಜೈನರಂತೆ ಸಂಯುತ (ಗ) 4 ಪಂಚಶರದಂತೆ (ಗ)

ಇನ್ನದಱ ಮಹಿಮೆಯೆಂತೆಂದೊಡೆ:—

[ಧರಣೀವನಿತೆಯ ತೊಟ್ಟಾ
ಭರಣಮಿದೆನಿಪಾಮಡಂಬಖರ್ವ್ವಡದಿಂದಂ |
ಪುರದಿಂ ಖೇಡಾದಿಗಳಿಂ
ಕರಮೆಸೆವುದು ಶೂರಸೇನಮೆಂಬಾ ವಿಷಯಂ ॥ ೪

ಆ ವಿಷಯದೊಳ್ ॥ ೫

ಅನುಪಮದೇವವಿಮಾನಮಿ
ದೆನಿಸುವ ಜಿನಭವನದೋಳಿಯಿಂ ಸುತ್ತಿದ ನಂ |
ದನವನದ ಶೋಭೆಯಿಂದಿಂ
ದ್ರನ ಪುರದಂತೊಪ್ಪುತಿರ್ಕ್ಕುಮತಿಶಯದಿಂದಂ ॥ [1]] ೬

ಉತ್ತರಮಧುರೆಯೆಂಬುದು ಪುರಮದನಾಳ್ವಂ ವರುಣನೆಂಬ ಮಹಾಮಂಡಳಿಕನಾತನ ಪಟ್ಟದರಸಿ ರೇವತಿಯೆಂಬಳ್ ॥ ೭

[ಜಿನಪದಭಕ್ತಿಯೊಳಿಂದ್ರನ
ವನಿತೆಯ ಪಾಸಟಿ ಪತಿವ್ರತಾಗುಣದೊಳ್ ರಾ |
ಮನ ಸತಿಯ ದೊರ ವಿಳಾಸದೊ
ಳನಂಗನಂಗನೆಗೆ ಬಗೆವೊಡೆಣೆ ಧಾರಿಣಿಯೊಳ್ ॥ ೮

ಎನಿಸಿ ನೆಗೞ್ತೆವಡೆದ ಸದ್ಗುಣಾಭರಣೆಯುಂ ಅಪರಿಮಿತಜಿನಭಕ್ತಿಯುಮಾಗಿ ರೇವತೀಮಹಾದೇವಿ ಸುಖಸಂಕಥಾವಿನೋದದಿಂ] [2]ರಾಜ್ಯಂಗೆಯ್ಯುತ್ತುಮಿರೆ, ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಮೇಘಕೂಟಮೆಂಬ [ಪುರಮುಂ ॥ ೯

ಧರಣೀಸಂಸ್ತುತ್ಯಂ ಖೇ
ಚರಪೂಜ್ಯಪದಂ ಜಿನೇಂದ್ರಪದಸರಸಿಜಷ |

1 ಸೂರಸಿನಮೆಂಬುದು ವಿಷಯಮಾವಿಷಯದೊಳ್ (ಗ.)

2 ಅಂತವರ್ ಸುಖದಿಂ (ಗ)

ಟ್ರ ರಣಂ ದಯಾಳು ಸದ್ಗುಣಾ
ಭರಣಂ ಚಂದ್ರಾಭನೆಂಬನದನಾಳ್ವರಸಂ ||] [1] ೧೦

ಆತನ ಪಟ್ಟದರಸಿ ಸುಮತಿಮಹಾದೇವಿಯೆಂಬಳಾಯಿರ್ವರ್ಗಂ [ಚಂದ್ರಶೇಖರನೆಂಬ ಮಗನಾಗೆ, ಆತನ ವಿನೋದವೆ ವಿನೋದ ಮಾಗೆ] [2] ಸುಖ ಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ದು ಚಂದ್ರಾಭಮಹೀರಾಜನೊಂದುದಿವಸಂ || ೧೧

[ನೆರೆದ ವಿಯಚ್ಚರೇಶ್ವರರ ಖೇಚರಿಯರ್ಕಳ ಭಂಗಿ ಚೆಲ್ವುವೆ
ತ್ತಿರೆ ಬಳಸಿರ್ದ ನಾಯಕರ ವೀರರ ರೂಪು ಮಹೋನ್ನತಿಕ್ಕೆವ
ತ್ತಿರೆ ನಯದಿಂದಮಿರ್ದ ನುತನೃತ್ಯನಿಕಾಯದ ಗಾನದೊಳ್ಪು ಬಿ
ತ್ತರದಿನಗುರ್ವಿನಿಂ ಸೊಗಯಿಸುತ್ತಿರೆ ಶೋಭಿಸುತಿರ್ಪ ಮಾಡದೊಳ್|| ೧೨

ಪಿರಿದನುರಾಗದಿಂ ಖೇಚರರಾಜಂ ದೆಸೆಗಳಂ ಮಹೋತ್ಸವದಿಂದಂ ಬರಚರರಂ ನೋಡುತ್ತುಂ ನಿರುತಂ ಸಂಗೀತವಿದ್ಯೆಯಂ ಕೇಳುತ್ತುಂ ಇರ್ದು ತನ್ನೋಲಗದ ಚೆಲ್ವಿಂಗೆ ತನ್ನ ಮೂವಿಷ್ಟವಾಗಿ ರಾಗಿಸಿ ನೋಡಿ ಖಚರರಾಜನೆನ್ನಂಬಿಟ್ಟಾರಂದು ಮನದೊಳ್ ಪರ್ಚಿ ತೊಟ್ಟನೆ ಯಾಕಾಶವಂ ನೋಡುವುದುಂ ||] [3] ೧೩

ಕರಿಘಟೆಯೊಡ್ಡಿನಂತೆ ಮೃಗಸಂಕುಲದಂತೆ ಘಟಂಗಳಂತೆ ಕೇ
ಸರಿಗಳ ಪಿಂಡಿನಂತೆ ವನದಂತೆ ನವಿಲ್ಗಳ ತಂಪದಂತೆ ಕೇ
ಸುರಿಗಳ ಬಂಬಲಂತೆ ಶರಭಾವಳಿಯಂತೆ ಮನುಷ್ಯರಂತೆ ವಾ
ನರಚಯದಂತೆ ಗೋಸಿವೆಹದಂತೆಸೆದೊಪ್ಪುವ ಮಾಡದಂದಮಂ || ೧೪

[ನಾನಾಪ್ರಕಾರದ ಮುಗಿಲೊಡ್ಡಂ ಚಂದ್ರಾಭಮಹಾರಾಜಂ ಕಂಡು ಮಹಾವಿಸ್ಮಯಂಬಟ್ಟು ಕಣ್ಣೆ ಮೆಯಿಕ್ಕದೆ ನೋಡುತ್ತುಮಿರ್ಪನ್ನೆಗಂ ||] ೧೫

---

1 ಪುರಪದನಾಳ್ವಂ ಚಂದ್ರಾಭನೆಂಬ ವಿದ್ಯಾಧರಂ (ಗ.)

2 ಪುಟ್ಟಿದ ಮಗಂ ಚಂದ್ರಶೇಖರನೆಂಬವನಂತವರ್ (ಗ.)

3 ಮಾಡದವೋಲ ಪಗಲೋಲಗಂಗೊಟ್ಟು ಚಂದ್ರಾಭಮಹಾರಾಜಂಯಿದರ್ ಕಾಶದೊಳ್ (ಗ)

ಸ್ಥಿರಮಲ್ಲದು ಕೇಳಂಬರ
ಚರಪತಿ ಸಂಸಾರಸೌಖ್ಯಮಾಯುಂದದಿನಂ ।
ದರಸಂಗೆ ಪೇಳ್ವ ತೆಱದಿಂ
ಕರಗಿದವಾಕ್ಷಣವೆ ಮೋಘದೊಡ್ಡುಗಳನಿತುಂ ॥ ೧೧

[ಅಂತು ಮುಗಿಲೊಡ್ಡು ನೋಡೆ ನೋಡೆ ಕರಗುವುದುಂ ವಿ೮ ಚಕ್ರರಾಜಂ ಕಂಡು ಮನದೊಳ್ ವೈರಾಗ್ಯಂ ಪುಟ್ಟೆ। [1] ತನ್ನೊಳ್ ತೆಂದಂ ॥ ೧

ಸಿರಿ ಸುರಚಾಪದಂತೆ ಪೊಸಜವ್ವನಮಿದ್ದಿಲ ಬೂದಿಯಂತೆ ಪೆಂ
ಡಿರ ಸುಖಮುಣ್ಮಿ ಪೊಣ್ಮುವ ಬಯಲ್ದೊಱೆಯಂತೆ ವಿಭೂತಿ ಮಂಜಿನ
ತರಸಿನೊಳಾದ ಪೆಂಪಿನ ಮಹೋನ್ನತಿಗಳ್ ಮಳಲೇರಿಯಂತೆ ಮಂಪ್
ದರಿಯ ಮಹೀಜದಂತೆ ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ ॥ ೧೩

ಅರಳೆಯ ಕಿಚ್ಚಿನಂತೆ ಧನಮಾಯು ವಸಂತದ ಶೋಭೆಯಂತೆ ಪೆ
ರ್ದೆರೆಗಳ ಬಂಬಲಂತೆ ಸೊಬಗೊಡ್ಡಿದ ಮೋಘಸಮೂಹದಂತೆ ನಂ
ಟರ ಕಡುಗೂರ್ಮೆ ಪಣ್ತ ಮರನಂತೆ ವಿಳಾಸದಗುರ್ವು ಮುವ್ವೆಯ
ಭ್ರಮೆದು ನೀರ ಬೊಬ್ಬುಳಿಕೆಯಂತೆ ನಿರಂತರಮಲ್ಲದೆಲ್ಲಿಯುಂ ॥ ೧೪

[ಎಂದು ಸಂಸಾರದನಿತ್ಯತೆಯುಂ ಭಾವಿಸಿ ಭೋಗೋಪಭೋಗ ಗಳ್ಗೆ ಪೊಲ್ಲದುಗೆಯ್ದಲ್ಲದ ಪೆಂಡತಿಗೆ ಪೇಸಿನಂತೆ ಪೇಸಿ ॥ ೨

ಪರಮಾರ್ಥಂ ಭಾವಿಸುವೊಡೆ
ಕರಮಂತಾ ಸ್ಪರ್ಶನೇಂದ್ರಿಯೋನ್ನತಿಯಿಂದಂ ।
ಕರಿಪತಿಗಳ್ ಮೊದಲಾಗಿರೆ
ನರರ್ಗಂ ಬಸಮಾಗಿ ಕಟ್ಟುವಟ್ಟುವು ಜಗದೊಳ್ ॥ ೨

ನೆಱೆ ನಯನೇಂದ್ರಿಯದೆಱಕದಿ
ನೞಿಯದೆ ಮತಿಗೆಟ್ಟು ಬಿದ್ದು ಸಾವುವು ಸೊಡರೊಳ್ ।

1 ಅವಂ ಕಂಡು (ಗ)

ಸುಱುಗಿ ಪತಂಗಾವಳಿಯೆನೆ
ಕುಱಿಯುಮಲ್ಲನೆ ಕಣ್ಣ ಸೋಲಮಂ ಸಲ್ಲಿಸುವಂ ॥ ೨೨

ಮುಂದಣ ಮೃಗಮಂ ಕಣ್ದೋ
ರ್ಕೆಂದು ಕೊರಲ್ಗೊಳೆಡ ಗೀತರವದಿಂ ತಾಮುಂ ।
ಪೊಂದುವುವು ಸಾರ್ದು ಮೃಗಚಯ
ಮೆಂದೊಡೆ ಶ್ರೋತ್ರದ ಸುಖಕ್ಕೆ ಪದೆವನೆ ಗಾಂಪಂ ॥ ೨೩

ಮರನಂ ಭೇದಿಸುವುವು ಷ
ಟ್ಚರಣಂ ಗಂಧಕ್ಕೆ ಸೋಲ್ತು ತಾವರೆಯೆಸಳಂ ।
ಭರದಿಂ ಭೇದಿಸಲಾಱದೆ
ಪಿರಿದಪ್ಪತಿಮೋಹದಿಂದಮಳಿವುವು ಧರೆಯೊಳ್ ॥ ೨೪

ರಸನೇಂದ್ರಿಯವಶದಿಂ ಸೈ
ರಿಸಲಾಱದೆ ಗಾಳದೆರೆಗೆ ಪಾಯ್ದಳಿವುವು ಮೀ ।
ನಸಹಾಯಮೆಂದೊಡಕ್ಕಟ [1]
ವಸುಮತಿಯೊಳ್ ಜಿಹ್ವೆ ಕಿಡಿಸದಾರಂ ಪದಪಿಂ ॥ ೨೫

ಒಂದೊಂದು ಜೀವಿಯಿಂದ್ರಿಯ
ಮೊಂದೊಂದಱಿನಳಿವುದೆಂದೊಡೈದಿಂದ್ರಿಯಮುಮಂ ।
ಸಂದಿಸಿ ಕೂಡಿರ್ದ ನರಂ
ಸಂದೆಯಮೇಂ ಕಿಡುವುದೞಿವುದವನೀತಳದೊಳ್ ॥ ೨೬

ಎಂದಿಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು ॥ ೨೭

ಸಿಂಬುಳನಾಳಿ ಮೂಗುಗುೞಿಪೆರ್ದೊಱೆ ಬಾಯ್ ಮಲದಾಗರಂ ಬಸಿರ್
ತಾಂ ಬಗೆವಂದ ಕಿಳ್ತ ಮಡು ಕಣ್ಕುಪಿ ಕೊಗ್ಗಿಯ ಪುತ್ತು ಚರ್ಮದಿಂ
ದಂ ಬಳಸಿರ್ದ ಕೋಂಟೆ ತನು ಕೀವಿನ ನೆತ್ತರ ತಿಪ್ಪೆ ಬೀವಿನಿಂ
ದಂ ಬಿಗಿದಿರ್ದ ಪೆರ್ನೆಣದ ಖಂಡದ ಮಾಂಸದ ತಾಣಮಲ್ಲವೇ ॥ ೨೮

---

1 ನಟ್ಟನೆ ಮೀಂಗಳೆಂದೊಡಕಷ್ಟ (ಬ.ಕ.)

ಎಂದು [ಶರೀರದೊಳಾದ ಅಶುಚಿತ್ವಮಂ ಭಾವಿಸಿ ಸಂಸಾರಕ್ಕೆ
ಪಿರಿದುಂ ನಿರ್ವೇಗಮಾಗೆ ॥ ೨೯

ಪಿರಿದುಂ ಕೋಪದಿನಟ್ಟಿ ತಿಂಬ ಪುಲಿಯುಂ ಬಾರ್ಬಟ್ಟೆಯೊಳ್ಕಂಡವೋಲ್
ಭರದಿಂದಟ್ಟಿ ತಗುಳ್ದು ಕೊಲ್ವ ಕರಿಯುಂ ಮಾರ್ವಟ್ಟೆಯೊಳ್ಕಂಡವೋಲ್
ಕರಮೆಂತೊರ್ವೆಯೆ ಪಾಯ್ವ ಸೀರ್ಕರಡಿಯುಂ ತದ್ಗೇಹದೊಳ್ಕಂಡವೋಲ್
ಸಿರಿಗಂಪೆಯ್ವ ಮಗನುನ್ನತಿಕ್ಕೆಗವಣಂ ಭೋಗಕ್ಕೆ ಮೇನಾಸೆಯೋ ॥ ೩೦

ಅಂತು ಸಂಸಾರದೊಳಾದ ಸುಖಕ್ಕೆ ನಾಡೆಯುಂ ಭಯಸ್ಥನಾಗಿ ಪಿರಿಯ ಮಗನಪ್ಪ ಚಂದ್ರಶೇಖರನಂ ಬರಿಸಿ ಮುಂದೆ ಕುಳ್ಳಿರಿಸಿ ಚಂದ್ರಾಭಮಹೀರಾಜನಿಂತೆಂದಂ ॥] [1] ೩೧

ಸಿರಿಯಿಂದಂ ಮೆಯ್ಯಱಿಯದೆ
ಪರತ್ರೆಯುಂ ಕಿಡಿಸಿ ರಾಜ್ಯಮೋಹೋದಯದಿಂ । [2]
ಮರುಳಾಗಿ ಮಂದಬುದ್ಧಿಯಿ
ನೆರಡಿಲ್ಲದೆ ಕೆಟ್ಟೆನಿನ್ನೆವರೆಗಂ ಮಗನೇ ॥ ೩೨

ಇನ್ನೆನಗೆ ಮುಕ್ತಿಶ್ರೀಯುನೊಲಿಸುವ ಜಿನರೂಪಂ ಶರಣ್ಬುಗಲ್ವೇಟ್ಕು ವಿಶಾಖೇಚರ] ರಾಜ್ಯಭಾರಮಂ [ಕೈ] ಕೊಳ್ಳೆಂಬುದುಂ ಕುಮಾರನಿಂತೆಂದಂ ॥ ೩೩

ಕೇಡಿಲ್ಲದ ನಿರ್ವೃತಿಯೊಳ್
ಕೂಡುವುದಂ ದೇವರೆತ್ತಿಕೊಂಡೆನಗಱಿವಂ ।
ಮಾಡುವುದಂ ದುರ್ಗತಿಯೊಳ್ [3]
ಕೂಡುವುದಂ ರಾಜ್ಯಭಾರಮಂ ದಯೆಗೆಯ್ವಾ ॥ ೩೪

---

ಎಂದು ಸಂಸಾರಕ್ಕಂ ಶರೀರಕ್ಕಂ ಪೇಸಿ ಪಿರಿಯ ಮಗನಪ್ಪ ಚಂದ್ರಶೇಖರಂಗಿಂತೆಂದಂ (ಗ) 2 ಮೆಯ್ಯಱಿಯದೆ ನಾನಿರತ್ರಯುಂ ಪಿಡಿದು ಪರವನಳಿದೇಂ ಪಿರಿದುಂ (ಕ.ಖ.) 3 ಮಾಡುವುದುಮನರ್ಥಿಯೊಳಂ (ಗ)

[ಬಗೆದು ನೋಡಿ ಲೇಸಪ್ಪ ವಸ್ತುವನೊಲ್ದೀವರಕ್ಕಱಿಂ ಕೂರ್ಪವರ್
ಜಗದ ಮಾನಿಸರ್ಪೊಲ್ಲದಂ ಕುಡುವರೆ ಕೂರ್ಪವರ್ಗೆ ಕುಡರೆಂದುಂ
ದೇವರ್
ಮಿಗಿಲೆನಿಸಿರ್ಪ ನಿರಂತರಸುಖಮನಾರ್ಜಿಸುವ ಕಜ್ಜಮನೆತ್ತಿಕೊಂಡೆ
ನಗೆ ತರಳರಾಜ್ಯಮಂ ದುರ್ಗತಿಗೊಯ್ವುದಂ ದುಷ್ಕರ್ಮಹೇತುವಂ
ಕುಡಲಪ್ಪುದೇ ॥೩೫

ಅದುಕಾರಣದಿಂ ದೇವರೆನ್ನ ಮೇಲೆ ಮೋಹಮುಂ ಸ್ನೇಹಮುಮುಳ್ಳೊಡೆ ಶಾಶ್ವತಸುಖಮನೀವ ತಪಶ್ಶ್ರೀಯುಂ ದಯೆಗೆಯ್ವುದಲ್ಲದೆ ನರಕಗತಿಗುಯ್ವ ರಾಜ್ಯಶ್ರೀಯುಂ ದಯೆಗೆಯ್ಯವೇಡೆಂಬುದುಂ ವಿಯಚ್ಚರ] [1] ರಾಜಸಿಂತೆಂದಂ ॥ ೩೬

[ನಿನ್ನೆಂದುದೆ ಕಾರ್ಯಂ ಮ
ತ್ತೆನ್ನದೆ ಕೈವಲ್ಯಲಕ್ಷ್ಮಿಯುಂ ಬಯಸುವವಂ ।
ಗುನ್ನತಿಯಿಂದಾದೊಡೆ ಮೋ
ಣೇನೆಂಬುದನಂತುಟಿಂತುಟೆನ್ನದೆ ಕೇಳಂ ॥ ೩೭
ಎಂದು ಪ್ರಿಯಾತ್ಮಜಂಗೆ ಕರಕಮಳಮಂ ಮುಗಿದು —] ೩೮

ಈ ವಿಯಚ್ಚರರಾಜ್ಯಮಂ ಪ್ರತಿಪಾಲಿಸಲ್ಕ್ಮಗನೊರ್ವನಂ
ಭೂವಧೂಪ್ರಿಯನಂ ಮನೋಹರರೂಪನಂ ಪಡೆದಿಂಬಳಿ
ಕ್ಕೀ ವಿಯಚ್ಚರರಾಜ್ಯಭಾರಮನಾಕುಮಾರವರಂಗೆ ಕೊ
ಟ್ಟಾವಗಂ ಬಳಿಕಾತ್ಮ ಮಾಳ್ಪುದು ಘೋರವೀರತಪಂಗಳಂ ॥ ೩೯

[ಎಂದಾಪ್ರಧಾನರುಂ ತಾನುಂ ಮೃದುವಚನಂಗಳಿಂ ಲಲ್ಲೆಗೆಯ್ದುಂ ತಾನುಮೊಡಂಬಡಿಸಿ ಕುಮಾರಂಗೆ ಪಟ್ಟಮಂ ಕಟ್ಟಿ ಧರಾಭಾರಮಂ ಕೊಟ್ಟು ಮಗನ ಮೊಗಮಂ ನೋಡಿ] [2] ೪೦

---

1 ಎಂಬುದುಂ ಚಂದ್ರಾಭಮಹಾ (ಗ)  2 ಎಂದೊಡಂಬಡಿಸಿ (ಗ)

ಚಾರುಚರಿತ್ರನಪ್ಪುದು ಗುಣಾನ್ವಿತನಪ್ಪುದು ಧರ್ಮದೊಳ್ಸದಾ
ಚಾರನೆನಿಪ್ಪುದುಜ್ಜ್ವಲಜಿನೇಂದ್ರಪದದ್ವಯಭಕ್ತನಪ್ಪುದಿ
ನ್ನಾರುಮನುರ್ಕಿ ಸೊರ್ಕಿ ಸಲೆ ನೋಯಿಸದಿರ್ಪುದು ಜೈನಯೋಗಿವೃಂ
ದಾರಕರಲ್ಲಿ ಭಕ್ತಿಭರದಿಂ ನೆಱ ತೋಱುವುದುತ್ತರೋತ್ತರಂ ॥ ೪೧

[ಮತ್ತಂ 'ದೇವ ನೀಂ ಕೊಟ್ಟ ಕುನ್ನಿ ಬಳೆವೆಳೆಯ ನಾಯಾಯ್ತಂ' ಬನಾಱ್ನುಡಿಯುಂ ನನ್ನಿಮಾಡದೆ, ತಾವರೆಯೆಲೆಯ ಮೇಲಣ ನೀರಂತೆ ಸಂಸಾರದೊಳಪ್ಪ ದುಃಖಮುಂ ಪಾಪಮುಂ ಪೊರ್ದದೆ, ಸಿಪ್ಪಿನೊಳ್ ಪುಟ್ಟಿಯುಂ ಮುತ್ತು ಸಿಪ್ಪಿಂದಂ ತಾಂ ಭಿನ್ನನಂತಂತೆ ನೀನುಮನ್ನಿಂದಂ ಸಕಲಗುಣಂಗಳೊಳಂ ಧರ್ಮದೊಳಂ ರಾಜನೀತಿಯೊಳಂ ಜಿನಭಕ್ತಿಯೊಳಂ ಮಿಗಿಲಪ್ಪುದೆಂದು ಬೇಡಿಕೊಂಡು ಬುದ್ಧಿವೇೞ್ದು ॥][1] ೪೨

ತುೞಿಲಾಳ್ಮನ್ನಿಸದಾಳ್ದನಂ ಸುಚರಿತಂ ದುಷ್ಕರ್ಮಮಂ ಸಜ್ಜನರ್
ಪೞಿಯಂ ಜಾರೆಯನಾಯುಮುಳ್ಳ ಪುರುಷಂ ಸರ್ವವ್ಯಸಂ ಸೂೞ್ಯರ್
ಖಳನಂ ಧರ್ಮಪರರ್ ವಿಶೇಷಮಱಿವಂ ಮಿಥ್ಯಾತ್ವಮಂ ಧಾರಿಣೀ
ತಳದೊಳ್ ಕೇೞ್ಬಡುವಂತೆ ರಾಜ್ಯದಳಿಪಂ ಬಿಟ್ಟಂ ಖಗಾಧೀಶ್ವರಂ ॥ ೪೩

ಅಂತು [ಸಕಲ] ರಾಜ್ಯಮುಮಂ ತೊಱೆದು ಪುರದಿಂ ಪೊಱಮಟ್ಟು ವಿಮಾನಾರೂಢನಾಗಿ ಪಾಂಡ್ಯದೇಶದ ದಕ್ಷಿಣಮಧುರೆಗೆ ಬಂದು [ಪೊಱವೊೞಲೊಳ್ ನಿಂದು — ೪೪

ಮಿಳಿರ್ವ ಪತಾಕೆಯಿಂ ಕುಳಿರ್ವ ನಂದನದಿಂ ತಳರ್ವಂಚೆಯಿಂ ಬೆಡಂ
ಗಳವಡೆ ರತ್ನದೀಧಿತಿಯೊಳೊಂದಿ ಪಳಂಚುವ ಬಳ್ಳಿಮಾಡದಿಂ
ಕಳಸದ ಮತ್ತವಾರಣದ ಶೋಭೆಗಳಿಂ ಕಡುರಮ್ಯಮಪ್ಪ ನಿ
ರ್ಮಳಜಿನಮಂದಿರಂಗಳ ವಿಳಾಸಮನಚ್ಚರಿವಟ್ಟು ನೋಡಿದಂ ॥ ೪೫

ಅಂತು ನೋಡುತ್ತುಂ ಭಕ್ತಿಭರತಯಿಂ ಕಯ್ಯಂ ಮುಗಿದು ಪೊೞಲೊಳಗೆ ಪೊಕ್ಕು ಮೆಲ್ಲಮೆಲ್ಲನೆ ಬರುತ್ತುಂ, ೪೬

1 ಎಂದುಬುದ್ಧಿಯುಂ ಪೇೞ್ದು (ಗ)

ಕಿವಿವರಮೆಯ್ದೆ ನೀಳ್ದ ಕಡೆಗಣ್ ಕರಮಕ್ಕಱಿನೀಯೆ ರಾಗಮಂ
ವಿವಶಿಸೆ ಪುರ್ವಿನುರ್ವು ಸುಲಿಪಲ್ ಮನಮಂ ಸೆರೆಗೆಯ್ಯೆ ಸೋಲಮಂ
ಸುವಿಟಜನಕ್ಕೆ ಮಾಡೆ ವದನಾಂಬುರುಹಂ ಜಿನನೋಲಗಕ್ಕೆ ಬ
ರ್ಪ ವನಜಪತ್ರನೇತ್ರೆಯರನಾಖಚರಂ ಮನಮೊಲ್ದು ನೋಡಿದಂ ॥ ೪೭

ತರಳವಿಶಾಲಲೋಚನದ ಬೆಳ್ಪು ಕುರುಳ್ಗಳ ಚೆಲ್ವು ಭೂಷಣೋ
ತ್ಕರದ ಬೆಡಂಗು ತೆಳ್ವಸಿಱ ಭಂಗಿ ಕುಚಂಗಳ ತೋರ್ಪು ಕಣ್ಗೆವಂ
ದಿರ ವಿಟರಂ ಪಡಲ್ವಡಿಸಲೆಂದು ಮನೋಜನ ದಾಟಿ ಬರ್ಪವೊಲ್
ಪರಮಜಿನೇಂದ್ರನೋಲಗಕೆ ಬರ್ಪ ವಿದಗ್ಧೆಯರೊಪ್ಪಿ ತೋಱಿದರ್॥೪೮

ಅಂತು ಜಿನಾಧೀಶ್ವರನೋಲಗಕ್ಕೆ ಬರ್ಪ ವಿಲಾಸಿನಿಯರಂ ನೋಡುತ್ತುಂ ಸಂತೋಷದಿಂ ಬರುತ್ತುಂ, ೪೯

ಪೊನ್ನ ತೋರಣಮಿಂದ್ರನೀಲದ ರಂಗಮಾದನಯುಂಗುಡೀ (?)
......ನೀಲಮೇಘಮನೊಪ್ಪಿ ಮುತ್ತಿನ ಸೂಸಕಂ
ಚೆನ್ನಮಾಗಿರೆ ತಾರೆಯುಂ ನೆಱೆ ಪೋಲೆ ಜೈನಗೃಹಂಗಳ
ತ್ರ್ಯಸ್ನತಿಕ್ಕೆಯು ನಾಳ್ದವೆಂಬರದಂತೆ ರಂಜಿಸಿ ನಾಡೆಯುಂ ॥ ೫೦

ಕನಕದ ತೋರಣಮುಂ ಮು
ತ್ತಿನ ತೊಳಗುವ ರಂಗವಲ್ಲಿಯುಂ ಪಂಚಮಹಾ।
ಧ್ವನಿನಾದಮುಮೊಳ್ಪಿಜೆಯು
ಮನವರತಂ ಬಸದಿಯೋಳಿಯೊಳ್ ರಂಜಿಸುಗುಂ ॥ ೫೧

ಮತ್ತಮಮರಲೋಕದಿಂ ತತ್ಪುರಮಂ ನೋಡಲೆಂದು ಧರೆಗವತರಿಸಿ ತಂತಮ್ಮ ವಿಮಾನಂಬೆರಸಿರ್ದರೆಸಿಸಿ ತರತರದಿಂದಿರ್ದ ಜಿನಾಲಯದೋಳಿಗಳಮವಱ ಮುಂದಣ ನಾನಾರತ್ನರಚಿತಮಪ್ಪ ಬಾಗಿಲ್ವಾಡಂಗಳಂ ಅವಱ ಮುಂದಣ ಚಂದ್ರಾದಿತ್ಯರ ಬೆಳಗಿನೊಳ್ ಮಚ್ಚರಿಸಿ ತೊಳಗುವ ಮಕರತೋರಣಂಗಳಂ ಚೀನಮಹಾಚೀನದ ಮಹಾರ್ಘ್ಯ

ಜಂಗಳಂ ಪಚ್ಚೆಯ ಪವಳದ ಶೋಭೆವೆತ್ತ ಸೋಪಾನಂಗಳಂ ಮೋಕ್ಷ
ಶ್ರೀಯ ಸಿಂಹಾಸನಮೆನಿಸಿಪ ಪ್ರಾಕಾರಂಗಳಂ ನೋಡುತ್ತುಮಿರ್ಪ
ನ್ನೆಗಂ ॥] 1 ೫೨

ತುರಗದಳಂಗಳಕ್ಕಲದೊಳಂ ಬರೆ ಮುಂದೆ ಮಹಾವಿಭೂತಿಯಿಂ
ಪರಿಯೆ ಪತಾಕೆಗಳ್ ನೃಪಕುಮಾರಕರೋಜೆಯಿನೆಯ್ದೆ ಸುತ್ತುಂ
ಬರೆ ತಪೆ ತಳ್ತು ನಂದನವನಾಕೃತಿಯಂತಿರೆ ತೂರ್ಯನಾದಮೊ
ಪ್ಪಿರೆ ಗಣಿಕಾಳಿ ಚಾಮರಮನಿಕ್ಕೆ ಸುರಾಧಿಪನಂತೆ ಲೀಲೆಯಿಂ ॥ ೫೩

[ತತ್ಪುರಾಧೀಶ್ವರನಪ್ಪ ಚಿತ್ರವಾಹನಮಹಾರಾಜಂ ತನಗೆಲ್ಲ ಜಿನಾ
ಲಯಂಗಳಂ ಕಾಣ್ಬುದು ನಿತ್ಯವ್ರತಮಪ್ಪುದರಿಂ ಜಿನಭವನಂಗಳ
ಲ್ಲಮಂ ಪೂಜಿಸುತ್ತೆ ಬಂದು ಭೂತಹಿತಮೆಂಬ ತಮ್ಮ ನ್ಯಾಮದ ಬಸದಿಯ
ನೆಯ್ದಿ ॥ ೫೪

ಕರಮೊಸರದಿಂ ಬಡವಂ
ಗುರುಮುದದಿಂ ಪೊನ್ನ ರಾಶಿ ಗೊರೆಕೊಂಡಂತಾ ।
ಧರಣೀನಾಥಂ ಭಕ್ತಿಯ
ಭರದಿಂ ಬಲವಂದು ಮೊಱಸೂಚಿ ಜಿನಗೃಹಮಂ ॥ ೫೫

ಸಿಷಿದ್ಧಿಯಿಂದೊಳಗಂ ಪೊಕ್ಕು— ೫೬
ಇರುವಂತಿ ಜಾಜಿ ಪಾದರಿ
ಸರಸಿರುಹಂ ಸುರಗಿ ಮಲ್ಲೆ ಪೊಸಸಂಪಗೆಯಾ ।
ಅರಲಿಂ ಭಕ್ತಿಯಿನಾತಂ
ಪರಮಜಿನೇಶ್ವರನ ಪಾದಮಂ ಪೂಜಿಸಿದಂ ॥ ೫೭

ಮತ್ತಂ ಪಲವುರತುನದ ಮಣಿಹಾರಂಗಳಿಂದಂ ಚಾಮೀಕರಪ್ರ
ಷ್ಪಮಾಲೆಗಳಿಂದಂ ಮುತ್ತಿನ ಲಂಬಣಗಳಿಂದಂ ತಾನೆ ತನ್ನ ಕಯ್ಯಾ
ಪೂಜಿಸಿ ಬೞಿಕ್ಕಂ— ೫೮

1 ಪ್ರಜಪ ಚಲ್ಯುವಾ ಸುತ್ತಿ ಬಳಸಿದ ಬಸದಿಗಳ ವಿಳಾಸಮುಮಂ ನೋಡ
ತ್ತುಮಿರ್ಪನ್ನೆಗಂ (ಗ)

ಸುರರಾಜಂ ಪರಮಜಿನೇ
ಶ್ವರನಂ ತನ್ನೊಂದು ಭಕ್ತಿಯಿಂದೋಲಗಿಪಂ ।
ತಿರೆ ಪಾಂಡ್ಯಾನ್ವಯಕುವಲಯ
ಶರನಿಧಿನಂದನನುಮಪ್ಪಿ ಚೆಲ್ವಪ್ಪಿನೆಗಂ ॥ ೫೯

ಸುರಿದಪುದು ರಸದ ಮಳೆ ಭೋ
ರ್ಗರೆದು ರಸಾಯನದ ಪೆರ್ಪೊನಲ್ಪರಿದಪುದ ।
ಚ್ಚರಿಯಾಗಮೃತದ ತೊಱೆಯು
ಬ್ಬರಮಾಗಲ್ ತೀವಿ ಬಂದುದೆಸಿಪತಿಶಯದಿಂ ॥ ೬೦

ಕಿಱಿದುಬೇಗಮೋಲಗಂಗೊಟ್ಟಿರ್ದು ತದನಂತರಂ ತ್ರೈಲೋಕ್ಯಮಾಂಗಲ್ಯನಂ ಕಣ್ಣಾರ ನೋಡಿ ಮನದ ಪೆರ್ಚಿಂದಂ ಕರಕಮಳಂಗಳಂ ಮುಗಿದು ನಿಂದಿರ್ದು][1] ॥ ೬೧

ಶ್ರೀಯ ನಿಮಿರ್ಕೆಗಂ ಸುಖದಳುರ್ಕೆಗಮುನ್ನತಕೀರ್ತಿಗಂ ಯಶ
ಶ್ರೀಯೊದವಿಂಗಮೊಪ್ಪುವಳವಿಂಗೆ ಮಹಾಬಳಕಂತು ಸದ್ವಚ
ಶ್ರೀಯೊದವಿಂಗಮಾಟಪೊಡೆ ಪೂಜಿಸು ನಿರ್ಮಳನಾಗಿ ನಿರ್ವೃತಿ
ಶ್ರೀಯುವತೀಶನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೨

ಚಾರುವಿಲಾಸನೇತ್ರಿಯರನುತ್ಪಲಗಂಧಿಯರಂ ಮನೋಹರಾ
ಕಾರೆಯರಂ ವಿದಗ್ಧಸುರಸುಂದರಿಯರ್ಕಳನಾಗಳುಂ ಸವಿ
ಸ್ತಾರದೊಳೊಂದೆ ಭೋಗಿಸುವೆನೆಂಬೊಡೆ ಪೂಜಿಸು ಕೂಡೆ ನಿರ್ವೃತಿ
ಶ್ರೀರಮಣೀಶನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೩

---

1 ಚಿತ್ರವಾಹನ ಮಹಾರಾಜನೆಂಬನಾ ಪುರಮನಾಳ್ವರಸಂ ಪಾಂಡ್ಯವಂಶತಿಳಕನೆಲ್ಲಾ ಬಸದಿಗಳುಮಂ ವಂದಿಸಿಯರ್ಚಿಸುತ್ತುಂ ತಮ್ಮನ್ವಯದ ತ್ರಿಭುವನತಿಲಕಮೆಂಬ ಬಸದಿಗೆ ವಂದು ಮಾಣಿಕ್ಯದ ಮಣಿಸರಂಗಳಿಂದಂ ಪೊನ್ನಪುಷ್ಪಮಾಲೆಗಳಿಂ ಮುತ್ತಿನ ಲಂಬಣದಿಂದಂ ತಾನೆ ತನ್ನ ಕಯ್ಯಾರೆ ಪೂಜಿಸಿ ಕಯ್ಗಳಂ ಮುಗಿದು ನಿಂದಿರ್ದು (ಗ)

ಸ

ಚೋಳನ ಮೇಲೆ ಸೀಡಿ ಕರಮಂ ಪದಪಲ್ಲವಮಂ ಕಳಿಂಗಭೂ
ಪಾಲನ ಮೇಲೆ ಸೀಡಿ ಮಗಧಾವನಿಪಾಲಕನಂ ಮಲಂಗಿಸಲ್
ಲೀಲೆಯೊಳಿರ್ಪೆನೆಂಬ ಮನಮುಳ್ಳೊಡೆ ಪೂಜಿಸು ದೇವಪಾಲಭೂ
ಪಾಲಕವಂದ್ಯನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೪

ಆದರದಿಂದಮುಯ್ದು ಪರಿಚಾರಕರಿತ್ತುವಧಾರಿಸೆಂದು ಹಾ
ರಾದಿದುಕೂಲಮಾದಿಪರಭೂಷಣಮಂ ನುತವಸ್ತ್ರಮಂ ಮಹಾ
ಹ್ಲಾದದಿನುಟ್ಟುತೊಟ್ಟು ಸುಖಮಿರ್ಪೊಡೆ ಪೂಜಿಸು ನಚ್ಚಿ ಮೆಚ್ಚಿ ಕೂ
ರ್ತಾದರದಿಂದಮೊಲ್ದು ದುರಿತಾರಿಚತುರ್ಮುಖಶಾಂತಿನಾಥನಂ ॥ ೬೫

ಭೋಗಕೆ ರೂಪಿನುನ್ನತಿಗಮಿಂದ್ರನರೇಂದ್ರಮಹಾವಿಭೂತಿಗಂ
ಚಾಗದ ವೀರದೇಳ್ಗೆಗಮನಂತಸುಖಕ್ಕಮಿಳಾತಳಕ್ಕಗು
ರ್ವಾಗೆ ಜಸಕ್ಕಮಾಟಪೊಡೆ ಪೂಜಿಸು ನಿಶ್ಚಲನಾಗಿ ನಿರ್ವೃತಿ
ಶ್ರೀಗಧಿನಾಥನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೬

ಧಾರಿಣಿಯೊಳ್ಸಮಸ್ತತಿರಿಕಂಗಳೊಳಂ ನೆಱೆ ಪುಟ್ಟಿ ಸತ್ತು ಸಂ
ಸಾರಸಮುದ್ರದೊಳ್ತಿರಿಯದಿಂದ್ರವಿಭೂತಿಯೊಳಿರ್ಪೆನೆಂಬೊಡಾ
ಚಾರದೊಳೊಂದಿ ಶುದ್ಧಮನದಿಂ ನೆಱೆ ಪೂಜಿಸು ಕೂರ್ತು ನಿರ್ವೃತಿ
ಶ್ರೀರಮಣೀಶನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೭

ನೋವಿನೊಳಿರ್ಕುಟೊಳ್ಬಳವೆ[1] ಕಿರ್ಚಿನೊಳಿಕ್ಕುವ ಸೀಳ್ವ ಪೋೞ್ವ ಕೊ
ಯ್ದೋವದೆ ಬೈವ ಪೊಯ್ವ ನರಕಂಗಳ ದುಃಖದೊಳೊಂದದಾಗಳುಂ
ದೇವವಿಭೂತಿಯೊಳ್ನೆರೆವೆನೆಂಬೊಡೆ ಪೂಜಿಸು ಕೂರ್ತು ನಿರ್ವೃತಿ
ಶ್ರೀವನಿತೇಶನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೬೮

ಆದಿಯನಾದಿಗೊಂಡು ಬಹುದುಃಖಮನೂಡುವ ಕರ್ಮವೃಕ್ಷಮಂ
ಛೇದಿಸಿ ವೈರಿಮೋಹಮನಡರ್ತಿಱಿದುನ್ನತಿವೆತ್ತು ಮೋಕ್ಷಲ

1 ಮುಱಿವ (ಗ)

ಕ್ಷ್ಮೀದಯಿತೇಶನಾಗಿ ಸುಖಮಿರ್ಪೊಡೆ ಪೂಜಿಸು ಕೂರ್ತು ನಿರ್ವೃತಿ
ಶ್ರೀದಯಿತೇಶನಪ್ಪ ದುರಿತಾರಿಚತುರ್ಮುಖಶಾಂತಿನಾಥನಂ ॥ ೧೯

ಎಂದು ಸ್ತುತಿಶತಸಹಸ್ರಂಗಳಿಂ ಚತುರ್ಮುಖಶಾಂತಿನಾಥನಂ ಸ್ತುತಿಯಿಸಿ ಸಮಸ್ತಗುಣಭಟ್ಟಾರಕರಂ [1] ವಂದಿಸಿ ನಿತ್ಯವ್ರತಂಗಳಂ ಕೈಕೊಂಡು [ಸಿದ್ಧಸೇಸೆಯಂ ಕೊಂಡು] ಕಿಱಿದುಬೇಗಂ ಧರ್ಮಮಂ ಕೇಳ್ದು [ಚಿತ್ರವಾಹನಮಹಾರಾಜಂ ತನ್ನರಮನೆಗೆ ಪೋದನಿತ್ತಲ್ ಚಂದ್ರಾಭಮಹಾರಾಜಂ ಪಾಂಡ್ಯಕುಲಚೂಡಾಮಣಿಯ ಸಮ್ಯಕ್ತ್ವಕ್ಕೆ ಮೆಚ್ಚಿ ತನ್ನೊಳಿಂತೆಂದಂ ॥ ೨೦

ಕುಲದೊಳ್ಪಾಂಡ್ಯಮಹೀಶರಲ್ತೆ ಪಿರಿಯಭೂಪಾಲರೊಳ್ಮತ್ತಮಾ
ಕುಲಜರ್ಗಗ್ಗದ ಪೊಂಗೆ ಕಂಪೆನಿಪವೊಲ್ ದೇವಂ ಜಿನಾಧೀಶ್ವರಂ
ಕುಲದೈವಂ ಗಡಮೆಂದೊಡಿಂನೆಱಿಯೆ ಭಾಪಮ್ಮಮ್ಮ ಬಣ್ಣಿಪ್ಪರಾ
ರೆಲೆ ಭಾವಿಪ್ಪೊಡೆ ಪಾಂಡ್ಯಗೇಹಜರೆ ಧನ್ಯರ್ ನೋಡೆ ಭೂಚಕ್ರದೊಳ್ ॥

ಎಂದು ಮತ್ತಂ,] ೨೧

ಈ ನರೇಶ್ವರಧರ್ಮಬುದ್ಧಿಯುಮಂ ವ್ರತಂಗಳ ಪೆಂಪುಮಂ
ಹೀನಮಪ್ಪ ನೆಗೞ್ತೆಯೊಳ್ ಖತಿಯುನ್ನತಿಕ್ಕೆಯ ಗುಣ್ಪುಮಂ
ತಾನೆ ಕೇಳಗೆ ಪೇೞ್ಗೆ ಮೋಳಯೊಳಪ್ಪವೀಜಿನಬಿಂಬಮೊಂ
ದಾನರೇಶ್ವರನಕ್ಕಱಿಂ ಪೊಗೞ್ದಂ ಮಹೀವಳಯೇಶನಂ ॥ ೨೨

ಎಂದು ಪೊಗೞ್ದು ಪುರದ ಮಹಿಮೆಗೆ ಆಶ್ಚರ್ಯಂ ಬಟ್ಟು, ೨೩

ನೋಡದಿರನ್ಯಕಾಂತೆಯುರುವಂ ಪದೆದಕ್ಕಱನಂತೆ ಪೆರ್ಚಿ ಮಾ
ತಾಡದಿರೊಂದುಮಂ ಮಱೆದು ಪೆರ್ಮೆಸಿಯಂ ದುರಿತಾನ್ವಿತರ್ಕಳೊಳ್
ಕೂಡದಿರೆಂಬ ಮಾತುಗಳನಲ್ಲದೆ ಕೇಳ್ಕದೃಷ್ಟಿಯೆಂದು ಮಾ
ತಾಡಿಸಬಾರದೀ ಪುರದೊಳೆಂದೊಡೆ ಧರ್ಮಮನೇನನೆಂಬುದೋ ॥ ೨೪

---

1 ಮುನಿಗುಪ್ತ ಭಟ್ಟಾರಕರಂ (ಗ)

ಎಂದು ಪುರದೊಳಿರ್ದ ಸತ್ಪುರುಷರುಮಂ ಪೊಗೞ್ದು — ೭೬

ಜಿನಭಕ್ತಿಯೊಳುರ್ವಿಯೊಳೀ
ತನೆ ಬಗೆವೊಡೆ ದೇವನೆಂದು ಕೈಕೊಂಡು ಜಗ |
ಜ್ಜನವೊಲ್ದು ಪೊಗೞೆ ಪಡೆದಂ
ಜನಾಧಿಪಂ ಪಾಂಡ್ಯದೇವನೆಂಬೀ ಪೆಸರಂ ॥ ೭೭

ಎಂದು ಮನದಳ್ಕಱಿಂ ಚಿತ್ರವಾಹನಮಹಾರಾಜನಂ ಪೊಗೞ್ದು ಜಿನ ಭವನಮಂ ತ್ರಿಃಪ್ರದಕ್ಷಿಣಂಗೆಯ್ದು ನಿಷಿದ್ಧಿಯಿಂದೊಳಗಂ ಪೊಕ್ಕು ದರ್ಶನಸ್ತುತಿಯುಂ ಪೇೞ್ದು ಮುನಿಗುಪ್ತಭಟ್ಟಾರಕರಂ ಬಂದಿಸಿ ಪರಿವಿಡಿಯಿಂ ದುೞಿದ ಮುನಿವರರಂ ಬಂದಿಸಿ ಕುಳ್ಳಿರ್ದರ್ ॥ ೭೮

ಮುನಿಕುಲಸರೋಜತರಣಿಗೆ
ಜಿನಸಮಯಾಂಬರನಿಶಾಕರಂಗನುಪಮಸ |
ಜ್ಜನವಂದಿತಂಗೆ ದುರ್ಗುಣ
ವನನಿಧಿಬಡಬಾನಲಂಗೆ ಖಚರ[illegible]ಂ ॥ ೭೯

ವಿನಯವಿನಮ್ರಮುಖನಾಗಿ ಕೈಮುಗಿದಿರ್ದು ತನ್ನ ಬಂದ ಕಾರ್ಯಮಂ ಪೇೞ್ವುದುಂ ಮುನಿಗುಪ್ತಭಟ್ಟಾರಕರಿಂತೆಂದರ್ ॥] [1] ೮೦

ಮಗನೆ ತಪಂ ಪೊಗ್ಗಲ್ಲದು
ಜಗದೊಳ್ ವೈರಾಗ್ಯಮಿಲ್ಲದಂಗಾತಪಮು |
ಭ್ಭೋಗಮಂ ಮಾಡುಗುಮಲ್ಲದೆ
ಖಗೇಶ ಪೆಱತೊಂದುಸೌಖ್ಯಮಂ ಮಾಡುಗುಮೇ ॥ ೮೧

1 ರಾಜಭವನಕ್ಕೆ ಪೊ[illegible]ಂ ಚಂದ್ರಾಭಮಹಾರಾಜಂ ಪಾಂಡ್ಯನಂ ಪಲತೆಱದಿಂಪೊಗೞ್ದು ಜಿನಾಲಯಮುಮಂ ತ್ರಿಃಪ್ರದಕ್ಷಿಣಂಗೆಯ್ದು ನಿಸಿದಿಯಿಂದೊಳಗಂ ಪೊಕ್ಕು ದೇವರಂ ವಂದಿಸಿ ಮುನಿಗುಪ್ತಭಟ್ಟಾರಕರಂ ವಂದಿಸಿ ತನ್ನ ಬಂದ ಕಾರ್ಯಮನಱಿಪುವುದುಮವರಿಂತೆಂದರ್ (ಗ)

ಪಿಂಡಿಯಂ ಬಿಡಿಸಪ್ಪೋದ[1] ಮರುಳ್ ಖಂಡುಗೆಣ್ಣೆಯನಾಂತು ಬಂದುದೆಂಬನಾೞ್ನುಡಿಯಂತೆ ಮರ್ಕಟವೈರಾಗ್ಯದಿಂ [ಶ್ರುತಿವಿಹೀನರಪ್ಪವರ್ ಸ್ವರ್ಗಾಪವರ್ಗ][2] ಸುಖಮಂ ಬಯಸಿ ಜಿನದೀಕ್ಷೆಯಂ ಕೈಕೊಂಡು ತಪದ ಬೇವಸಕ್ಕಾಱದೆ ಪ್ರಚ್ಛನ್ನ[3] ದೋಷಿಗಳಾಗಿ [ಮಱುಭವದೊಳ್ಪರಿದಪ್ಪ ದುಃಖಮಂ ಪೊರ್ದುವರದಱಿಂ ॥][4] ೮೨

[ನೀರುಂ ಪುಳ್ಳಿಯುಂ ಕಿಚ್ಚುಮ
ದಾರಯ್ವಂದಡುವ ಲಲನೆಯುಂ ಮಡಕೆಯುಂ ವಿ ॥
ಸ್ತಾರದೊಳೊಲೆಯುಮಿವೆಲ್ಲಮು
ದೋರಂತೊಡಗೂಡೆ ಕೂೞನಡುವಂತೆ ವಲಂ ॥ ೮೩

ಅದೆಂತೆಂದೊಡಷ್ಟಾವಿಂಶತಿಮೂಲಗುಣಮುಮಂ ಪದಿಮೂಱು ತೆಱದ ಚಾರಿತ್ರಮುಮಂ ದರ್ಶನಮುಮಂಬೆರಸು ಮೋಕ್ಷಮಂ ಸಾಧಿಸುವುದು ॥ ೮೪

ಇವಱೊಳಗೊಂದು ಗುಣಂ ಹೀ
ನವಾಗೆ ಕೈವಲ್ಯಮಿಲ್ಲ ಕೇಳದಱಿಂ ಭೂ ।
ಭವನದೊಳದಕ್ಕೆ ತಪದೊಳ್
ವಿವೇಕಿಯೆನಿಸಿದನೆ ನೆಗೞ್ವುದನಿತುಂ ಗುಣದೊಳ್ ॥ ೮೫

ಅದೆಂತೆಂದೊಡೆ ನೀರನುಂ ಪುಳ್ಳಿಯುಮಂ ಅಕ್ಕಿಯುಮಂ ಅಡವನುಮಂ ಕಿಚ್ಚುಮನೊಲೆಯುಮಂ ಮಡಕೆಯುಮಂ ಕೂಡಿಸುವಲ್ಲಿ ಇವಱೊಳವೊಂದಿಲ್ಲದೊಡಂ ಕೂೞಾಗದೆ ಕಿಡುವಂತೆ ಮೂಲಗುಣಂಗಳೊಳೊಂದುಗುಣಮಾದೊಡಂ ಹೀನಮಾದೊಡೆ ಕೈವಲ್ಯಸುಖಂ ಸಮನಿಸಲಱಿಯದು ॥ ೮೬

ಮೂಲಗುಣಮಾದಿಸಕಲಗು
ಣಾಳಿಯೊಳಂ ಕಿಡದೆ ನೆಗೞ್ವುದೇಗೆಟ್ಟುತ್ತುಂ ।

---

1 ಪಿಡಿಸಪೋದ (ಗ)  2 ಮೋಕ್ಷ (ಗ)  3 ಗುಪ್ತ (ಗ)
4 ಸಂಸಾರವೃದ್ಧಿಯಂ ಮಾಡಿಕೊಳ್ವರದಱಿಂ (ಗ)

ದೇಳಿಸಿಯೊಂದಱೊಳಂ
ಕೀಳಾದೊಡೆ ತನಗೆ ಪರದ ಸುಖಮದು ಕಿಡುಗುಂ ॥ ೮೭

ಪಲವುಂ ಶಾಸ್ತ್ರಮನೋದಿದ
ಬಲದಿಂ ಮೆಯ್ವೆರ್ಚಿ ಗರ್ವದಿಂ ಧರ್ಮದ ಪಂ ।
ಬಲನುೞಿದು ಪಿರಿಯರಪ್ಪರ
ನೆಲೆಯುಂ ಕೈಕೊಳ್ಳದುದ್ಧತಂ ಮುಸಿಯಲ್ಲಂ ॥ ೮೮

ತನಗೆ ಸೊಗಯಿಸದ ವಸ್ತುಗ
ಳನಿತುಮನಿಂಬಾಗೆ ತೊೞೆದು ಪ್ರಱುಡಿಸಿ ಪೆಱನಾ ।
ವನೂ ಪೊಲ್ಲಮೆಂದೊಡಂತಾ
ತನುಮಂ ಕೈಕೊಳ್ಳದಾತನುಂ ಮುಸಿಯಲ್ಲಂ ॥ ೮೯

ಕೂಸುಗಳಂ ಮುದ್ದಾಡಿಸಿ
ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ।
ಲೇಸಾಗಿ ತನಗೆ ಜೊತ್ತಿಸು
ವಾಶಾಪರನ್ಯದಲಾಱನುರುನಿರ್ವೃತಿಯುಂ ॥ ೯೦

ಒಡನೆಯ ಋಷಿಯಂ ಕಳದೋ
ಗಡಿಸದೆ ಗೃಹಪತಿಗಮವನ ಪೆಂಡತಿಗಂ ನೇ ।
ರ್ಪಡೆ ಪೆಱರನಟ್ಟಿ ದೂಷಿಸಿ
ನುಡಿವ ದಿಗಂಬರನಮೋಘಮೆಯ್ದಂ ಸುಖಮಂ ॥ ೯೧

ತಡೆಯದೆ ಜಿನಪೂಜೆಗಳಂ
ಕಿಡಿಸಿ ಮನಂಪೆರ್ಚಿ ತನ್ನ ಪಕ್ಷದ ಮನೆಗ ।
ಳ್ಗಡಿಗಡಿಗಟ್ಟುವ ಮುನಿಪಂ
ಕಿಡುಗುಂ ಮೇಲಪ್ಪ ದೇವಸಿಳಯದ ಸುಖಮಂ ೯೨

ನೀನೆಮ್ಮ ಗುಡ್ಡನ್ಯ ಪೆಱ
ತೇನೆಂಬುದು ಪೆಱರ್ಗೆ ಭಕ್ತಿಮಾಡಲ್ವೇಡೆಂ ।
ದೇನೊ ಬಿಡೆ ಜಡಿದು ಮೋಹಿಪ
ಹೀನಗುಣಂಗೆಱಗಲಾಗದಱಿವುಳ್ಳ ನರಂ ॥ ೯೩

ಉಗುರಂ ಮಸೆಯಿಸಿ ಗುರುವಂ
ಬಗೆಯದೆ ಜಿನವಚನರಚನೆಯುಂ ಮಱೆಯಿಸಿ ಕೆ ।
ಮ್ಮಗೆ ತಮ್ಮಿಚ್ಛೆಗೆ ಕಥೆಯುಂ
ಬಗೆಗೊಳ್ವಂತಂತೆ ಪೇೞ್ವನುಂ ಮುನಿಯಲ್ಲಂ ॥ ೯೪

ತನ್ನಯ ಸಮುದಯಮುಂ ಪೊಗ
ೞ್ವನ್ನೆಱೆ ಕೈಕೊಂಡು ಪೆಱರ ಸಮುದಾಯಮನ ।
ತ್ಯ್ವನ್ನತಿಗಿಡೆ ಪೞಿಯುತ್ತಿ
ರ್ಪನ್ನಂ ನರಕಕ್ಕಮಿೞುಗುವೆಂಬುದು ಸತ್ಯಂ ॥ ೯೫

ಪೆಱರೊಳ್ಳಿದರಾದೊಡಮೇ
ತಱ ತಪಸಿಗಳೆಂದು ಪೞಿವನುಂ ತನ್ನವರಂ ।
ಪೆಱತೇಂ ದುರ್ಜನರಾದೊಡ
ಮುಱಿ ಮನದೊಳ್ಕೂರ್ತು ಪೊಗೞ್ವನುಂ ಮುನಿಯಲ್ಲಂ ॥ ೯೬

ಮೆಲ್ಲನೆ ಚರ್ಚಿಸಿ ನೀನಿವ
ರ್ಗಲ್ಲದೆ ಬೆಸಗೆಯ್ಯವೇಡ ಪೆಱರಿವರಿಂ ಬಿ ।
ಟ್ಟೊಳ್ಳಿದರಾರೀಧರೆಯೊಳ
ಗಿಲ್ಲೆಂದುಱೆ ನೆಚ್ಚಿಪಾತನುಂ ಮುನಿಯಲ್ಲಂ ॥ ೯೭

ಬಗೆವಂದೀಬಾಹೀಕೂ
ೞಗಣಿತರುಚಿಯಾದುವೆಕ್ಕ ನಿನ್ನಂತಾರೀ ।
ಜಗದೊಳಡಬಲ್ಲರೆನ್ನುತೆ
ವಿಗೆ ಪೊಗೞ್ದುಂಬವನ ರುಷಿಯರೊಳ್ ಬೂತನಿಕುಂ ॥ ೯೮

ಮತ್ತಂ] ಋಷಿಯರ ಗುಣಮಂ ಪೇೞ್ವೊಡೆ:-ಪಾದರಿಗೆಯ ದೂದ ವಿಯಂತೆ ಪೆಱರಂ ಸಂಕೇತಂಗೊಳಸದೆ, ಮನ್ನೆಯರಾಳಂತೆ ಕೋೞಂ ಗಾಸೆಗೆಯ್ಯದೆ, ಬಯಲ ನೀರಂತೆ ಮಾರ್ಗಂಬಿಟ್ಟು ನಡೆಯದೆ, ಕೋಣ ನಂತೆ ಇರ್ದ ಸಮುದಾಯಮಂ ಕದಡದೆ, ಕರಡಿಯಂತೆ ಪಿರಿಯರ ನುಡಿ ಗೆಡೆಮಾಯದೆ, ಪುಲ್ಲಯಂತೆ ಗುಣವಂತರ ಕೂಟಕ್ಕೆ ಬದರದೆ, ಒಡೆದ ಪಾಲಂತೆ ಮೂಲಗುಣಂಕಿಡದೆ, ನೀರೊಳ್ಪುಕ್ಕೆಣ್ಣೆಯಂತೆ ಪೆಱರ ದೋ ಷಮಂ ಪರಪದೆ, ಪುಲಿಯ ಬಾಲದಂತೆ ಗುರುವಚನಮಂ ಮೀಱದೆ, ಮು ಗಿಲಂತೆ ಪೊತ್ತಿಗೊಂದು ಬಣ್ಣಮಾಗದೆ, ಕೋಡಗದಂತೆ ಕಂಡಕಂಡರ ನೇೞಸದೆ, ದೇಸಿಗನಂತೇಕಾಕಿಯಾಗದೆ, ತೊಱೆಯೊಳ್ಮಂದನಂತೆ ಪರೀಷ ಹಕ್ಕೆ ನಡುಗದೆ, ಬೂತಿನಂತೆ ಪೆಱರವಗುಣಮಂ ದೂಱದೆ, ಸೂಳ ಯಂತೆ ಚೆನ್ನಂ ಮೆಱೆಯದೆ, ಬಾಲಕನಂತೆ ಪೊಲ್ಲಮಂ ಪಿಡಿಯದೆ, ಹ ಜ್ಜೆಯ [1] ಕಟ್ಟಿಗೆಯಂತೆ ಖಳರ ನುಡಿಗಳ್ಪಾಡದೆ, ಇೞಿಮೊಲದ ನೀರಂತೆ ಕುಪಥಕ್ಕೆೞಿಗದೆ, ಪುತ್ತಿನಂತೆ ತಪದೊಳ್ಮಲಸಿಯನಾಗದೆ, ತಱಿಯದ ಮರನಂತೆ ವಕ್ರನಾಗದೆ, ಬಾಳೆಯಂತೆ ತಪದ ಕ್ಲೇಶಕ್ಕೆ ಬೆಂಡಾಗದೆ ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ, ಉಕ್ಕಿನಂತತಿಸಿಷ್ಠು ರ ನಾಗದೆ, [2] ಪಟೆಯ ಸೀರೆಯಂತೆ ಗುಣದೊಳ್ ನೂನಮಾಗದೆ, ಕಾಗೆ ಯಂತೆ ಪೆಱರ್ಗೆ ಪೀಡೆಯಂ ಮಾಡದೆ, ನಾಯಂತೆ ಗೋತ್ರಕಲಹಮಂ ಮಾಡದೆ, [3] ತೊೞ್ತಿನಂತೆ ಪೆಱರ ವಶಮಾಗದೆ, ಕೂಲಿಯ ಬಂಟನಂತೆ ಬೆಲೆಯಂ ಪಾರದೆ [4] ದಾೞಿಕಾಱನಂತಟ್ಟಿಟ್ಟು ಪೋಗದೆ, ರಾಜಪುತ್ರನಂತೆ ಲೀಲೆಯಂ ಮಱೆಯದೆ, [ಸೂಳೆವಂಡತಿಯಂತೊಲ್ದೊಲಿಸದೆ, ಗ್ರಹದಂತೆ ಬೇಡಿಕೊಂಡುಣ್ಣದೆ, ಮಕ್ಕಳಂತೆ ಕಾಡಿಯುಣ್ಣದೆ, ಅರಸಾಳನಂತ ನೋಯಿಸಿಯುಣ್ಣದ ಸೂೞೆಗಾಱನಂತೆ ಪೆಱರಂ ಕ್ಲೇಶಂಗೊಳಸದೆ, ಬಟ್ಟೆಗುತ್ತನಂತೆ ಉಪವಾಸಮಂ ತೋಱಿ ಕಾಡದೆ, ಭಟ್ಟನಂತೊಂ ದೊಂದಂ ತೋಱಿ ಬಯ್ಯದೆ], ವೈದ್ಯನಂತೆ ಕಾತ್ತಮಂ ತೋಱಿ ಮುನಿ

---

[1] ಹವ್ವೆಯ (ಗ). [2] ತರಗೆಲೆಯಂತೆ ಸಂಚ್ಚದನಾಗದೆ (ಗ)

[3] ಮರಕಟವಕ್ಕಿಯಂತೆಂಪೊಲ್ಲಸಸನಂ ಮಾಡುತ್ತಿರದೆ (ಗ).

[4] ಬೆಲೆಗೆ ಸಾಡದೆ (ಗ).

ಯುದೆ, ತೊಱೆಯಂತೆ ಮಳಲುಮಂ ತೋಱೆ ಬೆರ್ಚಿಸದೆ, ಕಿರ್ಚಿನಂತೆ [1] ಅಡಕವುಮಂ ತೋಱೆ ನಂಬಿಸದೆ, ದಾೞಿಯಂತೆ ಡಾಹಮುಮಂ ಮಾಡಿ ಕಿಡಿಸದೆ, [ಪೊೞಲಂ ಪುಗುವ್ರುಡುವಿನಂತೆ ಜಿನೇಂದ್ರಮತಮಂ ಪತ್ತುವಿಕ್ಕದೆ,] ಬಡವನಂತೆ ಮನ್ನಣೆಗಾಸೆಗೆಯ್ಯದೆ, ವ್ಯಂತರನಂತೞುವೂಜೆಗೆಱಗದೆ, ದ್ರೋಹರಂತೆ [2] ಗುಜುಗುಜುಗೊಳ್ಳದೆ, ಪೆರ್ಗಣದಂತೆ [ಪೊಸಮುಷಿಗೆ] ಗುಱುಗುಱಿಸದೆ, [ಪುಲಿಯಂತೆ ಪೆಱಗುರ್ಪದ್ರವಮಂ ಮಾಡದೆ ಮರಕುಟುಕನಕ್ಕಿಯಂತೆ ಬಾಯಂ ಬಡಿಯುದೆ,] ತುಂಬಿಯಂತೆ ಕುಸುಮಪ್ರಿಯನಾಗದೆ, ತಱಗೆಲೆಯಂತೆ ಅಲ್ಲಲ್ಲಿಗೆ ಪಾರದೆ, [3] ತಳಾಱನಂತೆ [ಪೆಱರ] ಪೊಲ್ಲಮೆಯುಮಂ ಪಾಱದೆ, [ಸೂಳೆಯ ಮನೆಯ ಗಿಳಿಯನಂತೆ ತನ್ನನೊಲ್ಲದರಂ ಪೞಿದು ಬಲ್ವರಂ ಪೊಗೞದೆ,]ಪಾವಿನಂತೆ ಗೀತಕ್ಕೆಱಗದೆ, ಪುಲುಬೂತಿನಂತೆ ಕಂಡರನೇನಾನುಮಂ ಬೇಡುತ್ತಿರದೆ [4], ಇಱುಂಪೆಯಂತೆ ಕಂಪಿಗೆಱಗದೆ, ಗಾಣದೆತ್ತಿನಂತೆ [ನಿಯಮಮಂಗೆಟ್ಟು ತೊೞಲುತ್ತಿರದೆ, ಆಲದ ಬಿೞಲಂತೆ ನೆಲಕ್ಕೆಱಗದೆ, ಮರದ ಬಿೞಲಂತೆ ಪೊಂಗೆಱಗದೆ, ಬಿಲಾಲನಂತೆ ನಾರಿಗಾಸೆಮಾಡದೆ; ಹಂಸೆಯಂತೆ ಸಾರಗ್ರಾಹಿಯುಂ, ಶರತ್ಕಾಲದ [5] ತೊಱೆಯಂತೆ ನಿರ್ಮಳನುಂ, ಸಹಸ್ರಕಿರಣನಂತೆಲ್ಲರ್ಗಮೇಕರೂಪನುಂ, [ತಂ] ಗಾಳಿಯಂತೆ ಮೃದುಗಮನನುಂ, ಸಮುದ್ರನಂತ ನಿಸ್ಸಾರದೂರನುಂ, ಕೌಂಗಿನಂತ ವಕ್ರಗುಣರಹಿತನುಂ, [6] ಭಯದ ಬಟ್ಟೆಯೊಳ್ಪೋಪನಂತ ಸಂಸಾರಭೀತನುಂ, ತಂತ್ರಪಾಲನಂತೆ ಗುಣಪಾಲನುಂ, ಬಲ್ಗೂಂಟೆಯಂತೆ ಮಿಥ್ಯಾತ್ವಕ್ಕಭೇದ್ಯನುಂ, ಮುತ್ತಿನ ಸತ್ತಿಗೆಯಂತೆಲ್ಲಾದೆಸೆಯೊಳ್ ಸೇವ್ಯನುಂ, ಪಡೆವಳನಂತೆ ಸಂವರಣಕಾಱನುಂ, ಸತ್ಪುರುಷನಂತೆ ನಿರ್ಮತ್ಸರನುಂ, ಶರ್ಕರೆಯಂತೆ ನಿಷ್ಕಷಾಯನುಂ, ಕರುಣಾಳುವಪ್ಪರಸಿನಂತೆ ತ್ರಿದಂಡವರ್ಜಿತನುಂ, [ಮುೞಿಯಂತೆ ಸಕಲ

---

1 ಬೆಕ್ಕಿನಂತೆ (ಗ). 2 ಪೊಲೆಸೂಳೆಸೋಲ್ತಂತೆ. (ಬ. ಕ.)
3 ಕಾವೇರಿಯ ನೀರಂತಲ್ಲಲ್ಲಿಗೆ ಪರಿಯದೆ (ಗ)
ಪೆಱರಾರುಮಂ ನೆನೆಯದೆ (ಬ. ಕ.)
5 ಮಾಗಿಯ (ಗ) 6 ನೇರಿದನುಂ (ಗ)

ಜೀವನನುಂ,] ಯುದ್ಧಸನ್ನದ್ಧನಂತೆ [1] ವೀರನುಂ, ಬುದ್ಧಿಶಾಲಿಯಂತಾರೈಕೆ [2] ಯುಳ್ಳನುಂ, ದೂರದರ್ಶಿಯಂತೆ ಮೇಲನಱಿವನುಂ, ಬಲ್ಮಂತ್ರಿಯಂತೆ ಪ್ರಮಾದರಹಿತನುಂ, [3] ಮಂದರದಂತೆ ಕ್ಷಮಾನ್ವಿತನುಂ, ಕುತ್ತಂಗುಳಿಯಂತೆ ಹಿತಾಹಾರನುಂ, ಚಂದ್ರನಂತೆ ಶಾಂತರೂಪನುಂ, ವಿವಾಹಕಾಲದಂತೆ ಶುಭೋದಯನುಂ, ಮಂಗಲಚರಿತನಂತೆ [4] ಕಲ್ಯಾಣವಚನನುಂ, ನೀತಿಪರನಂತೆ ಲೋಕ [ಸ್ವರೂಪ] ಜ್ಞನುಂ, ದಂಡಂ ನಡೆಯಿಸುವನಂತೆ, ದೇಶಜ್ಞನುಂ, ಅವಧಿಜ್ಞಾನಿಯಂತೆ ಸಕಲಾಂತರಂಗಜ್ಞನುಂ, [ಮನೆವಗ್ಗಡೆಯಂತೆ ಬೇಸಱಂ ಮಾಡದನುಂ, ಬಾಣಸಿಗನಂತೆ ಪರಿಚ್ಛೆಯನಱಿವನುಂ, ಗಜವಾಹಕನಂತೆ ಮುಂದಱಿವನುಂ, ತುರಗಾರೂಢನಂತೆ ಬಟ್ಟೆಯನಱಿವನುಂ] ಪಱುಗೋಲನೇಱಿದನಂತೆ ಡಕವುಳ್ಳನುಂ, ರಾಜಸೇವಕನಂತೆ ಡಕವಂತನುಮಪ್ಪುದು ॥ ೯೯

[ಮುನಿಸುದಿರ್ಪುದು ಧರ್ಮದೊಳ್ ವೃಥನಪ್ಪ ರಾಗಮುಮಂದಮಂ
ನೆನೆಯುತಿರ್ಪುದು ಪೊಲ್ಲರೊಳ್ ಕಳಗೊಳ್ಳದಿರ್ಪುದು ಶಿಷ್ಟರೊಳ್
ವಿನಯಮಂ ಪ್ರತಿಪಾಲಿಸಿರ್ಪುದು ಜೀವರಕ್ಷಕನಪ್ಪುದಾ
ಗಮಮನೋವದೆ ಪುಚ್ಛಿ ಚರ್ಚಿಸದಿರ್ಪುದೊಯ್ಯನೆ ಪಾಪದೊಳ್ ॥ ೧೦೦

ಜಿನವಚನಮೊಂತುಟಂತುಟು
ಮನನುನಯದಿಂ ಪೇೞಿದಂತೆ ತನ್ನಿಚ್ಛೆಗೆ ಕೇ ।
ಳ್ಮನೆ ತಟ್ಟಿ ಗಱಿಪಿ [5] ಪೆಱರಂ
ತನಗೆ ವಶಂಮಾೞ್ಪನೆಯ್ದುಗುಂ ಸುಗತಿಯಂ ॥] ೧೦೧

ಪೆಱರವಗುಣಮಂ ಕಂಡೊಡೆ
ಯುಱೆಯುಟ್ಟ ತಗುಳ್ದು ದೂಱಪೇಡವರ[illegible]ವರ್ ।
ಪೆಱರೇಗೆಯ್ದೊಡಮೇಂ ತಾಂ
ಕಱಿಮಱಿಯುಣಮಿಲ್ಲದಂತು ನೆಗೞ್ವುದು ಮುನಿಪಂ ॥ ೧೦೨

---

1 ನಿಚ್ಛಟಗಲಿಯಂತೆ (ಗ)   2 ಪಗೆಯುಳ್ಳನಂತಾರೈಕೆ (ಗ)
3 ಬಲ್ಮಕ್ಕಳಂತೆ ಭಯಸ್ಥನುಂ (ಗ)   4 ಮಂಗಲವೃತ್ತದಂತೆ (ಗ)
5 ಕಟ್ಟಿಗಳಿಪ (ಬ. ಕ.)

[ಪೊಳೆಯುರ್ಬುಡಿವ ಪಱಿಯೋಱಿಗೊಡುವ ಪಗರಣಿಗರಂ ಕಂಡಪ ನರ್ಗುವರಲ್ಲದೆಯುಪರಾಟಕ್ಕೆ ಲಕ್ಷಣವಂ ನೋಡರ; ಕೃತ್ಯದೊಳ್ ಪರೀಕ್ಷೆಯುಂ ಮಾಳ್ಪಂತೆ, ಮಿಥ್ಯಾಜ್ಞಾನಿಗಳ ಕುಹೇತುದೃಷ್ಟಾಂತಕ್ಕೞಗಿ ದುಶ್ಚಾರಿತ್ರದೊಳ್ನೆಗೞ್ವರಲ್ಲಿಯು ದೋಷಮಂ ಪಾರರ್, ತತ್ವದೊಳ್ ದೃಢರಾಗಿ ಸದಾಚಾರದೊಳ್ನೆಗೞ್ವರಲ್ಲಿ ಗುಣದೋಷಮನಱಿಸುವರದಱಿಂ ॥] ೧೦೩

ಭಾವಿಸುವೊಡಂತರಂಗಂ
ಕೇವಳಮೇ ಸಾಲ್ಗುಮೊಂದೆ ಬಹಿರಂಗಮೆನಿ।
ನ್ನೇವುದಣಮೆಂದು ಬಿಡುವಾ
ಗಾವಿಲನಾರ್ತಪನೆ ಕಿಡಿಸಲಘಸಂತತಿಯಂ[1] ॥ ೧೦೪

ನೆಱೆ ಬಹಿರಂಗಮೆ ಸಾಲ್ಗುಂ
ದಱಿಯದೆ ಪೆರ್ಚಿಂದಮಂತರಂಗದ ದೆಸೆಯಂ ।
ಮಱೆದು ಮತಿಗೆಟ್ಟು ಮಾಡುವ[2]
ಕುಱಿ ತಾನಾರ್ತಪನೆ ಕಿಡಿಸಲಘಸಂತತಿಯಂ ॥ ೧೦೫

ಅದಱಿಂದಂತರಂಗದೊಳಂ ಬಹಿರಂಗದೊಳಂ ಕೂಡಿ ನೆಗೞ್ವ [ಬುದ್ಧಿವಂತನೆ ಸಕಲಕರ್ಮವಂ ಕಿತ್ತಿಟ್ಟು ಶಾಶ್ವತಸುಖಮಂ ಪೊರ್ದುಗುಮೆಂತೆರಡಕ್ಕಮಾಱದೊಂದಱೊಳ್ ನೆಗೞ್ದು ನಿರಂತರಸುಖಮಂ ಪಡೆವೆನೆಂಬ ನಿರ್ಬುದ್ಧಿ] [3] ಯೊಂದೆಗಾಲಿಯೊಳ್ ರಥಮಂ ನಡೆಯಿಸುವೆನೆಂಬ, [4] [ನೀರಿಲ್ಲದೆ ಕೂಱಿನಡುವೆನೆಂಬ,] ಕಾವಿಲ್ಲದೆ ಕೊಡಲಿಯೊಳ್ ಮರನಂ ಕಡಿವೆನೆಂಬ [ಭಾರ್ಯೆಯಿಲ್ಲದೆ ಮಗನಂ ಪಡೆವೆನೆಂಬ ಕೈದುವಿಲ್ಲದಿಱಿವೆನೆಂಬ] ನಾರಿಲ್ಲದೆ ಪೂಗಟ್ಟುವೆನೆಂಬ, [5] ಪೆರ್ಗಾವಿಲನಂ ಪೋಲ್ಕುಮಿಂತು ॥ ೧೦೬

---

1 ಕರ್ಮಪ್ರಯಕಿಡಿಸಲ್ (ಬ. ಕ.)    2 ಮತಿಗೆಟ್ಟುಕೇಳೀ (ಗ)

3 ಆತನೆ ಮೋಕ್ಷಲಕ್ಷ್ಮಿಗೆ ವಲ್ಲಭನಕ್ಕುಮೊಂದಱೊಳ್ ನೆಗೞ್ದು ಮುಕ್ತಿಯಂ ಪಡೆವೆನೆಂಬಾತಂ (ಗ)    4 ಒಂದೆ ಕಾಲೊಳ್ ಪರಿವೆನೆಂಬ, ಹೊಕ್ಕಿಲ್ಲದೆ ಸೀರೆಯ ನೆಯ್ವೆನೆಂಬ, ಮದವಳಿಗನಿಲ್ಲದೆ ಮದುವೆಯುಂ ಮಾಡುವನೆಂಬ, ಸೂಜಿಯಿಲ್ಲದೆ ಪೊಲಿವೆನೆಂಬ, ಕತ್ತರಿಯಿಲ್ಲದೆ ಗಾಣವಾಡುವ ಎಗ್ಗನಂ (ಗ)

5 ಒಂದೆ ಕೈಯೊಳ್ ಪಾಲ್ಗಡೆವೆನೆಂಬ, ಬಾದೆಯತ್ತಿನೊಳ್ಗುಳುವೆನೆಂಬ (ಗ)

ಲೇಸು ಬಹಿರಂಗವಿಲ್ಲದೊ
ಡಾಸೆಯದೇನಂತರಂಗಮುಂ ತನಗಿನಿಸುಂ ।
ಲೇಸಾಗಲಱಿಯದೆಂತೆನೆ
ತ್ರಾಸಿನ ಕೋಡನೊಂದು ಬಿರ್ದೊಡೊಂದುೞಿದಪುದೇ ॥ ೧೦೭

[ಎನಿಸುಬಲವುಳ್ಳನುಂ ಭೋಂ
ಕನೆ ಪರಿಯಲ್ಬಾರದೊಂದೆ ಕಾಲಿಂದಂ ತಾ ।
ನೆನಿತಱಿದೊಡಮೊಂದಂಗದೊ
ಳನಘಶ್ರೀಪಥುವನೆರೆಯಲೆಂತುಂ ನೆಱೆಯಂ ॥ ೧೦೮

ಅದಱಿಂದೊಂದನೆ ಪಿಡಿದು ಕರ್ಮಮಂ ಗೆಲ್ವೆನೆಂದು ಗಾವಿಲತನದಿಂದಿರದೆ ಬಹಿರಂಗದೊಳಮಂತರಂಗದೊಳಂ ಕೂಡಿ ನೆಗೞ್ದು ದುರಿತಮಂ ಕಿಡಿಸಿ ನಿರ್ಮಳನಪ್ಪುದು ॥] ೧೦೯

ಕರಮೊಳ್ಳಿದನಿವನೆಂದೊ
ರ್ವರ ಶಿಷ್ಯನನೞಿತೋಱಿ ನುಡಿದೊಯ್ಯನೆ ಮೂ ।
ಢರದೊಯ್ದು ದೀಕ್ಷೆಗುಡುವಂ
ಪರಮಾರ್ಥಂ ಸುೞಿಗುಮುಗ್ರಸಂಸೃತಿವನದೊಳ್ ॥ ೧೧೦

[ಏನುಮನಱಿಯದ ಮುನಿಪಂ
ಹೀನಗುಣಂ ಬಂದು ದೀಕ್ಷೆವೇಡಿದೊಡವನಂ ।
ತಾನಳಿಪಿಂ ಕೈಕೊಳ್ಳದೆ
ನೂನಂ ನಿಱಿಸುವುದು ಮುನ್ನಿನಂದದೊಳವನಂ ॥] ೧೧೧

ಮುನ್ನಿನ ಕುಲಮಂ ಸಿರಿಯುಂ
ತನ್ನೂರಂ ತನ್ನ ಪೆಂಡಿರಂ ಮಕ್ಕಳುಮಂ ।
ತನ್ನ ಮಹಿಮೆಗಳನಳಿಪಿಂ
ದಂ ನೆನೆಯುತ್ತಿರ್ಪ ದುರ್ಜನಂ ಮುನಿಯಲ್ಲಂ ॥ ೧೧೨

,ತಾಂ ಪೊಲ್ಲಮೆಯಲ್ಲದೊಡಂ
ಗಾಂಪರನುತ್ಸುಕರನಳಿಪರಂ ಕಂಡೊಡೆ ಕೇಳ್ ।
ಪೆಂಪಿಂದಮಿರದೆ ಭಯದಿಂ
ಕಂಪಿಸಿ ಕ್ಷಮೆಗೊಂಡು ನೆಗೞ್ವುದಧಿಕನೆನಿಪ್ಪಂ ॥ ೧೧೩

ಎಮ್ಮರಿಸಿ ಯೆಮ್ಮ ಜಿನಗೃಹ
ವೆಮ್ಮೊಡವೆಗಳೆಮ್ಮ ಗುಡ್ಡರೆಮ್ಮರ್ಥಂ ಮ ।
ತ್ತೆಮ್ಮ ನೆಲನೆಂದು ಮಾಣದೆ
ಕೆಮ್ಮನೆ ದೆಸೆಗೆಟ್ಟು ನುಡಿವ ಮುನಿ [1] ಮುನಿಯಲ್ಲಂ ॥ ೧೧೪

ಮುನ್ನಂ ವ್ರತಮಿತ್ತವರಂ
ತಮ್ಮಳಿಪಿಂ ಪೞಿದು ಕಿಡಿಸಿ ಪೂರ್ವವ್ರತಮಂ ।
ಮನ್ನಣೆಯಿಂ ವ್ರತಮಂ ಕುಡು
ವಂ ನರಕಕ್ಕೀಱದು ಪೋಪುದೇನಚ್ಚರಿಯೋ ॥ ೧೧೫

ಜಿನಭವನಮೆಲ್ಲಮಂ ಸ
ಜ್ಜನಚೈತ್ಯಾವಳಿಗಳೆಲ್ಲಮಂ ದಿವ್ಯತಪೋ ।
ಧನರೆಲ್ಲರುಮಂ ಸಮನಾ
ಗನವರತಂ ಕಾಣ್ಬ ಮುನಿಯೆ ಮುನಿವರನೆನಿಕುಂ ॥ ೧೧೬

[ರಾಗದ್ವೇಷಂ ತನಗುಂ
ಟಾಗೆ ತಪಂಬಟ್ಟು ನಮೆವನವನಿನಿಸಾನುಂ ।
ರಾಗದ್ವೇಷಂ ತನ್ನಿಂ
ಪೋಗೆ ತಪಂಬಟ್ಟುನಮೆವನವನಿನಿಸಾನುಂ ॥ ೧೧೭

1 ನುಡಿವನುಂ (ಗ) 2 ಪೂಲೆಯುವ್ವ್ರಡಿವಪಱಿಗಾಡುವರ್ವಗರಣದಾಟಕ್ಕನಗುವರಲ್ಲದೆ ಲಕ್ಷಣಮುನಱಿವ ಸತ್ಪಾತ್ರದೊಳ್ ಲಕ್ಷಣಮಂ ನೋಡುವರಂತೆ ಮಿಥ್ಯಾದೃಷ್ಟಿಗಳ ಪೇಳ್ಕೆಯಿಂ ನಡೆವಲ್ಲಿ ದೋಷಮಂ ಮಾಡುವರದಱಿಂ ದೋಷಮಿಲ್ಲದಂತಾಗಿ ನಡೆವುದು. ಜಿನಭವನ....(ಗ).

ಬಿಡದ ಪರಿಗ್ರಹಭರದೊಳ್
ತೊಡರ್ದರ್ಗಂ ನಿರ್ಗ್ರಂಥನಾಗಿಯುಂ ಸಗ್ರಂಥಂ ।
ತೊಡರ್ದ ಪರಿಗ್ರಹಭರಮಂ [1]
ಬಿಡುಪಂ ಸಗ್ರಂಥನಾಗಿಯುಂ ನಿರ್ಗ್ರಂಥಂ ॥ ೧೧೮

[ಅದುಕಾರಣದಿಂದೆ ತಪವೆಂಬುದು ಸಾಮಾನ್ಯಮಲ್ಲದು; ನೀನುಂ ನಿನ್ನ ಮುನ್ನಿನ ವಿದ್ಯಾಧರರಾಜ್ಯಮಂ ಕೈಕೊಂಡು ಸುಖದಿನಿರೆಂಬುದುಂ, ಚಂದ್ರಾಭಮಹಾರಾಜಂ ಮುನಿಗುಪ್ತಭಟ್ಟಾರಕರ್ಗಿಂತೆಂದಂ॥] [2] ೧೧೯

ಎನಿತು ಪಸಿವಾದೊಡಂ ಮೇ
ದಿನಿಯೊಳ್ಕ್ಕಿರ್ದ ಕೂೞನುಂಬರೆ ನರರಾಂ ।
ಮನವೊಸೆದು ಬಿಟ್ಟ ರಾಜ್ಯಾಂ
ಗನೆಯುಂ ಕೈಕೊಳ್ವನಲ್ಲನೆಂತುಂ ಮುನಿಪಾ ॥ ೧೨೦

ಎಂಬುದುಂ [ಮುನೀಂದ್ರೋಕ್ತಮಂ ವಿಯಚ್ಚರರಾಜಂ ನುಡಿದ ಪರಿಚ್ಛೇದಕ್ಕಂ ಮನದ ವೈರಾಗ್ಯಕ್ಕಂ ಮೆಚ್ಚಿ ಮನಃಪೂರ್ವಕಂ ಪರಿಗ್ರಹಮೆಲ್ಲಮಂ ತೊಱೆ ಬೇಗಮೆಂಬುದುಂ ಗುರುಸನ್ನಿಧಿಯೊಳ್ ಪರಿಗ್ರಹಮೆಲ್ಲಮಂ ತೊಱೆದು ಕೆಲವು ವಿದ್ಯೆಗಳಂ ತೊಱೆಯದಿರೆ ಮುನಿಗುಪ್ತಭಟ್ಟಾರಕರವೆಱೊಳಳಪು ನಿನಗೇತಕ್ಕೆನೆ ಗಗನಚರಾಧೀಶನಿಂತೆಂದಂ ॥] [3] ೧೨೧

ಮನದರ್ತಿ ಪೋಪಿನಿಂ ಮೇ
ರುನಗದಕೃತ್ರಿಮ ಜಿನಾಲಯಂಗಳನಾನಿಂ ।
ತನವರತಂ ನೋಡುವ ಭಾ
ವನೆ ಪೋಗದು ತಿಬ್ಬಮಿನ್ನುಮದುಕಾರಣದಿಂ ॥ ೧೨೨

---

1 ಕಡೆಗಣಿಸಿ ಪರಿಗ್ರಹಮಂ (ಬ)

2 ಯೋಗ್ಯ ಭಾವನೆಯಿಂ ತಪಮಂ ಭಾವಿಸುತ್ತಿರು ನಿನಗೆ ಮಹಾತಪದೊಳಾದ ತೋಟ ವೇಡೆನೆ ಚಂದ್ರಾಭಮಹಾರಾಜನಿಂತೆಂದಂ (ಗ)

3 ಎಂಬುದುತುರಿತಾದೊಡಪರಿಗ್ರಹಮಪ್ಪಮಂ ಮನವಾರೆ ಬಿಟ್ಟು ಪರಿಚ್ಛೇದಿಸನೆ ವಿದ್ಯಾಧರಮಹಾರಾಜನಿಂತೆಂದಂ (ಗ)

[ಕೆಲವು ವಿದ್ಯೆಗಳಂ ಬಿಡಲಾಱೆನೆಂಬುದುಂ, ಮುನಿಪತಿ ನಕ್ಕು ನಿನಗನ್ನೆಗಂ ಮಹಾವ್ರತಂಗಳ ತೊಡರ್ಪುವೇಡಣುವ್ರತಧಾರಿಯಾಗಿರ್ಪು ದೆಂಬುದುಂ, ಅವೆಂತಪ್ಪುವೆಂಬ ಸ್ವರೂಪಮಂ ಬೆಸಸಿಮೆನೆ, ಗುಣೋತ್ತಮ] [1] ರಿಂತೆಂದು ಪೇೞ್ದರ್ ॥ ೧೩೩

ಪರಮದರ್ಶನವಿಶುದ್ಧತೆ
ನಿರುಪಮಮೆನಿಸಿದ ಪಂಚಗುರುಪದಯುಗಪಂ ।
ಕರುಹಪರಭಕ್ತಿ ಭಾವಿಪ್ಪೊ
ಡುರುಸಂಸೃತಿದೇಹಭೋಗಮಿಂಬ ವಿರಾಗಂ ॥ ೧೩೪

ನೆಲದ ಬೆಟ್ಟನಂತೆ, ಸಮುದ್ರದ ಜಲದಂತೆ, ಪಗಲಾದಿತ್ಯನಂತೆ, ನಕ್ಷತ್ರದ ಚಂದ್ರನಂತೆ, ಮೇರುವಿನ ಕರ್ಮಭೂಮಿಯಂತೆ, ಸ್ತ್ರೀಯರ ಮೊಲೆಯಂತೆ, ಪುರುಷರ ಮೀಸೆಯಂತೆ, ಆವಿನ ಕೆಚ್ಚಲಂತೆ, ಗಜದ ದಂತದಂತೆ, ಬೆಂಕಿಯುಷ್ಣದಂತೆ, ತಾವರೆಯ ಸೂರ್ಯನಂತೆ, ನಯಿದಿಲ ಚಂದ್ರನಂತೆ, ಸ್ತ್ರೀರತ್ನದ ಚಕ್ರವರ್ತಿಯಂತೆ, ನೀರ ಪಾಲಂತೆ, ನಖದ ಮಾಂಸದಂತೆ [ಪೂವಿನ ಕಂಪಿನಂತೆ] ತುಪ್ಪುಟ ಬಣ್ಣದಂತೆ, ತಾಯ ಶಿಶುವಿನಂತೆ, ಕರುವಿನೆಳಗಂದಿನಂತೆ, ಲೋಭಿಯ ಪೊನ್ನಂತೆ, ಪಂಚಪರಮೇಷ್ಠಿಗಳೊಳಪ್ಪ ಪತ್ತುಗೆವೆರಸು; ಪಿರಿದು ತೆತ್ತೊಕ್ಕಲಂತೆ, ಗಂಡನೊಲ್ಲದ ಸ್ತ್ರೀಯಂತೆ, ಪಂದೆಯಂ ಕಂಡಾಳ್ದನಂತೆ, ಪಾದರಿಗೆಯಂ ಕಂಡ ಗಂಡನಂತೆ, ಬೇಸಗೆಯೊಳ್ಪಯಣಂಬೋಪರಂತೆ, ದೂರಕ್ಕೆ ಪೋಱೆವೆರಸು ಪೋಪರಂತೆ, ಪೊಗೆಯೊಳಿರ್ದರಂತೆ, ಬಡವನ ಮಗಳಂತೆ, ಪಡಪಾಳ ಸತ್ತ ಮನೆಯಂತೆ, ಪ್ರಭು ಕೆಟ್ಟ ನಾಡಂತೆ, ಸಂಸಾರದ ಶರೀರದ ಭೋಗದ ಮೇಲೆ ಬೇಸಱುಂ; ಬೆಕ್ಕಂ ಕಂಡಿಲಿಯಂತೆ, ಪಾವಂ ಕಂಡ ಕಪ್ಪೆಯಂತೆ, ಕಳ್ಳನಂ ಕಂಡ ಪಥಿಕನಂತೆ, ಪರ್ದಂ ಕಂಡ ಪಾವಿನಂತೆ, ತಳಾಱನಂ ಕಂಡ ದ್ರೋಹನಂತೆ, ಕೋಣನಂ ಕಂಡ ಕುದುರೆಯಂತೆ,

1 ಗಗನಗಾಮಿನೀವಿದ್ಯೆಯೊಂದು ಪೊಱಗಾಗಿ ಯಲ್ಲಮಂ ತೊಱೆವೆನೆನೆ ಮುನಿಗುಪ್ತಭಟ್ಟಾರಕರ್ನಕ್ಕು ನೀನೆಂತುದೊಡನ್ನೆವರಮೇಕಾದಶಶ್ರಾವಕಸ್ಥಾನದೊಳೊಂದಂ ಪಿಡಿದು ನಡೆಯೆನೆ ನಿಮ್ಮಡಿಗಳವಱ ವ್ರತಸ್ವರೂಪಮಂ ಬೆಸಸುವುದೆಂಬುದುಂ ಮುನಿಬೃಂದಾರಕರಿಂತೆಂದು ಪೇಳ್ದರ್ (ಗ).

ನಾಯುಂ ಕಂಡ ಬೆಕ್ಕಿನಂತೆ, ಪುಲಿಯಂ ಕಂಡ ಪುಲ್ಲೆಯಂತೆ, ಇಹಲೋಕದ ಪರಲೋಕದ ಮರಣದ ಕುತ್ತದ ಪೆಱರೆನಗಿಲ್ಲೆಂಬ ಮೆಯ್ಗೆ ಮೆಱೆಯಿಲ್ಲೆಂಬ ತೊಟ್ಟನಡಸುವ [1] ಸಪ್ತಭಯಂಗಳ್ಗೆ ನಡುಗದುದುಂ; ರಕ್ಕಸಿಯುಂ ಮೂನಿಸಂ, ಸಿಂಹಮನಾನೆ, ಲೋಗರಂ ಶಿಶು, ಮರುಳನಂ ಬುದ್ಧಿಶಾಲಿ, ದುಶ್ಚರಿತ್ರನಂ ಸದಾಚಾರಂ, ಕಳ್ಳನಂ ಸದ್ಧರ್ಮಂ, ವ್ಯಸನಿಯುಂ ಜಿತೇಂದ್ರಿಯುಂ ಪೊರ್ದದಂತೆ, ಜೂಜುಂ ಬೇಂಟೆಯುಂ ಕಳ್ಳುಂ ಮಾಂಸಮುಂ ಕುತ್ಸಿತವೇಶ್ಯೆಯುಂ ಪರದಾರಮುಂ ಕಳವುಮೆಂಬ ಸಪ್ತವ್ಯಸನಂಗಳಂ ಪೊರ್ದದಿರ್ಪುದುಂ; ಕುಡುವ ಬೋಜಂಗನಂ ಪಡೆದ ಕುಂಟಣಿಯಂತೆ, ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ, ನಾಡುವಡೆದ ಪಸಾಯಿತನಂತೆ, ತೇಜಂಬಡೆದರಸಿನಂತೆ, [2] ಮನ್ನಣೆವಡೆದ ಕೀರ್ತಿಯಂತೆ, ಪೂಜೆವಡೆದ ವ್ಯಂತರಿಯಂತೆ, ಗೆಲ್ಲಂಪಡೆದ ಪಂದೆಯಂತೆ, ಜವ್ವನಂಬಡೆದ ಮುದುಪನಂತೆ, ನಿಶ್ಶಂಕಾದ್ಯಷ್ಟಗುಣಂಗಳೊಳಾದ ಮಹಾಪ್ರೀತಿಯುಂ, ಮದ್ದುಗುಣಿಕೆಯಂ ತಿಂದರಂತೆ, ಪಿತ್ತಂ ತಲೆಗೇಱಿದರಂತೆ, ಮರುಳ್ಗೊಂಡರಂತೆ, ಶಾಶ್ವತಂಬಡೆದರಂತೆ, ಜವನೂಳೋಲೆಯುಂಡಿಗೆಯಂ ತಂದರಂತೆ, ಕಳ್ಗುಡಿದರಂತೆ, ಸ್ವೇಚ್ಛಾಮರಣಿಗಳಂತೆ, ಸಾವಿಲ್ಲದರ ಬಸಿಱೊಳ್ ಬಂದರಂತೆ, ಜ್ಞಾನೈಶ್ವರ್ಯಪೂಜಾಕುಲಬಲತಪರೂಪಜಾತಿಯೆಂಬೆಂಟುಮದಂಗಳೊಳ್ಗರ್ವದಿರ್ದಗೆಯಿಲ್ಲದುದುಂ; ಕೊಲ್ವ ಪಾವಂ ಕಳ್ವ ಪೆಂಡಿರಂ ಪಿಸುಣನಪ್ಪೊಡವುಟ್ಟಿದನಂ ತಿಂಬ ನಾಯುಂ ಪೆಂಡಿರ್ಗಳಪುವ ಬಂಟನಂ ಕವರಿಸುವನಂಟನಂ ಗೆಂಟುಮಾಡುವಂತೆ, ಮಿಥ್ಯಾದೈವಂ ಮಿಥ್ಯಾಲಯುಂ ಮಿಥ್ಯಾತಪಂ ಮಿಥ್ಯಾತಪಸ್ವಿ ಮಿಥ್ಯಾಜ್ಞಾನಿ ಮಿಥ್ಯಾವ್ರತಮೆಂಬೀ ಷಡಾಯತನಸೇವೆಯಂ ಗೆಂಟುಮಾಡುವುದುಂ; ಅಡವಿಯ ಕೊಳನಂ ನೆಗಳ ಬಾವಿಯಂ ಬಡವಾಗ್ನಿಯಂ ಪೋಲ್ವ ಮಿಥ್ಯಾತ್ವಮುಮಂ, ಜಾರೆಯ ಮಗನಂ ಗಡಿಯ ನಾಯಕನಂ ನಂಬಿಸಿ ಕೊಲ್ವವನಂ ಪೋಲ್ವ ಸಮ್ಯಙ್ಮಿಥ್ಯಾತ್ವಮುಮಂ ಬ್ರಾಹ್ಮಣನೊಡನಿರ್ದ ಸೂಳೆಪಂಡತಿ ನಡಪಿದ ಮಗನಂ

---

1 ತೊಟ್ಟನೆನಡಸುವ (ಬ. ಕ. ಗ.)  2 ಅರಸಿಯಂತೆ, (ಗ)

ಪ್ರಜೆಪರಿವಾರಂ ಪಿಡಿಯದರಸಂ ಪೋಲ್ವ ಸಮ್ಯಕ್ತ್ವ ಪ್ರಕೃತಿಯಂ ಪರಿಹರಿಪುದುಂ ; ಕೆಟ್ಟ ರಾಜ್ಯಂ ಕೈಸಾರ್ದನಂತೆ ಸಂವೇಗದೊಳಂ ಬಟ್ಟೆಯೊಳ್ ಬಂಡವಂ ಕೊಳ್ಬಟ್ಟನಂತೆ ನಿರ್ವೇಗದೊಳಂ, ಪೊಲ್ಲದಂ ಮಾಡಿದ ಸೂಚಿಯಂತೆ ನಿಂದೆಯೊಳಂ ಬಡಿಹದ ಮಕ್ಕಳಂತೆ ಅಳಲ್ವೆಯೊಳಂ ನೀರ್ ಮುಟ್ಟದ ಕೆಂಡದಂತುಪಶಮದೊಳಂ, ಕೂರ್ಪ ಪೆಂಡಿರ ಕೂಟದಂತೆ ಪಂಚಪರಮೇಷ್ಠಿಗಳೊಳಪ್ಪ ಭಕ್ತಿಯೊಳಂ, [ಮಾಗಿಯೊಳ್ಕಂದರಂತನುಕಂಪೆಯೊಳಂ] ಅಳಿಯನಂ ಕಂಡ ಮಾವನಂತೆ ವಾತ್ಸಲ್ಯದೊಳಂ ನೆರೆದಿರ್ಪುದುಂ ; ದೇವರೊಳಾದ ಶಂಕೆಯುಂ, ಭೋಗದೊಳಪ್ಪಕಾಂಕ್ಷೆಯಂ, ಶರೀರದೊಳಪ್ಪ ನಿರ್ವಿಚಿಕಿತ್ಸೆಯುಂ ನಿರ್ದೋಷಿಯಪ್ಪಾತನಂ ಪೊಗೞ್ವಲ್ಲಿ ಅನ್ಯದೃಷ್ಟಿಪ್ರಶಂಸೆಯುಂ, ಸದೋಷಿಯಪ್ಪಾತನಂ ಪೊಗೞ್ವಲ್ಲಿ ಅನ್ಯದೃಷ್ಟಿಸಂಸ್ತವನಮುಮೆಂಬ ಪಂಚಾತಿಚಾರದೊಳಂ ಕೂಡದುದುಂ, ಒಂದನೆಯ ದಾರ್ಶನಿಕನೆಂಬ ಶ್ರಾವಕಂಗಕ್ಕುಂ [1] ॥ ೧೦೫

[ಪರಮಜಿನನಾತ್ಮನಂತಾ
ಪರಮೇಶ್ವರನೆಂದುದಾಗಮಂ ನಿರ್ಗ್ರಂಥಂ ।
ಪರಮತಪಂ ಧರ್ಮಂ ದಯೆ
ವೆರಸಿದುದೆಂದಿಂತು ನಂಬುವುದೆ ಸಮ್ಯಕ್ತ್ವಂ ॥ ] ೧೦೬

ತತ್ಸಮ್ಯಕ್ತ್ವಂಬೆರಸು ಮ
ಹೋತ್ಸವದಿಂ ಬೆಸನಮೇೞುಮಂ ಬಿಸುಟುೞಿ [2] ನಿ ।
ರ್ಮತ್ಸರದಿಂ ಸದ್ಗುಣದೊಳ್
ವಾತ್ಸಲ್ಯಮನುಂಟುಮಾಡಿ ಕರಮಾದರದಿಂ ॥ ೧೦೭

[ಕ್ರೂರತೆಯಿಂ ಪ್ರಾಣಿಗಳಂ
ಧಾರಿಣಿಯೊಳ್ಕೊಲ್ಲನೆಂತುಮುಗ್ರತೆಯಿಂ ನಿ ।
ಷ್ಕಾರಣಮಱಿಯದೆ ಕೊಂದೊಡ
ಮಾರಯ್ವುದೆ ಕೊಂದೆನೆಂದು ಮನದೊಳ್ನೋವಂ ॥ ೧೦೮

1 ಶ್ರಾವಕನಕ್ಕುಂ (ಬ, ಕ, ಗ.) 2 ದೋಷಮಿಲ್ಲದಧಿಕತೆಯಿಂ (ಗ)

ವ್ರತಮಂ ಕೊಳದಿರ್ದೊಡಮ
ವ್ರತಿಯಾಗಂ ಕ್ಷಿತಿಯೊಳಸೆಪ ಕುಲಬಲಸಂಪ ।
ತ್ಪ್ರತತಿಯೊಳಮಿರ್ದು ಸಜ್ಜನ
ಮತದೊಳ್ದಾರ್ಶನಿಕನೆಂಬನೊಂದನೆಯಾತಂ ॥ ೧೭೯

ವರಸಮ್ಯಕ್ತ್ವಂಬೆರಸು
ರ್ವರೆಯೊಳ್ ಶಲ್ಯತ್ರಯಂಗಳಂ ತೊಱೆದು ಸದಾ ।
ಚರಿತನಿವನೆನಿಸಿ ಗುಣಾಪ್ತಂ
ಧರಿಯಿಸಿ ಪೆಱಗಿಕ್ಕ ಪಂಚವಿಂಶತಿಮಲಮಂ ॥] ೧೮೦

ಬಸಿಱೊಳಿರ್ದಂಬಿನಂತೆ, ಮನೆಯೊಳಿರ್ದ ಪಾವಿನಂತೆ ಕೂೞೊಳಗಿರ್ದ ನಂಜಿನಂತೆ, ಪೊಲ್ಲಮೆಯಂ ಮಾಡುವ [1] ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ; ನಿಧಾನದಂತೆ ರಾಜ್ಯದಂತೆ ಕರ್ಪೂರ ಕೂಟದಂತೆ ಪಗೆವರ ಕೇಡಿನಂತೆ ಸ್ಥಿರಮಪ್ಪ ಜವ್ವನದಂತೆ ಸೊಗಯಿಸುವ ಕೊಲ್ಲದ ಪುಸಿಯದ ಕಳದ ಪರಸ್ತ್ರೀಯರ್ಗೆಱಗದ ನಿಯಮಿತಪರಿಗ್ರಹಮೆಂಬ ಪಂಚಾಣುವ್ರತಂಗಳ ಕೂಟಮನುಳ್ಳ ದುಃಖಭಾಜನಮಲ್ಲದ [2] ಶೀಲಸಪ್ತಕದೊಳ್ಕೂಡಿದಂ; ಬಂಧವಧಚ್ಛೇದಾತಿಭಾರಾರೋಪಣಾನ್ನಪಾನನಿರೋಧ ಮೆಂಬೀ ಕೊಲ್ಲದ ವ್ರತದ್ವೈದತಿಚಾರದೊಳಂ, ಮಿಥ್ಯೋಪದೇಶ ರಹೋಭ್ಯಾಖ್ಯಾನ ಕೂಟಲೇಖನ ಕ್ರಿಯಾನ್ಯಾಸಾಪಹಾರ ಸಾಕಾರಮಂತ್ರಭೇದ ಮೆಂಬ ಪುಸಿಯದ ವ್ರತದ್ವೈದತಿಚಾರದೊಳಂ, ಸ್ತೇನಪ್ರಯೋಗ ತದಾಹೃತಾದಾನ ವಿರುದ್ಧರಾಜ್ಯಾತಿಕ್ರಮ ಹೀನಾಧಿಕಮಾನೋನ್ಮಾನ ಪ್ರತಿರೂಪಕವ್ಯವಹಾರಮೆಂಬ ಕಳದ ವ್ರತದ್ವೈದತಿಚಾರದೊಳಂ, ಪರವಿವಾಹಕರಣೇತ್ವರಿಕಾಪರಿಗ್ರಹಾಪರಿಗೃಹೀತಾಗಮನಾನಂಗಕ್ರೀಡಾಕಾಮತೀವ್ರಾಭಿನಿವೇಶಮೆಂಬ ಪರಸ್ತ್ರೀಗೆಱಗದ ವ್ರತದ್ವೈದತಿಚಾರದೊಳಂ, ಕ್ಷೇತ್ರ ವಾಸ್ತುಹಿರಣ್ಯಸುವರ್ಣಧನಧಾನ್ಯ ದಾಸೀದಾಸ ಕುಪ್ಯಭಾಂಡಾತಿಕ್ರಮ ಮೆಂಬ ಪರಿಮಿತಪರಿಗ್ರಹದ್ವೈದತಿಚಾರದೊಳಂ, ಊರ್ಧ್ವಾಧಸ್ತಿರ್ಯ

ಗ್ವ್ಯತಿಕ್ರಮ ಕ್ಷೇತ್ರವೃದ್ಧಿ ಸ್ಮೃತ್ಯಂತರಾದಾನಮೆಂಬ [1] ದಿಗ್ವಿರತಿವ್ರತದೈದತಿಚಾರದೊಳಂ, ಆನಯನ ಪ್ರೇಷ್ಯಪ್ರಯೋಗ [2] ಶಬ್ದರೂಪಾನುಪಾತ ಪುದ್ಗಲಕ್ಷೇಪಮೆಂಬ ದೇಶವಿರತಿವ್ರತದೈದತಿಚಾರದೊಳಂ, ಕಂದರ್ಪ ಕೌತ್ಕುಚ್ಯ ಮೌಖರ್ಯಾಸಮೀಕ್ಷ್ಯಾಧಿಕರಣೋಪಭೋಗಪರಿಭೋಗಾನರ್ಥತ್ವಮೆಂಬನರ್ಥದಂಡವಿರತಿವ್ರತದೈದತಿಚಾರದೊಳಂ ; ಕಾಯದುಷ್ಪ್ರಣಿಧಾನ ವಾಗ್ದುಷ್ಪ್ರಣಿಧಾನ ಮನೋದುಷ್ಪ್ರಣಿಧಾನಾನಾದರಸ್ಮೃತ್ಯನುಪಸ್ಥಾನಮೆಂಬ ಸಾಮಯಿಕಶಿಕ್ಷಾವ್ರತದಯ್ದತಿಚಾರದೊಳಂ, ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸರ್ಗಾಪ್ರಮಾರ್ಜಿತಾದಾನಾಪ್ರತ್ಯವೇಕ್ಷಿತಾಪ್ರಮಾರ್ಜಿತಸಂಸ್ತರೋಪಕ್ರಮಣಾನಾದರಸ್ಮೃತ್ಯನುಪಸ್ಥಾನಮೆಂಬ ಪ್ರೋಷಧೋಪವಾಸಮೆಂಬ ಶಿಕ್ಷಾವ್ರತದಯ್ದತಿಚಾರದೊಳಂ, ಸಚಿತ್ತಾಹಾರಸಚಿತ್ತಸಂಬಂಧಾಹಾರ ಸಚಿತ್ತಸಮ್ಮಿಶ್ರಾಹಾರಾಭಿಷವಾಹಾರ ದುಷ್ಪಕ್ವಾಹಾರಮೆಂಬುಪಭೋಗಪರಿಭೋಗಪ್ರಮಾಣಮೆಂಬ ಶಿಕ್ಷಾವ್ರತದಯ್ದತಿಚಾರದೊಳಂ, ಸಚಿತ್ತನಿಕ್ಷೇಪ ಸಚಿತ್ತಾಪಿಧಾನ ಪರವ್ಯಪದೇಶ ಮಾತ್ಸರ್ಯ ಕಾಲಾತಿಕ್ರಮಮೆಂಬತಿಥಿಸಂವಿಭಾಗಶಿಕ್ಷಾವ್ರತದೈದತಿಚಾರದೊಳಂ ; ಭಂಡಾರದ ಸೇನಬೋವನಂತೆ ರಾಣಿವಾಸದ ಪೆರ್ಗಡೆಯಂತೆ, ಪೊನ್ನಧ್ಯಕ್ಷಮಾದನಂತೆ ಬೆಳಗೆಯ್ಯಂ ರಕ್ಷಿಸುವನಂತೆ, ಮದಗಜಮನೇಱುವನಂತೆ, ಬಿನ್ನಪಂಗೆಯ್ವನಂತೆ, ತೊಱೆಯನೀಸುವನಂತೆ, ಕಟ್ಟನಾಡಂ ಸಂತವಿಡುವನಂತೆ, ಮೂರ್ಖರ ಭರಮಂ ತಿರ್ದುವನಂತೆ, ರತ್ನಾಭರಣಮಂ ತೊಟ್ಟು ಬಟ್ಟೆವೋಪನಂತೆ, ಚಕ್ರವರ್ತಿಯ ಬಾಗಿಲಂ ಕಾವನಂತೆ, ನಯಮುಂ ಬುದ್ಧಿಯುಮಾೞ್ಕೆಯುಂಬೆರಸು ನಡೆವಾತಂ, ೧೩೧

ಅತ್ತಿಯ ಬಸುರಿಯ ಗೋಳಿಯ
ಮತ್ತರಳಿಯ ವಟದ ಪಣ್ಣನಡಗಂ ಜೇನಂ ।
ಬಿತ್ತರಮದ್ಯಮನಾಗಂ
ಉತ್ತಮಸಂಸೇವ್ಯಮೂಲಗುಣಮಿವಯೆಂಟುಂ ॥ ೧೩೨

1 ಸ್ಮೃತ್ಯಂತರಾಭಿಧಾನಮೆಂಬ. (ಗ)    2 ಅಪಾಹಾರ. (ಗ)

ಸಂದೋಲ್ಕೃತ್ತಕೀರ್ತಿವಡ
ಗುಂದಿಸ ತಾಂ ತೊಱೆದ ವಸ್ತ್ರ ಸತ್ತ್ವ ಕ್ರಿಮಿಗಳ್ |
ಸಂದಸ್ಥಿಯೆಂಬಿವೇೞುಂ
ಕುಂದದೆ ಮುಟ್ಟುಪಡಮುಕ್ಕುಮಾರ್ಜನ ಮತದಿಂ ॥ ೧೩೩

[ಮೂಲಗುಣಾಷ್ಟಕದೊಳಂ ಕೂಡಿ ಸಪ್ತಾಂತರಾಯಂಗಳಂ ಪಿಂಗಿಸಿ ಪಂಚಾಣುವ್ರತದೊಳ್ ಕೊಳ್ಳದನೆನಿಸಿ ಗುಣವ್ರತತ್ರಯದೊಳಂ ನೆರೆದು ಶಿಕ್ಷಾವ್ರತಚತುಷ್ಟಯದೊಳವೆಸಗಿ ಧರ್ಮಶಾಲ್ಯಂಕುರಕ್ಕೆಡೆಯೆನಿಪ ಅಱುವತ್ತತೀಚಾರಂಗಳುಮಂ ಪಿಂಗಿಸಿ ನೆಗಱ್ವಾತ][1] ನೆರಡನೆಯ ವ್ರತಿಕನೆಂಬ ಶ್ರಾವಕನಕ್ಕುಂ. ೧೩೪

ಸ್ಥಿರನಾಗಿ ಶುದ್ಧವೃತ್ತಿಯೊಳ್
ಅರವರಿಸದೆ ಪೆಱಗೆ ಪೇೞ್ದ ಸುವ್ರತಮನಿತುಂ[2] |
ಬರಸು ವಯೆಪರಸು ರಾಗಂ
ಬರಸು ಸದಾಚಾರನಾಗಿ ಪಿರ್ಮಲಮಾನದಿಂ ॥ ೧೩೫

ಸಮಂತವರಿಂ ಕರ್ಮರಾಜನಂ ಕಯ್ವಾರಂಗೊಂಡು ಮೋಹರಾಜನಟ್ಟಿದ ತಂತ್ರಮೆನಿಸುವ [ಮೂವತ್ತೆರಡುಂ ದೋಷಂಗಳಂ ಪತ್ತುವಿಟ್ಟು] ಮಚ್ಚಿಲ್ಲದೆ ಜಡನಾಗಿ ದೇವಗುರುಗಳಂ ಪೊರ್ದದೆ, ಪೆಱರ್ಗೆ ಪೀಡೆಯಂ ಮಾಡುತ್ತುಂ [ಮಯ್ಯಂ ತೂಗುತ್ತುಂ] ಉನ್ಮತ್ತಚೇಷ್ಟೆಯಿಂ ದೆರೆಯುಂ ತಿಂದ ವಿಧಾನಂತೆ ಪೊಡೆಯುತ್ತುಂ, ಫೊಲ್ಲಮನನಾಗಿ ಕಯ್ಯಂ ತಳ್ತಿಱಿದು ಪೆಱಗಂಜಿ ಪೆಱರ ನೆವದಿಂ ಪೆಂಪು ಕಾರಣಮಾಗ[3] ಗುರುಗಳಂ ಕಳ್ದು ಗುರುಗಳ್ಗೆ ಪ್ರತಿಕೂಲನಾಗಿ ಗೃಹಂ ಮೊದಲಾಗೆ ಶಲ್ಯಂ ಬೆರಸು ನುಡಿಯುತ್ತುಂ ಪೆಱರನೇಡಿಸುತ್ತುಂ ನೊಸಲನೆತ್ತುತ್ತುಂ ಕಂಪಿ

1 ಇಂತೀಯಿನಿತಱೊಳೊಂದಿನಡವಾತ, (ಗ)

2 ಪೆಱರ್ಗೆಪೇೞ್ದಗುಣಮನಿತನಿತುಂ, (ಗ)

3 ಸುಖಮುಳ್ಳಮುಂಕಾರಣಮಾಗಿ, (ಗ) ; ಸುಖಂಕಾರಣಮಾಗಿ, (ಬ)

ಸುತ್ತುಂ ಖುಷಿಯುರಂ ಕಂಡು ಕಾಣಲೀಯದೆ ಸಂಘನಿರೋಧದಿಂ ಕಯ್ಯಂ ಬಿಟ್ಟು ಪಡಪು ಕಾರಣಮಾಗೆ, ಮೇಲ್ವಡೆವೆಸಂದು ಕುಂದಿಸಿ ಪೆರ್ಚಿಸಿ ಸನ್ನೆಗೆಯ್ಯುತ್ತುಂ, ಪೊಲ್ಲದನಿಯಿಂ ಗೀತಂಮಾಡುತ್ತುಮಿರ್ಪು ದೆಂಬೀ ಮೂವತ್ತೆರಡು ದೋಷಂಗಳಿಂ ಪಿಂಗಿ, ಮೂಱುಂಪೊತ್ತುಂ ದೇವರಂ ಬಂದಿಸುವಂ; ಮತ್ತಂ ಕುದುರೆಗಾಲಿಕ್ಕುತ್ತುಂ, ಲತೆಯಂತೆ ಬಳ್ಕುತ್ತುಂ, ನಿಮ್ಮಿ ಕೇರಂ ಮಲಂಗಿ ಮಾಳಿಗೆಯಂ ಪೊತ್ತು ಗುಹ್ಯ ನಿರೋಧನಾಗಿ ಸಂಕಲೆಯೊಳಿರ್ದಂತೆ ನೇಲ್ದು [1] ಕೊರಲಸತ್ತು ಮೊಲೆ ಯುಂ ನೋಡುತ್ತುಂ, ಕಾಗೆಯಂತೆ ಕಡೆಗಣ್ಣೊಳ್ ನೋಡುತ್ತುಂ, ಕೀಱಟ್ಟ ಕುದುರೆಯಂತೆ ಬಾಯುಂ ಪೊಳಕಿಸುತ್ತುಂ, ಕೊರಲಂ ಸೀಡಿ ಕಯ್ಯಂ ಪಿಡಿದು ತಲೆಯುಂ ತೂಗುತ್ತುಂ, ಸನ್ನೆದೋಱುತ್ತುಂ, ಬೆರಲನಾಡಿ ಸುತ್ತುಂ, ಪುರ್ವಿಕ್ಕುತ್ತುಂ, ಸೊಕ್ಕಿದವರಂತ ಮರುಳ್ಗೊಂಡವರಂತೆ ದೆಸೆಯುಂ ನೋಡುತ್ತುಂ, ಕೊರಲಂ ಕುಸಿಯುತ್ತುಮುತ್ತರಿಸಿದ ಕುದು ರೆಯಂತೆ ಮೋಱೆಯುಂ ನೆಗಪುತ್ತುಂ, ಮಯ್ಯಂ ಮುಟ್ಟುತ್ತುಂ, ಕೊರಲಂ ತಿರಿಪುತ್ತುಂ, ಕೈಯುನಾಡಿಸುತ್ತುಂ, ಪಲ್ಲಂ ಕಱುಕುತ್ತುಂ, ಮೆಯ್ಯಂ ತೊನೆಯುತ್ತುಂ, ಭೋಗಂಗಳಂ ಚಿಂತಿಸುತ್ತುಂ, ಕಣ್ಸನ್ನೆಗೆಯ್ಯು ತ್ತುಂ, ಪರವಶಮಾದರಂತೆ ಜಡನಾಗುತ್ತುಮಿರಲಾಗದೆಂಬೀ ಮೂವ ತ್ತೆರಡು ದೋಷಂಗಳಿಂ ಪಿಂಗಿ ಕಾಯೋತ್ಸರ್ಗಂ ಮಾಡುವ [ಶುದ್ಧಬುದ್ಧಿ ಯಿಂ ಮೂಱುಂಪೊತ್ತಿನೊಳಂ ದೇವತಾಸ್ತವವಿಧಿಯೊಳ್ನೆಸಗುವಾತಂ] ಮೂಱನೆಯ ಶ್ರಾವಕಂ ಸಾಮಾಯಿಕನೆಂಬಂ. ೧೩೬

ತಿಂಗಳ್ ನಾಲ್ಕುಂ ಪರ್ವದಿ
ನಂಗಳೊಳಂ ಪೆಱಗೆ ಪೇಳ್ದ ಗುಣಮನಿತಱೊಳಂ |
ಪಿಂಗದುಪವಾಸಯುತನು [2]
ತ್ತುಂಗಂ ಬಾಪೆಂದು ಧಾತ್ರಿ ಕೈಮುಗಿಪಿನೆಗಂ [3] ‖ ೧೩೭

1 ಸಂಕಲೆಯುಸಿಕ್ಕಿದಂತೆನಿಲ್ದು, (ಬ. ಇ.)
2 ಪಿಂಗದೆ ಗುಣನಿಳಯದೊಳು, (ಬ. ಕ)
3 ಪೇಳ್ ಪ್ರೋಷದೋಪವಾಸಂ ಪೆಸರಿಂ, (ಗ)

ಉಪವಾಸದೊಳ್ಕಗಳ್ದು ಪ್ರೋಷಧೋಪವಾಸನೆಂಬ ನಾಲ್ಕನೆಯ
ಶ್ರಾವಕನಕ್ಕುಂ ॥ ೧೩೮

ಪೆಱಗಣವುಸಹಿತವೊಳ್ಪಂ
ಮಱೆಯದೆ ದಯೆಪರಸು ಪಸಿಯ ವಸ್ತುಗಳಂ ತಾಂ ।
ನೆಱೆದುಂ ಕೊಳಲೊಲ್ಲದವಂ
ಪೆಱತೇಂ ಸಚ್ಚಿತ್ತನೆಂಬನೈದನೆಯಾತಂ ॥ ೧೩೯

ಇರುಳಲ್ಲದೆ ಪಗಲೊಳ್ಪಂ
ಡಿರ ಸೇವೆಯನೆಯ್ದೆ ಬಿಟ್ಟು ಮುಂ ಪೇಳ್ದ ಗುಣಂ ।
ಬೆರಸಿರ್ದಾ ಶ್ರಾವಕನು
ರ್ವರೆಯೊಳ್ ತಾಂ ರಾತ್ರಿಭಕ್ತನಾಱನೆಯಾತಂ ॥ ೧೪೦

ದುರಿತದ ಕಟ್ಟೆ ದುರ್ಗತಿಯ ಬಟ್ಟೆ ಕಳಂಕದ ಪುಟ್ಟು ದುಃಖದಾ
ಗರಮೆಂದು ಕಾಮಿನಿಯರೊಂದುಪಭೋಗಮನೆಯ್ದೆ ಬಿಟ್ಟು ಸ
ಚ್ಚರಿತದೊಳಾತರ್ [ಕೂರ್ತೆಸಗುವೃತ್ತಮುಸದ್ಗುಣನಲ್ತೆ ಧಾತ್ರಿಗ
ಚ್ಚರಿ ಸಕಲೈಕಪುಣ್ಯಸಿಧಿ ದುರ್ಗುಣದೂರನುದಾರನುತ್ತಮಂ ॥ ೧೪೧

ಬ್ರಹ್ಮಚಾರಿಯೆಂಬೇೞನೆಯ ಶ್ರಾವಕಂ ॥] [1] ೧೪೨

ಆರಂಭದ ದೆಸೆಯುಂ ಬಿ
ಟ್ಟೋರಂತಿರೆ ಪೆಱಗೆ ಪೇೞ್ದ ಗುಣಮನಿತಱೊಳಂ ।
ಸಾರವಿದನೆಸಿಸಿ [2] ನಡೆವವ
ನಾರಂಭನಿವೃತ್ತನೆಂಬನೆಂಟನೆಯಾತಂ ॥ ೧೪೩

ಭರದಿಂ ಮುಂಪೇೞ್ದ ಗುಣಂ
ಬೆರಸು ಪರಿಗ್ರಹದ ಚಿಂತೆಯುಂ ಬಿಟ್ಟು ಸದಾ ।

---

1 ಕೂರ್ತು ವಡಯುತ್ತಮನಗ್ಗದ ಬ್ರಹ್ಮಚಾರಿ ವಿಸ್ತರದೊಳುಪಾಸಕಂ ನೆಗಳ್ದನೇೞನೆಯಾತನನಂಗಮರ್ದನಂ, (ಗ) 2 ಸಾರಮಿದನೆನಿಸಿ. (ಬ. ಕ.)

ಚರಿತನೆನಿಪಂ ಪರಿಗ್ರಹ
ವಿರತಂ ಪಾಪಾದ್ರಿವಜ್ರ [1] ನೊಂಬತ್ತನೆಯಂ ॥ ೧೪೪

ಅನುಮತಿಯೆಂಬಂ ತಾಂ ಪ
ತ್ತನೆಯಾತಂ ತನಗೆ ಪೇೞ್ದ ಮಾರ್ಗಮನೆಂದುಂ [2] ।
ಮನಮೊಸೆದು ಸೇವಿಸದೆ ಮು
ನ್ನಿನ ಗುಣದೊಳ್ ಕೂಡಿ ನೆಗೞ್ವನುನ್ನತಿಯಿಂದಂ ॥ ೧೪೫

ಕನ್ನಂ ಕುಱುತ್ತು ಮಾಡಿ
ದನ್ನಮನೌಷಧಮನೊಲ್ಲನುತ್ಸವದಿಂದಂ ।
ಮುನ್ನಿನ ಗುಣದೊಳ್ಕೂಡಿ
ಪನ್ನೆಱಿಯುದ್ದಿಷ್ಟ ವಿರತಪನ್ನೊಂದನೆಯಂ [3] ॥ ೧೪೬

ಇಂತು ದಾರ್ಶನಿಕಂ ವ್ರತಿಕಂ ಸಾಮಾಯಿಕಂ ಪ್ರೋಷಧೋಪವಾಸಂ ಸಚಿತ್ತವಿರತಂ ರಾತ್ರಿಭಕ್ತಂ ಬ್ರಹ್ಮಚಾರಿ ಆರಂಭವಿನೃತ್ತಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕುಮೆಂದು [ಮುನೀಂದ್ರೋತ್ತಮರ್] ಪೇಳೆ ಖೇಚರರಾಜಂ ॥ ೧೪೭

[ಅನುಪಮಮೆನಿಸುವ ಪನ್ನೊಂ
ದನೆಯ ಮಹಾಶ್ರಾವಕತ್ವಮಂ ದಯೆಯಿಂದಂ ।
ಮುನಿಪತಿ ದಯೆಗೆಯ್ವುದು ಮ
ತ್ತನಗೆಂ ಖೇಚರನ ನುಡಿಗೆ ಮೆಚ್ಚಿ ಮುನೀಂದ್ರಂ ॥ ೧೪೮

ಕಾರುಣ್ಯಂಗೆಯ್ವುದುಂ ಪಿರಿದುಮಾದರದಿಂದುಪಾಸಕರ ನೆಗೞ್ತೆಯೊಳರಿದೆನಿಸುವ ಏಕಾದಶಸ್ಥಾನಮಂ ಕೈಕೊಂಡು ಉತ್ತರೋತ್ತರ

1 ಕರ್ಮಾದ್ರಿವಜ್ರ, (ಗ)
2 ಅನುಮತಿಯುಂಬಂ ಪನ್ನೊಂದನೆಯಾತಂ ತನಗೆ ಪೇಳ್ದ ಮಾರ್ಗಮನೆಂದುಂ, (ಗ) ಉದ್ದಿಷ್ಟವಿರತಪತ್ತನೆಯಾತಂ, (ಗ)

ಮೂಗೆ ನೆಗೞುತ್ತುಂ] ¹ ಪಲಕಾಲಂ ಗುರುಪಾದಸೇವೆಯೊಳದೊಂದು ದಿವಸಂ ಶೂರಸೇನವಿಷಯದುತ್ತರಮಧುರೆಯ ಜಿನಾಲಯಂಗಳಂ ಬಂದಿಸುವೆನೆಂಬ ಬಗೆ ಪುಟ್ಟೆ [ತನ್ನೊಳಿಂತೆಂದಂ :— ೧೪೯

ಗುರುವಚನಮನುಲ್ಲಂಘಿಸಿ
ಚರಿಯಿಸಲಣಮಾಗದಂತೆ ಪಿರಿದುಂ ಸುಖಮಂ ।
ಪರದೊಳ್ ಲೇಸಾಗಿರೆ ಚೆ
ಚ್ಚರದಿಂದಂ ಪಡೆವನೆಂಬ ಶಿಷ್ಯಂ ಜಗದೊಳ್ ॥ ೧೫೦

ಆದುಕಾರಣದಿಂ ಗುರುಗಳನೊಡಂಬಡಿಸಿದೊಡಲ್ಲದಾವಕಾರ್ಯ ಮುಮಂ ನೆಗೞಲ್ಬಾರದೆಂದು ಮುನಿಗುಪ್ತಭಟ್ಟಾರಕರ್ಗೆ ವಿನಯದಿಂ ವಂದಿಸಿ ಕೈಗಳಂ ಮುಗಿದು ಮಲ್ಲನೆ ನಿಜಸ್ಥಾನದೊಳಿರ್ದುಬಿನ್ನಪ್ಪಮ ಮುವರ್] ² ತಮ್ಮೊಳಿಂತೆಂದರ್.— ೧೫೧

ಸ್ಥಿರನಾಗಿ ಗುಣದೊಳಸಗುವ
ನರನುಂ ವೈರಾಗ್ಯಮುಳ್ಳನುಂ ಲಜ್ಜಿತನುಂ ।
ಪಿರಿದಱಿವಾತನುಮುರ್ವರೆ
ಚರಿಯಿಸುವೊಡಮುೞಿದರಲ್ಲರುತ್ತಮಗುಣಮಂ ॥ ೧೫೨

[ಎಂಬಾತನ ಗುಣಮುಮನಱಿದರಪ್ಪುದಱಿಂ ಪೋಗಿ ತೀರ್ಥವಂದನೆಯುಮಂ ಮಾಡಿ ಬನ್ನಿಮೆಂದಿಂತೆಂದರ್,] ೧೫೩

ಗುಣಿಗಳನಲ್ಲದೆ ನೀಂ ನಿ
ರ್ಗುಣರಂ ಪೊರ್ದದಿರ ಲೋಗರೇನಾನುಮನೆಂ ।

---

1 ಪನ್ನೊಂದನೆಯ ಶ್ರಾವಕವ್ರತಮಂ ಕೈಕೊಂಡು. (ಗ)

2 ತನ್ನ ಪೋಗಂ ಗುರುಗಳಿಗಱಿಪುವುದುಮವರಿಂತೆಂದರ್, (ಗ)

ದಣಿಕದಿನೆಂದೊಡೆ ಮನದೊಳ್
ಸೆಣೆಯುದಿರೊಳ್ಪದೊಳರ್ತಿ [1] ಗುಂದದಿರಿನಿಸುಂ ॥ ೧೫೪

ಎಂದು [ ಪೋಗಲ್ವೇಡ ] [2] ವರುಣಮಹಾರಾಜನರಸಿಯಪ್ಪ ರೇವತೀಮಹಾದೇವಿಗೆ ಪರಕೆಯುಂ ಉಂಪುರುಳಿಭಟ್ಟಾರಕರ್ಗೆ ಪ್ರತಿವಂದನೆಯುಮಂ ಮಾಡಿಯದೆ ಪೋಕಮೆನೆ ಗುರುಗಳ ಮಾತಿಂಗೆ [ ಬ್ರಹ್ಮಚಾರಿ ] ನಕ್ಕು ನಿಮಗಾಪುರದ ಶ್ರಾವಕರುಂ ಭವಸೇನಾಚಾರ್ಯರ್ಮೊದಲಾದಯುಕ್ತವರ್ಮಮುನಿಗಳುಮಿರ್ದರಂತೆ [ಯೀ ರೇವತೀಮಹಾದೇವಿಯು ಬಡವಟ್ಟಿದರ್ ಉಂಡುರುಳಿಭಟ್ಟಾರಕರ ಮೇಲೆ ಕಡುಮೋಹಮೋ ಕೆಂಬುದುಮವರ ಸಂಬಂಧಮೆಲ್ಲಮುಂ ನಿನಗೆ ಬೆಸಗೊಳ್ವ ಗಸಣಿ ಬೇಡೆನೆ ಮತ್ತಂ ನೀನಾದ ಕಿರುಬೆಸಗೊಳ ನಿರುನೀಂವ್ರ] [3] ನಿಂತೆಂದಂ ॥ ೧೫೫

ಬೇವಿನ ಗಿಡುವಂ ತಂದಾ
ಟ್ಟ್ವಿನ ನೋರ್ಕಿವಾಲನೆರೆದು ನಡಪಿದೊಡಂ ಕೇಳ್ ।
ಬೇವಿಂಗೆ ಕೈಪೆ ಪಿಂಗದು
ಭೂಮಿಳಯದೊಳಂಬ ತೆಱದಿನಾಪುರದವರುಂ ॥ ೧೫೬

[ಸತ್ಯಮೆನಿಸುವ ಧರ್ಮಮುಂ ಕೇಳ್ದೊಡಂ ಸಂಶಯತುಲಾರೂಢರಪ್ಪುದಱಿಂ ಪರಕೆಯುಮಂ ವಂದನೆಯುಮಂ ಪೇಳ್ದಿಲ್ಲೆನೆ ಬ್ರಹ್ಮಚಾರಿ ಬೞಿಗಾಗಿ ॥] [4] ೧೫೭

ಕನಸಂ ತರಿಕ್ಷಮುಂಗ
ಧ್ವನಿಕಾರೇಳುಕಲಿಸ ಲಕ್ಷಣಂಮುತ್ತಂಮೇ ।

---

1 ಬಳ್ಳದದೊಳರ್ಥ, (ಬ. ಕ.)

2 ಬ್ರಹ್ಮಚಾರಿಯು ಪೋಗಲ್ ನ ೞಿ. (ಗ)

3 ನಿಮ್ಮಡಿಗಳವರಿರ್ವರ ಮೇಲಿ ಮೋಹಮೇಕಾಯ್ತೆನೆ ನಿನಗದಱ ಘಸಣಿ ಬೇಡೆಸಿರದಿರೆನೆ ಮತ್ತಂ ಕಿಱಿಬೆಸಗೊಳ್ವುದುಂ ವಾತ್ಸಲ್ಯರತ್ನಾಕರ, (ಗ)

4 ಭವಸೇನಾಚಾರ್ಯಪ್ರಭೃತಿ ಋಷಿಯುಗಂ [illegible] ರೂಢ ಪ್ಪುದಱಿಂದುದಾಸೀನಂಮಾಗಿ [illegible] (ಗ

ದಿನಿಕಂಪಮೆಂಬಷ್ಟಾಂಗ
ಗನಿಮಿತ್ತಂಬಗಮೊಡವೆರ್ಗೆ ಶುದ್ಧಗೆಯಲ್ತೆ ॥ (?) ೧೫೮

[ಅದಱಿಂದವರಱಿಯದ ವಿಷಯಮಿಲ್ಲಪ್ಪುದಱಿಂದಿವರ ಮಾತೇ ಗೆಯ್ದುಂ ತಪ್ಪಲಱಿಯದೆಂದು ನಿಶ್ಚಯಿಸಿ ಗುರುಗಳಂ ಬಂದಿಸಿ ಬೀಳ್ಕೊಂಡು ವಿದ್ಯೆಯಿಂ ವಿಗುರ್ವಿಸಿದ ರತ್ನತ್ರಯವಿರಾಜಿತಮಪ್ಪ ಪೊನ್ನವಿಮಾನಮನೇಱಿ ಗಗನಮಾರ್ಗದಿಂದುತ್ತರಮಧುರೆಗೆ ಬಂದು ಧರೆಗವತರಿಸಿ ಬ್ರಹ್ಮಚಾರಿಯಾಗಿ ಭವಸೇನಾಚಾರ್ಯರಲ್ಲಿಗೆ ಬಂದು॥][1] ೧೫೯

ಪಿರಿದಪ್ಪ ಖ್ಯಾತಿಗೆ ಸೀ
ವಿರೆ ನೋಂತವರಾರೊ ಜಗದೊಳದಱಿಂ ನಿಮ್ಮಂ ।
ಪಿರಿದರ್ತಿವೆರಸು ನೋಡುವ
ಭರವಸದಿಂ ಪಾಂಡ್ಯದೇಶದಿಂದಂ ಬಂದೆಂ ॥ ೧೬೦

[ಎಂಬುದುಂ ಭವಸೇನಾಚಾರ್ಯರ್ ಬ್ರಹ್ಮಚಾರಿಯ ವಚನಕ್ಕೆ ಸಂತೋಷಂಬಟ್ಟಿರ್ಪುದುಂ ಬ್ರಹ್ಮಚಾರಿ ಭವಸೇನಾಚಾರ್ಯರ ಸಮ್ಯಕ್ತ್ವಮಂ ನೋೞಲೆಂದು ಮೂಱುಂ ನಾಲ್ಕುಂ ದಿವಸಂ ಪೋದಿಂಬೞಿ ಕೆಲ್ಕಂದುದಿವಸಂ ॥][2] ೧೬೧

ಮರುಳಂಗಟ್ಟುದನುಂಡರೋ ಬಗೆವೊಡಂ ತಾವುಂ ಮರುಳ್ಗೊಂಡರೋ
ಪರಮುಂಟೆಂಬುದನಾರು ಬಲ್ಲರಱಿವಿಂ ನಿಷ್ಕಾರಣಂ ಶ್ರಾವಕ
ರ್ಕಳುಂ ಕಟ್ಟಿ ವಿಶೇಷಮಪ್ಪ ಧನಮುಂ ಸಂಕ್ಲೇಶದಿಂ ಪೆತ್ತು ವಿ
ಸ್ತಾರದಿಂ ಭೋಗಿಸಲೊಲ್ಲಗೇಕೆ ಕಿಡುವರ್ನಿರ್ಬುದ್ಧಿಯಿಂ ಧರ್ಮದೊಳ್[3] ॥

[1] ಇವರ ವಚನಮುಂ ತಪ್ಪದೆಂದು ನಂಬಿ ವಿಮಾನಾರೂಢನಾಗಿಯುಂ ತತಣದಿಂದುತ್ತರ ಮಧುರೆಗೆ ಬಂದು ಭವಸೇನಾಚಾರ್ಯರಂ ಕಂಡು, (ಗ)

[2] ಎಂದವರ್ಗೆ ಸಂತೋಷಂಬಡಿಸಿ ಸಂತೋಷವಾಗಿ ಮೂಱು ನಾಲ್ಕನೆಯ ದಿವಸಮಿರ್ದು ಭವಸೇನಾಚಾರ್ಯರ ಸಮ್ಯಕ್ತ್ವಮಂ ನೋಡಲೆಂದು ಬ್ರಹ್ಮಚಾರಿ ಇಂತೆಂದಂ, (ಗ) [3] ಕಿಡುವರ್ ನಿರ್ಬುದ್ಧಿಯಿಂದಾವುದರೊಳ್, (ಗ)

[ ಎಂದು ಭವಸೇನಾಚಾರ್ಯರಂ ಬೆಸಗೊಳ್ವುದುಂ ಮೆಲ್ಲನೆ ನಕ್ಕು ಧರ್ಮದಿಂ ಪರತ್ರೆಯೊಳ್ ಸುಖಮುಂಟೆಂಬುದಾಗಮದೊಳ್ ಪೇಳ್ಕುರ್ಮಲ್ಲದಾಪೆಱಿಯೆಮೆಂಬುದುಂ ಬ್ರಹ್ಮಚಾರಿ ನಕ್ಕು ತನ್ನೊಳ್ ಮತ್ತಂ ॥] [1] ೧೬೩

ತ್ರಸಮಂ ಪಿದ್ಯೆಗಳಂ ವಿಗುರ್ವಿಸಿ ಬಳಿಕ್ಕಂ ತಾತ್ರಸಮಾತ್ರಮಂ
ಮಿಸುಕಲ್ಕೀಯದೆ ಮೆಟ್ಟಿ ನಿಷ್ಕರುಣದಿಂದಲ್ಲಿರ್ದ ಮಪ್ರಾಣಿಗು
ಬ್ಬಸಮಂ ಮಾಡದಿರೆಂದೊಡಾಮುನಿಮುನೀ ಜೀವಂಗಳಂ ಜೀವಮೋಂ
ಬೆಸಸಿಂ ನಿಶ್ಚಯಮೆಂದೊಡಾಮಱಿಯೆವೆಂತೆಂಬ ಮರ್ನೀಂದೊ ್ರೆತ್ತ
ಮರ್ ॥ ೧೬೪

[ಮೆತ್ತಮಪ್ರಾಶ್ಯನೀರಮಂ ಗುಂಡಿಯೊಳ್ತೀವಿತಂದುಕಾಡುಮ್ರದು ಮುಂಪಾದಿರೆ ನಕ್ಕು ॥] [2] ೧೬೫

ನೀರೊಳ್ಗಾಳಿಯೊಳಗ್ನಿಯೊಳ್ಧರಣಿಯೊಳ್ಜೀವಂಗಳುಂಟೆಂಬರಾ
ನೀರೊಳ್ಗಾಳಿಯೊಳಗ್ನಿಯೊಳ್ಧರಣಿಯೊಳ್ಜೀವಂಗಳಂ ಕಂಡರಿ
ನ್ನಾರೀಲೋಕದೊಳಲ್ಲ ಜೀವನೊಳವೋ ಮಣೆಲ್ಲವೋ ಪೇಳು ನೀ
ವಾರಯ್ದಿಪ್ಪನಗೆಂದೊಡಾವೆಱಿಯೆವೋದಂತೆಂಬುದಾಶ್ಚರ್ಯದಿಂ ॥ ೧೬೬

ಎಂಬುದುಮವರ ಮಾತಿಂಗಮಾಗಮದೊಳಾದ ವಿಶ್ವಾಸಕ್ಕಂ ತಲೆಯಂ ತೂಗಿ, ॥ ೧೬೭

ರಸಗೀತಂ ಪೊಣ್ಮೆ ತೂರ್ಯಧ್ವನಿಗಳಸಯ ಸಜ್ರಗದಿಂ ತುಪ್ಪದಿಂದಂ
ಮೊಸರಿಂದಂ ಕ್ಷೀರದಿಂದಂ ಮುದದಿನೆಭಿಷವಂ ಮಾಡುವರ್ಭಕ್ತಿಯಿಂ ಭ
ವ್ಯಸಮೂಹಂ ವೀತರಾಗಂ [3] ಗಿವರೊಳ ಫಲಮೇನೆಂದು ತತ್ಸಾಧುಮಂ ಸಂ
ತಸದಿಂದಂ ಕೇಳ ನಾಮೇನಱಿವವು ಮುನಿಪಪುಣ್ಯಾಮುಂಟೆಂದು
ಪೇಳ್ದರ್ ॥ ೧೬೮

---

[1] ಉಳ್ಳುದಂ ಪೇಳಿಮನೆ ದಾನದುಸುಖಮುಂಟೆಂಬುದಂ ಆಗಮದಲ್ಲಿ ಪೇಳ್ವುದಲ್ಲದಾವಱಿಯೆವೆಂಬುದು ನಕ್ಕು (ಗ) [2] ಏಕಾದಶಾಂಗದರಿಯಾಗಿಯುಂ ಮಿಪಗ್ರಂತೀವಮಾತಕ್ಕುಮೆ ಜಗದೊಳ್ ಭವ್ಯತ್ವಮು ಕಷ್ಟಮೆಂದು ಮನದೊಳ್ [illegible] (ಗ) [3] [illegible] (ಗ)

ಎಂದು, ತಾವರೆ ನೀರಂ ಪೊರ್ದದಂತೆ, ಪೊಲೆಯಕುಲಜರಂ ಪೊರ್ದದಂತೆ [ಪಲ್ ತಾಳುಗೆಯುಂ ಪೊರ್ದದಂತೆ, ಪುರ್ವು ಕಿವಿಯುಂ ಪೊರ್ದದಂತೆ] ಮುಗಿಲ್ಕೈಲಸಂ ಪೊರ್ದದಂತೆ, ನಕ್ಷತ್ರಂ ಮೇರುವಂ ಪೊರ್ದದಂತೆ, ಪತಂಗಂ ಸೂರ್ಯನಂ ಪೊರ್ದದಂತೆ, [1] ಆಪ್ತಾಗಮ ಪದಾರ್ಥಂಗಳೊಳ್ ಪೊರ್ದುಗೆಯಿಲ್ಲದಿರೆ [ಬ್ರಹ್ಮಚಾರಿ ತನ್ನೊಳಿಂ ತೆಂದಂ ॥] ೧೬೯

ವನರುಹಮಂ ಸಱಿಯೊಳ್ ಬೇ
ವಿನ ಗೊಟ್ಟೆಯೊಳನಿದನರ್ಕನೊಳ್ ತಂಪಂ ಮೇ ।
ದಿನಿಯೊಳಭವ್ಯರೊಳೊಳ್ಪಂ
ಘನಮಾಗಿರಲಱಿಸಿ ತೊೞಲುವಾತನೆ [2] ಗಾಂಪಂ ॥ ೧೭೦

ಕಿಸುವಿಂ ಜಿನರೂಪಂ ಮಾ
ಡಿಸಿ ಪೂಜಿಸೆಯುಂ ಕಿಲುಂಬು ಮಾಣದ ತೆಱದಿಂ ।
ವಸುಧೆಯೊಳಭವ್ಯರುಂ ಭಾ
ವಿಸುವೊಡೆ ಜಿನರೂಪನೆಯ್ದಿಯುಂ ಪೊಲ್ಲನಿಪರ್ [3] ॥ ೧೭೧

[ಆದಱಿಂ] "ಸಂಸ್ಕಾರಶತೇನಾಪಿ ನ ಗುಂಡಃ ಕುಂಕುಮಾಯತೇ" ಎಂಬ ವಾಕ್ಯಾರ್ಥದ [ಂತೆ ಮಿಥ್ಯಾದೃಷ್ಟಿಗಳುಮಭವ್ಯರುಂ ತಮ್ಮನೆನಿತು ಸಮಱಿದೊಡಂ ನಡೆದೊಡಂ ಪ್ರಸಿದ್ಧರಾದೊಡಂ ನಿರಂತರ ಸುಖಪ್ರಾಪ್ತರಲ್ಲೆಂಬುದಂ ತನ್ನೊಳ್ ಬಗೆಯುತ್ತುಂ ಉಂಡುರುಳಿ ಭಟ್ಟಾರಕರ ಸಮ್ಯಕ್ತ್ವಮೆನಾರಯ್ವೆಲೆಂದು ಅವರಲ್ಲಿಗೆ ಬಂದು ಅವ ನೆರ್ೕಡೆನೋಡೆ ॥ ೧೭೨

ತಡೆಯದೆ ವಿದ್ಯೆಗಳಿಂದಾ
ಗಡೆ ತಗುಣೆಯನಿಱುಪೆಯಂ ನೊಣಂಗಳನೊಪ್ಪಂ ।

1 ಪೊನ್ನು ಮಾಣಿಕಮಂ ಪೊರ್ದರಂತೆ (ಗ)

2 ತಡೆಯದಱಿಸುವಾತನೆ (ಗ) 3 ವಸುಮತಿಯೊಳ್ದುರ್ಜನರುಂ ಪಿಸರ್ಣೆಡೆರುಂ ತಮ್ಮ ಸಹಜಮಂ ಬಿಟ್ಟಪರೇ (ಖ. ಕ)

ಬಡೆದಿರ್ದ ಪಸಿಯ ಪುಲ್ಗಳ
ನುಡುಗದೆ ತಾಂ ಪಡೆದು ಪಲವುಮಂ ತತ್ಕ್ಷಣದೊಳ್ ‖][1] ೧೭೩

ಇಱುಪೆಗಳಂ ಮೆಟ್ಟುತ್ತುಂ
ಪಱಿಯುತ್ತುಂ ಪಸಿಯ ಪುಲ್ಗಳಂ ತಗುಣೆಗಳಂ ।
ಪೆಱತೇನೊರಸುತ್ತುಂ ಮೆ
ಯ್ಯೊಱಿಯದೆ ಕೊಲುತಂ ನೋಣಂಗಳಂ ನಿರ್ದಯೆಯಿಂ ‖ ೧೭೪

ಇಪ್ಪುದುಮದನುಂಡುರುಳಿಭಟ್ಟಾರಕರ್ಕಂಡು [ತಮ್ಮೊಳಿಂತೆಂ
ದರ್ ‖] ೧೭೫

ಇದು ಪೇಲಿದು ಮೆಯ್ಯಿನ್ನೀರೆಂ
ಬುದನಱಿಯದೆ ಮೆಯ್ಗೆ ಪೂಸಿಕೊಳ್ವುವು ಮಕ್ಕಳ್ ।
ಪದಪಿಂದೆ ಮತ್ತೆ ಮಿಥ್ಯಾ
ತ್ವದ ಪುದುವಿಂ ಬಳರುವಶುಭಕರ್ಮಂಗಳುಮಂ[2] ‖ ೧೭೬

ಶುಭಕರ್ಮಂಗಳಂದು ನೆಗಳ್ವುದಾವುದು ಚೋದ್ಯಮೆಂದು ಬಗೆ
ದಾತನೊಳಾದ ನಿಷ್ಕರುಣತೆಗೆ [ನಾಡೆಯುಂ] ಕೊಕ್ಕರಿಸಿ [ಬ್ರಹ್ಮಚಾರಿ
ಯಲ್ಲಿಗೆ ಮೆಲ್ಲನೆ ಪೋಗಿ ಮೃದುವಚನಗಳಿಂದಿಂತೆಂದರ್ ‖][3] ೧೭೭

ದಯೆಯಿಲ್ಲದ ಧರ್ಮಮು
ನಯಮಿಲ್ಲದ ಸತಿಯುಮಾತ್ಮನಿಲ್ಲದ ತನುವುಂ ।
ಜಯಮಿಲ್ಲದ ಕಾಳಗಮುಂ
ಪ್ರಿಯಮಿಲ್ಲದ ಬಿರ್ದುಮೊಪ್ಪಲಾಱವು ಜಗದೊಳ್ ‖ ೧೭೮

---

1 ಫಲದಂತೆ ಅಥವ್ಯರುಮೆನಿಸೋದಿದೊಡಂ ದರ್ಶನದೊಳ್ ದೃಢರಲ್ಲರೆಂದು, ಅಲ್ಲಿಂದಮುಂಡುರುಳಿಭಟ್ಟಾರಕರ ಸಮ್ಯಕ್ತ್ವಮನಾರಯ್ಯಲೆಂದುಮವರಿರ್ದ ಪ್ರೋಪ ಲಿಗೆ ಬಂದು ನಿದ್ರೆಯಂ ಪಡೆದು (ಗ) 2 ಪುದುವಿಂ ಕೊಲೆಯ, ಕೆಲಗೆ ಸುಖ ಮಾಗಿರ್ಕುಂ (ಗ)

3 ಬೇಗಮವರಲ್ಲಿಗೆ ಬಂದಿಂತೆಂದರ್ (ಗ)

[ಜಿನಧರ್ಮವೆಂಬುದಿದು ಜೀ
ವನಿಕಾಯಕಾರ್ಕ್ಯಮಾತ್ರಹಿತಮಘಕುಲಜೀ ।
ವನಿಧಿಬಡವಾನಲಂ ಸ
ಜ್ಜನವಂದ್ಯಂ ಸುವ್ರತೈಕನಿಧಿ ಗುಣನಿಳಯಂ ॥ ೧೭೯

ಜನನಿ ಸಹೋದರರಿಷ್ಟರ್
ವನಿತೆ ಸುತರ್ತಂದೆ ಕೆಳೆಯರೆಂಬಿನಿಬರುಮೇಂ ।
ಮನವೊಲ್ದು ಮಹಾಜಿನರೂ
ಪನೆ ಪೊರ್ದಿದೆಯೆಂದೊಡಖಿಲಭೂಮಂಡಲದೊಳ್ ॥ ೧೮೦

ಇನ್ನು ನಿನ್ನಂತು ಧನ್ಯರುಂ ಮಾನ್ಯರುಮಿಲ್ಲದಱಿಂದೆ ಕೇವಲ ವೀರದಿಂ ಜಿನರೂಪಂ ಪೊರ್ದಿದೆಯಿನ್ನಲಸನಾಗದೆ ಗುಣವಂತರಂ ಪೊರ್ದಿ ಪರಮಾಗಮಮನೋದುವುದು ॥ ೧೮೧

ಪರಮಾಗಮದಿಂದಲ್ಲದೆ
ನಿರುತಂ ಸದ್ಧರ್ಮಮಱಿಯಬಾರದು ಧರ್ಮಂ ।
ದೊರೆಕೊಂಡೊಡಲ್ಲದಕ್ಷಯ
ಸಿರಿಯುಂ ಕೈಸಾರಲಱಿಯದತಿಶಯದಿಂದಂ ॥ ೧೮೨

ಅದುಕಾರಣದಿಂದಾಗಮಮನೋದುವುದು; ಪರಮಾಗಮಮನೋದಿದೊಡಲ್ಲದೆ ದಯಾಮೂಲಮಪ್ಪ ಧರ್ಮಮನಱಿಯಲ್ಬಾರದು; ನೀಂ ನಿರ್ದಯರಂತೆ ಜೀವಂಗಳ್ಗೆ ಬಾಧೆಯಂ ಮಾಡವೇಡನೆ ಬ್ರಹ್ಮಚಾರಿಯಿಂತೆಂದಂ ॥][1] ೧೮೩

ತನುವಂ ತಪದೊಳ್ಕುಂದಿಸಿ
ವನಿತೆಯುರಂ ತೊಱೆದಿಹತ್ರಯೊಳ್ಸುಖಮಂ ಕೆಂ ।

---

1 ಜೀವದಯವಿಲ್ಲದ ತಪಮುಮೊಪ್ಪದು ನೀಕರುಣಿಗಳಂತೆ ಪ್ರಾಣಿವಧೆಯಂ ಮಾಡಲಾಗದು ಜಿನಧರ್ಮವೆಂಬುದು ಜಿನಧರ್ಮಮುಂ ಜಿನಾಗಮಮುಂ ನೀಂ ಮನದೊಳ್ಭಾವಿಸಿ ಜಿನಮತಮನ ತಿಬ್ಬಂ ಪಿಡಿದು ನಡೆವುದು ದಯೆಯಿಂದಂ (ಗ)

ಮನೆ ಕಿಡಿಸಿ ಮೇಲೆ ಸುಖಮಂ
ಮನದೊಳ್ಬಯಸುವನೆ ಗಾಂಪನದನಾರಱಿವರ್ ॥ ೧೮೪

ಎಂಬುದುಂ [ಉಂಡುರುಳಿಭಟ್ಟಾರಕರಿಂತೆಂದರ್ :—] ॥ ೧೮೫

ನೆಱೆ ನಿನ್ನ ಬೆನ್ನನೇನಂ
ದಱಿಯ್ಯೆ ನೀನಿನಿತಱಿಂದೆ ಬೆನ್ನಿಲ್ಲೆಂಬಾ ।
ಪಱಿವಾಯ್ತನದಿಂದೇನಂ
ದಱಿಯದೆ ಗಱಪುವರ ನುಡಿಗಳಂ ಕೈಕೊಳ್ವಾ ॥ ೧೮೬

ನೀಂ ನಿನ್ನ ಕಣ್ಣ ಪಾಪೆಯು
ನುನ್ನತಿಯಿಂದಱಿಯದನಿತಱಿಂ ಪಾಪೆಗಳ ।
ಲ್ಲೆನ್ನಲ್ಕಕ್ಕುಮೆ ಗುಣಮಂ [1]
ಭಿನ್ನಗುಣರ್ನಂಬದನಿತಱಿಂದಿಲ್ಲೆಂಬಾ ॥ ೧೮೭

ನೀಂ ನಿನ್ನ ತಾಯ ಬಸಿಱೊಳ್
ನೀನಿರ್ದುದನೀಗಳಱಿಯೆಯೆಂಬನಿತಱಿಂಳಂ ।
ಮಾನಿತಗುಣ ಪುಸಿಯೆಂಬಾ
ನೀನಱಿಯದೊಡನಿತಱಿಂ ಪರತ್ರೆಯುಮಿಲ್ಲಾ ॥ ೧೮೮

ಎಂಬುದುಂ ಬ್ರಹ್ಮಚಾರಿ [ಯಿಂತೆಂದಂ ॥] ೧೮೯

ಸುರಲೋಕಸುಖಂ ತಪದಿಂ
ದೊರೆಕೊಳ್ಗುಂದೋದು ಪೇೞ್ವುದಲ್ಲದೆ ಸತ್ತರ್ ।
ಸುರಗತಿಯಿಂದಂ ಬಂದೊ
ಪ್ಪಿರೆ ಪೇೞ್ದರೆ ನೀವಿದೇಕೆ ಪರಮುಂಟೆಂಬಿರ್ ॥ ೧೯೦

[ಎನೆ ಮುನೀಂದ್ರೋತ್ತಮ] [2] ರಿಂತೆಂದರ್ :— ೧೯೧

[ದೂರದೊಳಿಪ್ಪಾಗ್ರಹಣಮ
ನಾರಾನುಂ ಕಂಡರೊಳರೆ ಕೇಳೋದಿದೊಡಂ ।

1 ಪೇೞ ಪರಮುಂ (ಗ) 2 ಎಂಬುದುಮುಂಡುರುಳಿಭಟ್ಟಾರಕ (ಗ)

ಧಾರಿಣಿಯೊಳಱಿದು ಪೇೞ್ವರ್
ಸಾರಗುಣರ್ಬಗೆವೊಡೋದಿನೊಳ್ ಪುಸಿಯುಂಟೇ ॥ ೧೯೨

ಅಮವಾಸೆಯಂದು ಲೋಕಂ
ಹಿಮಕರನಂ ಕಾಣದನಿತಱಿಂ ಸಸಿಯಿಲ್ಲಾ ।
ಭ್ರಮೆಯಿಂದಂ ನೀನತಿದು
ಷ್ಷಮದೊಳ್ಪೇೞ್ ಜಿನರನಱಿಯದಿರೆ ಜಿನರಿಲ್ಲಾ ॥ ೧೯೩

ಸಸಿಯಿರ್ದಪನಮವಾಸೆಯು
ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ।
ವಸುಧೆಯೊಳಿರ್ದಪರಿರ್ದುಂ
ಮಿಸುಕುವ ಕಲಿಗಾಲದೆಸಕದಿಂ ತಲೆದೋಱರ್ ॥ ೧೯೪

[ ಎಂಬುದುಮಂತಾದೊಡೆ ] [1] ನಿಮ್ಮಾಗಮದೊಳ್ ಪೇೞ್ದ
ಮೂಱುಂಲೋಕಂಗಳನಾವಂ ಪೊತ್ತಿರ್ದಪಂ ಪೇೞುವೆನೆ ॥ ೧೯೫

ಅಂಬರದೊಳ್ ಶಶಿದಿನಕರ
ಬಿಂಬಮನಾರ್ತಾಳ್ದ ಪೊತ್ತುಕೊಂಡಿರ್ದರ್ ಪೇ ।
ಊಂಬಿಲ್ಲದೆ ಲೋಕತ್ರಯ
ಬಿಂಬಂ ತನ್ನ ಸ್ವಭಾವದಿಂ ನೆಲಸಿರ್ಕುಂ [2] ॥ ೧೯೬

[ಮತ್ತಂ ಪರಮಾಗಮಮಂ ಪುಸಿಯೆಂಬೆಯಪ್ಪೊಡೀ ಸಿದ್ಧಾಂತದೊಳ್ ಪೇೞಪಟ್ಟ ಗಣಿತಜೋಯಿಸಂಗಳೇಕೆ ತಪ್ಪವದಱಿಂದೊಂದು ಪುಸಿಯನೆವೇಡೆಂಬುದುಮಂತಪ್ಪೊಡೆ ನಿಮ್ಮಾಗಮದೊಳ್ ಪೇೞಪಟ್ಟ ಷಡ್ದ್ರವ್ಯ ಸಪ್ತತತ್ತ್ವ ನವಪದಾರ್ಥ ಪಂಚಾಸ್ತಿಕಾಯಮೆಂಬಿವು ಮೊದಲಾದ ಪಲವುಂತತ್ತ್ವಂಗಳುಂ ದಿಟಮೆ ಪೇೞುವೆಂಬುದುಂ ಉಂಡುರುಳಭಟ್ಟಾರಕರಿಂತೆಂದರ್ ॥] [3] ೧೯೭

1 ಅಂತೆ ತಾಂ (ಗ)  2 ನೆಲಸಿರ್ದವೂ (ಬ. ಕ.)

3 ಎಂಬುದುಮಂತಾದೊಡೆ ನಿಮ್ಮ ದೇವನಪ್ಪ ವರ್ಧಮಾನಸ್ವಾಮಿಯುಂ ಪೇೞ್ದ ಪಂಚಾಸ್ತಿಕಾಯಾದಿ ಪದಾರ್ಥಂಗಳಂ ದಿಟಮೆ ಪೇೞಿವೆನೆ (ಗ)

ಖರಕರನುಷ್ಣಮಂ ತೊಱೆದು ತಣ್ಣದನಪ್ಪೊಡವಿಂದು ತಣ್ಪನ
ಚ್ಚರಿಯೆನೆ ಬಿಟ್ಟು ತೀವ್ರಕರನಪ್ಪೊಡವೊಪ್ಪುವ ವಾರ್ಧಿಸಂಕುಲಂ
ಪರಿಹರಿಸಿರ್ಪೊಡಂ ಜಲಮನಿಂದ್ರನಗಂ ನೆಲೆಯಿಂದಗಲ್ದೊಡಂ
ಪರಮಜಿನಾಗಮಂ ಮರುಳ ತಪ್ಪುಗುಮೇ ವಸುಧಾತಳಾಗ್ರದೊಳ್ ॥

ಎಂಬುದುಂ ಕಿವಿಯ ಪಾಲೆಯ, ಮಹಾನದಿಯ ಸಮುದ್ರದ, ಗಜದಂತಪರ್ವತದ ಮೇರುವಿನ, ಪಾಸಿನ ಪೊಕ್ಕಿನ, ಮಾಣಿಕದ ಕಾಂತಿಯ, ನಿಷಧದ ವಿದೇಹದ, ಚಿತ್ರೆಯ [1] ವಜ್ರೆಯ, ಮೊಲೆಯ ಕೆಚ್ಚಲ, ಮರನ ಕಿಚ್ಚಿನ, ಬೆಲ್ಲದ ಸವಿಯ, ಸಿಂಹದ ಕೇಸರದ, ಗಜದ ದಂತದ, ತಳದ ರೇಖೆಯ, ಪುರ್ವಿನ ನೊಸಲ, ಕಣ್ಣ ಪಾಪೆಯ, ಸ್ತನದ ಚೂಚುಕದ, ಬಸಿಱ ಬಾಸೆಯ, ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಮೆಂದು [ಂಡುರುಳಭಟ್ಟಾ ರಕರ ಸಮ್ಯಕ್ತ್ವಕ್ಕೆ ಮೆಚ್ಚಿ ಮನದೊಳ್ ಪೊಡೆಮಟ್ಟು ಮತ್ತಂ ಕ್ಷಮೆ ಯಿಂ ಪರೀಕ್ಷಿಸಲೆಂದು ॥ ೧೯೯

ಪಟ್ಟರ್ದರನಱಿಯದವೊಲ್
ಮೆಟ್ಟುವುದುಂ ಕಾಲೊಳಾದ ಕೆಸಱೆಲ್ಲಂ ಮೇ ।
ಲೊಟ್ಟದ ತೆಱದಿಂ ಪತ್ತಿದೊ
ಡೊಟ್ಟಜೆಯಿಂದಿರ್ದು ಗಜಱಿ ಗರ್ಜಿಸದಿನಿಸುಂ ॥ ೨೦೦

ಮೆಲ್ಲನೆ ಕುಳ್ಳಿರ್ದು ತಮ್ಮಂ ಪೆಱರಾರಾನುಂ ತಾಗಿ ಬಿರ್ದರೆಂದು ತಮ್ಮಂ ತಾವೆ ನಿಂದಿಸಿಕೊಂಡು ಪ್ರಾಣಿಹಿತಮಪ್ಪುದಱಿಂದೇವೊಬ್ಬಂ ಮೆಲ್ಲನೆ ನೋಡಿ ಪೋಗಿಮೆನೆ ಮನದೊಳಾದ ದಯೆಗೆ ಮೆಚ್ಚಿ ಮಱುದಿ ವಸಂ ॥ ೨೦೧

ಆನಿರ್ಪೆಡೆಯೊಳಗ್ನಾರ್ತಿಂ
ನೀನೆನ್ನಂ ಬಗೆಯದುದ್ಧತಿಕ್ಕೆಯೊಳಿರ್ದೈ ।
ನೀನೇಕಂದಲ್ಲಿಂದಳಿ
ಮಾನಂಗಿಡೆ ಜಡಿದು ಬಡಿದು ಕೆಡೆನೂಂಕುವುದುಂ ॥ ೨೦೨

---

1 ಚಿತ್ತ್ರೆಯ (ಗ)

ಮನದೊಳ್ ಭೈಸಿತಪ್ಪೊಡಂ ಮುನಿಸಿಲ್ಲದೆ ತಾಂ ಪಾಪಭೀರುಗಳ ಪ್ಪುದಱಿಂ ಬ್ರಹ್ಮಚಾರಿಗೆ ತಮ್ಮಿರ್ದೆಡೆಯನಿತ್ತು ಕ್ಷಮೆಗೊಂಡು ಮತ್ತೊಂದೆಡೆಗೆ ಪೋಪುದುಂ ಕರವಾಕ್ಷ್ಚರ್ಯಂಬಟ್ಟು ಕೃತಕರೋಷಮಂ ಬಿಟ್ಟು ತನ್ನೊಳಾದ ಕೃತಕಮೆಲ್ಲಮಂ ಪೇೞ್ದು ॥ ೭೦೩

ಕರವೂದರದಿಂ ಭಕ್ತಿಯ
ಭರದಿಂ ಮೆಯ್ಯಿಱಿಯದಾಮುನೀಂದ್ರನ ಪಾದಾಂ ।
ಬುರುಹಕ್ಕೆ ವಿನತನಾದಂ
ಸರಸಿರುಹಕ್ಕಳಿಗಳಬ್ಬರಿಂದೆಱಗುವವೊಲ್ ॥ ೭೦೪

ಅಂತು] [1] ವಂದಿಸಿ ಮುನಿಗುಪ್ತಭಟ್ಟಾರಕರ ಪ್ರತಿವಂದನೆಯುಂ ಪೇೞ್ದು ಮಱುದಿವಸಂ ರೇವತೀಮಹಾದೇವಿಯೊಳಾದಮೂಢದೃಷ್ಟಿತ್ವಮನಾಱಯಲೆಂದು ತತ್ಪುರದ ಮೂಡಣ ದೆಸೆಗೆ ಬಂದು ವಿದ್ಯೆಗಳಂ ನೆನೆದು ಬರಿಸಿ ವಿಗುರ್ವಣೆಯಿಂ ॥ ೭೦೫

ವರಕಮಂಡಲವೊಪ್ಪೆ ಹಸ್ತದೊಳ್ ಉೞಿಪೆವೆತ್ತಿರೆ ಬೆಳ್ಳಯು
ತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂ
ತಿರೆ ತನುಚ್ಛವಿ ನಾಡೆ ಶೋಭಿಸೆ ಹಂಸೆ ರಂಜಿಸಿ ತೋಱೆ ಭಾ
ಸುರಚತುರ್ವದನಂ ವಿರಾಜಿಸೆ ಧಾತ್ರಿಗಚ್ಚರಿಯಪ್ಪಿನಂ ॥ ೭೦೬

ಬ್ರಹ್ಮನ ರೂಪಂ ಕೈಕೊಂಡು ಮಹಾವಿಭೂತಿಯಿಂದಿರ್ಪುದು ಮಾಪೊೞಲೊಳಾದಱಿಶ್ರಾವಕರುಂ ಸಂಶಯಶ್ರಾವಕರುಂ [2] ಕೇಳ್ವಯಿಲ್ಲದ ಶ್ರಾವಕರುಂ ನಾಮಶ್ರಾವಕರುಂ ಚರ್ಚಾಶ್ರಾವಕರುಂ ಯಶೋರ್ಥಿ ಶ್ರಾವಕರುಂ ಕುಮತಿಶ್ರಾವಕರುಂ ಕಾರ್ಯಾರ್ಥಿಶ್ರಾವಕರುಂ [ಘೋಷ (?) ಶ್ರಾವಕರುಂ] [3] ಮೊದಲಾಗೆ ಕಲ್ಲೆಯುಂ ಕವಿಲೆಯುಮಾಗೆ ಡೊಂಬರ

---

1 ಮೆಚ್ಚಿ ತಾನವರಂ (ಗ) 2 ಪೊೞಲೊಳಗಣ ಶ್ರಾವಕರುಂ ಮಿಶ್ರಶ್ರಾವಕರುಂ (ಗ)

3 ಸಂಘಾತಶ್ರಾವಕರುಂ, ಚರ್ಚಶ್ರಾವಕರುಂ, ಕಾರ್ಯಾರ್ಥಿಶ್ರಾವಕರುಂ ಗುಪ್ತಶ್ರಾವಕರುಂ, ಮಂತ್ರಾರ್ಥಿಶ್ರಾವಕರುಂ (ಗ)

ಬೀಡಂ ತೊಳಗಿ ಪಾಯ್ವಂತೆ ಕಳಕಳರವಂ ಪೆರ್ಚೆಯೊರ್ವ ನೊರ್ವನಂ ವಿಂಗೆ ಪರಿದೆಯ್ದಿ ಪೂಜಿಸಿ ಪೊಡೆವಡುತ್ತಿರ್ಪನ್ನೆಗಂ ಪೊೞಲೊಳಾದ ಜನದುಲಿಪುಮಂ ಪಱಿಯ ರವಮುಮಂ [ಮಾಡದೇಱ ನೆಯ ನೆಲೆಯೊಳ್] ರೇವತೀಮಹಾದೇವಿವೆರಸು ನಾಲ್ಕುಸಾಸಿರ ಮಕುಟ ಬದ್ಧರಿಂ ಪರಿವೃತನಾಗಿಯೊಡ್ಡೋಲಗಂಗೊಟ್ಟಿರ್ದ ವರುಣಮಹಾ ರಾಜಂ ಕೇಳ್ದಾಶ್ಚರ್ಯಂಬಟ್ಟುದೇನೆನೆ [ಕೆಲದೊಳಿರ್ದವರ್ ಬಿನ್ನಪವೆಂ ದಿಂತೆಂದರ್ ॥][1] ೨೦೭

ಸರಸಿಜಾಸನನಿಂದು ನಮ್ಮ ಪೊೞಲ್ಗೆ ದೇವ ಮಹೋತ್ಸವಂ
ಬೆರಸು ತನ್ನ ನಿವಾಸದಿಂ ಪೊಱಮಟ್ಟು ತನ್ನ ಪರಿಗ್ರಹಂ
ಬೆರಸು ದುಂದುಭಿನಾದಮೊಪ್ಪಿರೆ ರಾಗದಿಂ ಮನಮೊಲ್ದು ಭೂ
ಸುರರ ಪೆರ್ಮಿಡೆ ಕೀರ್ತಿಸುತ್ತಿರೆ ಬಂದು ಮೈಮೆಯೊಳಿರ್ಪಂ[2] ॥ ೨೦೮

ಎಂಬುದುಂ [ಅರಸನಾಶ್ಚರ್ಯಂಬಟ್ಟು] ರೇವತೀಮಹಾದೇವಿಯ ಮೊಗಮಂ ನೋಡಿ ॥ ೨೦೯

ಸರಸಿಜಗರ್ಭಂ ಗಡಮಿ
ಪುರಕ್ಕೆ ಬಂದಿರ್ದನೆಂದೊಡಿನ್ನುಮಿದಂದಂ ।
ಪಿರಿಯರ್ಪೆಱರಾರ್ಬಗೆವೊಡೆ
ಧರೆಯೊಳ್ ನಮ್ಮಂತು ನೋಡ ನೋಂತವರೊಳರೇ ॥ ೨೧೦

[ನಾನಾಪರಮೇಶ್ವರರಂ ಪೂಜಿಸಿ ಪೊಡೆಮಟ್ಟು ಬರ್ಪಮೇಱ ಮನೆ ರೇವತೀಮಹಾದೇವಿ ನೃಪನ ದೇವತಾಮುಖಕ್ಕೆ ಕಳಕಳಿಸಿ ನಕ್ಕಿಂತೆಂದಳ್][3] ೨೧೧

---

1 ಬಿನ್ನಪಮೆಂದೊರ್ವನಿಂತೆಂದಂ (ಗ)

2 ಏಂ ಬ್ರಹ್ಮಲೋಕದಿಂದಂ ತಾಂ ಬ್ರಹ್ಮಂ ಬಂದು ದೇವ ಪುಣ್ಯೋದಯದಿಂ ॥ ದಂ ಬ್ರಹ್ಮವೆರಸು ಜನವೆಲ್ಲಂ ಭ್ರಾಂತಿಂ ನೆರೆದು ನೋಡೆ ಪೂರ್ವದಿಶೆಯೊಳ್ ॥ ಇರ್ದಪಂ (ಗ)

ಈ ಜಗದ ನರರ್ವ್ರ್ಗಪ್ಪುಡು
ಪೂಜೆಗೆ ಮಾಯಾವಿಯೊರ್ವನರ್ತಿಯೊಳಂ ನಿ।
ರ್ವ್ಯಾಜದೊಳ್ ತೊಡರ್ದ [1] ಖೇಚರ
ರಾಜಂ ಮೇಣ್ ವ್ಯಂತರಾಧಿಪಂ ಮೇಣಿನಿಸಂ ॥ ೨೧೨

ಮಾಡಿಕೊಂಡಿರ್ದಪಂ [ ದೇವರಿವನಿ ಬ್ರಹ್ಮನೆಂದು ನಿಶ್ಚಯಿಸಿ ನಂಬಲ್ವೇಡೆಮ್ಮಾಗಮದೊಳಪ್ಪೊಡೆ ಕಾಲಮವಸರ್ಪಿಣಿಯೆಂಬುದೀಕಾಲದ ಮೊದಲೊಳಾದಿಬ್ರಹ್ಮನೆಂಬ ಪ್ರಥಮತೀರ್ಥೇಶ್ವರನಾದನಾ ಪರಮಾತ್ಮನು ಮಂದೇ ಮೋಕ್ಷಲಕ್ಷ್ಮಿ ] [2] ಯೊಳ್ಕೂಡಿದನೆಂಬುದುಮರಸಂ ಪೋಗದಿರ್ದನನ್ನೆಗಮಿತ್ತಲ್ ಕೃತಕಬ್ರಹ್ಮಂ ॥ ೨೧೩

ಅವರಿವರೆನ್ನದೆ ಪಟ್ಟಣ
ದವರೆಲ್ಲಂ ಬಂದರೆನ್ನನರ್ಚಿಸಲತ್ಯು।
ತ್ಸವದಿಂ ರೇವತಿದೇವಿಯು
ವಿವಿಧಗುಣಾಭರಣೆ ಬಂದಳಿಲ್ಲನುನಯದಿಂ ॥ ೨೧೪

[ಎಂದು ವಿಸ್ಮಯಂಬಟ್ಟು ] ತದ್ರೂಪನುಪಸಂಹರಿಸಿ ಮಱುದಿನಂ ದಕ್ಷಿಣಭಾಗಕ್ಕೆ ಬಂದು ಕೌತುಕಮಪ್ಪಿನಂ [3] ॥ ೨೧೫

ಕೊರಲೊಳ್ ಕೌಸ್ತುಭಹಾರಮೊಪ್ಪೆ ಗದೆಯುಂ ಕೋದಂಡಮುಂ ಶಂಖಮುಂ
ವರಚಕ್ರಾಯುಧಮುಂ ಚತುರ್ಭುಜದೊಳಂ ಚೆಲ್ವಾಗೆ ನೀಲಾದ್ರಿಯಂ ತಿರೆ ದೇಹಚ್ಛವಿ ಶೋಭಿಸುತ್ತಿರೆ ವಿಭೂಷವ್ರಾತಮೆತ್ತಂ ಮನೋಹರಮಾಗಲ್ಗರುಡಂ ವಿರಾಜಿಸೆ ಮಹೀಚಕ್ರಂ ಮನಂಗೊಳ್ವಿನಂ ॥ ೨೧೬

ದೇಸಿಯಿನೊಪ್ಪಿರೆ ತೋಯರು
ಹಾಸನೆ ಮೊದಲಾಗೆ ತನ್ನ ಕಾಂತೆಯರೀರೆ।

---

[1] ಮನನಚ್ಚಿ (ಬ. ಕ.)

[2] ಅವಸರ್ಪಿಣಿಕಾಲದೊಳ್ ಆದಿಬ್ರಹ್ಮನಾದಪರಮೇಶ್ವರನುಂಮುಕ್ತಿ (ಗ)

[3] ಮಱುದಿವಸಂ ತೆಂಕಣದೆಸೆಯೊಳ್ ಪುರಕ್ಕಗುರ್ವಪ್ಪಿನಂ (ಗ)

ಣ್ಠಾಸಿರ್ವರ್ಮೂತ್ತೀರೆ
ಣ್ಠಾಸಿರ್ವರ್ಮಕುಟುಬದ್ಧರುಂ ನಿಳೆ ಕೆಲದೊಳ್ ॥ ೨೧೭

ನಾರಾಯಣರೂಪಂ ಕೈಕೊಂಡಿರ್ಪುದುಂ ಪುರದವರೆಲ್ಲಂ ವಿಷ್ಣು ಪ್ರತ್ಯಕ್ಷಮಾಗಿರ್ದನೆಂದು ಮುನ್ನಿನಂತೆ ಬಂದು [ಪೂಜಿಸಿ ಪೊಡೆಮಡು ತಿರ್ದರನ್ನೆಗಂ ಅದನರಸನಱಿದು ರೇವತೀಮಹಾದೇವಿಯು]¹ ಮೊಗಮಂ ನೋಡಿ ॥ ೨೧೮

ನಿನ್ನೆ ವಿರಿಂಚಂ ಬಂದೊಡ
ದಂ ನಂಬುಗೆಯಿಲ್ಲದೊಳ್ಳೆನೆಂದೈ ಕೇಳ ।
ತ್ಯುನ್ನತಿಯಿಂ ಧರೆ ಬಣ್ಣಿಸೆ
ಪನ್ನಗಪತಿಶಯನನಪ್ಪ ಸರಸಿಜನಾಭಂ ॥ ೨೧೯

[ಬಂದಿರ್ದನದುಮಂ ಪುಸಿಮಾಡದೆ ನಮ್ಮ ಪರಿಜನಂಬೆರಸು ಪೋಗಿ ವಿಷ್ಣುವನರ್ಚಿಸಿ ಪೊಡೆಮಟ್ಟು ಬರ್ಪಮೆನೆ ವನಿತಾರತ್ನೆ]² ಯಿಂತೆಂದಳ್ ॥ ೨೨೦

ಇವನುಂ ಮಾಯಾಪುಂಜಂ
ಭುವನದೊಳತಿಪೂಜೆಗಾಟಿಸುವ ಖಳನೇ ಮೇ ।
ಣವೆನಿಪ ನಿಶ್ಚಯದಿಂ ಕೇ
ಶವನಲ್ಲಂ ದೇವ ಬಗೆವೊಡೆಮ್ಮಾಗಮದೊಳ್ ॥ ೨೨೧

ನವಕೇಶವರುರ್ವರೆಯೊಳ
ಗವರುಂ ಮುನ್ನಾಗಿ ಪೋದರೀಗಳದೇನಾ ।
ನುಮನೊರ್ವನಂತೆ ಮಾಡಿದೊ
ಡವಂಗೆ ನೀಂ ಭಕ್ತಿಯಿಂದಮೆಱಗುವೆನೆಂಬಾ ॥ ೨೨೨

ಎಂಬುದುಮರ [ಸನರ] ಸಿಯು ಮಾತಿಂಗೆ ಚೋದ್ಯಂಬಟ್ಟು ಪೋಗದಿ ರ್ದನನ್ನೆಗಮಿತ್ತಲ್ ಮಾಯಾವಿಷ್ಣು ರೇವತೀಮಹಾ [ದೇವಿ ಯೊರ್ವಳ

1 ಪೂಜಿಸುತ್ತಿರೆ ವರುಣಮಹಾರಾಜನಱಿದರಸಿಯು (ಗ)

2 ಇಂದು ಪುಸಿಯೆಯಾದೊಡಂ ಪೂಜಿಸಿ ಪೊಡೆಮಟ್ಟು ಬರ್ಪಮೆಳಿಮೆನೆ ರೇವತಿಮಹಾದೇವಿ (ಗ)

ಬಾರದುದಕ್ಕೆ ವಿಸ್ಮಯಂಬಟ್ಟು ವಿಗುರ್ವಣೆಯನದೃಶ್ಯಂಮಾಡಿ ಮತ್ತಂ ಮಱುದಿವಸಮಾಪುರದ] [1] ಪಡುವಣ ದೆಸೆಗೆ ಬಂದು ಮಹಾದ್ಭುತಮಪ್ಪಿನಂ ॥ ೨೦೩

ಶಿರದೊಳ್ ಗಂಗಾಜಲಮೊ
ಪ್ಪಿರೆ ಜಡೆಯೊಳ್ ಶುಭ್ರಶಶಾಂಕನೆಸೆದಿರೆ ನೊಸಲೊಳ್ ।
ಕರಮುರಿಗಣ್ಣೊಳಪಟ್ಟಿರೆ
ಗಿರಿಸುತೆ ವಾಮಾರ್ಧದೊಳ್ವಿರಾಜಿಸೆ ಮುದದಿಂ ॥ ೨೦೪

ಕರದೊಳ್ ಫಣಿಕಂಕಣಮೆಸೆ
ದಿರೆ ಶೂಲಂ ಡಮರುಗಂ ಕಪಾಲಂ ತಳದೊಳ್ ।
ಕರಮೊಪ್ಪೆ ಶಲ್ಯಭೂಷೋ
ತ್ಕರಮಂಗದೊಳಯ್ದೆ ಶೋಭವೆತ್ತಿರೆ ಚೆಲ್ವಿಂ ॥ ೨೦೫

ನಿರುಪಮತಾರಾಚಳದಂ
ತಿರೆ ದೇಪಟ್ಟಿಯೆಯಿರ್ಪ ವೃಷಭವಾಹನಮು ।
ಚರಿಯಾಗೆ ಮರುಳ ಪೆರ್ವಡೆ
ಕರಮತ್ಯಾಶ್ಚರ್ಯಮಾಗೆ ಬಂದಿರೆ ಕೆಲದೊಳ್ ॥ ೨೦೬

[ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಮು ಚರಿವಟ್ಟು ಕಿವಿಯೊಳ್ಕೇಳ್ದೀಶ್ವರನಂ ಕಣ್ಣಾರ ಕಂಡೆವಮ್ಮಂ ಬಿಟ್ಟು ನೋಂತವರಾರೆಂದು ಬಗೆದ ಬಣ್ಣಿಕೆಯ ಪೂಜೆಗಳಂ ಮಾಡಿ ಪೊಡೆಮಡುತಿರ್ಪನ್ನೆಗಮಿತ್ತಲೀಶ್ವರಂ ಬಂದನೆಂಬುದಂ ವರುಣಮಹಾರಾಜಂ ಕೇಳ್ದು ತನ್ನಗ್ರಮಹಿಷಿಯು] [2] ಮೊಗಮಂ ನೋಡಿ ನಗುತ್ತುಮಿಂತೆಂದಂ ॥ ೨೦೭

---

1 ದೇವಿಯು ಬರವಂ ಕಾಣದೆ ರೂಪನುಪಸಂಹರಿಸಿ ಮಱುದಿವಸಂ (ಗ)

2 ಈಶ್ವರನ ರೂಪಂ ಕೈಕೊಂಡಿರ್ಪುದುಂ, ಪುರಮೆಲ್ಲಂ ಕಿವಿಯೊಳ್ ಕೇಳ್ದೀಶ್ವರನಂ ಕಣ್ಣಾರೆ ಕಂಡೆವು ನಮ್ಮಂ ಕೃತಾರ್ಥರಾದೆವೆಂದು ಪೂಜಿಸಿ ಪೊಡೆವಟ್ಟು ಕೊಂಡಾಡುತ್ತಿರೆ ವರುಣಮಹಾರಾಜನ ಅರಸಿಯು (ಗ)

ವನಜಮುಖಿ ಕೇಳ ನೀಂ ಮೊ
ನ್ನಿನ ಶೂನ್ಯವಚನಮಂ ನುಡಿಯುದೆ ನೆ ।
ಟ್ಟನೆ ಬರ್ಪುದಿಂದು ಗೌರೀ
ಶನ ಪದಮಂ ಕಾಣಲೆಂಬುದುಂ ಸತಿ ನುಡಿವಳ್ ॥ ೧೨೮

ದೇವ ಬಿನ್ನಪಮೆಮ್ಮಾಗಮದೊಳ್ ಭೀಮಾವಳಿ ಮೊದಲಾದೇಕಾದಶರುದ್ರರುಂ ಮುನ್ನಾಗಿ ಪೋದರಿವಂ ರುದ್ರನಲ್ಲನೆನೆ ಭೂಮೀಶ್ವರಂ ಬೆಱಗಾಗಿ ರೇವತೀಮಹಾದೇವಿ ಪೋಗದಿರ್ದೊಡೆ ತಾನುಂ ಪೋಗದಿರ್ದನನ್ನೆಗಮಿತ್ತಲ್ಮಾಯಾಹರಂ [1] [ರೇವತೀಮಹಾದೇವಿಯ ಬರವಂ ಕಾಣದೆ ವಿಸ್ಮಯಂಬಟ್ಟು] [2] ಮತ್ತಮಾ ಮಹಾನುಭಾವೆಯ ಸಮ್ಯಕ್ತ್ವಮನಾರಯಲೆಂದು ಮಱುದಿವಸಂ ಬಡಗಣ ದೆಸೆಗೆ ಬಂದು [ಜಗಕಾಶ್ಚರ್ಯಮಪ್ಪಿನಂ] ॥ ೧೨೯

ಮಿಳಿರ್ವಶೋಕೆಯ ವೃಕ್ಷದಿಂ ಹರಿಪೀಠದಿಂ ಸುರತೂರ್ಯದಿಂ
ಪೊಳೆವ ಚಾಮರದೋಳಿಯಿಂ ನೆಱೆ ದಿವ್ಯನಿಸ್ವನದಿಂ ಸುರರ್
ತಳೆವ ಪುಷ್ಪಸಮೂಹದಿಂದೊದವಿರ್ದ ಮುಕ್ಕೊಡೆಯಿಂ ಪ್ರಭಾ
ವಳಯದಿಂ ರಮಣೀಯಮಾಗಿರೆ ಧಾತ್ರಿಗಚ್ಚರಿಯಪ್ಪಿನಂ ॥ ೧೩೦

ಶ್ರೀವರ್ಧಮಾನಸ್ವಾಮಿಯ ರೂಪುಗೊಂಡಿರ್ಪುದುಂ ಮುನ್ನಿನಂತೆ ಎಲ್ಲರುಂ ಪರಿದು ॥ ೧೩೧

ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್
ಕೆಲರೊಂದುತ್ಪಲದಿಂ ಕೆಲರ್ವಕುಳದಿಂ ತಾಂಬೂಲದಿಂದಂ ಕೆಲರ್
ಕೆಲರೊಪ್ಪಿರ್ದ ಸುವರ್ಣಪುಷ್ಪಚಯದಿಂ ಕರ್ಪೂರದೀಪಂಗಳಿಂ
ಕೆಲರಾನಂದದಿನಿಂತು ಪೂಜಿಸಿ ಜಿನಾಧೀಶಾಂಘ್ರಿಪದ್ಮಂಗಳಂ ॥ ೧೩೨

---

1 ಈತನೀಶ್ವರನಲ್ಲನೆನೆ ವರುಣಮಹಾರಾಜಂ ಪೋಗಲೊಲ್ಲದಿರ್ದನತ್ತಲ್ ಮಾಯಾಹರಂ (ಗ)

2 ಪೆರ್ವೂನಲಿಂಗಿವೇಷದವನುರ್ವರೆಯೊಳ್ ಜೀಗವೆಂಬ ಗಾಂಪನ ತೆಱದಿಂ ನಿರ್ವ್ಯೂರ್ಧ್ವಿಗಳೆನ್ನನ್ನರ್ ಸರ್ವಗುಣಾಂಬುಧಿಯ ಚಿತ್ತಮುಂ ಕದಡುವರೇ ॥ ೧೨೯ ಎಂದು ಕೆಮ್ಮುಗಿದು ಮತ್ತಂ (ಗ)

[ಅಂತು ಪೂಜಿಸಿ] ಪೊಡೆವಡುತಿರ್ಪನ್ನೆಗಂ ವರ್ಧಮಾನಸ್ವಾಮಿ ಮಹಾಮಹಿಮೆಯಿಂ ಬಂದಿರ್ದನೆಂದು ವರುಣಮಹಾರಾಜಂ ಕೇಳ್ದು ರೇವತೀಮಹಾದೇವಿಗಿಂತೆಂದಂ ॥ ೭೩೩

ವನಜಾತಾನನೆ ಮುನ್ನಿನ
ವನರುಹನಂದನನುಮಂ ವೃಷಾರೂಢನುಮಂ ।
ವನರುಹನಾಭನುಮಂ ನಂ
ಬಿ ನಿತಾಂತಂ ಕೇಳ ಪೋಗಿ ಪೊಡೆಮಡವಿದೈ ॥ ೭೩೪

ಅದು ನಿನಗುಚಿತಮಪ್ಪುದೀಗಳ್ ನಿನ್ನ ಕುಲಸ್ವಾಮಿ [ಯಪ್ಪ ವರ್ಧಮಾನಸ್ವಾಮಿ ಬಂದಿರ್ದಪನಾಪರಮಾತ್ಮನಂ ಪೂಜಿಸಿ ಪೊಡೆಮಟ್ಟು ಬರ್ಪಮರ್ಕನೆವೆರಸು ಪೂಜಿಮಡುವುದೆನೆ ಸಮ್ಯಕ್ತ್ವರತ್ನಾಕರೆ ಯಿಂತೆಂದಳ್] [1] ॥ ೭೩೫

ಇವನುಂ ಕೈವಲ್ಯಶ್ರೀ
ಧವನಪ್ಪ ಜಿನೇಂದ್ರನಲ್ಲನೆಮ್ಮಾಗಮದೊಳ್ ।
ಭುವನೇಶ್ವರ ಜಿನನಾಥ
ರ್ವಿವರಿಪೊಡಿಪ್ಪತ್ತನಾಲ್ವರಮರಸ್ತುತ್ಯರ್ ॥ ೭೩೬

ಅವರುಂ ನಿಶ್ಶ್ರೇಯಸಶ್ರೀಯೊಳ್ ಕೂಡಿರ್ದ ಪರಮೇಷ್ಠಿಗಳಾಗಿ [ಪುದಱಿಂದೀತಂ ವರ್ಧಮಾನಸ್ವಾಮಿಯೆಂಬ ಮಾತುಂ ಘಟಿಯಿಸದೆಂಬುದುಂ ರೇವತೀಮಹಾದೇವಿಯ ಮಾತಿನಂದಕ್ಕೆ ವರುಣಮಹಾರಾಜಂ ವಿಸ್ಮಯಂಬಟ್ಟು ಮೆಲ್ಲಗಿಂತೆಂದಂ ॥ ೭೩೭

ಸರಸಿರುಹವದನೆ ನಿನ್ನಿಂ
ಮರುಳ್ಗಳೇಂ ಭಕ್ತಿವೆರಸು ಪರಿದೆಯ್ದಿ ಜಿನೇ ।

---

1 ಬಂದಿರ್ದಪಂ ಪೋಗಿ ಪೂಜಿಸಿಪಂದಿಸಿ ಖರ್ಪವರ್ಕನೆವೆರಸು ನಡೆಯಿಮೆನೆ ರೇವತೀಮಹಾದೇವಿ ನಕ್ಕು (ಗ)

ಶ್ವರನೆಂದೆಱಗುವ ನವಿಶ್ರಾ
ಪುರದೊಳಗಣಪಾಸತಕ್ಕರೆಲ್ಲರುಮಿಗಳ್ ॥ ೨೩೮

ಎಂಬುದುಮರಸಿ ಯಿಂತೆಂದಳ್] [1] ದೇವಾ ಪುಣಿಸೆಯ ಪೂವೆಲ್ಲಂ ಕಾಯುಪ್ಪವೇ, ನೆಲನನಗುಳ್ದರೆಲ್ಲಂ ನಿಧಾನಮಂ ಕಾಣ್ಬರೇ, ಕೈಕಾಲುಳ್ಳರೆಲ್ಲಂ ಚಕ್ರವರ್ತಿಗಳೇ, ಮರನಾದುವೆಲ್ಲಂ ಶ್ರೀಖಂಡಮೇ, ಮೊಲೆ ಮುಡಿಯುಳ್ಳರೆಲ್ಲಂ ಸ್ತ್ರೀಯರೇ, ಪಗಿನಾದುವೆಲ್ಲಂ ಕರ್ಪುರಮೇ, ಕೋಡುಳ್ಳವೆಲ್ಲಂ ಕರೆಪವೇ, ಗಿರಿಯಾದುವೆಲ್ಲಂ ಪೊನ್ನೇ, ಶಿಲೆಯಾದುವೆಲ್ಲಂ ವಜ್ರಮೇ, ಸಮುದ್ರವಾದುವೆಲ್ಲಂ ಪಾಲೇ, ಧಾನ್ಯಮಾದುವೆಲ್ಲಂ ಕಳವೆಯೇ, ನುಡಿಯುಳ್ಳವರೆಲ್ಲಂ ಮಂತ್ರಿಗಳೇ, ಬಂಟರಾದವರೆಲ್ಲಂ ನಾಯಕರೇ, ಕಾದುವರೆಲ್ಲಂ ವೀರರೇ, ಪಡೆವರೆಲ್ಲಂ ಸೂಳೆಯರೇ, ಪಾಡುವರೆಲ್ಲಂ ಗಾಂಧರ್ವರೇ, ಮೊಱೆವುವೆಲ್ಲಂ ತುಂಬಿಯೇ [ನೀರಾಮವೆಲ್ಲಂ ರುಚಿಯೇ] ಪುಷ್ಪವಾದುವೆಲ್ಲಂ ಕಮ್ಮಿದುವೇ, ಸಜ್ಜನರಾದರೆಲ್ಲಂ ಪತಿವ್ರತೆಯರೇ, ಶ್ರಾವಕರಾದವರೆಲ್ಲಂ ಸಮ್ಯಗ್ದೃಷ್ಟಿಗಳೇ, ಮೂಢತ್ರಯಮಿಲ್ಲದರ್ ಜೈನರೇ, ಎನೆ ಮೂಢತ್ರಯಂಗಳಾವುವೆಂ ಪೇೞಿಮೆನೆಯುರಸಿಯಿಂತೆಂದಳ್ :— ೨೩೯

ಅನಲನನರ್ಕನಂ ಶಶಿಯನಿಂದ್ರನನಂತಕನಂ ಮರಂಗಳಂ
ವನಧಿಯನುರ್ವಿಯುಂ ಮಡಕೆಯುಂ ತೊಱೆಯುಂ ಕೆಱೆಯುಂ ಗೃಹಂಗಳಂ
ಜನನಿಯನಯ್ಯನಂ ಪಶುವನೆತ್ತುಗಳಂ ಕುಲದೈವಮೆಂದು ಮ
ಲ್ಲನೆ ಪೊಡೆಮಟ್ಟು ಪೂಜಿಸುವ ಗಾಂಪನೆ ದೈವವಿಮೂಢನುರ್ವಿಯೊಳ್ ॥
ಧುರದೊಳ್ ಕಮ್ಮರಿಯೊಳ್ ಮದೋರ್ವಿರುಹದೊಳ್ ಸಪ್ತಾರ್ಚಿಯೊಳ್ ನೀರ್ಗಳೊಳ್
ಭರದಿಂ ದೇಹಮನಿಕ್ಕಿಯುಜ್ಜುಗದೆ ಮಿಥ್ಯಾತೀರ್ಥಮಂ ಮಿಂದುಮಾ
ದರದಿಂ ದುಷ್ಟರ ಪೇೞ್ಕೆಯೊಳ್ ನೆಗೞ್ದುಮತ್ಯಾನಂದದಿಂದೆಯ್ದುವೆಂ
ಸುರಲೋಕಂಗಳನೆಂಬ ಗಾವಿಲನವಂ ತಾಂ ಲೋಕಮೂಢಂ ನೃಪಾ ॥

---

[1] ಪ್ಪುರನೆ ಮಹೀವಲ್ಲಭಾ ನಕ್ಕು ಪುರದೊಳಗಣ ಶ್ರಾವಕರುಂ ಋಷಿಯರುಂ ಜಿನೇಶ್ವರನೆಂದು ಪೋಗಿ ಪೊಡೆಮಡುತ್ತಿರ್ದಪರವರ್ನಿನ್ನಿಂ ಮರುಳ್ಗಳ ಪೇಳನೆ ರೇವತಿಮಹಾದೇವಿ (ಗ) [3] ತನುಗುಣಲಿಕ್ಕಿದೊಳಿಣಿಸ ಹೊತ್ತುಗಳಂ (ಬ. ಕ.)

[ಧರ್ಮೋಪದೇಶಮಿಲ್ಲದೆ
ಕರ್ಮಮನುಪಶಮಿಪ ಚರಿತಮಿಲ್ಲದೆ ದುಃಖ।
ಕ್ಕಾರ್ಮಮೆನಿಸಿರ್ದ ಲೌಕಿಕ
ಧರ್ಮದೊಳಸಗುವನೆ ಸಮಯಮೂಢಂ ನೃಪತೀ] ॥ ೨೪೨

ವೆಱವಿಡಾವುದೆಂದು ದೈವಮ
ನೆರೆವವನುಂ ದೈವಮಿಗಳೀವುದು ಪುಸಿಯೇ।
ಪರಮಾರ್ಥಮೆಂದು ನಂಬುವ
ನರನುಂ ಭೂಪಾಲ ಸಮಯಮೂಢನೆನಿಕ್ಕುಂ ॥ ೨೪೩

[ಜಗದೊಳ್ ಮಹೇಂದ್ರಜಾಲಾ
ದಿಗಳಂ ತೋರ್ಪವರನಿವರೆ ದೇವರ್ದಿಂಡರ್।
ಬಗೆವೊಡೆ ಕೇಳನ್ನುತೆ ನಂ
ಬುಗೆಯಿಂದೆಱಗುವನೆ ಸಮಯಮೂಢಂ ನೃಪತೀ ॥ ೨೪೪

ಪುರುಷನಂ ವಧುವಾಗೆ ತದ್ವಧುವಂ ಮನೋಹರರುಪ್ಪಿನಂ
ಪುರುಷನಾಗೆ ವಿನೋದದಿಂ ಪಗಲಂ ದಿಟಕ್ಕಿರುಳಾಗೆ ತಾ
ನಿರುಳನುಂ ಪಗಲಾಗೆ ಮಾಡುವ ದೇವರುಳ್ಳೊಡೆ ಧಾರಿಣೀ
ಶ್ವರನ ಮುಂಗಡೆ ತೋಱಲಾಗದೆ [1] ತೋರ್ಪನೆಂಬವನುರ್ವಿ
ಯೊಳ್ [2] ॥ ೨೪೫

ಎಂದು ಧರ್ಮಶ್ರವಣಂಗೆಯ್ಯುತಿರ್ಪನಮತ್ತಲ್ ಕೃತಕಜಿನಂ ರೇವತೀಮಹಾದೇವಿಯ ಬರವಂ ಕಾಣದೆ ತನ್ನೊಳಿಂತೆಂದಂ ॥ ೨೪೬

ಸ್ಥಿರಮಪ್ಪೀಗುಣಮಾಸರ
ಸಿರುಹಾಕ್ಷಿಯ ಮೆಯ್ಯೊಳಿಲ್ಲದಿರೆ ಮುನಿಗುಪ್ತೇ।

1 ಶ್ವರನುತೋಱಗಲಾಗದೆ (ಬ. ಕ.) 2 ಪುರುಷರನೆಯ್ದಿ ಕಾಮಿನಿಯಾಗಿ ಸುಕಾಮಿನಿಯುರ್ಕ್ಕಳಂ। ಪುರುಷರ ಮಾಳ್ಪಿಡಂ ಪಗಲನಿ ನಿರುಳಮಾಗಿರೆ ರಾತ್ರಿಯುಂ ಸವಿ। ಸ್ಥಿರಮುಮಾಗೆ ಮಾಳ್ಪಮರರ್ದಿವಮಾಡಿದರಿಂಗೆ ಪುಣ್ಯದಿಂ ಸಿಂಬರೆ। ಪಾಪದಿಂಬಡತನಂ ಬರೆ ಮಾಡುವರಾರ್ ಧರಿತ್ರಿಯೊಳ್ ॥ ಇದನಱಿದು (ಗ)

ಶ್ವರರೀಪರಕೆಯನೇಂ ವಿ
ಸ್ತರದಿಂ ಪೇೞ್ದಿಟ್ಟುವರ್ಮಹೋತ್ಸವದಿಂದಂ ॥ ೭೪೭

ಎಂದು ಕೃತಕಜಿನರೂಪನುಡುಗಿಸಿ ನೆರೆದ ನೆರವಿ ನೋಡೆನೋಡೆ ಪೂರ್ವಸ್ವರೂಪಮಂ ಕೈಕೊಂಡು ರೇವತೀಮಹಾದೇವಿಯಲ್ಲಿಗೆ ಪಂದು ನಿಂದಿರ್ದ ಪಲತೆಱದಿಂ ಪೊಗೞ್ದು ಪೆಱಗಾದ ಸಂಬಂಧಮೆಲ್ಲಮಂ ತಿಳಿಯ ಪೇೞ್ದು ಮುನಿಗುಪ್ತಭಟ್ಟಾರಕರ ಪರಕೆಯಂ ಪೇೞ್ದು ತತ್ಪುರದೊಳಾದ ಜಿನಾಲಯಂಗಳಂ ಬಂದಿಸಿ ದಕ್ಷಿಣಮಧುರೆಗೆ ಬ್ರಹ್ಮಚಾರಿ] [1] ಪೋದ ನಿತ್ತಲ್ ॥ ೭೪೮

ಶ್ರಾವಕರೆಲ್ಲರುಮಿರ್ದಂ
ತಾವರಮುನಿ ನೋಡ ಕೂರ್ತು ಪರಕೆಯನಿಂತೀ ।
ದೇವಿಗೆ ಪೇೞ್ದಿಟ್ಟದನೆನ
ಲೀವಸಿತಾರತ್ನೆಯಂತು ನೋಂತವರೊಳರೇ ॥ ೭೪೯

[ಪರಮಗುಣನಿಳಯೆ ಜಿನಮತ
ಸರೋಜಿನೀರಾಜಹಂಸೆ ಶೀಲಾಂಬುಧಿ ಸ ।
ಚ್ಚರಿತವಿಭೂಷಣೆ ಭವ್ಯೋ
ತ್ಕರಪೂಜಿತೆ ನಿಷ್ಕಲಂಕನಿರ್ಮಳ ಜಗದೊಳ್ ॥ ೭೫೦

ಎಂದು ಪುರಜನಮುಂ ಪರಿಜನಮುಂ ಜಗಜ್ಜನಮುಂ ಪೊಗೞುತ್ತುಂ ಪೊಡೆಮಡುತ್ತುಮಿರೆ ವರುಣಮಹಾರಾಜಂ ಸದ್ಧರ್ಮಮಂ ಲೇಸಾಗಿ ನಂಬಿ ಮೂಢತ್ರಯದಿಂ ಪಿಂಗಿ ತನ್ನ ಪಿರಿಯ ಮಗನಪ್ಪ ಶಿವಕೀರ್ತಿಗೆ ಪಟ್ಟಮಂ ಕಟ್ಟಿ ರಾಜ್ಯಮಂ ಕೊಟ್ಟರಿಂಜಯಭಟ್ಟಾರಕರ ಪಾದಮೂಲದೊಳ್ ದೀಕ್ಷೆಯಂ ಕೈಕೊಂಡಂ. ರೇವತೀಮಹಾದೇವಿ ದಾನಪೂಜೆ ಶೀಲೋಪವಾಸಮೆಂಬಿವಱೊಳರ್ತಿ ತನಗುಂಟಪ್ಪುದಱಿಂ ಪಲವುಕಾಲಂ॥

1 ಎಂದು ತತ್ವಮಂ ಪೇಳುತ್ತಿರ್ಪನ್ನೆಗಂ ಕೃತಕಜಿನಂ ರೇವತೀಮಹಾದೇವಿಯಲ್ಲಿಗೆ ನೆರದ ನೆರವಿ ನೋಡೆ ವಿಗುರ್ವಣೆಯನುಡುಗಿ ಮುನ್ನಿನ ರೂಪಂ ಕೈಕೊಂಡುಬಂದು ತತ್ಪ್ರಪಂಚಮೆಲ್ಲಮಂ ಪೇಳ್ದು ನಾನಾವಿಧದಿಂ ಪೊಗಳ್ದು ಮುನಿಗುಪ್ತಭಟ್ಟಾರಕರ ಪರಕೆಯಂ ಪೇಳ್ದು (ಗ)

ಜಿನಪೂಜೆಗಳಂ ಕಣ್ಣಾಣ
ವಿನೆಗಂ ಮುನಿಗನ್ನದಾನಮಂ ಮನಮಾರಲ್ ।
ವನಜಾಸ್ಯೆ ಮಾಡಿ ಧರೆ ಜೇ
ಯೆನೆ ಕಡೆಯೊಳ್ತಾಳಿದು ಸಕಲಸಾಮ್ರಾಜ್ಯಮುಮಂ॥][1] ೨೪೨

ಮುನಿಗುಪ್ತಭಟ್ಟಾರಕರೆ ಗುರುಗಳಾಗೆ ಸುವ್ರತಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು ಏಕಾದಶಾಂಗಧಾರಿಯಾಗಿ ಪಲವುಂಕಾಲಂ ತಪದೊಳ್ ಚರಿಯಿಸಿ ದಕ್ಷಿಣಮಧುರೆಯ ಜಿನಭವನಮೆಲ್ಲಮಂ ಬಂದಿಸುವೆನೆಂಬರ್ತಿಯಿಂದುತ್ತರಮಧುರೆಯಿಂ ಪೊಱಮಟ್ಟು ಅಜ್ಜಿಕಾಸಮುದಾಯಂಬೆರಸು ಬರುತ್ತುಂ ಕರಹಾಟನಗರದೊಳ್ ॥ ೨೪೩

ತೊಟ್ಟನೆ ಕೊಳಲಾಲಸ್ಯಂ
ಪುಟ್ಟೆ ಮಹಾರುಜೆ ಶರೀರವೇದನೆಗಿನಿಸಂ ।
ಕೆಟ್ಟಂ ಪೋಗೆನ್ನದೆ ಬಾ
ಯ್ವಿಟ್ಟರದೆ ಶರೀರಮೋಹಮಿಲ್ಲದೆ ಮನದೊಳ್ ॥ ೨೪೪

[ಶುಭಭಾವನೆವೆರಸು] ಸಂನ್ಯಸನಂ [ಗೆಯ್ದು ಸಮಾಧಿ] ವಿಧಿಯಿಂ ಮುಡಿಪಿ ಪದಿನಾಱನೆಯ [ಅಚ್ಯುತ] ಕಲ್ಪದೊಳ್ ಇಪ್ಪತ್ತೆರಡು ಸಾಗರೋಪಮಕಾಲ[ಮಾಯುಷ್ಯ]ಕೊಡೆಯಂ ಮಹರ್ಧಿಕದೇವನಾಗಿ ಪುಟ್ಟಿದಳ್ ॥ ೨೪೫

ರೇವತಿಗಂತಿಯರುತ್ತಮ
ಭಾವನೆಯಿಂ ಮುಡಿಪಿದೆಡೆ ಮಹೀವಳಯಂ ಸ ।

---

1 ಎಂದರಸಂ ಪೊಗಳ್ದು ಅದುವೆ ನಿರ್ವೇಗಮಾಗಿ ತ್ರಿಮೂಢದಿಂ ಪಿಂಗಿ ತನ್ನ ಪಿರಿಯ ಮಗನಪ್ಪ ಶಿವಕೀರ್ತಿಗೆ ರಾಜ್ಯಮಂ ಕೊಟ್ಟು ಅರಿಂಜಯಭಟ್ಟಾರಕರಲ್ಲಿ ಸಾಸಿರ್ವರ್ ಮಕುಟಬದ್ಧರ್ ವೆರಸು ದೀಕ್ಷೆಯಂ ಕೈಕೊಂಡಂ. ರೇವತಿಮಹಾದೇವಿಯುಂ (ಗ)

2 ಪಲವುಂ ಕಾಲಂ ತಪಂಗೆಯ್ದು ದಕ್ಷಿಣಮಧುರೆಯ ಚೈತ್ಯಾಲಯಂಗಳಂ ವಂದಿಸಿ ಪೋಗುತ್ತುಂ ಕರಹಾಟವಿಷಯದೊಳ್ (ಗ)

ದ್ಭಾವದ ನೆಲೆ ಸಲೆ ಬಣ್ಣಿಸೆ [1]
ರೇವತಿಸತ್ತೀರ್ಥವೆಂಬುದಾದುದು ಪೆಸರಿಂ ॥ ೨೫೬

ಅದುಕಾರಣದಿಂ ಸೌಖ್ಯಾ
ಭ್ಯುದಯಕ್ಕಾಟಿಸುವೆನೆಂಬ ಮನುಜಂ [2] ಮನದೊಳ್ ।
ಬೆದೆಬೆದೆಬೇಯದೆ ತಾಂ ಬಿಡು
ವುದು ದುಷ್ಕೃತಬಂಧಮಪ್ಪ [3] ಮೂಢತ್ರಯಮಂ ॥ ೨೫೭

ಎಂದು [ಪೇೞ್ದುದಂ ರೇವತೀಮಹಾದೇವಿಯ] [4] ಕಥೆಯಂ ಲೇಸಾಗಿ ಕೇಳ್ದು ॥ ೨೫೮

ನೃಪವಂದ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ಮಳಂ ಕಿಲ್ಬಿಷೈಕ
ದ್ವಿಪಪಂಚಾಸ್ಯಂ ಮನೋಜೋತ್ಪಲರವಿ ಸುಜನಾಂಭೋಧಿಶೀತಾಂಶು ವಾರಾ
ಶಿಪರೀತಖ್ಯಾತನುದ್ಯದ್ಗುಣನಿಧಿಯೆಸೆದಂಖ್ಯಾತತ್ರೈವಿದ್ಯಚಕ್ರಾ [5]
ಧಿಪಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ ॥

ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧು
ಕರನಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನಚತುರ್ಥಾಂಗವ್ಯಾವರ್ಣನಂ
ಪಂಚಮಾಶ್ವಾಸಂ.

---

1 ಮುಡಿಬೀದಿಮಹಿತಳದೊಳ್ ಸದ್ಭಾವದೆ ಸಲೆ ನಿಲೆ ಬಣ್ಣಿಸಿ (ಗ)
2 ಆಟಿಸುತ್ತುಮಿರ್ಪ ಭವ್ಯರ್ (ಗ)
3 ಕಿಲ್ಬಿಷಬಂಧಮೆನಿಪ (ಗ)
4 ಅಮೂಢದೃಷ್ಟಿತ್ವದ (ಗ)
5 ಗುಣಗಣನಿಧಿತ್ರೈವಿದ್ಯ (ಕ. ಬ.)

## ಷ ಷ್ಠಾ ಶ್ವಾ ಸಂ.

ಶ್ರೀವನಿತೆಗೆ ನಿರ್ವಾಣ
ಶ್ರೀವನಿತೆಗೆ ತೊಡವವಮೂಢದೃಷ್ಟಿತ್ವಂ ಸ।
ದ್ಭಾವದೊಳಂದಧಿಕಗುಣಂ
ಭಾವಿಸಿದಂ ಸುಕವಿನಿಕರಪಿಕಮಾಕಂದಂ ॥ ೧

[ಅಂತವಮೂಢದೃಷ್ಟಿತ್ವದೊಳಾದ ಕಥೆಯಂ ತಿಳಿದು ಮತ್ತಂ ॥೨

ಭೂವಿಖ್ಯಾತಂ ಗಣಧರ
ದೇವರ ಪಾದದ್ವಯಕ್ಕೆ ಪೊಡೆವಟ್ಟು ವಿಚ।
ಶ್ರೀ ಶ್ರೀವನಿತೆಗೆ ನಿರ್ವಾಣ
ಶ್ರೀವನಿತೆಗೆ ತೊಡವಿದೆನಿಸುವುಪಗೂಹನವಂ ॥ ೩

[ಎನಗಱಿವಂತಾಗೆ ನಿಮ್ಮಡಿ ಕಾರುಣ್ಯದಿಂ ಬೆಸಸುವುದೆಂಬುದುಂ ನಿರ್ವಾಣಲಕ್ಷ್ಮಿಯನೊಲಿಸುವುದಕ್ಕಿದು ಮೋಹನಶರವೆನಿಸುವುಪಗೂಹನದ ಕಥೆಯನಿಂತೆಂದು ಪೇೞ್ದರ್] [1] ॥ ೪

ಚಕ್ರವರ್ತಿಯಂತೆ ಮಧುಕರಂಗಳಂತೆ [2] ವಶ್ಯಮಂತ್ರದಂತೆ ಪರ್ಯಾಪ್ತಿಸಮೇತನಂತೆ ಋತುವಿನಂತೆ ಉತ್ಸರ್ಪಿಣಿಯಂತೆ ಸಿದ್ಧಾಂತದಂತೆ [3] ಸಂಜ್ಞಿಜೀವದಂತೆ ಪೊತ್ತಗೆಯಂತೆ ಆವಶ್ಯಕದಂತೆ [4] ದರ್ಶನ

---

1 ಅಂತವಮೂಢದೃಷ್ಟಿತ್ವದ ಕಥೆಯಂ ಕೇಳ್ದು ಮುಂದಣುಪಗೂಹನದ ಕಥೆಯಂ ಬೆಸಸಿಮೆಂಬುದುಮಿಂತೆಂದು ಪೇಳ್ದರ್ (ಗ)

2 ಷಟ್ಪದರಂತೆ ಷಟ್ಪದದಂತೆ (ಗ)    3 ಕಾರಕದಂತೆ (ಗ)

4 ನಯದಂತೆ (ಗ)

ಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢ ದೃಷ್ಟಿತ್ವಮುಮುಪಗೂಹನಮುಮೆಂಬಾಱಱೊಳಂ ಸಂಪೂರ್ಣನಾಗಿ ಶೋಭಿಸುವುದು ‖ ೫

ಪೆಱಪೆಱವೆಸದಾಳಾಪ
ಕ್ಕೆಱಗದೆ ಸಮ್ಯಕ್ತ್ವಮೆಂಬ ಖಡ್ಗಕ್ಕಿದು ಸಂ ।
ದೊಱೆಯೆನಿಪುಪಗೂಹನದೊಳ್
ಮೆಱೆವುದು ಸದ್ಗುಣಮೆನಱಿವಿನೊಳ್ ನೆರೆದ ನರರ್ ‖ ೬

ಇನ್ನದಱ ಮಹಿಮಾಸ್ಪದಮೆಂತಪ್ಪುದೆಂದೊಡೆ ‖ ೭

[ಕರಮೊಪ್ಪುವುದತಿಶಯದಿಂ
ಧರಿತ್ರಿಯೊಳ್ ಗೊಲ್ಲವಿಷಯಮೆಂಬುದು ವಿಷಯಂ ।
ಕರಮೊಪ್ಪುವುದಾವಿಷಯದೊ
ಳುರುಮುದದಿಂ ಕಾಮಲಿಪ್ತಿಯೆಂಬುದು ನಗರಂ ‖ ೮

ಅದನಾಳ್ವಂ ಮನೋಹರನೆಂಬರಸನಾತನ ರಾಜಶ್ರೇಷ್ಠಿ ‖ ೯

ಆಪುರದೊಳಗಖಿಲಗುಣಗ
ಣೋಪೇತಂ ವೈಶ್ಯವಂಶಗಗನಾರ್ಕಂ ಭೂ[1] ।
ವ್ಯಾಪಿತಯಶಂ ಮನೋಹರ
ರೂಪಂ ಜಿನಭಕ್ತನೆಂಬನನುಪಮನಿರ್ಪಂ ‖ ೧೦

ಆತನ ಸಿರಿಯಂ ಪೇೞ್ವೊಡೆ
ಭೂತಳದೊಳ್ ರೂಢಿವೆತ್ತ ಧನದಂಗಂ ಪೆ ।
ರ್ಮಾತಿನ ದೇವೇಂದ್ರಂಗಂ
ಮಾತೇಂ ಬಗೆವಂದು ನಾಲ್ವೆರಲ್ ತಾಂ ಪಿರಿಯಂ ‖ ೧೧

ಸುರರಾಜನೆ ದೊರೆ ಭೋಗ
ಕ್ಕೊರೆಯಲ್ಲಂ ಜೈನಭಕ್ತಿಯೊಳ್ ಶ್ರೇಯಾಂಸಂ ।

1 ವೈಶಾನ್ವಯಾಂಬರಾರ್ಕಂಭುವನ (ಬ. ಕ.)

ದೊರೆ ಜಗದೊಳ್ ಪೆಱರಾರುಂ
ದೊರೆಯಲ್ಲರ್ದಾನದೆಡೆಗೆ ವೈಶ್ಯೋತ್ತಮನೊಳ್ ॥ ೧೨

ಎನಿಸಿ ನೆಗೞ್ತೆವೆತ್ತ ಜಿನೇಂದ್ರಭಕ್ತಸೆಟ್ಟಿ ಸುಖಸಂಕಥಾವಿನೋದದಿಂದಿರ್ಪುದುಂ ಅತ್ತ ಮಗಧವಿಷಯದ ಪಾಟಲಿಪುತ್ರಮೆಂಬ ಪೊೞಲನಾಳ್ವಂ ವೀರಧ್ವಜನೆಂಬರಸನಾತನರಸಿ ಸುಸೀಮೆಯೆಂಬಳಾಯಿರ್ವರ್ಗಂ ಪ್ರಿಯನಂದನಂ ವೀರಕುಮಾರನೆಂಬನಾತಂ ದುರ್ಜನಪ್ರಿಯನುಂ ವಿಟಜನಾನಂದನುಂ ತಸ್ಕರವಿನೋದನುಂ ದುಷ್ಟಪ್ರಸಂಗನುಮಾಗಿ ಪಲವುದಿವಸಂ ಸಮಸ್ತದುರಾಚಾರಜನಪರಿವೃತನಾಗಿ ಪೊಱವೊೞಲೊಳ್ ಕುಳ್ಳಿರ್ದು ಕಳವಿನೊಳಾದ ಮಾತುಗಳಂ ನುಡಿಯಿಸಿ ಕೇಳುತ್ತಮಿರ್ಪುದುಂ ಅಲ್ಲಿ ಚೋರಪ್ರಧಾನನೆಂಬನೊರ್ವನಿಂತೆಂದಂ][1] ॥ ೧೩

ಚಪಳನಿವಂ ಕಡುಗೞಿಪಂ
ವಿಪರೀತಮನೆನ್ನ ಮುಂದೆ ನುಡಿದಪನೆಂದು ।
ರ್ನೃಪ ಮುನಿಯುವೆಡ ಕೇಳ್ಬ
ನ್ನೃಪಮಂ ನೀನೊಂದೆಚಿತ್ತದಿಂದಂ ನೃಪತೀ ॥ ೧೪

ಎಂದು ವೀರಕುಮಾರಂಗಭಿಮುಖನಾಗಿ ನಿಂದು, ದೇವಾ ನಾಂ ಪುಗದ ದೇಶಮುಂ ಕಳದ ವಸ್ತುಗಳುಮಿಲ್ಲ; ಗೌಲ್ಲವಿಷಯದೊಳ್ ತಾಮ್ರಲಿಪ್ತಿಯೆಂಬ ಪುರದೊಳೊರ್ವ ಜಿನೇಂದ್ರಭಕ್ತನೆಂಬ ಪರದನ ದೇಹಾರದ ದೇವರ ಮುಕ್ಕೊಡೆಯೊಳೊಂದು ವೈಡೂರ್ಯಮಾಣಿಕಂ ಕೀಲಿಸಿರ್ದುದಾರತ್ನಮುಮನರ್ಘ್ಯರತ್ನಮೆನಿಪ್ಪುದದಕ್ಕೆ ಮೂಱುಂಲೋಕಂ ಬೆಲೆಯಲ್ಲೀ ಲೋಕದೊಳಪೂರ್ವಮಂ ಕಂಡೆನೆಂಬುದುಂ [ವೀರಕುಮಾರನಾ

---

1 ಗೌಲ್ಲವಿಷಯದೊಳ್ ತಾಮ್ರಲಿಪ್ತಿಯೆಂಬುದು ಪುರಮದನಾಳ್ವಂ ಮನೋಹರನೆಂಬರಸನಾತನ ರಾಜಶ್ರೇಷ್ಠಿ ಜಿನೇಂದ್ರಭಕ್ತಸೆಟ್ಟಿಯುಂ ಸುಖಸಂಕಥಾವಿನೋದದಿಂದಿರ್ಪುದುಮತ್ತಲ್ ಮಗಧವಿಷಯದ ಪಾಟಳಿಪುರಮೆಂಬ ಪುರಮದನಾಳ್ವಂ ವೀರಕುಮಾರನೆಂಬರಸನೊಂದುದಿವಸಂ ತಸ್ಕರರ ಗೋಷ್ಠಿಯೊಳಿರ್ದು ಕಳ್ಳರಂ ಮಾತಾಡಿಸಿ ಕೇಳುತ್ತುಮಿರ್ಪುದುಮಲ್ಲಿ ಕಳ್ಳರಿಗೆ ಕಳ್ಳನೆಂಬನೆರ್ದು ಬಿನ್ನಪಮೆಂದಿಂತೆಂದಂ (ಗ)

ತನ ಮಾತಿಂಗೆ ವಿಸ್ಮಯಂಬಟ್ಟು ತನಗಾರತ್ನದ ಮೇಲೆ ಚಿತ್ತಮಾಗೆ ಚೋರಪ್ರಧಾನಂಗಿಂತೆಂದಂ ॥ ೧೫

ಸಂದ ಕಳ್ಳರೊಳೆಲ್ಲ ನೀನೆ ಮಹಾವಿವೇಕಿಯು ಲೋಕದೊಳ್
ಕುಂದದುರ್ವರೆಯೆಲ್ಲಮಂ ಕಡುಧೂರ್ತರಂ ಕವರ್ವಂದದಿಂ
ಸಂದ ವಸ್ತುಗಳೆಲ್ಲಮಂ ನೆಱೆ ನೀನೆ ಸಾಧಿಸಿಕೊಂಡೆಯಿ
ನ್ನೆಂದೊಡಾವರರತ್ನಮಂ ಗಡ ಸಾಧಿಸಲ್ಕರಿದಾದುದೇ ॥ ೧೬

ಎಂಬುದುಂ ಚೋರಪ್ರಧಾನನಿಂತೆಂದಂ ॥ ೧೭

ಕನ್ನವೆನಿಕ್ಕುವೊಡವನೀ
ಶೋನ್ನತ ನೆಲಗಟ್ಟು ವಜ್ರಮಯಮೇಱುವರಾರ್ ।
ತನ್ನಣ್ಮಿಂದಂ ಪುಗುವೊಡೆ
ಪನ್ನೆರಡೆಡೆ ಕಾಪು ಪುಗುವವಂಗೆಂಟೆರ್ದೆಯೇ ॥ ೧೮

ಮತ್ತಮಾಪುರದೊಳಗೆ ಕೆಲವುದಿವಸಮಿರ್ದು ಕಾಪಿನವರಂ ವಂಚಿಸಿ ಪುಗುವೆನೆಂಬೊಡಮಣಮುಪಾಯಿದು ; ಜಿನೇಂದ್ರದತ್ತಸೆಟ್ಟಿಜಿನಾರ್ಚನವಿನೋದದೊಳಂ ಜಿನಸಮಯಮಹೋತ್ಸವದೊಳಂ ಜಿನಕಥಾಳಾಪದೊಳಂ ನೇಸರ್ಪಟ್ಟು ನೇಸಮೂಡುವಿನಮಲ್ಲಿಯೆ ನೆಲಸಿರ್ಪನನೆ ವೀರಕುಮಾರಂ ಬೆಱಗಾಗಿ ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳಂ ನುಸುಳ್ದುರ್ವರಿರ್ದೆಡೆಯೊಳೂರ್ವನಂ ಕಳ್ವಂತಪ್ಪ ಕಳ್ಳರ ಕಳ್ಳನಿವಂ ಮೊದಲಾಗೆ ಪುಗಲರಿದೆಂದಪನಿನ್ನಾ ಮಹಾರತ್ನಮಂ ಕಳ್ವಂತಪ್ಪ ಗಂಡರಾರೆಂದು ಚಿಂತಿಸಿ ನೆರೆದಿರ್ದ ಕಳ್ಳರುಮಂ ನೋಡಿ ಕುಮಾರನಿಂತೆಂದಂ ॥ ೧೯

ಆವಾವುಪಾಯದಿಂದೆನ
ಗಾವಸ್ತುವನದಟನಾಗಿ ಪೋಗುತ್ತುಂ ತಂ [1] ।

[1] ಪೋಗಿಬೇಗಂತಂ (ಬ. ಕ.)

ದೀವವೆನುಳ್ಳೊಡೆ ಕುಡುವೆಂ
ಭಾವಿಸದೆನ್ನರ್ಥರಾಜ್ಯಮಂ ನಿಶ್ಚಯದಿಂ ॥ ೨೦

ಎಂಬುದುಮಾಮಾತಿಂಗೆ ಸೂರ್ಪನೆಂಬ ಕಳ್ಳನೆರ್ದು ಕುಮಾರಂಗಭಿಮುಖನಾಗಿ ದೇವ ನಾನಾವಸ್ತುವಂ ತಂದಪೆನೆಂಬುದುಂ ಕುಮಾರಂ ಪೆರ್ಚಿ ಕರಮೊಳ್ಳಿತೆಂದು ಕರ್ಪೂರವೀಳೆಯುಮಂ ಕುಡುವುದುಂ ಪಿರಿದುಂ ಪೊಣ್ದು ವೀರಕುಮಾರನಂ ಬೀಳ್ಕೊಂಡು ತನ್ನ ಮನೆಗೆ ಬಂದು ರತ್ನಮಂ ಕಳ್ವ ಉಪಾಯುಮಂ ತನ್ನ ಮನದೊಳಗೆ ಭಾವಿಸಿನೋಡಿ॥೨೧

ಆದೊರೆಯ ಮಹಾಕಲಿಯುಂ
ಭೇದಿಸಲಣಮಾಅನೆಂದೊಡಾರತ್ನಮನಾರ್ ।
ಭೇದಿಸುವರೆಂದು ತಸ್ಕರ [1]
ರಾದಿಯ ಕಳ್ಳಂಗೆ ಚಿಂತೆ ಪುಟ್ಟಿದುದಾಗಳ್ ॥ ೨೨

ಪಱಿಯಾಳ್ತನದಱಗಂಡಿಂ
ದಱಿಯದೆ ಮೆಯ್ವೆರ್ಚಿ ಪೋಗಿ ಪರದನ ಮನೆಯಂ ।
ತಱುವಲಿತನದಿಂ ಪೊಕ್ಕೊಡೆ
ಕುಱಿ ಸಾವಂತಲ್ಲಿ ಸಾವು ನಿಶ್ಚಯಮಕ್ಕುಂ ॥ ೨೩

ಭಾವಕನಿಧಿ ಜಿನಭಕ್ತಂ
ಶ್ರಾವಕನಱಿವಂದು ಕೊಲ್ವನಲ್ಲಂ ಪೆಱರಿ ।
ನ್ನಾವಿಭುವನಱಿಯಲಾಱದೆ [2]
ತಾವೆದಯಂ ಕೊಲ್ವರಲ್ಲಿ ಸಂದೆಯಮುಂಟೇ ॥ ೨೪

ತಾಂ ಕನ್ನಮಿಕ್ಕಿ ಧನಮಂ
ಭ್ರಾಂತಿಂದಂ ಕಳ್ವನೆಂಬನುಂ ಕಳ್ಳನೆ ಕೇಳ್ ।

---

1 ಮರಾರೊಮಿಕ್ಕುವರ್ (ಬ. ಕ.)

2 ಶ್ರಾವಕನಱಿದಂದು ಕೊಲುವನಲ್ಲದೆ ಪೆಱದಿಂನಾವಿಭುವನಱಿಯಲೀಯದೆ (ಬ. ಕ.)

ಎಂತುಂ ನೋವುಂ ಸಾವುಂ
ಚಿಂತೆಯುಮೆಣಮಾಗದಂತು ಕಳ್ವನೆ ಕಳ್ಳಂ ॥ ೨೫

ಅದುಕಾರಣದಿಂದಜುಚಟ್ಟಂ ತಲೆ ಬುಗುಂಟುವ್ರೋದುದೆಂಬ ನಾಣ್ಣುಡಿಯುಂತಿಜುಬಂಟಂ ಪೋಗಿ ಪೊಕ್ಕನಪ್ಪೊಡೆ ಕಾಪಿನವರ ಕಯ್ಯ ಸಾವು ನಿಶ್ಚಯಂ ಸಮನಿಸುಗುಮುತ್ಸುಕತನದಿಂ ಮೂರ್ಖನಾಗಿ ಪುಗುವುದು ಬುದ್ಧಿಯಲ್ಲದು, ಕೆಲವು ವರುಷಂ ತಡೆದೊಡಂ ಕಡೆಗಲ್ಲಿಗುಪಾಯಮಂ ಲೇಸಾಗಿ ಬಲ್ಲೆನಾತನೆರಡಿಲ್ಲದ ಶ್ರಾವಕಂ ಜಿನಧರ್ಮದೊಳ್ ಸ್ಥಿರಚಿತ್ತಂ ಋಷಿಯರ ಮೇಲೆ ಮಹಾಪ್ರೀತನದಱಿಂದೆ ಮಾಯಾ ಋಷಿಯ ರೂಪಂ ಕೈಕೊಂಡುಗ್ರೋಗ್ರತಪದೊಳನ್ನಂ ಲೋಕದೊಳ್ ಪ್ರಸಿದ್ಧನಂ ಮಾಡಿಕೊಂಡು ಕಾಮಲಿಪ್ತಿನಗರಮನೆಯ್ದಿ ಜಿನೇಂದ್ರಭಕ್ತ ಸೆಟ್ಟಿಯ ಮನೆಯುಂ ಪೊಕ್ಕು ಮೆಲ್ಲನೆ ಮೇಲ್ಪಡಿಸಿ ರತ್ನಮನೆನ್ನ ಕಯ್ಗೆ ಮಾಡುವೆನೆಂಬ ಕಜ್ಜಮನೆತ್ತಿಕೊಂಡು ತನ್ನ ಪೆಂಡಿರುಮಂ ಪುತ್ರರುಮಂ ಬಂಧುಗಳುಮಂ ಕರೆದಿಂತೆಂದಂ ॥ ೨೬

ಪಿರಿದಪ್ಪ ಬೆಸನನೆನಗಿಂ
ದರಸಂ ಕಡುಗೂರ್ಮೆವೆತ್ತು ಬೆಸಸಿದನಾನುಂ ।
ಭರದಿಂದಂತಾಬೆಸನಂ
ಕರಮಲ್ಲದೆ ಪೂಣ್ದು ವೀರದಿಂ ಕೈಕೊಂಡೆಂ ॥ ೨೭

ಅದುವುಂ ಸಾಮಾನ್ಯದ ಬೆಸನಲ್ಲದಾಬೆಸನೆನ್ನ ಪುಣ್ಯೋದಯದಿಂ ದೊರೆಕೊಂಡುದಕ್ಕುಮಪ್ಪೊಡೆ ವೀರಕುಮಾರನರ್ಧರಾಜ್ಯಮಂ ಮತ್ತೆನಿಸದೆ ಕೈಸಾರ್ಗುಮದುಕಾರಣದಿಂ ಉಪಾಯದೊಳಮಾಬೆಸನಂ ಸಾಧಿಸಿಕೊಂಡಲ್ಲದೆ ಬಾರೆನೆನ್ನ ದೆಸೆಗಂಜವೇಡ; ನೀವೆಲ್ಲರೆನ್ನಬರ್ಪಿನೆಗಂ ಬುದ್ಧಿವಂತರಾಗಿರ್ಪುದೆಂದಪ್ಪೈಸಿ ತತ್ಪುರದಿಂ ಪೊಱಮಟ್ಟು ಪೂರ್ವದೇಶಮಂ ಪೊಕ್ಕೊಂದೂರೊಳ್ ಒಂದು ಬಸದಿಯಂ ಸಾರ್ದು ಋಷಿಯರ ಮಾರ್ಗಮಂ ಕಲಿಯಲೆಂದು ಕೃತಕವೈರಾಗ್ಯದಿಂ ಸಂಸಾರಕ್ಕೆ ಪೇಸುವರಂತೆಲ್ಲಾ ಋಷಿಯರ್ಗಂ ಚಾಟುಕಾಱಕವಿನಯದಿಂ ಪೊಡೆಮಡುವುದುಂ ಮುನಿವರರಿಂತೆಂದರ್ ॥ ೨೮

ಎಲ್ಲಿಂದಂ ಬಂದಿರ್ಪರ್
ನ್ನೆಲ್ಲಿರ್ಪರ್ನಿಮ್ಮ ದೇಶವಾವುದು ನೀಮಿ |
ನ್ನೆಲ್ಲಿಗೆ ಪೋದಪಿರೆನೆ ತಳು
ವಿಲ್ಲದೆ ಮುನಿಸಂಕುಲಕ್ಕೆ ತಸ್ಕರನೆಂದಂ ॥ ೨೯

ಪರದೇಸಿಯೆ ನಮ್ಮವರೆ
ಲ್ಲರುಮಂ ಮನವಾರೆ ತೊಱೆದು ತಪಮಂ ಕೈಕೊಂ|
ಡರಪರಿಸದೆ ನೆಗೞ್ದಘಮಂ
ಪರಿಯಿಪೆನೆಂಬರ್ತಿಯಿಂದಮಿಲ್ಲಿಗೆ ವಂದೆಂ ॥ ೩೦

ಒಡವೆಯು ನಂಟರ ಮಕ್ಕಳ್
ಕಡುಗೂರ್ಪಂಗನೆಯು ತಾಯ ತಂದೆಯು ಕೂರ್ತಾಂ |
ನಡಪಿದರ್ ಬಂಟನೆಂದೋ
ಗಡಿಸದೆ ಮೋಹಾಗ್ನಿಯಿಂದಮೞಿವುದು ಜೀವಂ ॥ ೩೧

ಸಂಸಾರಂ ಶಾಶ್ವತಮೆ
ಲ್ಲಂ ಸೆಡೆಯದೆ ತಪದೊಳಾದ ಕಡುಚೆಲ್ವಿಂದಂ |
ತಾಂ ಸಂದಘಮಂ ಹರಿಸಿ ದಿ
ಟಂ ಸುರಗತಿಪಡೆದು ಭೋಗಿಪ್ಪುದು ತತ್ಫಲಮಂ ॥ ೩೨

ಎಂದು ಪೇೞ್ವಡೆ ನುಡಿದು ಕೆಲವುದಿವಸಮಲ್ಲಿರ್ದು ನಡೆವ ನುಡಿವ ಉಣ್ಬ ಬಂದಿಸುವ ಪಟ್ಟಿರ್ಪ ಕುಳ್ಳಿರ್ಪ ನಿಂದಿರ್ಪ ಕ್ರಿಯೆಗಳಂ ಮಾೞ್ಪ ಭಂಗಿಗಳೆಲ್ಲಮಂ ಲೇಸಾಗಿ ಅಭ್ಯಾಸಂಮಾಡಿ ಲೋಚಂಗಾಱದೆ ತಪಮಂ ಕೊಳಲಂಜಿ ಮೆಲ್ಲನಲ್ಲಿಂ ಜಗುಳ್ದುಪೋಗಿ ತಲೆಯಂ ಬೋಳಿಸಿಕೊಂಡು ಬ್ರಹ್ಮಚಾರಿವೇಷಮಂ ಕೈಕೊಂಡು ॥ ೩೩

ವೀರಧ್ವಜಾತ್ಮಜಾತನ
ಧಾರಿಣಿಯರೆ ಸಾರ್ಗಮೆಂಬ ಕಡುಮೋಹದಿನಾ |

ವೀರಭಟಂ ವೈಸುಖವಮಂ
ಪಾರದೆ ತಾಳ್ದಿರ್ದನಧಿಕಮೆನಿಸುವ ಮಲವಮಂ ॥ ][1] ೩೪

ಆರತ್ನದಿನವನೀಶ
ಶ್ರೀರಮೆ ಕೈಸಾರ್ಗುಮೆಂದು ತಾಳ್ದಿದನಾಗಳ್ ।
ಚೋರಂ ಮಾಯಾತಪಮಂ
ಧಾರಿಣಿಯೊಳ್ ಮೋಹಮುಳ್ಳರೇನಂ ಮಾಡರ್ ॥ ೩೫

[ಧರೆ ಬೆಱಗಾಗಿರೆ ಪಲರುಂ
ಕರಮುಗಿಯೆ ಜಡರ್ಗೆ ಚೋದ್ಯಮಪ್ಪಂತಿರೆ ನಿ ।
ಷ್ಠುರಮಪ್ಪ ಬಾಹ್ಯತಪಮಂ
ಧರಿಯಿಸಿದಂ ಸೂರ್ಪನಂದು ಮಾಯಾತಪಮಂ ॥ ೩೬

ಒಡಲೆಲ್ಲಂ ಬಡತನದಿಂ
ಗಡ ಗಿಡಿಗಿಡಿಜಂತ್ರಮಾಗೆ ಕಣ್ಣೆಲ್ಲಂ ತ ।
ಮ್ಮೆಡೆಗಾಣಬಾರದೆನಿಸಿರೆ
ಕಡುಗಲಿ ನಿತ್ಯೋಪವಾಸದೊಳ್ನಱಿ ನೆಗೞ್ದಂ ॥] ೩೭

ಮತ್ತಮೇಕರಾತ್ರತ್ರಿರಾತ್ರಮಹಾರಾತ್ರಾಷ್ಟೋಪವಾಸಮಾಸೋಪವಾಸಂಗಳಂ ಕರ್ಬುನಮಂ ತಿಂದರಂತೆ ತನು ಕುಂದಲುಂ, ಬಂದಗುಳೊಳ್ಮಾಡಿದಂತೊಡಲಸಿದಾಗಲುಂ, ಬೇತಾಳನ ಬಸಿಱಂತೆ ಬಸಿಱುಂ ಬೆನ್ನಂ ಪತ್ತಲುಂ, ಪೞವಾವಿಯ ನೀರಂತೆ ಕಣ್ಣೊಳಗಡಂಗಲುಂ, ಪಾೞ್ಮನೆಯ ಗಳುವಿನಂತೆ ಬರಿಯ ಎಲ್ವುಗಳ್ ಪೊಱಮಡಲುಂ, [ಅಲ್ಪ

---

1 ಆ ಮಾತಿಂಗೆ ಸೂರ್ಪ್ಪನೆಂಬ ಕಳ್ಳಮಾಣ್ಕುಮಾರಂಗಭಿಮುಖನಾಗಿ ನಿಂದು ದೇವ ಬೇಗನಾಪಸ್ತುವಂ ತಂದಪೆನೆಂಬುದುಂ ಕುಮಾರಂ ಪೆಚ್ಚಿತಂದಡೆ ನಿನಗರ್ಧರಾಜ್ಯಮುಂ ಕೊಡುವೆನೆಂದು ವೀಳಯಮುಮಂ ಕೊಡುವುದುಂ ಪಿರಿದುಂ ಪೊಣ್ದ ವೀರಕುಮಾರನಂ ಬೀಳ್ಕೊಂಡು ಪೂರ್ವದೇಶಕ್ಕೆ ಪೋಗಿ ಋಷಿಯರ ನಡೆನುಡಿಯುಮನಭ್ಯಾಸಂ ಮಾಡಿ ಲೋಕಂಗಾಣದೆ ಮಾಯಾಬ್ರಹ್ಮಚಾರಿಯಾಗಿ (ಗ)

ಶ್ರೀವಂತನಂತೆ ನಡೆ ತಡವಾಗಲುಂ,] ಕಾಗೆದೊಂಡೆಹಣ್ಣಿನಂತೊಳಗ
ಶುಭಮುಂ [1] ಪೊಱಗೆ ರಮಣೀಯಮುಮಪ್ಪಂತು ನೆಗೞ್ದು ॥ ೩೮

[ಒಂದೆಡೆ ಮನ್ನಣೆ ಪಿರಿದುಂ
ಟೆಂದಿರ್ದೊಡೆ ಕೀರ್ತಿ ಪರಿಯಲಱಿಯದು ನಯಮೊ ।
ದಂದಲ್ಲದೆ ಪುಗಬಾರದು
ಸಂದೊಪ್ಪುವ ಕಾಮಲಿಪ್ತಿಪುರಮಂ ಬೇಗಂ ॥ ೩೯

ಉಪವಾಸಕ್ಕಲಸಿ ಕರಂ
ತಪಮಂ ಬಿಸುಡಲ್ಕೆ ಬಾರದವನೀತಳದೊಳ್ ।
ವಿಪರೀತಮಾಗೆ ಪೆಱಗಣ
ತಪದಿಂದಲ್ಲದೆ ಪೊಗೆಪ್ತೆಯಾಗದು ಬೇಗಂ ॥ ೪೦

ಆಡಂಬರದಿಂದಲ್ಲದೆ
ನಾಡವರಲ್ಕಿತರ್ ಪೂಜಿಸಲ್ನೆಱೆ ಕೈಕೊಂ ।
ಡಾದರದಱಿಂದಮಿಳೆಯೊಳ್
ಮಾಡುವೆನುಗ್ರೋಗ್ರಮಾಯಾತಪಮಂ ॥ ೪೧

ಎಂದೊಂದೆಡೆಯೊಳ್ನಿಲ್ಲದೆ ಗ್ರಾಮನಗರಖೇಡಖರ್ವಟಮಡಂಬ
ಪಟ್ಟಣದ್ರೋಣಾಮುಖಂಗಳೆಂಬವೆಲ್ಲೊಳೆಲ್ಲಂ ವಿಹಾರಿಸುತ್ತುಂ ಕೆಲ
ವಾನುಂ ದಿವಸಂ ಪೋದಿಂಬೞಿಕ್ಕೆ ಗೊಲ್ಲವಿಷಯಮಂ ಪೊಕ್ಕು ಕಾಮ
ಲಿಪ್ತಿಯುಂ ಪುಗದೆ ತತ್ಪುರಕ್ಕೆರಡುಮೂಱುಗಾವುದದಂತರದೊಳಿರ್ದು
ಸುತ್ತಣ ಗ್ರಾಮಂಗಳೊಳ್ ತನ್ನಂ ಪ್ರಸಿದ್ಧಿಗೆ ಸಲಲ್ವೇಡಿ ಚರಿಯಿಸುತ್ತು
ಮಿರ್ದು ಕೆಲವಾನುಂದಿವಸಂ ಪೋದಿಂಬೞಿಕ್ಕೆ ॥] ೪೨

ಕರಮುಗ್ರಮಪ್ಪ ತಪದೊಳ್
ಚರಿಯಿಸುವವರಾರಿಳಾಗ್ರದೊಳ್ತನುವಂ ನಿ ।

1 ಕಾಗೆವಣ್ಣಿಯ ಪಣ್ಣಿನಂತೊಳಗಶುದ್ಧನುಂ (ಗ)

ಷ್ಠುರಮಪ್ಪುಪವಾಸಂಗಳ
ನಿರದಿಂತೋವ್ರೋವ್ರೊ [1] ತವಿಸುವುನ್ನತನಾವಂ ॥ ೪೩

[ಎನ್ನೊಡಲಲ್ಲದಿದೆಂಬವೊ
ಲನ್ನಮ ನೆಱೆ ತೊಱೆದು ತನ್ನ ಸುಖಮಂ ಬಿಟ್ಟು ।
ಪೆಱನ್ನಪೆಱರಾರೀಗುಣಿ
ಯನ್ನರ್ಧಾರಿಣಿಯೊಳಱಿದು ಭಾವಿಸಿ ನೋಡಲ್ ॥] ೪೪

ಎಂದು ನಾಡೆಲ್ಲಮೊಂದೆ ಕೊರಲೊಳ್ ಪೊಗಟೆ [ರೂಢಿಯಾಗಿ ಕಾಮಲಿಪ್ತಿನಗರಮಂ ಪುಗುವುದುಂ ಜಿನೇಂದ್ರಭಕ್ತಸೆಟ್ಟಿ ಮೊದಲಾಗೆ ತತ್ಪುರಶ್ರಾವಕರೆಲ್ಲಂ ಕೇಳ್ದು ಮಹಾಸಂತೋಷದಿಂ ದೂರದೊಳ್ ಕೇಳ್ವ ಮಹಾಪುರುಷರಂ ಕಣ್ಣಾರೆ ಕಾಣಲ್ಪಡೆದೆವಿನ್ನೆಮ್ಮಂ ಬಿಟ್ಟು ಕೃತಾರ್ಥರಾರೆಂದು ಬಂದು ಪೊಡೆಮಟ್ಟು ಪೂಜಿಸೆ] [2] ಜಿನೇಂದ್ರಭಕ್ತಸೆಟ್ಟಿ ಬೇಗಮಾಬ್ರಹ್ಮಚಾರಿಯ ತಾಱಿದೊಡಲುಮಂ ಬಳಗಡಂಗಿದ ಕಣ್ಣುಮಂ ಮಾಯಾಸಂಯಮಮುಮಂ ಮನದೊಳ್ ಮೆಚ್ಚಿ ॥ ೪೫

ಪಿರಿದುಂ ವೈರಾಗ್ಯಂ ತನ
ಗುರುಮುದದಿಂದುಂಟದಲ್ಲದಂದೀತಪಮಂ ।
ಧರಿಯಿಸಿ ತನುವಂ ತಪದಿಂ
ಕರಗಿಸುವೀನಿಸ್ಪೃಹತ್ವಮಂ ತಾಳ್ದುವನೇ ॥ ೪೬

ಎಂದಾತನೊಳಾದ ಮಾಯಾವೇಷಮನಱಿಯದೆ ನಿಶ್ಚಯವೈರಾಗ್ಯಮುಳ್ಳನೆಂದು ನಂಬಿ ಭಕ್ತಿಭರತೆಯಿಂದೊಡಗೊಂಡು ಬಂದು ತನ್ನ [ದೇಹಾರಮಂ ಪುಗಿಸುವುದುಂ ಮಾಯಾವಿ ಜಿನೇಂದ್ರಭಕ್ತನೊಳಾದ ಭಕ್ತಿಯುಮಂ ಪಿರಿದಪ್ಪಾದರಮುಮಂ ಕಂಡು ತನ್ನ ಬಯಕೆ ತೀರ್ದುದೆಂದು ಪೆರ್ಚಿ ಗುಡಿಗಟ್ಟಿಯುಲಿಗಿ ನಟ್ಟಂತೆ ವೈಶ್ಯೋತ್ತಮನ ಭಕ್ತಿಯಂ ಸ್ಥಿರಂಮಾಪ್ಪೆನೆಂಬ ಬಗೆಯಿಂದಿಂತೆಂದಂ ॥ ೪೭

---

[1] ನಿರದಿಂತೊಪ್ಪುವತಪದಿಂ (ಗ)  [2] ಕಾಮಲಿಪ್ತಿಗೆ ಬರ್ಪುದುಂ (ಗ)

ಪೊನ್ನ ತೋರಣದಿಂ ದುಕೂಲದ ಸೂಸಕಂಗಳಿನೊಪ್ಪುವೆ
ತ್ತುನ್ನತಧ್ವಜದೋಳಿಯಿಂ ಬಿಡುಮುತ್ತಿನಿಂ ಕಡುಶೋಭೆವೆ
ತ್ತುನ್ನಯಂಬಡೆದಿರ್ದ ಚೆಲ್ವಿನ ರಂಗವಲ್ಲಿಯನೆಲ್ಲಿಯುಂ
ರನ್ನದಿಂ ಪಿರಿದುಣ್ಮೆ ತಿಕ್ಕೆಯಿನಿರ್ದುದೀ ಜಿನಮಂದಿರಂ ॥ ೪೮

ಮನಮೊಲ್ದು ಪರಸ್ತ್ರೀಯುಮೊ
ಳನವರತಂ ಮೋಹಮುಳ್ಳವಂಗೀಭವದೊಳ್ ।
ಕನಸಿನೊಳಂ ಪೊನ್ ತಾಂ ನೆ
ಟ್ಟನೆ ಕಂಡೊಡದಕ್ಕೆ ಬೆರ್ಚಿ ನಡುಗಲೆವೇಳ್ಕುಂ ॥ ೪೯

ನಿನ್ನ ದೇಹಾರಮಪ್ಪೊಡೆ ರತ್ನಮಯಮಪ್ಪುದಱೊಳೆಮಗಿರ್ಪುದು ಚಿತಮಲ್ಲದು ನೀನೆಮ್ಮನಿರಿಸುವೆನೆಂಬೆಯಪ್ಪೊಡೆ ಬೇರೊಂದು ಶೂನ್ಯಾಲಯದೊಳಿರಿಸುವುದೆಂಬುದುಂ ಜಿನೇಂದ್ರಭಕ್ತಸೆಟ್ಟಿ ಪಿರಿದುಂ ಪ್ರಾರ್ಥಿಸಿ ಪೊಡೆಮಟ್ಟೊಡಂಬಡಿಸಿದೊಡಲ್ಲಿರ್ದಂ ॥ ೫೦

ಗಾವಿಲತನದಿಂ ಪೊಕ್ಕೊಡೆ
ಸಾವಪ್ಪುದು ಪುಸಿಯೆ ಬರ್ದುಕಿದೆಂ ಪುಣ್ಯದಿನಿಂ ।
ತೀ ವಿಭುವಿನ ಮನೆಯುಂ ಪುಗ
ಲಾವಮರರುಮಾಱರೆಂದೊಡುಳಿದವರಳವೇ ॥ ೫೧

ಎಂದು ಜಿನೇಂದ್ರಭಕ್ತಸೆಟ್ಟಿಯ ಮನೆಯ ಬಾಗಿಲ ಕಾಪಂ ಕಂಡು ಬೆರ್ಚಿ ಬೆಗಡುಗೊಂಡು ॥ ೫೨

ಏಳಿಸಿ ಪುಗಬಾರದು ವೈ
ಶ್ಯಾಲಯಮಂ ಕೃತಕದಿಂದೆ ಮಾಯಾತಪಮಂ ।
ಮೇಳಿಸಿ ಪೊಕ್ಕಂ ಮಿಕ್ಕಂ
ತಾಳಾಪಂಗೆಯ್ದು ಪುಗುವ ಗಂಡರುಮೊಳರೇ ॥ ೫೩

ಇಂತಪ್ಪ ಬಲ್ಗಾಪುಂಟಪ್ಪುದಱಿಂದಂತಪ್ಪ ಕಳ್ಳರಕಳ್ಳಂ ಮೊದಲಾಗೆ ಪುಗಲ್ಮಣಿದನಿಲ್ಲ, ಬುದ್ಧಿಬಲದಿಂ ಭೋಂಕನೆ ನಂಟರ ಮನೆಯುಂ

ಪುಗುವಂತು ಪೊಕ್ಕನೆನ್ನಂತು ಸಂದ ಕಳ್ಳರಿಲ್ಲೆಂದು ಮುಯ್ವಂ ನೋಡಿ ಮತ್ತಂ ತನ್ನೊಳಿಂತೆಂದಾಳೋಚಿಸಿದನುತ್ಸುಕತನದಿಂ ಪೆಟ್ಟುವೆರ್ಚೆ ಕಡುವೆಸನಂ ಮಾಳ್ಪ ಸೊಸೆ ಮಾವನ ಮಂಡೆಯಂ ಬೋಳಿಸಿದಳಂ ಬಂತೆ ರಾಗದಿಂದವಿಾ ರತ್ನಮನೀಗಳ್ ನೆಗಪಿದೆನಪ್ಪೊಡೆ ಪೋಗಲ್ಬಾರದು ಉಪವಾಸಂಗಳಿಂದೆಲ್ಲರುಮಂ ನಂಬಿಸಿ ತಪದೊಳೊಳ್ಳಿದನೆನಿಸಿ ಮೆಲ್ಲನೆ ನಿಂದು ಕಾರ್ಯಮಂ ನೆಗಳ್ವೆನನ್ನೆಗಂ ||] [1] ೫೪

ಸಂದ ಮಹಾನಿಸ್ಪೃಹನಿವ
ನೆಂದೆನ್ನಂ ಕಾಪಿನಾಳ್ಗಳಂ ಶ್ರಾವಕರುಂ |
ಕುಂದದೆ ವೈಶ್ಯಾನ್ವಯವಿಕ
ಚೇಂದೀವರಶಶಿ ಜಿನೇಂದ್ರಭಕ್ತನುಮಾದಂ || ೫೫

ಎನ್ನ ದೆಸೆಗೆ ಭಯಸ್ಥರಾಗದಂತು ಮೇಲ್ಪಡಿಸುವೆನೆಂಬ ಬಗೆಯಿಂದುಪವಾಸದಮೇಲುಪವಾಸಮುಮನಲಾಭದಮೇಲಲಾಭಮುಮಂ ಮಾಡುತ್ತುಂ ತಾನಾಗಮದೂರನಪ್ಪುದಱಿಂದೆನ್ನರೂಢಿಗಾರಾನುಮೆ[illegible]ವರ್ಬಂದು ಏನಾನುಮಂ ಬೆಸಗೊಂಡೊಡಾಂ ಪೇೞದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗುಮೆಂಬ ನೆವದಿಂ ಮೋನಿಯಾಗಿ || ೫೬

ತರುಣಿಯರೊಳ್ ಮಾತಾಡಂ
ತರುಣಿಯರಂ ಕಂಡೊಡುಣ್ಣನಿದಿರೊಳ್ ನಿಲೆ ಪಂ |
ಕರುಹಾಕ್ಷಿಯರಂ ನೋಡಿದೊ
ಡೆರಡಿಲ್ಲದೆ ತನಗಲಾಭಮಂದಿನ ದಿವಸಂ || ೫೭

ಅಂತು ಮಾಯಾಕೃತಕದಿಂದವಿಮುಕ್ತನಾಗಿ [2] || ೫೮

ಪೊನ್ನಂದೊಡೆ ಕಿವಿಯಂ ಮು
ತ್ತಿನ್ನದೆ ಮಾಯಾವಿ ಮುಚ್ಚಿಕೊಳ್ವಂ ತನ್ನಂ |

1 ದೇಹಾಂತದೊಳಿರಿಸುವುದುಮಲ್ಲಿರ್ದು (ಗ)

2 ಕೃತಕಗಂಡವಿಮುಕ್ತನಾಗಿ (ಗ)

ಪೊನ್ನಾಭರಣಂ ತೊಟ್ಟವೆ
ರಿನ್ನುಱಿಯದೆ ಮುಟ್ಟೆ ಬೇಗವೊಂದುಪವಾಸಂ ॥ ೫೯

ಇಂತು ಬಕವೇಸಿತನದಿಂ ಮಾಯಾನಿಸ್ಪೃಹನಾಗಿ[1] ॥ ೬೦

ಭೋಗವನೊಲ್ದು ನೋಡನುಣಿಸೆಂದೊಡೆ ಬೆರ್ಚುರ್ತುಮಿರ್ಪನಾರೊಳಂ
ರಾಗಿಸಿ ಮಾತನಾಡನೆರೆಯುಂ ಪೆಱತಂ ಪೆಱರೇನನೆಂದೊಡಂ
ಬೇಗವದಕ್ಕೆ ಕೋಪಿಸನಣಂ ಪೆಱರೀವೊಡಮೊಲ್ವನಲ್ಲಮಿಂ
ತಾಗಳುಮಾಳಳಂ ಪೆಱರ್ಗೆ ನಂಬುಗೆಯಾಗಿರೆ ತಕ್ಕವೃತ್ತಿಯಿಂ ॥ ೬೧

ಅಂತೆ ಕುಱಿಯಂತೆ ಕವಿದತಲೆಯುಂ ಬೆಕ್ಕಿನಂತೆ ದುಷ್ಟಬುದ್ಧಿಯುಂ ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂ ತೋಱಾಯಿಲನುಂ ಅತ್ತಿಯಪಣ್ಗಳಂತೊಳಗಶುದ್ಧನುಂ ಮಟಫಲದಂತೆ ಪೊಱಗೆ ಸೇವ್ಯನುಂ ಬಂದತೊಱೆಯಂತೆ ಕದಡಿದ ಚಿತ್ತನುಂ ಮಯೂಖವ್ಯಾಘ್ರನಂತೆ[2] ಪೊಱಗೆ ಶಾಂತನುಮೊಳಗೆ ಕ್ರೂರನುಮಾಗಿ ಕೆಲವು ದಿವಸಮಿರ್ಪುದುಂ ॥ ೬೨

ಜಿನಪಾದಾಂಬುಜಮಧುಪಂ
ಜಿನಸಮಯಸಮುದ್ರಚಂದ್ರನನುಪಮಗುಣಿ ಸ।
ಜ್ಜನವಂದ್ಯಂ ವಿನಯದ ಕಣಿ
ಜಿನತತ್ವಾಂಬುರುಹಷಂಡರಂಜಿತಹಂಸಂ ॥ ೬೩

ಅಂತಪ್ಪ ಜಿನೇಂದ್ರಭಕ್ತಸೆಟ್ಟಿಯೊಂದುದಿವಸಂ ಪರದುವೋಪೆನೆಂಬ ಬುದ್ಧಿ ಪುಟ್ಟೆ ತಡೆಯದಲ್ಲಿಗೆ ತಕ್ಕ ಬಂಡಮಂ ಕೊಂಡು ತನ್ನನಾಶ್ರಯಿಸಿ ಬರ್ಪರೆಲ್ಲರುಮಂ ಕೂಡಿಕೊಂಡು ಶುಭದಿನಸುಮುಹೂರ್ತದೊಳ್ ಜಿನೇಂದ್ರಾಭಿಷೇಕಮುಮಂ ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆವಂದು ತಾನವರ್ಗತಿಭಕ್ತನಪ್ಪುದಱಿಂದವನೊಳಾದ ಮಾಯಾಮಾರ್ಗಮನಱಿಯದೆ ಜಿನಮಾರ್ಗದೊಳ್ ದೃಢನೆಂದು ಕಯ್ಯಂ ಮುಗಿದಿಂತೆಂದಂ ॥ ೬೪

---

[1] ಮಾಯಾಪುಂಜನಾಗಿ (ಗ)    [2] ಅಂಜಮುಖವ್ಯಾಘ್ರನಂತೆ (ಬ. ಕ.)

ಎಲ್ಲಿಯುಮಹೋರಂತರೊಂದೆಡೆ
ನಿಲ್ಲದೆ ತೊಳಲುತ್ತುಮಿರ್ಪುದೆನ್ನಯ ಪುಣ್ಯಂ ।
ಬಲ್ಲಿತ್ತು ಪಲವುದಿವಸಂ
ಪಲ್ಲಟಸದೆ ನಿಂದಿರನ್ನೆಗಂ ಮದ್ಗೃಹದೊಳ್ । ೬೫

ನಿಮ್ಮನ್ನರಿಸ್ನೆವರೆಗಂ
ಪೆರ್ಮೆಯಿನೊಸೆದಿರ್ದರೆಂದೊಡೆನ್ನಂ ಬಿಟ್ಟಾ ।
ರಿಮ್ಮಿಕ್ಕಭ್ರಾವಿಸುವೊಡೆ
ನಿಮ್ಮಡಿ ಪುಣ್ಯಕ್ಕೆ ತಾನೆ ನೋಂತೆಂ ಜಗದೊಳ್ ॥ ೬೬

ಅದುಕಾರಣದಿಂದೆನ್ನಂತು ಧನ್ಯರುಂ ಮಾನ್ಯರುಮಿಲ್ಲ ; ಸ್ಥಳ ಯಾತ್ರೆಗೆ ಪೋಗಿ ಬರ್ಪನ್ನೆವರಂ ನೀವೆನ್ನಂ ಪರಸುತ್ತುಮಿರ್ಪುದೆಂದು [ಬೇಡಿಕೊಳ್ವುದುಂ ಮಾಯಾವಿ ತನ್ನ ಬಗೆಗೂಡಿದುದಕ್ಕೆ ಪೆಟ್ಟುವೆರ್ಚಿ ತನ್ನೊಳಿಂತೆಂದಂ :— ೬೭

ಬಲ್ಲಾಳ್ತನದಿಂದೆಡೆದುಕೊಳ್ವಂಗೆ ಕಡಂಗೊಟ್ಟರೆಂಬಂತೆ ಪ್ರಾಣ ಮನಿಕ್ಕಿಯುಂ ಸೆಱಗುವಂ ಬೆಱಗುವಂ ಬಗೆಯದೆ ಸದ್ರತ್ನಮಂ ಕೊಳ್ವೆನೆಂದಿರ್ದನಗೆ ಸೆಟ್ಟಿಯು ಪೋಗಿನೊಳಂಬಾದುದೆಂದು ತನ್ನ ಪುಣ್ಯಕ್ಕೆ ತಾನೇ ನಾದವೆಱೆಯಂತೆ ಪೊಂಗಿ ಪಾಲುಂ ಕೂರ್ಮೆಯುಂ ಮಱುಗಿದೊಡಲ್ಲದೆ ಲೇಸಾಗವೆಂದು ತನ್ನಂ ಪ್ರಿಯಂಮಾಡಲ್ವೇಡಿ ಜಿನೇಂದ್ರಭಕ್ತಂಗಿಂತೆಂದಂ ॥ ೬೮

ವನಿತೆಯುಮಂ ನಂಟರುಮಂ
ಜನಕನುಮಂ ಪೆತ್ತ ತಾಯುಮಂ ವೃತ್ತಿಯುಮಂ ।
ಮನಮುರಿದು ತೊಱೆದು ತಪಕಂ
ತನುವಂ ತಂದೊಡ್ಡಿ ಸೆಟ್ಟಿ ಮತ್ತಂ ಪದಪಿಂ ॥ ೬೯

ಬಂದೆಡೆಯೊಳ್ಮಹೋದಯ
ದಿಂದಂ ಪತ್ತಿರ್ಪನೆಂಬನುಂ ಸುಖಮಂ ಪೊಂ ।

ದೆಂದುಂ ಪಾಟಿಸುತಿರ್ಪನು
ಮೊಂದುಂ ಸುರಲೋಕಮನೆಯ್ದಲಾಱನವೋಘಂ ॥ ೨೦

ಅದಱಿಂದೆಮ್ಮಂತಪ್ಪ ನಿಸ್ಪೃಹರ್ಗೆ ಕೂೞಿಂಗಾಟಿಸಿ ವ್ಯಸುಖಮಂ ಪಾಟಿಸಿ ಮನ್ನಣೆಗಾಸೆಗೆಯ್ದೊಂದೆಡೆಯೊಳ್ ಪತ್ತಿಕೊಂಡಿರಲಾಗದು; ಕಡುಮೋಹದಿಂದಿರ್ದನಪ್ಪೊಡೆ ಮೇಲೆ ಗತಿವಡೆವುದರಿದು; ನೀವೆನಗೆ ಭಕ್ತರಪ್ಪುದಱಿಂ ಪುಣ್ಯವೃದ್ಧಿಯಂ ಮಾಡಲೆಂದಿನ್ನೆವರೆಗಂ ಪಱಸುತುಮಿರ್ದೆವೆದಂ ಪುಸಿಯೆಂಬಿರಪ್ಪೊಡೆ ನಮ್ಮ ಮುನ್ನಿನ ನಡೆವಳಿಯುಮಂ ನೀವೆ ಬಲ್ಲಿರೆಮಗಿಪ್ಪುದಿಷ್ಟವಿಲ್ಲ; ದೇಶದೇಶದೊಳಂ ವಿಹಾರಿಸಿ ಕಾಲಮಂ ಕೞಿಪಿ ತಪೋವೃದ್ಧಿಯಂ ಮಾಡುವುದೆ ಮನದೊಳರ್ತಿಯೆನೆ ವೈಶ್ಯಪ್ರಧಾನನಿಂತೆಂದಂ ॥ ೨೧

ಮೊಲೆಗಳಮೇಲಿರ್ದುಂ ಪೆ
ರ್ಮಲೆಗಳ ಮೇಲಿರ್ದರಧಿಕಗುಣಗಣಯುಕ್ತರ್ ।
ಮಲೆಗಳ ಮೇಲಿರ್ದುಂ ಪೆ
ರ್ಮೊಲೆಗಳ ಮೇಲಿರ್ದರಧಿಕದುಶ್ಚಾರಿತ್ರರ್ ॥ ೨೨

ಜಲದೊಳಗಿರ್ದುಂ ತಾವರೆ
ಜಲಮಂ ಪೊರ್ದುವುದೆ ಚಾರುಚಾರಿತ್ರಯುತರ್ ।
ಮಲರಹಿತರ್ನಿರ್ಮಳರು
ಜ್ಜ್ವಲರೆನಿಸುವರೆತ್ತ ಪೊಕ್ಕೊಡಂ ಕೆಟ್ಟಪರೇ ॥ ೨೩

ನೀವೊಳ್ಳಿದರೆಂಬುದನವ
ನೀವಳಯದೊಳುತ್ತರೋತ್ತರಂ ನೆಗೞ್ವೇನಿ ॥
ವಿಮ್ಮಾವರಕಾಯಕ್ಲೇಶಮೆ
ಭಾವಿಸಿ ನೋೞ್ಪಂತು ತಾನೆ ಪೇೞಿದೆ ನಯಮಂ ॥ ೨೪

1 ಮೊಲೆಗಳ (ಬ. ಕ.)

ಅದಱಿಂ ನಿಮ್ಮಂತಪ್ಪ ಮಹಾಪುರುಷರೆಲ್ಲಿರ್ದಪ್ಪೊಡೇಂ ಪುಣ್ಯೋಪಾರ್ಜಕರಲ್ಲದೆ ಪಾಪೋಪಾರ್ಜಕರ ನೆಗೞ್ತೆಯಿಲ್ಲದು; ನೀವೆನಗೆ ಕಾರುಣ್ಯಂಗೆಯ್ದಿರಪ್ಪೊಡೆನ್ನ ಮಾತಂ ಸಲಿಸಿಮೆಂದು ಪಲವುಸೂೞ್ಪೊಡೆಮಟ್ಟು ವ್ರತವಿಶೇಷದಿಂ ಪ್ರಾರ್ಥಿಸುವುದುಮೊಡಂಬಟ್ಟಲ್ಲಿ ಸುಖದಿಂ ಸಂತೋಷದಿಂ ಮನೆಗೆ ಪೋಗಿ ಮಱುದಿವಸಂ ಪರಿಗ್ರಹಸಂಬಂಧಿಗಳ್ಗಂ ಪೆಂಡಿರ್ಗಂ ಧರ್ಮಕಾರ್ಯಮುಮಂ ದಾನಮುಮಂ ಪ್ರಯತ್ನದಿಂ ಮಾಳ್ಪುದೆಂದಪ್ಪೈಸಿ ಬಿಟ್ಟುಬೀಡಿಂಗೆ ಪೋಗಿರ್ಪುದುಮಿತ್ತಲ್ ಮಾಯಾಬ್ರಹ್ಮಚಾರಿ ತನ್ನೊಳಿಂತೆಂದಂ ॥ ] [1] ೭೫

ಪಿರಿದಪ್ಪ ದುಃಖಮೆಂದೋ
ಸರಿಸದೆ ಸೆಡೆದಿರದೆ ಬಿಟ್ಟು ಮೈಸುಖಮಂ ಭಾ ।
ಸುರಮಪ್ಪ ರತ್ನಕಾಂಕ್ಷೆಯಿ
ನರಿದೆನಿಸುವ ತಪದೊಳಿನ್ನೆವರೆಗಂ ನವೆದೆಂ ॥ ೭೬

ಇನ್ನಿರಲಾಗದಬ್ಬೆ ಬೇೞ್ಪುದವರೆಯು ಪಿಟ್ಟಂಬಂತೆನ್ನ ಬಗೆಗೊಡಂಬಟ್ಟಂತೆ ಪುಣ್ಯದಿಂ ಜಿನೇಂದ್ರಭಕ್ತಸೆಟ್ಟಿಯುಂ [ಪೋದನೊಳ್ತವಸರಮಾಯ್ತೆಂದು ನಡುವಿರುಳಪ್ಪಾಗಳ್ ಕಾಪಿನ ಕಱತಕಾರರ್ ಮಱೆದು ನಿದ್ರೆಗೆಯ್ದುದನಱಿದು ಮೆಲ್ಲನೆೞ್ದು ಗರ್ಭಗೃಹಮಂ ಪೊಕ್ಕು ಮುಕ್ಕೊಡೆಯೊಳಿರ್ದ ವೈಡೂರ್ಯಮಾಣಿಕಮಂ ನೋಡಿ ॥] [2] ೭೭

ನಿನ್ನಕತದಿಂದೆ ನವೆದೆಂ
ನಿನ್ನಂ ನಡೆನೋಡಿ ಸುಖಮನಱಿದೆಂ ಮತ್ತಂ ।
ನಿನ್ನಿಂದಂ ಪಿರಿದಪ್ಪ ಮ
ಹೋನ್ನತಿಯಂ ಪಡೆವೆನೆಂದು ದುಃಖಂಬಟ್ಟೆಂ ॥ ೭೮

---

1 ಬೇಡಿಕೊಂಡು ಸೆಟ್ಟಿ ಪೊಱವೀಡುವಿಟ್ಟಿರ್ಪುದುಂ ಮಾಯಾವಿ ತನ್ನಬಗೆದ ಬಯಕೆ ಕೈಗೂಡಿದುದಕ್ಕೆ ಪೆರ್ಚಿ (ಗ)

2 ಪೋದನೊಳ್ತಪ್ಪವಸರಮಂ ನೋಡಿ (ಗ)

ಕಡುತಪದಿಂದಂ ದೇಹಂ
ಬಡವಾದುದು ನಿನ್ನ ದೂಸಱಿಂ ಧರೆಯುರೆಯಂ ।
ಪಡೆವೆಂ ರಾಜ್ಯಶ್ರೀಯೊಳ್
ತಡೆಯದೆ ಕೂಡಿರ್ಪೆನೆಂಬ ಪರಮೋತ್ಸವದಿಂ ॥ ೭೯

ಎಂದು [ತ್ಸಾಹದಿಂ] ಮೆಯ್ಯಱಿಯದೆ ರತ್ನದೊಡನೆ ನುಡಿದು ಪೆಱರ್ಕೇಳದಂತಾಟಿಸಿ ಕೀಲಂ ಕಳದು ನೆಱಕ್ಕೆ ಬೀೞಲೀಯದೆ ಪಿಡಿದು ಕೊಂಡು ತಳದೊಳಿಕ್ಕಿಕೊಂಡು ನೋಡಿ ॥ ೮೦

ಉರದೊಳಮರ್ಚಿಕೊಂಡು ತಲೆಯೊಳ್ಪಿಡಿದೊಯ್ಯನೆ ಪೊತ್ತುಕೊಂ
ಡು ಮಾ
ಣ್ದಿರದತಿಮೋಹದಿಂ ನೊಸಲಮೇಲೆ ಮಹೋತ್ಸವದಿಂದಮಿಟ್ಟುಕೊಂ
ಡಿರದದನಕ್ಕರಿಂದಡರೆ ಭಾವಿಸಿ ಭಾವಿಸಿ ನೋಡಿ ನೋಡಿ ಚಕ
ರಮವನೀತಳಂ ತನಗೆ ಸಾರ್ದವೊಲೊರ್ಮೊದಲುಣ್ಮಿ ಪೊಣ್ಮಿದಂ ॥ ೮೧

ಅಂತು ರಾಗರಸದಿಂ ಪೊಂಗಿ ತಡೆದು ತಿಳಿನೀರನುಂಡುದೆಂಬ ನಾಣ್ಣುಡಿಯಂತೆ ತನ್ನ ಕೈಕೊಂಡು ನಮೆದ ಕಡುದುಃಖಂ ಸಫಲ ಮಾಯ್ತೆಂದು ತನ್ನೊಳ್ ನುಡಿದು ॥ ೮೨

ಸುರರಾಜಂಗಂ ಭೇದಿಸ
ಲರಿದೆನಿಸುವ ದಿವ್ಯರತ್ನಮೆನಗವಯವದಿಂ ।
ದೊರೆಕೊಂಡುದು ವೀರಮಹೀ
ಶ್ವರನಲ್ಲಿಗೆ ಪೋಗಿ ಪಡೆವೆನುರ್ವರೆಯುರೆಯಂ ॥ ೮೩

ಸ್ಫುರಿಯಿಪ ಸದ್ರತ್ನಮನಿದ
ನರಸಂ ಕೇಳ್ಕಾಣಲೊಡನೆ ತಾಂ ತನ್ನಾಣ್ಮ ।
ರ್ವರೆಯುರೆಯನೀವನಿತ್ತೊಡೆ
ಧರೆಯುರೆಯಂ ಸುಖದೆ ಲೀಲೆಯಿಂ ಭೋಗಿಸುವೆಂ ॥ ೮೪

ಮನಕೆವಂದ ಹಯಂಗಳಂ ಮದಸಿಂಧುರಂಗಳನೇಱುವೆಂ
ಮನಕೆವಂದ ನವಾಂಬರಂಗಳನರ್ತಿಯಿಂದುಡುವೆಂ ಕರಂ
ಮನಕೆವಂದ ಸುಗಂಧವಸ್ತುವನೞ್ಕಱಿಂದಮೆ ಪೂಸುವೆಂ
ಮನಕೆವಂದೊಳುವೆಂಡಿರೊಳ್ನೆರೆವೆಂ ಮನಂಬಿಡೆ ನಿಚ್ಚಲುಂ ॥ ೮೫

ಎಂದು ತೋಱ್ಗಾಣದೆ ಕೆಪ್ರ್ಗಳದು ನಗಿಸುವೆಗ್ಗನಂತೆ ಮುಂದಣ ತನಗಪ್ಪ ರಾಜ್ಯವಿಭೂತಿಯನಾಳೋಚಿಸಿ ಸೊಡರಂ ಕಳದು ಪೊಱ ಮಟ್ಟು ಪೋಪುದುಂ ಕರ್ಮವಶದಿಂ ಖಲ್ವಬಿಲ್ವಸಂಯೋಗದಂತೆ ಪೊೞ ಲೊಳಗೆ ತೊೞಲ್ವರಸನ ತಳಾಱರೋಡುವ ಮಾಯಾವಿಯ ಕೈಯೊಳ್ಬಾ ಲಾರ್ಕನಂತೆ ಪ್ರಜ್ವಲಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ ॥ ೮೬

ಬಳಗಿರ್ದ ಬಂಟರಾಕಳ
ಕಳಕ್ಕೆ ಭಯದಿಂದಮೆರ್ದದೇನೆಂದಾಗಳ್ ।
ನೋೞ್ಪುದುಮೊಳಗು
ಜ್ಜ್ವಳಿಸುವ ಸೊಡರಿಲ್ಲದೆಯ್ದೆ ನಂದಿರೆ ಮನದೊಳ್ ॥ ೮೭

ನೊಂದು ದೇಹಾರದ ಮನೆಯಂ ಪೊಕ್ಕು ತಡವರಿಸಿ ನೋಡಿ ಮಾಯಾವಿಯಂ ಪಡುವಡೆಯೊಳ್ಕಾಣದೆ ಠಕ್ಕನೆಂದಱಿದು ರತ್ನದ ದೆಸೆಗೆ ಭಯಸ್ಥರಾಗಿ ಸೊಡರಂ ತರಿಸಿ ನೋಡಿ ದೇವರ ಮುಕ್ಕೊಡೆಯೊಳಿರ್ದ ವೈಡೂರ್ಯಮಾಣಿಕಮಂ ಕಾಣದೆ ಪೊಱಮಟ್ಟು ತಾಮುಂ ತತ್ಪುರದ ತಳಾಱರುಂ ಸುತ್ತಿ ಮುತ್ತಿಯಿನ್ನೆತ್ತ ಪೋದಪನೆಯೆಂದು ಬೆನ್ನಟ್ಟಿ ತಗುಳ್ದಡುವುದುಂ ಖಳಲ್ ಖಳಲ್ ತೊಪ್ಪುತೊಪ್ಪು ಛಳಲ್ ಛಳಲೆಂದು ಕೊಳ್ವ ಬಡಿಗಂ ಚಳಿತು ॥ ೮೮

ಬಟ್ಟೈಸಿ ಪೋಗಲಿರಿದೊಣದೊಣ
ಬಟ್ಟೆಯ ಕಿಱುಗಲ್ಲ ಬಡಿಯ ಕೋಳಿಂದಂ ಕಾಲ್ ।
ಕೆಟ್ಟುವು ಜವೆಜವೆನಾದುವು
ನೆಟ್ಟನೆ ಮೈಸತ್ತೆನೆಂದು ಕಡುಭಯದಿಂದಂ ॥ ೮೯

ಅತ್ತಲುಮಿತ್ತಲುಮೋವೋ
ಯೆತ್ತಲುಮಾತಂಗೆ ಕೂಪಮಂ ತೆಱದಂತಾ ।
ಯ್ತೊತ್ತುತೆ ಪೊತ್ತುಪ ತೆಱದಿಂ
ದತ್ತಿತ್ತಲ್ ಮಿಡುಕಬಾರದವೆಗುದ್ಧತೆಯಿಂ ॥ ೯೦

ತಡೆದಿಲ್ಲಿ ನಿಂದೆನಪ್ಪೊಡೆ
ಮಡಿವಾದಪುದುಱವೆನಪ್ಪೊಡೆಲ್ಲೆಡೆ ಮುಂದೊಂ ।
ದಡಿಯುಂ ತೆಱಪಣಮಿಲ್ಲೇ
ಯೆಡೆಗಾವುದುಪಾಯಮೆಂದು ಪಾಯಾಪುಂಜಂ ॥ ೯೧

ಚಿಂತಾಕ್ರಾಂತನಾಗಿ ಮಹಾಪ್ರಳಯಂ ಕವಿದಂತೆ ದುಃಖಂಬಟ್ಟು
ಪಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ ॥ ೯೨

ಜಡಿದುಂ ಬೈದುಂ ಪೋಇದಿ
ನೊಡಗೊಂಡುಣ್ಬವರೆ ಲೇಸು ದಿಟಮೆಂಬೀ ನಾ ।
ಣ್ನುಡಿಯಂತೀ ಪ್ರಾಣಿಗಳಂ
ಮಡಿಪದುಪಾಸಕರೆ ಲೇಸು ಒಗೆವೊಡೆ ಜಗದೊಳ್ ॥ ೯೩

ಅದಱಿಂ ಸಮ್ಯಕ್ತ್ವಚೂಡಾಮಣಿಯುಪ್ಪ ಜಿನಭಕ್ತಸೆಟ್ಟಿಯು ಪ್ಪೊಡೆ ಪರಮಶ್ರಾವಕನೊಂದಿಱುಂಪೆಯು ಪ್ರಾಣಕ್ಕಂ ಪೊದಲಾಗೆ ತಪ್ಪಲಱಿಯುದಾತನೆನ್ನಂ ಕಂಡೊಡೇಗೆಯ್ದುಂ ಕೊಲ್ವನಲ್ಲೀನಿಷ್ಠುರನಪ್ಪತಳಾಱನ ಕೈಯೊಳ್ ಕಡಿಗಂಡಮಾಗೆ ಜೇಱೇಱ ಪೊಯ್ಸಿಕೊಂಡು ಸಾಯದೆ ವಾತ್ಸಲ್ಯರತ್ನಾಕರನ ಮಱೆಯಂ ಪುಗುವೆನೆಂದು ಪೊಱಬೀಡು ಬಿಟ್ಟೆರ್ದ ಜಿನೇಂದ್ರಭಕ್ತನ ಬೀಡಂ ನೋಡಿ ಪೊಕ್ಕು ಜಿನಧರ್ಮನಿರ್ಮಳನ ಮಱೆಯಂ ಪುಗುವುದುಂ ಸೆಟ್ಟಿ ಮಾಯಾವಿಯು ಮುನ್ನಿನ ತಪದೊಳಾದ ಸಾಧುತ್ವಮುಮಂ ಬಱಿಕ್ಕಮಾದ ದುರ್ಜನತ್ವಮುಮಂ ಕಂಡು ಬೆಱಗಾಗಿ ತನ್ನೊಳಿಂತೆಂದಂ ॥ ೯೪

ನಾಡಾಡಿಯನಾಡುವರೊಳ್
ಕೂಡುವೊಡದು ದೋಷಮಲ್ಲವೆಂದು ಕುಕ್ಕುಟಮಂ ।
ಮೂಡುವರೊಳ್ನಂಬುಗೆಯಿಂ
ಕೂಡಿದೊಡೇನಾನುಮೊಂದು ದೋಷಂ ಸಾರ್ಗಂ । ೯೫

ಧರೆಯೊಳ್ ವಿವೇಕಿಯೆನಿಸುವ
ಪುರುಷಂ ಪೆಂಡಿರೊಳಮರ್ಥದೊಳಮಿನ್ನೆಂತ ।
ಪ್ಪುರುಮಂ ನಂಬಿರಲಾಗದು
ಪರವಶದಿಂದೆಂಬ ನೀತಿಯೊಳ್ ಪುಸಿಯುಂಟೇ ॥ ೯೬

ಬೆಸನಿಯ ಸತ್ಯಮುಂ ಖಳನ ಧರ್ಮಮು ಮೂರ್ಖನ ಸಚ್ಚರಿತ್ರಮುಂ
ಪುಸಿವನ ಶೌಚಮುಂ ಬಡವನಪ್ಪನ ಭೋಗಮುಮಾಜಿರಂಗದೊಳ್
ಕುಸಿವನ ವೀರಮುಂ ಬಧಿರನಪ್ಪನ ಕೇಳ್ವೆಯುಮಾಯತಿಕ್ಕೆಯುಂ
ಬಿಸುಟನ ಕೀರ್ತಿಯುಂ ವಿಟನ ಶೀಲಮುಮುರ್ವಿಯೊಳೊಪ್ಪಲಾರ್ಪುವೇ॥

ಕುರುಡನ ಕಾಣ್ಕೆಯುಂ ವನಿತೆಯರ್ಗೆಳಸಿರ್ಪನ ರಾಜ್ಯಮುಂ ಮನಂ
ಮುರಿವನ ಧೈರ್ಯಮುಂ ಪತಿಗೆ ಮಾರ್ಮಲೆದಿರ್ಪನ ಸಜ್ಜನಿಕೆಯುಂ
ಪರಮಜಿನಾಗಮೋಕ್ತಿಯನೆ ಮಾಣದೆ ಭಾವಿಸದಾತನೋದು ಭಾ
ಸುರತರಮುಂ ಮಹಾಗುಣಮುಮೊಪ್ಪವು ಧಾರಿಣಿಯೊಳ್ನಿರಂತರಂ ॥೯೮

[ಚರಿತಪುರಾಣಮನಱಿಯದೆ
ತುರಿಪದಿನಧ್ಯಾತ್ಮಿಯಾಗಿ ನೆಗಳ್ವನ ತಪಮುಂ ।
ಮರುಳನ ಸಿರಿಯುಂ ಪಂದೆಯ
ಬಿರುದುಂ ಸುಖಮಾಗಲಾಱವೆಂದುಂ ಕಡೆಯೊಳ್ ॥] ೯೯

ಸಿದ್ಧಾಂತಮನಱಿಯದೆ ಪಿರಿ
ದುದತೆಯಿಂ ಗೊಂಬತನದಿನಧ್ಯಾತ್ಮಮುಮಂ । 1

---

1 ಅನ್ಯಾಗಮುಮಂ (ಗ)

ಶ್ರದ್ಧೆಯಿನೋದುವೆ ಕಡುನಿ
ರ್ಬುದ್ಧಿ ಮಹಾಸುಖವೆನ್ನೈದಲಾಱಿಂ ಕಡೆಯೊಳ್ ॥ ೧೦೦

ಮೊದಲೊಳ್ ಓದದೆ ರಾಗದಿಂ ಪ್ರಥಮಾನುಯೋಗಮನರ್ಥಿಯಿಂ
ತುದಿಯ ಸೂಕ್ಷ್ಮಮನೋದುವಾತನುಮಾಜಿಯೊಳ್ ಸಲೆ ಕೈದುವಿ
ಲ್ಲದೆ ಕಡಂಗಿ ವಿನೋದದಿಂ ಪುಗುವಾತನುಂ ನೃಪಕಾಂತೆಯುಂ
ಪಡೆದು ಕಾಮಿಸಿ ನೋಡಿ ಪೊರ್ದುವ ಗಾಂಪನುಂ ಮರುಳಲ್ಲನೇ ॥ ೧೦೧

ಆಗಮಮೆವೆಱಿಯದ ತಪಮುಂ
ರಾಗಿಯೆನಿಪ್ಪವನ ರಾಣಿವಾಸದ ಕಾಪುಂ ।
ವೇಗಿಯ ಕೆಳೆಯುಂ ಬಡವನ
ಭೋಗಮುಮತ್ಯಂತದುಃಖಮಂ ಪುಟ್ಟಿಸುಗುಂ ॥ ೧೦೨

ಲೋಭಿಯ ಕೋಡುಂ ಪದಪಿಂ
ದೀಭವದ ಸುಖಕ್ಕೆ ಮಱುಗಿ ಕುದಿವನ ತಪಮುಂ ।
ಲಾಭಮನಱಿಯದ ಪರದುಂ
ಶೋಭಿಸಲಾರ್ತಪ್ಪುವೆ ಬಗೆವೊಡವನೀತಳದೊಳ್ ॥ ೧೦೩

ಎಂದು ಮನದೊಳ್ ಭಾವಿಸುತಿರ್ಪನ್ನೆಗಂ ಕಲ್ಲೆಯುಂ ಕವಿಲೆಯುಮಾಗಿ ನೆರವಿ ಪೆಱಗೆ ಬರೆ ಪುರದ ತಳಾಱರುಂ ತನ್ನ ದೇಹಾರದ ಕಾಪಿನ ಬಂಟರುಂ ಕಳ್ಳನಿಲ್ಲಿ ಪೊಕ್ಕನೆಂದು ಬೀಡಿನೊಳ್ ಪೊಕ್ಕು ಗುಡಿಗೂಡಾರಂಗಳೊಳಂ ಬೆಟ್ಟಾಗೊಟ್ಟಿರ್ದ ಪೇಱಿನಿಟ್ಟೆಡೆಗಳೊಳಂ ಕೊಟ್ಟಗೆಯೆತ್ತಿನ ಪಟ್ಟಿಗಳೊಳಂ ಪುಂಜಿಸಿದ ಚೀನದ ದಿಂಡುಗಳೊಳಂ ಪಾಸಿನೆಡೆಗಳೊಳಂ ಕೈದೀವಿಗೆಯ ಬೆಳಕಿನೊಳ್ ನೋಡುತ್ತುಂ ಕಳಕಳರವದಿಂ ಬಿದಿರುಂ ಬುತ್ತಿಯುಂ ಪಾಸುಂ ಪೊಕ್ಕುಂ ತಿಗುರಿಯುಂ ಬುಗುರಿಯುಮುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳವರಂ ವಣಿಗ್ವಂಶಲಲಾಮಂ ಕಂಡು ತನ್ನೊಳಂತೆಂದಂ ॥ ೧೦೪

ಈಪಾತಕನಪ್ಪೊಡೆ ಮು
ನ್ನೀಪುರದೊಳ್ ಪಿರಿದು ಕೀರ್ತಿಯಂ ತಪದಿಂದಂ ।
ವ್ಯಾಪಿಸಿದಂ ಪಲರಿಂದಂ
ಪಾಪಾಂತಕನೆನಿಸಿ ನೆಱೆಯೆ ಕೈಮುಗಿಯಿಸಿದಂ ॥ ೧೦೫

ಮೊದಲೊಳ್ ಮುಳ್ಳಿನ ಮೊನೆಗಳ್
ಮೃದುವಪ್ಪುವು ಬೞಿಕೆ ಬೆಟ್ಟಿತಪ್ಪುವು ಖಳರುಂ ।
ಮೊದಲೊಳ್ ಗುಣಿಯೆನಿಸಿರ್ಪರ್
ತುದಿಯೊಳ್ ತಂತಮ್ಮ ಮಾಯೆಯಂ ಪ್ರಕಟಸುವರ್ ॥ ೧೦೬

ಪೊಳ್ಳುಂ ಬಿತ್ತುಂ ಸಸಿಗಳು
ಮೊಳೆದುವೆನಿಸಿರ್ಪುವೆಯ್ದೆ ಫಲದೊಳ್ ತೋರ್ಕುಂ ।
ಪೊಳ್ಳಪ್ಪುದು ಪೊಳ್ಳುಂ ಕರ
ಮೊಳೆದುವೆನಿಸಿರ್ಪ ಬಿತ್ತು ಧಾನ್ಯಮುಮಕ್ಕುಂ ॥ ೧೦೭

ಎಲ್ಲರ ಪೊಱಗಣ ಚೇಷ್ಟೆಯು
ನಲ್ಲದೆ ಪೇೞೊಳಗನಱಿವನಾವನೊ ! ನರನೇ ।
ಕಲ್ಲೇ ಬಿದಿರೇ ಸೀಳ್ದಂ
ಮೆಲ್ಲನೆ ನೋೞ್ಪಂತೆ ನೋಡೆ ಮಾನಿಸರೆರ್ದೆಯುಂ ॥ ೧೦೮

ಇವನಪ್ಪೊಡೆ ತಾನೊರ್ಮರ
ತವುಡಿಂಗಂ ಪೋಗನಿವನ ಕತದಿಂದಂ ತ್ರೈ ।
ಭುವನಂಬಡೆವೀಧರ್ಮಮ
ನವಿವೇಕಿಗಳಘಸಮನ್ವಿತರ್ಕಿಡೆನುಡಿವರ್ ॥ ೧೦೯

ಅದು ಕಾರಣದಿಂದಿವನ ಪೋದ ಪೋಗಂ [1] ಮಾರಿಯುೞಿಗೆ ಸದ್ಧ
ರ್ಮಕ್ಕೆ ಪೞಿಯಾಗವಂತೆ ನೆಗೞ್ವೆನೆಂದು ಪಿರಿಯ ಮಣಿಯ ಮೇಲಾತ
ನನಿರಿಸಿ ಮಹಾಭಕ್ತಿಯಿಂ ಪ್ರತ್ಯಕ್ಷಂ ಮಾಯಾವಿಯ ಕಾಲನೊತ್ತುತ್ತು

ಮಿರ್ಪುದುಮೆನ್ನೆಗಂ ತಳಾರನಾಯಕಂ ಪರಿತಂದು ಜಿನೇಂದ್ರಭಕ್ತ ಸೆಟ್ಟಿಯಲ್ಲಿಗೆ ಭೋರನೆ ಪೋಗಿ ಸೆಟ್ಟಿಯ ಮೇಲೆ ಕಾಲನವಷ್ಟಂಭದಿಂ ನೀಡಿ ಮಹಾಮಹಿಮೆಯಿಂದಿರ್ದ ಕೃತಕವೇಷಧಾರಿಯಂ ಕಂಡು ॥ ೧೧೦

ನೀವೇನೆಂದೀತಸ್ಕರ
ಕೀವಿಲಚರಣದ್ವಯಂಗಳಂ ಮೆಲ್ಲನೆ ಸ ।
ಧ್ಭವದಿನೊತ್ತುತ್ತಿರ್ದಿರೊ
ನೀವಱಿಯಿರೆ ಚಪಳನಾಡಿದಾಟಮನಿನ್ನುಂ ॥ ೧೧೧

ಸಿತಗಂ ಮಾಯಾತಪಮಂ
ಕೃತಕದಿನಱಿಯಟ್ಟಿ ಮಾಡಿ ಮೇಳಿಸಿ ಪೆಱರು ।
ನ್ನತರತ್ನಮನೊಯ್ದಪನು
ನ್ನತಿಯಿಂ ದುರ್ಜನರನಿನ್ನರಂ ಕಂಡಱಿಯೆಂ ॥ ೧೧೨

ಪೊಱಗೀ ಖಳನಂ ಕಂಡೊಡೆ
ಪೆಱದೆಗೆಯದೆ ಸಂದಿಸಂದಿಯಂ ಪರಸಿಂದಂ ।
ತಱಿಯೆನೆ ಗರಗಸದಿಂದಂ
ಕೊಱೆಯೆನೆ ಖಳನಿಲ್ಲಿ ಪೊಕ್ಕು ಬದುಕಿದನಿನ್ನುಂ ॥ ೧೧೩

ಆಶ್ವಾಸಂಗುಡದಿವನಂ
ನಿಸ್ವನಮಜ್ಞಾನಿಯಂ ಮಹಾಪಾತಕನಂ ।
ವಿಶ್ವಾಸಘಾತುಕನನವು
ರೇಶ್ವಗನಿಭವಿಭವ ತಡೆಯದೊಪ್ಪಿಸು ಬೇಗಂ ॥ ೧೧೪

ಮಹಾಮಾಯಾವಿಯು ತುಡುಗುಗೊಂಡ ತೊಟ್ಟನಂತೆ ಬಾಯಂ ತೆಱೆದುಕೊಂಡು ತಾನಲ್ಲದಂತೆ ಬೆಣ್ಣೆಯಂ ತಿಂದ ಬೆಕ್ಕಿನಂತೆ ನಿಮ್ಮ ಮಱೆವೊಕ್ಕು ನುಣ್ಣನಿರ್ದಪನೆಂದು ನಾನಾಪ್ರಕಾರದಿಂ ತಿರಸ್ಕರಿಸಿ

ಸೆಟ್ಟಿಗಂಜಿ ಮೇಲ್ವಾಯ್ದು ತೆಗೆಯಲ್ಮಱದಿರ್ಪುದುಂ, ಜಿನೇಂದ್ರಭಕ್ತ ಸೆಟ್ಟಿ ತಳಾಱನಾಯಕನ ಮೊಗಮಂ ನೋಡಿ ನೆರವಿಯೆಲ್ಲಂ ಕೇಳ್ವಂತಾಗೆ ಗಂಭೀರನಾದದಿಂದಿಂತೆಂದಂ ॥ ೧೧೫

ಪುರದೊಳಗೆ ಕೆಟ್ಟುದೇಂ ತ
ಸ್ಕರನಾವಂ ಕಳ್ದು ತಂದ ಧನಮಾವುದು ನಿ ।
ಷ್ಠುರತನದಿಂದೀ ಪೆರ್ಗಡೆ
ವೆರಸು ಮಹಾನೆರವಿವೆರಸು ಕಟ್ಟಾಳ್ತನದಿಂ ॥ ೧೧೬

ಪರಿತಂದು ಪೊಕ್ಕಱಸುವೊಡೆನ್ನ ಬೀಡು ಕೊಟ್ಟಮಲ್ಲದು ನೀನಿಂದು ಕೆತ್ತಲೆಯುಂ ತಿಂದ ಪಸುವಿನಂತಾನುಂ ಮದ್ದುಗುಣಿಕೆಯುಂ ತಿಂದ ಮಾನಿಸನಂತಾನುಂ ಮೆಯ್ಯಱಿಯದೆನ್ನೊಡಮೆಯನೆನ್ನಲ್ಲಿಗೆ ತರ್ಪ ಬಡಸಾದುರುಷಿಯುಂ ಕಳ್ಳನೆಂದು ಬೆನ್ನಟ್ಟಿದೆಯಿಂತೀ ಸಾಧು ತಪಸ್ವಿ ನಿಶ್ಚಯಂ ಕಳ್ಳನಪ್ಪೊಡೆ ಮತ್ತೊಂದು ದೆಸೆಗೆ ಪೋಗದೆನ್ನ ಬೀಡನೇಕೆ ಪುಗುವನದಱಿಂದಮಱಿಯಲ್ವೇಡಾ ॥ ೧೧೭

ಪಿರಿದುಂ ಕಾಲಂ ನೀನೀ
ಪುರಮಂ ಜೀಯೆನಿಸಿ ಬುದ್ಧಿಗಂ ತೇಜಕ್ಕಂ ।
ಬಿರುದಿಂಗಂ ಪೆಂಪಿಂಗಂ
ಕರಮೊಳ್ಳಿದನೆನಿಸಿ ರಕ್ಷಿಸಿದೆಯಿನ್ನೆವರಂ ॥ ೧೧೮

ಮುನ್ನಮಿಂತಪ್ಪ ನಿರ್ಬುದ್ಧಿತನಮಿಲ್ಲ ನಿನ್ನಂತಪ್ಪ ಬುದ್ಧಿವಂತರುಂ ಪೆರ್ವಯ್ತಂಗೊಂಡರಂತೆ ಬಡಸಾದುವಂ ಕಳ್ಳನೆಂದು ಬೆನ್ನಟ್ಟಿ ಬಂದುದಕ್ಕೆಮಗೆ ಪಿರಿದುಂ ವಿಸ್ಮಯಮಾದಪುದೆಂಬುದುಂ ಸೆಟ್ಟಿಯ ಮಾತಿಂಗೆ ತಳಾಱನಾಯಕಂ ಬೆಱಗಾಗಿ ತನ್ನೊಳಿಂತೆಂದಂ ॥ ೧೧೯

ಈ ವೈಶ್ಯೋತ್ತಮನಪ್ಪೊಡೆ
ಕೇವಳಮೇ ಬುದ್ಧಿಯೆಡೆಗೆ ನೂರ್ಮಡಿ ಮಿಕ್ಕಂ ।

ದೇವೇಶನುಮಂ [1] ಬಗೆವೊಡೆ
ಭೂವಿನುತಂ ಕಳ್ಳನಪ್ಪವಂಗೆಱಗುವನೇ ॥ ೧೨೦

ಅನುಪಮಗುಣಿಯೆಂದಸ್ಮ
ಜ್ಜನಪಂ ಮೊದಲಾಗೆ ಕೂರ್ಮೆಯಿಂ ಕೈಮುಗಿಪಂ ।
ಜಿನಭಕ್ತಸೆಟ್ಟಿಗೆಂದೊಡೆ
ಜಿನಭಕ್ತಂ ಕಳ್ಳನಪ್ಪವಂಗೆಱಗುವನೇ ॥ ೧೨೧

ಅಂತಲ್ಲದೊಡಂ ॥ ೧೨೨

ಈತಂ ತಸ್ಕರನಪ್ಪೊಡೆ
ಭೀತಿಯಿನತ್ತಿತ್ತಲೋಡುಗಲ್ಲದೆ ದಿಟಮಿಂ ।
ಡೀತನ ಬೀಡಂ ಪುಗುವನೆ
ಮಾತೇನೀಸಾಧು ಕಳ್ಳನಲ್ಲಂ ಶುದ್ಧಂ ॥ ೧೨೩

ಎಂದಿದೆಲ್ಲಮೆನ್ನ ನಿರ್ಬುದ್ಧಿತನಮೆಂದು ತಳಾಱನಾಯಕಂ ಸಿಗ್ಗಾಗಿ ಬಂದ ಬಟ್ಟೆಯನೆ ಮಗುಳ್ದು ಸಿರದೆ ಪೋದಂ; ಪೋಪುದುಂ ನೆರೆದ ನೆರ ವಿಯೆಲ್ಲಂ ತಮ್ಮೊಳಿಂತೆಂದರ್ ॥ ೧೨೪

ಸೆಟ್ಟಿಯ ಪೇೞ್ಕೆಯಿನೊಯ್ಯನೆ
ನೆಟ್ಟಗೆ ವೈಡೂರ್ಯರತ್ನಮಂ ತರ್ಪನನೆ ।
ಟ್ಟಿಟ್ಟ ಬಳನೆಂದು ಕಲ್ಲಿಂ
ದಿಟ್ಟು ಕುಕಿಲಾದ್ದರ್ ಬಱಿದೆ ನೋಡ ತಳಾಱಂ ॥ ೧೨೫

ಕೊಂಡಂ ಮುನ್ನೆಂದು ತಳಾಱನಾಯಕನ ಪೊಲ್ಲಮೆಯನೆಲ್ಲಂ ಭೋರೆಂದುಲಿಯುತ್ತುಂ ಪೋದರಿತ್ತಲ್ವಣಿಗ್ವಂಶತಿಲಕಂ ಮಾಯಾವಿಯ ನೇಕಾಂತಕ್ಕುಯ್ದು ಮೆಲ್ಲನಿಂತೆಂದಂ ॥ ೧೨೬

1 ದೇವೇಷ್ಯನುಮಂ (ಖ. ಕ.) ಸುವೈಷ್ಯನುಮಂ (ಗ)

ಕರಮಲ್ಲದೆಯ್ದೆ ನಿನ್ನಂ
ಪುರಮೆಲ್ಲಂ ಕೊಂಡು ಕೊನೆದು ದೇವಂ ದಿಟದಿಂ ।
ನಿರುತಮಿವನೆಂದು ಬಣ್ಣಿಸು
ತಿರೆ ಗುಣಮಂ ಬಿಟ್ಟು ಕೆಟ್ಟು ಪುರಿಯೊೞಾದ್ಯೈ ॥ ೧೭೭

ಬಿತ್ತಲ್ಲದದು ಫಲದೊಳಱಿಪಿತ್ತೆಂಬ ನಾಣ್ಣುಡಿಯಂತೆ ತಪದಿಂದಂ ಗುಣದಿಂದಂ ಪುರದೊಳ್ ಪಲವುದಿವಸಂ ಮೆಚ್ಚಾಗಿರ್ದಲ್ಲಿಯೆ ಬಂದುವೋದೈ; ಆನೆಯನೇಱಿರ್ದಲ್ಲಿಯೆ ಬೇರಂಟಿಯಾಯ್ದೈ; ನಿನ್ನಂ ಬಿಟ್ಟು ಪಾತಕರುಂ ವಿಶ್ವಾಸಘಾತಕರುಂ ಮಾಯಾವಿಗಳುಮಿಲ್ಲ; ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದೆಂಬಂತಿಲ್ಲಿಯ ಸುಖಮನೆ ಬಗೆದೆಯಲ್ಲದೆ ಮುಂಭವದೊಳಾದ ಮಹಾದುಃಖಮಂ ಬಗೆದೆಯಿಲ್ಲಂ. ಅನ್ಯಾಯದೊಳ್ಪಡೆದರ್ಥಂ ನಡುನೀರೊಳಿಕ್ಕಿದೊಡಂ ಕಿಡುಗುಮೆನ್ನ ಮುನ್ನ ಮಾಡಿದ ಸುಪಾತ್ರದಾನದ ಫಲದಿಂ ದೊರೆಕೊಂಡುದೀ ಮಹಾನರ್ಘ್ಯರತ್ನಂ; ಕುತ್ಸಿತನಪ್ಪೀನಿನಗೆನಿತಾಪತ್ತುವಟ್ಟೊಡಂ ದುಃಖಮೆ ಕೈಸಾರ್ಗುಮಲ್ಲದೆ ರತ್ನಂ ಕೈಸಾರಲಱಿಯದು; ಎಲ್ಲೆಡೆಯೊಳಂ ಪಕ್ಷಮಿಲ್ಲದೊಂದೆ ಮಾರ್ಗದಿಂದೆಱಗಿ ಮೞೆ ಸುರಿದೊಡಂ ನೀರ್ ಪುಣ್ಯಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೊಱೆಕೆಱೆಭಾವಿಗಳೊಳ್ ತೀವುವಂತೆ ಸಕಲವಸ್ತುಗಳುಂ ತೆರಳ್ದು ನಿರ್ಭಾಗ್ಯರಂ ಬಿಟ್ಟು ಪುಣ್ಯಾಧಿಕರೊಳ್ ನೆರೆಗುಮಂತು ತೊಱೆಕೆಱೆಭಾವಿಯ ನೀರೆಲ್ಲಂ ಕಾಲಕ್ರಮದಿಂ ಸಾರ್ದು ಸಮುದ್ರದೊಳ್ಕೂಡುವಂತೆ ಅಲ್ಪಪುಣ್ಯರ ವಸ್ತುಗಳುಂ ತೆರಳ್ದು ಮಹಾಪುಣ್ಯಾಧಿಕರೊಳ್ನೆಲಸುಗುಮದುಕಾರಣದಿಂ ॥ ೧೭೮

ಸಾವುದನೆ ಮಾಡಿಕೊಂಡೈ
ಕೇವಲಪರಮಾಣಿಯಲ್ಲಿ ಭಾವಿಸಿ ಕೇಡಾಂ [1] ।
ಶ್ರಾವಕನಪ್ಪುದಱಿಂದಂ
ಕೀವಿಲಿ ನಿನಗೊಂದು ಕಂಟಕಂ ಪೋಯ್ತೀಗಳ್ ॥ ೧೭೯

---

1 ಕೇವಲದವಮಾಳೆಯಲ್ಲಯಿಃನಿಸಾನ್ಯಂನಾಂ (ಬ. ಕ.)

ಆನಱಿಯುದೊಡಿಂತಕ್ಕಟ
ನೀನಾ ನಿಷ್ಠುರನ ಕೆಯ್ಯೊಳರಡಿಲ್ಲದೆ ಪೇ ।
ರಾನೆಯ ಬಾರಿಗೆ ಬಿದಿರ್ಕೆ
ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪೈ ॥ ೧೩೦

ಈರೂಪಂ ಧರಿಯಿಸಿ ಸಂ
ಸಾರಮನದಟಲೆದು ಮುಕ್ತಿವಡೆಯದೆ ಮಾಯಾ ।
ಧಾರಿ ಗುಣಹಾರಿ ರೌರವ
ವಾರಿಧಿಯೊಳ್ನಲಸಿ ನಿಲ್ವ ಬಗೆಯನೆ ಬಗೆದೈ ॥ ೧೩೧

ಈರತ್ನವೆಂಬುದೆಂತುಟು
ವೀರಜಿನಸ್ಮರಣೆಯಿಂದೆ ಮುಕ್ತಿಸುಖಂ ಕೈ ।
ಸಾರುಗು ಮೆಂದೊಡೆ ಗುಣದಿಂ
ಧಾರಿಣಿಯೊಳ್ ಗಹನಮುಂಟೆ ಮತ್ತಿನ ಸಿರಿಗಳ್ ॥ ೧೩೨

ಮತ್ತಂ "ಕಳ್ಳನೊಕ್ಕಲಾದುದಿಲ್ಲ ನಾಯಿ ಜಂಗುಳಿಯಾದುದಿಲ್ಲ" ಎಂಬ ನಾಣ್ನುಡಿಯನಱಿದೆಯಿಲ್ಲಕ್ಕುಂ; ಪುಣ್ಯಮಿಲ್ಲದೆ ಬೆವಸಾಯದಿಂ [1] ಸಿರಿಯಕ್ಕುಮೆಂದೆಯಪ್ಪೊಡೆ ನೆತ್ತಿ ತಱಿಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಸಿರಿಯೇಕಾಗದು ನಡೆದೊಡೆ ತಡತಡಿಸುವ ಕುಳ್ಳಪೊರ್ದೇರೊರ್ಪರಂ ಮಲಂಗುವ ಕಟ್ಟಲ ಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗಣ್ಮಿ ಪೊಣ್ಮುವುದದುಕಾರಣದಿಂ ಸಿರಿಗಂ ಸೌಭಾಗ್ಯಕ್ಕಂ [ಶಾಶ್ವತಮಪ್ಪ ಸುಖಕ್ಕಂ] ಜಿನಪೂಜೆಯುಂ ಸುಪಾತ್ರದಾನಮುಂ ವಿಷಯಕಷಾಯನಿಗ್ರಹಮುಂ ಮಿಥ್ಯಾತ್ವಭೀತಿಯುಂ ಜೀವದಯೆಯುಂ ಮುಖ್ಯಂ ॥ ೧೩೩

ಶರಧಿಯ ನೀರಂ ನದಿಗಳ್
ಧರಿಯಿಸಲಾರ್ತಪುವೆ ತೊಱೆಯ ನೀರಂ ಕೆರೆಗಳ್ ।
ಧರಿಯಿಸಲಾರ್ಕುಮೆ ಭಾವಿಗ
ಳರಿದೆನಿಸುವ ತೊಱೆಯ ನೀರ್ಗಳಂ ತಾಳ್ದುಗುಮೇ ॥ ೧೩೪

1 ಅದಱಿಂದಂ ಕಳವಿಂದಂ (ಬ. ಕ.)

ಅಂತೆ ಮಹಾಪುಣ್ಯಾಧಿಕರ್ ತಾಳ್ದುವ ಸಿರಿಯುಂ ಪುಣ್ಯಹೀನರಪ್ಪ ವರೇಸುಮನಂಕುದಿದುಂ ಮಱುಗಿಯುಂ ತಾಳಲಾಱರದು ಕಾರಣಂ ॥

ಧರ್ಮಮು ನೆರಪುವುದುಂ ತ
ದ್ಧರ್ಮದಿನೆಲ್ಲಾಸುಖಂಗಳುಂ ಸಮನಿಸುಗುಂ ।
ಧರ್ಮಮನೇಳಿಸಿ ಬಿಟ್ಟೊಡೆ
ಕರ್ಮದಿ ನೆವನೆವದಿನಡಸುಗುಂ ಕಡುದುಃಖಂ । ೧೩೬

[ಲಲನೆಯುರೊಲ್ಲದೊಡಂ ಸಿರಿ
ತೊಲಗಿದೊಡಂ ಪೋಗದಟ್ಟ ಕುತ್ತಂ ತನ್ನೊಳ್ ।
ನೆಲಸಿದೊಡಮೆಂತು ಮುನ್ನಿನ
ಕೊಲೆಯುಲೆದಪುದೆಂದು ಮಱುಗುವವರಂ ಕಾಣಾ ॥ ೧೩೭

ವನಿತೆಯ ಮೋಹದಿಂ ಸುತರ ಮೋಹದಿನಿಷ್ಟರೊಳಾದ ಮೋಹದಿಂ
ಧನಮನುಪಾರ್ಜಿಸಲ್ಮಱುಗುವಂ ಕಳವಿಂ ಧನಲಾಭಮಾದೊಡಾ
ವನಿತೆಯುಮಿಷ್ಟರುಂ ಸುತರುಮುಣ್ಬೆಡೆಯೊಳ್ ಪುದುಗಳ್ಪನೆಂದು ಭೋಂ
ಕನೆ ಕಡಿದಿಕ್ಕೆ ಪೆರ್ದೆಸೆಯೊಳಲ್ಲಿದವರ್ಪುದುಮಾಗಳಾರ್ಪರೇ ॥ ೧೩೮

ಆದಱಿಂ ಪೆಱರ್ಪೆಱರೆ ತಾಂ ತನಗೆಂದು ನಡುಗಿ ಪಾಪಭೀರುವಪ್ಪುದುಂ ॥ ೧೩೯

ಕಡುಗಾಯ್ದು ಪಾರೆಯೆಂತುಂ
ಸುಡಲಱಿಯದು ಸತ್ಯಮುಳ್ಳನಂ ಪುಸಿಪವನಂ ।
ಸುಡುವುದದಱಿಂದೆ ಸತ್ಯಮ
ನುಡಿವನೆ ಸುಖಿ ಕೇಳ ದುಃಖಿ ತಾಂ ಪುಸಿವಾತಂ ॥ ೧೪೦

ಅದು ಕಾರಣದಿಂ ಅಸತ್ಯಮೆ ದುಃಖಕ್ಕೆ ಕಾರಣಮೆಂದು ನಂಬಿ ಪುಸಿಯುಂ ಬಿಡುವುದು ॥ ೧೪೧

ಅರವರಿಸದೆ ಪಲರುಂ ಪಾ
ದರಿಗನಿವಂ ಕಷ್ಟನೆಂದು ಕುಱಿಯುಂ ಕೊಲ್ವಂ |
ತಿರೆ ಕೊಂದು ಪೊಲೆಯರಿಂ ಚಿ
ಚ್ಚರಮೆಟೆಸುವರಟ್ಟೆ ದೂಱುವರ್ಪರ್ವಾಡಿಯೊಳ್ ॥ ೧೪೨

ಅದುಕಾರಣದಿಂದಂ ಮಹಾದುಃಖಕ್ಕೆ ಪಾರದಾರನೆ ಮೊದಲೆಂದು ಬೆರ್ಚಿ ಪರಸ್ತ್ರೀಯರಂ ತಾಯುಂ ಕಾಣ್ಬಂತೆ ಕಾಣ್ಬುದು ॥ ೧೪೩

ಜಿನಪತಿಯುಂ ಪೂಜಿಸದೊ
ಯ್ಯನೆ ಪಂಚಾಣುವ್ರತಂಗಳಂ ತಾಳ್ದದೆ ಕೇಂ |
ಮನೆ ದೇವಲೋಕಸುಖಮಂ
ಮನದೊಳ್ ಪಂಬಲಿಸಿ ಮಱುಗಲೇಂ ಸಮನಿಕುಮೋ ॥ ೧೪೪

ಎನಗೆ ಸುಖಮಾಗವೇಟ್ಕೆಂ
ದನವರತಂ ಬಯಸುತಿರ್ಪ ಮನುಜಂ ಜಿನನಾ |
ಥನನರ್ಚಿಸುವುದು ಮನದೊಳ್
ಜನಪದಮಂ ನೆನೆಯುತಿರ್ಪುದಿರುಳುಂ ಪಗಲುಂ ॥ ೧೪೫

ಜಿನರಂ ಪೂಜಿಸಿದವರೇಂ
ದ್ರನ ಸುಖಮಂ ಖೇಚರೇಂದ್ರನತ್ಯುನ್ನತಿಯುಂ |
ಮನುಜೇಂದ್ರನ ವಿಭವಮನಾ
ವನಾದೊಡಂ ಬಯಸಿ ಮಱುಗಿದೊಡೆ ಕೊಂಡಪುದೇ ॥ ೧೪೬

ಮದದಾನೆಯನೇಱಿ ಮನೋ
ಮುದದಿಂ ಚಾಮರಮನಿಕ್ಕೆ ದಿವ್ಯಾಂಗನೆಯು |
ರ್ವಿದಿತಂ ಬರ್ಪುದನೊಲ್ವೊಡೆ
ಮದನಾರಿಯ ಪಾದಪದ್ಮಮಂ ನೆನೆ ಮನದೊಳ್ ॥ ೧೪೭

ದಾನಚತುಷ್ಟಯಮಂ ಮನ
ದಾನಂದಂಬೆರಸು ಮಾಡದಳಿಪಿಂ ಸುಖಮಂ ।
ಹೀನಬಲಯುಸುತ್ತುಮಿರ್ಪಂ
ತೀನಾಸುಖಮಿದಿರೊಳಿರ್ದ ಕೌಗಿಲ್ಗಯು ಜೇನೇಂ ॥ ೧೪೮

ಮನವೊಸೆದನ್ನಮನುತ್ತಮ
ನೆನಿಸುವ ಜಿನಮುನಿಗೆ ಕುಡದೆ ಬಯಸಿ ಜಿನೇಂದ್ರಾ ।
ರ್ಚನೆಯಂ ಮಾಡದೆ ಸುಖಮಂ
ಮನದೊಳ್ ಬಯಸಿದೊಡೆ ಕೂಡಲಱಿಗುಮೆ ಧರೆಯೊಳ್ ॥ ೧೪೯

ಶೀಲವ್ರತಮಂ ತಾಳ್ದದೆ
ಮೇಲೆನಿಸುವ ಪಾತ್ರದಾನಮಂ ಮಾಡದೆ ಸ ।
ಲ್ಲೀಲೆಯಿನಿಂದ್ರನ ಸಿರಿಯಂ
ಪಾಲಿಸಲೆಲೆ ಮರುಳ ಬಾರದವನೀತಳದೊಳ್ ॥ ೧೫೦

ಜಳನಿಧಿಪರಿವೃತಧಾತ್ರೀ
ತಳಮಂ ಬೆಸಕೈಸಿಕೊಳ್ವೊಡಂ ಕಪ್ಪುರದಂ ।
ಬುಲಮಂ ಮೋಣದೆ ಮೆಲ್ವೊಡ
ಮಳಿಪಿಲ್ಲದೆ ಪೂಜಿಸಿಂದ್ರವಂದ್ಯನ ಪದಮಂ ॥ ೧೫೧

ಸ್ಮರಸುಖಮಂ ಸಲಿಸುವ ಸೌಂ
ದರಿಯರೊಳೊಡಗೂಡಿ ಲೀಲೆಯಿಂದಿರ್ಪೊಡಮಂ ।
ಬರಚರರಾಜ್ಯಶ್ರೀಯಂ
ಧರಿಯಿಸುವೊಡಮಲಸದರ್ಚಿಸರ್ಹತ್ಪದಮಂ ॥ ೧೫೨

ಎಂದುಂ ದುಃಖಮನಱಿಯದೆ
ನಂದನರೊಳ್ ಸಕಲಮಿತ್ರರೊಳ್ ಬಾಂಧವರೊಳ್ ।
ತಂದೆಯೊಳಿಚ್ಛೆಯೊಳೊಡನೋ
ತೊಂದಿರ್ಪೊಡೆ ಪೂಜಿಸಾಗಳುಂ ಜಿನಪದಮಂ ॥ ೧೫೩

ಮಲಯಜಮಂ ಪೂಸಿ ತಳ
ತ್ತಳಿಸುವ ಚೆಂಬೊನ್ನ ರತ್ನದಾಭರಣಮನು ।
ಜ್ಜ್ವಳಮಾಗೆ ತೊಟ್ಟು ಸುಖಮಿರ
ಲೆಳಸುವೊಡಂತನ್ನದಾನಮಂ ಮಾಡೊಳ್ಪಂ ॥ ೧೫೪

ಚೀನಮಹಾಚೀನಂಗಳ
ನಾನಂದದಿನುಟ್ಟು ಪೂಸಿ ಪೊಸಕತ್ತುರಿಯಂ ।
ಮಾನವರೊಳಧಿಕಮೆನಿಸುವೊ
ಡಾನಂದದಿನೊಸೆದು ಪೂಜಿಸರ್ಹತ್ಪದಮಂ ॥ ೧೫೫

ತನ್ನಂ ತಪದಿಂ ನೋಯಿಸ
ದುನ್ನತಿಯಂ ದಿವ್ಯಭೋಗಮಂ ಬಯಸುವ ಗಾಂ ।
ಪಂ ನೆಱೆ ಪೋಲ್ಕಿಂ ಸಾಲಿಸ
ದಿನ್ನಳಪಿಂ ಬಡ್ಡಿವೇಡಿ ಮಱುಗುವ ಮರುಳಂ ॥ ೧೫೬

ಜಿನಮತಮಂ ಪೊರ್ದದೆ ಜಿನ
ಮುನಿಗನ್ನಮನಿಕ್ಕಿ ಧವಳಜೈನಾಗಮಮಂ ।
ಮನದೊಳ್ ನಂಬದೆ ದೇವೇ
ಶನ ಚಕ್ರೇಶ್ವರನ ಸಿರಿಗೆ ಮಱುಗಿದೊಡುಂಟೇ ] ॥ ೧೫೭

ತರುಣಿಯರಿಕ್ಕೆ ಚಾಮರಮನಿರ್ಕೆಲದೊಳ್ ಕಡುಶೋಭೆವೆತ್ತು ಕು
ಳ್ಳಿರೆ ನೃಪರುಂ ಮನೋಹರೆಯರುಂ ಬುಧರುಂ ಭಟರುಂ ಕುಮಾರರುಂ
ಬಿರುದರುಮರ್ತಿಯಿಂ ಬಿಡದೆ ಕಟ್ಟೆಗಾಱರ್ ಘೇಯುಘೇಯೆನು
ತ್ತಿರೆ ನೃಪಲೀಲೆಯಂ ಪಡೆವೆನೆಂಬೊಡೆ ಪೊರ್ದು ಜಿನೇಂದ್ರಧರ್ಮಮಂ ॥

ಸುರುಚಿರಮಪ್ಪ ರತ್ನಚಯದಿಂದೆಸೆದೊಪ್ಪುವ ದಿವ್ಯಸಿಂಹವಿ
ಷ್ಟರದೊಳಗುರ್ವಿನಿಂ ನೆಲೆಸಿ ರಾಜಕುಮಾರರ ಮೇಲೆ ನೀಡಿ ಕೈ

ಯೆರಡುಮನಕ್ಕಱಿಂ ಮನಕೆ ಬಂದ ವಿದಗ್ಧೆಯರೊಂದುರೂಪಿನ
ಚ್ಚರಿಯುಮನ್[1] ನೋಡುತಿರ್ಪ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮ
ಮಂ ॥ ೧೫೯

ಕರಿಸಿಕುರಂಬದಿಂ ಹಯನಿಕಾಯದಿನುದ್ಭಟಕೋಟಿಯಿಂ ನೆಲಂ
ಬಿರಿಪಿನಮೊತ್ತಲುಂ ನೆರೆದು ನಂದನದಂತಿರೆ ಛತ್ರರಾಜಿ ತ
ಳ್ತಿರೆ ಲವಣಾಬ್ಧಿಯಂತೆ ಪಡೆ ಘೂರ್ಣಿಸೆ ವಾಸವನಂತೆ ರಾಗದಿಂ
ಸ್ಥಿರತರಮಪ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ॥

ಇನಿಯಳ ಮೇಲೆ ಕಾಮಸುಖಮಂ ಕೊಳಲೆಂದು ಮಲಂಗಿ ಮೆಲ್ಲನಾ
ನನವನಜಾತಮಂ ಕುರುಳಪಂಕ್ತಿಗಳಂ ಪೊಳೆವಕ್ಷಿಯುಗ್ಮಮಂ
ಕನಕಘಟೋಪಮಸ್ತನಯುಗಂಗಳನೀಕ್ಷಿಸುತುಂ ವಿನೋದದಿಂ
ಮನಮೊಸೆದಿರ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮ
ಮಂ ॥ ೧೬೧

ಪವಪಿಸೊಳೇಱುವೆಂ ಸುರಗಜೇಂದ್ರಮನಿರ್ಪೆನನಂತಸೌಖ್ಯದೊ
ಳ್ಪಿದಿದಮರಾವಳೀಪುರದೊಳಾದರದಿಂ ಬೆಸಕೈಸಿಕೊಳ್ವೆನೊ
ಪೊರ್ದಲೊಳ್ ದೇವಸಂಕುಲಮನುರ್ವಶಿಯೊಳ್ನೆರೆವೆಂ ದಿನಕ್ಕೆ ನಾಂ
ವೊವಲಿಗನಪ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮಮಂ ॥

ಬಿಡನೆ ಸುರಾಳಿ ದೇವ ಬೆಸನಾವುದು ಜೀಯ ಮಹಾಪ್ರಸಾದ ನಿ
ಮ್ಮಡಿ ಬೆಸಸೆಂದು ಮುಂದಿರೆ ಸುರಾಂಗನೆಯರ್ಚಪಳಾಕ್ಷಿಯರ್ಮನಂ
ಬಿಡೆ ಮೃದುವಪ್ಪ ಮುದ್ದುನುಡಿಯಿಂ ಸ್ಮರರಾಜನ ಬಯ್ಕೆಯರ್ಥಮಂ
ಕುಡೆ ಸುಖಮಿರ್ಪೆನೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮ
ಮಂ ॥ ೧೬೩

ಸುರಕುಜಮಾಗಳುಂ ಬಗೆದ ವಸ್ತುವನೀಯೆ ಮರುನ್ನಿಕಾಯಮೊ
ಪ್ಪಿರೆ ನಲಿದಾಗಳುಂ ಬಿಡದೆ ಪೊರ್ದಿ ಮರುಲ್ಲಲಿತಾಂಗಿಯರ್ನಿಜಾ
ದರದೊಳ್ ಮೆಚ್ಚುವಿಚ್ಚೆಗಳನಚ್ಚರಿಯಾಗಿರೆ ಕೂಡಿ ಭೋಗಿಪಂ
ನಿರುತಮಮೋಘಮೆಂಬ ಮನಮುಳ್ಳೊಡೆ ಪೊರ್ದು ಜಿನೇಂದ್ರಧರ್ಮ
ಮಂ ॥ ೧೬೪

---

1 ರೂಪನಚ್ಚರಿವಡೆ (ಕ. ಖ.)

ತನುಸೋಂಕಿಂ ಸೋಂಕಿ ಸೋಲಂಬೆರಸು ಪರಕಟಾಕ್ಷಂಗಳಿಂ ನೋಡಿ ಮೋಹಂ
ಮನದೊಳ್ಕೈಗಣ್ತೆ ಕೈಯಂ ಪಿಡಿದು ನೊಸಲಮೇಲಿಟ್ಟುಕೊಂಡಕ್ಕರಿಂ ಚೆಲ್ವನೆ
ಜೋಲ್ದಂತಪ್ಪಿಕೊಂಡೊಯ್ಯನೆ ಸುರತದೊಳಾಹ್ಲಾದಮಂ ಮಾಳ್ಪ ದೇವಾಂ
ಗನೆಯರ್ಗಿನ್ನಣ್ಣ ನೀನಾಟಿಸುವೊಡೆ ಜಿನನಂ ಪೂಜಿಸುತ್ಸಾಹದಿಂದಂ ॥

ಮತ್ತಂ ಚಂದನಕಾಶ್ಮೀರಕರ್ಪೂರಾದಿಸುಗಂಧದ್ರವ್ಯಂಗಳಂ ಪೂಸುವೆನೆಂಬ ಚಿತ್ತಮುಳ್ಳೊಡಂ, ಚೀನಮಹಾಚೀನದುಕೂಲಾದಿವಸ್ತ್ರಂಗಳನುಡುವೆನೆಂಬ ಮನಮುಳ್ಳೊಡಂ, ಹಾರಕೇಯೂರಕಟಕಕಟಿಸೂತ್ರಕುಂಡಲರತ್ನಮುದ್ರಿಕಾಮಕುಟಾದ್ಯಾಭರಣಂಗಳಂ ತುಡುವೆನೆಂಬ ಮೋಹಮುಳ್ಳೊಡಂ, ಕಲ್ಯಾಣಕರಾಮೃತಾಹಾರಂಗಳನಾರೋಗಿಸುವೆನೆಂಬಬಯಕೆಯುಳ್ಳೊಡಂ, ಮೃದುಶಯ್ಯಾತಲದೊಳೊಱಗುವೆನೆಂಬಿಚ್ಛೆಯುಳ್ಳೊಡಂ, ಭೋಗೋಪಭೋಗಂಗಳನನವರತಮನುಭವಿಸುವೆನೆಂಬ ಬಗೆಯುಳ್ಳೊಡಂ, ಅರ್ಹಚ್ಚರಣಂಗಳಂ ಮನದರ್ತಿಯಿಂ ಪೂಜಿಸಲುಂ ಸಕಲಶಾಸ್ತ್ರದಾನಮನುತ್ಸಾಹದಿಂ ಮಾಡಲುಂ ಸುಪಾತ್ರಕನ್ನಮನಲಸದೀಯಲುಂ ಚಾತುರ್ವರ್ಣ್ಯಕ್ಕೆ ರೋಗಾಪಹಾರಾರ್ಥಮೌಷಧದಾನಮಂ ಮಾಡಲುಂ ಸಮಸ್ತಜೀವರಾಶಿಗಳ್ಗಭಯದಾನಮನೇಳದಂಗೆಯ್ಯದೆ ಮಾಡಲುಂ ಸುಖಮನೆಯ್ದುಗುಮಲ್ಲದೆನಿಸು [1] ಕುದಿದೊಡಂ ಕಳ್ದೊಡಂ ನೆಲನಂ ಪೊಕ್ಕೊಡಂ [2] ಭೈರಮಂ ಬೈದೊಡಂ [ಬಾಯಂ ಬಿಟ್ಟೊಡಂ] ಬಡಿದುಕೊಂಡೊಡಂ ದ್ರವ್ಯಮುಳ್ಳರಂ ಪೊರ್ದಿದೊಡಂ ಕಮ್ಮರಿವಾಯ್ದೊಡಂ ಮೊಱೆಯಿಟ್ಟೊಡಂ [3] ದೊರೆಕೊಳ್ಳದು ॥ ೧೬೬

1 ಕುಲುವುದಲುವುದಲ್ಲದಂತು ಸುಖಮನಿಸು (ಕ. ಖ.)

2 ಪೊಳಲುಬಿಟ್ಟೊಡಂ, ಪಲವು ದೈವಕ್ಕೆ ಪರಸಿದೊಡಂ, ತನ್ನನಿಕ್ಕಿದೊಡಂ, ನಂಟರ ಸಂತೋಷ ತಿರಿದು ಕೊಂಡೊಡಂ ರಣಮೆಯ್ಯಿಱಿದೊಡಂ ಬಿಡುಮಂ ಬಯ್ದೊಡಂ ತಲೆಯನೊಱಿದೊಡಂ ಬಾಯಂ ಬಿಟ್ಟೊಡಂ (ಗ)

3 ಬಂದಿವಿಡಿದಡಂ ಪೌರಿಟ್ಟಡಂ ಬೇವ ಕಿಚ್ಚಿನೊಳುಬಿದ್ದಡಂ ಕೂಗಿಟ್ಟೊಡಮೆಂತುಂ (ಗ.

ಅದುಕಾರಣದಿಂ ಸುಖದೊಳ್
ಪವುಳಂ ನೆಲಸಿರ್ಪನೆಂಬ ಮನಮುಳ್ಳೊಡೆ ಮಾ |
ಳ್ಪುದು ದಾನಪೂಜೆಯೆಂಬುದ
ನೊದವಿದ ಮನದೆಱಕದಿಂದಮೋರಂತಱಿವಂ || ೧೬೭

ಕೆಮ್ಮನೆ ಪಾಪಹೇತುಗಳೊಳ್ತೊಡರ್ದು ಪರತ್ರೆಯೊಳ್ ಸುಖಮಂ ಬಯಸುವಾತಂ ಜೋಳಮಂ ಬಿತ್ತಿ ಕಳವೆಯುಂ ಬಯಸುವೆಗ್ಗನುಮಂ ಬೇವಿನಾರವೆಯುನಿಟ್ಟು ಮಾವಿನ ಪಣ್ಣನಱಸುವ ಗಾವಿಲನುಮಂ ಕೋಣನಂ ಪೊರೆದು ಪಾಲನಱಸುವ ಗಾಂಪನುಮಂ ಬಿಡದುಯ್ಯಂ ಕುಟ್ಟಿ ಪದೆದಕ್ಕಿಯನಱಸುವ ಬೆಳ್ಪನುಮಂ ಮಳಲಂ ಪಿೞಿದೆಣ್ಣೆಯನಱಸುವ ನಿರ್ಬುದ್ಧಿಯುಮಂ ಪೋಲ್ಕುಮಿಂತು || ೧೬೮

ಪಡೆವಂ ಮೋಕ್ಷಮನೆಂಬೊಡೆ
ಕಡೆಗಣಿಸದೆ ಮಾಡು ಧರ್ಮಮಂ ದೂತಿ[illegible]ಂದಂ |
ಬಡಿದುಂ ಬೈದುಂ ಕಳ್ದುಂ
[illegible]ಡೆವಂತಿರೆ ಮುಕ್ತಿ ಮರುಳ ಬಡವನ ಧನಮೇ || ೧೬೯

ಜಿನಪತಿಗೆಱಗದೆ ಬಲ್ಲಾ
ಳ್ತನದಿಂದಂ ಮಾಡಿಕೊಳ್ವೆನೆಂಬೊಡೆ ಸುಖಮಂ |
ತನಗದು ಮೊಗ್ಗಾದುದೆ ಮಾ
ವಿನ ಪಣ್ಣೆೞಂ ದೋೞಟಯಿಕ್ಕಿ ತೆಗೆವಂತೆ ಸುಖಂ || ೧೭೦

ಒಲವಿಂ ಪಾತ್ರಕ್ಕನ್ನಮ
ನಲಸದೆ ಕುಡದದಟನಾಗಿ ಪಡೆವಂತೆ ಸುಖಂ |
ಸಲೆ ಮೊಗ್ಗಾದುದೆ ಭಾವಿಪ್ಪೊ
ಡೆಲೆಗಳ ನುರ್ಚಂಗೆ ಕೊಳ್ವ ತುಂಬೆಯ [1] ಬಾಡೇ || ೧೭೧

---

1 ತುಂಬಿಯು (ಗ)

ಜಿನಪತಿಗೆಱಗದೆ ಮುನಿಗ
ಳ್ಗನವರತಂ ಭಕ್ತಿವೆರಸು ಬೆಸಕೆಯ್ಯದೆ ಕಂ ।
ಪನೆ ತೊನೆದು ಪೂಣ್ದರಸಾ
ಳ್ತನದಿಂ ಪುಗುವಂತು ದೇವಗತಿ ಪೊಲ್ಮನೆಯೇ ॥ ೧೭೨

ಎನಿತುತಾಳಪರನನೇಱಿದೊಡಂ ತಳೆಗೆ ಕಾಲ್ಗಳಗೆಂಬಂತೆ ಧರ್ಮದರಿದ್ರಂಗವನಿಸು ಕುದಿದೊಡಂ ದುಃಖಮುಕ್ಕುಮಲ್ಲದೆ ಸುಖ ಮಾಗಲಱಿಯದು ॥ ೧೭೩

ಪರಮಜಿನೇಶ್ವರರಂ ಮುನಿ
ವರರಂ ಪೂಜಿಸದೆ ಬಿಟ್ಟು ಕಳನಂ ಪುಗುವಂ ।
ತಿರೆ ವೀರವೃತ್ತಿಯಿಂದಂ
ಸುರಲೋಕಮನಣ್ಣ ರಂಡೆಯಾಳ್ದಪಳಲ್ಲಳ್ ॥ ೧೭೪

ಮತ್ತಂ ಕರ್ಮಫಲಮಂ ಪೇಲ್ವೊಡೆ, ಕರಟದ ಕದಿರಂತೆ ತಿರ್ಯಗ್ಗಾತಿಯೊಳ್ ತಿಜ್ಜನೆ ತಿರಿದುಂ, ಕಡಗೋಲಂತೆ ಸುಖಾಸುಖಂಗಳಂ ಸೂಱೆಗೊಳ್ಳುತೊಳ್ಮನುಷ್ಯಭವದೊಳಾಂದುಂ, ಕೆರಕಂ ತುಱಿಸುವಂತೆತ್ತಾನುಮೊರ್ಮೆ ರಾಜ್ಯಲೀಲೆಯೊಳಿರ್ದುಂ, ತಿರಿದುಂಬರಂತೆ ಪಲವುಭವಕೊರ್ಮೆ ಕರ್ಮೋಪಶಮದಿಂ ದೇವಲೋಕದೊಳಾದ ಸುಖಮನನುಭವಿಸಿಯುಂ, ಗಾಣದೊಳಿಕ್ಕಿದ ಕಬ್ಬಿನಂತೆ ನರಕದೊಳ್ ದುಃಖಂಬಟ್ಟುಂ, ಬೇಸಗೆಯ ಬಿಸಿಲ್ಗಂಜಿ ಬೆಯ್ವ ಮರನಂ ಪೊರ್ದುವಂತಾನುಂ ಕರಡಿಗಂಜಿ ಪುಲಿಯ ಗುಹೆಯುಂ ಪುಗುವಂತಾನುಂ ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯುಂ ನೆಕ್ಕುವಂತಾನುಂ ಕಳ್ಳಂಗಂಜಿ ಬೇಡವಳ್ಳಿಯುಂ ಪುಗುವಂತಾನುಂ ತೇಟಿಂಗಂಜಿ ಕಡಂದುಱುಗೂಡುಂ ಪುಗುವಂತಾನು ಪುಲಿಗಂಜಿ ಪುತ್ತವೇಱುವಂತಾನುಂ [ರಕ್ಕಸಿಗಂಜಿ ನೆಗಱುಳ್ಳ ಮಡುವಂ ಪುಗುವಂತಾನುಂ] ಸಂಸಾರದೊಳಾದ ಬಡತನದ ಕುತ್ತದ ತಿರಿಗುತ್ತುವ ರಾಜಬಾಧೆಯ ನಂಟರ್ಗಳ್ಕೆಯ [ತೆಱೆಯ ಪೊಱೆಯ] ಸೀತದ ವಾತದ ಬಿಸಿಲ ಕಳ್ಳರ ಬಂದಿಕಾಱರ ಪಿಸುಣರ ಧೂರ್ತರ ದೆಸೆ

ಯಿಂದಪ್ಪ ಪೀಡೆಯು ಸಾವಿನ ನೋವಿನ ಧನದಪಹರಣದ ಪೆಂಡಿರೊಳ್ಮೆಯು ಪುರುಡಿನ ಪಸಿವಿನ ಮುಪ್ಪಿನ ಪಿರಿದಪ್ಪಪಮಾನದ ಮಹಾದುಃಖಮಂ ಕಂಡು, ಮತ್ತುಂ ಮುಡಿಗೆ ಜೋಳಯು ತೆಲ್ಲಟಿಯೆಂಬ ನಾಱುರಿವುಂಕೆ ಪಾಪಮನೆ ಪೆರ್ಚಿಸಿ ಸತ್ತು ನರಕದೊಳಾದ ಮಹಾದುಃಖಮನುಂಡುಗ್ಗ್ನಗೆ ತಮ್ಮ ಶರೀರವೆಂಬ ಪುಳ್ಳಿಗಳನಿಕ್ಕುವರದೇಂ ಸಾಸಿಗರೋ ॥ ೧೭೫

ಪೊತ್ತಿದ ನತ್ತಿಗೆ ಕಾಣದೆ
ತುತ್ತಿಲ್ಲದೆ ಬಡಿಯೆ ಜಡಿಯೆ ಕಂಡವರೆಲ್ಲಂ ।
ಚಿತ್ತೋತ್ಸಾಹಂಗಿಡುವ
ರ್ಮತ್ತೆನಿಸದೆ ಜೈನಪೂಜೆಯಂ ಕಿಡಿಸಿದವರ್ ॥ ೧೭೬

ಕಯ್ಯೇೞದೆ ಕಾಲೇೞದೆ
ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟೋ ।
ರ್ಮೊಯ್ಯೆಂದೊಳಱುತ್ತಿರ್ಪರ್
ಚರ್ಯಾದಿಜಿನೇಂದ್ರಧರ್ಮಮಂ ಪೞಿದವರ್ಗಳ್ ॥ ೧೭೭

ಉಣಲಿಲ್ಲದೆ ಪಸಿವಿಂ ಬಂ
ಬಲಬಾಡಿ ಮಹಾಕ್ಷುಧಾಗ್ನಿಯಿಂದಂ ಪೆಱರಂ ।
ಗಣದೊಳ್ ಕುಳ್ಳಿರ್ಪರ್ಧಾ
ರಿಣಿಯೊಳ್ ಮುನ್ನನ್ನದಾನಮಂ ಕಿಡಿಸಿದವರ್ ॥ ೧೭೮

ಏಕಾಕ್ಷರಾಗಿ ಮೋಣದ
ನೇಕವ್ಯಾಧಿಗಳೊಳೊಂದಿತೊನ್ನಿಂದಂ ತ ।
ಮ್ಮಾಕಾರಂಗೆಟ್ಟು ಮಹಾ
ಶೋಕಾನ್ವಿತರಪ್ಪರಮಳಪೂಜೆಯನೞಿದರ್ ॥ ೧೭೯

ಮೊಂಟಾಗಿ ಕೈಗಳರಡುಂ
ಗೆಂಟಾಗಿರೆ ತನಗೆ ಸಿರಿಯು ಕೂೞುಂ ಕೊೞುಂ ।
ಕುಂಟಾಗಿ ನವೆಯುತಿರ್ಪರ್
ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ ॥ ೧೮೦

ಕುರುಡಾಗೆ ಕಣ್ಗಳೆರಡುಂ
ಚರಣಂಗಳ್ ಪಱಿದು ಬೀಳೆ ತೊನ್ನಿಂದಂ ಮೆಯ್ ।
ಕರಗಿ ಕಡುದುಃಖದಿಂದಂ
ತಿರಿವರ್ ದಾನಾಂತರಾಯಮಂ ಮಾಡಿದವರ್ ॥ ೧೮೧

ನುಡಿವೊಡೆ ನಾಲಗೆ ಪೊರಳದೆ
ಕಿಡುಗುಂ ನೆಱೆ ಮೂಗನಾಗಿ ನವೆಗುಂ ನಯಮಂ ।
ನುಡಿದೊಡಮದು ಕೇಳಕಕ್ಕಂ
ಜಡಿವರ್ ಅಱಿವಿನಂತರಾಯದ ಫಲದಿಂ ॥ ೧೮೨

[ಬಗೆದದು ಕೂಡದು ಕೂಡಿದ
ಬಗೆಯುಂ ಕಿಡುಗೇನನೆಂದೊಡಂ ಕಡುಗೆಟ್ಟಪಂ ।
ಜಗದೊಳವನೆಂದು ನೊಂಕುವ
ರಗಣಿತಶಾಸ್ತ್ರಾಂತರಾಯಕರ್ಮದ ಫಲದಿಂ ॥ ೧೮೩

ಸಿರಿಯೆಲ್ಲಂ ಮಂಜಿನವೋಲ್
ಕರಗುಗು ಕಡುದುಃಖವೊರ್ಮೆಗೊರ್ಮೆಗೆ ಕರಮು ।
ಬ್ಬರಮಕ್ಕಂ ತಿರಿದೊಡೆ ಕೂಟ್
ದೊರೆಕೊಳ್ಳದು ಪೂಜೆಯಂತರಾಯದ ಫಲದಿಂ ॥] ೧೮೪

ತರುವಲಿಯಾಗಿರ್ಪರ್ನಿ
ಷ್ಠುರದುಃಖಮನೆಯ್ದುವರ್ ದರಿದ್ರತೆಯಿಂದಂ ।
ಪಿರಿದಪ್ಪ ನೋವನೆಯ್ದುವ
ರೆರಡಿಲ್ಲದೆ ದಾನಧರ್ಮಮಂ ಕಳ್ದವರ್ಗಳ್ ॥ ೧೮೫

ಸ್ಮರತಾಪವೊದವೆ ಭೋಗಿಗಂ
ತಱಮಕ್ಕಂ ನೋಡೆ ಕಂಡರೆಲ್ಲಂ ಕಾಯ್ವರ್ ।
ತಿರಿದುಣ್ಬರ್ ಭವಭವದೊಳ್
ಕರಮಲ್ಲದೆ ಪೂಜೆಯರ್ಥಮಂ ಕಳ್ದವರ್ಗಳ್ ॥ ೧೮೬

ನಾಯಾಗಿ ಪುಟ್ಟಿತು ಕಂಡ
ಪೋರ್ ಯೆಂದಿಡೆ ಬೆಂದು ನೊಂದು ದುಃಖಾನಲನಿಂ ।
ಬಾಯಂ ಬಿಟ್ಟರದೆಲ್ಲಿಯು
ಮಾಯಾಸಂಬಡುವರಘಸಮನ್ವಿತರಪ್ಪರ್ ॥ ೧೯೭

ಮತ್ತಂ ಮಾಯಾವಿ ನಾಯಾಗಿಯುಂ ಮಹಾಮಾಯಾವಿ ಮೊಲನಾಗಿಯುಂ ಕೋಪಿ ಪುಲಿಯಾಗಿಯುಂ ಮಹಾಕೋಪಿ ಸಿಂಹನಾಗಿಯುಂ ಲೋಭಿಯೆಯ್ಯಾಗಿಯುಂ ಮಹಾಲೋಭಿ ಚಮರೀಮೃಗವಾಗಿಯುಂ ಮಾನಕಷಾಯಿ ಮಿಡಾನಾಗಿಯುಂ ಮಹಾಮಾನಕಷಾಯಿ ಪಾವಾಗಿಯುಂ [ರೌದ್ರಂ ಭೇರುಂಡನಾಗಿಯುಂ ಮಹಾರೌದ್ರಂ ಶರಭನಾಗಿಯುಂ ಗುಣದೂಷಕಂ ಪಂದಿಯಾಗಿಯುಂ ಕುಮಾರ್ಗಾನುರಾಗಿ ಕೋಣಯಾಗಿಯುಂ ಸದ್ಧರ್ಮದ್ವೇಷಿ ಪಲ್ಲಿಯಾಗಿಯುಂ ಜಾತಿಮದಮುಳ್ಳಂ ಬೆಕ್ಕಾಗಿಯುಂ ವಿದ್ಯಾಮದಮುಳ್ಳಂ ಗೂಗೆಯಾಗಿಯುಂ] ತಪೋಮದಮುಳ್ಳಂ ನಾಯಾಗಿಯುಂ ಶ್ರೀಮದಮುಳ್ಳಂ ಮೊಸಳೆಯಾಗಿಯುಂ ರೂಪಮದಮುಳ್ಳಂ ಕತ್ತೆಯಾಗಿಯುಂ ಆಜ್ಞಾಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ ಹಿಂಸಾನಂದಮುಳ್ಳಂ ಕುಟಿಯಾಗಿಯುಂ ಕಳವಿನೊಳ್ ವ್ಯಸನಮುಳ್ಳವನೆತ್ತಾಗಿಯುಂ ಪರವಧೂಪ್ರಿಯಚಿತ್ತಂ ಕುದುರೆಯಾಗಿಯುಂ ಸಪ್ತವ್ಯಸನೋಪೇತಂ ಸೀನಾರ್ಯಾಗಿಯುಂ ದುರ್ಗುಣಪಕ್ಷಪಾತಿ ಗಿಡುಗನಾಗಿಯುಂ ಪುಟ್ಟಿ ಪೇಟಿನ ಮೇಲೆ ಕರಡೆಯೆಂಬಂತೆ ಪಿರಿದಪ್ಪ ಪಾಪಮಂ ನೆರಪಿ ನರಕದೊಳ್ ಪುಟ್ಟಿ ಪಲಕಾಲಂ ಸೈರಿಸಲ್ಬಾರದ ಮಹಾದುಃಖಕ್ಕೆ ಭಾಜನರಪ್ಪರ್ ॥ ೧೯೮

[ಧುಟ್ಟಿಂದೆಣ್ಣೆಯೊಳಿಕ್ಕಿಯುಂ ತ್ವರಿತದಿಂ ಕೈಗಾಯದೋರೊರ್ವರಂ
ಗಿಟ್ಟಿಂದಾರ್ದಿದಿರಾಗಿ ಬಂದು ತಲೆ ಜೇಜೇಟೆ ಪೊಯ್ಯುಗ್ರದಿಂ
ಹಟ್ಟಿಂದೇಡಿಸಿ ರಕ್ತಮಂ ಕುಡಿದು ಪೆರ್ಗಂಡಂಗಳಂ ಸೂಸುತುಂ
ಗಟ್ಟಿಂದೊಮದೆ ತೇಗಿಯುಂ ಪಿಡಿಗಳಂ ಕುಂಟಾಗೆ ಕೊಯ್ದಂ ಖಳರ್॥

ಪೆರ್ಗಲ್ಲಿಂದದಪುತ್ತುಂ
ಕರ್ಗಲ್ಲಂ ನೆರಪಿ ತಂದು ಬರಿಯೆಲ್ವೆಲ್ಲಂ ।

ನುಗ್ಗಾಗಿ ಚಿಟಿಲ್ಚಿಟಿಲೆನೆ
ಕುಗ್ಗುತ್ತುಂ ನೆಲದೊಳೊರಸಿ ಮೇಲ್ಕುತ್ತುತ್ತುಂ ॥ ೧೯೦

ಕಿಱಿಕಿಱಿದಾಗಿರೆ ಕ್ರೂರಂ
ತಱಿದವನರಿದರಿದು ಕೊಳ್ಳಯಿಂದಂ ಮೊಗಮಂ ।
ನೆಱೆ ಚುರ್ಚುತ್ತುಂ ಬನ್ನಂ
ದಱುಗುಱಿಗಳ ನೆರವನಱಿದು ಪೋಗದೆ ಪೆಣೆವರ್ ॥ ೧೯೧

ಬಡಿಬಡಿ ತಿವಿತಿವಿ ಪೊಡೆಪೊಡೆ
ಕಡಿಕಡಿ ತಱಿತಱಿ ಕಡಂದುಱಂ ಪುಣ್ಣೊಳಗಿಂ ।
ಬಿಸುಬಿಸು ತಲೆಯಂ ತೂಂತಾ
ಗಡೆಯುಡೆ ಕೊಯ್ ಕೊಯ್ ಮಗುಳ್ಮಗುಳ್ಸೀಳೆರ್ದೆಯಂ ॥ ೧೯೨

ಅರಿಅರಿ ಪೊಯ್ ಪೊಯ್ ಸೀಳ್ಸೀಳ್
ಕರಿಘಟೆಯಿಂದಿಕ್ಕಿ ಮೆಟ್ಟಿಸವನೆರ್ದೆಯಂ ಸೀ ।
ಳ್ದುರಿಯೆಣ್ಣೆಯನೆಱೆಯೆಱೆ ತಲೆ
ಯರಿದೋವೆಂದೊಳಱಿ ಬೀಟೆ ಕಿಡೆನೂಂಕುರಿಯೊಳ್ ॥ ೧೯೩

ಎಂದು ನಾನಾಪ್ರಕಾರದಿಂ ನಾರಕರ್ದಂಡಿಸುವರೆಂ] ದಿಂತು ಕಿಱಿದರೊಳ್ ಧರ್ಮಾಧರ್ಮಂಗಳ ಫಲಮನಱಿಪುವುದುಂ ಮಾಯಾವಿಯುಪ್ಪಸೂರ್ಪಂ ಮುನ್ನಿನ ತನ್ನಾಡಿದಾಟಕ್ಕಂ ಬಳಿಕಿನ ಸೆಟ್ಟಿಯು ಮಾಡಿದ ಮಾಟಕ್ಕಂ ಮುನ್ನಿನ ಕರ್ಮದ ತೀವ್ರತೆಗಂ ಬಳಿಕಿನ ತನ್ನ ಮನದುಪಶಮಕ್ಕಂ ಮುನ್ನಿನ ತನ್ನ ಮನದ ಕಾಂಕ್ಷೆಗಂ ಬಳಿಕಿನ ತನ್ನ ನಿಷ್ಕಾಂಕ್ಷೆಗಂ ಮುನ್ನಿನ ತನ್ನ ಸಂಸಾರದೆಱಕಕ್ಕಂ ಬಳಿಕಿನ ತನ್ನ ಸಂಸಾರ ವಿರಕ್ತಿಗಂ ಬೆಱಗಾಗಿ ॥ ೧೯೪

ಅಳಿಪಿಂದೀರತ್ನಮನೊ
ಯ್ದಿಳೆಗೀಶಂಗಿತ್ತು ಸತ್ತು ನರಕಾರ್ಣವದೊಳ್ ।

ಸುೞಿಯದೆ ಬದುಕಿದೆನಿಂತಾಂ
ಕಳಬಂದುದು ಸಫಲಮಾಯ್ತು ಪುಣ್ಯೋದಯದಿಂ ॥ ೧೯೫

ನೋಂತರ್ಗೆ ಪುರಿದು ಬಿತ್ತಿದೊ
ಡಂ ತಡೆಯದೆ ಬೆಳಗುವೆಂಬ ನಾಣ್ಣುಡಿಯಂತೋ |
ರಂತೆ ಲಘುಕರ್ಮಿಯಪ್ಪಂ
ಗಂ ತತ್ಕ್ಷಣದಿಂ ಸುದರ್ಶನಂ ದೊರೆಕೊಳ್ಗುಂ ॥ ೧೯೬

ಆನೇಕೆ, ವೀರಕುಮಾರನಂ ಕಳವಿನ ಮಾತನಾಡುವುದೇಕೆ, ಚೋರಪ್ರಧಾನನೀರತ್ನಮಂ ಪೊಗೞ್ವುದೇಕೆ, ಕುಮಾರನವಕ್ಕೆ ಬಯಸಿ ತದ್ರತ್ನಮಂ ತಂದಂಗರ್ಧರಾಜ್ಯಮಂ ಕುಡುವನೆಂಬುದೇಕೆ, ನೃಪಸುತನ ಮಾತನೆಲ್ಲರುಮಿರ್ದಂತಾಂ ಕೈಕೊಳ್ವುದೇಕೆ, ಮಾಯಾತಪಮಂ ಪೊಣ್ಮುವುದೇಕೆ, ಮೆಲ್ಲನೆ ಕಳ್ದು ಕೊಂಡು ಪೋಪುದೇಕೆ, ಯಾತರಿಂ ಕಾಣ್ಬುದೇಕೆ, ನಾಂ ಭಯದಿಂದತ್ತಿತ್ತಲೋಡದೆ ಜಿನೇಂದ್ರಭಕ್ತನ ಬೀಡಂ ಬಂದು ಪುಗುವುದೇಕೆ, ಮತ್ತೀ ಮಹಾಪುರುಷನಿಂದಂ ಸದ್ಧರ್ಮಂ ದೊರೆಕೊಳ್ವುದೇಕೆ, ಪಾಪಿಪ್ಪೊಡಮಲ್ಲಂ ಜಿನೇಂದ್ರಭಕ್ತಸೆಟ್ಟಿಯ ಪ್ರಸಾದದಿಂ ದೊರೆಕೊಂಡುದೆಂತುಮುಪದೇಶಂಗೊಟ್ಟರ್ ಋಣಂಗೊಟ್ಟರೆಂಬ ನಾಣ್ಣುಡಿಯುಂಟದಱಿನೆನಗೆ ॥ ೧೯೭

ಈತನೆ ಮಿತ್ರನೀತನೆ ಸಹೋದರನೀತನೆ ಪೆತ್ತ ತಂದೆ ಮ
ತ್ತೀತನೆ ದೇವನೀತನೆ ಸುಬಾಂಧವನೀತನೆ ಕೂರ್ಪಯಾಣ್ಮನಿಂ
ತೀತನೆ ಸಜ್ಜನಜ್ಞನೆನಗೀತನೆ ತಾಯ್ ಪೞತೇನೊ ಭಾಪಿಪಂ
ದೀತನೆ ನೋೞ್ಪೊಡಾಪ್ತನೆನಗಿಪ್ಪನುಮೀತನೆ ಭೂತಳಾಗ್ರದೊಳ್ ॥ ೧೯೮

ಎನಗೆಂದುಂ ದೊರೆಕೊಳ್ಳದ
ಜಿನಧರ್ಮಂ ಸಾರ್ದುದೀಮಹಾತ್ಮನಿನದಱಿಂ |
ದೆನಗೀತನೆ ಜೀವಂ ಮ
ತ್ತೆನಗೀವೈಶ್ಯಾತ್ಮಭವನೆ ಕಣ್ಣುಂ ಮತಿಯುಂ ॥ ೧೯೯

ಶಂಕರನುದಯಿಂಗೆಯ್ವುದೆ
ಸಾಸಿರುಪಾಸೆಳಗಳಲರಲ್ಚುಗುವೆ ಜೀವ್ರೋ |
ತ್ಕರಮೊಂ ಪೇಡ' ಸದ್ಧರ್ಮಂ
ದೊರೆಕೆಕೊಳ್ಳವೆ ತನಗೆ ತಾವೆ ತಿಳಿಪವೆ ಧರೆಯೊಳ್ || ೨೦೦

ಹಿಮಕರನುದಯಿಂಗೆಯ್ವುದೆ
ತಮೋಂಧಕಾರಂ ತೆರಳ್ದು ಪೋಕುವೆ ಜೈನಾ |
ಗಮನಂ ಭ್ರಾಂತಿಂದಱೆಸರ್
ಕ್ರಮದಿಂದಂ ಪೇಱದಘಕುಲಂ ಕೆಟ್ಟಪುದೇ || ೨೦೧

ತನಗೋರಂತಿರೆ ಧರ್ಮಮ
ನನವರತಂ ಕೇಳಿ ತೋಱಿ ಪೇೞ್ವನೆ ನಂಟಂ |
ತನಗೋರಂತಿರೆ ಪಾಪಮ
ನನವರತಂ ಕೇಳಿ ತೋಱಿ ಪೇೞ್ವನೆ ಪಗೆಪಂ || ೨೦೨

ಎಂದು ಭಾವಿಸಿ ಸದ್ಧರ್ಮಂ ಕೈಸಾರ್ದುದಕ್ಕೆ ಮನದೊಳ್ ಗುಡಿ ಗಟ್ಟಿ ಮಹೋತ್ಸವದಿಂ ಮಯ್ಯುಱಿಯುದೆ ಹರ್ಷಚಿತ್ತದಿಂ ವಾತ್ಸಲ್ಯ ರತ್ನಾಕರನ ಪಾದಪದ್ಮಂಗಳ್ಗೆಱಗಿ ತನ್ನ ಮುನ್ನಿನ ಮಾಯಾಪ್ರಪಂಚಮಂ ಪೇೞ್ದು || ೨೦೩

ನಿನ್ನಿಂದವನಗೆ ಸದ್ಧ
ರ್ಮಂ ನಯದಿಂ ಸಾರ್ದುದಱಿನೆನಗುರ್ವರೆಯೊಳ್ |
ನಿನ್ನನ್ನರೊಳರೆ ಮಿತ್ರರ್
ಸನ್ನುತಗುಣನಿಳಯುವಂಶ ವೈಶ್ಯಲಲಾಮಾ || ೨೦೪

ಕಣ್ಣಾಗಿಯುಂ ಮತಿಯಾಗಿಯುಂ ನೀನೆ ಶರಣೆನಗೆ ಪೆಱರೊರ್ವರುಮಿಲ್ಲೆನ್ನ ಮುನ್ನಿನ ಪೊಲ್ಲಮಗಳಂ ಕೈಕೊಳ್ಳದೆ ಕಾರುಣ್ಯದಿಂದಂ ನಿಮ್ಮ ಧರ್ಮಾಭಿಪ್ರಾಯ ಮನಿನ್ನುಂ ಲೇಸಾಗಿ ಪೇೞ್ದು ಶಾಶ್ವತಮಪ್ಪ ಸುಖಕ್ಕೆ ಕಾರಣಮಪ್ಪ ವ್ರತರತ್ನಮಂ ದಯೆಗೆಯ್ವುದೆಂದು ಕೈಗಳಂ ಮುಗಿದು ವಿನಯದಿಂದಪೂರ್ವಮಂ ಸಮ್ಯಕ್ತ್ವಚೂಡಾಮಣಿ ಸೂರ್ವಂಗಿಂತೆಂದಂ || ೨೦೫

ಚದುರನೆನಿಪ್ಪಂ ಮಿಥ್ಯಾ
ತ್ವದ ಬಾರಿಗೆ ಪೋಗಿ ಬಿರ್ದು ಸಂಸಾರಸಮು ।
ದ್ರದೊಳರ್ದು ಕಿಡದೆ ಮುನ್ನಮೆ
ಪದುಱಿಗನಾಗಱಿದು ಪಿಡಿವುದೀದರ್ಶನಮಂ ॥ ೨೦೬

ಅಂತು ಶುದ್ಧದರ್ಶನಮಂ ಸಂಶಯಂಗಿಡದೆ ತಿಳಿದು ನಂಬಿ ಬಱಿಕ್ಕಮತಿಶಯಸುಖನಿಳಯಮಪ್ಪ ನಿರ್ವೃತಿಶ್ರೀಯನೆಯ್ದಿಸುವ ಶ್ರಾವಕಧರ್ಮದೊಳಕ್ಕೆ ನಡೆವುದು ॥ ೨೦೭

ಯತಿಧರ್ಮವೆಂಬುದದು ನಿ
ರ್ವೃತಿವನಿತೆಯ ತೊಟ್ಟ ತೊಡವು ಜಯಲಕ್ಷ್ಮಿಯ ರಂ ।
ಜಿತಮಪ್ಪ ಜವ್ವನಂ ಸಂ
ಸೃತಿವನಿತೆಯ ಸೊಬಗು ಕೀರ್ತಿಲಕ್ಷ್ಮಿಯ ನಿಳಯಂ ॥ ೨೦೮

ಎನಿಸಿ ಮಹಿಮೆವಡೆದ ಯತಿಧರ್ಮದೊಳ್ನಡೆವಾತಂ ಮೂಲೋತ್ತರಗುಣಂಗಳೋಜೆವೆರಸು ಸಕಲದೋಷಂಗಳುಂ ತನ್ನಂ ಪೊರ್ದದಂತಾಗೆ ನಡೆವುದು. ಪಾಲಂ ಕಾಯಿಸುವರಂತೆ ಮನಮಂ ಬೆದಱಲೀಯದೆ, ದುರ್ಭಾವಮಂ ಬಿಟ್ಟು ದುರ್ಜನರಂ ಸಾರದೆ ದುರಾಚಾರಂಗಳಂ ಪೊರ್ದದಾಗಮಮಂ ಪೊರ್ದಿ ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗನಂತೆ ದುರ್ಮಾರ್ಗವೆಂಬ ತೆರೆಗಳಂ ವಂಚಿಸಿ ಮಿಥ್ಯಾತ್ವಮೆಂಬ ಸುಱಿಗಳಂ ತಪ್ಪಿಸಿ ವಿಷಯಂಗಳೆಂಬ ಪೊಯಲ್ಗಳಂ ಸಾರಲೀಯದೆ ಕ್ರಿಯೆಸಹಿತಂ ಶುಭಧ್ಯಾನದಿಂ ಸಂಸಾರವೆಂಬ ಮಹಾನದಿಯಂ ದಾಂಟುವುದು ॥ ೨೦೯

ಶ್ರಾವಕಧರ್ಮಂ ಕೀರ್ತಿ
ಶ್ರೀವನಿತೆಯ ಕುಚಯುಗಂ ಮಹೀವನಿತೆಯ ವಾಕ್ ॥
ಶ್ರೀವನಿತೆಯ ಲಾವಣ್ಯಂ
ಶ್ರೀವನಿತೆಯ ಜಯಲತಾಂಗಿಯುಡುವ ದುಕೂಲಂ ॥ ೨೧೦

ಎನಿಸಿ ಪೆಂಪುವಡೆದ ಶ್ರಾವಕಧರ್ಮದೊಳ್ನಡೆವಾತಂ ದಾನಪೂಜೆ ಶೀಲೋಪವಾಸಂಗಳಂ ಕುಂದಲೀಯದೆ ಸುವ್ರತವರ್ಧಮಾನನಾಗಿ ದೃಢಾ

ಚಾರದಿಂ ಸಮುದ್ರದೊಳ್ ಬೈತ್ರಮಂ ನಡೆಯಿಸುವಂತೆ ದುಶ್ಶಂಕಿತಮೆಂಬ ಕಳ್ಳರಂ ಪೊರ್ದಲೀಯದೆ ದುರಾಚಾರಮೆಂಬ ತೆರೆಗಳಂ ತಪ್ಪಿಸಿ ಅಱನೆಗಟ್ಟೆಯೆಂಬ ಮೊಸಳೆಯಂ ತೊಲಗಿಸಿ ಸಂಶಯಮೆಂಬ ಮಹಾಮತ್ಸ್ಯಮನೋಸರಿಸಿ ಮಿಥ್ಯಾತ್ವಮೆಂಬ ನೆಗಱಿಂಗೊಳಗಾಗದೆ ತುಪ್ಪಮಂ ಕಾಸುವಳಂತೆ ಚಿತ್ತಮನಗಲಲೀಯದೆ ಜಿನಾಗಮದೋಜೆಯಿಂ ನಡೆದು ಸಂಸಾರಸಮುದ್ರಮನುಪಾಯದಿಂ ಕಱುಪುವುದು ॥ ೨೧೧

ಮೆಲ್ಲನೆ ಮೇಳಿಸಿ ಪರ್ಚುವ
ಲಲ್ಲಯಿಸುವ ಪೆಱರನಟ್ಟಿ ದೂಱುವ ಪಾಪ್ರಂ ।
ಪೊಲ್ಲಮೆಯಂ ಕಲಿಸುವ ಮುನಿ
ಯಲ್ಲಿ ಜಿನೋಕ್ತಿಯನ್ ಕೇಳಲಾಗದು ಚತುರಂ ॥ ೨೧೨

ಪೆಱರಂ ದೂಱುವರೊಳ್ ತೆಱ
ನಱಿಯದೆ ನುಡಿವವರೊಳಾಗಮಾರ್ಥಮನೇನಂ ।
ದಱಿಯದರೊಳ್ ಪುರುಡಿಗರೊಳ್
ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ ॥ ೨೧೩

ಅಲ್ಲಲ್ಲಿಗೆ ಭಾಷಿಸುವಂ
ದೆಲ್ಲರ್ಗಂ ನುಡಿವ ಬಲ್ಮೆಯಿಂ ತಪದಿಂದಂ ।
ಬೆಲ್ಲಂಪಚ್ಚಂತಿರೆ ಕರ
ಮೊಳ್ಳಿದರಪರೆನಿಪರಲ್ಲಿ ಕೇಳ್ವುದು ಕಥೆಯಂ ॥ ೨೧೪

ಪುರುಳಿಲ್ಲದರೊಳ್ ನುಡಿಯೊಳ್
ಪರಿಣತರೊಳ್ ಪಕ್ಷಮಿಲ್ಲದವರೊಳ್ ಗುಣದೊಳ್ ।
ಪಿರಿಯರೆನಿಪವರೊಳಘಕುಲ
ವಿರಹಿತರೊಳ್ ಕೇಳ್ವುದಾಗಮಾರ್ಥಮನಱಿವಿಂ ॥ ೨೧೫

ಜಿನಗೇಹಾಳಿಯೊಳುನ್ನತ
ಮುನಿವರರೊಳ್ ಭವ್ಯತತಿಯೊಳಾದರಮಂ ನೆ ।

ಟ್ಟನೆ ಪೊೞ್ಪು ತತ್ತ್ವವಿದರೊಳ್
ಜಿನಮತಮಂ ಕೇಳ್ಗ ಸೌಖ್ಯಮಂ ಬಯಸುವವಂ ॥ ೨೧೬

ಮತ್ತಂ ಜಿನಾಗಮಾರ್ಥಂಗಳಂ ಸಂಬಂಧಿಸಲಱಿಯದೆ ದುರಾಗ್ರಹದಿಂದಾನೆ ದೇವರೆಂದು ಡೊಳ್ಳುವಂ ಪೊಱಗಣ ಕಾಯಕ್ಲೇಶಮುಮಂ ತೋಱಿ ಪಾಪಂ ಪೆತ್ತವರ್ಬೇಲಿಯುಂ ಪೊಕ್ಕರೆಂಬಂತೆ ತಮ್ಮ ನುಡಿದುದನೆ ತಲೆಮುಟ್ಟೆ ಸಾಧಿಸಿ [1]ಬಾಯುಂ ಬಡಿಪಾವಿನ ಕಱುವೆಸಮ್ಮಗೆ ಬಿಟ್ಟಮ್ಮಯ ಕಱುವನಾವಿಂಗೆ ಬಿಡುವಂತೇನಾನುಮನೆಕ್ಕಸಕ್ಕಮನೇಣ ಗೋಣಂಗಳಂ ಪೇೞ್ವರಲ್ಲಿ ಜಿನತತ್ತ್ವಮಂ ಸೂಕ್ಷ್ಮಮತಿಯಪ್ಪವಂ ಕೇಳವೇಡ ॥ ೨೧೭

ಇಲ್ಲಿಗಿದುಚಿತಂ ತಕ್ಕದಿ
ದಿಲ್ಲಿಗೆದೆಂದಱಿದು ಸಂದ ಸೂತ್ರಾರ್ಥಮನಂ ।
ತಲ್ಲಲ್ಲಿಗೆ ವಿಪರೀತತೆ
ಯಿಲ್ಲದೆ ಪೇೞ್ವವರೊಳೊಲ್ದು ಕೇಳ್ಗಾಗಮಮಂ ॥ ೨೧೮

ಮತ್ತಂ ಕೇಳ್ವಾತನುಂ ಪರಿಣತನಾಗಿ ಕೇಳಲ್ವೇೞ್ಪುದದೆಂತೆಂದೊಡೆ, ಪಾತ್ರಮಂ ನೋಡಲೆಂಪು ಪ್ರೋಪಾತಂ ಮುಂದೊಂದೆಡೆಯೊಳಗ ಪೋಪಾತನಾಡಲಯೆಂದೊಡೆ ಪುಗುಬ್ದನಂಬಂತೆ [2] ಮಾಡದೆ ತಲೆಯೆಂದೊಡೆ ತಟೆಯೆಂದುಂ ಪುಲ್ಲೆಯೆಂದೊಡೆ ಪುಲಿಯೆಂದುಂ ವಿಪರೀತಮಂ ಕೈಕೊಳದೆ ಕೇಳ್ವುದು ॥ ೨೧೯

ಶ್ರಾವಕನಪ್ಪಂ ನೆಱೆಸ
ದ್ಭಾವದಿನೆಸಗುವುದು ನಾಲ್ಕು ಧರ್ಮಂಗಳೊಳಂ ।
ಭಾವಕನೆನಿಸುವ ಮುನಿಯುಂ
ಸಾವದ್ಯಂ ಸಾರದಂತು ನಡೆವುದು ದಯೆಯಿಂ ॥ ೨೨೦

---

1 ತಲೆಮುಟ್ಟೆಸಾಱಿಸಿ (ಗ)   2 ನಾಡಳೆಯೆಂದೊಡಾತಳೆಗಪಂದುವುರಳ್ವನೆಂಬಂತೆ (ಗ)

ವರಸಂಯಮಿಯೆನಿಸಿಪ್ಪುದು ದು
ರ್ಧರತಪದಿಂ ನಿಷ್ಕಷಾಯದಿಂ ಮುನಿಯೆನಿಪಂ ।
ಪರಮಶ್ರಾವಕನೆನಿಪಂ
ಕರಮೊಳ್ಳಿದನೆನಿಪ್ಪದೆಸೆಸೆ ದಾನಾದಿಗಳೊಳ್ ॥ ೨೭೧

ಎಂತೀಗಳ್ ಸೂರ್ಯಂಗೋ
ರಂತಿರೆ ತೀವ್ರೋಷ್ಣಮೊಪ್ಪುಗುಂ ಭಾವಿಸುವಂ ।
ದಂತ ತಪಸ್ವಿಗಳ್ಗಮದೋರ್[1]
ರಂತೊಪ್ಪುಗು ನಿಸ್ಪೃಹತ್ವಮುಂ ಸಂಯಮಮುಂ ॥ ೨೭೨

ಜಲಜಾತವಿರೋಧಿಗೆ ಶೀ
ತಳಮೊಪ್ಪುಗುಮಾಗಳಂತು ತಾನಂತೆ ಮಹೀ ।
ತಳದೊಳುಪಾಸಕನಪ್ಪಂ
ಗಳವಟ್ಟೊಪ್ಪುಗು ಮಹೋನ್ನತಿಕ್ರಿಯು ದಾನಂ ॥ ೨೭೩

ದಾನದೊಳಂ ಪೂಜೆಯೊಳಂ
ತಾನೊಳ್ಳಿದನೆನಿಪುದವನಿಯೊಳುಪಾಸಕನಿಂ ।
ಧ್ಯಾನದೊಳಂ ಸಂಯಮದೊಳ
ಮೇಲೆನಿಪಪೂರ್ವರೆಯೊಳಧಿಕರೆನಿಪ್ಪುದು ಮುನಿಪರ್ ॥ ೨೭೪

ಎತ್ತಿಂಗೆ ಪಿಣಿಲೊಪ್ಪುಗುಮಲ್ಲದೆ ಕೇಸರಿಲೊಪ್ಪದಾವಿಂಗೆ ಕಚ್ಚಲೊಪ್ಪುಗುಮಲ್ಲದೆ ಪಿಣಿಲೊಪ್ಪದು ಪುರುಷಂಗೆ ಗಡ್ಡಮೀಸೆಯೊಪ್ಪುಗುಮಲ್ಲದೆ ಪೆಸಾಲೆಗಳೊಪ್ಪವು ಸ್ತ್ರೀಯರ್ಗೆ ಪೆಮಾಲೆಗಳೊಪ್ಪುಗುಮಲ್ಲದೆ ಗಡ್ಡಮೀಸೆಯೊಪ್ಪವದಱಿಂ ಗೃಹಸ್ಥಂಗೆ ದಾನಾದಿ ಧರ್ಮಂಗಳೊಪ್ಪುಗುಮಲ್ಲದೆ ತಪದೊಳಾದಾಚರಣೆಯೊಪ್ಪದು ತಪಸ್ವಿಗಂ ಧ್ಯಾನಾಧ್ಯಯನ ಸಂಯಮಾದಿಗಳೊಪ್ಪುಗುಮಲ್ಲದೆ ಗೃಹಸ್ಥಾಚರಣಮೊಪ್ಪದದುಕಾರಣದಿಂ ತಂತಮ್ಮ ಮೇರೆಯಂ ದಾಂಟವೇಡಾ ॥ ೨೭೫

---

1 ಎಂತಪ್ಪತಪಸ್ವಿಗಮೊ (ಗ)

ಸೊಡರುಂ ಕಿಚ್ಚಾಕಿಚ್ಚುಂ
ಗಡ ಕಿಚ್ಚಂತೆರಡುಮೆಸೆವ ನಂಟತ್ತನಗಾ |
ದೊಡೆ ಗಾಳಿ ಮಸಗಿ ಸೊಡರಂ
ಕಿಡಿಸುವವೊಲ್ ಕಿಚ್ಚನೇಕೆ ಕಿಡಿಸದೊ ಮುನಿಸಿಂ || ೨೨೬

ಅಂತೆ ತಪಸ್ವಿಗಪ್ಪಾಹಾರಮಣುವ್ರತಿಗಳವಡದು ; ಅಣುವ್ರತಂಗಪ್ಪಾಹಾರಂ ತಪಸ್ವಿಗಳವಡದು ; ಮುನ್ನಂ ದಾನದಿಂ ಪೂಜೆಯಿಂ ಶೀಲದಿಂದುಪವಾಸದಿಂದನಂತಸುಖಮನೆಯ್ದಿದ ಶ್ರೀಷೇಣಮಹಾರಾಜನ ಧನ್ಯಕುಮಾರನ ಕರಿಕಂಠಮಹಾರಾಜನ [1] ಸೌಧರ್ಮೇಂದ್ರನ ಸೀತಾದೇವಿಯ ಮಹಾದೇವಿಯ [2] ನಾಗಕುಮಾರನ ಯೋಧನಮುಂಡನ [3] ಕಥೆಗಳಂ ಕೇಳ್ದು ನಂಬಿ ದಾನಾದಿಧರ್ಮದೊಳೆಸಗುವುದು || ೨೨೭

ದಾನಾದಿಗಳೊಳ್ ನೆಗೞಿಲ್
ತಾನಾಱದೆ ಪೇನಿಯಪ್ಪವಂ ಮುನಿವರನುಂ |
ತಾನಪ್ಪೆನೆಂದು ದೂರ್ತಿಂ
ಮೋಸಂಗೊಂಡಿರ್ದೊಡಾಗದಕ್ಷಯಸೌಖ್ಯಂ || ೨೨೮

ಪರಮಶ್ರೀಪತಿಶಾಂತಿತೀರ್ಥಕರನತ್ಯಾನಂದದಿಂ ದಾನಮಂ
ಸಿರಿಷೇಣಾವನಿಪಾಲನಾದ ಭವದೊಳ್ ತಾಂ ಮಾಡೆ ತದ್ದಾನದಿಂ
ಪಿರಿದಪ್ಪುನ್ನತಿವೆತ್ತು ನೋಡ ಕಡೆಯೊಳ್ ನಿರ್ವಾಣಲಕ್ಷ್ಮೀಮನೋ
ಹರನಾದಂ ದೃಢಚಿತ್ತದಿಂ ಸುಜನರುಂ ಮಾಳ್ಕಿರ್ತಿಯಿಂ ದಾನಮಂ ||

ಅಂತೆ ದಾನಚತುಷ್ಟಯದಿಂ ಪುಣ್ಯಬಂಧಮಕ್ಕುಮಾಪುಣ್ಯಬಂಧದಿಂ ಕ್ರಮಕ್ರಮದಿಂ ನಿರ್ವಾಣಸಾಮ್ರಾಜ್ಯಂ ದೊರೆಕೊಳ್ಗುಮೆಂಬುದಂ ಶಾಂತಿತೀರ್ಥೇಶ್ವರನ ಕಥಾಂತರದಿಂದಱಿದು ಬೆಣಕಚಂಗೆಡೆವರ

1 ಕರಕಂಡುಮಹಾರಾಜನ (ಕ. ಖ.)

2 ಶೀಲವತಿಮಹಾದೇವಿಯ ಸೀತಾದೇವಿಯ (ಕ. ಖ.)

3 ಖದನಮುಂಡನ (ಕ. ಖ.) ; ಯೊದನಮುಂಡನ (ಗ)

ಮಾತಂ ಕೇಳ್ದು ದಾನಾದಿಗಳೊಳಪ್ಪರ್ಥವ್ಯಯಕ್ಕೆ ಮನದೊಳ್ ಮಱುಗಿ ಮಾಡವೇಡ ॥ ೨೪೦

ತಪದ ನೆಗಳ್ತೆಗೆ ಬೇಸ
ತ್ತುಪವಾಸಕ್ಕಲಸಿ ಮನದೊಳಾಗಮಮಂ ತಾಂ ।
ಚಪಳತೆಯಿಂದಮಹರ್ನಿಶ
ಮುಪಾಯದಿಂ [1] ಪಿಡಿಪ ಮುನಿಗೆ ನಿರ್ವೃತಿ ದೂರಂ ॥ ೨೪೧

ನಮ್ಮ ಸೆಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಱಿದೆಂಬಂತೆ ಮಾಡದೆ ಪ್ರಥಮತೀರ್ಥೇಶ್ವರನಂತೆ ಮೆಯ್ಯ ಮೋಹಮಿಲ್ಲದೆ ಸನತ್ಕುಮಾರ ಮುನಿಯಂತೆ ಜಿಹ್ವಾಲಂಪಟತೆಯಿಲ್ಲದೆ ಬಾಹುಬಲಿಯಂತೆ ನಿಂದೆಡೆಯಿಂ ತೆಳರದೆ ಗುರುದತ್ತಮುನಿಯಂತೆ [2] ಘೋರೋಪಸರ್ಗಕ್ಕೆ ತಲ್ಲಣಿಸದೆ ಕುಮಾರಸ್ವಾಮಿಯಂತೆ ಚಿತ್ತದೊಳಳ್ಕದೆ ಧೈರ್ಯಸಮನ್ವಿತನಾಗಿ ಪೊರ್ಡೆ ಕೇವಲಧ್ಯಾನಮೊಪ್ಪುಗುಂ [3]. ಈ ಕಾಲದವರ್ಗಳ್ ದರ್ಶನ ಶುದ್ಧರಾಗಿ ತಪದೊಳೊಳ್ಳಿದರೆನಿಸಿ ನಡೆವುದು, ನಡೆಯೆ ಪುಣ್ಯಬಂಧ ಮಕ್ಕುಮಾಪುಣ್ಯಬಂಧದಿಂ ಅಷ್ಟವಿಧಕರ್ಮಂಗಳಂ ನಿರ್ಮೂಲಂ ಮಾಳ್ಪ ಶಕ್ತಿ ದೊರೆಕೊಳ್ಗುಮದು ದೊರೆಕೊಳೆ ಕೈವಲ್ಯಲಕ್ಷ್ಮಿ ಕೈಸಾರ್ಗುಮದಱಿಂ ಕ್ರಿಯೆಸಹಿತಂ ತಪೋಮಾರ್ಗದೊಳಸಗುವುದು ॥ ೨೪೨

ಪುರುದೇವಂ ದೇವದೇವಂ ಪರಹಿತಚರಿತಂ ವಿಶ್ವಲೋಕಾಧಿಪಂ ಖೇ
ಚರನಾದಾಕಾಲದೊಳ್ ಮಾಡಿದ ತಪದ ಮಹಾಪುಣ್ಯದಿಂ ಸ್ವರ್ಗಸೌಖ್ಯೋ
ತ್ಕರಮುಂ ಕೈಸಾರ್ದು ವಿಭ್ರಾಜಿಸುವ ಮಹಿಮೆಯುಳ್ಳಕ್ಷಯ [4] ಶ್ರೀಯೊಳಾತಂ
ನೆರೆದಂ ಕೇಳ್ಮಾಯೆಯಿಂದಂ ಸುಱಿಯದ ತಪಮಂ ಮಾಳ್ಕೆ ನಿರ್ಮಾಯೆಯಿಂದಂ ॥ ೨೪೩

---

1 ಮನದೊಳಧ್ಯಾತ್ಮಮನಿಂ ಚಪಳತೆಯಿಂದೀಕಾಲದೊಳುಪಾಯದಿಂ (ಕ. ಖ.)
2 ಗಣಧರಮುನೀಂದ್ರನಂತೆ (ಕ. ಖ.)
3 ಇರ್ಪೊಡಧ್ಯಾತ್ಮಮೊಪ್ಪುಗುಂ (ಕ. ಖ.); ಇರ್ಪೊಡಾತ್ಮಮೊಪ್ಪುಗುಂ (ಖ.)
4 ಮಾಳ್ಪೈಶ್ವರ್ಯದೊಳನುಭವಿಸಿರ್ದಕ್ಷಯ (ಕ. ಖ.)

ಅಂತು ತಪದಿಂ ಪುಣ್ಯಬಂಧಮಕ್ಕುಮಾಪುಣ್ಯದಿಂ ಮೆಲ್ಲಮೆಲ್ಲನೆ ನಿಶ್ಶ್ರೇಯಸಶ್ರೀಯೊಳ್ಕೂಡಲಕ್ಕುಮೆಂಬುದನಾದಿತೀರ್ಥೇಶ್ವರನ ಕಥಾಂತರದೊಳ್ ತಿಳಿವುದು. ಸೋಂಬರ ಮಾತಂ ಕೇಳ್ದು ತಪದೊಳಾದ ಬೇವಸಕ್ಕಲಸವೇಡ ॥ ೨೩೪

ಇರುಳೊಳ್ಚಂದ್ರನ ಪಗಲೊಳ್
ಖರಕರನುದಯಂಗಳಾಗದಭ್ಯುದಯಂ ಮೆ ।
ತ್ತಿರುಳೊಳ್ಸೂರ್ಯರ್ಗಂ ಪಗಲೊಳ್
ಸರಸಿಜರಿಪುವೊಗೆಯೆ ಜಗದೊಳದ್ಭುತಮಲ್ತೇ ॥ ೨೩೫

ಅದಱಿಂ ಕೇವಲಧ್ಯಾನಂ [2] ಮುನ್ನಂ ಸಂದ ಮಹಾಪುರುಷರ್ಗಳವೆಡುಗುಮಲ್ಲದೆ ಈಗಳನವರ್ಗಳವೆಡದು ॥ ೨೩೬

ಜಿನವಚನದೋಜೆಯಿಂದಂ
ಮನಮಂ ಸ್ಥೈತಿಟ್ಟು ಬಿಟ್ಟು ದುರ್ಮಾರ್ಗಮನಾ ॥
ವರ್ಣಿತಂ ಸುವ್ರತದೊಳ್ ನೆ
ಟ್ಟನೆ ಮಾಳ್ಪುದು ನೆಗಳ್ವ ತಪಮುಮಂ ದಾನಮುಮಂ ॥ ೨೩೭

ಎಂದು ಯತಿಧರ್ಮಮುಮಂ ಶ್ರಾವಕಧರ್ಮಮುಮನಿಂಬಾಗಿರೆ ಜಿನೇಂದ್ರಭಕ್ತಸೆಟ್ಟಿ ಸಂಕ್ಷೇಪದಿಂ ಪೇಳೆ ಸೂರ್ಪಂ ಕೇಳ್ದು ತಪದೊಳತಿಪ್ರೀತನಾಗಿ ಸಂಸಾರಕ್ಕೆ ಪೇಸಿ ಜಿನದೀಕ್ಷೆಯಂ ಕೈಕೊಂಡುಗ್ರೋಗ್ರತಪದಿಂ ನೆಗಳ್ದು ಕಡೆಯೊಳ್ ಸಮಾಧಿಮರಣದಿಂ ಮುಡಿಪಿ ದೇವಗತಿವಡೆದಂ. ಸಮ್ಯಕ್ತ್ವಚೂಡಾಮಣಿಯುಮುಪಗೂಹನದ ಫಲದಿಂದಿಹತ್ರಯೊಳಾದ ಕೀರ್ತಿಗಂ ಪರತ್ರಯೊಳಾದ ಸೌಖ್ಯಕ್ಕಂ ಭಾಜನನಾದನಿಂತು ॥ ೨೩೮

ಪರಮಶ್ರಾವಕನೆನಿಸುವ
ಪುರುಷಂ ಕಣ್ಣಾರೆ ಮುನಿಯ ಪೊಲ್ಲಮೆಯಂ ವಿ ।

---

1 ಇಳೆಯೊಳಿಱು.ದಯಂ (ಗ) 2 ಅದುಕಾರಣದಿಂದದಾಂತ.ಂ(ಕ ..)

ಸ್ತುರದಿಂದಂ ಕಂಡದನು
ಮರೆಯೊಳ್ ನೆಱೆ ದೂಱಿದುಸಿರದಿರ್ಪುದು ನಯದಿಂ ॥ ೨೩೯

ಜಲಧಿಯೊಳು ಕಪ್ಪೆ ಸತ್ತೊಡೆ
ಜಲಧಿಯ ನೀರೆಲ್ಲಮಟ್ಟ ಕೊಳನಾಪುದೆ ನಿ ।
ರ್ಮಲನಲ್ಲದೊರ್ವನಿಂದಂ
ಮಳಿನತೆ ಪೊರ್ದುವುದೆ ವಿಮಳಸದ್ಧರ್ಮಕ್ಕಂ ॥ ೨೪೦

ಉಪಗೂಹನಮಂ ಮಾಱ್ಪುದು
ವಿಪರೀತಮನುಳ್ಳ ಧರ್ಮಮಂ ಬಿಡುವುದು ಜೈ ।
ನಪದಾಂಬುಜಾತಮಂ ಮು
ಕ್ಕ್ಯಪವರ್ಗದ ಬಟ್ಟೆಯೆಂದು ಪಿಡಿವುದು ಭವ್ಯಂ ॥ ೨೪೧

ಎಂದುಪಗೂಹನದೊಳಾದ ಕಥೆಯಂ ಗೌತಮಸ್ವಾಮಿಗಳ್ ಪೇ
ೞ್ದುದಂ ॥ ೨೪೨

ಭುವನಪ್ರಖ್ಯಾತಕೀರ್ತಿಧ್ವಜನಮಳಯಶಂ ಸತ್ಯವಾರಾಶಿಚಿತ್ತೋ
ದ್ಭವವೇಷಾನೀಕತೀವ್ರಾನಳನಘಹರಣಂ ಕೂರ್ಮೆಯಿಂ ಪೇಪೆ ಚಿತ್ತೋ
ತ್ಸವದಿಂ ತ್ರೈವಿದ್ಯಚಕ್ರೇಶ್ವರವಿಮಳಪದಾಂಭೋಜಭೃಂಗಂ ವಿನೇಯ
ಪ್ರವರಂ ಸಾನಂದನಾಮಂ [1] ಸುಕವಿಜನಮನಃಪದ್ಮಿನೀರಾಜಹಂಸಂ॥ ೨೪೩

ಇದು ನಿಖಿಳದಿವಿಜಪರಿವೃಢಮಕುಟತಟಘಟಿತಮಣಿಗಣನಿಕರವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ನಿರುಪಮಸಹಜಕವಿಜನಮನಃಪಯೋಧಿಹಿಮಕರ ಸುತಭುವನತ
ದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನಪಂಚಮಾಂಗವ್ಯಾವರ್ಣನಂ
ಷಷ್ಠಾಶ್ವಾಸಂ

---

[1] ಅಘಹರಣಾಭಾರತೀಕರ್ಣಪೂರಂ । ದಿವಿಜೇಂದ್ರಾದ್ರಿಕ್ಷಮಂಸಜ್ಜನವನರಾಜ
ಚಂಡಾಂಶುತ್ರೈವಿದ್ಯಲಕ್ಷ್ಮೀ । ರಮಣಪಾದಾಬ್ಜಭೃಂಗಂ (ಕ. ಬ.)

# ಸಪ್ತಮಾಶ್ವಾಸಂ.

ಶ್ರೀನಿರ್ವೃತಿವನಿತೆಗೆ ಪೆಱ
ತೇನುಪಗೂಹನಗುಣಂ ಲಸನ್ಮಣಿಹಾರಂ [1] ।
ತಾನೆಂದು ನಂಬಿದಂ ವಿಬು
ಧಾನಂದಂ ಸುಕವಿನಿಕರಪಿಕಮಾಕಂದಂ ॥ ೧

ಅಂತುಪಗೂಹನದೊಂದು ಕ
ಥಾಂತರಮಂ ಕೇಳ್ದು ನಂಬಿ ಮನದೊಳ್ ಪಿರಿದುಂ ।
ಸಂತೋಷಮಾಗೆ ಧಾತ್ರೀ
ಕಾಂತಂ ಪಿರಿದುಂ ಮಹೋತ್ಸವಂಬೆರಸಾಗಳ್ ॥ ೨

[ಗಣಧರಸ್ವಾಮಿಗಳ ಪಾದಪಯೋರುಹಕ್ಕೆ ಮೆಱಿದುಂಬಿಯುಂ ತೆಱಗಿ ಕೈಗಳಂ ಮುಗಿದು ತಲೆಯುಂ ಬಾಗಿ ನಿಮ್ಮಡಿ ಕಾರುಣ್ಯದಿಂ] ಮುಂದಣ ಸ್ಥಿತಿಕರಣದ ಕಥೆಯುಂ [ಎನಗಱಿವಂತಾಗೆ] ಬೆಸಸುವು ದೆಂಬುದುಂ [ಗಣಧರಸ್ವಾಮಿಗಳ್ ಕೈವಲ್ಯಲಕ್ಷ್ಮಿಯ ನೆಱು ವಾಭರಣ ಮಪ್ಪ] ಸ್ಥಿತಿಕರಣದ ಕಥೆಯುಂ] ಇಂತೆಂದು ಪೇೞ್ದರ್:— ಅಗ್ನಿಯಂತೆ ಮದದಾನಮುಂತೆ ವಾರದಂತೆ ಕುಲಶೈಲದಂತೆ ಜಂಬೂದ್ವೀಪದಂತೆ ಸಪ್ತ ಸ್ವರದಂತೆ ಮಾಳವದಂತೆ ದೇವೇಂದ್ರನ ಬರವಿನಂತೆ ರಾಜ್ಯದಂತೆ ಋದ್ಧಿ ಯಂತೆ ಕಮಠೋಪಸರ್ಗಕ್ಕೆ ಬಂದ ಧರಣೀಂದ್ರನಂತೆ ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿ ತ್ವಮುಂ ಉಪಗೂಹನಮುಂ ಸ್ಥಿತಿಕರಣಮುಮೆಂಬೀಱಿರೊಳಂ ಶೋಭೆ ವಡೆವುದು ॥ ೩

ಸ್ಥಿತಿಕರಣಂ ವಾಗ್ವನಿತೆಯ
ಮತಿ ಕೀರ್ತಿ ಶ್ರೀಯ ನಿಳಯಮುಪವರ್ಗಶ್ರೀ [2] ।

---

1 ಉಪಗೂಹನಲಸನ್ಮಹಾಮಣಿನಿಕರಂ (ಕ. ಬ.)

2 ಸುತಕೀರ್ತಿ ಶ್ರೀಯತಿಲಕಮಪವರ್ಗ ಶ್ರೀ (ಕ. ಬ.)

ಸತಿಯು ಮಣಿಹಾರವೆಂದಿಂ
ತತಿಮುದದಿಂ ಮಾಕ್ಕೆ ಭವ್ಯನಪ್ಪಂ ಮನದೊಳ್ ॥ ೪

ಇನ್ನದರೊಳಾದ ವಿಭವವೆಂತೆಂದೊಡೆ ॥ ೫

[ಸರಸಿಜನೇತ್ರೆ ಸಲ್ಲಲಿತಗಾತ್ರೆ ಕುಲೈಕಪವಿತ್ರೆ ಗಂಧಸಿಂ
ಧುರನಿಭಯಾನ ಶೀಲಗುಣಧಾರೆ ಚರಿತ್ರಸಿಧಾನೆ ಸಜ್ಜನೇ
ಶ್ವರಪದಭಕ್ತೆ ಸರ್ವಗುಣಯುಕ್ತೆ ಸುಧಾಕರವಕ್ತ್ರೆ ಮಾನವೋ
ತ್ಕರನುತಪಾದಪಂಕರುಹೆ ಚೇಳನಿದೇವಿ ಮಹೀತಳಾಗ್ರದೊಳ್ ॥ ೬

ಮನಸಿಜಕಾಂತೆಗಮಿಂತಿಂ
ದ್ರನ ಸತಿಗಂ ಚಂದ್ರಮನ ವನಿತೆ ರೋಹಿಣಿಗಂ ।
ತಾಂ ನೂರ್ಮಡಿ ರೂಪಕ್ಕಂ
ಜಿನಚರಣಸರೋಜಭಕ್ತಿಗಂ ವಿನಯಕ್ಕಂ ॥ ೭

ಜನಕಜೆಗೆ ಭಾರತಿಗೆ ಗೋ
ಮಿನಿಗೆ ತಿಲೋತ್ತಮೆಗೆ ನೋಡೆ ಸಾಸಿರ್ಮಡಿ ಚೇ ।
ಳನಿ ಶೀಲದೇಳ್ಗೆಗಂ ಮೇ
ದಿನಿಯೊಳಗೆ ಸುಬುದ್ಧಿಗಂ ವಿಳಾಸೋನ್ನತಿಗಂ ॥ ೮

ದಯೆಯು ತವರ್ಮನೆ ಭವ್ಯ
ಪ್ರಿಯೆ ಸಕಲಜನಾನುರಾಗೆ ಜಿನಪಾದಪದ ।
ದ್ವಯುಪನೇಜಮತ್ತಮಧುಕರೆ
ನಯವಿದೆ ಭುವನೈಕಪೂಜ್ಯೆ ಚೇಳನಿ ಧರೆಯೊಳ್ ॥ ೯

ಎನಿಸಿ ನೆಗಳ್ತೆಗಂ ಪೊಗಳ್ತೆಗಂ ನೆಲೆಯಾದ ಚೇಳನಿಮಹಾ
ದೇವಿಗಂ ನಿನಗಂ ॥][1] ೧೦

---

1 ನಿನಗಂನಿನ್ನಪಟ್ಟದರಸಿಯಪ್ಪಚೇಳನಿಮಹಾದೇವಿಗಂ (ಗ)

ಉದಯಗಿರಿಯೊಳ್ ದಿವಾಕರ
ನುದಯಂಗೆಯ್ವಂತೆ ಸಕಲಗುಣಗಣನಿಳಯಂ ।
ವಿದಿತಯಶಃಪುಂಜಂ ಪು
ಟ್ಟಿದನೊಪ್ಪಿರೆ ವಾರಿಷೇಣನೆಂಬ ಕುಮಾರಂ ॥ ೧೧

[ಅಂತಾಸದ್ಗುಣನಿಧಿ ವಿ
ಖ್ಯಾತಂ ಭೂಭುವನವಂದಿತಕ್ರಮಯುಗ್ಮಂ ।
ನೀತಿವಿದಂ ಭವ್ಯಜನ
ಪ್ರೀತಂ ಜಿನಸಮಯವಾರ್ಧಿವರ್ಧನಚಂದ್ರಂ ॥] ೧೨

ದೃಢಚಿತ್ತಂ ಗುಣನಿಳಯಂ
ಕಡುಗಲಿ ಕಿಱಿಯಂದು ದಿವ್ಯ ಜಿನಮುನಿಗಳ ಮೆ ।
ಲ್ಲಡಿಯಂ ಪಿಡಿದು ತಳರ್ನಡೆ
ನಡೆಗಲ್ತಂ ಭವ್ಯವನಜವನಕಳಹಂಸಂ [1] ॥ ೧೩

[ಬಿಡು ಮಿಥ್ಯಾತ್ವಮನಂಜದೆ
ಪಿಡಿ ಸಮ್ಯಕ್ತ್ವಮನುದಾರಚಿತ್ತದಿನೆಂಬೀ ।
ನುಡಿಯುನೆ ನುಡಿದು ಮನಂಬಿಡೆ
ನುಡಿಗಲ್ತಂ ಸುಕವಿನಿಕರಪಿಕಮಾಕಂದಂ ॥] ೧೪

ಉಡೆವೆಳ್ಱಿದಂದಿಂಬಱಿಕೆಡೆ [2]
ಯುಡುಗದೆ ಜಿನಮುನಿಗಳಂ ಜಿನಾಗಮಮಂ ನೇ ।
ರ್ಪಡೆ ಕೇಳ್ದೋದುವ ಜಿನಮುನಿ
ಗಡಣದೊಳ್ ವಿವೇಕಿಯಾಗಿ ಪೊೞ್ತಂ ಕಳೆವಂ । ೧೫

ಭವ್ಯರ ಗೋಷ್ಠಿಯು ತಪದೊಳ್
ದಿವ್ಯಮೆನಿಪ್ಪವರ ಪಾದಸೇವೆಯು ಜಿನಸ ।

---

1 ನಡೆಗಲ್ತಂಸುಕವಿನಿಕರಪಿಕಮಾಕಂದಂ (ಗ)
2 ಉಡೆವಣಿವಱಿದಂ ಬಳಿಕಂತಡೆ (ಕ, ಬ,)

ತ್ಕಾವ್ಯಂಗಳ ಭಾವನೆಯು ಮ
ಹಾವ್ಯಸನಂ ವಾರಿಷೇಣನೃಪತಿಗೆ ನಿಚ್ಚಂ ॥ ೧೬

[ಅಂತು ಗುಣಗಣನಿಳಯನುಂ ವಿನಯನಿಧಾನನುಂ ಜಿನಪಾದ ಪದ್ಮಮಧುಪನುಂ ಜಿನಾಗಮಘನಾಗಮಮಯೂರನುಂ ಪಾಪೇಭಪಂ ಚಾನನನುಮೆನಿಸಿ] ಆವಾರಿಷೇಣಕುಮಾರಂ ಸುಖಸಂಕಥಾವಿನೋದದಿಂ ಯುವರಾಜ್ಯಶ್ರೀಯನನುಭವಿಸುತ್ತಿರ್ಪನ್ನೆಗಂ ॥ ೧೭

[ವಿಮಲಗುಣಾಕ್ಷರ್ಸಕಲಾ
ಗಮಯುಕ್ತರ್ಮಿಜನಾನುರಾಗದುರಿತ ।
ದ್ಯುಮಣಿಗಳಗಣಿತಚರಿತ
ರ್ಸಮಸ್ತಜೀವೋಪಕಾರಿಗಳ್ ದಯೆನಿದಿಗಳ್ ॥] ೧೮

ಮುಂಡಿಯಪುತ್ರಾಚಾರ್ಯರ್ [ಗ್ರಾಮಯೇಕರಾತ್ರಂ ನಗರೇ ಪಂಚರಾತ್ರಮಟವ್ಯಾಂ ದಶರಾತ್ರಮೆಂಬ ಪೂರ್ವಶಾಸ್ತ್ರೋಕ್ತಿಯಿಂ] ವಿಹಾರಿಸುತ್ತುಂ ನಿನ್ನ ಪುರಕ್ಕೆ [ವೆಂದು ತತ್ಪುರದ ಮೂಡಣ ದೆಸೆಯ ಬಾಳುಪಕವೆಂಬ ಪರ್ವತಪೊಳಪ್ರುದುವೊಮುನಿಯು ಬರವಂ ಋಷಿ ನಿವೇದಕಂ ನಿನಗಱಿಪುವುದುಂ ॥ ೧೯

ಕರಮಲ್ಲದೊಸೆದು ತನ್ಮುನಿ
ವರನಿರ್ದಾದೆಸೆಗೆ ನಡೆದು ಬಿಡದೇೞಡಿಯಂ ।
ಕರಮುಗಿದು ತುಷ್ಟಿದಾನಮ
ನೆರಡಿಲ್ಲದೆ ಋಷಿನಿವೇದಕಂಗಿತ್ತಾಗಳ್ ॥ ೨೦

ಆನಂದಭೇರಿಯುಂ ಪೊಯ್ಸಿ][1] ಚೇಳನಿಮಹಾದೇವಿ ಮೊದಲಾಗೆ ಪ್ಪತ್ತಿಸಿರ್ವರರಸಿಯರುಂ ವಾರಿಷೇಣಕುಮಾರಂ ಮೊದಲಾದ ಕುಮಾ ರರುಂ ಯೆಣ್ಪತ್ತಿಸಿರ್ವರ್ಮಕುಟಬದ್ಧರುಂ [ಪುರದೊಳಗಣ ಶ್ರಾವಕರುಂ] ಬೆರಸು ॥ ೨೧

[1] ವಂದು ಬಹಿರುದ್ಯಾನದೊಳಿರ್ದಂ ಋಷಿನಿವೇದಕನಿಂದವಱಿದು (ಗ)

ತುಂಬಿಗಳಬ್ಬಿ ನಿಗೆಳಸಿ ಮ
ನಂಬಿಡೆ ಬರ್ಪಂತೆ ನೀನುಮುತ್ಕ್ಯಾದರದಿಂ ।
ದಂ ಬಯಸಿ ದಿವ್ಯಮುನಿಚರ
ಣಾಂಬುಜಮಂ ಕಾಣಲೆಂದು ರಾಜಾಲಯದಿಂ ॥ ೧೧

ಪೊಱಮಟ್ಟು ಬಂದು [ಬಳಾಹಕಗಿರಿಯೊಳಿರ್ದ] ಮುಂಡಿಯ ಪುತ್ರಮುನೀಂದ್ರರ ಪಾದಸರಸಿಜಮಂ ಸರಸಿಜಾದಿಕುಸುಮಂಗಳಿಂದ ರ್ಚಿಸಿ ಬಂದಿಸಿ [1] ಕಿಱಿದುಬೇಗಂ ಧರ್ಮಶ್ರವಣಮಂ ಕೇಳ್ದು [ತನ್ಮುನಿ ಪುಂಗವಂಗೆ] ಪುನರ್ನಮಸ್ಕಾರಂಗೆಯ್ದು ರಾಜಮಂದಿರಕ್ಕೆ ಸೀಂ ಮಗು ೞ್ವುದುಂ ನಿನ್ನೊಡನೆ ಸಕಲಜನಂಗಳುಂ ಮಗುೞ್ವುದುಂ ವಾರಿ ಷೇಣಕುಮಾರನೊರ್ವನೆ ಮುನಿನಾಥನನಗಲ್ದು ಬರಲಾಱದೆ ಪೆಱ ಗಿರ್ದ [2] ॥ ೧೨

ಬಿಡದೆ ಕಡಾರದ ಪೊನ್ನಂ
ಕಡುಲೋಭಂ ಕಂಡು ಮೋಹದಿಂದಾ ಪೊನ್ನಂ ।
ತಡೆಯದೆ ನೋಡುತ್ತಿರ್ಪವೊ
ಲಡಿಮಿಡುಕದೆ ನಿಂದು [ವಾರಿಷೇಣಂ ಮುನಿಯಂ ॥ ೧೩

ಮನದೆಱಕದಿಂದೇೞಲುಮಿೞಿಯಲುಂ ನೋಡಿ ತಂಗಾಳಿಯ ಪೊರ್ದುಗೆಯಿಂ ನಯಂ ಬಡೆದೆಳಲತೆಯಂತೆ ಪೆರ್ಚೆ ॥] [3] ೧೪

ಮನದೊಳ್ಕರಮುತ್ಸಾಹದಿ [4]
ನನವರತಂ ನಿಜ ನಿಜ ಮಿರುಳುಂ ಪಗಲುಂ ।
ಜಿನಪದಮಂ ಜಿನಮತಮಂ
ನೆನೆವ ಮಹಾತ್ಮನೆ ಕೃತಾರ್ಥನವನೀತಳದೊಳ್ [5] ॥ ೧೫

---

1 ಮುಂಡಿಯಪುತ್ರರಂ ವಂದಿಸಿ (ಗ) 2 ಸೀಂ ಮಗುಳ್ದು ಬರ್ಪುದುಂ ವಾರಿಷೇಣಕುಮಾರಂ ನಿನ್ನೊಡನೆ ಬರಲೊಲ್ಲದೆ ಪೆಱಗಿರ್ದ (ಗ)
3 ತನ್ನ ಕಣ್ಣಾಲಿವಿನೆಗಂ ॥ ನೋಡಿ (ಗ) 4 ವಚನದೊಳಂತಾ (ಗ)
5 ಕರಂ ಪೊಗಳ್ವ ನರನೆ ಧನ್ಯಂ ಜಗದೊಳ್ (ಗ)

[ಎಂದು ಮನದೊಳ್ ಭಾವಿಸಿ ವಾರಿಷೇಣಕುಮಾರಂ ಮುಂಡಿ ಪುತ್ರದಿಗಂಬರಾಧೀಶ್ವರನ ಪಾದೋಪಕಂಠದೊಳ್ ಕುಳ್ಳಿರ್ದು ಚರಣ ಯುಗಂಗಳಂ ಮೆಲ್ಲಮೆಲ್ಲನೊತ್ತುತ್ತಿರ್ಪುದುಂ ತನ್ಮುನೀಶ್ವರಂ ಜಿನ ಸಮಯವಾರ್ಧಿವರ್ಧನಚಂದ್ರನಂ ನೋಡಿ ತನ್ನಂತರಂಗದೊಳಿಂ ತೆಂದಂ ||] [1] ೨೭

ದೂರದೊಳಿರ್ದುಮರ್ತಿವೆರಸಂಬುರುಹಕ್ಕೆ ಮುದಾಳಿಸಂಕುಳಂ
ಭೋರೆನೆ ಬಂದು ತೀವಿ ನೆಲಸಿರ್ಪವು ಕಪ್ಪಗಳಲ್ಲಿ ಪುಟ್ಟಿಯುಂ
ಸಾರವು ನೋಡೆಪ್ಪುಡೆಗಳ್ಳಗಳನೊಳ್ಳಿದರಪ್ಪವರಂತು ಪೊರ್ದುವರ್
ದೂರದೊಳಿರ್ದೊಡಂ ಕೆಲದೊಳಿರ್ದೊಡಮೊಂದುವರಲ್ಲರುದ್ಧತರ್ || ೨೮

ಎಂದು ವಾರಿಷೇಣಕುಮಾರನೊಳಾದ [ಮಹಾಭಕ್ತಿಗಂ ತಮ್ಮ ಯ್ಯನೊಡನೆ ಪೋಗದ ಧರ್ಮಾನುರಾಗದಿಂದಿರವಿಂಗಂ ಚೋದ್ಯಂ ಬಟ್ಟಿರ್ಪುದುಂ ಚೇಳಿನೀಪ್ರಿಯಾತ್ಮಜಂ ತನ್ಮುನೀಂದ್ರಂಗಭಿಮುಖನಾಗಿ ತಲೆಯಂ ಬಾಗಿ ಕೈಯಂ ಮುಗಿದಿರ್ದಂತೆಂದಂ ||] [2] ೨೯

ದಾನಮುಮಂ ಧರ್ಮಮುಮಂ
ನಾನಾಪೂಜೆಯುಮನೆಲ್ಲರುಂ ಕೈವಶ್ಯ ।
ಶ್ರೀನಾರಿಯುಸೆಯುದ್ಧಪಂ
ದಾನಂದಂಬೆರಸು ಮಾಡುವರ್ದ್ವಸುಮತಿಯೊಳ್ || ೩೦

ಅಲ್ಲಿ [ನಿರ್ವಾಣಾಕಾಂಕ್ಷೆಯು] [3] ನೆಯ್ದಿಸಲಾರ್ಪ ದೇವನುಮಂ ತಪಮುಮಂ ಧರ್ಮಮುಮನಾಗಮಮುಮಂ ದಾನಮುಮಂ ಪೂಜೆ

---

1 ಎಂದ. ಭಾವಿಸಿ ತನ್ಮುನೀಶ್ವರನ ಪಾದೋಪಕಂಠದೊಳಿರ್ದು ಮೆಲ್ಲಮೆಲ್ಲನ ಕಾಲನೊತ್ತುತಮಿರ್ಪುದುಂ ಮಗಧದೇಶಪುತ್ರಾರ್ಯರ್ ವಾತ್ಸಲ್ಯರತ್ನಾಕರನಂ ನೋಡಿ (ಗ)

2 ಭಕ್ತಿಗೆ ಮೆಚ್ಚುತ್ತಮಿರ್ಪುದುಂ ಸುಕಪಿನಿಕರಪಿಕವಾಕಂದನಿಂತೆಂದು ಬೆಸಗೊಂಡಂ (ಗ) 3 ಮೋಕ್ಷನು (ಗ)

ಯುಮಂ ನಿಮ್ಮಡಿ ನೀಪನಗಳುಸಂತಾಗೆ [ಬಸಸುವುದೆಂಬುದುಂ ಮುನಿ ವೃಂದಾರಕ] [1] ನಿಂತೆಂದಂ ॥ ೩೧

ವನಿತೆಯುರಂ ವನಿತೆಯುರೊಳ್
ಕನಕಮನೋರಂತೆ ಕನಕದೊಳ್ ರತ್ನಮನಿಂ ।
ಬೆನೆ ರತ್ನದೊಳ್ ವಿಚಾರಿಸಿ
ಮನದೊಳ್ ಕೀಲಿಕ್ಕೆಲಿದೆಂದು ನಂಬುವ ತೆಱದಿಂ ॥ ೩೨

ಆಪ್ತನನಾಪ್ತನೊಳ್ ತಪಮಂ ತಪದೊಳ್ ಧರ್ಮಮಂ ಧರ್ಮದೊಳ್ ಆಗಮಮನಾಗಮದೊಳ್ ದಾನಮಂ ದಾನದೊಳ್ ಪೂಜೆಯುಂ ಪೂಜೆಯೊಳ್ ಪರೀಕ್ಷಿಸಿ ಬೇಗಮಿವನಾಪ್ತನಿವನನಾಪ್ತನಿದು ಸತ್ತಪಮಿದು ದುಸ್ತಪಮಿದು ಸದ್ಧರ್ಮಮಿದು ಕುಧರ್ಮಮಿದಾಗಮಮಿದನಾಗಮಮಿದು ಸಪ್ಪನಮಿದು ಕುದಾನಮಿದು ಪೂಜೆಯಿದು ಕುಪೂಜೆಯಿದು ಸುಖಕ್ಕೆ ಕಾರಣಮಿದು ದುಃಖಕ್ಕೆ ಕಾರಣಮಿದು ಮುನ್ನಮಿದು ಬಿಡಿಕಮೆಂಬುದಂ ಬುದ್ಧಿಯಿಂ [2] [ಸಂಚಲಚಿತ್ತನಾಗದೆ ತನ್ನೊಳಾರೈದು ನೋಡಿ] ಜಲಮಿಶ್ರಿತಮಪ್ಪ ಪಾಲಂ ಮುಂದಿಡಲ್ ಹಂಸೆಯಂತು ನೀರಂ ಬಿಟ್ಟು ಪಾಲಂ ಕುಡಿವುದಂತೆ ಕುಧರ್ಮಮಂ ಬಿಟ್ಟು ಸದ್ಧರ್ಮಮಂ ಕೈಕೊಳ್ವುದು ॥ ೩೩

ನಿರ್ದೋಷಿಯಲ್ಲದವನಂ
ಪೊರ್ದಲ್ಕೇಡಾಪ್ತನೆಂದು ಮೇಲ್ಪಟ್ಟನಿಸಂ ।
ನಿರ್ದೋಷಿಯಪ್ಪ ಮನಸಿಜ
ಮರ್ದನನಂ ದೇವನೆಂದು ಪೂರ್ದುಗೆ ಭವ್ಯಂ ॥ ೩೪

ಕುರುಡನಪ್ಪ ಪೊಱಂಬಿಗನಂ ನಂಬಿ ಗಟ್ಟದಿಟ್ಟೆಡೆಯೊಳಿರುಳ್ ದೂರದೇಶಕ್ಕೆ ಪಯಣಂಬೋಪೆನೆಂಬಾತನುಂ ದೋಷಿಯುಪ್ಪಾಪ್ತನಂ ನಂಬಿ ತಪಂಗೆಯ್ದು ಮುಕ್ತಿವಡೆವೆನೆಂಬಾತನುಂ ನಿರ್ಬುದ್ಧಿಗಳಲ್ಲದೆ ಬುದ್ಧಿವಂತರಲ್ಲರ್ ॥ ೩೫

---

1 ಬೆಸಸಿವೆಂಬುದುಂ ಮುನೀಂದ್ರೋತ್ತಮ (ಗ)

2 ಬಳಿಕ್ಕಮಿದುವೆಂಬ ಬುದ್ಧಿಯಿಂ (ಗ)

ತಕ್ಕನಿವನಲ್ಲನಳಿಪಂ
ಟಕ್ಕಂ ಖಳನೆಂದು ಪೊರ್ದರತಿಧೂರ್ತನನೋ ।
ಪಕ್ಕಟೆ ಖಳರಂ ಕ್ರೂರರ
ನುಕ್ಕೆವದಿಂ ದೇವರೆಂದು ಪೇಟ್ ಪೊರ್ದುವುದೇ ॥ ೩೬

ಕಲ್ಲ ದೋಣಿಯುನೇಱಿ, ಬಂದ ತೊಱೆಯೊಳ್ ಪೋಪೆನೆಂಬನುಂ ಕ್ರೂರನಪ್ಪಾಪ್ತನಂ ಪಿಡಿದು ಮೋಕ್ಷಕ್ಕೆ ಪೋಪೆನೆಂಬನುಂ ಕರಮೊಗ್ಗರಲ್ಲದೆ ಚತುರರಲ್ಲರ್ ॥ ೩೭

[ಇಪನೀಧಾತ್ರಿಗೆ ತಾಂ ಮಹಾಪ್ರಭು ಗಡಾ ಪೋವಿಂತೆದೇಕಟ್ಟು ಕಾ ಡುವನೆದ್ರೋಹುವೆನಟ್ಟಿ ಬೇಡುವನಣಂ ನಾಣಿಲ್ಲ ಬೂತೆಂದು ದೂ ಱುವರಾರಾದೊಡಮಟ್ಟಿ ಮರ್ತ್ಯರುಮನಿಂತೇನೆಂಬೊಡಂ ಪೋಗಿ ನಂ ಬುವನೆಗ್ಗಂ ನೆಱೆ ದೇವರೆಂದು ವಿಟರಂ ಚಾಪಲ್ಯರಂ ಧೂರ್ತರಂ ॥ ೩೮

ಬ್ರಹ್ಮಚರ್ಯಂಗೆಟ್ಟು ತಪಮಂ ಮೊದಲಾಗೆ ಕೈಕೊಳ್ಳರೆಂದೊಡೆ ಪರವಧೂಪ್ರಿಯರಪ್ಪರಂ ಸರ್ವಜ್ಞರೆಂದುತು ಕೈಕೊಂಡಾಡುವರೋ ॥

ಪುಸಿವನಿವಂ ಮಹಾವ್ಯಸನಿ ಕಳ್ಳನಿವಂ ಕಡುಧೂರ್ತನೆಂದು ಶಂ
ಕಿಸಿ ಭಯದಿಂದೆ ಬಚಱಳಸಿ ಮಾನಿಸರಂ ಮೊದಲಾಗೆ ಪೊರ್ದಿ ರಂ
ಜಿಸುವ ಸುವಸ್ತ್ರಧಾರಿಗಳನಿಷ್ಟವಿಘಾತರ ನಷ್ಟಶೌಚರಂ
ಪುಸಿವರನಾಪ್ತರೆಂದು ನೆಱೆ ಪೊರ್ದುವ ಮರ್ತ್ಯನೆ ಗಾಂಪನುರ್ವಿಯೊಳ್ ॥

ಅರಸಿನ ಮೇಲರಸಾದೊಡೆ ಮೊದಲಾಗೆ ನಾಡೆಲ್ಲಂ ಕೆಟ್ಟು ಪಾೞಪ್ಪುದೆಂದೊಡೆ ಜಗದೊಳಡಕಿಲ ದೈವಮಾದೊಡೆ ಕಿಡದಿರ್ಕುಮೆ, ನಾಡ ನಾಳ್ವರಸು ಮೊದಲಾಗೆ ಕ್ರೂರನಾದೊಡೆ ಲೋಕಮೆಲ್ಲಂ ಕಿಡದಿರ್ಕುಮೆ; ವಿಟನಪ್ಪ ಪ್ರಭುವಂ ಮೊದಲಾಗೆ ಬಗೆಯರೆಂದೊಡೆ ವಿಟನಪ್ಪ ದೇವನ ನೆಂತು ಬಗೆವರದಱಿಂ ದೇವರ್ಪಲರಿಲ್ಲ ನಿರ್ದೋಷಿಯಪ್ಪನೊರ್ವನೆ;

ಪರಮಾತ್ಮನುಂ ಶಾಂತರೂಪನಲ್ಲದೆ ಕ್ರೂರನಲ್ಲಂ ; ಮನೋಹವಿದ್ರಾವಣ ನಲ್ಲದೆ ವಿಟನಲ್ಲನೆಂದು ನಂಬುವುದು ॥] ೪೧

ಅರಸನ ನಡೆದೋಜೆಯು ವಿ
ಸ್ತರದಿಂದಂ ಪ್ರಜೆಗಮೋಜೆ ತಂತಮ್ಮಾಪ್ತರ್ ।
ಚರಿಸುವ ಪ್ರೋಜೆಯೊಳೇಕೆಯೊ
ಚರಿಯಿಸರನ್ಯರ್ಪಿರುದ್ಧವಿದು ಧಾರಿಣಿಯೊಳ್ ॥ ೪೨

ಜಗದೊಳಾದೊಡಂ ಸದಾಚಾರರಂ ಕೈಕೊಳ್ವಂತೆ ದುರಾಚಾರರನೇಕೆ ಕೈಕೊಳರನ್ಯವನಿತಾಪ್ರಿಯರಂ ದೂಱುವಂತೆ ಶುಚಿಗಳನೇಕೆ ದೂಱರ್ ಕಳ್ಳರಪ್ಪರಂ ಕೊಲ್ವಂತ ಕಳ್ಳರಲ್ಲದರನೇಕೆ ಕೊಲ್ಲರ್ [ಪುಸಿವವರಂ ದುಷ್ಟರೆಂಬಂತೆ ಸತ್ಯಮುಳ್ಳರನೇಕೆ ದುಷ್ಟರೆನ್ನರ್ ಕಳ್ಗುಡಿವವರಂ ಪೊಲ್ಲರೆಂಬಂತ ಪಾಲ್ಗುಡಿವವರನೇಕೆ ಪೊಲ್ಲರೆನ್ನರ್ ಅಡಗಟ್ಟುಮಡಕೆಯುಂ ಪೊಱಗಿಡುವಂತ ಕಾಯನಟ್ಟ ಮಡಕೆಯುನೇಕೆ ಪೊಱಗಿಡರ್ ಕೊಂದರಂ ಕೊಲ್ವರಂತೆ ಕೊಲ್ಲವರನೇಕೆ ಕೊಲ್ಲರ್] ದ್ರೋಹರಪ್ಪವರಂ ಕವರ್ವಂತೆ ತಕ್ಕರನೇಕೆ ಕವರರ್ ಸಾಧುಗಳ್ಗೆ ಕೈಮುಗಿವಂತೆ ದುಷ್ಟರ್ಗೇಕೆ ಕೈಮುಗಿಯರ್ ಬ್ರಹ್ಮಚರ್ಯಮುಳ್ಳವರ್ಗೆಱಗುವಂತೆ ಮಿಂಡರ್ಗೇಕೆಱಗರ್ ನಿಸ್ಪೃಹರ್ಗೆ ಕೂರ್ಪಂತೆ ಕಾಂಕ್ಷಿತರ್ಗೇಕೆ ಕೂರರ್ ತಪಂಗೆಯ್ವರ್ಗೆ ಕೈವಾರಂಗೊಳ್ವಂತೆ ದುಷ್ಟರ್ಗೇಕೆ ಕೈವಾರಂಗೊಳರ್ ಅನ್ಯಾಯಪರರಂ ಕಿಡಿಸುವಂತೆ ನ್ಯಾಯಪರರನೇಕೆ ಕಿಡಿಸರ್ ಚಾರಿತ್ರಂಗೆಟ್ಟರನಾಟ್ಟಡಿಗಳವಂತೆ ಚಾರಿತ್ರಮುಳ್ಳರನೇಕಾಟ್ಟಡಿಗಳಯರ್ ಅದು ಕಾರಣದಿಂದೆಲ್ಲನಿತು ಪೊಲ್ಲಮೆಯೊಳಂ ಪೊರ್ದದಂತಪ್ಪ ದೇವನೆ ದೇವಂ ಪೊಲ್ಲಮೆಯೊಳ್ಕೂಡಿದಾತಂ ದೇವನಲ್ಲನೆಂಬುದಂ ಲೋಕದೊಳಾದ ನಡೆವಳಿಯಿಂದಮೇ ಲೇಸಾಗಱಿವುದಿನ್ನು ತಪಮೆಂತಪ್ಪುದೆಂದೊಡೆ ॥ ೪೩

ಪೆಣ್ಣಿಂಗಂ ಪೊನ್ನಿಂಗಂ
ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ ।

ಬಣ್ಣಿಸೆ ಚಂಚಲನಾಗದೆ
ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ ॥ ೪೪

[ಕರ್ಗಲ್ಲೆನಿತು ಬಳ್ಪುದೊಡಂ ಬೆಲೆಗೆಯ್ದುವೇ; ರತ್ನಮಾದೊಡೆ ಬೆಲೆಗೆಯ್ದುಗುಂ ; ಮಿಥ್ಯಾದೃಷ್ಟಿಯ ತಪಮೆನಿತೊಳ್ಳಿತಾದೊಡಂ ಶಾಶ್ವತ ಮಪ್ಪ ಸುಖಮಂ ಕುಡಲಾರ್ಕುಮೇ ? ಶುದ್ಧದರ್ಶನದೊಳ್ಕೂಡಿದೊಡೆ ನಿರಂತರಮಪ್ಪ ಸುಖಮಂ ಕುಡುಗುಂ ॥ ೪೫

ಪಾಲೊಳ್ ಮೊಕ್ಕಳಮಾಗೆ ಪೊಯ್ದ ಜಲಮುಂ ಬೆಳ್ಪಕ್ಕುಮಂತಲ್ಲದಾ
ಪಾಲೆಂತುಂ ರುಚಿಯಾಗದಂತೆ ಕೆಲಬರ್ಮಿಥ್ಯಾತ್ವದುಃಖಂಗಳೊಳ್
ಕಾಲಚ್ಛಿದ್ರರ್ ತಪಂಗಳಂ ನೆಗಪೆದ್ದೊಡಂ ದುಷ್ಕರ್ಮರೆಂತಿರ್ದೊಡಂ
ಭೂಲೋಕಸ್ತುತಮಪ್ಪ ಸತ್ತ್ವಪದೊಳಂ ಪೊಂದಿರ್ದರಂ ಪೋಲ್ವರೇ ॥೪೬

ಕರ್ಬುನಮೆನಿಸು ಕಾಯ್ದು ಮೃದುವಾದೊಡಂ ಕಮ್ಮರಿಲ್ಲದೆ ಖಡ್ಗಾದಿಶಸ್ತ್ರಂಗಳಾಗದಂತೆ ಕುಮಾರ್ಗಾನುರಾಗಿಗಳೆನಿಸು ಕುದಿದು ತಪಂಮಾಡಿದೊಡಂ ನಿರ್ದೋಷಿಯಪ್ಪ ಪರಮಾತ್ಮನಂ ಪೊರ್ದದೊಡಲ್ಲದೆ ಸಕಲಸುಖಮನೆಯ್ದಲಾರರಿಂತು ॥ ೪೭

ನೀರಿಲ್ಲದೆಡೆಯ ಬೆಳಸುಂ
ಕ್ರೂರರ ಕೆಳೆಯುಂ ವಿವೇಕಿಯಲ್ಲದನರಸುಂ ।
ಸಾರಗುಣಮಿಲ್ಲದಾತನ
ಚಾರಿತ್ರಮುಮೊಪ್ಪಲಾಱವೆಂತುಂ ಕಡೆಯೊಳ್ ॥ ೪೮

ರಂಡೆ ನಡಪಿದನ ಗುಣಮುಂ
ಗಂಡಿಲ್ಲದ ಭಟನ ಯುದ್ಧಮುಂ ಧರೆಯೊಳ್ ಕೈ ।
ಕೊಂಡುಱೆ ನೆಗಱದ ತಪಮುಂ
ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ ॥ ೪೯

ಪಿರಿದಪ್ಪ ಶಕ್ತಿ ತನಗುಳ್ಳೊಡಂ ಸುರಂಗಿಯಲ್ಲದೆ ಪಣಿದಗುರ್ವು ಪೞಿಯದಂತೆ ದೋಷವಿರಹಿತನಪ್ಪ ಪರಮಾತ್ಮನ ಮತಮಂ ಪೊರ್ದಿದೊಡಲ್ಲದೆ ಸಮಸ್ತಕರ್ಮಂಗಳುಂ ನಿರ್ಮೂಲಮಾಗಲಱಿಯವು ॥ ೫೦

ಸಜ್ಜ್ಞಾನವಿಲ್ಲದನ್ನೆಗ
ಮಜ್ಞಾನಮದಿರ್ಕು ಬುದ್ಧಿವಂತರ್ ನಯದಿಂ ।
ದಜ್ಞಾನವೆನೆಱವೊಡೆ ಕೇ
ಳ್ಸಜ್ಜ್ಞಾನಮನೆಯ್ದೆ ತಿಳಿಗೆ ಜೈನಾಗಮದೊಳ್ ॥ ೫೧

ಪಡಿಯಱನೆನಿತುಕೂರ್ಪೊಡಮರಮನೆಯನಂಸನನುಮತಮಲ್ಲದೆ ಪುಗಲ್ಬಾರದಂತೆ ಮಿಥ್ಯಾದೃಷ್ಟಿಗಳೆನಿತುತಪದಿಂ ಕಾಯಕ್ಲೇಶಂಬಟ್ಟೊಡಂ ದೇವರೆಂದಿರ್ದೊಡಂ ಕುಚರ್ಕಗಳಿಂ ಬಾಯಾರ್ವೊಡಂ ಸಜ್ಜ್ಞಾನವಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮನೈದಲ್ಬಾರದು ॥] ೫೨

ನಾಯಕನಿಲ್ಲದ ರಣಮುಂ
ಮಾಯಾವಿಯ ಪರದುಮಳಿಪನಪ್ಪನ ಧನಮುಂ ।
ನ್ಯಾಯಮಣಮಿಲ್ಲದವನ
ಶ್ರೀಯುಂ ನಿರ್ದಯನ ತಪಮುಮೇನೆಸೆದಪುದೇ ॥ ೫೩

ದೇವನ ದೊರೆಯ ಬಂಟರುಂ ದಿವಿಜಗಜದ ದೊರೆಯ ಮದವಾರಣಂಗಳುಮುಳ್ಳೊಡಂ ಮುಖ್ಯನಾಯಕನಿಲ್ಲದೆ ಮಾರ್ಪಡೆಯಂ ಗೆಲ್ದು ಗೆಲ್ಲಂಗೊಳಲ್ಬಾರದಂತೆ ದಾನಪೂಜೆಶೀಲೋಪವಾಸಂಗಳಂ ಮಾೞ್ಪುದಾರ ಗುಣಮುಳ್ಳೊಡಮರಿದೆನಿಸುವ ತಪಮಂ ಮಾೞ್ಪ ದೇಹದ ಬಲಮುಳ್ಳೊಡಂ ಅಷ್ಟಾದಶದೋಷದೂರನಪ್ಪ ದೇವನಂ ಸಾರದೆ ಕರ್ಮಂಗಳಂ ಗೆಲ್ದು ನಿರ್ವಾಣಸಾಮ್ರಾಜ್ಯಮಂ ಪಡೆಯಲ್ಬಾರದು ॥ ೫೪

ದಿನಕರನಿಲ್ಲದಂಬರಮುಮುನ್ನತಿಯಿಲ್ಲದ ರಾಜ್ಯಲೀಲೆಯುಂ
ವನಿತೆಯರಿಲ್ಲದೋಲಗಮುಮಾತ್ಮಜರಿಲ್ಲದ ಗೇಹಮುಂ ಜಗ

ಜ್ಞನನುತಮಪ್ಪ ಪಾಪಹರಮಪ್ಪ ಸದಾಶುಚಿಯಪ್ಪ ಶುದ್ಧದ
ರ್ಶನಮಣಮಿಲ್ಲದಾತನ ತಪೋಗ್ರತೆಯುಂ ನೆರ್ದೊಪ್ಪಲಾರ್ಕುಮೇ ||೫೫

[ಕೈದುವುಳ್ಳೊಡಂ ಭುಜಬಲಮುಳ್ಳೊಡಂ ಮನಮಿಲ್ಲದನಿತಱೊಳ ಪಗೆಯುಸಿಱಿಯಲ್ಬಾರದಂತೆ ತಪಮುಳ್ಳೊಡಂ ದರ್ಶನಮಿಲ್ಲದೆ ಸಕಲಕರ್ಮಂಗಳಂ ಕಿಡಿಸಲ್ಬಾರದಾ ಕರ್ಮಂ ಕೆಟ್ಟೊಡಲ್ಲದೆ ನಿಶ್ಶ್ರೇಯಸಶ್ರೀಯುಂ ಪಡೆಯಲ್ಬಾರದ]ದಱಿಂ ಶುದ್ಧದರ್ಶನದೊಳ್ ಮುನ್ನಂ ದೃಢರಾಗಿ ಬೞಿಕ್ಕೊಳ್ಳ ತಪ್ಪ ತಪಮಂ ಮಾೞ್ಪುದೀಧರ್ಮಮೆಂತಪ್ಪುದೆಂದೊಡೆ || ೫೬

ಕೊಲೆಯೆಂಬೀನುಡಿಗೆ ಮಹಾ
ಕಲಿಯುಂ ಮೊದಲಾಗ ನಾಡೆ ಬೆರ್ಚುವನೆಂದಂ |
ದೆಲೆ ಗಳ ಬಗೆವೊಡೆ ಜಗದೊಳ್
ಕೊಲೆಯಿಂದಂ ಬಿಟ್ಟು ಪಾತಕಂ ಪೆಱತುಂಟೇ || ೫೭

ಘಮ್ಮನೆ ಸಾವಾಯ್ತೀತನ
ಧರ್ಮದಿನಾನಂದು ಬಪ್ಪನೆಂಬೀ ನುಡಿಯುಂ |
ಕೂರ್ಮೆಯೊಳ ನುಡಿವೊಡೀತನ
ಧರ್ಮದೊಳಾನಱಿದೆನೆಂದು ನುಡಿವವರೊಳರೇ || ೫೮

[ಬಲ್ಲಿದರಪ್ಪರಸುಗಳನ್ಯಾಯದಿಂದಿನಿತರ್ಥಮಂ ತೆಱಲ್ವೇೞ್ಕುಮೆಂಬರಿಂತಿರ್ಪವರೂರೂರ್‌ದಪ್ಪದೋರೊರ್ವರ ಜೀವಮಂ ಕುಡಲ್ವೇೞ್ಕುಮೆಂದೊಡೆ ನಾಡೆಲ್ಲಮಾತನೊಳದಿರ್ಕೆ ಕಾದುವರಲ್ಲದೆ, ತೆಱುವವರಲ್ಲದಱಿಂ ಜೀವವಧೆಯು ಮಹಾಪಾಪಂ || ೫೯

ಸುತರುಂ ನಂಟರುಮಯ್ಯನುಂ ಕೆಳೆಯನುಂ ಬಲ್ಲಾಳ್ಗಳುಂ ನೋಡೆ ನೋ
ಡೆ ತಗುಳ್ದಟ್ಟಿ ಪೊರಳ್ಚಿ ಕೊಂದ ಪಗೆಯುಂ ಕೊರ್ವ್ವರ್ಥಯಂಗೊಳ್ವನಂ

ಕ್ಷಿತಿಯಂ ಪೊಕ್ಕುಳಿತಿರ್ದೊಡಂ ಛರದಿನಿನ್ನಿಂತಪ್ಪುದಂ ತಾನೆ ಕಾ
ಣುತುಮಿರ್ದುಂ ಕೊಲೆ ಧರ್ಮಮೆಂದು ಪಿಡಿವಂ ಗಾಂಪಂ ಪೆಱರ್ಗಾ
ಪರೇ ॥ ೬೦

ಈ ಬಟ್ಟೆಯೊಳ್ಸ್ವಂಕಂ ಪಿರಿದೆಂದೊಡೆ ಮೊದಲಾಗದೆಂಬುಱಲ್ಲಿಗೆ ತಕ್ಕರ್ಥಮಂ ಕೊಟ್ಟು ಪೋಪಮ.ಂಬರ್ದಾರಿಗಳಳೊಳಸ್ತಾಬಟ್ಟೆಯೊಳ್ ಕೊಂದಪರೆಂದೊಡೆ ಭಯದಿಂ ಪೋಗಲೊಲ್ಲರೆಂದೊಡೆ ಕೊಲೆಯಿಂದ ಮಗ್ಗಳಂ ಪಾಪಮಿಲ್ಲ ॥ ೬೧

ಪಗೆಯುದ್ಧಂ ಕೊಲೆಯಿಂ ಸುಖ
ಮಾಗದು ಕಡುದುಃಖಮುಕ್ಕುವುಂಬುದನಱಿದಿಂ ।
ಬಾಗಿ ತಿಳದೆಯ್ದಿ ಕೊಲೆಯು
ದ್ಯೋಗಮನತಿಕಷ್ಟಮೆಂದು ಬಿಡುವುದು ಭವ್ಯಂ ॥ ] ೬೨

ದೂತನ ಪೋಗೆಯುಂ ಕಂಡು ಕಿಚ್ಚುಂಟೆಂದಱಿವಂತೆ ಮಹಾವಿಭೂತಿಯಂ ಬಿಟ್ಟೆಕ್ಕಡವಂ ಸುಟ್ಟು ಬಿಲ್ಲಂ ಕೊಂಡು, ಕರಿತುರಗಾದಿಗಳನೊಲ್ಲದೆ ನಾಯಿಗಳ್ವೆರಸು ಸಿವಿಗೆಯುಸಿರಿಸಿ ನಡೆದು, ಗಣಿಕಾಜನಮುಂ ಮಂಡಳಿಕರುಂ ಸಾಮಂತರುಮಿಲ್ಲದೆ ಕ್ರೂರರಪ್ಪ ಬೇಂಟೆಗಾಱರೊಳ್ಕೂಡಿ, ಮಣಿಕಂಕಣಮನೊಲ್ಲದೆ ಕೈಪೊಡೆಯಂ ಕಟ್ಟಿ, ದಿವ್ಯಾಂಬರಮನೀಡಾಡಿ ಕರಿಯ ಕುಪ್ಪಸಮಂ ತೊಟ್ಟು, ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ, ಪಂಚಮಹಾಶಬ್ದಮನೊಲ್ಲದೆ ಬೇಂಟೆಪಱೆಯುಂ ಪೊಯ್ಸಿ, ಶಾಂತರೂಪಂ ಬಿಟ್ಟು ಕ್ರೂರರೂಪು ಕೈಕೊಂಡು ನಗೆಯಂ ಬಿಟ್ಟು ಮುಳಿಸನೊಳಕೊಂಡು, ಬೇಂಟೆಗೆ ಪೋಪ ರೌದ್ರಾತ್ಮರ ನೆಗಡ್ತೆಯೆ ನರಕಗಮನಮನಱಿಪುಗುಮದಂ ಕಂಡು ಕೊಲೆಯೆ ದುಃಖಹೇತುವೆಂದಱಿದು ಕೊಲೆಯುಂ ಮಾಣ್ಬುದು ॥ ೬೩

ಸೊಗಯಿಪ ಸುಖದೊಳ್ಕೂಡುವ
ಬಗೆಯುಳ್ಳೊಡೆ ಜೈನಮಾರ್ಗಮಂ ನಂಬುಗೆಯಿಂ ।
ಸುಗಮಮನೆ ಪಿಡಿದು ಬಿಡುವುದು
ಪಗೆಯಿಂದುಳ್ಳಕ್ಕೆ ಕೊಲೆಯೊಳೊಂದಿದ ಮತಮಂ ॥ ೬೪

ಇನ್ನಾಗಮಮೆಂತಪ್ಪುದೆಂದೊಡೆ, ವಿಚಾರಮಂ ತಿರ್ದುವ ಧರ್ಮಾಧಿಕರಣರೆಂತವರವರ್ನುಡಿವ ಪದ್ಧತಿಯಿಂದಿವರ್ಕಳ್ಗರಿವರ್ಶುದ್ಧರೆಂದಱಿವರಂತೆ ಬುದ್ಧಿವಂತರ್ ಸಕಳಾಗಮಂಗಳೊಳಾದ ನುಡಿಗಳಂ ಪರೀಕ್ಷಿಸಿ ತಿಳಿದು ನರಕಕ್ಕೆ ಕಾರಣಮಪ್ಪ ಕುಮತಮಿದು ಮೋಕ್ಷಕ್ಕೆ ಕಾರಣಮಪ್ಪ ಸನ್ಮತಮಿದೆಂದು ನೋಡಿ ಪಿಡಿವುದು ॥ ೬೫

ಕುರುಡನುಮನೇಱೆದುಂ
ಸುರಗಿರಿ ಮುಂದಿರ್ದುದಾದೊಡಂ ಕಾಣ್ಬರೆ ಕಾ ।
ಪುರುಷಮಿಥ್ಯಾಜ್ಞಾನಿಗ
ಳಱುನಿರ್ವೃತಿಗುಯ್ವ ಧರ್ಮಮಂ ಕಂಡಪರೇ ॥ ೬೬

ಎನಿಸು ಶಕ್ತಿಯುಳ್ಳೌಷಧಮಂ ತಱಿಂಟುದಲೆಯೊಳ್ ರೋಮಮಂ ಪುಟ್ಟಿಸಲಾಱದು; ಎನಿತು [ಗಾರುಡಮಂತ್ರ] ಬೀಜಾಕ್ಷರಮಾದೊಡಂ ಕೊಟೆವಾವಂ ಕೇಳಿಸಲಾಱದು; ಎನಿತುಶೃಂಗಾರವತಿಯಾದೊಡಂ ಸೂಳ್ ವಿರಕ್ತನನೊಲಿಸಲಾಱಳಂತೆ ಬದ್ಧಮಿಥ್ಯಾದೃಷ್ಟಿಯಪ್ಪ ಜೀವಮುಮಂ ಬೇಗಂ ನರಕಂಬುಗಲ್ವೇಡಿರ್ದ ಜೀವಮುಮಂ ಅಭವ್ಯನಪ್ಪ ಜೀವನುಮಂ ಪರಮಾಗಮಮೆನಿತುಲೇಸಾಗಿಯುಂ ಸೋಲಿಸಲಾಱದದು ಪ್ರಮಾಣಮಲ್ಲದು ಬುದ್ಧಿವಂತರಪ್ಪರಾರ್ಯೆದು ತಿಳಿದು ನಂಬುವುದು ॥ ೬೭

ಪೇಲಿಂಗೆ ನೊಣಂಗಳ್ ಕಡು
ಸೋಲದಿನೆಱಗುವುವು ಕಪ್ಪುರಕ್ಕೆಱಗೆಯುದ್ದಂ ।
ಸೋಲದಿನೆಱಗವು ಜಗದೊಳ್
ಪೇಲೇಂ ಮೇಲಾಯ್ತೆ ಕಪ್ಪುರಂ ಕೀೞಾಯ್ತೇ ॥ ೬೮

[ಪಿತ್ತಮುಳ್ಳವಂಗೆ ಪಾಲ್ ಕೈಪೆಯುಕ್ಕುಮಲ್ಲದೆ ಪಿತ್ತಮಿಲ್ಲದಂಗೆ ಕೈಪೆಯಾಗದಂತೆ ತೀವ್ರಕರ್ಮಮುಳ್ಳವಂಗೆ ಪರಮಾಗಮಮಂ ರಂಜಿಸದಲ್ಲದೆ ಲಘುಕರ್ಮಿಗೆ ರಂಜಿಸುಗುಂ ॥ ೬೯

ಮೊದಲಿಂ ಕಡೆವರೆಗಂ ಪೇ
ೞ್ವುದು ಪೂರ್ವಾಪರವಿರುದ್ಧಮಪ್ಪಾಗಮದೊಳ್ ।
ವಿದಿತಂ ಕೇಳಿಲ್ಲದಱಿಂ
ಸುದೂರಮಾ ಮೋಕ್ಷಮೆಂದು ನಂಬುವುದು ಬುಧಂ ॥ ೭೦

ಪೂರ್ವಾಪರವಿರೋಧಮಂ ಕಂಡೊಡೆ ಮೊದಲಾಗೆ ಲೋಕದ ಜನಂಗಳವರ್ಕಳ್ಳನೆಂದು ನಂಬರೆಂದೊಡೆ ಪೂರ್ವಾಪರವಿರುದ್ಧಮಪ್ಪಾಗಮಮನೆಂತು ಕಲರ್ಜಡಮತಿಗಳ್ ನಂಬುವರೋ ॥] ೭೧

ಪೇೞ್ವರ್ತಮ್ಮಿಚ್ಛೆಗೆಪರೆ
ಪೇೞ್ವರದೇಂ ದೋಷಮಾಯ್ತು ಬಳ್ತನದಿಂದಂ ।
ಕೇಳ್ವರ್ತಾವೆತ್ತಾಗದೆ
ಕೇಳ್ವುದು ಲೇಸಾಗಿ ಮನದೊಳಾರಯ್ಯುತ್ತುಂ ॥ ೭೨

ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತ ಸೂಳಬಂಟಂಗಾಱದ ಶಂಖದಗೊರವನಂ ಬಡಿದರೆಂಬಂತೆ ಪೆಂಡಿರ ದೋಷಕ್ಕೆ ಮಕ್ಕಳ ಮೂಗಂ ಕೊಯ್ದರೆಂಬಂತೆ ಅವಿಚಾರದಿಂ ಪಕ್ಷಪಾತಿಯಾಗದೆ ಮಾಣಿಕಬಟ್ಟಂ ಮಾಣಿಕಮಂ ಪರೀಕ್ಷಿಸುವಂತೆ ಪರದಂ ವಸ್ತುವಂ ಪರೀಕ್ಷಿಸುವಂತ ಸುಜನವಿದಗ್ಧರಂ ಪರೀಕ್ಷಿಸುವಂತೆ ಬಂಡಾರಿಗಪೊರ್ನ್ನಂ ಪರೀಕ್ಷಿಸುವಂತೆ ವಿಚಾರಪೂರ್ವಕಮಾಗಿ ಧರ್ಮಂಗಳಂ [1] ಪರೀಕ್ಷಿಸಿ ಪರಮಾಗಮಮಪ್ಪುದನೇಕಚಿತ್ತದಿಂ ನಂಬಿ ಸಂಶಯಮತಿಯಾಗದೆ ತದಾಗಮಕ್ರಮದೊಳ್ ನೆಗೞ್ವುದು; ಇಂತೀದಾನಮೆಂತಪ್ಪುದೆಂದೊಡೆ ॥ ೭೩

ಉರಗತತಿಗಂ ಗೋವೃಂದಕ್ಕಂ ಮನೋಹರಮಾಗೆ ಚಿ
ಚ್ಛರದಿನೆಱೆಯಲ್ಬೇಗಂ ಕೇಳೊಂದೆ ಬಾವಿಯ ನೀರನಾ

1 ವಿಚಾರಮಪ್ಪೀಪೂರ್ವಕ್ರಮಂಗಳಂ (ಗ)

ದರದಿನುರಗಂ ಪೀರ್ದಾನೀರ್ನಂಜು ಜೀವಧನಂ ಸವಿ
ಸ್ತರದೆ ಕುಡಿವಾ ತೋಯಮಂ ಪೋಲಂತೆ ಪಾತ್ರಮಪಾತ್ರಮುಂ [1] ॥ ೭೪

ಸೌಳಪ್ಪ ಭೂಮಿಯನುತ್ತು [ದಕಪನೆ ಚೀದು] ಕಸವೆಂ ಕಳೆದು ಬಿತ್ತಿ ಬೇಲಿಯನಿಕ್ಕಿ ಪಿರಿದುಂ ಪ್ರಯತ್ನಮಂ ಮಾಡಿದೊಡಂ ಕರಿಯ ಭೂಮಿಯ ಬೆಳೆನಂತಕ್ಕುಮು, ಕುಪಾತ್ರಕ್ಕೆನಿತು ಕುದಿವ ಭಕ್ತಿಯಿಮಾಡಿದೊಡಂ ಸುಪಾತ್ರಕ್ಕೆ ಕೊಟ್ಟ ದಾನದ ಫಲದಂತಾಗಲಱಿಯದದಱಿಂ ಸುಪಾತ್ರದಾನಮು ಮಿಗಿಲೆಂದಱಿವುದು; ಇಂತೀಪತ್ರಾಪ್ರಜೆಯೆಂತಪ್ಪುದೆಂದೊಡೆ ॥ ೭೫

ಎಲವದ ಪುಷ್ಪದೊಂದುಕಮನೀಯತೆಯುಮಂ ಗಿಳಿ ಕಂಡು ಸೋಲ್ತುಕೋ
ಮಲಮಿದಱಿಂದಮಿಂತುಟುಫಲಂ ಪಲಿವಾಗದೆ ಪೋಣದೆಂದು ಸಂ
ಚಲಮತಿ ಕಾದುಕೊಂಡು ನಲಸಿದುರ್ ಬಱಿಕ್ಕಮ ಮೂಱಮಾಗೆ ಪೋ
ಯ್ತುಲಸಿಪೂಡಪುರ್ಗೆಟ್ಟನಿಪಮೋಲ್ ಫಲಮಾಗದು ಕೇಳ್ಕುಪೂಜೆಯೊಳ್ ॥

[ಬೊಬ್ಬುಲಿಯ ವನಕ್ಕೆಸಿಸುಕೂಮಱಯಿಂ ಬೇಲಿಯನಿಕ್ಕಿ ಸೀರ ನೆಱೆದೊಡಂ ಮಾವಿನ ಪನದಂತೆ ಫಲಮಾಗಲಾರ್ಕುವೆ? ಕುದೈವಂಗಳ್ಗೆನಿತುಭಕ್ತಿಯಿಂ ಪೂಜಿಸಿ ಪೊಡೆವಟ್ಟೊಡಂ ಸುದೈವಮನಾರಾಧಿಸಿ ಪಡೆವ ಫಲಮಂ ಪಡೆಯಬಾರದು] ೭೭

ಮಾಗಿಯೊಳಾದ ಶೀತದೊವನಿಂಗಿಱಲಾಱದೆ ಸೇದೆಗೆಟ್ಟು ಬೇ
ಳಾಗಿ ಸುಬುದ್ಧಿಗೆಟ್ಟು ಗುರುಗುಂಜಿಗಳಂ ಮುಸುಗಳ್ವನೋದದಿಂ
ಪೋಗದೆ ರಾಶಿಮಾಡಿ ಶಿಖಿಗೆತ್ತುವ ಕಾಯ್ಮವೊಲಲ್ಪಬುದ್ಧಿಗಳ್
ರಾಗಿಸಿ ಪೊರ್ದಲೇಂ ಗಳ ಕುದೈವದೊಳಂ ಫಲಮಾಗಲಪ್ಪುದೇ ॥ ೭೮

[ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಱಿಯದಂತೆ ದೈವಮೆಂಬ

[1] ಅಂತೆಮಾಳ್ಪುದು ಪಾತ್ರಮಂ (ಗ)

ಪೆಸರಿಂಗೆ ಕುದೈವವೆಂಬುವನೞರ್ತಾರಾಧಿಸಿದೊಡೆ ಸುದೈವವನಾರಾಧಿಸಿ ಪಡೆದ ಲಾಭವಂ ಪೋಲಲಱಿಯದು ॥] ೭೯

ಈ ಪರಧರ್ಮದಿಂದಘಕುಲಂ ಕಿಡುಗುಂ ಸುಖಮಕ್ಕುಮಕ್ಷಯ
ಶ್ರೀವಧು ಸಾರ್ಗುಮುನ್ನತಿಕೆಯಕ್ಕು ಮಳಂ ಕಿಡುಗುಂ ಕುಧರ್ಮದಿಂ
ಬೇವಸಮಕ್ಕುಮುಗ್ರನರಕಾರ್ಣವದೊಳ್ ಡ ಬೀೞ್ವೆನೆಂಬುದಂ
ಭಾವಿಸಿ ನೋಡಿ ತನ್ನೊಳ್ ಪರೀಕ್ಷಿಸಿ ಮಾೞ್ಪುದು ಧರ್ಮಮೆಂಬುದಂ॥೮೦

ಲೋಚಂ ಮಾಡಿಸಿಕೊಂಬುದರಿದೋ ಬೋೞಿಸಿಕೊಂಬುದರಿದೋ ಬತ್ತಲೆಯಿರ್ಪುದರಿದೋ ಸೀರೆಯನುಟ್ಟಿರ್ಪುದರಿದೋ, ಪೆಂಡಿರಂ ಬಿಟ್ಟಿರ್ಪುದರಿದೋ ಪೆಂಡಿರೊಳ್ ಕೂಡಿರ್ಪುದರಿದೋ, ಮೀಯದಿರ್ಪುದರಿದೋ ಮೀವುದರಿದೋ, ಮಣೆಯೊಳ್ ಪಡುವುದರಿದೋ ಪಾಸಿನೊಳ್ ಪಡುವುದರಿದೋ, ಕಮ್ಮಿಲುಂಬುದರಿದೋ ತಳಿಗೆಯಲುಂಬುದರಿದೋ, ಕುಳ್ಳಿರ್ದುಂಬುದರಿದೋ ನಿಂದಿರ್ದುಂಬುದರಿದೋ, ನೀರಂ ಕುಡಿವುದರಿದೋ ನೀರಂ ಕುಡಿಯದಿರ್ಪುದರಿದೋ, ಏಕಭುಕ್ತಮಂ ಮಾೞ್ಪುದರಿದೋ ಪಲವುಸೂೞುಂಬುದರಿದೋ, ತೊಲಗದೊಂದೆಡೆಯೊಳಿರ್ಪುದರಿದೋ ತಿರುಗುತ್ತಿರ್ಪುದರಿದೋ, ಪಲ್ಲಂ ಸುಲಿದುಕೊಂಡಿರ್ಪುದರಿದೋ ಪಲ್ಲಂ ಸುಲಿಯದಿರ್ಪುದರಿದೋ, ಮುಟ್ಟುಪಡವಾದೊಡೆ ಕೂಡೆ ನೀಡಾಡುವುದರಿದೋ ಮುಟ್ಟುಪಡಮಿಲ್ಲದುದರಿದೋ, ತನಗಲಾಭಮಾದೊಡುಣ್ಣದುದರಿದೋ ಪಡೆದೊಡೆ ಮತ್ತುಂಬುದರಿದೋ, ಸುಗಂಧದ್ರವ್ಯಮಂ ಪೂಸುವುದರಿದೋ ಮಲಮಂ ತಳ್ವುವುದರಿದೋ, ಬೇಡದುಂಬುದರಿದೋ ಬೇಡಿಕೊಂಡುಂಬುದರಿದೋ, ಪೆಱರ ಬೈಗುಳಂ ಸೈರಿಸುವುದರಿದೋ ಪೆಱರೊಡನೆ ಬಾಯುಂಬಡಿವುದರಿದೋ, ಪಂಚೇಂದ್ರಿಯನಿಗ್ರಹಮರಿದೋ ವಿಷಯಸೇವೆಯರಿದೋ, ಪೂಣ್ಕೆಯರಿದೋ ಮೆಚ್ಚಿದಂತೆ ನಡೆವುದರಿದೋ, ಗೋತ್ರದೊಳ್ ಕೂಡಿರ್ಪುದರಿದೋ ಗೋತ್ರಮಂ ಬಿಟ್ಟಿರ್ಪುದರಿದೋ, ಪೊನ್ನಂ ತೊಱೆದಿರ್ಪುದರಿದೋ ಪೊನ್ನಿಂಗೆಱಗುವುದರಿದೋ, ದಿವಸಕ್ಕೊಮ್ಮೆಯಲ್ಲದೆ ಮತ್ತಮೌಷಧಮಂ ಸಾರ್ವೊಡಮೊಲ್ಲೆನೆಂಬ ನಿಯಮಮರಿದೋ,

ಮನಕ್ಕೆ ಬಂದಂತೆ ಆಡುವ ನಿಯಮಮರಿದೋ, ಬಗೆದಿನಿವಱೊಳ್ ಮುನ್ನಂ ಮಾೞ್ಪುದಾವುದು ಬೞಿಕ್ಕೆ ಮಾೞ್ಪುದಾವುದು ಸೈರಿಸಿ ಪಡೆವುದಾವುದು ನೆಗೞಲರಿದಾವುದೆಂಬುದಂ ವಿಚಾರಿಸಿ, ‖ ೮೧

ಇತೀಗಳಾವುದೀಧ
ರ್ಮಂ ತೊದಳಿಂ ಮುನ್ನಮಾವುದೀಧರ್ಮಂ ಕೇ ।
ಳಿಂತಿದಱಿಂ ಸುಖಮಿದಱಿಂ
ಸಂತತಕಡುದುಃಖಮಕ್ಕುಮೆಂಬುದನಱಿವಂ ೮೨

[ಎಂದು ಮುನಿವೃಂದಾರಕಂ ಕಿಱಿದಱೊಳ್ ಧರ್ಮಮಂ ತಿಳಿಪುವುದುಂ ಕೇಳ್ದು ಪಿರಿದುಂ ಸಂತೋಷಂಬಟ್ಟು ಅಂದು] [2] ಚತುರ್ದಶಿಯುಪ್ಪುದಱಿಂದುಪವಾಸಮಂ ಕೈಕೊಂಡು ಮುನಿವೃಷಭನಂ ಬಂದಿಸಿ [ರಾಜಮಂದಿರಕ್ಕೆ ಬಂದು ನೇಸರ್ಪಡುವಿನಮಿರ್ದೊರ್ಯ್ಯನೆ ಕಾಪಿನವರಂ ಬಂಚಿಸಿ ಪೊೞಲಿಂ ಪೊಱಮಟ್ಟು]ಪೋಗಿ ಶ್ಮಶಾನಭೂಮಿಯೊಳ್ ರಾತ್ರಿಪ್ರತಿಮೆಯಿಂ ದನನ್ನೆಗ [ಮಿತ್ತಲ್ ಮಗಧಸೌಂದರಿಯೆಂಬ ಸೂಳೆಗೆ ಮೃಗವೇಗನೆಂಬ ಕಳ್ಳಂ ಕೂರ್ತು ಕರ್ಣಾಭರಣದಾಕೆಯ ಮತದಿಂ] [3] ರಾಜಶ್ರೇಷ್ಠಿಯ ಪೆಂಡತಿಯಪ್ಪ ಕೀರ್ತಿಮತಿಯ ಕೊರಳ ಹಾರಮಂ ಕಳದುಕೊಂಡು ಪೋಗಲ್ವನಂ ತೊಟ್ಟನ ತಳಾಱರ್ಕಂಡು ‖ ೮೩

---

1 ಮತ್ತಂ ಲೋಚಮುಂ ಪಿರಿಯುವುದುಂ ಬ್ರಹ್ಮಚರ್ಯ್ಯಮುಂ ನಿರ್ಗ್ರಂಥಮುಂ ನಿಂದು ಕಯ್ಯೊಳುಂಬುದುಂ ನಿಯಮದೊಳೊಂದೆಡೆಯೊಳಿರ್ಪುದುಂ ಏಕಭಕ್ತಮುಂ ಮೌನಮುಂ ನೀರಳ್ಕೆಯುಂ ತಾಳ್ವುದುಂ ಅಲಾಭಮುಂ ಪಲ್ಲಂ ಸುಲಿಯದುದುಂ ಸುಗಂಧದ್ರವ್ಯಂಗಳಂ ಪೂಸುವುದುಂ ಇಂದ್ರಿಯಂಗಳಿಗಿಚ್ಛೆಯಂ ಸಲಿಸುವುದು ಸುಖಮೊ ಇಂದ್ರಿಯಂಗಳ ನಿಗ್ರಹಿಸುವುದು ಸುಖಮೊ? ಯೆಂಬಿವೆಲ್ಲರೊಳ್ ಪ್ರವೃತ್ತಿನಿವೃತ್ತಿಗಳಂ ಭಾವಿಸಿ ಮುನ್ನಾದುದಾವುದು ಬಳಿಕಾದುದಾವುದಿವರೊಳಗಂ ನೆಗಳಲಾವುದಱಿದು ನೆಗಳಲಾವುದಿಳಿದೆಂಬುದಂ ಭಾವಕರಪ್ಪವರ್ವಿಚಾರಿಸಿ ಮಹಾಪರಿಷಹಮಪ್ಪ ರಾವು ಮುನ್ನಮಾದ ಧೆಯಿವಕ್ಕೆ ಸೊಂಬರಾರದೆ ತಮತಮ್ಮ ಯಿಚ್ಛೆಗೆಯ್ವಂ ಪಣ್ಣೆದರೆಂದಱಿದು ಕುಲಧರ್ಮಮಂ ಬಿಟ್ಟು ಸದ್ಧರ್ಮಮಂ ಪೊರ್ದುವುದೆಂದು (ಬ. ಕ.)

2 ಱಿದು ನೆಗಳ್ವುದೆಂದು ಪೇಳ್ವುದುಂ ಕುಮಾರಂ (ಗ)

3 ಮೃಗಸೇನನೆಂಬ ಕಳ್ಳಂ ಮಗಧಸೌಂದರಿಯೆಂಬ ಸೂಳೆಯ ಪೇಳ್ವೆಯಿಂ (ಗ)

ಬಡಿಯಿಂ ಗುಂಡಿಂ ಕಲ್ಲಿಂ
ಇಡುತುಂ ಬೆನ್ನಟ್ಟಿ ಬೆರ್ಚಿ ಭಯವಶದಿಂ ಪೆರ್ಚ್ಚಿ ।
ನಡುಗೆ ಮತಿಗೆಟ್ಟು ಕಾಲ್ಗಳ್
ತಡೆದೊಡೆ ಬಿಡದೋಡುವಾತನಾನೃಪಸುತನಂ ॥ ೮೪

ಭೋಂಕನೆ ಕಂಡು ಬೆರ್ಚಿ [ಕಳ್ಳಂ ಸತ್ತೊಡಮಕ್ಕುಂ ಪುಲಿ ಸತ್ತೊಡಮಕ್ಕುಮೆಂಬ ನಾಣ್ನುಡಿಯಂತೆ ತಳಾಱನ ಕೈಯೊಳೀತಂ ಸತ್ತೊಡಮಕ್ಕುಮೀತನ ಕೈಯೊಳ್ ತಳಾಱಂ ಸತ್ತೊಡಮಕ್ಕುಂ ನಗೆಗೆಟ್ಟುದಾನೊರ್ವರ್ಗೆನ್ನ ಪುಣ್ಯದಿಂ ಪುಲಿ ನಕ್ಕಿ ಬರ್ದುಂಕಿದೆನೆಂದು] ಹಾರಮಂ ವಾರಿಷೇಣಕುಮಾರನ ಮುಂದೀಡಾಡಿ ಪೋಪುದುಂ ತಳಾಱರೆಯ್ದೆವಂದು ॥ ೮೫

ನಿಂದಿರ್ದ ವಾರಿಷೇಣನ
ನಂದವರಡಹಡಿಸಿ ನೋಡಿ ಕಳ್ಳನಿವಂ ಪೋ ।
ಸಂದೆಯಮಿಲ್ಲೆರಡಿಲ್ಲದೆ
ಕೊಂದಪರೆಂದಂಜಿ ಸಡೆದು ಪೋಗದೆ ನಿಂದಂ ॥ ೮೬

ಎಂದು [ಕಟ್ಟಿಲೆಯೊಳವರಿವರೆಂದಱಿಯದೆ ತಡವರಿಸಿ ನೋಡಿ ಮುಂದಿರ್ದ ಹಾರಮಂ ಕಂಡು ಕಳ್ಳನೆಂದು ನಿಶ್ಚಯಿಸಿ] ದೀವಿಗೆಯ ಬೆಳಗಿಂ ನೋಡಿ ವಾರಿಷೇಣನಪ್ಪುದನಱಿದು ಬೆಱಗಾಗಿ ॥ ೮೭

[ತುರಗಕ್ಕಂ ಕರಿಗಂ ರಥಪ್ರತತಿಗಂ ದ್ರವ್ಯಕ್ಕಮಿಂ ಮೇರೆಯಿ
ಲ್ಲರಸಂಗಪ್ಪೊಡೆ ತಾನೆ ಮುಖ್ಯನವನೀನಾಥರ್ಗಾತನ್ನರಿ
ಪರ್ಗರವೋಘಂ ನೃಪನೇಕೆ ಕಳ್ವ ಬಗೆಯಂ ತಾಂ ತಂದನೋ ನೋೞ್ಪೊಡ
ಚ್ಚರಿಯೆಂದಂದು ತಳಾಱರಂಜಿ ಧರಣೀಶಾರಾಧ್ಯನಂ ನೋಡಿದರ್ ॥ ೮೮

ತುಡಲಿಲ್ಲದೆ ಕಳ್ದನೊ ಮೇ
ಣುಡಲಿಲ್ಲದೆ ಪೋಗಿ ಕಳ್ಗನೋ ತನಗರಸಂ ।
ಕುಡದೊಡೆ ಕಳ್ದನೊ ಕೆಮ್ಮನೆ
ದೃಢಚಿತ್ತಂ[1] ಕಳ್ವ ಬಗೆಯನೇಕೆಯೊ ತಂದಂ ॥ ೮೯

---

1 ಕಡುಮೂರ್ಖಂ (ಗ)

ಎಂದು [ತನ್ನೊಳಾಶ್ಚರ್ಯಂಬಟ್ಟು] ನಿನ್ನಲ್ಲಿಗೆವೆಂದು ಹಾರನುಂ ತೋಱಿ ಜಿನಸಮಯವಾರ್ಧಿವರ್ಧನಸುಧಾಕರನಂ ನಿಷ್ಕಾರಣಂ ಕಳ್ಳನೆಂದು ಬಿನ್ನಪಂಗೆಯ್ವುದುಂ ಜಾತಿಕ್ಷತ್ರಿಯಂಗೆ ದುಷ್ಟನಿಗ್ರಹಶಿಷ್ಟಪರಿಪಾಲನಂ ಧರ್ಮಮಪ್ಪುದಱಿಂ ಮಗನೆಂದು ಕಾರುಣ್ಯಂಗೆಯ್ಯದೆ ಕೊಲ್ಲಿಮೆಂದು ತಳಾಱಂಗೆ ನೀಂ ಬೆಸಸುವುದುಂ ತಳಾಱಂ ಕುಮಾರನಲ್ಲಿಗೆ ವಂದು ||] [1] ೯೦

ಪಿಸುಣರ ಕಳ್ಳರ ಮಿಂಡರ
ಪಸರಂ ಮೊದಲಾಗೆ ನುಡಿದೊಡುರ್ವೀಶಂ ಸೈ ||
ರಿಸನೆಂಬುದನಱಿದಿರ್ದುಂ
ಕಸವರಕ್ಕೇಕೆ ದೇವ ನೀಂ ಬಗೆದಂದೈ [2] || ೯೧

[ನಿನ್ನಯ್ಯನ ಭಂಡಾರದ
ಪೊನ್ನೆಲ್ಲಮನಕ್ಕ ಪಿರಿದು ತದ್ಧನಮಿರ್ದುಂ |
ತನ್ನ ದರಿದ್ರನ ತೆಱದಿಂ ಕೆ
ಮ್ಮನೆ ಕಳಪಿಂಗೆ ಬಗೆಯನೇಕೆಯೊ ತಂದ್ರ || ೯೨

ಅಂತೊಡೆದಕಲ್ಲ ಕೆಱೆಯಿಲ್ಲೆಂಬ ನಾಣ್ನುಡಿಯಂತೆ ನಾನರಸನ ಮಗನೆಂ ಬಲ್ಲಿದ ನೆನ್ನನರಸಂ ಕಳ್ದೊಡಂ ಕೊಲ್ವನಲ್ಲೆಂದು ಸೊಕ್ಕಿಮುಕ್ಕುಂದಲೆವಾಯ್ದು ಕೀರ್ತಿಮತಿಯ ಹಾರಮುಂ ಕಳ್ದುಮೆಮ್ಮನೆ ಪೆಱರೇಡಿಸಲೆಂದು ಪೋಗಿ ದಸಿಯ ಮೇಲೆ ಬಿದ್ದು ಸತ್ತ ಕೋಡಗದಂತೆ ನಿನಗೆ ಕಷ್ಟಮಪ್ಪ ಸಾವಂ ಮಾಡಿಕೊಂಡೈ] ಎಂದು ತಳಾಱಮೂರ್ದಲಿಸಿ ನುಡಿಯುತ್ತಿರೆ ಸರ್ವಜ್ಞಚೂಡಾಮಣಿ ತನ್ನೊಳಿಂತೆಂದಂ || ೯೩

ಧರೆಯುಂ ಪೊಕ್ಕಡಗಿರ್ದೊಡಂ ಜಲಧಿಯುಂ ಪೊಕ್ಕಿರ್ದೊಡಂ ಪೋಗಿ ಮಂ
ದರಶೈಲಾಗ್ರದೊಳಿರ್ದೊಡಂ ಖಚರರಂ ಬೇಗಂ ಶರಣ್ಬೊಕ್ಕೊಡಂ

---

1 ಮಗನೆನ್ನದೆ ಕಳ್ಳಂಗೆ ತಕ್ಕ ವಿಧಿಯಂ ಮಾಡಿಮೆಂದು ಪೇಳ್ವುದುಮಾರ್ತರ ಡುಗೇಳದೆ ಬಂದು (ಗ)

2 ಕಸವರದಾಟಕ್ಕೆ ದೇವ ನೀಂ ಮನದಂದೈ (ಗ)

ಪಿರಿದುಂ ದ್ರವ್ಯಮನಿತ್ತೊಡಂ ನಡುಕದಿಂ ಚಕ್ರೇಶನಂ ಸೋದರ್ಗಡಂ
ಮರುಳೇ ಮೊಣ್ಬನೆ ಕಾಲಪುಯ್ದದವನಂ ಕ್ರೂರಾಂತಕಂ ಕೊಲ್ವುದಂ ॥

ಮತ್ತಂ ಜವನ ಬಿಲ್ಲಾಳ್ತನಮುಂ ಪೇೞ್ವೊಡೆ, ದೇವೇಂದ್ರರಂ ತಾವರೆಗೊಳನಂ ಸೊಕ್ಕಿದಾನೆ ಪೊಕ್ಕಂತೆ ಮಾಡಿ, ವ್ಯಂತರದೇವರಂ ಸೌಂತೆಯ ಬಳ್ಳಿಯೊಳೆಟ್ಟು ಪೊಕ್ಕಂತೆ ಮಾಡಿ, ಜ್ಯೋತಿಷ್ಕದೇವರಂ ಸೀತಂ ಪತ್ತಿದ ವಾತಾಧಿಕರಂತೆ ಮಾಡಿ, [ಭವನವಾಸಿಗರಂ ಕರಂ ದವನದ ಮಡಿಯಂ ದಾೞಿ ಪೊಕ್ಕಂತೆ ಮಾಡಿ, ಚಕ್ರಧರನಂ ವಕ್ರಮಾದ ಪುಳ್ಳಿಗಳಂ ಮುಱಿವಂತೆ ಮುಱಿದು, ಮಾಂಡಲಿಕರಂ ಚಂಡಕರಸನ್ನಾಹಂ ನುಂಗುವಂತೆ ನುಂಗಿ, ಬಲ್ಲಿದರಂ ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚುನುಱಿಮಾಡಿ] ರಾವಣನಂ ಕೋವಣಮಂ ಸೀಳ್ವಂತೆ ಸೀಳ್ದು, ಕುಂಭಕರ್ಣನಂ ಕಂಬಂ ಮುಱಿದ ಮೋಳಗೆಯಂತೆ ಮಾಡಿ, ವಿಭೀಷಣನಂ ಸಾಹಸಮಿಲ್ಲದರಂ ನೂಂಕುವಂತೆ ನೂಂಕಿ, ಇಂದಗಿಯಂ ಪಂದೆಯಂ ಕಾಡುವಂತೆ ಕಾಡಿ, ರಾಮನಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ, ಲಕ್ಷ್ಮಣನಂ ಮಕ್ಕಳ್ಗಟ್ಟರಂತೆ ಗೋಳಿಂಡೆಗೊಳಿಸಿ, ಸುಗ್ರೀವನನುದ್ಗ್ರೀವನನಂಬು ತಾಗಿದಂತೆ ಮಾಡಿ, ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ, ಹನುಮನನನುಮಾನಂ ಮಾಡದೆ ನೆಲಕಿಕ್ಕಿ, ಪಾಂಡವರಂ ದಂಡಿನೊಳ್ ಪೊಕ್ಕ ನರಿಯಂತೆ ಮನಂಗಿಡಿಸಿ, ಕೌರವರಂ ಭೈರವಂಬಾಯ್ದರಂತೆ ತಲೆಕೆಳಗುಮಾಡಿ, ಬಾಲಕರಂ ಬಾಲಕರೆಂದು ನಾಣ್ಚದೆ, ಮುದುಕರಂ ಮುದುಕರೆಂದು ಕರುಣಿಸದೆ, ವೀರರಂ ಸಾಮರ್ಥ್ಯನೆಂದು ಬೆರ್ಚದೆ, ಮೂರ್ಖರಂ ಮೂರ್ಖರೆಂದೋಸರಿಸದೆ, ಸ್ತ್ರೀಯರಂ ಸ್ತ್ರೀಯರೆಂದು ಕೈಗಾಯದೆ, ವಿಕಳೇಂದ್ರಿಯಂಗಳಂ ವಿಕಳೇಂದ್ರಿಯಂಗಳೆಂದು ತೊಲಗಿಸದೆ, ನಾರಕರಂ ನಾರಕರೆಂದು ಕೊಕ್ಕರಿಸದೆ, ಪಟ್ಟಂಗಟ್ಟಿದರ್ ಕಟ್ಟುಗ್ರರೆಂದೊಲ್ಲೆನ್ನದೆ, ಬಡವರಂ ಬಡವರೆಂದಿರಿಸದೆ, ಮಾನ್ಯರಂ ಮಾನ್ಯಗಾವನೆನ್ನದೆ, ಮುಸು ಪಣ್ತ ಪುಣಿಸೆಯುಮೇಱಿದಂತೆ, ಕೋೞಿ ತಿಪ್ಪೆಯಂ ಪೊರ್ದಿದಂತೆ, ಪಸಿದೆಮ್ಮೆ ಬಳದ ಕೆಯ್ಯಂ ಪೊಕ್ಕಂತೆ, ಬಡವರ್ ಕೂೞ ರಾಶಿಯಂ ಕವಿದಂತೆ, ಮುಲ್ಲಂ ನುಂಗಿಯುಂ ಸಪಿದುಂ ಕರ್ಚಿಯುಮುೞಿಗಿಯುಂ ಮೆಚ್ಚಿದಂತೆ

ನರಿಯಾಟವಾಡುವಾತನನಗೆ ಪೀಡೆಯಂ ಮಾಡಿದಪ್ಪನೆಂಬುದಾವ ವಿಸ್ಮಯಂ [ಸುಡುವ ಕಿರ್ಚಿನೊಳ್ ತುಪ್ಪಮನೆನಿಸೆನಿಸೆಯೆದೊಡಮನಿಸನಿಸೆ ಪೆರ್ಚುಗುಂ ನೀರನೆನಿಸೆನಿಸೆಯೆದೊಡಮನಿಸನಿಸೆ ಕುಂದುಗುಂ; ಮತ್ತೆ ಪೂರ್ವಜನ್ಮದ ಕರ್ಮೋದಯದಿಂ ಬಂದಡಸುವ ಸಾವಿಂಗಂ ನೋವಿಂಗ ಮನಿಸೆನಿಸಂಜುವಮನಿಸನಿಸೆ ಭವಭವಂಗಳೊಳಲ್ಲಂ ಪೆರ್ಚುಗುಂ; ಧೈರ್ಯದಿಂ ಜಿನಪಾದಪದ್ಮಂಗಳನನಿಸನಿಸಂ ನನೆವನನಿಸನಿಸೆ ಕುಂದುಗುಂ] ॥ ೯೫

ದುರಿತಂ ಕಿಡದನ್ನೆವರಂ
ಪರಮಜಿನಾಗಮಮನಱಿಯದನ್ನೆವರಂ ನಿ ।
ಷ್ಠುರಮಪ್ಪ ದುಃಖಚಯಮುಮಂ
ಮರಣಮುಮಾವಾವ ಭವದೊಳೇಂ ಪಿಂಗುಗುಮೋ ॥ ೯೬

ಜಿನಧರ್ಮ[1]ಮೆಂಬ ನೀರಿಂ ಕರ್ಮಮೆಂಬ ಕಿರ್ಚಂ ನಂದಿಸದೆ, ಜಿನಾಗಮಮೆಂಬ ಗ್ರಹವಾದಿಯಿಂ ದುಷ್ಕೃತಮೆಂಬ ಗ್ರಹಮಂ ಕಳೆಯದೆ, ಜಿನಸೇವನೆಯೆಂಬ ದಿವ್ಯೌಷಧದಿಂ ಕಿಲ್ಬಿಷಮೆಂಬ ಕುತ್ತಮಂ ಕಿಡಿಸದೆ, ಜಿನಾರ್ಚನೆಯೆಂಬ ಕೊಡಲಿಯಿಂ ಪಾಪಮೆಂಬ ದುರ್ಗಮಂ ತಱಿಯದೆ, ಜಿನಸ್ಮರಣೆಯೆಂಬ ಭೈತ್ರದಿಂ ದುರಿತಮೆಂಬ ಸಮುದ್ರಮಂ ಪಾಯದೆ, ಜಿನವ್ರತಮೆಂಬ ಪಱುಗೋಲಿಂದಶುಭಮೆಂಬ ತೊಱೆಯಂ ದಾಂಟದೆ, ಜಿನಪಕ್ಷಪಾತಮೆಂಬ ಸಿಡಿಲಿಂ ಪುಣ್ಯವಿರೋಧಿಯೆಂಬ ಮರನಂ ಮುಱಿಯದೆ, ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ, ಜಿನಾಭಿಷೇಕಮೆಂಬ ಕೂರಲಗಿಂ ಕರ್ಮವೈರಿಯೆಂಬ ಪಣಿದಮನಿಱಿಯದೆ, ಜಿನಕಥಾಪ್ರೀತಿಯೆಂಬ ಸಿಂಹದಿಂ ದೋಷ[2]ಮೆಂಬ ಗಜಮಂ ಸೀಳದೆ, ಜಿನಧರ್ಮಪ್ರೀತಿಯೆಂಬ ಭೇರುಂಡನಿಂ ಮೋಹಮೆಂಬ ಶರಭಮಂ ಕೊಲ್ಲದೆ, ಜಿನಮುನಿದಾನಮೆಂಬ ಗಾಳಿಯಿಂ ಲೋಭಮೆಂಬ ಮುಗಿಲಂ ಬೆದಱಿಸದೆ, ಜಿನಶ್ರೀಮುಖ ದರ್ಶನಮೆಂಬ ವಜ್ರದಿಂ ಪಾಯೆ

1 ಸ್ತವನ (ಗ) 2 ಕೋಪ (ಗ)

ಯೆಂಬ ಬೆಟ್ಟನನೊಡೆಯದೆ, ಜಿನಪೂಜಾನಂದವೆಂಬನಳನಿಂ ಮಾನ ವೆಂಬ ಕರಡಮಂ ಸುಡದೆ, ಜಿನರೂಪದರ್ಶನವೆಂಬ [1] ಬಿಸಿಲಿಂ ದೋಷ ವೆಂಬ ತಿಮಿರಮಂ ತೆಗೆಯದೆ, ಜಿನಲಕ್ಷಣನಿರೀಕ್ಷಣವೆಂಬ ಚಂದ್ರನಿಂ ದಂತರಾಯವೆಂಬ ತಾವರೆಯಂ ಮುಗಿಯಿಸದೆ, ಜಿನಭಕ್ತಿಯೆಂಬ ಸೊಡರಿಂ ದರ್ಶನಾವರಣೀಯವೆಂಬ ಕತ್ತಲೆಯಂ ಪಿಂಗಿಸದೆ, ಜಿನತತ್ವ ವಿಚಾರವೆಂಬರಸನಿಂ ಜ್ಞಾನಾವರಣೀಯವೆಂಬಾಟವಿಕರನೋಡಿಸದೆ, ಜಿನಪದಸ್ನೇಹವೆಂಬ ದಂಡಿಂ ವೇದನೀಯವೆಂಬ ಗಡಿಯ ನಾಯಕರ ನಡಂಗಿಸದೆ, [2] ಜಿನಚರಣಾವಲಂಬನವೆಂಬ ಬಲದಿಂ ವಿಷಯವೆಂಬ [3] ಸೂಜಿಗಾಲರಂ ಕಾದಿ ಗೆಲ್ದದೆ, ಜಿನಸ್ತವನರುಚಿಯೆಂಬ ಮೇಘಗರ್ಜನೆ ಯಿಂ ನರಕಗತಿಯೆಂಬ ಹಂಸೆಯನಂಜಿಸದೆ, ಜಿನತತ್ವಾಕಾಂಕ್ಷೆ ಯೆಂಬ ಬಾಣದಿಂ ತಿರಿಕಗತಿಯೆಂಬ ಗುಜ್ಜಿಯಂ ಪಾಜಲೀಯದೆ, ಜಿನರಾ ರಾಧನೆಯೆಂಬ ಹಿಮದಿಂ ಮನುಷ್ಯಗತಿಯೆಂಬ ಬಾಳ ಸಹಕಾರಮಂ ಕಿಡಿಸದೆ, ಜಿನರ ನೆರವಿಯೆಂಬ ಚೀಣದಿಂ ದೇವಗತಿಯೆಂಬ ನಿಗಳಮಂ ಛೇದಿಸದೆ, ನೆರೆಮನೆಯವರಂ ಪಾವಂ ಪಿಡಿಯಿಮೆಂಬಂತೆ, ನೆರೆಗೆಯ್ಯು ವರಂ ಬಿತ್ತಿಕೊಡಿಮೆಂಬಂತೆ, ಸವತಿಯ ಮಗನಂ ಬೇಡಿಕೊಳ್ವಂತೆ, ಬಟ್ಟೆವೋಪರಂ ಪುಲಿಯನಿಱಿಯಿಮೆಂಬಂತೆ, ತಿರಿಯಲ್ಬಂದವರಂ ಕೂಟಿ ನಡಿಮೆಂಬಂತೆ, ಬರ್ದು [4] ಬಂದವಳಂ ಪೆಂಡತಿಯಾಗಿರೆಂಬತೆ, ಲೋಗರಂ ಮನೆಯಂ ಕಾದಿರಿಮೆಂಬಂತೆ, ನಿರ್ಬುದ್ಧಿತನದಿಂ ಪೆಱರೆನಗೆಂದಿದೊರ್ಡೆ ಶಾಶ್ವತಸುಖಂ ದೊರೆಕೊಳ್ಳದು. [ಮುನ್ನ ತನ್ನ ಮಾಡಿದ ಕರ್ಮದು ದಯದಿಂದೆಯ್ದುವ ಸಾವುಮಂ ನೋವುಮಂ ಪೆಱರ್ಪಚ್ಚಿಕೊಳ್ಳಿಮೆಂ ದೊಡೆ ಪಚ್ಚಿಕೊಳ್ವರೆ ? ಸದ್ಧರ್ಮಮಂ ಪೊರ್ದಿ ಸುಖಿಮಿರ್ಪೊಡಂ ಕುಧರ್ಮಮಂ ಪೊರ್ದಿ ದುಃಖಂಬಡುವೊಡಂ ತಾನ ಪೆಱರೊರ್ವರುಂ ಸಖಾಯರಲ್ಲರ್] ॥ ೯೭

1 ದರ್ಶನಹರ್ಷಚಿತ್ತದನವೆಂಬ (ಕ. ಬ.)

2 ಜಿನವಿಶ್ವಾಸವೆಂಬ ಬಿದಿಯಿಂ ನಾಮುಕಳ್ಳರಂ ತೆಗೆಯದೆ ಜಿನಪುಂದಿಂಪ್ರದ ಕ್ಷಿಣನೆಂಬ ಗರುಡನಿಂ ಗೋತ್ರವೆಂಬ ಪಾವುಗಳ ವಿಷಮಂ ತೊಲಗಿಸದೆ ಜಿನಮತಾ ನುಕೂಲವೆಂಬ ಮಾಗಿಯಿಂದಾಯುಷ್ಯವೆಂಬ ಕೋಗಿಲೆಯಂ ಮಡಿಯಿಸದೆ (ಗ)

3 ಎಂಬ ಕೋಟೆಯಿಂ ಮಿಥ್ಯಾತ್ವವೆಂಬ (ಕ.ಬ.) 4 ಪಿದ್ದು (ಕ.ಬ.)

ರುಜೆಗಳೊದವಿಂ ದುಃಖವ್ರಾತಂಗಳಿಂ ಪೆಱರೊತ್ತಿನಿಂ
ಪ್ರಜೆಯ ಭಯದಿಂ ಪೊಸ್ಸಿಂ ಶೀತೋಷ್ಣದಿಂ ಕೆಲವಾಱಿನಿಂ
ಕುಜನನೆರವಿಂ ಸ್ತ್ರೀಯಿಂದತ್ಯಂತಮಿತ್ರರಗಲ್ಕೆಯಿಂ
ವಿಜಯರಳವಿಂ ಸಾವಿಂ ನೋವಿಂ ಮಹೀಶರ ಬಾಧೆಯಿಂ ॥ [1] ೯೮

ಅರಿಯ ಭಯದಿಂ ಮುಳ್ಳಿಂ ಕಲ್ಲಿಂ ಪ್ರಯಾಣದ ಪೀಡೆಯಿಂ
ಪರದಿನಳಿಪಿಂ ಮುನ್ನಂ ಕೊಂಡುಂಡ ಸಾಲದ ಚಿಂತೆಯಿಂ
ಭರದ ತೆಱೆಯಿಂ ಕೇಡಿಂ ದಾರಿದ್ರ್ಯದಿಂ ಪರಮಾನದಿಂ
ದುರಿತದೊದವಿಂ ದುಃಖಂ ಸಾರ್ಗುಂ ಮನುಷ್ಯರನೆಲ್ಲಿಯುಂ ॥ ೯೯

[ಮತ್ತಮವನಿಯಂ ಪೊಯ್ದು ಕಯ್ತಪ್ಪಿದೊಡಂ ತಪ್ಪುಗು, ತೀವ್ರ ಕರ್ಮೋದಯದಿಂದಡಸುವ ಸಾವುಂ ನೋವುಂ ಏಗೆಯ್ದುಂ ತಪ್ಪಲಱಿಯದಿದನಱಿ ಮಹಾಪುರುಷಂಗೆ ಸಾವಿಂಗಂ ನೋವಿಂಗಮಳಲಾಗದೆನಗಿಂ ಮಹಾವೀರಸ್ವಾಮಿಯ ಚರಣಪಯೋಜಾತಂಗಳಂ ನೆನಯುತಿರ್ಪುದು ಕಜ್ಜಮೆಂದು ॥] ೧೦೦

ವೀರಸ್ವಾಮಿಯ ಪಾದಪ
ಯೋರುಹಮಂ ಬಂದಿವಿಡಿದು ಬಂಟಂ ಸೆಱೆಯಂ ।
ಧೀರತೆಯಿಂ ಪಿಡಿವಂತ ಕು
ಮಾರಕನಂ ಪಿಡಿದನೇಕಚಿತ್ತದಿನಾಗಳ್ ॥ ೧೦೧

ಜಿನಪದಮಂ ಜಿನಮತಮಂ
ಜಿನರ ಗುಣೋನ್ನತಿಯನೆಯ್ದೆ ಜಿನಗೃಹಮಂ ಸ।
ಜ್ಜನಚೈತ್ಯಮನನವರತಂ
ಮನದೊಳ್ ನೆನೆಯುತ್ತುಮಿರ್ದನಂತಿರ್ಪನೆಗಂ ॥ ೧೦೨

[ಆ ಪುರದ ದೇವತೆಗಳ್ಗಾಸನಕಂಪಮಾಗೆ ಸಮ್ಯಕ್ತ್ವಚೂಡಾಮಣಿಗುಪಸರ್ಗಮಾದುದನಱಿದು ಘೋರೋಪಸರ್ಗಮಂ ಪಿಂಗಿಸಲೆಂದು

---

1 ವ್ರಜನದೊದವಿಂದುಃಖಂ ಸಾರ್ಗುಂ ಮನುಷ್ಯರನೆಲ್ಲಿಯುಂ (ಕ. ಖ.)

2 ಕರ್ಮೋದಯದಿಂದೆತ್ತು ದುಃಖವುಂ ಮನಃಪೀಡೆಯುಮಕ್ಕುಮಿದಾವುದಾಶ್ಚರ್ಯಮೆಂದು ಬಗೆದು (ಗ)

ಬಂದು ಮುಂದಚಳಿತಮಲ್ಲನಾಗಿ ನಿಂದ ವಾತ್ಸಲ್ಯರತ್ನಾಕರನ ಮನದೊಳಾದ ಧೈರ್ಯಕ್ಕಾಶ್ಚರ್ಯಂಬಟ್ಟು] [1] ॥ ೧೦೩

ದುರಿತಾರಿಯುನದಟಲೆದೋ
ಪರಿಸದೆ ನಿರ್ವೃತಿಗೆ ಸಲ್ವನಾನೆಂಬ ಮಹಾ ।
ಪುರುಷಂ ಮನದೊಳ್ ಕುಂದದೆ
ಜರಿಯದೆ ಕಲಿಯೆನಿಸಿ ನೆಡೆಯದಿಂತಿರವೇಡಾ ॥ ೧೦೪

ಎಂದು ಕೈಗಳಂ ಮುಗಿದು ಪಲವುಂತೆಱದ ಪೊಗಟ್ಟೆಗಳಂ ಪೊಗಱುತ್ತುಮಿರ್ದರನ್ನೆಗಂ ಮನದೊಳ್ಳನಿಸಪ್ಪೊಡಂ ಕರುಣಮಿಲ್ಲದೆ ನಿಷ್ಠುರರಪ್ಪ ತಳಾಱರ್ಕುಮಾರನಂ ನೆಲಕಿಕ್ಕುವಂತೆ ನೆಲಕಿಕ್ಕಿ ಗಜಱಿ [2] ಗರ್ಜಿಸಿ ನಿಶಿತಾಸ್ತ್ರಂಗಳನೊಱೆಯಿಂದುರ್ಚಿಕೊಂಡು ತಲೆಯಂ ದಡಿಯಿಂ ಪೊಯ್ಯುಂ ಕಿವಿಯಂ ಬಾಳಿಂ ಪೊಯ್ಯುಂ ಕೊರಲಂ ಸುರಿಗಿಯಿಂದರಿದುಂ ಮುಯ್ಯಂ ಕೊಳ್ಳಿಯಿಂ ಕರಿದುಂ ನಡುವಂ ಕೊಡಲಿಯಿಂ ಕಡಿದುಂ ತೋಳಂ ಗದೆಯಿಂ ಬಡಿದುಂ ಬೆರಲನುಳಿಯಿಂ ಕಡಿದುಂ ನೊಸಲನಂಬಿನಿಂ ಕೊಱೆದುಂ ತಳವಂ ಬಾಚಿಯಿಂ ಕೆತ್ತಿ ಮೊಳಕೈಯುಂ ಕೊಂತದಿಂ ಕುತ್ತಿ ಬೊಬ್ಬಿರಿದು ನಾನಾಪ್ರಕಾರಮಪ್ಪ ಘೋರೋಪಸರ್ಗಂಗಳಂ ಮಾಡುವುದುಂ, ಅಪಕ್ಕೆ ಕಳ್ಳರಂ ಕಂಡಂತಳ್ಕದೆ ಕಣ್ಣೊಳಗಣ ಕಸವಿನಂತುಳ್ಕದೆ ನಡುವಿನಂತು ಬಳ್ಕದೆ ಪುರ್ವಿನಂತೆ ಕೊಂಕದೆ ತೆಱೆಯಂತೆ ನೂಂಕದೆ ಬೆಂಡಿನಂತೆ ತೇಂಕದೆ ಕೊಳ್ಪಟ್ಟರಂತೊಳಱದೆ ಭಯಮಾದರಂತೆ ಬೆಳಱದೆ ತರಗೆಲೆಯಂತೆ ತಳಱದೆ ಪುಲ್ಲೆಯಂತೆ ಬೆಚ್ಚದೆ ಪೊಲ್ಲರಂತೆ ಪಚ್ಚದೆ ಶುಭಧ್ಯಾನಾರಾಧನನಾಗಿಪ್ಪುದುಂ, ಸಮ್ಯಕ್ತ್ವಚೂಡಾಮಣಿಯ ದರ್ಶನಶುದ್ಧಿಗಂ ಸುಕವಿನಿಕರಪಿಕಮಾಕಂದನ ಜಿನಾಗಮದ ಪರಿಣತಿಗಂ ವಾತ್ಸಲ್ಯರತ್ನಾಕರನ ಶುದ್ಧಭಾವನೆಗಂ ಸಹಜಕವಿಜನ ಪಯಃಪಯೋಧಿಹಿಮಕರನ ಮನದ ಸ್ಥಿರತೆಗಂ ಸುಕವಿಜನಮನಃ

1 ನಾಗೇಂದ್ರನಾಸನ್ನಕಂಪದಿಂದರಿದು ಬಂದು ಕೊಲಲೆಂದು ಮುತ್ತಿಕೊಂಡಿರ್ದ ತಳಾಱರುಮಂ ನಿಶ್ಚಳನಾಗಿರ್ದ ಕುಮಾರನುಮಂ ಕಂಡು (ಗ)

2 ಎಂದು ಕೈಗಳಂ ಮುಗಿದು ವಾರಿಷೇಣಕುಮಾರನ ಧೈರ್ಯಮಂ ನೋಡಲೆಂದು ತಳಾಱಂಗೆ ಮಾಯಾನಿದ್ರೆಯನಿಕ್ಕಿ ತಾಂ ತಳಾಱರೂಪಂ ಕೈಕೊಂಡು ಗಜಱಿ (ಗ)

ಪದ್ಮಿನೀರಾಜಹಂಸನ ಸಂಸಾರಭೀತಿಗಂ ಜಿನಶ್ರೀಚರಣಾಳಂಕಾರಶೀರ್ಷನ ಶುದ್ಧಭಾವನೆಗಂ ಭಾವಯುತದಿಗಂಬರದಾಸನ ಪಂಚಪರಮೇಷ್ಠಿಗಳೊಳಾದ ಭಕ್ತಿಗಂ ನಗರದೇವತೆಗಳ್ಮೆಚ್ಚಿ [1] ಜಿನೇಶ್ವರನೆಂಬ ವಜ್ರಪಂಜರಮಂ ಪೊಕ್ಕಿರ್ದಂಗೆ [ಜಿನನಾಥನೆಂಬ ಬಲ್ಗೋ]ಂಟೆಯುಂ ಪೊಕ್ಕಿರ್ದಂಗೆಂ ಜಿನನಾಥನೆಂಬ ವಜ್ರಕವಚಮಂ ತೊಟ್ಟಿರ್ದಂಗೆ ಜಿನಾಧಿಪನೆಂಬ ಮಹಾದ್ರಿಯನೇಱಿರ್ದಂಗೆ ಜಿನಸ್ವಾಮಿಯೆಂಬ ಚಕ್ರವರ್ತಿಯಂ ನಮ್ಮಿರ್ದಂಗೆ ಜಿನವಲ್ಲಭನೆಂಬ ವನದುರ್ಗಮಂ ಕೈಕೊಂಡಂಗೆ ಜಿನಪರಿವೃಢನೆಂಬ ಜಲದುರ್ಗಮನಾಶ್ರಯಿಸಿದಂಗೆ ಜಿನದೇವನೆಂಬ ಚಂದ್ರಬಲಮಂಬೆತ್ತಂಗೆ ಜಿನಪ್ರಭಾವನೆಯೆಂಬ ಭೂಬಲಮಂ ಪಡೆದಂಗೆ ಜಿನಕುಂಜರನೆಂಬ ರಸಾಯನಮಂ ಸಾಧಿಸಿದಂಗೆ ಜಿನಾಗಮಮೆಂಬಮೃತಮಂ ಸೇವಿಸಿದಂಗೆ ಜಿನಧರ್ಮನಿಧಾನಮನೊಳಕೊಂಡಂಗೆ ಜಿನಸೇವನೆಯೆಂಬ ನಿಧಿಯಂ ಕಂಡಂಗೆ ಜಿನವ್ರತಮೆಂಬ ಕೈದುವಿನೊಳ್ ಪರಿಣತನಾದಂಗೆ ಜವನುಂ ಗಿವನುಂ ಕರ್ಮಮುಂ ಗಿರ್ಮಮುಂ ವಿಧಿಯುಂ ಗಿಧಿಯುಂ ವಿಧಾತ್ರನುಂ ಗಿಧಾತ್ರನುಂ ದೈವಮುಂ ಗಿಯ್ವಮುಂ ಪಾಪಮುಂ ಗೀಪಮುಂ ಮುಪ್ಪುಂ ಗಿಪ್ಪುಂ ಕುತ್ತಮುಂ ಗಿತ್ತಮುಂ ಸಾವುಂ ಗೀವುಂ ಪೀಡೆಯುಂ ಗೀಡೆಯುಂ ನೋವುಂ ಗೀವುಂ ಪುಟ್ಟುಂ ಗಿಟ್ಟುಮೆಂಬಿವೆಲ್ಲಮುಮೇನಂ ಮಾಡಲಾರ್ಪುವೇಗೆಯ್ವುವೇನನೊಡರ್ಚುವುವೆಂದು ಬೋಡಾಡಿ ತಳಾಱಿದೇೞಿಲ್ಲಮಂ ಮಕುಟಮಂ ಮಣಿಕುಂಡಲಮಂ ಹಾರಮಂ ಕೇಯೂರಮಂ ತೋಳ ಮಣಿಯಂ ಕಂಕಣಮಂ ಮುದ್ರಿಕೆಯಂ ಬ್ರಹ್ಮಸೂತ್ರಮಂ ದೇವಾಂಗವಸ್ತ್ರಮುಮಂ ಮಾಡಿ ಮತ್ತಂ ॥ ೧೦೫

[ಛಲದಿಂ ಪೂಣಿಸಿ ತಲೆಯುಂ
ಸೆರಗಿಲ್ಲದೆ ಪೊಯ್ಯೆ ನಗರದೇವತೆಗಳ್ಕೈ ।
ಷು ರಮುಪ್ಪೇಱಿಂ ಮುದದಿಂ
ಸ್ಫುರಿಯಿಪ ಸದ್ರತ್ನಹಾರಮಂ ಮಾಡುವುದುಂ ॥ ೧೦೬

1 ಧರಣೀಂದ್ರಂಮಚ್ಚಿ (ಗ)

ಎರಡುಂ ಕೈಗಳುಮಂ ನಿ
ಷ್ಕರುಣೆಗಳಡೆಯಿಟ್ಟು ಕಡಿಯೆ ದೇವತೆಗಳ್ತಾ೦ |
ಣ್ದಿರದಾಗಳ್ ಕಂಕಣಮಾ
ಗಿರೆ ಮಾಡಿದ ತೆಱನದವನಿಗಚ್ಚರಿಯಾಗಳ್ || ೧೦೭

ಬೇಗಂ ಮಂಡೆಯನಿರ್ಪೋ
ಲಾಗಿರೆ ಕಬ್ಬೊನದ ಡಂಕೆಯಿಂ ಪೊಯ್ವುದುಮಂ |
ತಾಗಳ್ಕ್ರನಿಸೇಱಂ ಸ
ದ್ರಾಗದಿನೊಡನೊಡನ ಮಕುಟಮಂ ಮಾಡುವುದುಮಂ || ೧೦೮

ಪರಸಿಂದಂ ನಡುವಂ ನಿ
ಷ್ಠುರಕೋಪಪ್ಪೊಯ್ಯೆ ನಗರದೇವತೆಗಳ್ವಿ |
ಸ್ತರದಿಂದೇಱಂ ದಿವ್ಯಾಂ
ಬರಮಾಗೆ ಮಹಾನುರಾಗದಿಂ ಮಾಡುವುದುಮಂ || ೧೦೯

ಎರಡುಂ ಕಿವಿಯುಮನೊಡನೊಡ
ನರಿಯೆ ಕೆಲಸೊರ್ಕ್ಕಿ ನಗರದೇವತೆಗಳ್ ಭಾ |
ಸುರಕುಂಡಳಂಗಳಾಗಿರೆ
ವಿರಚಿಸಿದರ್ಸೋವು ಪೊರ್ದದಂತಾಗೇಱಂ || ೧೧೦

ಅಂತಿಱದೇಱುಗಳೆಲ್ಲಮಂ ಹಾರಾದ್ಯಾಭರಣಂಗಳಾಗಿ ವಿರಚಿಸಿ ಸುಕವಿನಿಕರಪಿಕಮಾಕಂದಂಗೆ ವೇದನೆಯನೆಂತುಂ ಪೊರ್ದದಂತಾಗೆ ಮಾಡುವುದುಂ ದಂಡಧರರ್ತಮ್ಮಿಱದೇಱುಗಳೆಲ್ಲಂ ವಾರಿಷೇಣಕುಮಾರಂಗಾಭರಣಂಗಳಾಗೆ ಕಂಡು ನಿಲಲಣ್ಮದೆ ನಿನ್ನಲ್ಲಿಗೆ ಪರಿತಂದು ಮಹಾವಿಸ್ಮಯಮಂ ಪೇೞುತ್ತುಮಿರ್ದರನ್ನೆಗಂ ವನದೇವತೆಗಳುಂ ಪುರದೇವತೆಗಳುಂ ನೆರೆದು ||] ೧೧೧

ರುಂದ್ರಜಿನಸಮಯವಾರಿಧಿ
ಚಂದ್ರನನಭಿಮಾನಧವಳನಂ ಧೈರ್ಯಸುರಾ |

ದ್ರೀಂದ್ರೋಪಮನಂ ವಿಭವಸು
ರೇಂದ್ರನನಘತಿಮಿರಪನಜಸಖಸನ್ನಿಭನಂ ॥ ೧೧೨

[ತಮ್ಮ ವಿಗುರ್ವಿಸಿದ ನಾನಾರತ್ನಖಚಿತಮಪ್ಪ ಸಿಂಹಾಸನದ ಮೇಲಿರಿಸಿ ಕಲ್ಪವೃಕ್ಷದ ಪುಷ್ಪಂಗಳಿಂ ಮನಪಾರೆ ಪೂಜಿಸಿ ಪೊಗಟುತ್ತುಮಿರ್ದರನ್ನೆಗಂ] ॥ ೧೧೩

ಸುರದುಂದುಭಿ ಪಲವುಂ ಭೋ
ರ್ಗರೆಯೆ ವಿಯತ್ತಳದೊಳಿರ್ದು ವ್ಯೋಯುಱಿಯದೆ ದೇ।
ವರ ತಂಡಂ ಪೂವಿನ ಬ
ಲ್ಸರಿಯಂ ನೃಪಸುತನ ಮೇಲೆ ಕರೆವುದುಮಾಗಳ್ ॥ ೧೧೪

ಪುರಕ್ಷೋಭಮಾಗೆ ನೀಂ ಸಕಲಜನಪರಿವೃತನಾಗಿ ಬಂದು ಕುಮಾರನಂ ಪೂಜಿಸುವ ನಗರದೇವತೆಯರುಮಂ ಜಯಜಯನಿನಾದದಿಂ ದಂಬರದೊಳಿರ್ದು ಮೆಯ್ಯುಱಿಯದೆ ಪೊಗಳ್ವ ದಿವಿಜಸಮೂಹಮುಮಂ ಕಂಡು ಹರ್ಷಚಿತ್ತನಾಗಿ ಸಮ್ಯಕ್ತ್ವಚೂಡಾಮಣಿಯ ಚರಣಯುಗಳಮಂ ಚಂಪಕಾದಿಕುಸುಮಂಗಳಿಂದರ್ಚಿಸಿ ಸಹಜಕವಿಜನಮನೋಹರೋದ್ಯಾನವನಕಳಕಂಠನ ಧೈರ್ಯಮಂ ಬಣ್ಣಿಸುತಿರ್ಪನ್ನೆಗಂ ॥

ಮಂದರಾದ್ರಿನಿಭಕ್ಷಮಾನ್ವಿತನಂ ದೃಢವ್ರತನಂ ಮಹಾ
ನಂದದಿಂ ಸುರಕೋಟಿ ಬಣ್ಣಿಸಿದಪ್ಪುದೀಗಳ್ ಪೋಗಿ ನಾ
ಮುಂ ದಯಾಂಬುಧಿವಾರಿಷೇಣಕುಮಾರನಂ ನೆಱೆ ನೋಳ್ಪೆನಂ
ಬಂದದಿಂದುದಯಾಚಲಾದ್ರಿಯನೇಱಿದಂ ದಿನವಲ್ಲಭಂ ॥ ೧೧೫

ಅಂತಾದಿತ್ಯನುದಯಗಿರಿಗಜಾರೂಢನಪ್ಪುದುಂ ಕುಮಾರಂ ಪ್ರತಿಜ್ಞೆ ತೀರ್ದು ಕೈಯನೆತ್ತಿಕೊಳ್ವುದುಂ ಭಯಸ್ಥನಾಗಿ ನೀಂ ಕರಕಮಲಯುಗಳಂಗಳಂ ಮುಗಿದು] [1] ॥ ೧೧೬

---

1 ಹರಿವಿಷ್ಟರದೊಳ್ ಲೇಸಾ
ಗಿರಿಸಿ ಸುರದ್ರುಮದ ಪಾರಿಜಾತದ ಕುಸುಮೋ।
ತ್ಕರಮಂ ದೇವಾನಕಮಂ

ಆನಱಿಯದೆ ಪಿರಿದಪ್ಪಪ
ಮಾನಮನೆರಡಿಲ್ಲದಿಂದು ಮಾಡಿದೆನದನ ।
ಜ್ಞಾನಿಯ ತೆಱದಿಂ ಮನದೊಳ್
ನೀನಿರಿಸದೆ ಬಿಡುವುದಮಳಗುಣಗಣನಿಳಯಾ ॥ ೧೧೮

ಎಂದು ಪೇೞ್ವುದುಂ ವಾರಿಷೇಣಕುಮಾರಂ [ಕಿಳಕಿಳಿಸಿ] ನಕ್ಕು ಮುನ್ನಮೆನ್ನ ಮಾಡಿದ ಪಾಪಫಲಮೀನವದಿಂ ಫಲಮನೀಯಲೆಂದು ಬಂದುದಕ್ಕೆ ನೀವೇಗುವಿರಿ? ಎೞ್ಚಂಗಾಱದಂಬಿಂಗೆ ಇಟ್ಟಂಗಾಱದೆ ಗುಂಡಿಂಗೆ ಪೆಂಡತಿಗಾಱದೆ ತೊೞ್ತಂಗೆ ಗಮುಂಡಂಗಾಱದೆ ಬಾರಿಕಂಗೆ ಕಳ್ಳಂಗಾಱದೆ ಬಟ್ಟಪ್ರೋಪಂಗೆ ಮಾಱಿಂಕಕ್ಕಱದೆ ಸಂಕದ ಗೊರವಂಗೆ ಬಂದಿಕಾಱಂಗಾಱದೆ ತಿರಿದುಣ್ಬಂಗೆ ಮನ್ನಯಂಗಾಱದೆ ತಳಾಱಂಗೆ ನೆರೆಗಾಱದೆ ಮಗಂಗೆ ಮುನಿವರೆಂಬ ನಾಣ್ಣುಡಿಯಂತೆ ಕರ್ಮವಿರ್ದಂತೆ[ ನಿಮಗೇಕೆ ಮುನಿವೆಂ ಮುನಿವೊಡೆ ದುಷ್ಕರ್ಮಕ್ಕೆ ಮುನಿವೆಂ ನೀವೆನ್ನ ಪೆರ್ಚಂ ಬಯಸುವಿರಲ್ಲದೆ ಕೇಡಂ ಬಯಿಸಿರಿದೆಲ್ಲಂ ಕರ್ಮರಾಜನ ಪರಿಣತಿಯೆಂದು ನಿಮ್ಮ ಕಟ್ಟುಕಡಪಮಂ ಕಳಪೆಂದು ಮಹಾವಿಭೂತಿಯಿಂದರಮನೆಗೆ ವಂದು ಕತಿಪಯದಿನವಿರ್ದು ತನ್ನೊಳಿಂತೆಂದು ಬಗೆದಂ] [1] ॥ ೧೧೯

---

ಭರದೊಳ್ ಭೋರ್ಗರೆಯೆ ಸುರಿದು ಪರಮೋತ್ಸವದಿಂ ॥
ನಾನಾವಿಧರಿಂ ಧರಣೀಂದ್ರಂಬೆರಸು ದೇವನಿಕಾಯಂ ಪೊಗಳುತ್ತಿರ್ಪುದುಂ ॥
ಜಯ ಜಯನಿನಾದಮುಂ ಸಂ
ಶಯಮಿಲ್ಲದೆ ದಿವಿಜಪಟಹದುಲಿವುಂ ಸುರಕಾಂ ।
ತೆಯರ ಮೃದುಗಾನಮುಂ ವಿ
ಸ್ಮಯದಿಂ ಪೂರಿಸಿತು ಆಗಳಾಪುರವರದೊಳ್ ॥

ಆಗಳಾ ಕೋಳಾಹಳಮಂ ನೀಂ ಕೇಳ್ದು ಚೋದ್ಯಂಬಡುತಿಪ್ಪನ್ನೆಗಂ ಮಾಯಾನಿದ್ರೆಯಿಂದೆರ್ದು ತಳಾಱರುಂ ಪುರಜನಂಗಳುಂ ಬಂದು ತತ್ಪ್ರಪಂಚಮೆಲ್ಲಮಂ ತಿಳಿದು ಬಿನ್ನಪಂ ಗೆಯ್ವುದುಂ ಚೇಳಿನಿಮಹಾದೇವಿವೆರಸು ಧರ್ಮಾನುರಾಗದಿಂದಂ ಕುಮಾರನಲ್ಲಿಗೆ ಬಂದು ಬಣ್ಣಿಸುವ ದೇವರುಮಂ ಪೂಜಿಸುವ ದೇವಕಾಂತೆಯರುಮಂ ಕಂಡು ಚಂಪಕಾದಿಕುಸುಮಂಗಳಿಂದರ್ಚಿಸಿ ಕಾಲ ಮೇಲೆ ಬಿರ್ದ್ದ (ಗ).

1 ನಿಮಗೆ ಮುನಿವನಲ್ಲೆಂದು ತಂತಮ್ಮ ಮನದ ಕಟ್ಟುಕಡಹಮುಮಂ ತಳೆಗದುವೆ ನಿರ್ವೇಗಮಾಗಿ ಚೇಳಿನಿಮಹಾದೇವಿಯುಂ ನಿನ್ನ ಮೊಗಮಂ ನೋಡಿ (ಗ)

ಆವಾಂಪಣ್ಣುಮಸಿಗ ಮ
ಹಾವಿಭವದ ಜಂಘಚಾರಣತ್ವಂ ಪುಟ್ಟಿ ।
ತ್ತೇವೇಳ್ವುದೊ ಜಗದೊಳ್ ಜಿನ
ಸೇವನೆಯಿಂದರ್ಪವಂಗಿದಾವುದುಗಹನಂ ॥ ೧೨೩

ಅಂತು ಜಂಘಚಾರಣಬುದ್ಧಿ ಪ್ರಾಪ್ತನಾಗಿ [ ದ್ವಾದಶತಪೋನುಷ್ಠಾನ ನಿರತನುಂ ತ್ರಿದಂಡರಹಿತನುಂ ತ್ರಿಶಲ್ಯದೂರನುಂ ತ್ರಯೋದಶವಿಧಚಾರಿತ್ರಸಂಪನ್ನನುಂ ಅಷ್ಟಾವಿಂಶತಿಮೂಲಗುಣಯುಕ್ತನುಂ ದಶಧರ್ಮಸಮೇತನುಂ ಚತುಃಕಷಾಯಾಂತಕನುಂ ರಾಗದ್ವೇಷಮೋಹವಿವರ್ಜಿತನುಮಾಗಿ ತಪದೊಳೇಕಾದ್ಯುತ್ತರಂ ನೆಗೞುತ್ತುಮಿರ್ದೊಂದು ದಿವಸಂ ಭಾಂಡಿಲನೆಂಬ ಪುರೋಹಿತಂಗಮೋತನ ಪೆಂಡತಿ ಪುಷ್ಪವತಿಯೆಂಬ ಪಾರ್ವತಿಗಂ ಪುಟ್ಟಿದ ಮಗಂ ವ್ಯಾಕರಣಾದಿ ಶಾಸ್ತ್ರಂಗಳೊಳ್ ಕುಶಲನಪ್ಪ ಪುಷ್ಪದಾಡನೆಂಬ ಬಾಳಸಖಾನುಂ ಸುದಂತಿಯೆಂಬ ಬ್ರಾಹ್ಮಣಿಯೊಳ್ ಮದುವೆಯಾಗಿರ್ದನೆಂಬುದಂ ಕೇಳ್ದು ತನ್ನೊಳಿಂತೆಂದಂ ][1] ॥೧೨೪

ಕುರುಡಕುರ್ಳಿಯೊಳ್ ಕೆಡೆದೊಡೆ
ಕರುಣಿಸಿ ತೆಗೆವವನೆ ನಂಟನಘವಶದಿಂದಂ ।
ನರಕಗತಿಗೞಿವಜೀವ
ಕ್ಕರಮುವನೊಳ್ಗಗತಿಗೆ ತರ್ಪೊಡಾತನೆ ಕೆಳೆಯಂ ॥ ೧೨೫

ಅಂದಸಿಂಘವಶದಿಂದಂ
ತಿರಿದ ಮನುಷ್ಯರನುಪಾಯದಿಂ ಸದ್ಧರ್ಮ ।
ಕ್ಕಿರುವಂದದಿಂ ತರ್ಪ ಮಹಾ
ಪುರುಷನ ಕಲ್ಯಾಣಮಿತ್ರನವನೀತಳದೊಳ್ ॥ ೧೨೬

1 ತಪದೊಳುತ್ತರೋತ್ತರಂ ನೆಗೞುತ್ತಮಿರ್ಪುದುಂ ಭಾಂಡಿಲನೆಂಬ ಪುರೋಹಿತನ ಮಗಂ ಪುಷ್ಪದಾಡಂ ತರ್ಕವ್ಯಾಕರಣಾದಿಶಾಸ್ತ್ರಂಗಳೊಳತಿ ಕುಶಲನುಂ ಪೊಸಮದುವನಿಗನೆನ್ನ ಕಿಱಿಯಂದಿನ ಕೆಳೆಯ ವಾರಿಷೇಣಕುಮಾರಂ ತಪಂಬಟ್ಟಿರ್ದಪನಾತನಂ ನೋಡುವೆನೆಂದು ಬಂದು ವಾರಿಷೇಣಮುನಿಪನಂ ಕಂಡು ಪೊಡವಟ್ಟು ಕುಳ್ಳಿರ್ಪುದುಂ ತನ್ನೊಳಿಂತೆಂದು ಬಗೆದಂ (ಗ)

ಎಂದು ಭಾವಿಸಿ ಪುಷ್ಪದಾಡನಂ ಚತುರ್ಗತಿಸಂಸಾರದಿಂ ಪ್ರೊಕ್ಷ ಮೋಕ್ಷಿಸಿ ಪಂಚಮಗತಿಯನೆಯ್ದಿಸುವನೆಂಬ ಸಮ್ಯಕ್ತ್ವದಾತನ [ಮನೆಗೆ ಪಂದು ಪೊಸಮದವಳಗೆಯು ಕೆಲದೊಳಿರ್ದ ಪುಷ್ಪದಾಡನಂ ಕಂಡು] ಕಯ್ಯಂ ಪಿಡಿದೊಡಗೊಂಡು ಬಂದು ತಮ್ಮ ಗುರುಗಳ್ಗೆ ಪೊಡೆವಡಿಸಿ ನಿಮ್ಮಡಿ ಚಿತ್ತೈಸಿ ಕೇಳಿಮೀತಂ ಸಂಸಾರ [ಭೀರುವಾಗಿ ಜಿನದೀಕ್ಷೆಯಂ ಬಯಸಿ] [1] ಬಂದನೀತಂಗೆ ದೀಕ್ಷೆಯಂ ಪ್ರಸಾದಗೆಯ್ಯಿಮೆಂಬುದುಂ॥ ೧೭೭

ಜಿನದೀಕ್ಷೆಯನಾತಂಗಾ
ಮುನಿಪಂ ಕಾರುಣ್ಯದಿಂದೆ ಕುಡೆ ಕೊಂಡಂ ನ ।
ಟ್ಟನೆ ವಾರಿಷೇಣಮುನಿಪಂ
ಮುನಿದೊಡೆ ಪೊಲ್ಲೆಂದು ಮನದೊಳುಳ್ಳಳ್ಕುತ್ತುಂ ॥ ೧೭೮

ಅಂತು ಮನವಲ್ಲದ ಮನದೊಳ್ ಜಿನರೂಪಧಾರಿಯಾಗಿ ತನ್ನ ಮದವಳಗೆಯ ಮೇಲೆ ಚಿತ್ತಮಿಟ್ಟು ಬಸವನಗಲ್ಕಾನೆಯಂತೆ ದೂರಿ ಸುತ್ತುಮಿರ್ಪುದುಂ ವಾರಿಷೇಣಮುನಿ ಪುಷ್ಪದಾಡನ ಮನಮನಱಿದು ತನ್ನೊಳಿಂತೆಂದಂ [2] ॥ ೧೭೯

ಕುಡಿಯುಲೊಲ್ಲದು ಪಾಲನೆಂದೊಡೆ ಕೂಸನಾಲ್ಲದೆ ನೊಂದು ತಾಯ್
ಬಿಡುವಳೇ ಮುನಿಸಿಂ ಧರಿತ್ರಿಯೊಳಂತ ನೋಡ ವಿವೇಕಿಯುಂ
ಜಡರನುಕ್ಕೆವರಂ ಮಹಾದುರಿತಾಸ್ವಿತಕ್ಕಳನೊಳ್ಕಿ ತಂ
ನುಡಿದು ಬೇಸಱದೆಯ್ದೆ ತಿರ್ದುಗು ಧರ್ಮವಂ ತಿಳಿವನ್ನೆಗಂ ॥ ೧೮೦

[ಅದುಕಾರಣದಿಂದಘವಿಕಾರದಿಂ ವಿಭ್ರಾಂತಿಯುಪ್ಪೀತನುಮನೇನೆಂ ದೇಳಿಸಿ ಬಿಡದೆ ಸದ್ಧರ್ಮದೊಳ್ ದೃಢನಪ್ಪಂತು ಜಿನಾಗಮೋಕ್ತಿಯನ ಱಿಯೆ ತಿಳಿಪಿ ನಿರಂತರಸುಖಮನೀವ ತಪದೊಳ್ ಸತ್ತುಸುನೆಂದು ಪುಷ್ಪದಾಡಂಗಿಂತೆಂದಂ] [3] ॥ ೧೮೧

1 ಸಂಸಾರಕ್ಕೆಪೇಸಿ (ಗ)

2 ಜಿನರೂಪಧಾರಿಯಾಗಿ ತನ್ನ ಪೊಸಮದವಳಿಗೆಯಪ್ಪ ಸೌಂದರಿಯಂ ನೆನೆಯುತ್ತುಮುತ್ತಲೆ ಚಿತ್ತವಾಗಿರ್ಪುದಂ ವಾರಿಷೇಣಮುನೀಶ್ವರನಱಿದು ತನ್ನಂತರ್ಗತದೊಳಿಂತೆಂದು (ಗ) 3 ಎಂದು ಪುಷ್ಪದಾಡನಂ ಜಿನಾಗಮೋಕ್ತಿಗಳಿಂ ತಿಳಿಪಿ ತಪದೊಳ್ ದೃಢಮಾಡುವೆನೆಂಬ ಬುದ್ಧಿಯಿಂದಿಂತೆಂದು ಪೇಳಲೊಡಗಿದಂ (ಗ)

ಸಿರಿಯಿಲ್ಲ ಬೆಸಕೆಯ್ವ ನಾಡು ಕಿಱಿದೇಂ ತಮ್ಮಿಂದಮುರ್ವೀಶ್ವರರ್
ಪಿರಿಯರ್ ಪೇೞ್ವೊಡೆ ಮಹಾಬಲಯುತರ್ ಭೋಗಾನ್ವಿತರ್ ಧಾರಿಣೀ
ಶ್ವರನಾಮಾಕ್ರಮರಪ್ಪ ಚಕ್ರಧರರುಂ ರಾಜ್ಯಂಗಳಂ ಬಿಟ್ಟು ಸಿ
ಷ್ಟರನಪ್ಪುಗ್ರತಪಕ್ಕೆ ತಂದರೊಡಲಂ ಸಾಮಾನ್ಯಮೇ ಕೇಳ್ದಪಂ ॥ ೧೩೨

ಭರತಂ ಷಟ್ಖಂಡವಸುಂ
ಧರೆಯುಮನೊರ್ವಾದಲೆ ಬಿಟ್ಟು ಜಿನಸದ್ರೂಪಂ ।
ಧರಿಯಿಸಿದನೆಂದೊಡುೞಿದರ
ಸಿರಿಯುಂ ಸಂಪತ್ತುಮೞವು ಬಳವುಂ ಪಿರಿದೇ ॥ ೧೩೩

[ಸ್ಮರರೂಪಂ ನೃಪವೆಂದಿತಂ ಸಕಳಷಟ್ಖಂಡಾವನೀವಲ್ಲಭಂ
ಸ್ಥಿರಚಿತ್ತಂ ಪ್ರಭು ಚಕ್ರವರ್ತಿ ತಿಳಕಂ ಶಾಂತೀಶನಂತಪ್ಪಗಂ
ಡರುಮಿಂ ಸಂಸ್ಕೃತಿಗಳ್ಗೆ ಬಳ್ಕಿ ಸುಗತಿಶ್ರೀಕಾಂತೆಯೊಳ್ ನಚ್ಚಿ ಪಂ
ದರಿದಪ್ಪುಗ್ರತಪಕ್ಕೆ ತಂದರೊಡಲಂ ಸಾಮಾನ್ಯಮೇ ಪೇೞ್ವುದಂ ] ॥ ೧೩೪

ಬೇಸಱದಲಸದೆ ಕುದಿಯದೆ
ಸಾಸಿರಮುಂ ಕುಡಿದರಂತೆ ಮುಱುಗದೆ ತಪದೊಳ್ ॥
ಸಾಸಿಗನಾಗಿದರ್ ಗುಣಾ
ಭ್ಯಾಸಂಮಾಳ್ಪಂಗ ತಡೆಯುಂಟುಮಿಪುದು ಮೋಕ್ಷಂ ॥ ೧೩೫

[ಪಱುಗೋಲ ಪನ್ನಿಕೋಲಿಂದಂ ದೋಣಿಯೊಕೊರ್ಗಲ್ ಲೇಸಂಬಂತೆ ಮಾನುಷ್ಯಲೋಕದೊಳಪ್ಪ ಶತಸಹಸ್ರಲಕ್ಷಕಾಲಭವಂಗಳೊಳಾವ ಸುಖಮೆಲ್ಲಂ ಸ್ವರ್ಗದೊಳಾದ ಮಹಾಪದೇವನುಂದುಗಳಿಗೆಯು ಸುಖಮಂ ಪೋಲವೆಂದೊಡೆ ಉತ್ತಮಮಪ್ಪ ಜಿನರೂಪಿಂದೆ ಸಂತತಮಪ್ಪ ಸುಖಂ ದೊರೆಕೊಳ್ಗುಮದಕ್ಕಂಸುಮಾತನೆ ಗಾಪಿಲಂ] [1] ॥ ೧೩೬

---

1 ಪಱುಗೋಲ ಪನ್ನಿಕ್ಕೋಲಿಂದ ದೋಣಿಯೊಕ್ಕೋಲು ಲೇಸೆಂಬಂತೆ ಪೆಱರ ಶತಪ್ರಪಂಚಕೋಟಿಭವಂಗಳೊಳಾದ ತಪಮೆಲ್ಲಂ ಜಿನರೂಪಿನರೆಘಳಿಗೆಯ ಫಲಮನಿತಕ್ಕಂ ಬರಲಾಱದಂತಪ್ಪ ಜಿನರೂಪಂ ಕೈಕೊಂಡುಮೇಳಿಸಲಾಗದು (ಗ)

ತಪಮನೆ ಪ್ರಾರ್ಥಿಪುದು ಬೆರ್ಚದೆ
ತಪದಿಂದಂ ಸಕಲರಾಜ್ಯಮುಮಂ ಕೈಸಾರ್ಗುಂ ।
ತಪದಿಂ ನಿರ್ವೃತಿಯುಕ್ಕುಂ
ತಪದಿಂ ಪರಿಹರಿಸುಗುಂ ಸಮಸ್ತಾಘೌಘಂ ॥ ೧೩೭

[ದಿವ್ಯಾಹಾರಮುಮಂ ಕೂರ್ಪ ಪೆಂಡತಿಯುಮಂ ಸುಗಂಧದ್ರವ್ಯಂಗಳುಮಂ ಪೆಱರ ಮೇಲೆ ಬಿಟ್ಟನಗಾಗೆ ನೀವುಣ್ಬುದು ನೀವನುಭವಿಸುವುದು ನೀವುಪಭೋಗಿಸುವುದೆಂಬನುಂ ಧರ್ಮಮುಮಂ ದಾನಮುಮನೋದುಮಂ ತಪಮುಮಂ ತಾನಲಸಿ ಪೆಱರಿಂ ಮಾಡಿಸುವನುಂ ಫಲಪ್ರಾಪ್ತಿಯನೆಯ್ದಲಾಱಂ] ॥ ೧೩೮

ಬಿಸಿಲಪ್ಪೊಡಶುಚಿ ಸಿಲ್ಲಗು
ಪಡಿಕೆ ಕರಂ ಜಂತಿನಾಗರಂ ಪವೇಱಿ ।
ಪೆರ್ಡೆ ಕ್ರಿಮಿಯ ರಾಶಿ ಮೂತ್ರದ
ಮಡಕೆಯಿದಂ ನಂಬಿ ಚಪಳರೇಕೆಯ್ಗೊ ಕಿಡುವರ್ ॥ ೧೩೯

ಪೆಱತೇನೊ ಪಲವುದಿವಸಂ
ಪೊಱಗಿರ್ದೊಡೆ ಕಿಡದ ವಸ್ತುಗಳ್ತನುವಿಸಿದಂ ।
ನೇಱಿ ಪೊರ್ದಿದಸಿತಱೊಳ್ ಪೊ
ಚ್ಚಱುಗೆಟ್ಟು ಮಲಂಗಳೆಂಬ ಪಸರಂ ಪಡೆಗುಂ ॥ ೧೪೦

[ಮಡಕೆಯೊಳನಿಸುಬೇಗಮಿದೊಡಂ ಕೂೞಿನೆಂಜಲೆನ್ನರ್ ಪೇಸದುಂಬರಂಜದೆ ಮುಟ್ಟುವರಾಕೂೞಂ ಮಾನಿಸರ್ಮೆಟ್ಟಿದಸಿತಱೊಳ್ ಗುಣಂಗೆಟ್ಟೆಂಜಲಪ್ಪುದುಂ ಪೆಱಮುಟ್ಟಿದೋಷಪ್ಪುದಱಿಂ ಶರೀರಂ ಪೊಲ್ಲದೆಂಬುದಲ್ಲದೆ ಶುಚಿಯೆನಲಾಗದು ॥ ೧೪೧

ಎರಡುಂಕೈಗಳಿನಾಗಳು
ಮೊರಸುತುಮುದ್ವರ್ತ್ತಮಿರದೆ ಲೇಸಲ್ಲದೊಡೀ ।
ಪುರುಳಿಲ್ಲದನಾಯೊಡಲಂ
ಮರುಳೇ ಕರಮೊಲ್ದು ಕೂರ್ಪ ಮಾನಿಸರೊಳರೇ ॥ [1] ೧೪೨

1 ಲೇಸೆಂದುಪೊರ್ದ್ವವನ್ನರುಮೊಳರೇ (ಗ)

ಎಲೆಯಿಂ ಬಾಯ್ ಮುಡಿಯಿಂದಂ
ತಲೆ ಸೀರೆಯಿನಂಗಮೆಸೆಗುಮಿಂತಿವು ಪಿಂಗಲ್ ।
ಕೊಳೆವೊಡಲಂ ಕ್ರಿಮಿರಾಶಿಯು
ನೆಲೆ ಮಾಣದೆ ಸೋಲ್ತು ಪೊರ್ದುವನ್ನರುಮೊಳರೇ ॥ ೧೪೩

ಉಗುೞುಂ ಪೇಲುಂ ಸಿಂಬುಳು
ಮಗುೞಿರ್ದುವನೆಯ್ದೆ ನೋಡಿ ಪೇಸುವರಂತ ।
ಪೃಗುೞಿಂ ಪೇಲಂ ಸಿಂಬುಳ
ಮಗುೞದೆ ಪೊತ್ತಿರ್ದ ತನುಗೆ ಪೇಸವರೊಳರೇ ॥ ೧೪೪

ತನುವಪ್ಪೊಡೆ ಪೊಲ್ಲದು ಜೌ
ವನಮಪ್ಪೊಡೆ ಪಲವುಕಾಲಮಿರಲಱಿಯದು ಕಾಂ ।
ಚನಮಪ್ಪೊಡೆ ದಾಯಿಗರಿಂ
ದನುನಯದಿಂ ಠಕ್ಕರಿಂದಮೞಿವುದು ಬೇಗಂ ॥ ೧೪೫

ವನಿತೆಯರುಂ ತಾಯುಂ ಬಂ
ಧುನಿಕಾಯಮುಮಾತ್ಮಜಾತರುಂ ತಂತಮ್ಮಿಂ ।
ಬನೆ ಬಗೆವರಲ್ಲದೆಂತುಂ
ತನಗಪ್ಪರೆ ನರಕಗತಿಗೆ ಪೋಪವಸರದೊಳ್ ॥ ೧೪೬

ನೆರೆದಿರ್ದ ನಂಟರುಂ ಪೆಂ
ಡಿರುಮಯ್ಯನುಮಿರ್ದ ಪಚ್ಚು ಕೊಳ್ವರೆ ನೋವಂ ।
ಮರಣಮನೊತ್ತುವ ರುಜೆಯಂ
ಕರುಣಿಸಿ ಪೆಱರ್ಗೇಕೆ ಮುಯ್ವನಾಂಪರೊ ಕೆಲಬರ್ ॥ ೧೪೭

ಕರವೊಪ್ಪೆ ಮೂಱುಕೋಟಿಯು
ವರೆನಂಟರುಮಿರ್ದ ಕಾಯಲಾರ್ತರೆ ಚಕ್ರೇ ।
ಶ್ವರನಿರವಿಂತುಟು ಕೆಲಬರ್
ಪರಮಾರ್ಥಂಕಂಡು ನಂಟರಂ ನಂಬಿರ್ಪರ್ ॥ ೧೪೮

ಲಂಕೆಯ ದೊರೆಯ ಮಹಾನಗ
ರಂ ಕೋಂಟೆ ಸಮಸ್ತವಿದ್ಯಾಧಿಪತಿ ತಾನುಂ ।
ಪೆಂಪಿಂ ಕಲಿಯೆನಿಸಿದ ರಾವಣ
ನಂಕದೊಳೇನಣ್ಣ ರಾಮನಂ ಗೆಲ್ದಪನೇ [1] ॥ ೧೪೯

ತುಪ್ಪದ ಮೋಹಕ್ಕೆಯುಮೇಧ್ಯಮಂ ಕೊಂಡಂತೆ [2] [ಪೊನ್ನ ಮೋಹಕ್ಕೆ ಬಾವಿಯೊಳ್ಕೈಯುಂ ನೀಡುವಂತೆ] ಪೆಂಡಿರ ಮೋಹಕ್ಕೆ ಸರ್ಪಯುಂ ಪೊಯ್ವಂತೆ ಮಕ್ಕಳ ಮೋಹಕ್ಕೆ ಕಿರ್ಚಂ ಪೊಯ್ವಂತೆ ನಂಟರ ಮೋಹಕ್ಕೆ ಪುಲಿಯುಂ ಪಿಡಿವಂತೆ ಮಾನಿಸವಾಳ ಮೋಹಕ್ಕೆ [ಸಂಸಾರದೊಳಾದ ಭೋಗಕ್ಕಳಿಪಿ ಪಿರಿದಪ್ಪ ಸುಖಮಂ ಮಾಣ್ಬ ತಪಮಂ ಕಿಡಿಸಿ ನರಕದೊಳಾದ ಮಹಾದುಃಖಕ್ಕೊಳಗಾಗವೇಡ] ॥ ೧೫೦

ಈಸಿರಿಯೀತನುವೀಧನ
ಮೀಸತಿ ಮತ್ತೀವಿಲಾಸಮತಿವಿಭವಂ ಕೇ ।
ಳೀಸುಖಮೀನೆಲನೀಮನೆ
ಯೀಸುತರೆಲೆ ನಿತ್ಯಮೆಂದು ಪದೆವನೆ ಗಾಂಪಂ ॥ ೧೫೧

ಬಱುಮೞಲಂ ಪಿಡಿದೊಡೆ ನಿಲ
ಲಱಿಗುಮೆ ತಳದೊಳ್ವಿವೇಕಿಯುಲ್ಲದ ನರನುಂ ।
ಮಱುಗಿದೊಡೆ ಮಱುಕಮಲ್ಲದ
ಪೆಱತೇಂ ಸಂಸಾರದಲ್ಪಸುಖಮಿರ್ದಪುದೇ ॥ ೧೫೨

[ಬಂದುಮರುಷದಾರಂಬಕ್ಕಾಱದೆ ಸಾವನ್ನಮರಮೆಂಜಲಗುಟಿನಾಯುದ್ಧಿಣ್ಬಕ್ಕಲಮೆಗನುಪೊಂದುಭವದ ತಪಕ್ಕಾಱದೆ ಪಲವುಭವಂ ನರಕತಿರಿಕವೇದನೆಯನುಣ್ಬ ನರನುಂ ಬುದ್ಧಿವಂತರಲ್ಲರ್] ॥ ೧೫೩

1 ರಾವಣನುಂ ಕಾಲನ ಕೊಳಸೇನೊ ಗೆಲ್ದನೊ ಮತ್ತಂ (ಕ. ಖ.)

2 ನಂಜುಂ ತಿಂಬಂತೆ ಬಾಳ ಮೋಹಕ್ಕೆ ರಕ್ಕಸಿಯು ನೆಱವಂತೆ ಬೆಲ್ಲದ ಮೋಹಕ್ಕೆ ಸುರಗಿಯುಂ ನಕ್ಕುವಂತೆ ಪಡಪಿನ ಮೋಹಕ್ಕೆ ಕಳ್ಳರೊಡವೋವಂತ ನಿದಾನದ ಮೋಹಕ್ಕೆ ತಲೆಯುಂ ಕೊಡುವಂತೆ (ಗ)

3 ಧರ್ಮಮಂ ಬಿಟ್ಟು ನರಕಮುಂ ಪೋಗಲುವೇಡಾ (ಗ)

ತರುಣಿಯರೆಂಬ ಪೆರ್ಬುಲಿಗಳಂ ಹರಿಣಾಕ್ಷಿಯರೆಂಬ ಕ್ರೂರಸಿಂ
ರ್ಕರಡಿಗಳಂ ಲತಾಲಲಿತಗಾತ್ರಿಯರೆಂಬ ಮಹೋರಗಂಗಳಂ
ಸ್ಮರಶರದಿಂದೆ ಮೆಯ್ಯಱಿಯದೊಯ್ಯನೆ ಪೊರ್ದಿದರಪ್ಪೊಡಟ್ಟಿ ಚೆ
ಚ್ಚರಮೆಱಿದೊತ್ತಿ ಮುಟ್ಟಿ ಪುಡಿಯಾಗಿರೆ ತಿನ್ನದೆ ಪೋಗಲೀವರೇ॥೧೫೪

ಮತ್ತಂ ವನಿತೆಯರ ತೋಳಂ ಕಾಮನ ಮಸೆದ ಬಾಳನ್ನದೆ ಲತೆಯೆಂದೊಡಂ, ಲಲನೆಯರ ಕಡೆಗಣ್ಣ ನೋಟಮಂ ಮನಸಿಜನ ಕಯ್ಯ ಪಾಶಮನ್ನದೆ ನಗೆಗಣ್ಣೆಂದೊಡಂ, ಕಾಂತೆಯರ ಮೆಲ್ನುಡಿಯುಂ ನಂಜಿನುರುಳಿಯೆನ್ನದೆ ಮುದ್ದುನುಡಿಯೆಂದೊಡಂ, ತರುಣಿಯರ ಕುಚ ಯುಗಳಂಗಳಂ ಮೋಹರಾಜನ ಚಕ್ರಮೆನ್ನದೆ ಚಕ್ರವಾಕಮೆಂ ದೊಡಂ, ಲತಾಂಗಿಯರ ಮೇಲ್ವೊದೆವ ದುಕೂಲಮಂ ಮೋಹರಾಜ ನೆಂಬ ಬೇಂಟೆಗಾಱಂ ಪರೆಪಿದ ಬಲೆಯೆನ್ನದೆ ಕಾಮಧ್ವಜಮೆಂದೊಡಂ, ಕಾಮಿನಿಯರ ಕರ್ಣಯುಗಳಮಂ ಕಾಮರಾಜಂ ಪಿಡಿದಡ್ಡಣಮೆನ್ನದೆ ಕಮಲಮುಖವಮಂದೊಡಂ, ಬಾಲೆಯರ ಬೆರಲುಗುರ್ಗಳಂ ಮಾಯಾ ಕಿರಾತನ ಕೂರಂಬುಗಳನ್ನದೆ ಕಾಮನ ಪಂಚಬಾಣಮೆಂದೊಡಂ, ರಮಣಿಯರ ಪುರ್ಬುಗಳಂ ಜವನ ಬಿಲ್ಲನ್ನದೆ ಕಬ್ಬಿನ ಬಿಲ್ಲೆಂದೊಡಂ, ನಿತಂಬಿನಿಯರಸಿಯ ಬಾಸೆಗಳಂ ಯಮರಾಜನ ಬಟರೆನ್ನದೆ ಶೋಭಾ ಕರಮೆಂದೊಡಂ, ನಾರಿಯರ ಮುಂಗಂ ಕಾಮದೇವನೆಂಬ ಬೇಂಟೆಗಾಱಂ ಪೊಗೆದು [1] ಕೊಲ್ವ ತಿದಿಯೆನ್ನದೆ ಚಂಪಕಕುಟ್ಮಳಮೆಂದೊಡಂ, ಕನ್ನೆ ಯರ ಬಾಯ್ದೆರೆಯುಂ ನರಕದ ಬಿಲಮೆನ್ನದೆ ಕಮಟಕೆಲ್ವೆಂದೊಡಂ, ದಯಿತೆಯರ ಕುರುಳ ಪಜ್ಜೆಗಳನಂತಕನ ಕಣ್ಣಿವಲೆಯೆನ್ನದೆ ಮೆಱಿ ಮುಂಬಿಯೆಂದೊಡಂ, ಅಬಲೆಯರ ಕೊರಲ ರೇಖೆಗಳುಮಂ ಮೃತ್ಯು ರಾಜಂಗಿದು ಕೊಲ್ವ ನೇಣೆನ್ನದೆ ಕೋಮಲರೇಖೆಯೆಂದೊಡಂ, ಗಣಿಕೆ ಯರ ನೊಸಲಂ ಮಾಯಾನೃಪನ ಕವಲಂಬೆನ್ನದೆ ಬಾಲಶಶಿಯೆಂದೊಡಂ, ಕಪಟನಾಟಕಸೂತ್ರಧಾರೆಯರ ಶೃಂಗಾರಮಂ ನರಕದ ದಾರಿಯೆನ್ನದೆ ಲೇಸೆಂದೊಡಂ, ಮಾಯಾಕಿರಾತೆಯರ ವಿಲಾಸಮಂ ಕೇಸುರಿಯೆನ್ನದೆ

1 ಪೋಗದೆ (ಕ. ಖ.)

ರಮಣೀಯಮೆಂದೊಡಂ, ಕುಟಿಲಚಿತ್ತೆಯರ ಕೂಟಮುಂ ಕಾಳಕೂಟ ಮೆನ್ನದೆ ನಲಿದೊಡಂ, ಪಾಪರೂಪಿಯರ ಮೇಳಮುಂ ಕೀನಾಶನ ಗಾಳ ಮೆನ್ನದೆ ಪೆರ್ಚುವೊಡಂ ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯಂ ॥ ೧೫೫

ಮಾಯದ ಟಕ್ಕಿನ ಕಪಟದ
ವಾಯದ ಕೃತ್ರಿಮದ ಮುಱುಕದೆಱಕದ ಕಪಟೋ ।
ಪಾಯದ ಕಣಿಗಳ್ ಸುದ
ಸ್ತ್ರೀಯರ್ಕೇವಲಮೆ ಸರ್ವಜನವಂಚಕಿಯರ್ ॥ ೧೫೬

ನರಕದ ಬಟ್ಟೆಯನಱಿಸುದ
ನರರ್ಗಂ ತೋಱುವ ಪೊಲಂಬಿಗರ್ದುಷ್ಕೃತತ ।
ಸ್ತನ ಪಿಡಿದಿರ್ಪ ಡಾಣೆಗ[1]
ಳರವಿಂದಾಕ್ಷಿಯರನಂಗಸೋಜೆಯ ಪಿಡಿಗಳ್ ॥ ೧೫೭

ಸುಗತಿಯ ಬಟ್ಟೆಯ ಮುಳ್ಗಳ್
ಸುಗತಿಯ ಬಟ್ಟೆಯ ಚಮೂರುತತಿಗಳ್ ಮತ್ತಂ ।
ಸುಗತಿಯ ಬಾಗಿಲ[2] ಪಡಿಗಳ್
ಮೃಗಾಕ್ಷಿಯರ್ಮೋಕ್ಷಪಥದ ಕಾಪಿನ ನಾಯ್ಗಳ್ ॥ ೧೫೮

ಸಿರಿಯಪ್ಪೊಡೆ ಪುಲ್ಗಿಚ್ಚಿನ
ದೊರೆ ರಾಜ್ಯವಿಭೂತಿ ಮುಗಿಲ ನೆಳಲ ಸಮಾನಂ ।
ತರುಣತ್ವಮಪ್ಪೊಡಿಂದ್ರನ
ಪರಚಾಪದ ಸರಿ ಮನುಷ್ಯರೇಕೆಯೊ ಬೆಸೆವರ್ ॥ ೧೫೯

ದರಿಯ ಮೊರದಂತೆ ಜೀವಿತ
ಮರಲೆಯ ಮಸಿಯಂತೆ ಪೆಂಡಿರುಪಭೋಗಂ ಭೂ ।

1 ದಾಣೆಗಳ್ (ಗ) 2 ಬಟ್ಟೆಯ (ಗ)

ಧರನದಿಯಂತೆ ಕಳೇವರ
ಮರಸಿನದಂತಿರ್ಕುಮುದ್ಧತಿಕ್ಕೆಯುಮಾದಟುಂ ॥ ೧೬೦

ಬಲಮುಂ ಪೆಂಪುಂ ಕೂರ್ಪುಂ
ಕಲಿತನಮುಂ ದರ್ಪಮುಂ ಪ್ರತಾಪಮುಮಳವುಂ ।
ಕುಲಮುಂ ಛಳಮುಂ ಜಳಬು
ಬ್ಬುಳಿಕೆಯವೊಲ್ ಕಿಡುವುವೇಕೆ ತೂನೆವರ್ ಮೂರ್ಖರ್ ॥ ೧೬೧

ಒಡಲೊಳ್ಳಿತಾದೊಡಂ ಸಿರಿ
ಕಿಡದೊಡಮಾಯುಷ್ಯಮೊಪ್ಪುಗೊರ್ಮೆಗೆ ಪಿರಿದ ॥
ಪ್ಪೊಡಮೇವೊ ಮನುಷ್ಯರ [1] ಸ್ಥೈ
ತ್ರಿತುಮವರಾಮರ್ಣಿಪನ್ನರಾವರ್ಗಸುಮತಿಯೊಳ್ ॥ ೧೬೨

ಚಕ್ಗನೆ ಸಾವುದುಮಂ ಸಿರಿ
ನೆಕ್ಕನೆ ಕಿಡುವುದುಮನಱಿದು ಕಿಂಪುಂ ಕಳ್ದಂ ।
ಸೊಕ್ಕುಮದುಕ್ಕುಮರಂಜದ
ಯುಕ್ಕುಂದಲೆವಾಯ್ವರನ್ಯರೆನಗಿದು ಚೋದ್ಯಂ ॥ ೧೬೩

ತನುವಂ ತಪದೊಳ್ ಧನಮಂ
ಜನನುತಸದ್ಧರ್ಮದಲ್ಲಿಯುಂ ತವಿಸಿ ಕಲರ್ ।
ಮನದೊಳ್ಪಪಕ್ಗಂಜುಪ
ರೆನಸುಂ ದುಃಖಕ್ಕೆಯುಂಜರೆನಗಿದು ಚೋದ್ಯಂ ॥ ೧೬೪

ಎಂದು ಶರೀರದೊಳಾದ ಪ್ರೊಲ್ಲಮುಯುಮಂ ಸಂಸಾರದೊಳಾದ ದುಃಖಮುಮಂ ಭೋಗಂಗಳ ಕೇಡುಮಂ ಬಾಳ್ಕೆಯನಿತ್ಯತೆಯುಮಂ ವನಿತೆಯರ ಕಷ್ಟತೆಯುಮಂ ಸ್ಥಿತಿಕರಣಂ ಮಹಾಪುಣ್ಯಮೆಂಬುದುಮಂ ಬಗೆದು ಪನ್ನೆರಡುವರ್ಷಂಬರಂ ಮೊಣದೆ ಪೇಟಿಪ್ಪುಷ್ಪದಾಡನೊಡೆದ

1 ಪರಿದಾದೊಡಯುಕ್ತಟ ಮನುಜನಂ (ಗ)

ಕಲ್ಲ ದೋಣಿಯೊಳಱಿದ ನೀರಂತೆ ಕೈಕೊಳ್ಳದೆ ಸತಿಯರ ರೂಪನೆ ಭಾವಿ
ಸುತಿರ್ಪುದಂ ವಾರಿಷೇಣಮುನಿನಾಥಂ ತನ್ನೊಳಿಂತೆಂದಂ ॥ ೧೬೫

ಆನೀಪಾಪ್ಗಳನೊಲ್ಲದಂದು ಕಿಡುವೆಂ ತಾಯುಂ ಮನಂಸೋಗುಪಂ
ದೇನಪ್ಪುತ್ತಗಳಗೂಸುಗಳ್ ಕುಡಿಗುಮೀ ಸಂತೋಷದಿಂ ಪಾಲ್ಗಳಂ
ಹೀನಾತ್ಮರ್ಕಳುವೆಂತೆ ನಾಡೆ ಹಿತಮಂ ಸಂತಂ ಸುಖೋಪಾಯಮಂ
ಜ್ಞಾನಾತ್ಮಂ ನೆಱೆ ಪೇಳ್ದೊಡಂ ಪದೆಪಿಸಿಂ ಕೈಕೊಳ್ಳರಾನಂದದಿಂ ॥ ೧೬೬

ಕಳವೆಯ ಕಱುಬುವಂ ತೊವೆಯುವಂ ತಿಳಿದುಪ್ಪವುವಂ ವಿನೋ
ದದಿಂ
ಗಳಿಲನೆ ನಾಯ್ಗೆ ಬೇಗವೊಸೆವಿಕ್ಕಿದೊಡಂ ಕಡುಗಯ್ದು ಮತ್ತಮ
ವ್ವಳಿಸಿ ಕನಲ್ದೊನಲ್ದು ಸಲೆ ಪೇಲವ ಚಿಂತಿಸುತಿರ್ಪವೆಂತೆ ಸಂ
ಚಳಮನರುಂ ಸದುಕ್ತಿಗಳನೊಲ್ಲದೆ ಚಿಂತಿಸುವರ್ಕುಮಾರ್ಗಮಂ॥೧೬೭

ಎಂದು ಮುಗುಳ್ನಗೆನಕ್ಕು ಮತ್ತಮಾತನನಲಸಿ ಬಿಡುವುದು ಪುರು
ಷಾರ್ಥಮಲ್ಲೆಂದು ಗಿಳಿಯಂ ಪಂಜರದೊಳಿಕ್ಕಿ ರಕ್ಷಿಸುವಂತೆ ಪುಷ್ಪದಾಡ
ನನೆತ್ತಲುಂ ಪೋಗಲೀಯದೆ ಧರ್ಮಶ್ರವಣಮಂಗೆಯ್ಸುತ್ತುಮೊಂದುದಿ
ವಸಂ ವಿಪುಳಶೈಲದೊಳರ್ದ ವರ್ಧಮಾನಸ್ವಾಮಿಗಳ ಶ್ರೀಪಾದಮಂ
ಬಂದಿಸಲೆಂದು ವಾರಿಷೇಣಮುನಿಪರಿವೃಥಂ ಪೋಪುದುಮತ್ತಲ್ ದ್ರವ್ಯಲಿಂ
ಗಿಯಾಗಿರ್ದ ಪುಷ್ಪದಾಡನಡೆವೆತ್ತು ರಾಗಿಸಿ ಬಲೆನಱಿದ ಕೊಂಕನಂತೆ
ಮನೆಯ ಗುಱಿಯಾಗಿರ್ಪುದುಮಾಗಳ್ ॥ ೧೬೮

ಉತ್ತಮಗುಣಗಣನಿಳಯಂ
ಚಿತ್ತಜಮದಭರಕರೀಂದ್ರಹರಿ ವಿಮಳಯಶೋ ।
ದಾತ್ತಂ ಶೃತಾಂಬುನಿಧಿ ಜಗ
ದುತ್ತುಂಗಂ ನಿಷ್ಕಷಾಯನಪಗತದುರಿತಂ ॥ ೧೬೯

---

1 ಎಂದು ಪನ್ನೆರಡುವರುಷಂಬರ ಸ್ಥಿತಿಕರಣದ ವಿಶೇಷಫಲಮಂ ಅಱಿವನ
ಪ್ಪುದಱಿಂದಲಸದೆ ಧರ್ಮಶ್ರವಣಂಗೆಯ್ವೊಡಂ ಪುಷ್ಪದಾಡನೊಪವ ಮಡಕೆಯೊಳ್
ಱಿದ ನೀರಂ ಕೊಳ್ಳದೆ ಸುದತಿಯರಂ ಭಾವಿಸುತಿಪ್ಪುದಂ ವಾರಿಷೇಣಮುನೀಂದ್ರನಿಂ
ತೆಂದಂ (ಗ)

ವಾರಿಷೇಣಮುನಿವಲ್ಲಭನುಂ ಮಹಾವೀರಸ್ವಾಮಿಯುಂ ಬಂದಿಸಿ ತಡೆಯದಲ್ಲಿಂದಂ ಬಂದು ಪುಷ್ಪದಾಡನನೆನಿಪ ದ್ರವ್ಯತಪಸ್ವಿಯನಲ್ಲಿ ಕಾಣದೆ ತನ್ನ ನಿವಾಸಕ್ಕೆ ಪೋದನೆಂದಱಿದು [1] ತಾಂ ಜಂಘಾಚಾರಣಋದ್ಧಿ ಪ್ರಾಪ್ತನಪ್ಪುದಱಿಂ ಮರುಜ್ಜವದಿಂದೆಯ್ದಿ ಪುಷ್ಪದಾಡನನೆಡೆಯೊಳ್ ಕಂಡು ಪಿಡಿದುಕೊಂಡಾತಂಗೆ ವೈರಾಗ್ಯಮಂ ಪುಟ್ಟಿಸಲ್ವೇಡಿ ನಿನ್ನ ರಾಜಭವನಕ್ಕೆ ಬಪ್ಪುದುಂ ಚೇಳನಿಮಹಾದೇವಿ ವಾರಿಷೇಣಮುನೀಂದ್ರೋತ್ತಮನ ಬರವಂ ದೂರದೊಳ್ ಕಂಡು [ಪೊೞ್ತಿಲ್ಲದ ಪೊೞ್ತಿನೊಳ್ ಬಂದರಿದೇನಾನುಮೊಂದು ಕಾರಣಮಾಗಲ್ವೇೞ್ಕುಮೆಂದು ವಿಸ್ಮಯಂಬಟ್ಟು] ತನ್ನೊಳಿಂತೆಂದಳ್ ॥ ೧೭೦

ಎಗ್ಗಂ ಮುನ್ನೀಮಾರ್ಗಂ
ಮೊಗ್ಗೆಂದುಱದುಕ್ಕೆ ಪೋಗಿ ಸಿಲಲಾಱದೆ ಜಿಃ ।
ಸಿಗ್ಗಿಲ್ಲದಲಸಿ ಬಂದಂ
ಗುಗ್ಗುರಿಯುಂ ತಿಂಬ ಮೊಗ್ಗು [2] ಸುಣ್ಣದೊಳುಂಟೇ ॥ ೧೭೧

ಅಱಿಮುನದಂಗಂ ಸುಖವಿಂ
ಗೆಳಸುವವಂಗಂ ಗೃಹಕ್ಕೆ ಪೆಂಪಿಂಗೆ ಮಹೋ ।
ಜ್ಜ್ವಳಕೀರ್ತಿಗಾಟಿಪಂಗಂ
ಖಳಂಗಮಳವಡದು ಜೈನಮಾರ್ಗಂ ಜಗದೊಳ್ ॥ ೧೭೨

[ಈತನಪ್ಪೊಡೆ ಸುಖಿ ಕೊರಲ ಸತ್ವಮಿಲ್ಲದೊರಲಂ ನುಂಗಿದರೆಂಬ ನಾಣ್ಗದೆಯಂತೆ ತನ್ನಳವಱಿಯದೆ ಜಿನಸ್ವಾಮಿಯ ಜಗನ್ಮಾಂಗಲ್ಯನ ರೂಪಂ ಧರಿಯಿಸಿ ತಪದೊಳಾದ ಕ್ಲೇಶಕ್ಕಿರಲಾಱದೆ] ರಾಜ್ಯಕಾಂಕ್ಷೆಯಿಂ ಬಂದನಾಗಲೆವೇೞ್ಕುಮಲ್ಲದೊಡಿಲ್ಲಿಗೇಕೆ ವಂದ [ನಿದನಾರಯ್ದು ನೋಡುವೆ]ನೆಂದು ಸರಾಗಾಸನಮುಮಂ ವಿರಾಗಾಸನಮುಮನಿಕ್ಕ

1 ದ್ರವ್ಯಲಿಂಗಿಯಪ್ಪ ಪುಷ್ಪದಾಡನದೆವೆತ್ತನೆಂದು ಬಲವಳಿದ ಕೊಂಕನಂತೆ ಪೆಂಡತಿಯಲ್ಲಿಗೆ ಪರಿತಪ್ಪವನಂ ವಾರಿಷೇಣಮುನಿವೃಂದಾರಕಂ ಕಂಡು (ಗ)

2 ಸಿಗಿಲ್ಲದೆನಿಸಿ ಪೋದಡೆ ಮೊಗ್ಗಂ ಸಕ್ಕರೆಯು ಮೆಲಹ (ಗ)

ವುದುಂ ಸುಕವಿಜನಮನಃಸದ್ಮಿನೀರಾಜಹಂಸಂ [1] ಬಂದು ವಿರಾಗಾಸನದೊಳಿರ್ಪುದುಂ ಜಿನಸಮಯಗಗನಚಂದ್ರಿಕೆ ವಾರಿಷೇಣಮುನೀಂದ್ರನ ಚರಣದ್ವಯಪಲ್ಲವಂಗಳಂ ಪ್ರಸೂನಾವಳಿಗಳಿನರ್ಚಿಸಿ ಮಹಾಭಕ್ತಿಯಿಂ ಬಂದಿಸಿ ಕೈಗಳಂ ಮುಗಿದು [ನಮ್ರಮಸ್ತಕೆಯಾಗಿರ್ದು] ಮುಂದೆ ಕುಳ್ಳಿರ್ದು ॥ ೧೩೩

ಮುದದಿಂ ನಿಮ್ಮಡಿ ನಿಮ್ಮಯ
ಪದಸರಸಿಜಯುಗಳಮಂ ಮಹೋತ್ಸವದಿಂದಂ ।
ವಿದಿತಂ ಕಂಡೆನಶೇಷಂ
ಸದಮಳರೆನ್ನಿಂದಮಿಂ ಕೃತಾರ್ಥರುಮೊಳರೇ [3] ॥ ೧೩೪

ಎನಗೆ ಬೆಸನಾವುದೆಂದೊಡೆ ನಿಮ್ಮ ಸೊಸೆಯರಯ್ವರುಮಂ ಶೃಂಗಾರಂಗೆಯ್ದು ಬೇಗಮೊಡಗೊಂಡು ಬನ್ನಿಮೆನೆ ಚೇಳಿನೀಮಹಾದೇವಿ ತನ್ನ ಮಣಿಮಾಡಕ್ಕೆ ಪೋಗಿ ಪರಿಚಾರಕಿಯರಂ ಬರಿಸಿ ತಡೆಯದೆ ಶೃಂಗಾರಂಗೆಯ್ದು ಬರ್ಪುದು ತಮ್ಮ ವಲ್ಲಭಂ ಬಂದಿರ್ದನೆಂದು ಪೇಳಿ ಮುಂದಯ್ವರ್ಕುಮಾರಿಯರಲ್ಲಿಗಟ್ಟುವುದುಂ ಅವರ್ಕೇಳ್ದು ತೆಂಕಣೆಲರ ತೀಟದಿಂ ನಯಂಬಡೆದ ಮಾಧವೀಲತೆ ಪರ್ಚಿ ಬಗೆಗೆ ಬಂದ ಶೃಂಗಾರಮಂ ಪೊಟ್ಟಲ್ಲಿಯೊರ್ವಳ್ [4] ॥ ೧೩೫

---

1 ವಾತ್ಸಲ್ಯರತ್ನಾಕರಂ (ಗ)

2 ಇರ್ಪುದುಂ ಚೇಳಿನಿಮಹಾದೇವಿ ಪ್ರಾವಯಾಸದಿಗಂಬರನ ಚರಣಕಮಳಮಂ ನಿರ್ಮಳೋದಕದಿಂ ಕರ್ಚಿ ತಜ್ಜಳಮಂ ತಲೆಯೊಳಾಂತುಕೊಂಡು ಕಮಳಾದಿ ಕುಸುಮದಿಂದರ್ಚಿಸಿ (ಗ)

3 ಮುನಿನಾಥ ನಿಮ್ಮ ಪದಕೋಕನದಮಂ ಮನದರ್ಥಿವೆರಸು ಕಂಡುದಱಿಂ ನೆಟ್ಟನೆ ಸುಖಮನೀವ ಪುಣ್ಯಂ ಜನಿಯಿಸಿತೆನ್ನಿಂ ಕೃತಾರ್ಥರಾರ್ಮಾನವರೊಳ್ (ಗ)

4 ಎನಗೆ ಬೆಸನಾವುದೆನೆ ನಿಮ್ಮಯ್ವರ್ ಸೊಸೆವಿರುಮನೊಡಗೊಂಡು ಬನ್ನಿಮೆನೆ ಮಹಾಪ್ರಸಾದಮಂತೆಗೆಯ್ವೆನೆಂದು ಸೊಸೆವಿರೆಲ್ಲರುಮಂ ಬರವೇಳ್ದಟ್ಟುವುದುಮವರ್ಲಾವಣ್ಯಸಮುದ್ರಂ ಮೇರೆದಪ್ಪಿದಂತೆ ಬಂದು ಸುತ್ತಲುಮಿರೆ (ಗ)

[ಅನುರಾಗವೊದವೆ ಬಟ್ಟಂ
ಸ್ತನದೊಳ್ ಕಟಿಸೂತ್ರಮುಂ ಪದದ್ವಯದೊಳ್ ಪೆಂ ।
ಪಿನ ಹಾರಮುಂ ಕರಂಗಳೊ
ಳನುನಯದಿಂ ಕಟ್ಟಿ ತುರಿಪದಿಂದಂ ಬಂದಳ್ ॥ ೧೭೬

ಲೀಲೆಯಿನೊಳ್ಪುವೆತ್ತ ಪೊಸಚೀನಮನುಟ್ಟು ಬೆಡಂಗುವೆತ್ತ ಪ
ಚ್ಚೊಲೆಯನಿಕ್ಕಿ ಕಣ್ಣೆವರೆ ರೂಪು ವಿಳಾಸಮೆಳಂಬಮಾಗೆ ಭೂ
ಪಾಲಕಚಿತ್ತಮಂ ಪಡೆಯಲೆಂದು ಮಹೋತ್ಸವದಿಂದೆ ಪೂಣ್ಕೆಯಿಂ
ಬಾಲಿಕೆ ಬಂದಳೊರ್ವಳತಿರಾಗದೆ ಕಿನ್ನರಕಾಂತೆಯಂದದಿಂ ॥ ೧೭೭

ಹಾರಮನಿಕ್ಕಿ ಪೊಚ್ಚಪೊಸಮಲ್ಲಿಗೆಯಂ ಮುದದಿಂ ತುರುಂಬಿ ವಿ
ಸ್ತಾರದಿನಿಟ್ಟು ಚಂದನದ ಬಟ್ಟನಳಂಕೃತಿಯಿಂದಮುಟ್ಟು ಧಾ
ತ್ರೀರಮಣೀಯಮಪ್ಪ ಮೃದುವಪ್ಪ ದುಕೂಲಮನರ್ತಿವೆಟ್ಟು ವಾಕ್
ಶ್ರೀರಮಣಂತೆ ಬಂದಳಳಿಗೊರ್ವಳಪೂರ್ವಮನೋನುರಾಗದಿಂ॥೧೭೮

ಸುಳಿಗುರುಳೊಳ್ ಕಣ್ಣೆವರೆ ನೀಳ್ದಲಗಣ್ಕುರಯ್ಯಮಾಗೆ ಕೋ
ಮಳತನು ಭಂಗಿವೆತ್ತೆಸೆಯೆ ಪರ್ವಿದ ಪುರ್ವಿನಸಿಂಗಂಪು ಸೋಲಿಪಂ
ಘಳಿಲನೆ ಮಾಡೆ ಭೂಭುಜನ ಚಿತ್ತಮನೀಗಳ ಸೂರೆಗೊಳ್ವೆನಂ
ಬಳಿಪಿನದೊರ್ವಳರ್ವಶಿಪೊಲೊಪ್ಪಿರೆ ಬಂದಳುದಾತ್ತಲೀಲೆಯಿಂ ॥೧೭೯

ಸುಲಿಪಲ್ ವಿಭ್ರಮಮಂ ಮುಖಂ ಕಮಳಮಂ ಪಾಠೀನಮಂ ಕಣ್ಗಳು
ಜ್ಜ್ವಳಭಾಳಂದುವನೊಪ್ಪುವೆತ್ತ ನಿಟಿಳಂ ಕರ್ಣದ್ವಯಂ ನೆಯ್ದಿಲಂ
ನಳಿತೋಳ್ ಸಲ್ಲತೆಯಂದಮಂ ನಡೆಯೆ ಪೋಲ್ತೋರಂತೆ ಚೆಲ್ವಾಗೆ ಕೋ
ಮಳೆಯೊರ್ವಳ್ ನಡೆತಂದಳಂದು ಮದನೇಭೇಂದ್ರಂಬೊಲಾಶ್ಚರ್ಯದಿಂ॥

ಉಡಿಯದೆ ಮಾಣದೀಮುಡಿಯ ಭಾರದೊಳೀಕೊರಲಾದ ಪಾಂಗಿನಿಂ
ದುಡಿಯದೆ ಮಾಣದೀಕುಚದ ಭಾರದಿನೊಳ್ನಡುವಕ್ಕಟಕ್ಕಟ
ನ್ನುಡಿಯದೆ ಮಾಣದೀಕಟಿಯ ಭಾರದಿನೀಕಣಕಾಲ್ಗಳೆಂದು ನೇ
ವರ್ಡಿಪಲಗೊರ್ವಳದ್ಭುತಮನೊರ್ಮೆಯೆ ಪುಟ್ಟಿಸಿ ಬಂದಳರ್ತಿಯಿಂ ॥

ಮದನನ ಮಂತ್ರದೇವತೆಯೊ ಕಾಮನ ನಚ್ಚುವ ಪುಷ್ಪಬಾಣಮೋ
ಮದನನ ಗಂಧಸಿಂಧುರಮೊ ಮನ್ಮಥರಾಜನ ರಾಜ್ಯಲಕ್ಷ್ಮಿಯೋ
ವಿದಿತಮಿವಳ್ಗಗತ್ತ್ರಯಮಿದೆಂಬಭಿಶಂಕೆಯನುಂಟುಮಾಡಿ ಸಂ
ಪದದಿನಪೂರ್ವರೂಪೆ ನಡೆತಂದಳನಂಗನ ಶಸ್ತ್ರಗಂದದಿಂ ॥ ೧೯೨

ಜಿನನೊರ್ವಂ ಪೆಱಗಾಗೆ ಮತ್ತುಱದರಂ ಜೀಯೆಂಬಿನಂ ಕೊಂದು ಕೂ
ಗೆನೆ ತಾನೆಂದು ಮಹಾಪ್ರತಾಪದೊದವಿಂ ಮುಯ್ವೇರ್ಚಿ ವೀರಕ್ಕೆ ತೂ
ಟ್ಟನೆ ಮುಯ್ಯಾಂತು ಮನೋಜರಾಜನದಟಿಂದೆತ್ತಿರ್ದ ಪಾಠೀನಕೇ
ತನಮಂ ಪೋಲ್ತುದು ಕಾಂತೆಯೊರ್ವಳ ಕಟಾಕ್ಷದ್ವಂದ್ವವಿಕ್ಷೇಪಣಂ ॥

ಸುಳಿಗುರುಳ ಪಜ್ಜೆ ತುಂಬಿಯ
ಬಳಗದವೊಲ್ ಶೋಭೆವೆತ್ತು ರಂಜಿಸೆ ಮೊಲೆಗಳ್ ।
ಕಳಶದವೊಲೆಸೆಯೆ ಬಂದಳ್
ವಿಳಾಸದಿಂದೊರ್ವಳಂಗಜಾತನ ಸತಿವೊಲ್ ॥ ೧೯೪

ಸರಸಿರುಹವದನೆ ಮದಸಿಂ
ಧುರಗಾಮಿನಿ ನೀಲಕುಟಿಲಕುಂತಳೆಯೊರ್ವಳ್ ।
ತರುಣಿ ಮನಸಿಜನ ನಚ್ಚಿನ
ಸರಲೆನಿಸಿ ವಿಳಾಸಮಮರೆ ನಯದಿಂ ಬಂದಳ್ ॥ ೧೯೫

ಅಲುಗೆ ಕುರುಳ್ ತೊಡವು ಪಳಂ
ಚಲೆಯೆ ತಳತ್ತಳಿಸಿ ಪೊಳೆಯೆ ತನುರುಚಿಯೊರ್ವಳ್ ।
ಕಳಹಂಸಗಮನೆ ಕಾಮನ
ತೊಳಗುವ ಕೂರಂಬಿನಂತೆ ಪದಪಿಂ ಬಂದಳ್ ॥ ೧೯೬

ತರಳಾಕ್ಷಿ ಪಟುಫಲಾಧರೆ
ಸುರುಚಿರನಾನಾವಿಭೂಷಣಾನ್ವಿತೆಯೊರ್ವಳ್ ।
ಸುರವನಿತೆಯೆ ವಸುಮತಿಗವ
ತರಿಸಿದಳಂಬಂತೆ ವಿಭ್ರಮದಿಂದಂ ಬಂದಳ್ ॥ ೧೯೭

ತರುಣಪರಿಣತಾಕ್ಷಿ ಬಿಂಕಂ
ಬರಸೊರ್ವಳ್ ನೀಡ ಗಳಗೆಗೋಂಡಿಯುಂ ವಿ |
ಸ್ತರದಿಂದಿಡುತುಂ ಬಂದಳ್
ನೆರೆವಿಯ ನೋಟಕರ ಮನಮನೆಲ್ಲಾ ಱಿಸುತುಂ ॥ ೧೮೮

ಸಲ್ಲಲಿತಗಾತ್ರಿಯೊರ್ವಳ್
ಮಲ್ಲಿಗೆಯುಂ ಮುಡಿದು ಮುತ್ತಿನೈಸರಮಂ ತ |
ಳ್ವಲ್ಲದೆ ಕಟ್ಟಿ ಮನೋಜನ
ಬಿಲ್ಲಿಂ ಬಿರ್ದುಕಿದ ಶರಾಳಿಯಂತಿರೆ ಬಂದಳ್ ॥ ೧೮೯

ತರಣಿಯುಮಂ ಚಂದ್ರನುಮಂ
ಸಿರಿಕಂಡದ ಬೊಟ್ಟುಮೆಸೆವ ಕುಂಕುಮದುಮಂ ಪೋ |
ಲ್ತಿರೆ ಮವಾಸೆವೊಲೊರ್ವಳ್
ಸರೋಜಮುಖಿ ಬಂದಳೆಂದು ವಿಭ್ರಮದಿಂದಂ ॥ ೧೯೦

ನಸುಗೆಂಪುವಡೆದ ವಶನದ
ಮಿಸುಪಧರದ ಕೆಂಪುಮಿನಸುಧಾಕರರಂ ಪೋ |
ಲ್ತೆಸದಿರೆ ಪುಣ್ಣಿಮೆಯಂತಿರೆ
ಶಶಿಮುಖಿ ನಡೆತಂದಳೊರ್ವಳತಿಶಯದಿಂದಂ ॥ ೧೯೧

ಅಂತು ಶೃಂಗಾರರಸಂಗಳ್ ಮೇರೆವಪ್ಪಿದಂತೆ ಲಾವಣ್ಯಯುಕ್ತೆಯ
ರಪ್ಪ ಯುವ್ವನೆಯರುಸೊಸೆದಿರುಂ ಚೇಳಿನೀಮಹಾದೇವಿಯಲ್ಲಿಗೆ ವಪ್ಪುದುಂ
ಅವರ್ಬೆರಸು ಸಮ್ಯಕ್ತ್ವಚೂಡಾಮಣಿಯಲ್ಲಿಗೆ ಚೇಳಿನೀಮಹಾದೇವಿ
ಬಂದು ಪೊಡೆಮಟ್ಟು ಪುರ್ದುಂ ॥ ೧೯೨

ಬದವಿದ ಬಿರುದಿಂ ಪೆಱರ
ಗ್ಗದ ಗಂಡರ ಬೆಂಡುಮಾಡಿ ಗೆಲ್ಲಂ ಗೊಂಡಾ |
ಮದನನ ವಿಜಯಗಜೇಂದ್ರನ
ರದನಿಗಳಂ ಪೋಲ್ತುವೊರ್ವಳ ಸ್ತನಯುಗಳಂ ॥ ೧೯೩

ಅಪಹರಿಸೆ ಪೆಱಂ ಬಿರುದಂ
ಕಿಡಿಸುವೆನೆಂಬೊಂದು ಪ್ರೊಣ್ಕೆಯಿಂದಂ ಕಾಮಂ ।
ಪಿಡಿದಿರ್ದಡ್ಡಣಮೆನಿಸಿದು
ದೊಡಂಬಡಿಂದೊರ್ವೆ ವಾರಿಜಾನನೆಯ ಕುಚಂ ॥ ೧೯೪

ಮಸಗಿ ಕಡುಗೋಪದಿಂದಂ
ಸಸಿಯಂ ಪಿಡಿಯಲ್ಕೆ ರಾಹು ಸಡೆಯದೆ ನೆಱೆ ಸಂ ।
ಕಿಸದೆಯ್ತಂದಪುದೆಂಬವೊ
ಲೆಸೆದಿರ್ದುವು ಮಿಸುಪ ಭಾಳಮುಂ ಸೋರ್ಮುಡಿಯುಂ ॥ ೧೯೫

ಮುನಿದು ಮನೋಜಂ ಲೋಕದ
ಜನಮಂ ತನಗೆಱಗಿಸಲ್ಕೆ ಕೂರ್ಪಿಂದಂ ಭೋಂ ।
ಕನೆ ತೊಟ್ಟು ಪೊಳವ ಕವಲಂ
ಬೆನೆ ಪೋಲ್ತುವು ಕಾಂತೆಯೊರ್ವಳಕ್ಷಿದ್ವಂದ್ವಂ ॥ ೧೯೬

ಲಲಿತತೆವೆತ್ತು ಕೊಂಕಿ ಪರಿದೊಪ್ಪುದೊಳೊಂದಿರೆ ಪುರ್ವು ಚಾಪಮಂ
ಸುಲಲಿತಮಾಗಿ ಸೀಳ್ದು ತುಱುಗಿರ್ದ ಮಿಗಳ್ ತಮಮಂ ಬೆಳರ್ಪ ಕ
ಣ್ಮಲರ್ಗಣೆಯಂದಮಂ ನೆಱೆಯೆ ಪೋಲ್ತಿರೆ ಕಾಮುಕರೊಳ್ ಪಳಂ
ಚಲೆವ ಮನೋಜನೇಱಿಸಿದ ಬಿಲ್ಲವೊಲಿರ್ದುದು ವಕ್ತ್ರಮೊರ್ವಳಾ ॥

ಅರುಣತೆಯಿಂದಮೊಪ್ಪುವಧರಚ್ಛವಿಯುಂ ರವಿಯೆಂದು ವಕ್ತ್ರಪಂ
ಕರುಹಮಮರ್ಕೆಯಿಂದಲರೆ ರಾಗಿಸಿ ಪೋಪುದು ರಾತ್ರಿಯೆಂದು ಬಿ
ಬ್ಬಿರಿಬಿರಿದೊಂದಿನಿಂದಮೊಡಮಿಂ ಪೊಣರ್ವಕ್ಕಿಗಳೆಂಬ ದೇಸಿಯಿಂ
ಕರಮಮರ್ದೊಪ್ಪುಗುಂ ಸಿಬಿಡವೃತ್ತಕುಚಂ ವರಕಾಂತೆಯೊರ್ವಳಾ ॥

ಮತ್ತೊರ್ವಳ್ ॥ ೧೯೯

ಇವಳ ಲಲಾಟಮೆಂಬ ಸಸಿಯುಂ ನೆಱೆ ನೋಡುವೆವೆಂದೊಡೀ ಮನೋ
ಭವನಮುಗಡ್ಡಮಾಗಿ ನಿಡುಪುರ್ವುಗಳೆಂಬ ಪೊದಳ್ದ ಚಾಪಮಂ

ಸುವಿಟಜನೋಪದಾನಮೆನುದಗ್ರದಿನಿಕ್ಕಿದನೆಂದು ನೋವಿನೊಳ್
ಕಿವಿಗೆ ಮನೋಜನಂ ಪರಿದು ಸಾಱುವವೊಲ್ನಿಡುಗಣ್ಗಳುಪ್ಪ್ವಗುಂ ॥

ಗಾಂಪಿನೊಳನ್ಯಪುಷ್ಪದೊಳು ಮೋಳಿಸಿ ನೀಳ್ದದಿದೇಕೆ ಕಂಪಿನೊಳ್
ಪೊಂಪುಱಿವೋಗುತಿರ್ದಮಳವಕ್ತ್ರಸರೋಜಮೆ ಸಾಲ್ಗುಮೆಂದು ತ
ಣ್ಗಂಪನನುಣಲ್ಕೆ ಬಂದೆಱಗಿ ಕಂಡಿದಿರೊಳ್ ಮಱಿದುಂಬಿ ಮೂಗಿನಿಂ
ಸಂಪಗೆಯೆಂದು ಪೊರ್ದದವೊಲಿರ್ದುವು ತುಂಬಿಗಳಂತೆ ಕುಂತಳಂ ॥ ೨೦೧

ಕುವಲಯಮಿತ್ರನೆಂದು ನೊಸಲಂ ಪಿಡಿಯಲ್ಗಡ ಬಂದು ಚಿತ್ತಸಂ
ಭವನಿಡಲಿರ್ದನೆಂದಸಿಯ ಬಾಸೆಯನಿಟ್ಟಸಿಯಿಂದೆ ಮೆಯ್ಗಳುಂ
ಜವಜವನಾಗಿ ಪೋಗಲೆಡೆಯಿಲ್ಲದೆ ಶಂಕಿಸಿ ರಾಹು ತೆಕ್ಕೆಗೊಂ
ಡವೊಲಳವಟ್ಟು ರಂಜಿಪುದು ಕೇಳ್ ಮುಡಿ ಪಂಕರುಹಾಕ್ಷಿಯೊರ್ವಳಾ ॥

ಪೆಱೆಯುಂಬಂ ಕವಲಂಬನೆಯ್ದೆ ಸರಲಂ ತೀವ್ರಾಸಿಯುಂ ಚಕ್ರಮಂ
ನೆಱೆ ಭಾಳಂ ದಿಗು ದಂತಪಂಕ್ತಿ ನಳಿತೋಳುದ್ಯತ್ಕುಚಂ ಪೋಲೆ ತ
ಳ್ತಱಿಯಲ್ಕಾಮುಕರೊಳ್ ಮನೋಭವನೃಪಂ ಮೇಲೆತ್ತಿದಂ ನಾಡೆ ಪೊ
ಚ್ಚಱು ಬೇಡೆಂಬವೊಲೊರ್ವಕಾಮಿನಿ ಲಸಚ್ಛೃಂಗಾರದಿಂದೊಪ್ಪಿದಳ್ ॥

ಮತ್ತೊರ್ವಳ್ ॥ ೨೦೪

ಪಳುಕಿನ ರಂಗದೊಳ್ ವನಿತೆ ತನ್ನ ಲಲಾಟಮುಮಂ ಸ್ವಕೀಯಕುಂ
ಡಲಮುಮನೆಯ್ದೆ ಕಂಡು ಬೆರಲಂ ಮಿಡಿದಾಗಸದಿಂದಮಿಂದುಮಂ
ಡಲಮವನೀತಳಕ್ಕಲಸಿ ಬಿೞ್ದುದೊ ನೋಡ ಮರಾಳಿಯಿಂದು ಸಂ
ಚಳಿಸದೆ ಮುತ್ತಿಯಿರ್ದಪುವೆನುತ್ತೆ ಮಹೋತ್ಸವದಿಂದೆ ನೋಡಿದಳ್ ॥

ಅಲ್ಲಿ ಮತ್ತೊರ್ವಳ್ ॥ ೨೦೫

ನಗೆಗಣ್ಣ ನೀಳಸಹಸ್ರಪತ್ರದೆಸಳಂ ನಾಸಾಪುಟಂ ಮಿಕ್ಕ ಸಂ
ಪಗೆಯುಂ ಪೊಕ್ಕುಳು ನಂದಿನಟ್ಟದರಲಂ ಚೆಲ್ವಿಂದುಗುಕರ್ಗಡೆ ಕೇ
ದಗೆಯುಂ ಮೊಲ್ಲೆಯ ಭಂಗಿವೆತ್ತ ಮುಗುಳಂ ದಂತಾಳಿಗಳ್ಪೋಲೆ ಕೈ
ಮಿಗೆ ಪುಷ್ಪಾಸ್ತ್ರನ ಪಂಚಬಾಣಮಿವಳಂಬಾಶಂಕೆಯಂ ಮಾಡಿದಳ್ ॥

ಮತ್ತೊರ್ವಳ್ ॥ ೨೦೮

ಬಿಂಬಫಲಾಧರಂ ಪವಳಮಂ ಕ್ರಮದಿಂ ತೆರೆಯಂ ವಳಿತ್ರಯಂ
ಮೀಂಬೊಣರಂ ವಿಲೋಲನಯನಂ ಪಲು ಮುತ್ತುಗಳಂ ಕುಚಂಗಳೊ
ಪ್ಪಂಬಡೆದಿರ್ದ ದೀಪಮನಸುಂಗೊಳ್ ಪ್ರೋಲ್ತಿರೆ ಕಾಮುಕರ್ಗೆ ಹೇ
ಮಾಂಬುಜವಕ್ತ್ರೆ ಕಾಮರಸವಾರಿಧಿಯಂದದಿನೊಪ್ಪಿ ತೋಱಿದಳ್॥ ೨೦೯

ಸ್ತನಯುಗಳಂಗಳಂ ತುರಿಪದಿಂ ಪೊಳೆವಗ್ಗದ ಭಿತ್ತಿಯಲ್ಲಿ ಭೋಂ
ಕನೆ ಕೊಳ ಕಂಡು ಪೂರ್ಣಘಟಮೆಂದೊಳಗಂ ನೆಱೆ ನೋಡಲೆಂದು ಮೆ
ಲ್ಲನೆ ತೆಱೆಯಲ್ಕೆ ತತ್ಕುಚದ ಚೂಚುಕಮಂ ಗಡ ಮುಚ್ಚಳೆಂದು ನ
ಟ್ಟನೆ ಪಿಡಿದೊರ್ವ ಮುಗ್ಧೆ ಪಿರಿದುಂ ನಗೆಯಂ ಸಭೆಗೆಯ್ದೆ ಮಾಡಿದಳ್ ॥

ಮತ್ತೊರ್ವಳ್ ॥ ೨೧೧

ಇನಿಯನನಟ್ಟಱಿಂ ಬಿಡದೆ ನೋಡುತುಮಿರ್ದ ಲತಾಂಗಿ ತನ್ನ ರೂ
ಪನೆ ತಡವಿಲ್ಲದಾತ್ಮಪತಿ ನೆಮ್ಮಿದ ಕಂಬದೊಳಂದು ಕಂಡು ತೊ
ಟ್ಟನೆ ಮುನಿಸಾಗಿ ಹುಃ ಸವತಿಯಂ ನೆಱೆ ತೋಱಿಪನೆಂದು ತನ್ನ ಕಾ
ಮಿನಿಯ ವಿದಗ್ಧವೃತ್ತಿಗಳನಕ್ಕಟ ನಾಳಯು ತಾನೆ ಕಾಣನೇ ॥ ೨೧೨

ಪರಿವ ಪೊಡಪುಗೆಟ್ಟು ರವಿ ಮುಂದಿರೆ ಲಜ್ಜಿಸಿ ಕಣ್ಣ ಬೆಳ್ಪುಗಳ್
ಕರವೊಳಗುರ್ಚಿ ಬಂದು ಕೊರಲೊಳ್ ಪೊಱಮಟ್ಟು ಕುಚಾಚಳಾಗ್ರದೊಳ್
ಪರಿದಪುವೆಂಬ ಶಂಕೆಯನೆ ಪುಟ್ಟಿಸುತಿರ್ದುದು ನೋಟಕರ್ಗೆ ಪಂ
ಕರುಹದಳಾಯತಾಕ್ಷಿಯ ಮನೋಹರಮೌಕ್ತಿಕಹಾರಮೌಕ್ತಿಕಂ॥ ೨೧೩

ಪೊಳೆವುಂಗುಟದೊಳ್ ದಶನಾ
ವಳಿಯಂ ಕಂಡೊರ್ವಳಂಜಿ ಮುತ್ತಿನ ಹಾರಂ ।
ನೆಲಕೆ ಪಱಿದೊಕ್ಕುದೆಂದು
ಮ್ಮಳದಿಂ ತಡವರಿಸಿ ನೋಡುತಿರ್ದಳ್ ಕೊರಲಂ ॥ ೨೧೪

ಇನಿಯನ ಪೆಱಗಣ ಕೇರಿನೊ
ೞನಿಬರ ರೂಪುಗಳನೊರ್ವ ಕಾಮಿನಿ ಕಂಡೊ ।
ಯ್ಯನೆ ನಕ್ಕು ನಲ್ಲನೆನಗೀ
ಯನಿಬರುಮಂ ಮೋಲುದೋಱ ಕಾಡಿಪನೞದೆಂ ॥ ೧೧೫

ತೊಳಗುವ ಕೆಂದಳದೆಸೆವಂ
ಗುಳಿಯೊಳ್ ಶೋಭಿಸುವ ನೀಲದುಂಗುರಮೊರ್ವ ।
ಳ್ಗಳವಟ್ಟುದಶೋಕೆಯ ಕೆಂ
ದಳಿರೊಳ್ ಪತ್ತಿರ್ದ ಕಱುಪು ತುಂಬಿಯ ತೆಱದಿಂ ॥ ೧೧೬

ಕೊಸಗಿನ ರಜಮಂ ಪೀರ್ದ
ಱ್ಕಸಲಾಱದೆ ಮಗುೞೆ ತುಂಬಿಗಳ್ ಕಾಱುವುವೆಂ ।
ಬೆಸಕದಿನೊರ್ವಳ ಕುರುಳೊ
ಳ್ಪುಶೋಭೆಯಿಂ ಚೆನ್ನ ಪೂಗಳೇನೊಪ್ಪಿದುವೋ ॥ ೧೧೭

ಸಲೆ ಸೋಲ್ತು ಪಾಱುಬಾವಿಯ
ಜಲಮಂ ತೆಗೆಯಲ್ಕೆ ಮಕರಕೇತನನಿಂದಂ ।
ಕುರಿಸಿಕ್ಕಿದ ನೀಲದ ಬ
ಟ್ಟಲನನುಕರಿಸಿತ್ತು ಕಾಂತೆಯೊರ್ವಳ ನಯನಂ ॥ ೧೧೮

ಘಟಕುಚಯುಗೆ ವಲ್ಲಭನುಂ
ಗುಟದೊಳ್ ತನ್ನಕ್ಷಿಯುಗಳಮಂ ಕಂಡೊರ್ಬಳ್ ।
ಜಟಮೀನ್ಗಳ್ಲಿಗೇಕ
ಕ್ಕಟ ಱಿಕ್ಕಟ ಬಂದುವೆಂದು ನೋಡುತ್ತಿರ್ದಳ್ ॥ ೧೧೯

ಅಂತೊಪ್ಪುವೆತ್ತಿರ್ಪುದುಂ ವಾತ್ಸಲ್ಯರತ್ನಾಕರಂ ಚೇಳನೀಮಹಾದೇವಿಗೆ ಪುಷ್ಪದಾಡನ ಭಾರ್ಯೆಯಪ್ಪ ಸುದಂತಿಯುಮಂ ಬರಿಸುವುದೆನೆ ಪರಿಚಾರಕಿಯರನಟ್ಟುವುದುಂ ಸುದಂತಿ ತಡೆಯದೆ ಬಂದು ಕುಮಾರಿಯರೊಡನಿರ್ಪುದುಂ [1] ॥ ೧೨೦

1 ಅಂತು ಕಾಮದೇವನ ಸಾಮ್ರಾಜ್ಯವೆಲ್ಲಮಂ ವಿಧಾತ್ರಂ ಕವರ್ತೆಗೊಂಡು ಬಂದನೆಂಬಂತೆ ಇರ್ಪುದುಂ ಪುಷ್ಪದಾಡನ ಹೆಂಡತಿಯಪ್ಪ ಸುದತಿಯುಂ ಬರಿಸುವುದು ಮಾಕೆಯುಂ ಬಂದವರ ಕೆಲನೊಳ್ ಕುಳ್ಳಿರ್ಪುದುಂ ॥

ಕರಿಣೀವೃಂದದೊಳಾಡು ಕರ್ಪೂರತರುವ್ರಾತಂಗಳೊಳ್ಮತ್ತಿ ಪಂ
ಕರುಹಾನೀಕದೊಳಕ್ಕೆ ಗೋನಿವಹದೊಳ್ಕೆಟ್ಟಕ್ಕೆ ಕಂಠೀರವೋ
ತ್ಕರದೊಳ್ ಕೋಡಗ ಮಾಧವೀಲತೆಯೊಳಂ ಕರ್ಬಳ್ಳಿ ಚೆಂಬೊಂಗಳೊ
ಳ್ನರೆದಿರ್ಪಂತಿರೆ ಕರ್ಬುನಂ ಸಕಲಭೂವಾರೀಶರೊಳ್ಗೇಲಿಗಳ್ ॥ ೨೨೧

ಇರ್ಪಂತಿರ್ದು ॥ ೨೨೨

ಎವೆಯಿಲ್ಲದ ಕೊಟೆಗಣ್ ವಿ
ಭ್ರಮಮಿಲ್ಲದ ರೂಪು ಪತ್ತಿಪತ್ತಿದ ಮೊಲೆ ಸೋ ।
ಲಮನೀಯದಿರವು ಕರ್ಪಿಂ
ಸಮಸಂದೊಡಲಲರ್ದ ಮೊಗಡಂಗಿದ ಗಲ್ಲಂ ॥ ೨೨೩

ತೆರಳ್ದ ಮೊಗಂ ಕರ್ಗಿದ ಬಾಯ್
ಪುರುಳಿಲ್ಲದ ಮಿಳ್ಳಗಾಲ್ಬೆಡಂಗಿಲ್ಲದ ಮೈ ।
ಕೆರಕಿಂ ತುಱಿಯಿಂ ತೀವಿದ
ಕರಚರಣಂ ಬೋೞಿವಮಂಡೆ ಕುಗ್ಗಿದ ದೇಹಂ ॥ ೨೨೪

ಮತ್ತಂ ಮೂಳಗಿವಿಯುಂ ಪೊಱವಾಯ್ದು [ಪಲ್ಲುಂ ಮೊರದಂತಪ್ಪ ಕಾಲುಗುರುಂ ಬಳಗಟ್ದಿ] ಬಸಿಱುಂ ಬರಳಂತಪ್ಪ ಕಾಲ್ಗಳುಂ ಬಾಗಿದ ಬೆನ್ನುಂ [ಕೊಟೆಗಣ್ಣುಂ] ಬಿಟ್ಟ ಬಾಯುಂ ಕೂಡಿದ ಪುರ್ಬುಂ ತೊಟ್ಟ ಕಾಸಿಯುಂಬೆರಸು [ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ] ವಾರಿಷೇಣಮುನಿ ಪುಷ್ಪದಾಡನ ಮೊಗಮಂ ನೋಡಿ [ನಗುತ್ತುಮಿಂ ತೆಂದಂ ॥ ೨೨೫

ನರಲೋಕದಲ್ಪಸೌಖ್ಯಂ
ಸ್ಥಿರಮಲ್ಲದು ವೀರನಾಥಪದಸೇವನೆಯಿಂ ।
ಸ್ಥಿರಮಪ್ಪ ಮೋಕ್ಷಸೌಖ್ಯಂ
ದೊರೆಕೊಳ್ಗುಂದರ್ತಿವಟ್ಟು ತಪದೊಳ್ ನಿನ್ನಂ ॥ ೨೨೬

ನಿಲಿಸಿ ಪನ್ನೆರಡುವರುಷಂಬರಮನ್ನಾತ್ಮಕಾರ್ಯಮಂ ಬಗೆಯದೆ ಲೋಕೋತ್ತರಮಪ್ಪ ಜಿನೋಕ್ತಿಯನಿನ್ನೆವರಂ ಮಾಣದೆ ಪೇೞ್ದೊಡೆ

ನಾಯ್ಗೆ ನೆಱನೆಯ್ಯಿಕ್ಕಿದೆಂಬಂತೆನ್ನ ಪೇೞ್ವ ಧರ್ಮಶ್ರವಣಮನೊಲ್ಲದೆ
ಸುದಂತಿಯನೆ ಮನದೊಳ್ನೆನೆಯುತಿರ್ಪಯಿಂತು] ॥ ೨೭೮

ರತಿಯುಮಂ ವಿಭ್ರಮದೊಳ್ಸುರೇಂದ್ರಸತಿಯುಮಂ ಲಾವಣ್ಯದೊಳ್ವ್ರೀಡೆ ಭಾ
ರತಿಯುಮಂ ಹಾವದೊಳೇವಳಂದುಱದೆ ಸಚ್ಛೃಂಗಾರದಿಂ ರೂಪಿನು
ನ್ನತಿಯಿಂದಿರ್ಪ ಮಹೀಶ್ವರಾತ್ಮಜೆಯರಂ ಕೈಕೊಳ್ಳದಾಂ ಬಿಟ್ಟು ನಿ
ರ್ವೃತಿಯುಂ ಸಾಧಿಸಲೆಂದು ಪೋಗಿ ತಪಮಂ ಕೈಕೊಂಡೆನುತ್ಸಾಹದಿಂ ॥

ಅಣಿಲ ಪಡಪು ಬಸುರಿಯ ಪಣ್ಣೆಂಬಂತೆ ಸುದಂತಿಯನೇಗೆಯ್ದುಂ ಬಿಡಲಾಱದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕಱಿಗುದಿಪ್ಪೈ; ಉಂಡಱಿಯದಗುರ್ಪಂಡುದೆಲ್ಲಮಚ್ಚರಿಯೆಂಬಂತೆ, ಕಾಲೂರ್ಗೆ ಮೆಣಸು ಬೆಲ್ಲಮೆಂಬಂತೆ, ಬೇಡವೆಳ್ಳೆಗೆ ಪಂದಿ ಮದ್ದಾನೆಯೆಂಬಂತೆ, ನುಗ್ಗಿಯ ಬನಕ್ಕೆ ಗುಬ್ಬಿ ಕೋಗಿಲೆಯೆಂಬಂತೆ, [ಅಗಸೆಯ ಮರಕ್ಕೆ ತೊನಸೆ ಮಱಿದುಂಬಿಯೆಂಬಂತೆ] ಸಂಸಾರದಲ್ಪಸುಖಕ್ಕಮುಯ್ಯಾಂತು ಶಾಶ್ವತಸುಖಮನುದಾಸೀನಂಮಾಡಿ ಜಿನರೂಪಿಂಗೆ ಬೇಸಱುವೆಯಿನ್ನು ನಿನ್ನಿಂ ಬಿಟ್ಟು ಗಾವಿಲರುಂ ಕುಮತಿಗಳುಂ ಲೋಕದೊಳಿಲ್ಲೆಂದು ಮೂದಲಿಸಿ ತೋಱಿ ಹಾಸ್ಯಂಮಾಡಿ ನಕ್ಕು ಸುದಂತಿಯ ಮೊಗಮಂ ನೋಡಿ ವಾತ್ಸಲ್ಯರತ್ನಾಕರನಿಂತೆಂದಂ ॥ ೨೭೯

ಪರಮಜಿನೇಶ್ವರರೂಪಂ
ಧರಿಯಿಸಿ ಮತ್ತಳಪಿ ಬಂದು ತನ್ನಂಗನೆಯೊಳ್ ।
ನೆರೆಯಲ್ಕಱುಗುವನರನುಂ
ಪುರುಷನೆ ಪೇೞಿಬ್ಬೆ ಬೇಗಮೆಂಬುದುಮಾಗಳ್ ॥ ೨೮೦
ಸುದಂತಿಯಿಂತೆಂದಳ್ [1] ॥ ೨೮೧

---

1 ಶಾಶ್ವತ ಸುಖವಿಾವ ಜಿನರೂಪಿಂಗೆ ಅಲಸುವ ನಿನ್ನಂತಪ್ಪ ನಿರ್ಬುದ್ಧಿಗಳುಂ ನಿರ್ಭಾಗ್ಯರುಂ ಲೋಕದೊಳಿಲ್ಲೆಂದು ಚೇಳಿನಿಮಹಾದೇವಿಯ ಸುದತಿಯುಂ ತನ್ನರಸಿಯರ ಮೊಗವಂ ನೋಡಿ ತೋಱಿದ ವಸ್ತುಗಳಂ ಮಹಾಪುರುಷರಪ್ಪರ್ಗೆ ಮತ್ತೆ ಕೈಕೊಳಲಪ್ಪುದೆ ನೀವೆ ವಿಚಾರಿಸಿ ಪೇಳಿಮೆನೆ ಚೇಳಿನಿಮಹಾದೇವಿಯುಂ ಸುದತಿಯುಂ ವಲ್ಲಭೆಯರುಮಿಂತೆಂದರ್ (ಗ)

ನೆಟ್ಟನೆ ಕಾಱಿದ ಕೂೞಿಂ
ಮುಟ್ಟಿದು ನಾಯುಂ ಧರಾತಳಾಗ್ರದೊಳನೆ ಮುಂ ।
ಬಿಟ್ಟು ಬೞಿಕ್ಕಱಪವನಂ
ನಿಟ್ಟಿಸುವೊಡೆ ಪಂದೆ ಕಷ್ಟನಾನಾಯಿಂದಂ ॥ ೨೩೨

ಎಂಬುದುಂ ಸುದಂತಿಯು ಪಾತಿಂಗೆ ಪುಷ್ಪದಾಸಂ ಲಜ್ಜಿಸಿ ತನ್ನೊಳಂತೆಂದಂ ॥ ೨೩೩

ಈದಿವ್ಯಸ್ತ್ರೀಯರನಿನಿ
ಸಾದರಿಸದೆ ತೊಱೆದು ವಾರಿಷೇಣಕುಮಾರಂ ।
ಪೋದನನೆ ನೋಡೆ ಪೊಡೆನಗೇ
ನಾದುದು ಕೇಳನ್ನ ಪೆಂಡಿರುನ್ನತಿಪಿರಿದೇ ॥ ೨೩೪

ಪರತಪಮಂ ಕೈಕೊಳಲೊಡ
ಮರಿದೆನಿಸುವ ಜಂಘಚಾರಣತ್ವಂ ಕೇಳೇ ।
ವರಮುನಿಗಾಯ್ತನೆ ತಪದಿಂ
ಪಿರಿದಪ್ಪೈಶ್ವರ್ಯಮುಪ್ಪುದಾವುದು ಗಹನಂ[1] ॥ ೨೩೫

[ಎಂದು ಮನದೊಳ ವಾರಿಷೇಣಮುನಿಕುಂಜರನ ಮುಂಪೇಳ್ದ ಧರ್ಮಶ್ರವಣಮನನಿತುಮಂ ನಂಬಿ ಸಂಸೃತಿಲತಾಂಕುರಮಂ ಕಿೞ್ತೀಡಾಡಲುಂ ಮೋಹಮಹೀರುಹಮಂ ಕಡಿಯಲುಂ ಕರ್ಮೇಂಧನಂಗಳಂ ಸುಡಲುಂ ಜಿನಚರಣಮಂ ಬಲ್ವಿಡಿಯಲುಂ ಸನ್ಮಾರ್ಗಮಂ ಪೊರ್ದಲುಂ ಮನಂದಂದು ಜಿನಸಮಯವಾರ್ಧಿವರ್ಧನಸುಧಾಕರನ ಪಾದಕ್ಕೆಱಗಿ ಪೊಡೆಮಟ್ಟು ಪುನರ್ದೀಕ್ಷೆಯುಂ ಪ್ರಸಾದಂಗೆಯ್ವುದೆಂಬುದುಮಾತನುಂ ಗುರುಗಳಲ್ಲಿಗೊಡಗೊಂಡು ಬಂದು ದೀಕ್ಷೆಯಂ ಕುಡಿಸುವುದುಂ ಭಾವ ತಪಸ್ವಿಯಾಗಿ ತನ್ನೊಳತೆಂದಂ ॥ ೨೩೬

ಸಂಸಾರದಲ್ಪಸೌಖ್ಯವಿ
ದಂ ಶಾಶ್ವತವೆಂದು ಜೈನಧರ್ಮಮನೆಂತುಂ ।

[1] ದೊರಕೊಳ್ಳದ ವಸ್ತುವೊಳವೆ ಮೂಱುಂಜಗದೊಳ್ (ಗ)

ನಾಂ ಸಲೆ ಕೈಕೊಳ್ಳದೆ ಕೆ
ಟ್ಟಂ ಸತಿಯಂ ನೆನೆದಶುದ್ಧಭಾವನೆಯಿಂದಂ ॥ ೨೩೭
ಶ್ರೀವಾರಿಷೇಣಮುನಿಯಿಂ
ದೀವರದನ ಧರ್ಮಮೆನಗೆ ದೊರೆಕೊಂಡುದು ಸ।
ದ್ಭಾವದಿನೆನಗದಱಿಂದಂ
ಭಾವಿಸುವೊಡೆ ವಾರಿಷೇಣಮುನಿಪನೆ ದೇವಂ ॥ ೨೩೮

ಎಂದು ತನ್ನ ಮುನ್ನಿನ ನಿರ್ಬುದ್ಧಿಯುಮಂ ಮಿಥ್ಯಾತ್ವದ ತೀವ್ರತೆಯುಮಂ ವಾತ್ಸಲ್ಯರತ್ನಾಕರನ ಮಾಡಿದುಪಕಾರಮುಮಂ ನೆನೆದು ವಿಸ್ಮಯಂಬಟ್ಟು ಶುದ್ಧಹೃದಯನುಮಾಗಿ ಸಕಲಾಗಮಂಗಳಂ ನೋಡಿ ತಪದೊಳುತ್ತರೋತ್ತರಂ ನೆಗೞ್ದು ಸಮಾಧಿವಿಧಿಯಿಂ ಮುಡಿಪಿ ದೇವಗತಿವಡೆದನಿತ್ತಲ್ ವಾರಿಷೇಣಮುನೀಂದ್ರನುಂ ಪುಷ್ಪದಾಡನ ಮುನ್ನಿನ ಹೀನಬುದ್ಧಿಗಂ ಬೞಿಕಮಾದ ಸುಬುದ್ಧಿಗಂ ಚೋದ್ಯಂಬಟ್ಟು ತನ್ನೊಳಿಂತೆಂದಂ] [1] ॥ ೨೩೯

ಪಿರಿದಪ್ಪ ಮುಗಿಲ ಮಱೆಯೊಳ್
ಖರಕರನುಂ ಬೆಳಗಲಾಱನೆಂತಂತೆ ಮಹಾ।
ದುರಿತೋದಯದಿಂದಱಿಯ
ರ್ನರರುಂ ಸದ್ಧರ್ಮಮಪ್ಪುದಂ ಧಾರಿಣಿಯೊಳ್ ॥ ೨೪೦

ಮೆಕ್ಕೆಯ ಕಾಯ್ಗಳ್ ಮೊದಲೊಳ್ ಕೈಪೆಯಪ್ಪುವು ಕಡೆಯೊಳ್ ರುಚಿಯಪ್ಪುವಂತೆ ಕೆಲಂಬರ್ ಮೊದಲೊಳ್ ಪೊಲ್ಲರ್ ಕಡೆಯೊಳೊಳ್ಳಿದರಪ್ಪರ್ಕಬ್ಬು ಮೊದಲಿಂದಂ ಕಡೆವರಮಿನಿದಂತೆ ಕೆಲಂಬರಾದ್ಯಂತಮೊಳ್ಳಿದರ್ ಅಶೋಕೆ ಮೊದಲಾದ ವೃಕ್ಷದೆಲೆಗಳ್ ಮೊದಲೊಳ್ ಮೃದು

[1] ಎಂದು ಭಾವಿಸಿ ಮುನ್ನಿನ ದುರ್ಭಾವಮಂ ಬಿಟ್ಟು ನಿರ್ವೇಗಮುಂದುತ್ತರಮಾಗೆ ಭಾವಯುತದಿಗಂಬರದಾಸಂಗೆ ಪೊಡೆವಟ್ಟು ಪುನರ್ದೀಕ್ಷೆಯಂ ಕೈಕೊಂಡು ಆಗಮಂಗಳನೋದಿ ಭಾವತಪಸ್ವಿಯಾಗಿ ಸಮಾಧಿಮರಣದಿಂ ದೇವಲೋಕದೊಳ್ ಪುಟ್ಟಿದನಿತ್ತಲ್ ವಾತ್ಸಲ್ಯರತ್ನಾಕರಂ ಪುಷ್ಪದಾಡನ ಮುನ್ನಿನ ಸಂಸಾರಲಂಪಟತೆಗಂ ಬಳಿಕಿನ ವೈರಾಗ್ಯಕ್ಕಂ ಬೆಱಗಾಗಿ ತನ್ನೊಳಿಂತೆಂದಂ (ಗ)

ಪೂರ್ವ ಕಡೆಯೊಳ್ತುಱಗೆಲೆಗಳಪ್ಪವಂತೆ ಕೆಲಂಬರ್ಮೊದಲೊಳ್ಳಿದರಪ್ಪ ರ್ಕಡೆಯೊಳ್ ಪೊಲ್ಲರಪ್ಪರೆಂದು ಮನುಷ್ಯರ ಪರಿಣಾಮಮಂ ಭಾವಿಸಿ ಗುರುಗಳಾಜ್ಞೆಯಿಂದೇಕವಿಹಾರಿಯಾಗಿ ಪನ್ನಿರ್ಛಱದ ತಪದೊಳಂ ನೆಗೞ್ದು ಕಡೆಯೊಳ್ಸಂನ್ಯಸನಸಮಾಧಿಯಿಂ ಮುಡಿಪಿ ಸರ್ವಾರ್ಥಸಿದ್ಧಿಯೊಳ್ ಮೂವತ್ತಮೂಱುಸಾಗರೋಪಮಾಯುಷ್ಯಮನೊಡೆಯನಾಗಿ ಪುಟ್ಟಿದ ನದಱಿಂ ಸ್ಥಿತಿಕರಣದ [ಫಲಂ ಕೇವಲಮಲ್ಲೆಂದು ಗಣಧರಸ್ವಾಮಿಗಳ್ ಪೇೞ್ವುದಂ ] [1] ‖ ೨೪೧

ಕ್ಷಿತಿಪೂಜ್ಯಂ ವಾಗ್ವಿಳಾಸಂ ಸುಕವಿಜನಮನೋರಂಜನಂ ಜೈನವಾಕ್ಯಾ
ಮೃತತೃಪ್ತಂ ವಾಗ್ವಧೂವಲ್ಲಭನಘಕುವಿದ್ರಾವಣಂ ಕೇಳ್ದು ಚಿತ್ತೋ
ನ್ನತಿಯಿಂ ತ್ರೈವಿದ್ಯಚಕ್ರೇಶ್ವರವಿಮಲಪದಾಂಭೋಜಭೃಂಗಂ ಕವೀಂದ್ರ
ಸ್ತುತನಿರ್ದಂ ಲೀಲೆಯಿಂದಂ [2] ಸುಕವಿಜನಮನಃಪದ್ಮನೀರಾಜಹಂಸಂ ‖

ಇದು ನಿಖಿಲದಿವಿಜಪರಿವೃಢಮುಕುಟತಟಘಟಿತಮಣಿಗಣಸಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ನಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಮಾತ್ರದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನಷಷ್ಠಾಂಗವ್ಯಾವರ್ಣನಂ
ಸಪ್ತಮಾಶ್ವಾಸಂ.

---

1 ಪುಟ್ಟಿದನೆಂದಿಂತು ಸ್ಥಿತಿಕರಣದ ಕಥೆಯಂ ಮುನಿರಾಜಹಂಸಂ ಪೇಳ್ದಂ (ಗ)

2 ವಿದ್ರಾವಣಾ ಸರ್ವಶಾಸ್ತ್ರಾನ್ವಿತತಂ ಘೋರದ್ಭವ್ಯರ್ದ್ವಿರದರಿಪುಗಣಾಂ ಬೋಧಿ ತ್ರೈವಿದ್ಯ ಲಕ್ಷ್ಮೀ ಪತಿಪಾದಾಂಭೋಜಭೃಂಗಂ (ಕ. ಬ.)

## ಅಷ್ಟಮಾಶ್ವಾಸಂ.

ಶ್ರೀಸತಿಗೀಸ್ಥಿತಿಕರಣಂ
ಭಾಸುರಭೂಷಾಳಿಯೆಂದು ಕರಮಲ್ಲದೆ ಸಂ ।
ತೋಷಂಬಟ್ಟಂ ಮನದೊಳ್
ಲೇಸಾಗಿರೆ ಸುಕವಿನಿಕರಪಿಕಮಾಕಂದಂ ॥ ೧

ಸ್ಥಿತಿಕರಣದ ಕಥೆಯಂ ಭೂ
ಪತಿ ಬೇಗಂ ಕೇಳ್ದು ನಂಬಿ ಪೆತ್ತಂ ಮುನಿಪಂ ।
ದಿತರಂ ಸದ್ವಾತ್ಸಲ್ಯದ
ಕಥೆಯಂ ಬೆಸಗೊಳ್ವುದುಂ ಮಹೋತ್ಸವದಿಂದಂ ॥ ೨

[ಯತಿತಿಲಕರ್ ಸಕಲಗುಣಾ
ನ್ವಿತರಮಳಚರಿತ್ರರಂಗಭವಮದಹರಣರ್ ।
ನುತವಾಕ್ಯಭೂರ್ವನತ್ರಯ
ನತಕರ್ಮದುರಿತಗಂಧಗಜಸಿಂಹನಿಭರ್ ॥ ೩

ನಿರ್ವೃತಿಶ್ರೀಯ ಭಂಡಾರದಮೂಲ್ಯವಸ್ತುವೆನಿಪ ವಾತ್ಸಲ್ಯದ ಕಥೆಯಂ] ಇಂತೆಂದು ಪೇಳ್ದರ್ :—

ಪ್ರಾತಿಹಾರ್ಯದಂತೆ ಸ್ವರ್ಗಯುಗಳದಂತೆ ದೆಸೆಗಳಂತೆ ದಿಕ್ಪಾಲಕರಂತೆ ಸೀತಾನದಿಯ ತಡಿಯಂತೆ[1] ನಾಗಕುಲದಂತೆ ಶೋಭೆಯಂತೆ ಶ್ರಾವಕರ ಮೂಲಗುಣದಂತೆ ಪೃಥ್ವಿಯಂತೆ [ದರ್ಶನಾಂಗದಂತೆ ದೇವರಷ್ಟಗುಣದಂತೆ] ದರ್ಶನಮುಂ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಮೆಂಬೆಂಟುಂಗುಣಂಗಳೊಳ್ನರೆದು ನಡೆವುದು ॥ ೪

---

[1] ಸೀತೋದಾನದಿಯಂತೆ (ಬ. ಕ.)

ಕಲ್ಯಾಣವಿದು ಜಗನ್ಮಾಂ
ಗಲ್ಯಂ ಸಮ್ಯಕ್ತ್ವರತ್ನದಧಿದೇವತೆ ವಾ ।
ತ್ಸಲ್ಯಂ ಭಾವಿಸುವೊಡೆ ಕೈ
ವಲ್ಯಶ್ರೀವನಿತೆ ತುಡುವ ದಿವ್ಯಾಭರಣಂ ॥ ೫

ಇನ್ನದಱ ಪರಮೈಶ್ವರ್ಯಮಂ ಪೇೞ್ವೊಡೆ ಜಂಬೂದ್ವೀಪದ ಭರತಕ್ಷೇತ್ರದ ಪಾಂಚಾಲವಿಷಯದೊಳ್ ರಮಣೀಯಮಪ್ಪಹಿಚ್ಛತ್ರಮೆಂಬ ಪುರಮುಂಟಾಪುರಮನಾಳ್ವಂ ಸಂತಪನೆಂಬರಸನಾತನ ಪುರೋಹಿತಂ ಸಕಲಶಾಸ್ತ್ರಪರಿಣತಂ ಸೋಮದತ್ತನೆಂಬನಾತನ ಭರ್ತಾರೆ ಯಜ್ಞದತ್ತೆಯೆಂಬಳಾಯಿರ್ವರುಂ ಸಕಲಜನಕ್ಕಂ ನಂಟರ್ಗಮೊಳ್ಳಿದರಾಗಿ ಸುಖದಿಂದಿರ್ಪುದುಂ ॥ ೬

ಹರಿಣಾಕ್ಷಿಗೆ ವಿಪ್ರಕುಲಾಂ
ಬರತರಣಿಗೆ ಸತಿಗೆ ಯಜ್ಞದತ್ತೆಗೆ ನಂಟೆ ।
ಗರುರುಮುದದಿಂದಂ ರಾಗಂ
ಕರಮಲ್ಲದೆ ಪೆರ್ಚೆ ಗರ್ಭಮಪ್ಪುದುಮಾಗಳ್ [1] ॥ ೭

ಆಗರ್ಭಾರ್ಭಕನೊಂದು
ದ್ಯೋಗಮುಮಂ ಮುಂದಣೊಂದು ರಾಜ್ಯಮುಮಂ ಜೈ ।
ನಾಗಮಕುಶಲತೆಯುಮನಿಂ
ಬಾಗಿರೆ ತೋರ್ಪಂತೆ ಸಾಱುವಂತವಯವದಿಂ [2] ॥ ೮

ಗರ್ಭಮಾದಯ್ದು ತಿಂಗಳ್ಗೆ ಜಿನಮಂದಿರಂಗಳಂ ಪೋಗಿ ಬಲಗೊಳಲುಂ ಜಿನಬಿಂಬಂಗಳನಷ್ಟವಿಧಾರ್ಚನೆಯಿಂದರ್ಚಿಸಲುಂ ತ್ರಿಭುವನಮಾಂಗಲ್ಯಂಗೆ ಮಹಾಭಿಷೇಕಮಂ ಮಾಡಲುಂ ಶ್ರೀಮದರ್ಹತ್ಪರಮೇಶ್ವರ

---

1 ಪೇೞ್ವೊಡೆ ಪಾಂಚಾಳವಿಷಯದೊಳಹಿಚ್ಛತ್ರಮೆಂಬುದು ಪುರಮದನಾಳ್ವಂ ರಿಪಂತನೆಂಬರಸನ ಪುರೋಹಿತಂ ಸೋಮದತ್ತನೆಂಬನಾತನ ಬ್ರಾಹ್ಮಣಿ ಯಜ್ಞದತ್ತೆಯೆಂಬಳಾಕೆಗೆ ಗರ್ಭಮಾಗಿರ್ಪುದುಂ (ಗ)

2 ಆಗಮಪರಿಣತೆಯುಮನಿಂಬಾಗಿರೆ ಲೋಕಕ್ಕೆ ನೆಱೆಯೆ ಸಾಱುವ ತೆಱದಿಂ (ಗ)

ರೂಪನನಮಿಕ್ಕದೆ ನೋಡಲುಂ ಮೋಕ್ಷಲಕ್ಷ್ಮೀವಿಲಾಸನನಾಗಳುಂ ಪತ್ತುವಿಡದಿರಲುಂ ಜಿನಾಗಮಮನಾಗಳುಂ ಕೇಳಲುಂ ಸಿದ್ಧಾಂತವಚನಮನಾಲಿಸಲುಂ ಚರಿತಪುರಾಣಂಗಳಂ ಪೆಱರ್ಗೆ ಪೇೞಲುಂ ಜಿನಮುನಿಗಳಂ ಸಾರಲುಂ ಜೀವಂಗಳನೋವಲುಂ ಕುಮಾರ್ಗಾನುರಾಗಿಗಳನಗಲಲುಂ ಆಹಾರಾಭಯ ಭೈಷಜ್ಯದಾನಮಂ ಮಾಡಲುಂ ಸದ್ದೃಷ್ಟಿಗಳಪ್ಪರಾಳ್ಮೆತಲುಂ ವಿದ್ಯಾಧರಾಧಿರಾಜರಿಂ ಬಸಕೆಯ್ಸಿಕೊಳಲುಂ ಚಾತುರ್ವರ್ಣ್ಯಕವಿದಿರೆೞ್ದು ಕೈಗಳಂ ಮುಗಿಯಲುಂ ಸರ್ವಸ್ವಮನೀಯಲುಂ [1] ಬಯಕೆ ತಿಣ್ಣಮಾಗೆ ॥ ೯

ಪೆಱರ್ಗೀಬಯಕೆಗಳಂ ತಾ
ನಱಿಪಿದೊಡಂ ತೀರದೆಂದು ಕಾಮಿನಿ ಮನದೊಳ್ ।
ಮೆಱುಗಿ ಬಿಸಿದಪ್ಪ ತುಪ್ಪಮ
ನಱಿಯದೆ ಶಿಶು ನುಂಗಿದಂತೆ ಚಿಂತಿಸಿ ಮನದೊಳ್ [2] ॥ ೧೦

[ನೆರೆಯಲ್ಲದು ಪೊರೆಯಲ್ಲದು
ಗೊರವನನಲೆ ಮಗವು ಪೋಲ್ತುದೆಂಬೀನುಡಿಯುಂ ॥
ತಿರೆ ಚೋದ್ಯಮಾದುದೀತಂ
ಪುರುಳಿಲ್ಲದ ಬಯಕೆ ಬಗೆವೊಡವನೀತಳದೊಳ್] ॥ ೧೧

ಎನ್ನ ಕುಲದವರಕ್ಕೆ ಪೊತ್ತೆಯನ್ವಯದವರಕ್ಕೆ ಜಿನಧರ್ಮಮುಂಟುದಂ ಕನಸಿನೊಳಪ್ಪೊಡಂ ಕಂಡಱಿಯರೆನಗೀಗಳಿನ ಬಯಕೆಗಾಶ್ಚರ್ಯಮಾದುದಿವನೆನ್ನ ಬಂಧುಗಳ್ಗಕ್ಕೆ ಗಂಡಂಗಕ್ಕೆ ಪೇೞ್ವೊಡಮವರೀ ಬಯಕೆಯುಂ ತೀರ್ಚುವರಲ್ಲಮೆಂದು ಕೊರ್ಕಳಗುದಿದು ಮೂಗರ್ ಕಂಡ

1 ಜಿನೇಶ್ವರರೂಪಂ ನೋಡುವ ವೀತರಾಗನೆಳ್ಗಯುಂ ಪಾಡುವ ತ್ರಿಭುವನಪೂಜ್ಯಂಗೆ ಪೂಜೆಯಂ ಮಾಡುವ ಶ್ರಾವಕರೊಡಗೂಡುವ ಧರೆಯನಾಳುವ ಪೆಱರ್ಗೆ ಧರ್ಮಮಂ ಪೇಳ್ವ ಜಿನಮುನಿಗಳ ಕಾಲಮೇಲೆ ಬೀಳ್ವ ಚತುರ್ವಿಧದಾನಮಂ ಮಾಳ್ಪ ಸಮ್ಯಗ್ದೃಷ್ಟಿಗಳಿಗೆ ಕೂರ್ಪ ಋಷಿಯರ ಕೆಲದೊಳಿರ್ಪ ಸುವ್ರತಂಗಳಂ ಬಿಸರ್ಪ ಮಿಥ್ಯಾತ್ವಮನಡಪಲೆವ ಕುತ್ಸಿತಲಿಂಗಿಗಳ್ಗ ಮಾರ್ಮಲೆವ ಬಸದಿಗಳಂ ಕಂಡೊಡೆ ನಲಿವ ಪಾಪಹೇತುಗಳ್ಗೆ ಬಲಿವ (ಗ)

2 ಕೊರ್ಕಳಗುದಿದಳ್ (ಗ)

ಕನಸಿನಂತೆ ಪೆಱರ್ಗೆ ಪೇೞಲಱಿಯದೆ ನಾಡೆಯುಂ ಬಡವಾಗಿರ್ಪುದುಂ
ತಾಯುಂ ತಂದೆಯುಂ ಸೋಮದತ್ತನುಂ ಬಂಧುಗಳುಂ ಯಜ್ಞದತ್ತೆ
ಬಡವಾಗಿರ್ದುದಕ್ಕೆ ಚೋದ್ಯಂಬಟ್ಟು ॥ ೧೨

ಮುನ್ನಿನೂಟದ ಮಾರ್ಗಮಲ್ಲದು ಬುದ್ಧಿಯುಂ ನಡೆವೋಜೆಯುಂ
ಮುನ್ನಿನಂದಮನೇನೊ ಪೋಲವು ಚಿತ್ತದೊಳ್ ಪೆಱತೊಂದನಾಂ
ತನ್ನತಿಕ್ಕೆಯನಾಗಳುಂ ನೆನೆಯುತ್ತುಮಿರ್ಪುದಿದೇಕೆ ಪೇೞ್
ಕೆನ್ನನೆನ್ನೊಡನೆಂದಿನಂದದೊಳೊಂದಲೊಲ್ಲದೆ ರಾಗದಿಂ ॥ ೧೩

ಪವನಮಾರ್ಗಮನೇನೊ ನೋಡುತುಮಿರ್ಪಳರ್ತಿಯೊಳಾಗಳುಂ
ಪ್ರವರಮಪ್ಪ ಜಿನಾಲಯಂಗಳನಕ್ಕಱಿಂದಮೆ ನೋಡುವಳ್
ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್
ಧವಳಲೋಚನೆ ಜೈನರೆಂದೊಡೆ ಪೊಂಗುವಳ್ಕಡುಗೂರ್ಮೆಯಿಂ ॥ ೧೪

ಇದಾಶ್ಚರ್ಯಮೆಂದು ವಿಸ್ಮಯಂಬಟ್ಟು ಯಜ್ಞದತ್ತೆಯಲ್ಲಿಗೆ ಬಂದು ನಿನ್ನ ಬಯಕೆಯನೆಮಗಱಿಯೆ ಪೇೞ್ವುದಾಬಯಕೆ ತೀರ್ದೊಡಲ್ಲದೆ ನಿನ್ನ ಮೆಯ್ಯ ಬಡತನಂ ಪೋಗದೆಂದು ಕಿಱಿವೆಸಗೊಳ್ವುದುಂ ಯಜ್ಞದತ್ತೆ ಪೇೞಲಣ್ಮದುಸಿರದಿರ್ಪುದುಂ ನಂಟರುಂ ಸೋಮದತ್ತನುಂ ತಾಯುಂ ತಂದೆಯುಂ ಯಜ್ಞದತ್ತೆಯಂ ನಿಚ್ಚಲಡಸಿ ಬೆಸಗೊಳ್ವುದುಮವರನಿಷ್ಟಕಾಱದೊಂದುದಿವಸಂ ತನ್ನ ಮನದ ಬಯಕೆಯಂ ಪೇೞದೆ ಪ್ರಸಿದಿಂತೆಂದಳ್[1] ॥ ೧೫

1 ಕಂಡಱಿಯರೀಬಯಕೆಯು ತೊಟ್ಟನೆ ಎನಗತ್ತಣಿಂ ಬಂದು ಪುಟ್ಟಿತ್ತೆಂದು ಚಿಂತಿಸಿ ಬಡವಪ್ಪುದುಂ ಸೋಮದತ್ತನುಂ ತಾಯುಂ ಮಾವನುಮತ್ತೆಯುಂ ಬಂಧುಗಳುಂ ಯಜ್ಞದತ್ತೆಯ ಬಡವಪ್ಪುದನಱಿದು ಚೋದ್ಯಂಬಟ್ಟು,

ಸವಣರಂದೊಡೆ ಭಕ್ತಿಯಿಂ ಪಂದೆಯ್ದಿ ನೋಡುವಳರ್ತಿಯಿಂ
ಪ್ರವರಮಪ್ಪ ಜಿನಾಲಯಂಗಳನಕ್ಕಱಿಂದಮೆ ನೋಡುವಳ್ ।
ದಿವಿಜಪೂಜಿತಜೈನಪೂಜೆಗೆ ಕೈಗಳಂ ಮುಗಿದಾಲಿಪಳ್
ಧವಳಲೋಚನೆ ಜೈನರಂದೊಡೆ ಪೆರ್ಚುವಳ್ಕಡುಗೂರ್ಮೆಯಿಂ ॥

ತನಿರಸದಿಂದಮೃತದ ದೊರೆ
ಯೆನಿಸುವ ಕುಂಕುಮದ ರುಚಿಯನನುಕರಿಸುವ ಮಾ ।
ವಿನ ಪಣ್ಣ ನೆನಗೆ ನೀವಿಂ
ಬಿನೆ ತಂದಿಕ್ಕುವುದಮೋಘಮೆಂಬುದುಮಾಗಳ್ ॥ ೧೬

ನಂಟರುಂ ಸೋಮದತ್ತನುಂ ಯಜ್ಞದತ್ತೆಯ ಬಯಕೆಗೆ [1] ಬೞಿಗಾಗಿ ಪುಳಿಯ ಗಿಣ್ಣುಮಂ ಮೊಲನ ಕೋಡುಮಂ ಕಬ್ಬಿನ ಪಣ್ಣುಮಂ ಪಲಸಿನ ಪೂವುಮಂ ಪಡೆವೊಡಂ ಪಡೆಯಲಕ್ಕುಮಾದಿವಸಂ ಮಾವಿನ ಪಣ್ಣಂ ಪಡೆಯಲ್ಬಾರದಿದಕ್ಕೇಗೆಯ್ವುದೆಂದು ಚಿಂತಿಸಿ ॥ ೧೭

[ತರುಣಿಗೆ ಮಾವಿನ ಪಣ್ಗಳ್
ದೊರೆಕೊಳ್ಳವಮೋಘಮೆಂತು ಪೇೞ್ವೊಡಮಿದನೋ ।
ಸರಿಸಿ ಕರಮೆಳಸಿದೊಡ
ಮೆಂಡಿಲ್ಲದೆ ಕೇಳ ಸಾವು ತಾಂ ಸಮನಿಸುಗುಂ ॥ ೧೮

ನಾವಿದನುಪೇಕ್ಷಿಸಿರ್ದೆವಪ್ಪೊಡೆ ಬೞಿಕ್ಕಮೊಕ್ಕ ತುಪ್ಪಮನುಡುಗಲ್ ಬಾರದು ಮಾವಿನಪಣ್ಣನೆಲ್ಲಿ ಪೊಕ್ಕಪ್ಪೊಡಂ ತರವೇೞ್ಕುಮೆಂದು ಸೋಮದತ್ತನುಂ ಬಂಧುಗಳುಂ ತಾಯ್ತಂದೆಯುಂ ಯಜ್ಞದತ್ತೆಗೆ ಸಂತೋಷಮಪ್ಪಂತಾಗೆ ನುಡಿದು ದೆಸೆದೆಸೆಗೆ ಪೋಗಿ ] ॥ ೧೯

ತೊಱೆಗಳ ತೀರದೊಳ್ಗಿರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್
ಕೆಱೆಗಳ ನೀರ ಪಳ್ಳದ ತಟಂಗಳೊಳೊಪ್ಪುವ ಪುಷ್ಪವಾಟದೊಳ್
ತುಱುಗಿದ ವೃಕ್ಷಸಂಕುಲದೊಳಾರವೆಯೊಳ್ ಬಳಸಿರ್ದ ತೋಂಟದೊಳ್
ಮಱುಗಿ ತೊೞಲ್ದು ಮಾವಿನ ಫಲಂಗಳನಂದಱಸುತ್ತುಮೆಲ್ಲಿಯುಂ ॥ ೨೦

---

ಯಿಂದಾಶ್ಚರ್ಯವೆಂದು ಸೋಮದತ್ತಾದಿಗಳು ಯಜ್ಞದತ್ತೆಯೇನ ಬಯಸಿ ಬಸವಾದಪೆ ಬಯಸಿದ ಬಯಕೆಯಂ ಪೇಳೆಂದು ನಿಚ್ಚ ನಿಚ್ಚಲಡಸಿ ಕಿಱಿಬೆಸಗೊಳ್ವುದುಂ ಅವರಿನುಕ್ಕಿಯಿರಲಾಱದೆ ತನ್ನ ಮನದ ಬಯಕೆಯಂ ಪೇಳಲಂಮದೆ ಪುಸಿದಿಂತೆಂದಳ್ (ಗ)

1 ಎಂಬುದುಂ (ಗ)

[ಪಗಲ್ ಪಸಿವುಮನಿರುಳ್ ನಿದ್ರೆಯುಮನಱಿಯದೆ ಗ್ರಾಮನಗರ ಖೇಡಖರ್ವಡಮಡಂಬಪಟ್ಟಣದ್ರೋಣಾಮುಖಂಗಳೊಳೆಲ್ಲಂ ತೊಲಲ್ದು ನೋಡಿ ॥ ೨೧

ಆವನಾದೊಡಮಕ್ಕೆ ಮಾವಿನ ಪಣ್ಣನೀಗಳ ನೋಡಿ ತಂ
ದೀವನುಳ್ಳೊಡೆ ಬೇಗಮಾತನ ಬೇಡಿದರ್ಥಮನೀವೆವೆಂ
ದೋವದೆಲ್ಲಿಯುಮಲ್ಲಿಗಲ್ಲಿಗೆ ಸಾಱುತುಂ ಬಿಡದೆಯ್ದೆ ಸ
ದ್ಭಾವದಿಂ ನೆಱ ಕೇಳುತುಂ ತಿರಿದರ್ಮಹೀತಳಮೆಲ್ಲಮಂ] ॥ ೨೨

ತುಱುಗಾವ ಗೋವರಂ ಮ
ತ್ತೞಿಕೆಯ ಕಬ್ಬಿಲರನೆಯ್ದೆ ಬೆಸಗೊಳುತುಂ ಬಾಯ್ ।
ಬಱಬಱಬತ್ತುತ್ತುಂ ಮೆಯ್
ಮಱುಗಿ ಮಹಾಭರದಿನರಸುತಿರ್ಪವಸರದೊಳ್ [1] ॥ ೨೩

[ಬಲವಾಹಿನಿಯೆಂಬ ತೊಱೆಯ ತಡಿಯೊಳಿರ್ದ ಬೇಡವಳ್ಳಿಗೆ ಸೋಮದತ್ತಂ ಭ್ರಾತ್ರವೆರಸು ಪೋಗಿ ಮಾವಿನ ಪಣ್ಣಡೆಯಂ ಪುಳಿಂದರಿಂ ಬೆಸಗೊಳ್ವುದುಮೊರ್ವ ಬೇಡಂ ಸೋಮದತ್ತನಲ್ಲಿಗೆ ಬಂದು ನಿಮ್ಮರಸುವ ಮಾವಿನಪಣ್ಣಡೆಯುನಾನಱಿವೆನೆಂಬುದುಂ ಆತನ ಮಾತಿಂಗೆ ಪ್ರಾಣಬಂದಂತಾಗೆ ಸಂತೋಷಂಬಟ್ಟು ॥ ೨೪

ತಡೆಯದೆ ಮಾವಿನ ಪಣ್ಣಿ
ರ್ಪೆಡೆಯಂ ನೀನೆಮಗೆ ತೋರ್ಪೆಯಪ್ಪೊಡೆ ನಿನಗಾಂ ।
ಕುಡುವೆಂ ಬೇಡಿದ ವಸ್ತುವ
ನಡಿಮಡಗದೆ ಮನೆಗೆ ಬೇಗಮೆಂಬುದುಮಾಗಳ್ ॥ ೨೫

ಕಿರಾತಂ ತನ್ನ ಬೇಟ್ಪ ವಸ್ತುವಂ ಬೇಡಿಕೊಂಡು ಸೋಮದತ್ತಂಗಿಂತೆಂದಂ:-ಅಬ್ಜಷಂಡಮೆಂಬುದೊಂದುಮಾವಿನವನವಿಾನದೀತೀರದೊಳಪ್ಪುದು ತದಾಮ್ರವನದೊಳೊರ್ವಂ ಮೆಯ್ಯೆಯೊಳೆಲ್ಲಂ ಕೆಸಱನೊಟ್ಟಿ

1 ಮೆಯ್ಮಱಿಯದೆ ಪರಿವರಿದು ಪಲರುಮಂ ಬೆಸಗೊಳುತಂ (ಗ)

ಕೊಂಡು ಬತ್ತಲೆವೆರಳಂತೆ ತನ್ನೊಳ್ ಮಿಸುಕುತ್ತುಂ ಮೌನದೊಳಿರ್ಪನಾತಂ ಕುಳ್ಳಿರ್ಪೆಡೆಯ ಚೂತಮಹೀಜಾತಂ ಪಣ್ಫಲಂಗಳಿಂ ದೊಱಗಿರ್ದಪುದಲ್ಲಿಗೆ ಪೋಗಿ ನೀಮಾರ್ಪನಿತು ಪಣ್ಗಳಂ ಕೊಳ್ಳಿಮೆಂದು ಕಿಱಿದೆಡೆಯುಂ ಬಂದು ಬಟ್ಟೆಯುಂ ತೋಱಿ ವ್ಯಾಧಂ ಮಗುಳ್ದು ಪೋಪುದುಂ ಸೋಮದತ್ತಂ ॥ ೨೬

ತೊಱೆಯ ತಡಿವಿಡಿದು ಬರುತುಂ
ತುಱುಗಿದ ಸಹಕಾರವನಮನೊರ್ವಗೆ ಕಂಡ ।
ಕ್ಕಱಿನೊಳ್ ರಾಗಿಸಿ ನಲಿದಂ
ಮಱುಕಂ ಪೆಱಪಿಂಗಿ ಪೋಗೆ ಮನದಿಂದಾಗಳ್ ॥ ೨೭

ವನಮಂ ಪೊಕ್ಕು ನೋಡುತುಂ ಬರ್ಪಾತಂ ಫಲಭಾರದಿಂ ಸೊಗಯಿಸುವ ಮಾಕಂದಮಹೀರುಹಮಂ ತದ್ವೃಕ್ಷದ ಕೆಳಗಿರ್ದ ಸುಮತಿಭಟ್ಟಾರಕರೆಂಬ ಮಹರ್ಷಿಯರುಮಂ ಕಂಡು ತನ್ನೊಳಿಂತೆಂದಂ ॥ ೨೮

ಈವನದ ಚೂತಭೂಜಾ
ತಾವಳಿಯೊಳ್ ಫಲಮುಮಿಲ್ಲಮಿರ್ದಂತಾಗೀ ।
ಮಾವಿನೊಳ್ ಪಣ್ಗಳಾದುವು
ಭಾವಿಸುವಂತಿದುವೆ ಚೋದ್ಯಮುರ್ವೀತಳದೊಳ್ ॥ ೨೯

ಈಮುನಿಯ ತಪೋನ್ನತಿಯಿಂ
ದೀಮಾವೊಂದಱೊಳ್ ಪಣ್ಗಳಾದುವು ಬಗೆವಂ ।
ದೀಮುನಿಯ ತಪೋನ್ನತಿಯಂ
ಸಾಮಾನ್ಯಮನುಷ್ಯರೆಯ್ದೆ ನೆಱೆವರೆ ಪೊಗೞಲ್] [1] ॥ ೩೦

---

1 ಬಲವಾಹಿನಿಯೆಂಬ ತೊಱೆಯ ತಡಿವಿಡಿದು ಬರುತ್ತುಂ ಪಣ್ಣಿಂ ತುಱುಗಿದ ಮಾಮರಮನಾಮಾವಿನ ಕೆಳಗಿರ್ದ ಸುಮತಿಭಟ್ಟಾರಕರೆಂಬರುಮಂ ಕಂಡು ಹರುಷಚಿತ್ತನಾಗಿ (ಗ)

ಈವರಮುನಿಪನೆ ಸಾಕ್ಷಾ
ದ್ದೇವಂ ಧರಣೀತಳಕ್ಕೆ ಪೆತ್ತುಱದವರಂ ।
ದೇವರೆನವೇಡ ಧರೆಯೊಳ್
ದೇವರೆ ನಟ್ಟಿರ್ದ ಕಲ್ಲುಮೆಟ್ಟಿದ ಮಣ್ಣುಂ ॥ ೩೧

[ಈ ಮಹಾತ್ಮನ ತಪದ ಸಾಮರ್ಥ್ಯದಿಂದೀಮಾಮ್ರೊಂದಱೊಳ್ ಫಲಮಾದುದಲ್ಲದಂದು ನಾಡೊಳಗಣ ಮಾವುಗಳೇಕೆ ಪಣ್ಣಾಗವೆಂದು ಯತಿವೃಷಭನಂ ಪರಮಾವಧಿಲೋಚನನಂ ಪೊಗೞುತ್ತುಂ ಮನದೊಳಾದರದಿಂ ಪೊಡೆಮಡುತುಮಿರ್ದ್ದನೆಂದು ಛಾತ್ರರುಂ ತಾನುಂ ಮುಂದೆ ನಿಲ್ವುದುಂ ಅವರ್ ತ್ರಿಲೋಕಪ್ರಜ್ಞಪ್ತಿಯೆಂಬಾಗಮಮಂ ಪೞಿಪಡಿಗೆಯ್ಯುತ್ತುಮಿಲ್ಲಿ ನರಲೋಕದೊಳಾದ ವೃತ್ತಾಂತಮೆಲ್ಲಮಂ ನೋಡಿ ಸ್ವರ್ಗಲೋಕದ ವ್ಯಾವರ್ಣನೆಯುಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರಕಲ್ಪಮಂ ನೋಡುತುಮಿರ್ಪುದುಂ][1] ॥ ೩೨

ಪರಿಣತನಪ್ಪುದಱಿಂ ವ್ಯಾ
ಕರಣದೊಳಮಯುಪರಿನಪೞ ಶಬ್ದಾರ್ಥಮನ ।
ಚ್ಚರಿಪಟ್ಟು ಭಾವಿಸುತ್ತುಂ
ಧರಾಮರಂ ಸೋಮದತ್ತನಿರ್ದನ್ನೆವರಂ ॥ ೩೩

ಸೂರ್ಯಪ್ರಭಮೆಂಬ ವಿಮಾನಮಂ ವ್ಯಾವರ್ಣಿಸುವುದುಂ ತಾನಾ ವಿಮಾನದೊಳ್ ಮುನ್ನಿನ ಭವದೊಳ್ ಸೂರ್ಯವರನೆಂಬ [ಮಹರ್ಧಿಕ] ದೇವನಾಗಿ ಪುಟ್ಟಿ ಬಂದನಪ್ಪುದಱಿಂ [ತದ್ವಿಮಾನದೊಳಾದ ವೃತ್ತಾಂತಮಂ ಕೇಳ್ದು] ॥ ೩೪

ಜಾತಿಸ್ಮರನಾಗಿ ಮಹಾ
ಖ್ಯಾತಿಯ ವಿಪ್ರಾಂಬರಾರ್ಕನಾಕ್ಷಣದೊಳ್ ಧಾ ।

---

1 ಯಿಂನವರ ಸಾಮರ್ಥ್ಯಮಪೂರ್ವಮೆಂದು ಯತಿವೃಷಭನ ಮುಂದೆ ಛಾತ್ರರುಂ ತಾನುಂ ಕುಳ್ಳಿರ್ಪುದುಂ ತ್ರಿಲೋಕಪ್ರಜ್ಞಪ್ತಿಯೆಂಬಾಗಮಮಂ ನೋಡುತ್ತಲ್ಲಿ ಸಹಸ್ರಾರಕಲ್ಪದ ವ್ಯಾವರ್ಣನೆಯುಂ (ಗ)

ತ್ರೀತಳಕೆ ನೆರೆದ ಶಿಷ್ಯ
ವ್ರಾತಂ ಬೆಱಗಾಗೆ ಮೂರ್ಛೆಯಿಂದಂ ಬಿರ್ದಂ ॥ ೩೫

[ಅಂತು ಮೂರ್ಛೆವೋಗಿ ಬಿರ್ದುದಕ್ಕೆ ಛಾತ್ರರೆಲ್ಲಂ ಬೆರ್ಚಿ ತವೆಪ್ಪೊಳ್ ॥ ೩೬

ಮನೆಯಿಂದಂ ಮಿಡುಕಂ ಮಹಾಸುಖಿ ಕರಂ ವ್ಯಾಳಂ ಮಹಾಭೋಗಿ ದೇ
ವನಿಭಂ ಶ್ರೀನಿಳಯಂ ಸಮಸ್ತನುತಶಾಸ್ತ್ರಾಂಭೋಧಿ ತಾಂ ತನ್ನ ಕಾ
ಮಿನಿಗತ್ಯುತ್ಸವಮಾಗೆ ಮಾವಿನ ಫಲವ್ರಾತಂಗಳಂ ತರ್ಪೆನೆಂ
ದಿನಿತಂ ಮಾಣ್ದು ಧರಿತ್ರಿಯಂ ತಿರಿದು ತಾಂ ಬೇಸತ್ತು ನಿಶ್ಶಕ್ತಿಯಿಂ ॥

ಬಿರ್ದನೆಂದು ದುಃಖಂಬಟ್ಟಱತೆ ತವೆಮ್ಮ ಮೇಲುದಂ ತಿಳಿಗೊಳ ಧೊಳ್ ಕೋಡುವಾಲಿನೀರೊಳದ್ದಿ ತಂದಾಮೊಗದೊಳಱತ್ತಿ ಕಾಲ ನೊತ್ತುತ್ತು ಮಿರ್ಪನಂ ಸೋಮದತ್ತಂ ಮೂರ್ಛೆಯಿಂದೆೞ್ಚತ್ತು][1] ॥೩೭

ಸುರಲೋಕಭೋಗಮಂ ಭೂ
ಸುರವಂದ್ಯಂ ನೆನೆದು ಮರ್ತ್ಯಲೋಕದ ಸುಖಮಂ ।
ಪರಿಹರಿಸಲೆಂದು ಬಗೆದಂ
ಪರಮಾರ್ಥಂ ಕಾಲಲಬ್ಧಿಯುದು ಕೇವಳಮೇ[2] ॥ ೩೮

ಜಿನಧರ್ಮಮೆಂಬುದಂ ಕನ
ಸಿನೊಳಂ ಕಂಡಱಿಯನಘಸಮೇತಂ ತಾಂ ತೊ ।
ಟ್ಟನೆ ಭವಮನಱಿದು ಸಂಸೃತಿ
ವನಮಂ ತಱಿದೊಟ್ಟಿ ಸುಡುವ ಬಗೆಯಂ ತಂದಂ ॥ ೪೦

ಸತ್ತವರನಾರೊ ಕಂಡರ್
ಚಿತ್ತಂ ಪರಿದಂತೆ ಮಾಟ್ಪುದೆಂಬರ್ ಕುಱಿಗಳ್ ।
ಸತ್ತವರೆ ಪುಟ್ಟಿದಿರ್ದೊಡೆ
ಮೆತ್ತಾನಿರದೀಗಳತ್ತಣಿಂದಂ ಬಂದೆಂ ॥ ೪೧

---

1 ಬಿರ್ದ್ದಂಗೆ ಶಿಷ್ಯವರ್ಗಂ ಸುವ ಶೀತಳಕ್ರಿಯೆಯಿಂದೆೞ್ಚತ್ತು (ಗ)
2 ಲಬ್ಧಿಯುಳವದು ಕಿಱಿದೇ (ಗ)

[ಎಂದು ಬಗೆದು ತನ್ನ ಮುನ್ನಿನ ಭವಮನಱಿವು ಜೀವವಿ ಲ್ಲೆಂದು ನುಡಿವ ಕುಮತಮುಂ ಬಿಟ್ಟು ಜೀವನುಂಟೆಂಬ ಜಿನಾಗಮಾಭಿ ಪ್ರಾಯಮಂ ಮನದೊಳ್ ನಂಬಿ ಸುಮತಿಭಟ್ಟಾರಕರಱಿವಂ ನೋಡ ಲೆಂದು ತನ್ನ ಭವಮಂ ಬೆಸಗೊಳಲ್ವೇಡಿ ಸಮೀಪಕ್ಕೆ ಬಂದು ಕುಳ್ಳಿ ರ್ದುದುಮವರೀತನಾಸನ್ನಭವ್ಯನೆಂದಱಿವು ಬೇಗಮಾವನಿಂ ಮುನ್ನಂ ಮನದಭಿಪ್ರಾಯಮನಿಂತೆಂದರ್ ॥ ೪೨

ಮುನ್ನಿನ ಭವಮಂ ನೀಂ ವಿ
ಪ್ರೋನ್ನತ ಜಾತಿಸ್ಮರತ್ವದಿಂದಱಿದೀಗಳ್ ।
ನಿನ್ನ ಕುಬುದ್ಧಿಯಿನಿವರುಮ
ನಾಂ ನೆಱೆ ಬೆಸಗೊಳ್ವೆನೆಂದು ಮೆಲ್ಲನೆ ಬಂದೈ ॥ ೪೩

ನಿನ್ನ ಬೆಸಗೊಳ್ವವಿತಂ ಬೆಸಗೊಳ್ಳೆಂಬುದುಂ ಸೋಮದತ್ತನವರ ಱಿತಕ್ಕೆ ಬೆಱಗಾಗಿ ಬೇಱನಱಿವರ್ಗೆಲ್ಲಮುಂ ತೋಱಿವರೆಂಬಂತೆ ಜಾತಿ ಸ್ಮರತ್ವಮನಱಿವೀಮಹಾಪುರುಷಂಗೆ ಲೋಕದೊಳಾವ ವಸ್ತುಗಳ ನಱಿವುದಾವುದು ಚೋದ್ಯಮೆಂದು ನಂಬಿ ತನ್ಮನಿಯು ಚರಣಯುಗಳಕ್ಕೆ ಸಾಷ್ಟಾಂಗವೆಱಗಿ ಪೊಡೆವಟ್ಟು ಕೈಗಳಂ ಮುಗಿದು ॥ ೪೪

ಮುನಿಯುಂ ಬೆಸಗೊಂಡಂ ಮೆ
ಲ್ಲನೆ ನಿಮ್ಮಡಿ ಬೆಸಸಿಮೆನ್ನ ಭರ್ತಾರಿಯುಮಾ ॥
ವಿನ ಪಣ್ಣನೇಕೆ ಬಯಸಿದ
ಳನಿತಾನುಂ ವಸ್ತುನಿಕರಮಿರ್ದುಂ ತಿನಿಪಂ ॥ ೪೫

ಎಂದು ಬೆಸಗೊಳ್ವುದುಂ ಸುಮತಿಭಟ್ಟಾರಕರಾಕೆಯ ಗರ್ಭದ ಕೂಸು ಜಿನಸಮಯಪ್ರಕಾಶನುಂ ವಾತ್ಸಲ್ಯರತ್ನಾಕರನುಂ ಕರ್ಮಾ ಚಲವಜ್ರನುಂ ಮುನಿಜನಹೃದಯಾನಂದನುಂ ದಿಗಂಬರಸರೋಜರಾಜ ಹಂಸನುಂ ಸುಕವಿನಿಕರಪಿಕಮಾಕಂದನುಂ ಸಹಜಕವಿಜನ ಮನೋ ಹರೋದ್ಯಾನವನಕಲಕಂಠನುಂ ಆಸನ್ನಭವ್ಯನುಂ ಸುಜನಮನೋರಂ ಜನನುಂ ಸಮ್ಯಕ್ತ್ವಚೂಡಾಮಣಿಯುಂ ವಿದ್ಯಾಧರಾನತಪಾದಪಲ್ಲವನು ಮಪ್ಪುದಱಿಂದವನ ಬಯಕೆ ನಿನ್ನ ಪೆಂಡತಿಯಪ್ಪ ಯಜ್ಞದತ್ತೆಗೆ ಬಯ ಕೆಯಾಗೆ ಜಿನೇಂದ್ರಾಭಿಷೇಕಮಂ ಮಾಡಲುಂ ಜಿನಮಹಾಮಹಿಮೆ

ಗಳಂ ನೋಡಲುಂ ಚರಿತಪುರಾಣಂಗಳಂ ಬೆಳಗೆ ಪೇೞಲುಂ ಜಿನಾಗಮಮ ಮನಾಗಳುಂ ಕೇಳಲುಂ ಶ್ರಾವಕರೊಡನಾಡಲುಂ ಶ್ರಾವಕರ್ಗುಡಲುಂ ತೊಡಲುಂ ಕುಡಲುಂ ಚಾತುರ್ವರ್ಣ್ಯಕ್ಕಂ ವಿನಯದಿಂ ಬೆಸಕೆಯ್ಯಲುಂ ಚತುರ್ವಿಧಮಪ್ಪ ಮಹಾದಾನಮಂ ಮಾಡಲುಂ ಮುನಿವೃಂದಾರಕರ ಸಮೀಪದೊಳಿರಲುಂ ಮನಮಾಗೆ ನಿಮಗಾಬಯಕೆಯುಂ ಪೇೞಲಣ್ಮದೆ ನಿಮ್ಮನಿಷ್ಟಕ್ಕೆ ಮಾವಿನ ಪಣ್ಣಂ ಬಯಸಿದೆನೆಂದು ಪೇೞ್ವಳೆಂದು ಪೇೞ್ವುದುಂ ಸೋಮದತ್ತಂ ಬೆಱಗಾಗಿ ॥ ೪೬

ವರಮುನಿ ಪೇೞ್ವನಿತುಂ ತಾಂ
ತರುಣಿಯ ಮೇಲಣವು ನಿಶ್ಚಯಂ ನಂಬಿದೆನಂ ।
ದರವಿಂದೋದ್ಭವವೆಂತಾಂ
ಬುಧಹಾರ್ಕಂ ಮುನಿವರಂಗೆ ಪೊಡೆಮಟ್ಟಾಗಳ್] [1] ॥ ೪೭

---

1 ಎಂದು ಜೀವನಿಲ್ಲ ಪರತ್ರೆಯಿಲ್ಲೆಂಬ ತನ್ನ ಮುನ್ನಿನ ಶೂನ್ಯವಾದಮಂ ಬಿಟ್ಟು ಜೀವನುಂಟು ಪರತ್ರೆಯುಂಟು ಎಂಬ ಜೈನಮತಾಗಮಮಂ ನಂಬಿ ಸುಮುತಿಭಟ್ಟಾರಕರ ಮೊಗಮಂ ನೋಡುವುದುಂ ಅವರೀತನಾಸನ್ನಭವ್ಯನೆಂದಱಿದು ಶೂನ್ಯಮತಂಗಳುಮಂ ಮಿಥ್ಯಾತ್ವಮುಮಂ ಬಿಟ್ಟು ಜಿನದೀಕ್ಷೆಗೆ ಮನಂಗಂದು ಲೇಸುಗೆಯ್ದಿರ್ಸಿಂಮ ಬೆಸಗೊಳ್ವುದಂ ಬೆಸಗೊಳ್ಳಿಮೆಂಬುದುಮವರಾತನ ಮನದ ಬಯಕೆ ತೀರ್ದಂತೆ ಪೇೞ್ವುದುಂ ಅವನಱಿತಕ್ಕೆ ವಿಸ್ಮಯಂಬಟ್ಟು ಬೇರನಱಿವರ್ಗೆಲ್ಲರುಂ ಪೇೞ್ದರೆಂಬಂತೆ ಸರ್ವಜ್ಞಂಗಱಿವಂ ಪೇೞ್ದರೆಂಬಂತೆ ಮತ್ತ ಸವಣಂಗೆ ಸುಬದ್ಧಕ್ಷರವಂ ತೋಱಿದರೆಂಬಂತೆನ ಜಾತಿಸ್ಮರಮನಱಿದೀಮಹಾಪುರುಷಂಗೆ ಮೂಱುಂ ಲೋಕದ ವಸ್ತುಗಳನಱಿವುದು ಗಹನಮಲ್ಲದಿಂನೆನಂ ಬೆಸಗೊಳ್ವೆನೆಂದು ಭಾವಶ್ರುತದಿಗಂಬರದಾಸನ ಕಾಲ ಮೇಲೆ ಬಿದ್ದು ನಿಮ್ಮಡಿ ಬೆಸಸಿಮೆಂನ ಪೊಡತಿಗೀಕಾಲದೊಳು ಪಡೆಯಲು ಬಾರದಪೂರ್ವಮಪ್ಪ ಮಾವಿನ ಪಣ್ಣ ಬಯಕೆ ತೊಟ್ಟನೇಕಾದುದೆಂಬುದು ಮುವರವಧಿಜ್ಞಾನದಿಂದವಱಿದು,

ಆಸತಿಯು ಗರ್ಭದೊಳಗಿರ್ದಾಸುತನತ್ವದಾಂಬುಜದ್ವಯಮಧುಪಂ।
ಶ್ರೀಸತಿಪತಿ ಸಕಲಗುಣಾವಾಸಂ ಸವ್ಯಸ್ತ್ವಂತನ್ನದಿವ್ಯಾಭರಣಂ ॥

ಆತನ ಬಯಕೆ ತನಗೆ ಬಯಕೆಯಾಗೆ ಯದಱಿಂದಾ ಬಯಕೆಯುಂ ನಿಮಗಱಿಪಲುಮದೆ ನಿಂಮನಿಷ್ಟಕ್ಕೆ ಪುಸಿದು ಮಾವಿನ ಪಣ್ಣಂ ಬಯಸಿದೆನೆಂದು ಪೇೞ್ದಳೆಂಬುದುಂ ಸೋಮದತ್ತಂ ಬೆಱಗಾಗಿ (ಗ)

ಸುಡು ಸಂಸಾರಮನೊಲೆಯೊಳ
ಗಿಡು ಸಂಸೃತಿಸುಖಮನೀಮಹಾಪುರುಷನ ಮ |
ಲ್ಲಡಿಯುಂ ನೋಡುತ್ತುಂ ಮೃದು
ನುಡಿಯುಂ ಕೇಳುತ್ತುಮಿರ್ಪುದೊಂದರಸಲ್ತೇ || ೪೮

ಎಂದು ಮೂವಿನ ಪಣ್ಗಳಂ ಛಾತ್ರರ ಕೈಯೊಳ್ ಅಹಿಚ್ಛತ್ರದ ಪುರಕಟ್ಟಿ ತಾಂ ಪೋಗಲೊಲ್ಲದಿರ್ದು || ೪೯

ಜಿನವಾಕ್ಯಂ ಪೊಱಗಾಗೆ ಮತ್ತಿನ ವೃಥಾಳಾಪೋಕ್ತಿಗಳ್ಗಾನೆ ದೇ
ವನೆನುರ್ವೀತಳದೊಳ್ ಸಮಸ್ತವಿಷಯ [1] ವ್ಯಾಪಾರಮಂ ಬಲ್ಲನೊ
ಯ್ಯನೆ ಜೈನಾಗಮಮಂ ಸಮಸ್ತದುರಿತಪ್ರಧ್ವಂಸಿಯಂ [2] ಕೇಳ್ವನೀ
ಮುನಿಪಾಂಘ್ರಿದ್ವಯಪದ್ಮದೊಳ್ ನೆಱೆಯೆ ಪೊರ್ದಿರ್ದಲ್ಲಿ ನಾನರ್ತಿಯಿಂ [3]

ಎಂದು ಉತ್ಸಾಹಮನನಾಗಿ, ಬೀದಿಯ ರತ್ನದಂತೆ, ಪೊಸಂತಿಲ ನಿಧಿಯಂತೆ, ಮನೆಗೆ ವಂದ ನಿಕ್ಷೇಪದಂತೆ, ಕುಡದೆ ಬಂದ ಭಂಡಾರದಂತೆ, ಮಾಡದೆ ಬಂದ ಮನೆಯಂತೆ, ಬೇಡದೆ ಬಂದ ಸಾಲದಂತೆ, ಪಡೆಯದೆ ಬಂದ ದೇಶದಂತೆ, ವರಿಸದೆ ಬಂದ ನಲ್ಲಳಂತೆ, ಕಾಡದೆ ಬಂದ ರಾಜ್ಯದಂತೆ, ಬಿತ್ತದೆ ಬಂದ ಧಾನ್ಯದಂತೆ, ಚಿಂತಿಸದೆ ಬಂದ ಕಸವರದಂತೆ, ಪ್ರಾರ್ಥಿಸದೆ ಬಂದ ಮದುವೆಯಂತೆ, ಸಾಧಿಸದೆ ಪಡೆದ ವಿದ್ಯೆಯಂತೆ, ಕಾದದೆ ಗೆಲ್ದ ಗೆಲ್ಲದಂತೆ, ಕೇಳದೆ ಬಂದ ಶಾಸ್ತ್ರದಂತೆ, ನುಡಿಯದೆ ತೀರ್ದ ಕಾರ್ಯದಂತೆ, ಮಳೆಯಿಲ್ಲದೆ ತೀವಿದ ಕೆಱೆಯಂತೆ, ನೀರೆತ್ತದೆ ಫಲಮಾದ ತೋಂಟದಂತೆ, ಮದ್ದಿಲ್ಲದೆ ಪೋದ ಕುತ್ತದಂತೆ, ತನಗೆ ತಾನೆ ಬಂದ ಸಿರಿಯಂತೆ, ಪುಣ್ಯದಿಂ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ ; ಮುಗಿಲ ನೀರಂ ನಂಬಿ ದೋಣಿಯ ನೀರಂ ತುಳುಂಕುವ ಕೋಡಗಮುಮಂ, ಪೆಱರ ಬೆಳಸಂ ನಂಬಿ ಕೆಲಸಂಗೆಯ್ಯದೆ ಇಕ್ಕಲಿಗನುಮಂ, ನಂಟರ ಮಕ್ಕಳಂ ನಂಬಿ ತನ್ನ ಮಕ್ಕಳಂ ಕಳೆವ ನಿರ್ಬು

---

1 ಸಮಯ (ಗ)  2 ಜರಾಮರಣ ಜಾತಿಚ್ಛೇಧಮಂ (ಗ)

3 ಮುನಿನಾಥೋತ್ತಮ ನಿಲ್ಲಿ ಬೇಗಮೆನುತ್ತುಂ ಸದ್ರಾಗಮಂ ತೋಱಿದಂ (ಗ)

ದ್ಧಿಯುಮಂ, ಜಾರೆಯ ಮಾತಂ ನಂಬಿ ತನ್ನ ಪೆಂಡತಿಯುಂ ಬಿಡುವ ಬೇಂಟಗಾಱನುಮಂ, ಕಳ್ಳನ ನುಡಿಯುಂ ನಂಬಿ ತಳಾಱನಂ ಕೊಲ್ವ ಗ್ರಾಮಣಿಯುಮಂ, ಮದುವೆಯ ಕೂೞಂ ನಂಬಿ ಮನೆಯ ಧಾನ್ಯಮಂ ಸೂಱೆಗೊಡುವ ಬೆಳ್ಪನುಮಂ, ಸಾಲದ ಪೊನ್ನಂ ನಂಬಿ ಪೂಳ್ದ ಪೊನ್ನ ನೀಡಾಡುವ ಮರುಳನುಮಂ, ಕೈಯದಂ ಬಿಟ್ಟು ಕಾಲದಕ್ಕೆಱಗುವ ಲೋಭಿಯುಮಂ, ಧಾತುವಾದಮಂ ನಂಬಿ ಕೈಯೊಡಮೆಯುಂ ಬೀಯಂ ಮಾೞ್ಪ ಹೀನಿಯುಮಂ, ಗುಡಿಯುಂ ನಂಬಿ ಮನೆಯುಂ ಸುಡುವ ನಿರ್ಬುದ್ಧಿಯುಮಂ, ಹಿಂಡಿಯುಂ ನಂಬಿ ಯೆಣ್ಣೆಯನುಗುವ ತೆಲ್ಲಿಗನುಮಂ, ಬೀಯಕಾಱನಂ ಬಿಟ್ಟು ಬೇಂಟಗಾಱನಂ ಕರೆವ ಸೂಳೆಯುಮಂ, ಮಣ್ಣಕೋಂಟೆಯುಂ ನಂಬಿ ಕಲ್ಲಕೋಂಟೆಯನೊಡೆವ ಮನ್ನೆಯನುಮಂ, ಬಿನುಗಂ ನಂಬಿ ತೆಱುವೊಕ್ಕಲಂ ಕಳವ ಪ್ರಭುವುಮಂ, ಮಾತಾಳಿಯುಂ ನಂಬಿ ವೀರನಂ ಬಿಡುವ ನಾಯಕನುಮಂ, ಸೋರೆಯ ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ, ಪಾೞುನಾಡಂ ನಂಬಿ ತೀವಿದ ನಾಡಂ ಕಿಡಿಸುವ ಭೂಪನುಮಂ, ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ, ಪುಲ್ಬಂಟನಂ ನಂಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ, ಕಿಚ್ಚಂ ಬಿಟ್ಟು ನೀರಂ ಪುಗುವ ವಾತಾಧಿಕನುಮಂ, ತಣ್ಪಂ ಬಿಟ್ಟು ಬಿಸಿಲಂ ಕಾಯ್ವ ಪಿತ್ತಾಧಿಕನುಮಂ ಪೋಲ್ವೆನೆಂದು ಪರಿಚ್ಛೇದಿಸಿ [ಜಿನೇಂದ್ರಧರ್ಮಮಂ ಸುಮತಿ ಭಟ್ಟಾರಕರೊಳ್ ಲೇಸಾಗಿ ಕೇಳ್ದು ತನ್ನ ಮುನ್ನಿನ ಸಂಕಲ್ಪಜಾಲಂಗಳಂ ನಱಿ ತೊಱೆದು ಸಂಸಾರಕ್ಕೆ ಪೇಸಿ ವೈರಾಗ್ಯಂ ಪುಟ್ಟೆ ಪಂಚೇಂದ್ರಿಯಂಗಳೊಳಾದಲ್ಪಸುಖಮಂ ಬಿಟ್ಟತೀಂದ್ರಿಯಸುಖಮಂ ಕೈಕೊಳಲೆಂದು ॥ ೫೧

ಕರಮೆಸಗಿದು ಬಾಗಿ ತಲೆಯಂ
ದುರಿತಮನಡಗಲೆಯಲೆಂದು ಜಿನದೀಕ್ಷೆಯನಾ ॥
ದರದಿಂ ಮುನೀಂದ್ರವಂದಿತ
ಚರಣಾಂಭೋಜಾತಯುಗಳನಂ ಬೇಡುವುದುಂ ॥ ೫೨

ಸುಮತಿಭಟ್ಟಾರಕರಾತನ ವಿನಯಕ್ಕಂ ಮನದ ವೈರಾಗ್ಯಕ್ಕಂ ಮೆಚ್ಚಿ ದೀಕ್ಷೆಯಂ ಕಾರುಣ್ಯಂಗೆಯ್ವುದುಂ ಜಾತರೂಪಧರನಾಗಿ ಚತುರನುಯೋಗಮುಮಂ ನೋಡಿ ದಶಧರ್ಮಕುಶಲನುಂ ಅಷ್ಟಾವಿಂಶತಿಮೂಲಗುಣಸಮನ್ವಿತನುಂ ದರ್ಶನಸಂಶುದ್ಧನುಮಾಗಿ] [1] ಕೆಲವುದಿವಸಂ ಗುರುಪಾದಸೇವೆಯೊಳಿರ್ದು ಗುರುಗಳಾಜ್ಞೆಯಿಂ ದೇಶವಿಹಾರಿಯಾಗಿ [ವಿಹಾರಿಸುತ್ತುಂ ಬಂದು ಮಗಧವಿಷಯದ ಸೌಪಾಳಮೆಂಬ ಪುರದ ಪಡುವಣದೆಸೆಯ] [2] ನಾಭಿಗಿರಿಯೆಂಬ ಪರ್ವತದೊಳಾತಪಯೋಗದಿಂದಿರ್ದನನ್ನೆಗಮಿತ್ತಲ್ ॥ ೫೩

ಸೋಮದತ್ತನ ಕೊಟ್ಟ ಮಾವಿನ ಪಣ್ಗಳಂ ಪಿರಿದಚ್ಚರಿಂ
ಸೋಮದತ್ತನ ಛಾತ್ರಸಂಕುಲಮೆಂದು ತಂದತಿರಾಗದಿಂ
ಸೋಮದತ್ತನ ಭಾರ್ಯೆಗಿತ್ತು ಸಮಸ್ತಬಂಧುಜನಾಳಿಗಂ
ಸೋಮದತ್ತನೊಳಾದ ವಾರ್ತೆಯನೆಲ್ಲಮಂ ನೆಱೆ ಪೇೞ್ವುದುಂ ॥ ೫೪

[ಕೇಳ್ದು ಬೆಱಗಾಗಿ ಋಷಿಯರಂ ಪೊರ್ದಿದನಪ್ಪೊಡೆ ನಮಗಲ್ಲನೆಂದು ಮನದೊಳ್ ಮಲಮಱುಗಿ ॥ ೫೫

ಎರಡಿಲ್ಲದೆ ಜಿನರೂಪಂ
ಧರಿಯಿಸದಿರಲಱಿಯನೋವೊ ಋಷಿಯರ ಕೆಲದೊಳ್ ।
ಪರಧರ್ಮಶ್ರವಣಮನೊ
ಪ್ಪಿರೆ ಕೇಳ್ವಂ ಬಱಿಕೆ ವಿಪ್ರವಂಶಲಲಾಮಂ ॥ ೫೬
ಎಂಬುದುಂ ಸಕಲಬಂಧುಜನಕ್ಕಂ ಯಜ್ಞದತ್ತೆ ಯಿಂತೆಂದಳ್ ॥

ಧರೆಯೊಳಗಗ್ಗಳಮಪ್ಪ ವಿಪ್ರಕುಲಕ್ಕೆ ಭಾವಿಸಿ ನೋೞ್ಪೊಡಂ
ಪಿರಿಯನಗ್ಗದ ವೇದಶಾಸ್ತ್ರಪುರಾಣತರ್ಕಪರಾಯಣಂ
ಸರಸಿಜೋದ್ಭವನನ್ನನಲ್ಲನೆ ಮಿಕ್ಕ ಚಾರುಚರಿತ್ರದೊಳ್
ಮಂಗಳ ಮತ್ತತಿ ಜೈನದೀಕ್ಷೆಯನೊಲ್ಲನಲ್ಲನಮೋಘದಿಂ ॥ ೫೭
ಎಂಬುದುಮಲ್ಲಿ ಕೆಲರ್ವಿವೇಕಿಗಳಿಂತೆಂದರ್ ॥ ೫೮

ವಾರಿಜೋದ್ಭವನನ್ನರಪ್ಪ ಧರಾಮರರ್ಪಲರುಂ ಸದಾ
ಚಾರರಪ್ಪರೆ ನೋಡ ಕೂರ್ತುಜಿನೇಂದ್ರದೀಕ್ಷೆಯನಾಂತರಿ

1 ಜಿನದೀಕ್ಷೆಯುಂ ಕೈಕೊಂಡು ಆಗಮಂಗಳನೋದಿ (ಗ) 2 ಪೋಗಿ (ಗ)

ನ್ನಾರೊ ಬರ್ಪರನಂತಸೌಖ್ಯಮನೀವ ದಿವ್ಯತಪಸ್ಯೆ ವಿ
ಸ್ತಾರದಿಂ ದೊರೆಕೊಂಡೊಡೊಲ್ಲದೆ ಬುದ್ಧಿವಂತರಿಳಾಗ್ರದೊಳ್ ॥ ೬೦

ಎಂದು ಯಜ್ಞದತ್ತೆಯು ಬಂಧುಗಳುಂ ಮಿತ್ರರುಂ ತಂತಮ್ಮ ಕಂಡ ಮಾತುಗಳಂ ನುಡಿದು ಸೋಮದತ್ತನಪ್ಪೊಡೆ ಮಹಾವಿವೇಕಿ ಬ್ರಾಹ್ಮಣಂ ಜಿನದೀಕ್ಷೆಯನೆಂತುಂ ಕೈಕೊಳಲಱಿಯಂ ಪುತ್ತುಂ ಬತ್ತಲೆಯುಮಂ ಬೞಿದಿಲ್ಲೆಂಬೀನಾಣ್ನುಡಿಯುಂಟಪ್ಪುದಱಿಂದಾ ಋಷಿಯುಂ ನಂಬಿಸಿ ಪುಸಿ ಭಕ್ತಿಯುಂ ಮಾಡಿ ಯೇನಾನುಮೊಂದು ಸದ್ವಿದ್ಯೆಯುಂ ಸಾಧಿಸಲ್ವೇಡಿ ನಿಂದಂ ತಡೆಯದೆ ಬರ್ಕುಂ ಬಾರದಿರನೆಂದು ಮನದೊಳ್ ಸಂತೋಷಂ ಬಟ್ಟು ಸುಖದಿಂದಿರ್ಪುದುಂ ॥ ೬೧

ಪೆಱಮುಖಿ ಸಮಸ್ತದುಃಖಂ
ಪಱಿವೊಡೆ ನೆಱೆ ಯಜ್ಞದತ್ತೆ ನವಮಾಸಂಗಳ್ ।
ನೆಱೆಯೆ ಸುರರಾಜನಿಭನಂ
ನೆಱೆ ಪೆತ್ತಳ್ ಸಕಲಜೀವನುತನಂ ಸುತನಂ ॥ ೬೨

ಅಂತು ಪೆತ್ತು ಪುತ್ರೋತ್ಸಾಹಮಂ ಮಾಡಿ ಕೂಸಿಂಗೆ ಶ್ರೀದತ್ತನೆಂದು ಪೆಸರನಿಟ್ಟು ಸುಖಮಿರ್ಪನ್ನೆಗಂ ಸೋಮದತ್ತಂ ಋಷಿಯಾಗಿ ಮಗಧವಿಷಯದ ಸೌಪಾಳಪುರದ ಕೆಲದ ನಾಭಿಗಿರಿಯೆಂಬ ಪರ್ವತದೊಳಿರ್ದನೆಂಬುದಂ ಲೋಗರಿಂ ಕೇಳ್ದು ಮೂಲಶುದ್ಧಿಯಿಂದಱಿದು ಬಸಿರಂ ಪೊಸೆದುಕೊಂಡು ಯಜ್ಞದತ್ತೆಯುಂ ಬಂಧುಗಳುಂ ದುಃಖಿತೆಯರಾಗಿ ಸೋಮದತ್ತನ ತಪನನಾವಾವ ತೆಱದೊಳಾದೊಡಂ ಕಿಡಿಸಿ ಬರ್ಪ ವೆಂಬುದ್ಯೋಗಮನೆತ್ತಿಕೊಂಡು ಛಲಮಂ ಪೂಣ್ದು] [1] ॥ ೬೩

---

[1] ಪುತ್ತುಂ ಬತ್ತಲೆಯುಮಂ ಬೞಿದಿಲ್ಲೆಂಬ ನಾಣ್ಣುಡಿಯುಂಟಪ್ಪುದಱಿಂದಾಋಷಿಯುಮಂ ನಂಬಿಸಿ ಪತಿಭಕ್ತಿಯುಂ ಮಾಡಿ ವಿದ್ಯೆಯನೇನಾನುಮಂ ಕಲಿಯಲ್ಕೆಂದು ನಿಂವನಕ್ಕಂ ಬಾರದಿರಲಱಿಯನೆಂದು ಸಂತೋಷಂ ಬಟ್ಟಿರ್ದನ್ನೆಗಂ ನವಮಾಸಂ ನೆಱೆದು ಯಜ್ಞದತ್ತೆ ಗಂಡುಗೂಸಂ ಪಡೆದು ಕೂಸಿಂಗೆ ಶ್ರೀದತ್ತನೆಂದು ಪೆಸರನಿಟ್ಟು ಸುಖಮಿರ್ದೊಂದುದಿವಸಂ ಸೋಮದತ್ತಂ ಋಷಿಯಾಗಿ ನಾಭಿಗಿರಿಪರ್ವದೊಳಿರ್ದನೆಂಬುದಂ ಕೇಳ್ದು ಮೂಲಶುದ್ಧಿಯಿಂದಱಿದು ನಂಟರೆಲ್ಲರುಂ ಮಸಗಿ ಪುರದಿಂ (ಗ)

ಪೊಱಮಟ್ಟು ಕೋಪದಿಂ ಮೆ
ಯ್ಯಱಿಯದೆ ತನ್ಮುನಿಯ ತಪಮನೇಗೆಯ್ದುಂ ಪೊ |
ಚ ಱುಗಿಡಿಸಿ ತರ್ಪೆವೆಂಬೊಂ
ದಱಿಕೆಯಿನವರೆಯ್ದೆ ಮಂದರಾಗಿರಿವರಮಂ ॥ ೬೪

[ಅಂತೆಯ್ದೆ ವಂದು ನಾಭಿಗಿರಿಪರ್ವತದೊಳಿರ್ದ ಮಂದರಾದ್ರಿ ಯಂತಚಳಿತನಾಗಿ ನಿಂದಿರ್ದ ಸೋಮದತ್ತಮುನಿಯುಂ ಕಂಡು ಸಾರೆ ವಂದು ನಂಟರೆಲ್ಲಮಿಂತೆಂದರ್ ॥ ೬೫

ಪಡೆಯಬಾರದ ದಿವ್ಯಮಪ್ಪ ಧರಾಮರತ್ವಮನಂಮ ನೀಂ
ಪಡೆದು ಮತ್ತದನೊಲ್ಲದಿಲ್ಲಿಗೆವಂದು ಗಾವಿಲನಾಗಿ ಚಿಃ
ಕಿಡಿಸಿ ಚಾರುಚರಿತ್ರಮಂ ತೊಱೆದೆಮ್ಮನಾಱಡಿಗೊಂಡು ಕೈ
ಮಡಗದೇಳದರಂತೆ ಘಮ್ಮನೆ ಪೊರ್ದಿದೈ ಜಿನದೀಕ್ಷೆಯಂ] ॥ ೬೬

ಸುಬ್ರಾಹ್ಮಣನಾಗಿರ್ದುಂ
ಸುಬ್ರಾಹ್ಮಣರಿಂದೆ ಪೊಗೞೆಪಟ್ಟುಂ ಮತ್ತಂ |
ಸುಬ್ರಾಹ್ಮಣತ್ವಮಂ ನೀಂ
ನಿರ್ಬ್ರಹ್ಮಂ ಕಿಡಿಸಿ ಸವಣನಾದೈ ಮರುಳೇ ॥ ೬೭

[ನಿನ್ನೋದಿನಿಮಿಷರೋದುಗ
ಳುನ್ನತಮೆಂದಿವರ್ಗೆ ಸೋಲ್ತು ಪೊರ್ದಿದೆಯೋ ಮೋಣ |
ನಿನ್ನ ಕುಲಕ್ಕಿವರನ್ವಯ
ಮಿನ್ನಧಿಕಂ ದಿವ್ಯಮೆಂದು ಮೋಣ್ಪೊರ್ದಿದೆಯೋ ॥ ೬೮

ಕೆಮ್ಮನೆ ಸವಣರ ಗೋರಿಗೆ
ನೀಂ ಮತಿಗೆಟ್ಟಱಿತವಿಲ್ಲದರಿವರೊಳನಿಸುಂ |
ಸಮ್ಮತವಿಲ್ಲದೆ ಮರುಳಂ
ತಮ್ಮ ಪರತ್ರಿಯನೆ ಕಿಡಿಸಿಕೊಂಡೈ ಕಂದಾ ॥ ೬೯

ಮತ್ತಂ ಜಗದೊಳಿದಿಂಗಂ ನಿನ್ನನ್ನರಿಲ್ಲ; ಸಕಳಶಾಸ್ತ್ರಪಾರಗನ್ನೆ ಸಮಸ್ತಕಳಾಧರನ್ನೆ ನೃಪಪೂಜಿತನ್ನೆ ಧರಾಮರಾರಾಧ್ಯನ್ನೆ ನೀತಿಪರಿಣತನ್ನೆ ಶ್ರುತಿಸ್ಮೃತಿಗಳೊಳತಿಜಾಣನ್ನೆ ಕೆಮ್ಮನೆಪ್ಪೊಡಂ ವಿಚಾರಿಸದವಿಚಾರಿಯಾಗಿ ನೀರುಮಂ ನೇಣುಮಂ ತೊಱೆದು ಕೂಪಮಂ ನೀರೊಳಗರ್ದಿನಂಟರಿಷ್ಟರಿಂದಂ ಛಿಃ ಎನಿಸಿ ಪರತ್ರೆಯುಂ ಕಿಡಿಸಿ ವೇದಾಭಿಪ್ರಾಯಮನುದಾಸೀನಂಮಾಡಿ ಜಿನರೂಪಧಾರಿಯಾದ್ದೈ ಯೆಂದು ನಂಟರೆಲ್ಲಂ ನುಡಿದು ಕಾಲಮೇಲೆ ಬಿದ್ದಿಂತೆಂದರ್][1] ॥ ೭೦

ಬಿಡುವುದು ನೀನೀತಪಮಂ
ಕಿಡಿಸದೆ ಸದ್ಬ್ರಾಹ್ಮಣತ್ವಮಂ ಪೆಱತೊಂದಂ ।
ನುಡಿಯದೆ ತಡೆಯದೆ ನೀನೆ
ನ್ನೊಡನೆಯ್ದುದು ಪುರವರಕ್ಕೆ ವಿಪ್ರಕುಲಾರ್ಕ ॥ ೭೧

[ಮುನ್ನಮೇನೆಂದಱಿಯದೆ ಸವಣರ ಗೋಳಗೊಳಗಾಗಿ ಜಿನನ ರೂಪಂ ಧರಿಯಿಸಿದ್ದೈ; ನೀನೆಮ್ಮ ಬಂಧುಗಳುಂ ಬ್ರಾಹ್ಮಣರುಂ ಕೈಕೊಳರೆಂದು ಲಜ್ಜಿತನಾಗಿ ಬಡತ್ವದಿಂದಿವೇಡಿಲ್ಲಿಗೆ ತಕ್ಕ ಪ್ರಾಯಶ್ಚಿತ್ತಮಂ ಹೋಮಾದಿಗಳಂ ಮಾಡಿಕೊಳಲಪ್ಪುದು, ನೀಂ ಮಹಾಶ್ರೀಯುಮಂ ವೃತ್ತಿಯುಮಂ ಪೆಂಡಿರ್ ಮಕ್ಕಳುಮಂ ಬಂಧುಗಳುಮಂ ಕಿಡಿಸದೆ ಬನ್ನಿಮೆನೆ ಸೋಮದತ್ತಋಷಿ ತನ್ನಂತರಂಗದೊಳಿಂತೆಂದಂ ॥ ೭೮

ಜಿನವಚನಾಮೃತಮಂ ಬೆ
ಳ್ನನದಿಂ ಮಿಥ್ಯಾತ್ವದೊದವಿನಿಂದಿನ್ನವರಂ ।
ಮನದೊಳ್ ಭಾವಿಸಲೊಲ್ಲದೆ
ಕುನಯಾಭಿಪ್ರಾಯದೊಂದುರುಚಿಯಿಂ ಕೆಟ್ಟಿಂ] ॥ ೭೯

ಜಿನವಚನಮುಮಂ ಮತ್ತಿನ
ಕುನಯಂಗಳುಮಂ ಸಮಾನಮೆಂಬುದೆ ಕೇಳ ।

---

1 ಮಂದರದಂತಚಲಿತಧೈರ್ಯನಾಗಿರ್ದ ವಾತ್ಸಲ್ಯರತ್ನಾಕರನ ಸಾರ್ಗ ಮಂಧು ಸುತ್ತಿ ಮುತ್ತಿ ನಿಂದು (ಗ)

ಕನ್ನ ಬೆಳಗಿನೊಳ್ ಸಮಾನಮಿ
ದೆನಲಕ್ಕುಮೆ ಪಕ್ಷದಿಂದೆ ಮಿಂಬುಳುಗಳುಮಂ ॥ ೨೪

[ತನಗಿಲ್ಲದ ಬತಸೂಳ್ ಬೊಜಂಗನ ಸಾರೆ ಪೆಂಪಿಂಗಸಗವುಂ ಬಯ್ಡುಳ್ಕಂಬಂತೆ ಜಿನಾಗಮದುಡುಗೆಗೆ ಮೆಯ್ಯಾಱದೆ ಕುಬುದಿಗಳುಂ ಸೋಂಬರುಂ ಸಪ್ತವ್ಯಸನಾಪೇಕ್ಷಿತರುಂ ಪರಸ್ತ್ರೀಯರುಂ ಹಿಂಸಾನಂದರುಂ ಧೂರ್ತಾಳಾಪರುಂ ಜಿನಧರ್ಮಂ ಪೊಲ್ಲನೆಂಬರವು ಪ್ರಮಾಣಮಲ್ಲದು ॥ ೨೫

ಕೊಲಲಾಗೆಂಬ ಜಡತ್ವದಿಂ ಪುಸಿಯಲಾಗಿನ್ನೆಂಬ ಚಾಪಲ್ಯದಿಂ
ಕಳಲಾಗೆಂಬ ಪರಾಂಗನಾವ್ಯಸನಮಂ ಪೋಣೆಂಬ ಲೋಭತ್ವದಿಂ
ದಿಳೆಯೊಳ್ ಸಂದ ಪರಿಗ್ರಹಕ್ಕೆಱಗಲಿನ್ನಾಗೆಂಬ ಜೈನೋಕ್ತಿಗಳ್
ಸಲೆ ಲೇಸಲ್ಲದೆ ಪೊಲ್ಲನೇ ಕುಮತಿಗಳ್ ತಾವೆಂತಿವಂ ದೂಱುವರ್ ॥ ೨೬

ಅಗ್ಗಾಯತಿಯಪ್ಪ ಸೂಳೆಗಂ ಕುಡಲಿಲ್ಲದೆ ಬತಬೊಜಂಗಂ ಪಱಿದು ಸಾಮಾನ್ಯದ ಭೇದವಾರಿಗಳಂ ಪೊಗಱ್ವಂತೆ ಮಹಾಪರೀಷಹದೊಳ್ಕೂಡಿ ಸುವ್ರತಂಗಳನೊಡೆಯು ಜೈನಮಾರ್ಗಮುಮಂ ದುಷ್ಟರಪ್ಪವರ್ ಕೈಕೊಳಲಾಱದೆ ಸೆಡೆದು ಪಱಿದು ತಮ್ಮಿಚ್ಛೆಗೆ ಬರ್ಪ ಅಧರ್ಮಂಗಳಂ ಮಹಾಧರ್ಮವೆಂದು ಕೈಕೊಂಡು ಪೊಗಱ್ವರಿದು ಚೋದ್ಯಮಲ್ಲೆಂದುಸಿರದಿರ್ಪುದುಂ ಯಜ್ಞದತ್ತೆ ಬಂದು ಕಾಲನೋಲೆ ಬಿರ್ದಿಂತೆಂದಳ್ [1] ॥ ೨೭

---

1 ಈ ಸಂದರ್ಭದಲ್ಲಿ (ಗ) ಪುಸ್ತಕದಲ್ಲಿ ಮುಂದಿನ ಭಾಗವು ಹೆಚ್ಚಾಗಿದೆ:—
ಸಿರಿಪಿಂದು ಸಿರಿಗೆ ತಕ್ಕಂತಿರಲಿನುಂ ಕೂರ್ಪನೆನ್ನ ಕೂರ್ಮೆಗೆ ತಕ್ಕಂ ।
ತಿರೆ ನಿಮಗಮೆನಗಮೀಗಳ್ ತರುಣತ್ವಂ ಪುರುಳೆ ನಿನ್ನೊಳವಧಾರಿಸಿತಂ ॥ ೧
ಎನಗಂ ನನಗಂ ಮೊದಲೀತನೆ ಪುತ್ರಂ ಪ್ರಾಯಮುಮುಪ್ಪೊಡೆಳೆದಿಂನುಂ ಕೇಂ ।
ಮನೆ ಕಾಮಸುಖಮನಳಿಗೇಕೆ ನಿತಾಂತಂ ಬಂದ ಸುಖಮನೊಲೆಯೊಳಗಿಡುವೈ ॥ ೨
ಪೆಂಡಿರ ಕೂರ್ಮೆಯಿನಾವಂ ಕಂಡುಂ ಪಡೆಯಲ್ಕೆ ಬಾರದೆನ್ನೊಲವಂ ನೀಂ ।
ಕಂಡುಂ ಭೋಗಿಸಲೊಲ್ಲದೆ ದಂಡಿಸುವೈ ತಪದೊಳಗ್ಗರಾರ್ ನಿನ್ನಿಂದಂ ॥ ೩
ಬಡವರ್ ಮೊದಲಾಗಿರೆ ಕೈವಿಡಿದಾಕೆಯನಾಪತೆಱದೊಳಂ ಪೊರೆವರ್ ಪೊ ।
ನ್ನೊಡೆಯನೆಯಾಗಿಯು ನೀ ಕೈವಿಡಿದೆನ್ನಂ ಬಿಟ್ಟು ಪೋಪುದಾವುದು ಧರ್ಮಂ ॥ ೪

ಎನ್ನಂ ಕಿಡಿಸದೆ ಪಿರಿದ
ಪ್ಪುನ್ನತಿಯುಂ ಕಿಡಿಸದಿನ್ನುಮೇನಾದುದು ಪಿ ।
ಪ್ರೋನ್ನತ ಬಿಸುಡೀತಪಮಂ
ನಿನ್ನಂ ಪೆಱರಿಂದೆ ನಗಿಸಿಕೊಳ್ಳದೆ ಬೇಗಂ ॥ ೨೮

ನೀನಪ್ಪೊಡೆ ವಿಪ್ರಸಮೂ
ಹಾನತಸ್ಯ ವಿಪ್ರವಂಶಶೇಖರನ್ಯೆ ಪಿ ।
ದ್ಯಾನಿಧಿಯ್ಯೆ ನಿನಗಲ್ಲದ
ಹೀನತೆಯುಂ ಮಾಡಿ ನಗಿಸಿದ್ಯೆ ಪರರಿಂದಂ ॥ ೨೯

ಆರುಮಿಲ್ಲದ ದೇಸಿಗರಂತೆ ಕಾಡಂ ಪೊಕ್ಕು, ಕೂಟ್ಟಿಡೆಯದ ತಿರಿಕರಂತೆ ಗಿಡಿಗಿಡಿಜಂತ್ರಮಾಗಿ, ತರುವಲಿಗಳಂತೆ ಸಿರಿಯಂ ಬಿಟ್ಟು ಪಂದಿಯಂತೆ ಕೆಸಱನೊಟ್ಟಿಕೊಂಡು, ಬೆಂದ ಕಗ್ಗೊರಡಿನಂತೆ ಬಿಸಿಲೊಳ್ ನಿಂದು, ಕಡಂಬಡೆಯದ ಬಡವನಂತೆ ಪಸಿದು ಪಟ್ಟು, ಬಱಿದಿದೇ ಕೊಡಲಂ ತಪಿಸಿ ಗಾವಿಲನಾದಪ್ಯೆಯೆಂದು ನಾನಾಪ್ರಕಾರದಿಂ ತನುಮಂ ಸಿರಿಯುಮಂ ಸಂಪತ್ತುಮಂ ಭೋಗಮುಮಂ ತೋಱಿ ನುಡಿಯಿಸಲಾ ಅದೆ ಯಜ್ಞದತ್ತೆ ಮೆಲ್ಲನೊಳಸೋದರ್ಸಿದಿರ್ದುದುಂ ಸೋಮದತ್ತಋಷಿ ತನ್ನೊಳಿಂತೆಂದಂ :— ಓಲಗಂ ಲೇಸು ಕಾಳಗಮರಿದೆಂಬಂತೆ, ಮದುವೆ ಲೇಸು ಪೊರೆವುದರಿದೆಂಬಂತೆ, ಮಾನ್ಯಂ ಲೇಸು ಮುಂದಣ ಮಾನ್ಯದೆಱ ಅರಿಯದೆಂಬಂತೆ, ಪಾದರಂ ಲೇಸು ಸಾವುದರಿದೆಂಬಂತೆ, ಪೂಣ್ಕೆ ಲೇಸು

ಅರಸನ ಕೂರ್ಮೆ ಪೆಂಡಿರೊಲವಗ್ಗದ ಲಕ್ಷ್ಮಿ ವಿಶೇಷವಿದ್ಯೆ ನಂ
ಟರ ಬಲಮೊಪ್ಪುವುನ್ನತಿಮಹಾಪರಿದೆಯಿದ್ದದಜನ್ಮನಾ ನಿರಾಂ
ತರಸುಖಮೆಂಬಿವಂ ಪಡೆದು ಮೆಚ್ಚಿದ ಲೀಲೆಗಳಿಂ ಸವಿಸ್ತರಂ
ಬರಿಯಿಸಲೊಲ್ಲದೀಸವಣಮಾರಿಗೆ ಬಿಳ್ಳದು ಸೌಖ್ಯ ಹೇತುವೇ ॥ ೫

ಎಂಬುದು ಯಜ್ಞದತ್ತೆಯ ಮಾತಿಂಗೆ ಸೋಮದತ್ತ ಮುನಿಪುಂಗವಂ ತನ್ನಂ ತರ್ಗತದೊಳಿಂತೆಂದಂ ॥ ೬

ಮೇಲಣ ಸುಖದುಃಖಂಗಳ ನಾಳೋಚಿಸಿ ನೋಡಲೊಲ್ಲರಿಲ್ಲಿಯ ಸುಖಮಂ ।
ಪಾಳಿಸಲೆಮಱುಗುತಿರ್ಪರ್ಬೆಳ್ಳಲ್ಲದೆ ಜವನದಾಳಿಗಿದು ಬಲ್ಲಿತ್ತೇ ॥ ೭

ಓಲಗಂ ಲೇಸು ...........

ಮಾಟವರಿದೆಂಬಂತೆ, ಬೇಟಂ ಲೇಸು ಕೂಡುವುದರಿದೆಂಬಂತೆ, [ತೋಟ ಲೇಸು ದಂಡವರಿದೆಂಬಂತೆ, ಬೀಯಂ ಲೇಸು ಪಡೆವುದರಿದೆಂಬಂತೆ, ಬಲ್ಪು ಲೇಸು ಗೆಲವರಿದೆಂಬಂತೆ, ಬಿಗುಪು ಲೇಸು ಕಳನವೋಗರಿದೆಂಬಂತೆ, ಆಳ್ವು ಲೇಸು ಶೂಲವೇರಿದೆಂಬಂತೆ, ತೊನೆಪಂ ಲೇಸು ಸಖಿಗೆಯರಿದೆಂಬಂತೆ,] ಕೃಷಿ ಲೇಸು ತೆಱುವುದರಿದೆಂಬಂತೆ, ಸೂಜಿ ಲೇಸು ಪೊಜಯರಿದೆಂಬಂತೆ, ಪ್ರತಾಪಂ ಲೇಸು ನಿತ್ತರಿಸಲರಿದೆಂಬಂತೆ, [ಕೊಲೆ ಲೇಸು ಕಾವುದರಿದೆಂಬಂತೆ,] ಸಂಸಾರದ ಸುಖಂ ಲೇಸು ವೇಗಣ ನರಕ ದುಃಖಂಗಳರಿಯವು ಅದುಕಾರಣದಿಂ [1] ॥ ೮೦

ಜಿನಪದದ್ವಯಸೇವೆಯಿಂ ಭುವನತ್ರಯಾಧಿಪತಿತ್ವಮುಂ
ತನಗೆ ತಾನೆ ಮಹೋತ್ಸವಂಬೆರಸೊಪ್ಪದಿಂ ದೊರೆಕೊಳ್ಗುಮೊ
ಯ್ಯನೆ ಮನೋಮುದದಿಂದಮೆಂದೊಡೆ ದೇವಲೋಕಪತಿತ್ವಮುಂ
ಮನುಜರಾಜ್ಯವಿಭೂತಿಯುಂ ದೊರೆಕೊಳ್ವುದಾವುದು ವಿಸ್ಮಯಂ [2] ॥ ೮೧

ತನಗೆ ಹಿತಮಪ್ಪುದಂ ಪೇ
ೞ್ವನ ಮಾತಂ ಚಿತ್ತಮಿತ್ತು ನೆಱೆ ಕೇಳ್ವುದು ಕೆಂ ।
ಮನೆ ನರಕಹೇತುವಂ ನುಡಿ
ವನ ಮಾತಂ ಕೇಳದುಸಿರದಿರ್ಪುದು ಚದುರಂ ॥ ೮೨

---

1 ಅದು ಕಾರಣದಿಂದಳಿಸುಖಕ್ಕೆ ಬಿಗದೆಂದು ಭಾವಿಸಿ ಮೋನದಿನಿರೆ ಯಜ್ಞಾದತ್ತ ಬೇಸತ್ತಗಲಿಪೋಪುದುಂ ತಾಯುಂ ತಂದೆಯುಂ ಮಾವನುಮತ್ತೆಯುಂ ಬಂದಿಂತೆಂದರ್ (ಗ)

2 ತಪಂಬಟ್ಟೆನೆನ್ನಂ ಸಬ್ರಾಹ್ಮಣರ್ಕೈಕೊಳ್ಳರೆಂದು ಲಜ್ಜಿತನಾಗಿರಲ್ವೇಡ ಪ್ರಾಯಶ್ಚಿತ್ತದಿಂ ಹೋಮಾದಿಗಳಿಂ ಮಾಡಿಕೊಳಲಪ್ಪುದೆಂಬುದುಂ ಸೋಮದತ್ತಂ ತನ್ನೊಳಿಂತೆಂದಂ :—
ಕಾಯಮುಮಂ ಧನಮುಮನಿನಿಸಾಯಾಸಂಬಡದೆ ತಪದೊಳಂ ದಾನದೊಳಂ ।
ಬಾಯಳಿಯದೆ ತವಿಪುದು ತಾಂ ಪ್ರಾಯಶ್ಚಿತ್ತಂ ವಿವೇಕವುಳ್ಳರ ಚಿತ್ತಂ ॥
ಮಿಗಿಲೆನಿಸುವ ತಪವೆಂಬಗ್ನಿಗೆ ತನ್ನೊಡಲೆಂಬ ದಿವ್ಯಹವಿಯಂ ಕುಡುವಾ ।
ರ್ಪುಗಿಡದೆ ಹೋಮಸಜ್ಜನರಗಲದೆ ಕೈಕೊಂಡು ನಲಿವ ಕೀರ್ತಿಯ ದಾಮಂ (ಗ)

ಮುತ್ತು ಸಮುದ್ರದೊಳ್ ಸೀರ್ಮುಗಿಲೊಳ್ ಮಣಿ ಭೂಮಿಯೊಳ್ ತೈಲಮೆಳ್ಳೊಳ್ ತುಪ್ಪಂ ಪಾಲೊಳ್ ಮಕ್ಕಳ್ವನಿತೆಯರೊಳ್ ಪಾಲ್ ಕೆಚ್ಚಲೊಳ್ ತಣಿಪು ಊಟದೊಳ್ ಸೀರೆ ನೂಲೊಳ್ ಪಗಲ್ ಸೂರ್ಯನೊಳ್ ತಣ್ಪು ಗಾಳಿಯೊಳ್ ಬೆಂಕಿ ಕಿಚ್ಚಿನೊಳ್ ಕಾಣ್ಕೆ ಕಣ್ಣೊಳ್ ಸಿರಿ ಪೊನ್ನೊಳ್ ಬಲಂ ಜವ್ವನದೊಳ್ ಪಡಪು ಸೌಭಾಗ್ಯದೊಳ್ ರಾಗಂ ಸಂತೋಷದೊಳ್ ಮದುವೆ ಕೊಡಗೂಸಿನೊಳ್ ಪುಟ್ಟುವಂತೆ ಸ್ವರ್ಗಮೋಕ್ಷಂಗಳುಂ ಕುಡುವ ಗುಣಂಗಳುಂ ಸದಾಚಾರಮುಂ ಮಹಾವ್ರತಂಗಳುಂ ಜಿನಮತದೊಳ್ ಪುಟ್ಟುಗುಮಲ್ಲದೆ ಪೆಱವು ಕುಮತಂಗಳೊಳ್ ಪುಟ್ಟವು [ಅದಱಿಂದಜ್ಞಾನಿಗಳ ಮಾತನಾಲಿಸಲಾಗದು ॥ ೯೩

ಎನಿತೊಳ್ಳಿತಾದೊಡಂ ಕಾ
ಜಿನ ಮಣಿಗಳ್ ಪೊನ್ನ ತೊಡವನಿಱುಕೆಯ್ಗುಮ ತಾ ।
ನೆನಿತೊಳ್ಳಿತಾದೊಡಂ ಮ
ತ್ತಿನ ನುಡಿಗಳ್ ಜೈನನುಡಿಗಳಂ ಪೋಲ್ತಪುವೇ] ॥ ೯೪

ಜಿನವಚನಮನಱಿಯದೆ ಕೆ
ಮ್ಮನೆ ಪೆಱವರ್ದುರ್ಜನದುರಾಚಾರರ್ ಸ ।
ಜ್ಜನವಚನವನಱಿವೊಡೆ ಮೇ
ದಿನಿಯೊಳ್ ಸನ್ಮತಿಗಳಪ್ಪವರ್ಪಱದಪರೇ ॥ ೯೫

ಉಱುವ ಜಿನಮತಮನೇನಂ
ದಱಿಯದೆ ಮುಂ ಕೆಟ್ಟ ಕೇಡೆ ಸಾಲ್ಗುಂ ಮತ್ತಿ ।
ನ್ನಱಿದು ಮತಿಗೆಟ್ಟು ಬಿಟ್ಟೊಡೆ
ಮಱುಕಂ ಕೈಸಾರ್ಗುಮುಗ್ರಸಂಸೃತಿವನದೊಳ್ ॥ ೯೬
ಎಂದುಸಿರದಿರ್ಪುದುಂ [ನಂಟರೆಲ್ಲಂ] ಮುನಿದು ॥ ೯೭

ನಡೆ ನಡೆ ಡೊಂಬು ವೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟಿ ಬೈದು ಬಿಸುಸುಯ್ದಲೆ ಗಾಂಪ ಸಮಸ್ತನಂಟರಂ

ಮಡದಿಯುನಿಷ್ಠುರಂ ಕಿಡಿಸಿ ದುರ್ಗತಿವ್ರೋಗದೆ ಬರ್ಪುದೆಂದು ನಿ
ಗ್ಗದಿತನದಿಂ ಸಬಾಂಧವಜನಂ ತೆಗೆದಪ್ಪಿದರಾಮುನೀಂದ್ರನಂ ॥ ೮೮

[ಅಂತು ನಿಷ್ಠುರಕೋಪದಿಂ ಕೈಯುಮಂ ಕಾಲುಮಂ ನಡುವುಮಂ ಪತ್ತಿ ತೆಗೆವುದುಂ ಸೋಮದತ್ತಮುನಿನಾಥನಿಂತೆಂದು ಮನದೊಳ್ ಭಾವಿಸಿದಂ ॥ ೮೯

ಗುರುದತ್ತಮುನೀಶ್ವರನಂ
ಕರಮಲ್ಲದೆ ಮುನಿದು ಸೂಡಿ ಪೊತ್ತಿಸಿ ಸುಟ್ಟಂ ।
ಭರದಿಂ ಮಳಮುಖನೆಂದೊಡೆ
ಕರಮುಗ್ರಮರ್ಗಳಸುಬಂದರೇನಂ ಮಾಡರ್ ॥ ೯೦

ಬಂಡಿಯುಂ ತೀವಿದ ಜೋಳವುಂ ತೆಗೆವ ಕೋಣಂ ಪೊರಂ ತೀವಿದ ಧಾನ್ಯಮುಂ ತೆಗೆಯಲಾಱದೆ ? ನರಕದೊಳನಿತಾನುಂ ಕಾಲಂ ನವೆವೆಂತಪ್ಪ ಮಹಾಪಾಪಮನುಪಾರ್ಜಿಸುವಂತಪ್ಪ ಪಾಪಕರೆನಗುಪಸರ್ಗಂ ಮಾಡಿದರೆಂಬುದಿದಾವವಿಸ್ಮಯುಮೆಂದು ಮನದೊಳ್ ಮುನ್ನಂ ಮಹೋಪಸರ್ಗಂಗಳಂ ಸೈರಿಸಿ ದಿವ್ಯಸುಖಂಗಳಂ ಪಡೆದ ಮಹಾಪುರುಷರ ಕಥೆಗಳಂ ಚಿಂತಿಸುತ್ತುಂ ಮನುಷ್ಯೋಪಸರ್ಗಮಿದು ಪಿಂಗುವಿನಮಾಹಾರ ಶರೀರನಿವೃತ್ತಿಯೆಂದಿರ್ದನನ್ನೆಗಂ ಸಗೋತ್ರರೆಲ್ಲಂ ತೆಗೆದು ತೆಗೆಯಲಾಱದೆ ಬೇಸತ್ತು ಪಿಂಗಿ ಸೋಮದತ್ತಮುನಿಯುಂ ಬಳಸಿಕೊಂಡಿರ್ದಂತೆಂದರ್]॥

ಎಲೆ ಪಾತಕ ನೀನೀಕುಲ
ಲಲನೆಯುರಂ ಜ್ಯೇಷ್ಠಸುತನುಮಂ ಬಿಸುಟು ತಪ ।
ಕ್ಕೆಳಸಿರ್ದೊಡಮೀತಪದೊಳ್
ಫಲಮುಂಟೇ ಪುಣ್ಯಮುಂಟೆ ಪೇೞ್ ಗತಿಯುಂಟೇ ॥ ೯೧

[ಬತ್ತಲಿಗರ ಮಾತಂ ಕೇ
ಳ್ದುತ್ತಮಮೆನಿಸಿರ್ದ ಕುಲಮನಳಿದೈ ನಿನಗಿ ।
ನ್ನೆತ್ತಣ ಪರತ್ರ ನೀನುಂ
ಸತ್ತೊಡಮೀಕಷ್ಟವೃತ್ತಿಯುಂ ನೀಗಿದಪಾ ॥ ೯೨

ಎಂದು ಬಾಯ್ ವಂದಂತೆ ನುಡಿವುದುಂ] ವಾತ್ಸಲ್ಯರತ್ನಾಕರಂ ಆವರ ಮಾತಿಂಗೆ ನಕ್ಕು ಕೇಳ ಚಿತ್ರದಂತೆ, ಬಸುಱಿಯ ಪಣ್ಣಂತೆ, ಕತ್ತಿಯ ಲಧ್ದಿಯಂತೆ, [ಕಳ್ಳನ ನನ್ನಿಯಂತೆ,] ಪಱುಣಿಯ [1] ಶೋಭೆಯಂತೆ, ಪಾವುಮೆಕ್ಕೆಯ ಕಂಪಿನಂತೆ, ತಿಪ್ಪೆಯ ನೀರಂತೆ, ಬಡವನ ಮಹಿಮೆಯಂತೆ, ಪಗರಣದಾನೆಯಂತೆ, ರಂಗವಲಿಯ ಪಿಟ್ಟನಂತೆ, ಪಂದೆಯ ಮಾತಿನಂತೆ, ಡೊಂಬರ ತೋಟಯಂತೆ, ದೂರದ ಬೆಟ್ಟನಂತೆ, ಮಾಟದ ಮುಡಿಯಂತೆ, ಕಟ್ಟದ ಪಲ್ಲಂತೆ, ಪೀಲಿಯ ಕಣ್ಣಂತೆ, ಬಟ್ಟೆಯ ಪುಲ್ಲಂತೆ, ತಾಳಕಯ್ಯಂತೆ, [2] ಮರುಳ ಕೋಡಿನಂತೆ, ಪೊಱಗಣ್ಗೆ ರಂಜಿಸುವ ಬಹಿರಾಳಾಪದ ಡೊಂಬನೊಲ್ಲದೆ, ಮಾಸಿದ ಹೇಮಕುಂಭದಂತೆ, ಸಾಧಕನ ಮರುಳಾಟದಂತೆ, ವೀರನಂಜಮೆಯಂತೆ, ತೆಂಗಿನ ಕಾಯಂತೆ, ಕೇದಗೆಯ ಪುಷ್ಪದಂತೆ, ಬಾಲೆಯ ಪಣ್ಣಂತೆ, ಕರ್ಪೂರಗೊಲ್ಲಮೆಯಂತೆ, ನಿದಿಗಂಡ ಬಡವನಂತೆ, ಬೂದಿ ಪತ್ತಿದ ಕೆಂಡದಂತೆ, ಮಲವೇಱಿದ ರಕ್ತದಂತೆ, ಸೊಬಗಿಯ ಗಾಂಪಿನಂತೆ, ನುಡಿಜಾಣನ ಮೋನದಂತೆ, ಬಲ್ಲಿದನ ನೋಟದಂತೆ, ಸಮುದ್ರದ ಕಯ್ಪಿಯಂತೆ, ತೋಂಟದ ಬೇಲಿಯಂತೆ, ತುಪ್ಪದ ಕೊಡದಂತೆ, ನಿಶ್ಚಯ ಕ್ಕೊಳಗೆ ಕಡುಲೇಸಪ್ಪ ಸನ್ಮಾರ್ಗಮಂ ಬಿಟ್ಟು ನರಕದೊಳ್ ತಿಱ್ಱನ ತಿರಿವಂತಪ್ಪ ಪಾಪಮಂ ನೆರೆಪಿದ ಮಾನಿಸರಂ ಕೈಕೊಳರೆಂದು [ಜಿನ ಮಾರ್ಗಮಂ ಬಿಡುವುದು ಕಜ್ಜಮಲ್ಲದೆಂದು] [3] ಜಿನಾಗಮೋಕ್ತಿಗಳಂ ಭಾವಿಸುತಿರ್ದನನ್ನೆಗಂ ಬಂಧುಗಳುಂ ಯಜ್ಞದತ್ತೆಯುಂ ಮಸಗಿ ಕೂಸಂ ಸೋಮದತ್ತಮುನಿಯ ಮುಂದಿಕ್ಕಿ ಬ್ರಹ್ಮೇತಿಯಾಗೆ ಪೊಱಲೊಳಗೆ ಪುಯ್ಯಲಿಟ್ಟು ಬಂದು ಸಾವೆವೆಂದು ಪೂಣ್ದು ಪರ್ವತದಿಂದಿಳಿದು ಸೌಪಾಳಪುರಕ್ಕೆ ಪೋದರಿತ್ತಲ್ ಬಾಲಕಂ ಸೋಮದತ್ತಮುನಿಯ ಪಾದಮಂ ಮೋಕ್ಷಬಟ್ಟೆಯಂ ನೋಡುವಂತೆ ಮುನಿಯ ಮೊಗಮಂ

---

1 ಪುರುಣಿಯ (ಕ) ಪರುಣಿಯ (ಬ) 2 ತಾಳ ಕಾಯಂತೆ (ಕ, ಬ,)

3 ಎಂದು ಮುಂದರದಂತಿರ್ಪುದುಂ, ಎಲ್ಲರುಂ ಬೇಸತ್ತು ಕೂಸನವರ ಮುಂದಿಕ್ಕಿ ನಿನಗೆ ಬ್ರಹ್ಮೇತಿಯಾಗಿ ಪುರದೊಳಗೆ ಪುಯ್ಯಲಿಟ್ಟು ಬಂದು ಸತ್ತಪೆನೆಂದು ನಾಭಿಗಿರಿಯ ಕೆಳಗಿರ್ದ ಸಿಂಹಪುರಕ್ಕೆ ಪೋದರನ್ನೆಗಮಿತ್ತಲ್ (ಗ)

ನೋಡುತ್ತುಂ ಮುಂದಪ್ಪ ವಿದ್ಯಾಧರರಾಜ್ಯಲಕ್ಷ್ಮಿಯ ಬರವಿಂಗೆ ರಾಗಿಸಿ ನಗುವಂತೆ ನಗುತಿರ್ದನನ್ನೆಗಂ ॥ ೯೪

[ನೆಗೞ್ದೀಭರತಕ್ಷೇತ್ರದ
ಸೊಗಯಿಪ ವಿಜಯಾರ್ಧಗಿರಿಯ ತೆಂಕಣದೆಸೆಯೊಳ್ ।
ಮಿಗಿಲೆನಿಪುದು ನಾನಾಶೋ
ಭೆಗಳಿಂದಂ ನೆಗೞ್ದ ದಕ್ಷಿಣಶ್ರೇಣಿ ಕರಂ ॥ ೯೫

ಆ ದಕ್ಷಿಣಶ್ರೇಣಿಯೊಳಮರಾವತಿಯೆಂಬುದು ಪುರಮುಂಟಾ ಪುರಮನಾಳ್ವಂ ವಿದ್ಯಾಧರರಾಜಂ ಶಂಭುವೆಂಬನಾತನ ಮಹಾದೇವಿ ಮಂಗಳೆಯೆಂಬಳಾಯಿರ್ವರ್ಗಂ ॥ ೯೬

ಸ್ಮರಸನ್ನಿಭನೆನಿಸುವ ಭಾ
ಸ್ಕರದೇವನುಮಮರರಾಜನಿಭನೆನಿಸುವ ಮಂ ।
ದರರಾಜದೇವನೆಂಬಿ
ರ್ವರುಂ ಸುವಿಕ್ರಮರುದಾತ್ತರಗ್ಗದ ತನಯರ್ ॥ ೯೭

ಸಿರಿಗಂ ಭೂಪತಿಗಂ ಸೌಂ
ದರರೂಪಿಂಗೀಕೆ ಪಿರಿಯಳೆನಿಸುವ ರೂಪಿಂ ।
ಕರಮೊಪ್ಪುವಳಂಬುಜಮುಖಿ
ತರಳಾಕ್ಷಿ ಸುದೇವಿಯೆಂಬಳವರಿಂ ಕಿಱಿಯಳ್ ॥ ೯೮

ಅಂತವರ್ಬೆರಸು ಶಂಭುವಿಯಚ್ಚರರಾಜಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಂ ಸುದೇವಿಕುಮಾರಿಯಂ ಕನಕಪುರಾಧೀಶ್ವರನಪ್ಪ ವಿಮಳವಾಹನನೆಂಬ ಭೂಚರಮಹೀವಲ್ಲಭಂಗೆ ಕೊಟ್ಟು ಪಿರಿದಪ್ಪುತ್ಸಾಹಂಬೆರಸು ಪಲಕಾಲಂ ವಿದ್ಯಾಧರಶ್ರೀಯುಮನನುಭವಿಸಿ ಕಡೆಯೊಳ್ ಸಂಸಾರವೈರಾಗ್ಯಂ ಪುಟ್ಟೆ ಸುಗತಿಶ್ರೀಯೊಳ್ ಕೂಡುವೆನೆಂಬ ಬಗೆಯುಂ ತಂದು ಪಿರಿಯ ಮಗನಪ್ಪ ಭಾಸ್ಕರದೇವಂಗೆ ಯೌವರಾಜ್ಯಮುಮಂ ವಿದ್ಯೆಗಳುಮಂ ಕೊಟ್ಟು ॥ ೯೯

ಎಳಸದೆ ವೈಸುಖಕ್ಕೆ ಪೆಱತೊಂದಱವೋಹಮನಂಟುವೊಡಿ ಸಂ
ಚಳಿಸಿ ವಿಭೂತಿಯುಂ ನೆನೆಯದೊರ್ಮೆಯೆ ಘಮ್ಮನೆ ರಾಜ್ಯಲಕ್ಷ್ಮಿಯಂ
ಘಳಿಲನೆ ಬಿಟ್ಟು ಸುಪ್ರಭಸುಚಾರಣರಲ್ಲಿ ಜಿನೇಂದ್ರದೀಕ್ಷೆಯಂ
ಕಲಿ ಪೆಱಪಿಂಗೆ ವೈದೆಗೆಯದಣ್ಮಿ ಳವಟ್ಟರೆ ಕೊಂಡನರ್ತಿಯಿಂ ॥ ೧೦೦

ಅಂತು ನಿಶ್ಶಂಕೆಯಿಂ ಶಂಭು ಜಿನರೂಪಂ ಕೈಕೊಂಡು ತಪ
ದೊಳಿರ್ದನಿತ್ತಲ್ ಮಂದರದೇವಂ ಸಮಸ್ತವಿದ್ಯಾಸಮನ್ವಿತನಪ್ಪುದಱಿಂ
ಪ್ರತಾಪದಿಂ ಭಾಸ್ಕರದೇವನನೋಡಿಸಿ ಖೇಚರರಾಜ್ಯಕ್ಕೆ ಮೊತ್ತಮೊದಲಿಗ
ನಾಗಿ ನೆಗಳ್ದಮರಾವತೀಪುರದೊಳಿರ್ದ ಭಾಸ್ಕರದೇವಂ ವಿದ್ಯಾಧರರಾಜ್ಯಂ
ಪೋದುದಕ್ಕೆ ಚಿಂತಾಕ್ರಾಂತನಾಗಿ ಮಂದರದೇವಂಗಿದಿರ್ಚಲ್ಣ್ಮದೆ
ತನ್ನಗ್ರಮಹಾದೇವಿ ಮಣಿಮಾಳೆ ಮೊದಲಾಗೊಡೆಯ ಪಲಂಬರರಸಿಯ
ರ್ವೆರಸು ಕನಕಪುರಕ್ಕೆವಂದು ತನ್ನ ಮೈದುನನಪ್ಪ ವಿಮಳಮಹಾ
ರಾಜನಂ ಪೊರ್ದಿದರ್ ॥ ೧೦೧

ಧರ್ಮವಿಚಾರದೊಳಂ ಜಿನ
ಧರ್ಮಮೆ ಮಿಗಿಲೆಂದು ನಂಬಿ ಭಾಸ್ಕರದೇವಂ ।
ನಿರ್ಮಲಮನದಿಂದಂ ಸ
ದ್ಧರ್ಮಕಥಾಳಾಪದಿಂದಮಿರ್ದೊಂದುದಿನಂ ॥ ೧೦೨

ಪರ್ವೋಪವಾಸಂಗೆಯ್ದು ಭರತಕ್ಷೇತ್ರದೊಳಾದ ಜಿನಭವನಂ
ಗಳುಮಂ ಮಹಾಮುನೀಂದ್ರರ್ಕಳುಮಂ ಬಂದಿಸಲುಂ ಪೂಜಿಸಲು
ಮೆಂದು ಮಣಿಮಾಳೆಯುಂ ತಾನುಂ ವಿಮಾನಾರೂಢರಾಗಿ ಪೋಗಿ
ಸಮಸ್ತಚೈತ್ಯಾಲಯಂಗಳಂ ಸಕಲಮುನಿವರರುಮಂ ವಂದಿಸಿ ನಾಭಿಗಿರಿ
ಯೊಳಿರ್ದ ಸೋಮದತ್ತಮುನಿಯುಂ ಬಂದಿಸಲೆಂದು ಬಂದು] [1] ॥ ೧೦೩

ದಿನಕೃನ್ಮಂಡಲಮುರ್ವಿಯೊಳ್ ನೆಲೆಸಿತೋ ಮೇಣ್ದೇವಸಂದೋಹಮಿ
ಮುನಿಯಂ ಪೊಂಗಳನೊಲ್ದು ಪೂಜಿಸಿದರೋ ಪಾತಾಳದಿಂ ನಿಲ್ಕಿಸ

1 ಭಾಸ್ಕರದೇವನೆಂಬ ವಿದ್ಯಾಧರಂ ತನ್ನ ವಲ್ಲಭೆ ಮಣಿಮಾಲೆವೆರಸು ಸೋಮ
ದತ್ತಭಟ್ಟಾರಕರಂ ವಂದಿಸಲು ಬರುತ್ತಂ ದೂರದೊಳಿರ್ದ ಶಿಖಮಂ ಕಂಡು (ಗ)

ಲ್ಮನಿಪಾಂಘ್ರಿದ್ವಯಮಂ ಫಣೀಂದ್ರನೊಲವಿಂ ಸದ್ಭಕ್ತಿಯಿಂದೊಲ್ದು ವೆ
ಲ್ಲನೆ ಮೋಕ್ಷಾಖ್ಯವಿಸಿ ಕೂರ್ತು ನೋಡಿದಪನೋ ಪೇಳೆಂಬತಿಭ್ರಾಂತಿಯಂ ||

[ಪುಟ್ಟಿಸಿ ತೊಳತೊಳಗುವ ಬಾಲಾರ್ಕನಂತಪ್ಪ ಶಿಶುವಂ ಕಂಡು ಸಂತೋಷಂಬಟ್ಟು ಸೋಮದತ್ತಮುನಿವೃಂದಾರಕನ ಪ್ರಸಾದದಿಂ ಸುಪುತ್ರಂ ದೊರೆಕೊಂಡನೆಂದು ಮುನಿಪತಿಯ ಚರಣಸರೋಜಾತಂಗಳಂ ಪೂಜಿಸಿ ಬಂದಿಸಿ ಮಗನಂ ನಿಧಾನಮನೆತ್ತುವಂತೆತ್ತಿಕೊಂಡು ನಿನಗೆ ಜಿನಧರ್ಮಪ್ರಸಾದದಿಂ ಸ್ಮರಸಮಾನನಪ್ಪ ಸುಪುತ್ರಂ ದೊರೆಕೊಂಡನೆಂದು ನಲ್ಲಳ ಕೈಯೊಳ್ ಕೊಟ್ಟು ಕನಕಪುರಕ್ಕೆ ಪೋಗಿ ಪೊಟಲೊಳಗಿರ್ದ ವಿಮಳವಾಹನಮಹಾರಾಜಂಗಂ ಸುದೇವಿಮಹಾದೇವಿಗಂ ಮಣಿಮಾಲೆಮಹಾದೇವಿ ಗೂಢಗರ್ಭದೊಳ್ ಮಗನಂ ಪಡೆದಳೆಂದು ಪೇಳ್ದಿಟ್ಟುವುದುಂ] [1] || ೧೦೫

ಪಿರಿದಪ್ಪುತ್ಸಾಹದಿಂ ಬಂದಿದಿಗೆರ್ಳ ಪುರಮಂ ಪೊಕ್ಕು ಸಂತೋಷದಿಂ ಭಾ
ಸ್ಕರದೇವಂ ಕೂರ್ಮೆಯಿಂದಂ ಸುರಪತಿವಿಭವಂಗರ್ಕತೇಜಂಗೆ ಧಾತ್ರೀ
ಧರಧೈರ್ಯಂಗಂಗಜಾಲಂಕೃತವಿಮಳಪದಾಂಭೋಜಭೃಂಗಂಗೆ ಭವ್ಯಾಂ
ಬುಜಚಂದ್ರಂಗುಗ್ರವೈರಿದ್ವಿರದಹರಿಗೆ ಕೀರ್ತ್ಯಂಗನೇಶಂಗೆ ಪೇರ್ದಂ ||

ವಜ್ರಕುಮಾರನೆಂದು ಪೆಸರನಿಟ್ಟು [ಕೊಂಡಾಡಿ ನಡೆಪಿ ಬಳಿಕ್ಕ ಮಯ್ದುವರುಷದಂದು ಜೈನೋಪಾಧ್ಯಾಯರ ಸಮೀಪದೊಳೋದಿಗಿಡುವುದುಂ ಅಕ್ಷರಗಣಿತಗಾಂಧರ್ವಚಿತ್ರಕರ್ಮಪತ್ರಚ್ಛೇದಾದಿ ಸಪ್ತತಿಕಳೆಗಳೊಳಂ ಚತುಷ್ಷಷ್ಟಿಕಳಾಗುಣಂಗಳೊಳಂ ಪರಿಣತನಾಗಿ ಮುಂಬ

---

1 ನೋಡುತ್ತಂ ಬಂದು ಸುಕವಿನಿಕರಪಿಕಮಾಕಂದನ ಪ್ರಸಾದದಿಂ ಬಾಲಾರ್ಕಸಂತಪ್ಪ ಬಾಲಕನಂ ದೊರೆಕೊಂಡನೆಂದು ಜಿನಚಕ್ರಾಲಂಕಾರಶೇಖರನ ಚರಣಯುಗಳಮನರ್ಚಿಸಿ ವಂದಿಸಿ ಕೂಸನೆತ್ತಿಕೊಂಡು ಕನಕಪುರಕ್ಕೆ ಪೋಗಿ ತನ್ನ ಮೈದುನನಪ್ಪ ವಿಮಳವಾಹನರಾಜನುಂ ತನ್ನ ತಂಗಿ ಸುದೇವಿಯುಂ (ಗ)

2 ವಾತ್ಸಲ್ಯವಾರಾಸಿಗೊಲ್ದಿಂ (ಕ, ಖ)

ಗಲ ಸೂರ್ಯನಂತೆ ತೇಜಮುಂ ಪ್ರತಾಪಮುಮೊಡನೆ ಬಳೆಯೆ, ಇವನ ನಾಗಿ ಕುಲಜಾತಿಸಾಧಿತವಿದ್ಯೆಯೆಂಬ ಮೂಱುವಿದ್ಯೆಗಳೊಳಂ ಸಂಪೂರ್ಣ ನಾಗಿ ಸುಖದಿಂದಿರ್ಪುದುಂ || ೧೦೭

ಸ್ಮರರೂಪನಂ ಜಿನೇಶ್ವರ
ಚರಣಾಂಭೋಜಾತಭೃಂಗನಂ ಜಿನಧರ್ಮಾಂ |
ಬರಚಕ್ರಚಂದ್ರನಂ ಭಾ
ಸ್ಕರದೇವಂ ನೋಡೆ ತನ್ನ ಕಣ್ತಣಿವಿನೆಗಂ ] [1] || ೧೦೮

ಮಾವನುಮತ್ತೆಯುಮಜ್ಜಿಯು
ಮಾವಿಭುವಿನ ತೇಜಮಂ ಪ್ರತಾಪಮನದಟಂ |
ಭಾವಿಸಿ ನೋಡಿದರಾಗ ಮ
ಹಾವಿಭವದಿನಿರ್ಪರೆರ್ದೆ ಕುಳಿರ್ಕೊರ್ಡುವಿನಂ || ೧೦೯

[ಅಂತು ಭಾಸ್ಕರದೇವನುಂ ಮಣಿಮಾಲಾಮಹಾದೇವಿಯುಂ ವಿಮಳವಾಹನಮಹಾರಾಜನುಂ ಸುದೇವಿಯುಂ ವಜ್ರಕುಮಾರಂ ಮಾಡುವ ಜಿನಪೂಜೆಯುಮನಾಹಾರಾಭಯಭೈಷಜ್ಯಶಾಸ್ತ್ರದಾನಮುಮಂ ಚಾತುರ್ವರ್ಣ್ಯದೊಳಾದ ವಾತ್ಸಲ್ಯಮುಮಂ ಕಣ್ಣಾರೆ ನೋಡುತುಂ ಮನವಾರೆ ಬಣ್ಣಿಸುತ್ತುಂ ವಾತ್ಸಲ್ಯವಾರಾಶಿಯ ಮಾತೆ ಮಾತಾಗಿ ಸಂತೋಷದಿಂದಿರ್ದೊಂದು ದಿವಸಂ ಕುಮಾರಂಗೆ ಮದುವೆಯಂ ಮಾಡಲೆಂದಾಲೋಚಿಸಿ ಸುದೇವಿಯ ಮಗಳವಿಂದುಮತಿಯಂ ಬೇಡಿ] [2] || ೧೧೦

ಪಸುರ್ವಂದರ್ಪಸೆಯೆಂಬಿವೊಪ್ಪೆ ಖಚರಸ್ತ್ರೀಸಂಕುಳಂ ಪಾಡೆ ಸಂ
ತಸದಿಂ ಮಂಗಳಮಂ ವಿವಾಹಭವನಂ ಸದ್ರತ್ನದಿಂದೆಯ್ದೆ ರಂ

---

1 ಕೊಂಡಾಡುತ್ತಿರೆ ದ್ವಾಸಪ್ತತಿಕಳೆಗಳೊಳಂ ಚತುಃಷಷ್ಟಿಕಳೆಗಳೊಳಂ ಪರಿಣತನಾಗಿಯು ಮುಂಬಗಲ ಸೂರ್ಯನಂತೆ ಬೆಳೆವುದು ಭಾಸ್ಕರದೇವನುಂ (ಗ)

ಅಂತಿರ್ಪರುಂ ವಿಮಳವಾಹನಮಹಾರಾಜನ ಮಗಳಪ್ಪ ಇಂದುಮತಿಗಂ ವಜ್ರಕುಮಾರಂಗಂ ವಿವಾಹೋದ್ಯೋಗಮುಮಾಗೆ (ಗ)

ಜೆಸೆ ತೂರ್ಯಧ್ವನಿ ಪೊಣ್ಮೆ ಕಟ್ಟಿ ಗುಡಿಯಂ ಪೌರರ್ ಮನಂಗೊಂಡು ರಾಗಿಸೆ ಪುತ್ರಂಗೆ ವಿವಾಹಮಂ ಖಚರಲಕ್ಷ್ಮೀವಲ್ಲಭಂ ಮಾಡಿದಂ ‖ ೧೧೧

ಅಂತು [ಮದುವೆಯಂ] ಮಾಡುವುದುಂ ವಜ್ರಕುಮಾರನುಮಿಂದುಮತಿಯುಂ ಪ್ರಾಣವಲ್ಲಭರಾಗಿ ಸುವಿಷಯಸುಖಮನನುಭವಿಸುತಿರ್ದೊಂದುದಿವಸಂ [ಮಣಿಕುಂಡಲಪ್ರಭೃತಿಕುಮಾರರ ತಂಡಂವೆರಸು ವಾತ್ಸಲ್ಯವಾರಾಶಿ] ವಿಜಯಾರ್ಧಪರ್ವತದ ಸಿದ್ಧಕೂಟ ಚೈತ್ಯಾಲಯಮಂ ಬಂದಿಸಲೆಂದು [ವಿಮಾನಾರೂಢನಾಗಿ ಪೋಗುತ್ತುಂ ಹೇಮಗಿರಿಯೊಳೊರ್ವ ವಿದ್ಯಾಧರಿಯಂ ತಲೆ ಪೊಱಗಾಗೆ ಪೆರ್ಮಾವು ನುಂಗಿರ್ದುದಂ ಕಂಡು ಸಮ್ಯಕ್ತ್ವಚೂಡಾಮಣಿ ಪ್ರತಿವಿದ್ಯೆಯಿಂ ಕಿಡಿಸಿ ವಿಘ್ನವಿನಾಶವಂ ಮಾಡುವುದುಂ ‖ ೧೧೨

ಕರಕಮಲದೆ ತದ್ವಿದ್ಯಾ
ಧರಿ ರಾಗಿಸಿ ಪೆರ್ಚಿ ನೋಡಿ ಮೆಯ್ಯುಱಿಯದೆ ಭಾ ।
ಸ್ಕರದೇವನಗ್ರತನಯನ
ಚರಣಾಂಭೋಜದ್ವಯಕ್ಕೆ ಕೈಮುಗಿದಾಗಳ್ ‖ ೧೧೩

ಪೊಡೆಮಡೆ, ಅಂತು ಪೊಡೆಮಟ್ಟ ವಿದ್ಯಾಧರಿಯಂ ನೀನಾರ್ಗೆ ನಿನ್ನ ಪೆಸರೇನೆಂಬುದೇನಂ ಸಾಧಿಸಲೆಂದು ಬಂದೆಯೆಂದು ಬೆಸಗೊಳ್ವುದುಂ, ವಿದ್ಯಾಧರಿ ಯಿಂತೆಂದಳ್:—ವರಚಂದ್ರಪುರಮನಾಳ್ವಂ ಸುರಸದೃಶಂ ಗರುಡನೆಂಬ ವಿದ್ಯಾಧರರಾಜನಾತನ ಮಹಾದೇವಿ ವಿಭ್ರಮಾನ್ವಿತೆ ಪೆಸರಿಂ ಅನಂತ ಮತಿಯೆಂಬಳಾಯಿರ್ವರ್ಗಂ ಪುಟ್ಟಿದೆಂ ಪವನವೇಗೆಯೆಂಬೆಂ; ಬಹುರೂಪಿಣೀವಿದ್ಯೆಯಂ ಸಾಧಿಸಲೆಂದು ಬಂದಿಲ್ಲಿ ಸಾಧಿಸುವುದುಮೆನಗಾ ವಿದ್ಯೆ ಸಾಧ್ಯಮಲ್ಲದೆ ವಿಘ್ನಂಮಾಡಲೆಂದು ಪೆರ್ಮಾವಾಗಿ ನುಂಗಿರ್ದುದು; ನಿನ್ನ ಪ್ರಸಾದದಿಂದೊರ್ಮೆಗೆ ಬರ್ದುಕಿದೆನಲ್ಲದೆಂದುಂ ಈ ವಿಘ್ನಮನಾ ವೆಂಗಂ ಕಿಡಿಸಲ್ಬಾರದೆಂದು ತನ್ನ ವೃತ್ತಾಂತಮೆಲ್ಲಮಂ ಪೇೞ್ದು ಪ್ರಜ್ಞಪ್ತಿಯೆಂಬ ವಿದ್ಯೆಯಂ ವಾತ್ಸಲ್ಯರತ್ನಾಕರಂಗೆ ಪ್ರಾರ್ಥಿಸಿ ಕೊಟ್ಟು ಮುಂದೆ ನಿಂದಿರ್ಪುದುಂ ಕುಮಾರನಿಂತೆಂದಂ ‖ ೧೧೪

ಎನಿತೊಳವು ವಿದ್ಯೆ ಕೇಳ
ನ್ನನಿತುಂ ಖಚರರ್ಗವುಂಟು ಕೊಳ್ಳೇಗವು ಕಾ ।
ಮಿನಿಯರ್ಗಲ್ಲದೆ ಜಗದೊಳ್
ನಿನಗೀಸದ್ವಿದ್ಯೆ ಯಾವ ಕಾರಣದಿಂದಂ ॥ ೧೧೫

ಸಾಧ್ಯಮಾಗದೆಂದು ಬೆಸಗೊಳ್ವುದುಂ ಪವನವೇಗೆಯಿಂತೆಂದಳ್:— ಸಂಜಯಂತ ಭಟ್ಟಾರಕರೆಂಬ ಮುನಿವರರ್ ವಿದೇಹದೊಳುಗ್ರಮಪ್ಪ ತಪಮಂ ಮಾಡುತುಮಿರ್ಪುದುಮವರ ಮುನ್ನಿನ ಭವದ ವೈರಿ ವಿದ್ಯುದ್ವೇಗನೆಂಬ ವಿದ್ಯಾಧರಂ ವಿದ್ಯಾವಿನೋದಾರ್ಥಂ ತೊಳಲುತ್ತೆ ವಿದೇಹದೊಳಿರ್ದ ಸಂಜಯಂತ ಯೋಗೀಶ್ವರನಂ ಕಂಡು ಕೋಪಂ ಪುಟ್ಟೆ॥೧೧೬

ಘನಮಪ್ಪಾಸರೆಮೇಲೀ
ಮುನಿಯಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ ।
ತನು ನೆಱೆ ತಗ್ಗಿಯು ನುರ್ಗ
ಪ್ಪಿನೆಗಂ ಮೇಗಣ್ಗೆ ನೆಗಪಿ ನೆಲಕಿಕ್ಕುವೆನೋ ॥ ೧೧೭

ಎಂದು ಬಗೆದೊಲ್ಲದೆ ಹರಿವತಿ ಗಜಾವತಿ ಕಮಳಾವತಿ ಪುಷ್ಪಾವತಿ ಚಂಡವೇಗೆ ಯೆಂಬ ಪಂಚನದೀಸಂಗಮದೊಳ್ ತಂದಿಕ್ಕುವುದುಂ ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೋಡಲಿಯಿಂ ದುರಿತಾಟವಿಯಂ ತಱಿದು ಶುಕ್ಲಧ್ಯಾನಮೆಂಬ ಕಿರ್ಚಿಂ ಕರ್ಮೇಂಧನಮಂ ಸುಟ್ಟು ಕೇವಲಜ್ಞಾನಿಯಾಗಿರ್ಪುದುಂ, ಸಕಲದೇವಸಮೂಹಂ ಬಂದು ಕೇವಲ ಪೂಜೆಯಂ ಮಾಡಿ ಪಲತೆಱದಿಂ ಪರಮೇಶ್ವರನಂ ಬಣ್ಣಿಸುತ್ತು ಮಿರ್ಪುದುಂ ] [1] ॥ ೧೧೮

ಧರಣೇಂದ್ರಂ ಕೋಪದಿಂದಂ ಮಸಗಿ ಗಜಱಿ ನಿರ್ದೋಷಿಯಂ ಧೈರ್ಯ ಚಾಮೀ
ಕರಶೈಲೇಂದ್ರಾಭನಂ ಕೆಮ್ಮನೆ ಕಲುಷದಿನೀಬಾಧೆಯಂ ಮಾಡಿದೀಖೇ ।

1 ಪೋಗುತ್ತುಂ, ಹಿಮವದ್ಗಿರಿಯೊಳೊರ್ವ ವಿದ್ಯಾಧರಿಯಾ ಪೆರ್ವಾವು ನುಂಗೆ, ತಲೆ ಪೊಱಗಾಗಿರ್ದುದಂ ಕಂಡು ಪ್ರತಿವಿದ್ಯೆಯಿಂ ಕಿಡಿಸುವುದುಮಾವಿದ್ಯಾಧರಕುಮಾರಿ ಕಾಲ ಮೇಲೆ ಬಿರ್ದು,

ಚರನಂ ನಿರ್ವಂಶಮಪ್ಪಂತಿರೆ ತಱಿದು ಮಹಾವಾರ್ಧಿಗುಯ್ದಿಕ್ಕುವೆಂ ಚಿಚ್ಛರಮೆಂಬುದ್ಯೋಗದಿಂದಂ ಕೆಳರ್ದು ನಡೆವ ದೇವೇಂದ್ರನಂ ನಾಗರಾಜಂ[1] ॥ ೧೧೯

ಮಾಣಿಸಿ ನಿನಗಿವರ್ ಸಮಾನರಲ್ಲರೆಂದು [ಬೇಡಿಕೊಳ್ವುದುಂ, ಕೋಪಮನುಡುಗಿಸಿ ಸಂಜಯಂತ ಸ್ವಾಮಿಗಳ ಪ್ರತಿಬಿಂಬಮಂ ನದೀತೀರದೊಳ್ ಮಾಡಿ ಮಣಿಕನಕಮಯಮಪ್ಪ ಚೈತ್ಯಾಲಯಮನೆತ್ತಿಸಿ ಖೇಚರರಿಂದು ಮೊದಲಾಗೆ ಸಮಸ್ತವಿದ್ಯೆಗಳುಮನಿಲ್ಲಿ ಸಾಧಿಸುವುದು ಪೆಱವೆಡೆಗಳೊಳ್ ಸಾಧಿಸಿದರಪ್ಪೊಡೆ ಸಾಧ್ಯಮಾಗದೆ ಪೋಕೆಂದು ಪ್ರತಿಜ್ಞೆಯಂ ಮಾಡಿ ಪೋದನಪ್ಪುದಱಿಂದೆನಗಿಲ್ಲಿ ವಿದ್ಯೆಗೆ ವಿಘ್ನಮಾದುದೆಂದು ಪೇೞ್ದು ಸಂಜಯಂತ ಭಟ್ಟಾರಕರಲ್ಲಿಗೆ ವಂದು ಪವನವೇಗೆ ಕೊಟ್ಟ ಪ್ರಜ್ಞಾಪ್ತಿ ಮೊದಲಾಗೆ ಪಲವು ವಿದ್ಯೆಗಳುಮಂ ಸಾಧಿಸಿ ಕನಕಪುರಕ್ಕೆ ವಂದು

ವರಚಕ್ರಪುರವನಾಳ್ವಂ ಸ್ಮರಸದೃಶಂ ಗರುಡವೇಗನೆಂಬಂ ವಿದ್ಯಾ ।
ಧರರಾಜನೆನ್ನ ಜನಕಂಗನುರಾಗದಿ ಪವನವೇಗೆ ಎಂಬೆಂ ಪೆಸರಿಂ ॥

ಬಹುರೂಪಿಣಿವಿದ್ಯೆಯುಂ ಸಾಧಿಸುತ್ತಮಿರಲಾವಿದ್ಯೆ ಸಾಧ್ಯಮಲ್ಲದೆನ್ನಂ ಪೆರ್ವಾವಾಗಿ ನುಂಗಿದುದು ನಿನ್ನ ಪ್ರಸಾದದಿಂ ಬರ್ದೆನೆಂದು ಪೊಗೞ್ದು ಪ್ರಜ್ಞಾಪ್ತಿ ವಿದ್ಯೆಯುಂ ಕೊಟ್ಟು ಹರಿವತಿ ಗಜಾವತಿ ಕಮಳಾವತಿ ಪುಷ್ಪಾವತಿ ಚಂಡವೇಗಿಯೆಂಬ ಪಂಚನದೀ ಸಂಗಮದಲ್ಲಿ ಪೋಗಿ ಸಂಜಯಂತ ಭಟ್ಟಾರಕರ ಪಾದೋಪಕಂಠದೊಳ್ ಸಾಧಿಸುವುದೆಂಬುದುಂ ಅಲ್ಲಿಯಲ್ಲದೆ ಪೆಱವೆಡೆಯೊಳೇಕೆ ಸಾಧಿಸಲಾಗದೆಂಬುದುಂ ಪವನವೇಗೆಯಿಂತೆಂದಳ್. ಸಂಜಯಂತ ಭಟ್ಟಾರಕರೆಂಬ ಋಷಿಯರು ವಿದೇಹದೊಳಾತಪಯೋಗದೊಳಿರ್ಪುದುಂ ಅವರ ಮುನ್ನಿನ ಭವದ ವೈರಿ ವಿದ್ಯುದ್ದಂಷ್ಟ್ರನೆಂಬ ವಿದ್ಯಾಧರಂ ಕಂಡು ಮುನಿದೆತ್ತಿ ತಂದು ಪಂಚನದಿಗಳೊಳಿಕ್ಕೆ ಕ್ಷಮೆಯೆಂಬ ಕಿಚ್ಚಿಂ ಕರ್ಮಮೆಂಬ ಯಿಂಧನಂಗಳಂ ಸುಟ್ಟು ಕೇವಳಿಯಾಗಿರ್ಪುದುಂ ಕೇವಳಪೂಜೆಯಂ ಮಾಡಲೆಂದು ಸಮಸ್ತದೇವರ್ಕಳ್ ನೆರೆದು. (ಗ)

1 ನಾಗೇಂದ್ರನಂ ದೇವರಾಜಂ. (ಗ)

ರಾಜ್ಯಲೀಲೆಯಿಂದಿರ್ದೊಂದು ದಿವಸಂ ತಮ್ಮಯ್ಯನಪ್ಪ ಭಾಸ್ಕರ ದೇವನಂ ]ˌ[1] ॥ ೧೨೦

ನೀನಪ್ಪೊಡೆ ಖೇಚರನ್ಯ
ಹೀನರ ತೆಱದಿಂದೆ ಭೂಚರಾಶ್ರಯಮಮಂ ಮ ।
ತ್ತೇನೆಂದು ಪೊರ್ದಿ ನಿಂದ್ಯೆ
ಯಾನಂದಂಬೆರಸು ದೇವ ಬೆಸಸಲ್ವೇಟ್ಕುಂ ॥ ೧೨೧

[ಎನೆ ಭಾಸ್ಕರದೇವಂ ನಂದನನಂ ತೆಗೆದಪ್ಪಿಕೊಂಡು ಭರವಶದಿಂ ಮುನ್ನಿನ ತನ್ನ ಕಥೆಯನೆಲ್ಲಮನತಿಶಯಮಮಂ ಮಾಡಿ ತಿಳಿಪಿ ಪೇಟ್ವುದು ಮಾಗಳ್] [2] ॥ ೧೨೨

---

1 ಮಾಣಿಸಿ ಕೋಪಮನುಡುಗಿಸಿ ಸಂಜಯಂತ ಭಟ್ಟಾರಕರ ಪ್ರತಿಮೆಯ ನಲ್ಲಿ ಮಾಡಿ ಮಣಿಕನಕಮಪ್ಪ ಚೈತ್ಯಾಲಯಮಮಂ ಮಾಡಿಸಿ ವಿದ್ಯಾಧರರ್ಗಿಂದುಮೊದ ಲಾಗಿಲ್ಲಿ ವಿದ್ಯೆಗಳುಂ ಸಾಧ್ಯಮಕ್ಕೆ ಪೆಱಪೆಡೆಯೊಳ್ ಸಾಧ್ಯಮಾಗದೆ ಪೋಕೆಂದು ಪ್ರತಿಜ್ಞೆಯುಂ ಮಾಡಿಮನಪ್ಪುದಱಿಂದಲ್ಲಿಗೆ ಪೋಗಿ ಸಾಧಿಸೆಂದಮಱ ವೃತ್ತಾಂತಮೆ ಲ್ಲಮುಂ ಪೇಳ್ದು,

ಎನಗೀ ಜಿನಸಮಯಾಂಬರದಿನಕರನಲ್ಲದೆ ಪೆಱರ್ತುನಃಪ್ರಿಯರಲ್ಲರ್ ।
ವಿನಯದಿನೆಂದಾ ಕನ್ನಿಕೆ ಮಾನದೊಳ್ ಲೀಸಾಗಿ ಪೂಣ್ದು ಪೋಪುದುಮಿತ್ತಂ॥

ವಜ್ರಕುಮಾರಂ ಸಿದ್ಧಕೂಟಚೈತ್ಯಾಲಯಮುಮಂ ವಂದಿಸಿ ಸಂಜಯಂತ ಭಟ್ಟಾ ರಕರಲ್ಲಿಗೆ ಬಂದು ಪ್ರಜ್ಞಪ್ತಿವಿದ್ಯೆ ಮೊದಲಾವ ಪಲವು ವಿದ್ಯೆಗಳಂ ಸಾಧಿಸಿ ಜಾತಿ ವಿದ್ಯೆ ಕುಲವಿದ್ಯೆ ಸಾಧಿತವಿದ್ಯೆ ಯೆಂಬ ಮೂಱುಂವಿದ್ಯೆಗಳೊಳಂ ನೆಱೆದು ಕನಕ ಪುರಕ್ಕೆ ಬಂದು ಪಲದಿವಸಲೀಲೆಯೊಳಿರ್ದೊಂದುದಿವಸಂ ತನ್ನಮ್ಮಯ್ಯನ ಮೊಗಮುಂ ನೋಡಿ. (ಗ)

2 ಎಂದು ಬೆಸಗೊಳ್ವುದುಂ, ಭಾಸ್ಕರದೇವಂ ಪೇಳಲೊಲ್ಲದೆ ಲಜ್ಜೆಸಿರ್ಪುದುಂ, ಕೆಲದೊಳಿರ್ದ ಮಹೀಪಾಲಪೆರ್ಗಡೆ ಯಿಂತೆಂದು ಪೇಳ್ದಂ. ವಿಜಯಾರ್ಧಪರ್ವತದ ದಕ್ಷಿಣಶ್ರೇಧಿಯೊಳಮರಾವತಿಯೆಂಬ ಪುರಮನಾಳ್ವಂ ಶಂಭುವೆಂಬ ವಿದ್ಯಾಧರರಾಜ ನಾತಂಗೆ ನಿಮ್ಮಯ್ಯನಪ್ಪೀ ಭಾಸ್ಕರದೇವಂ ನಿಮ್ಮತ್ತೆಯಪ್ಪೀ ವಸುದೇವಿಯುಂ ಮಂದರದೇವನೆಂಬ ಮೂವರ್ಮಕ್ಕಳಾತಂ ವೈರಾಗ್ಯಪರಾಯಣನಾಗಿ ನಿಮ್ಮಯ್ಯಂ ಗೆ ವಿದ್ಯಾಧರರಾಜ್ಯಮುಮಂ ಮಂದರದೇವಂಗೆ ಯುವರಾಜ್ಯಮುಮಂ ವಿದ್ಯೆಗಳು ಮಂ ಕೊಟ್ಟು,

ಎಮ್ಮಿಷ್ಟಂ ಕೊಟ್ಟ ವಿದ್ಯಾಬಲದಿನುಜದೆ ವೀರಕ್ಕೆ ಮುಯ್ಯಾಂತು ಬೇಗಂ
ನಿಮ್ಮಿಂ ತದ್ದೇಶದಿಂದಂ ಪೊಱವಡಿಸಿ ಬೃಹತ್ತೇಜದಿಂ ರಾಜ್ಯಮಂ ಕೊಂ
ಡೆಮ್ಮಿಂ ಬಾಯ್ವಿಟ್ಟು ತದ್ರಾಜ್ಯಮನೆ ಬಿಸುಟು ಪೋದಾಗಿ ಬಾಯ್ಬುತ್ತಿ
ಮತ್ತಂ
ತಾಮ್ಮೆಚ್ಚಿಂ ನೋಡೆ ಬೆಂಕೊಳ್ಳದೊಡೆ ನಿನಗೆ ನಾಂ ಶಿಕ್ಷೆಯಂ ಪುತ್ರ
ನಲ್ಲಂ ‖ ೧೨೩

ಎಂದು ತಂದೆಯ ಮುಂದೆ ಪೂಣ್ದು ಮಸಗಿದ ಸಿಂಹದಂತೆ ಪೊಡೆ
ವೆತ್ತ ಪಾವಿನಂತೆ ನೊಂದ ಶರಭದಂತೆ ಸಿಕ್ಕಿದ ಪುಲಿಯಂತೆ ಕೋಪಾ
ವಿಷ್ಟನಾಗಿ [ಪರಿದು ಅಮರಾವತೀಪುರಮಂ ಮೂವಳಸಾಗೆ ಮುತ್ತಿ
ಕೊಳ್ವುದುಂ ಮಂದರದೇವನಿದಿರ್ಚಿ ಕಾದಿ ತನ್ನ ಬಲಮೆಲ್ಲಂ ಕಲ್ಲಮೇಲೆ
ಬಿರ್ದ ಕಾಜಿನ ಪೇಱಿನಂತೆ ನುಗ್ಗಪ್ಪುದುಂ ಮುನಿದು ಸಮುದ್ರಬಾಣ
ಮಂ ಬಿಡುವುದುಂ ‖ ೧೨೪

ಶರಸಿಧಿಬಾಣಂ ಬರೆ ಶೇ
ಚರರಾಜಂ ಬಾಡಬಾಗ್ನಿ ಶರಮಂ ಬಿಡೆ ಚೆ ।
ಚ್ಚರಮೊಡಲನಂ ಪೀರ್ವುದು
ಮುರಿದಟ್ಟಿ ಕನಲ್ದುನಲ್ದು ಮಂದರದೇವಂ ‖ ೧೨೫

ಉರಗಬಾಣಮಂ ಬಿಡುವುದುಮದು ವಿಷಮನುಗುಳುತ್ತುಂ ಬರೆ
ವರೆ ‖ ೧೨೬

ಉರಗಶರಕ್ಕಿದಿರಂ ಭಾ
ಸ್ಕರದೇವಸುತಂ ಮಹೋಗ್ರಕೋಪಾನಲನಿಂ ।

---

ಎಳಸದೆ ವ್ಯಸುಖಕ್ಕೆ ಪೆಱತೊಂದಳಿಮೆ ಗೇಹವಾನುಂಟುಮಾಡಿ ಸಂ
ಚಳಿಸಿ ವಿಭೂತಿಯುಂ ನೆನೆಮದೊರ್ಮೆಯ ಭೂಮ್ಯನೆ ರಾಜ್ಯಲಕ್ಷ್ಮಿಯುಂ ।
ಘಳಿಲನೆ ಬಿಟ್ಟು ಸುಪ್ರಭಮುಚಾರಣರಲ್ಲಿ ಜಿನೇಂದ್ರದೀಕ್ಷೆಯಿಂ
ಪಳಿ ಪೆಱಪಿಂಗೆ ಮಯ್ದುಗೆಯೆ ಣ್ಗಳವಟ್ಟಿರ ಕೊಂಡನರ್ಥಿಯಿಂ ‖

ಇತ್ತಲ್ ರಾಜ್ಯಂಗೆಯ್ವ ಭಾಸ್ಕರದೇವನಂ ವಿದ್ಯಾಬಲದಿಂ ಮಂದರದೇವಂ
ಕಾದಿ ರಾಜ್ಯಮಂ ಕೈಕೊಂಡದುವೆ ಬಂಗವಾಗಿ ಎಂದಿರ್ದಪನೆಂಬುದುಂ. (ಗ)

ಗರುಡಾಸ್ತ್ರಮನೆಸೆವುದುಮೋ
ಸರಿಸದೆ ಕಡಿಖಂಡಮಾಗಲದ ನುಂಗುವುದುಂ ॥ ೧೬೭

ಮತ್ತಂ ಕನಲ್ದು ಮಂದರದೇವನಿಸುವ ಮೇಘಬಾಣಮಂ ವಾಯು ಬಾಣದಿಂ ಪರ್ವತಾಸ್ತ್ರಮಂ ವಜ್ರಶರದಿಂ ತಮೋಂಧಶರಮಂ ಸೂರ್ಯ ಸಾಯಕದಿಂ ನಿರ್ಬುದ್ಧಿ ಬಾಣಮಂ ಮತಿಶರಾಳಿಯಿಂ ಗೆಲ್ವುದುಂ ಮಂದರ ದೇವಂ ನಿಲಲಾಱದೀತಂ ಸಾಮಾನ್ಯಪುರುಷನಲ್ಲೆಂದು ಬೆರ್ಚಿ ಪ್ರಾಣಭ ಯದಿಂದೋಡುವುದುಂ ಅಮರಾವತೀಪುರಮಂ ಮಹಾವಿಭೂತಿಯಿಂ ಪೊಕ್ಕು ತಮ್ಮಯ್ಯನ ರಾಜ್ಯಪದವಿಯೊಳ್ ನಿಂದು ಮಹಾಮಹಿಮೆ ಯುಮಂ ತಾಳ್ದಿ ತಂದೆಯುಮಂ ತಾಯುಮಂ ಪೆಂಡಿರುಮಂ ಬರಿಸಿ ಖೇಚರರಾಜ್ಯಲಕ್ಷ್ಮೀವಲ್ಲಭನಾಗಿ ॥ ೧೬೮

ಜಿನನಾಥಾರ್ಚನೆಯಿಂ ಜಿನಾಭಿಷವದಿಂದಾಹಾರಭೈಷಜ್ಯಶಾ
ಸ್ತ್ರನಯೋಪಾರ್ಜಿತಮಪ್ಪ ಸಂದಭಯಮೆಂಬೀನಾಲ್ಕು ಮೊಳ್ದಾನದಿಂ
ಮುನಿಪಾಂಘ್ರಿದ್ವಯಸೇವೆಯಿಂ ಜಿನಕಥಾಳಾಪಂಗಳಿಂ ಕಾಮಿನೀ
ಜನಕಂದರ್ಪನುದಾತ್ತನಿರ್ಮಲಯಶಂ ವಾತ್ಸಲ್ಯರತ್ನಾಕರಂ ॥ ೧೬೯

ಅಂತು ರಾಜ್ಯಂಗೆಯ್ಯುತ್ತುಮಿರ್ಪನ್ನೆಗಂ ಚಂದ್ರಪುರಾಧಿಪತಿ ಯಪ್ಪ ಗರುಡವೇಗವಿದ್ಯಾಧರರಾಜಂ ತನ್ನ ಮಗಳಪ್ಪ ಪವನವೇಗೆಗೆ ಮದುವೆಯಂ ಮಾಡಲೆಂದು ಸ್ವಯಂವರಶಾಲೆಯುಮಂ ಮಾಡಿಸಿ ತಡೆಯದ ಭೂಮಿಶ್ರೇಣಿಯ ವಿದ್ಯಾಧರರ್ಗೆಲ್ಲಂ ಬಿಜಯಂಗೆಯ್ದು ವಜ್ರಕುಮಾರಂಗೆ ಬಿಜಯಂಗೆಯ್ವುದುಂ, ಗರುಡವೇಗನ ದೂತರ್ಬಂದು ಕಂಡು ಪೊಡ ಮಟ್ಟು ತಮ್ಮ ಬಂದ ಕಾರ್ಯಮಂ ಬಿನ್ನಪಂಗೆಯ್ವುದುಂ ॥ ೧೭೦

ಬೇಗಂ ವಜ್ರಕುಮಾರಂ
ರಾಗಿಸೆ ದೂತರ್ಗೆ ಸಂತಸಂ ಪಿರಿದಪ್ಪಂ ।
ತಾಗೆ ಕರಮುತ್ಸವಂಬೆರ
ಸಾಗಳ್ ಕೊಟ್ಟಂಗಚಿತ್ತಮಂ ತತ್ಕ್ಷಣದಿಂ ॥ ೧೭೧

ಅಂತಮರಾವತೀಪುರಮಂ ಪೊಱಮಟ್ಟು ಚಂದ್ರಪುರಮನೆಯ್ದಿ ನೆರೆದ ವಿದ್ಯಾಧರವಲ್ಲಭರೊಡನೆ ಬಿಟ್ಟಿರೆ ಗರುಡವೇಗಂ ಮಱುದಿವಸಂ ಸಮಸ್ತವಿದ್ಯಾಧರನಾಯಕರು ಮೆಯ್ದಿರಿಮೆಂದು ಸಾಱುವುದುಂ॥ ೧೩೨

ತನ್ನ ಗಾತ್ರತ್ಕಚೆಯುಂ ನವ
ಭಿನ್ನಾಂಬುಜಮುಖಿಯುನಮಲಗುಣಗಣಯುತೆಯುಂ ।
ಕನ್ನೆಯುನಭಿನವಮೆನಿಸುವ
ಚೆನ್ನೆಯುನಗ್ಗಳದ ಪವನವೇಗೆಯುನಾಗಳ್ ॥ ೧೩೩

ಕಡಗಕಂಕಣಹಾರನೂಪುರಮಾದಿಭೂಷಣರಾಜಿಯುಂ
ತುಡಿಸಿ ಚೀನಮನರ್ಘ್ಯಯಿಂ ಮೃದುವಪ್ಪುದಂ ಮುದದಿಂದೆ ತಂ ।
ದುಡಿಸಿ ಕುಂಕುಮಚಂದನಾದಿ ಸುಗಂಧವಸ್ತುಗಳಂ ಮನಂ
ಬಿಡೆ ಮನೋಹರಮಾಗಿ ಪೂಸಿ ವಿಲಾಸದಿಂ ಕಡುರಾಗದಿಂ॥೧೩೪

ನೆಱಿಯೆ ಪಸದನಂಗೊಳಿಸಿ ಪೊನ್ನ ವಿಮಾನಮನೇಱಿಸಿ ಮಂಗಳ ತೂರ್ಯರವಮೆಸೆಯೆ ಖೇಚರರ ಸೈನ್ಯಂ ಸುತ್ತಂ ಬರೆ ವಿದ್ಯಾಧರ ಕುಮಾರಿಯರಿರ್ಕೆಲದೊಳಮಿರ್ದು ಪೊನ್ನ ಚಾಮರಮನಿಕ್ಕೆ ಮಹೋತ್ಸವಂ ಬೆರಸು ಸ್ವಯಂವರಭೂಮಿಗೆ ವರ್ಪುದುಂ ಪವನವೇಗೆ ಮುನ್ನಿನ ಪ್ರತಿಜ್ಞೆಯುಂ ನೆನೆದು ತರತರದೊಳಿಯೊಳಿರ್ದ ವಿದ್ಯಾಧರಕುಮಾರರಂ ನೋಡುತ್ತುಂ ಬಂದು] [1] ವಜ್ರಕುಮಾರನಂ ಕಂಡು ॥ ೧೩೫

ಮಾರನ ಶರದಳ್ಳಿಱಿಂ
ದೋರಂತಿರೆ ನೊಂದು ಸೋಲದಿಂದಂತಾಗಳ್ ।
ವಾರಿರುಹಾನನೆ ವಜ್ರಕು
ಮಾರಂಗಂ ಕೂರ್ತು ಮಾಲೆಸೂಡಿದಳಾಗಳ್ ॥ ೧೩೬

---

1 ಬಂದು ಬಲಸಹಿತಂ ಪೋಗಿ ಮಂದರದೇವನನೋಡಿಸಿ ಭಾಸ್ಕರದೇವನುಂ ಮಣಿಮಾಲೆಯುಂ ಬೆರಸು ರಾಜ್ಯಂಗೆಯ್ಯುತ್ತುಮಿರ್ದು ಚಕ್ರಪುರಕ್ಕೆ ಗರುಡವೇಗನುಂ ತನ್ನ ಮಗಳ ಸ್ವಯಂವರಕ್ಕೆ ವಿದ್ಯಾಧರಕುಮಾರರಂ ಬರವೇಳ್ದಟ್ಟ ಬರ್ಪುದುಂ ಮುಂಪೋಣ್ದು ಪೋದ ಪವನವೇಗೆ ವಜ್ರಕುಮಾರನಂ ಕಂಡು (ಗ)

ಸರಸಿರುಹಾನನೆ ವಿದ್ಯಾ
ಧರರಂ ಕೈಕೊಳ್ಳದುೞದೆ ವಜ್ರಕುಮಾರಂ ।
ಗೆರಡಿಲ್ಲದೋತಳದೞಿಂ
ಧರೆಯೊಳ್ ಭಾಗ್ಯಾಧಿಕಂಗದಾವುದು ಗಹನಂ ॥ ೧೩೭

[ಅಂತು ನೆರೆದ ಖೇಚರರೆಲ್ಲಂ ಸಿಗ್ಗಾಗಿ ಪರಿದುಪೋಗೆಯುಂ ಸವ್ಯಕ್ತ್ವಚೂಡಾಮಣಿ ಮದುವೆನಿಂದು ಮಹೋತ್ಸಾಹದಿಂದಮರಾವತೀಪುರಕ್ಕೆವಂದು ಮಹಾವಿಭೂತಿಯಿಂದರಮನೆಯಂ ಪೊಕ್ಕು ಸುಖದಿಂದಿರ್ಪುದುಂ ] ॥ ೧೩೮

ಸ್ಮರರೂಪಂ ವಿಭವಪುರಂ
ದರನಗ್ರವಿರೋಧಿದರ್ಪದಳನಂ ವಿದ್ಯಾ ।
ಧರವಂದ್ಯನೆಂದು ವಿದ್ಯಾ
ಧರರೆಲ್ಲಂ ಕೂರ್ಮೆಯಿಂದಮತ್ಯಾದರದಿಂ [1] ॥ ೧೩೯

[ತಂತಮ್ಮ ಮಕ್ಕಳಂ ತಂದು] ಕುಡುವುದುಂ, ಸೌಂದರಿ ಅನಂಗಮಾಲೆ ವಿಜಯೆ ಅನಂಗಸೌಂದರಿ ಸುಪ್ರಭೆ ವಿದ್ಯುದ್ವೇಗೆ ವಿಜಯಾವತಿ ರತ್ನಸೌಂದರಿ ಯೆಂಬಿವರ್ಮೊದಲಾಗೆ ಪಲರುಂ ವಿದ್ಯಾಧರಕುಮಾರಿಯರೊಳ್ ಕೂಡಿ [2] ಸಂತೋಷದಂತಮನೆಯಿರ್ದು ರಾಜ್ಯಲೀಲೆಯಿಂ ಪಲಕಾಲಮಿರ್ದೊಂದುದಿವಸಂ ॥ ೧೪೦

ಕರಿಘಟೆಯುಂ ಹಯಪ್ರತತಿಯುಂ ಭಟಕೋಟಿಯುಮೊಪ್ಪೆ ಸುತ್ತಲುಂ
ಬರೆ ಲಲಿತಾಂಗಿಯರ್ ಪದೆದು ಮೆಲ್ಲನೆ ಚಾಮರಮಿಕ್ಕೆ ಮೇಘಡಂ ।
ಬರಮೆಳಪಟ್ಟು ಶೋಭಿಸೆ ವಿಯಚ್ಚರನಾಯಕರತ್ತಲಿತ್ತಲೋ
ಸರಿಸದೆ ಕೂರ್ತು ಪೊರ್ದೆ ಬರೆ ಗಂಧಗಜೇಂದ್ರಮನೇಱಿ ಲೀಲೆಯಿಂ ॥

---

1 ಧರರೆಲ್ಲಂ ತಮ್ಮತಮ್ಮ ಮಕ್ಕಳನಾಗಳ್. (ಗ)

2 (ಗ) ಪುಸ್ತಕದಲ್ಲಿ "ಜಿನನಾಥಾರ್ಚನೆಯಿಂ" ಎಂಬ ೧೫೯ನೆಯ ಪದ್ಯವು ಇಲ್ಲಿ ಬಂದಿದೆ. (ಗ)

ಬಳಿಕ ವಜ್ರಕುಮಾರನಂ ರತ್ನಮಯಮಪ್ಪ ಕಱುಮಾಡದ ಮೇಲೆ [ವಿಳಾಸಿನೀ ಜನಮುಂ ಸೊಸೆದಿರುಂಬೆರಸು] ಕುಳ್ಳಿರ್ದ ಮಣಿಮಾಳೆ ಮಹಾದೇವಿ ಕಂಡು [ಮುಯ್ಯಂ ನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್ ॥ ] [1] ೧೪೨

ಶರಧಿಯೊಳಗಿರ್ದ ರತ್ನೋ
ತ್ಕರಮುಂ ತಮ್ಮಿಂದೆ ತಾವೆ ಬಾರವೆ ಪುಣ್ಯಂ ।
ದೊರೆಕೊಳ ಕೇಳವು ತಾವ
ಚ್ಚರಿಯಾದುವೆ ಪುಣ್ಯದಿಂದಮಾಗದದುಂಟೇ ॥ ೧೪೩

ಅಪುಷ್ಪಿತಫಲಭಾಗಿನಿಯಾದೆನೆನ್ನಿಂದಂ ಬಿಟ್ಟು ಕೃತಾರ್ಥರಿಲ್ಲೆಂದು ನಲಿದು ಮಾತಾಡುವುದುಮಾಮಾತಂ ಪವನವೇಗೆ [ಕೇಳ್ದು ವಿಸ್ಮಯಂಬಟ್ಟು] ವಜ್ರಕುಮಾರಂಗೆ [ರಾತ್ರಿಸಮಯದೊಳ್] ಅಱಿಪುವುದುಂ ಸಮ್ಯಕ್ತ್ವಚೂಡಾಮಣಿ ಕೇಳ್ದು ಮಱುದಿವಸಂ ತಮ್ಮಬ್ಬೆಯಲ್ಲಿಗೆವಂದು ಕಿಱಿಬೆಸಗೊಂಡು ತನ್ನ ವೃತ್ತಾಂತಮೆಲ್ಲಮಂ ಲೇಸಾಗಱಿದು ತನ್ನೊಳಿಂತೆಂದಂ [2] ॥ ೧೪೪

ನೀರ ಬೊಬ್ಬುಳಿಕೆ ಭಾವಿಪಂದು ಸಂ
ಸಾರಮಿಂದ್ರ ಧನುವೆಂತುಟಂತೆ ಸ ।
ಚ್ಛರೀರಮಾಗೆ ತನು ಬೀೞಲಿರ್ದ ಧಾ
ತ್ರೀರುಹಂಬೊಲೆಳಗುಂ ನಿರಂತರಂ ॥ ೧೪೫

ಸ್ತ್ರೀಯರೊಂದು ಕಡುಗೂರ್ಮೆ ನೋೞ್ಪೊಡಂ
ಮಾಯಮಿಂದ್ರಿಯ ಸುಖಂಗಳಂಬೊಡಿಂ ।
ನಾಯುಬಾಲಮೆಳಪಿಂದಮೇಕೆ ಕೇಳ್
ವಾಯಮಂ ಸ್ಥಿರಮಿದೆಂದು ನಂಬುವರ್ ॥ ೧೪೬

---

1 ಸೊಸೆದಿರ ಮೊಗಮಂ ನೋಡಿ. (ಗ)

2 ತನ್ನ ವೃತ್ತಾಂತಮೆಲ್ಲಮನಱಿದು ಸಂಸಾರಕ್ಕೆ ಹೇಸಿ. (ಗ)

ಮುನ್ನ ಮಿನ್ನ ವರೆಗಂ ಜಡತ್ವದಿಂ
ದೆನ್ನ ಕರ್ಮವಶದಿಂದಮಿರ್ದೆನಿ ।
ನ್ನೆನ್ನ ನಾನಱಿದು ರಾಜ್ಯಮೋಹದೊಂ
ದುನ್ನತಿಕ್ಕೆ ಮರಸಿರ್ಪುದೊಪ್ಪವೇ ॥ [1] ೧೪೭

ದೇಹಮಂ ಧನಮನಿಂದ್ರಿಯಂಗಳಂ
ನೇಹಮಂ ವನಿತೆಯರ್ಕಳಂ ಮಹಾ ।
ಮೋಹದಿಂ ಪಿಡಿದು ಧರ್ಮದೊಂದುಸತ್
ಸ್ನೇಹಮಂ ಬಿಡುವುದೇನದೊಳ್ಳಿತೇ ॥ ೧೪೮

[ಎಂದು ಸಂಸಾರದೊಳಾದ ಭೋಗೋಪಭೋಗಂಗಳ್ಗೆ ಹೇಸಿ
ಸಾಙ್ಗಂಗಲ್ಯಮಪ್ಪ ಜಿನರೂಪಂ ಧರಿಯಿಸುವೆನೆಂಬ ಕಜ್ಜಮನೆತ್ತಿ
ಂಡು ಭಾಸ್ಕರದೇವಂಗಂ ಮಣಿಮಾಲೆಗಮಱಿಪುವುದುಮವರಿಂತೆಂ
ದ ॥ ೧೪೯

ಬೇಡ ಮರುಳ್ತನಮಂ ನೀಂ
ಮಾಡದೆ ಪೆತ್ತನಗೆ ಕಱುವೆ ಮಱುಕಮನೋವಿಂ ।
ಮಾಡದೆ ಕೇಳ್ಸಂತಸಮಂ
ಮಾಡುವುದೀಮಾತನೆಯ್ದೆ ಮಾಣ್ಬುದು ಮಗನೇ ॥ ೧೫೦

ಜಿನಪೂಜೆಗಳಂ ನಿನ್ನಾ
ಪ್ತನಿತಂ ಮಾಡರ್ತಿಯಿಂದಕೃತ್ರಿಮಜಿನಚೈ ।
ತ್ಯಾವಾಸಂಗಳನೞ್ಕ
ರ್ತನವರತಂ ಪೋಗಿ ಬಿಡದೆ ವಂದಿಸು ಮಗನೇ ॥ ೧೫೧

---

[1] ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಳಿನಂತೆ ಮುಡಿದ ಚವುರಿ
ಂತೆ ನೆಲಹಿನ ಮೊಸರಂತೆ ಬೆನ್ನೇಱಿದ ಮಗವಿನಂತೆ ಮಾಣಿಗಡಗದ ಕೀಲಿವಂತೆ
ಗಹದ ಜೋಳದಂತೆ ಕಿತ್ತ ಪಡಿಯಂತೆ ಬಿಲದಲಿಕ್ಕಿದ ಪೊನ್ನಿನಂತೆ ಕಿವಿಯಲಿಕ್ಕಿ
ಲೆಯಂತೆ ಸೂಳೆಯರ ಕರಹದಂತೆ ಕುದುರೆ ಯೇಱಿದರಂತೆ ದಂಡಿನ ಗುಡಿ
ಂತೆ ಕಾವಲಿಯುಡುಗೆಯಂತೆ ನಿದ್ದೆಯಿಲ್ಲದ ಮಾನಸವಾಳ ನಂಬಿ. (ಗ)

ಎಂದಱಪಂ ತೋಱಿ ತಮ್ಮ ಮೋಹದಿಂ ಬಿಡಲಾಱದೆ ನುಡಿವುದುಂ ಕುಮಾರನೇಗೆಯ್ದುಂ ತಮ್ಮ ಮಾತಿಂಗೊಡಂಬಡದಿರೆ, ಮಗನ ಮನದ ದೃಢತೆಯುಮಂ ಪರೀಕ್ಷಿದಮುಮನಱಿದು ದಕ್ಷಿಣಮಧುರಾಪುರದ ಸಹಸ್ರಕೂಟಚೈತ್ಯಾಲಯದೊಳಿರ್ದ ಸೋಮದತ್ತಭಟ್ಟಾರಕರನವಳೋಕಿನೀವಿದ್ಯೆಯಿಂದಱಿದು ವಜ್ರಕುಮಾರನಂಬೆರಸು ಮಣಿಮಾಲೆಯುಂ ಮಹಾವಿಭೂತಿಯಿಂದವರಲ್ಲಿಗೆವಂದು ಸೋಮದತ್ತಭಟ್ಟಾರಕರಂ ಬಂದಿಸಿ ವಾತ್ಸಲ್ಯರತ್ನಾಕರನ ಸಂಸಾರದ ವೈರಾಗ್ಯಮಂ ಪೇೞ್ವುದುಂ ॥ ೧೫೨

ನಯದಿಂ ಮುನಿಪತಿ ಜಿನದೀ
ಕ್ಷೆಯನಂಬರಚರತನೂಭವಂಗನುನಯದಿಂ ।
ದಯೆಗೆಯ್ಯೆ ತಪಶ್ರೀಯುಂ
ಪ್ರಿಯದಿಂ ತಾಳ್ದಿದನನಂತಗುಣಗಣನಿಲಯಂ ॥ ೧೫೩

ಅಂತು ವಜ್ರಕುಮಾರಂ ಜಿನರೂಪಂ ತಾಳ್ವುದುಂ, ಭಾಸ್ಕರದೇವನುಂ ಮಣಿಮಾಲೆಯುಂ ತಮ್ಮ ವಂಶಜರೆಲ್ಲರುಮಣುವ್ರತಂಮಾಡಿ ಸೋಮದತ್ತಮುನೀಶ್ವರನುಮಂ ವಜ್ರಕುಮಾರಮುನಿಯುಮಂ ಬಂದಿಸಿ ವಿದ್ಯಾಧರಲೋಕಕ್ಕೆ ಪೋದರಿತ್ತಲ್, ವಜ್ರಕುಮಾರಮುನಿ ನಿಯಮಿತವಚನನುಂ ಸಕಲಾಗಮಕುಶಲನುಂ ಸಂಯಮಜಲನಿಧಿಯುಂ ಗುರುಪಾದಭಕ್ತನುಂ ಚತುಷ್ಕಷಾಯಾಂತಕನುಂ ದಶಧರ್ಮಸಮೇತನುಂ ವಾತ್ಸಲ್ಯನಿಳಯನುಂ ಸಮಸ್ತದೋಷರಹಿತನುಂ ಸಂಸಾರಭಯಸ್ಥನುಂ ಬಾಹ್ಯಾಭ್ಯಂತರತಪೋನಿರತನುಂ ಸಮ್ಯಕ್ತ್ವಚೂಡಾಮಣಿಯುಮಾಗಿ ತಪದೊಳೊಂದುತ್ತರೋತ್ತರಮಾಗಿ ನೆಗೞುತ್ತುಮಿರ್ಪುದುಂ ॥

ಚಾರಣಋದ್ಧಿ ಗುಣಾಳಂ
ಕಾರಂಗುನ್ನತಮಹಾವ್ರತಂಗಘ ಗಜಸಂ ।
ಹಾರಂಗೊಗೆದುದು ಜಿನಚರ
ಣಾರಾಧನಮಾಯದಿರ್ಪ ಮಸ್ತುಗಳೊಳವೇ ][1] ॥ ೧೫೪

1 ಎಂದು ಭಾಸ್ಕರದೇವನುಮಂ ಮಣಿಮಾಲಿಮಹಾದೇವಿಯುಮನೊಡಂಬಡಿಸಿ ರಾಜ್ಯಮಂ ಕೊಡುವುದುಂ ದಕ್ಷಿಣಮಧುರೆಗವರಿರ್ವರುಂ ಮುಂದಿಟ್ಟೊಡ

ಅಂತು ಚಾರಣಋದ್ಧಿಪ್ರಾಪ್ತನಾಗಿ [ಸುಕವಿನಿಕರಪಿಕವಾಕಂದನಿ]ರ್ಪುದುವಾಪುರಮನಾಳ್ವ ಪೂತಿವಾಹನಮಹಾರಾಜನ ಪಟ್ಟದ ಮಹಾದೇವಿ [ಸಮ್ಯಕ್ತ್ವನಿಳಯೆಯುಂ ಮೂಢತ್ರಯನಿವಾರಿತೆಯುಂ ಷಡಾಯತನದೂರಿತೆಯುಂ ಅಷ್ಟಮದವರ್ಜಿತೆಯುಂ ನಿಶ್ಶಂಕಾದ್ಯಷ್ಟಗುಣಸಂಪನ್ನೆಯುಂ ಅಣುವ್ರತೋಪೇತೆಯುಮೆನಿಸಿದೋಹಿಲೆಯೆಂಬಳ್ ॥ ೧೫೬

ಸಕಲಗುಣಾಢ್ಯೆ ಸತ್ಯದ ತವರ್ಮನೆ ವಾರ್ಧಿಪರೀತಧಾರಿಣೀ
ಪ್ರಕಟಿತಚಂದ್ರಸನ್ನಿಭಯಶೋನ್ವಿತೆ ನಿರ್ಮಳಸಚ್ಚರಿತ್ರೆ ಚಂ
ಪಕನುತಗಂಧೆ ಜೈನಪದಭಕ್ತೆ ಮನೋಹರರೂಪೆ ಕಾಮಿನೀ
ನಿಕರಕಮೋಘರತ್ನೆ ನೆಗಳ್ದೋಹಿಲೆಯೆಂಬುದು ಭವ್ಯಸಂಕುಳಂ] [1] ॥

ಅಂತು ನೆಗಪ್ತೆಗಂ [ಪೊಗಳ್ತೆಗಂ] ನೆಲೆಯಾದೋಹಿಲೆಮಹಾದೇವಿ ಸುಖಸಂಕಥಾವಿನೋದದಿಂದಿರೆ, [ಮತ್ತಮಾಪುರದೊಳ್ ಸಮುದ್ರದತ್ತನೆಂಬ ಪರದನಾತನ ಪೆಂಡತಿ ಧನದೆಯೆಂಬಳಾಯಿರ್ವರುಂ ಪಲಕಾಲಂ ಸುಖಮನನುಭವಿಸುತ್ತಿರ್ಪುದುಂ ಸಮುದ್ರದತ್ತಸೆಟ್ಟಿ ತೊಟ್ಟನೆ ಕೊಳ, ಜವನ ದೂತರ್ ಬರ್ಪನ್ನೆತಾನುಂ ಸಮುದ್ರದತ್ತಸೆಟ್ಟಿಯ ಮಹಾಶ್ರೀಗೆ ಕರ್ಮರಾಜನ ನಾಟು ಬರ್ಪಂತಾನುಂ ಧನದೆಗೆ ಗರ್ಭಮಪ್ಪುದುಂ ॥

ಸಿರಿಯೆಲ್ಲಂ ನೆವನೆವದಿಂ
ದುರಿಯೊಳ್ ಬಿಜ್ಜರಗಿನಂತೆ ಕರಗುವುದುಂ ನಿ ।

---

ಗೊಂಡು ಬಂದು ಸೋಮದತ್ತಭಟ್ಟಾರಕರ್ಗೆ ವಜ್ರಕುಮಾರನೊಳಾದವೃತ್ತಾಂತಮೆಲ್ಲಮಂ ಪೇಳ್ದು ದೀಕ್ಷೆಯಂ ಕೊಡಿಸಿ ಮುನಿಗಳ್ದು ಪೋಪರಿತ್ತಲ್ ॥

ಪದ್ಧತಿಯಿಂದಂ ಚಾರಣವೃದ್ಧಿ ದಿಟಂ ಸುಕವಿನಿಕರಪಿಕವಾಕಂದಂ ।
ಗುದ್ಧತಿಯಿಂದಂ ಮನಸಿನ ಸಂಶುದ್ಧತೆಯುಂ ತೋರ್ಪ ತೆಱದಿನೊಗೆಯಿತ್ತಾಗಳ್ ॥ (ಗ)

1 ಓಹಿಲೆಯೆಂಬಳ್ ಧರ್ಮೋದಿತೆ ಶ್ರೀಗದಿನಾವನಿತ ಸೀತೆಗಂ ಜಿನಪೂಜೋ ।
ತ್ಸಾಹದಿನಾವಧು ಶಚಿಗಂ ತಾನಗ್ಗಳಮೆಂದು ಧರಣಿ ತಾಂ ಕೈಮುಗಿಗುಂ॥(ಗ)

ಷ್ಟ್ರರಮಪ್ಪ ದರಿದ್ರತೆ ಪೊ
ರ್ದಿರೆ ಕಲ್ಪಿಂ ಸಿರಿಗಮೆಂದು ತಾಂ ಗೆಂಟಾದರ್ ॥ ೧೫೯

ಮುನ್ನಿನ ಸಿರಿಯುಂ ಸನೆಸನೆ
ದುನ್ನತಿಗೆಟ್ಟಳವುಗೆಟ್ಟು ಬಡತನದೊದವಿಂ ।
ದನ್ನಂಬಡೆಯದೆ ಮಱುಗಿ ಕ
ರನ್ನೋವಿಂ ಪೆಂಪುಗೆಟ್ಟು ನವೆಯುತ್ತಿರ್ದರ್ ॥ ೧೬೦

ಅಂತು ಬಡತನವೊದವೆ ಸಮುದ್ರದತ್ತಸೆಟ್ಟಿಯುಂ ಧನದೆಯುಂ ದುಃಖವೆಂಬ ಸುೞಿಯೊಳ್ ಬಿರ್ದು ಮೂಡಿ ಮುೞ್ಕಾಡುತ್ತಿರೆ, ಕಪ ರ್ತಯ ಮೇಲೆ ಕೊಲೆಯೆಂಬಂತೆ, ಬಡತನದ ಮೇಲೆ ಮಾರಿಗುತ್ತ ಮಾಗೆ ಪಿರಿದಪ್ಪಾಪತ್ತಂ ಮಾಡಿದ ಮಗವಿನ ಮೊಗಮನೇಗೆಯ್ದುಂ ನೋಡಲೊಲ್ಲೆನೆಂಬಂತೆ ಸಮುದ್ರದತ್ತಸೆಟ್ಟಿ ಯಮನಿವಾಸಮನೆಯ್ದು ವುದುಂ ಧನದೆಗೆ ದುಃಖಮಿಮ್ಮಡಿಸಿ ಚಿಂತಾಸಮುದ್ರದೊಳಗೋಲಾಡುತ್ತಿ ರ್ದು ನವಮಾಸಂ ನೆಱೆದು ಪೆಣ್ಗೂಸಂ ಪೆತ್ತು ॥ ೧೬೧

ತಂದೆಯನವೆಯವದಿಂದಂ
ಕೊಂದೀಶಿಶು ಬೇಗಮೆನ್ನುಮಂ ಕೊಲ್ಗುಂ ಪೋ ।
ಸಂದೆಯಮಿಲ್ಲೆನ್ನಾಣ್ಮನೊ
ಳೊಂದುವೆನಾಂ ಮುನ್ನಮೆಂಬ ತೆಱದಿಂದಾಗಳ್ ॥ ೧೬೨

ಧನದೆಯುಮನದೆಯಾಗಿ ಕೆಲವುದಿವಸಕ್ಕೆ ಕ್ರೂರಾಂತಕನ ದಾಡೆ ಗೊಳಗಪ್ಪುದುಂ, ಕೂಸನಾಥೆಯಾಗಿ ಪೂರ್ವಕೃತಕರ್ಮಫಲಮನನು ಭವಿಸುತ್ತುಂ ಕಲ್ಪಡೆಯದೆ ಪೊೞಲೊಳಗೆಂಜಲಗುೞನಾಯ್ದು ಲಸಿ ಕುಱುಕುತ್ತುಂ ಬೀದಿಯೊಳ್ ಪೆಱರ್ಮೆಲೀಡಾಡಿದ ಪಣ್ಪಲಂಗಳಂ ಮೆಲುತುಂ ಕಾಲಮಂ ಕಳಯುತ್ತುಮಿಪ್ಪುದುಮನೊರ್ಮೆ ॥ ೧೬೩

ಜಿನತತ್ವಾಂಭೋನಿಧಿವ
ರ್ಧನಚಂದ್ರರ್ ದುರಿತವಾರ್ಧಿಬಡಬಾನಳರಿಂ ।

ದ್ರನಗಕ್ಷಮರಂತಳಿನಂ
ದನರುಂ ನಂದನರುಮೆಂಬರಿರ್ವರ್ಮುನಿಗಳ್ ॥

ಚರಿಗೆಯಂ ಮಾಡಿ ಪೋಗುತ್ತುಂ ಕಸಗುಪ್ಪೆಯೊಳಂಜಲಗ
ನಾಯ್ದುಲಿಸಿ ತಿಂಬ ಮಗುವಂ ಕಂಡು ನಂದಸಮುನೀಂದ್ರರ್ ವಿಸ್ಮಯ
ಬಿಟ್ಟು ಸಂಸಾರದಿಂ ಬಿಟ್ಟು ಕಷ್ಟವಿಲ್ಲೆಂಬುದುಮಾಳಿನಂದನಭಟ್ಟಾ
ಕರಿಂತೆಂದರಿಂತುನಮೀಮಗವೀ ಪುರಮನಾಳ್ವ ಪ್ರೀತಿವಾಹನಮಹಾ
ಜಂಗೆ ಪ್ರಾಣವಲ್ಲಭೆಯಪ್ಪಳೆಂಬುದುಮಾಮಾತಂ ಪೆಱಗೆ ಬರು
ಮಿರ್ದ ಬುದ್ಧಾತ್ಮನೆಂಬ ರಕ್ತಾಂಬರಧರಂ ಕೇಳ್ದು ಋಷಿವಾಕ್ಯಂ ತ
ದೆಂದು ಮಗವಂ ತನ್ನ ದೇಹಾರಕ್ಕೊಯ್ದು ಬುದ್ಧದಾಸಿಯೆಂದು ಪೆ
ನಿಟ್ಟು ನಡೆಪುವುದುಂ ॥ ೧

ಪುರುಡಿಸುವಳ್ ವಿಳಾಸದ ಪೊದಳ್ಕೆಗೆ ವಿಭ್ರಮದೇಳ್ಗೆ ಗಂಬರ
ಚರಿಯರೊಳಂದ್ರಲೋಕಲಲಿತಾಂಗಿಯರೊಳ್ ಕಡುಗಾಯ್ದು ದರ್ಪ ವ
ಚರಿಸುವಳುನ್ನತಿಕ್ಕೆಗೆ ಪೆಡಂಗಿನ ತೋರ್ಕೆಗೆ ನೋಡ ನಾಡ ಸೌಂ
ದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗವುನ್ನತಿಕ್ಕೆಗಂ ॥ ೧

ಅಂತು ಮಹಾಹಾವಭಾವವಿಲಾಸವಿಭ್ರಮಂಗಳ್ಗೆ ನೆಲೆಯಾಗಿ ಬು
ದಾಸಿ ಶೃಂಗಾರದುಳಿಯಾಗಿರ್ದೊಂದುದಿವಸಂ ದೇಹಾರದ ಪೆಱಗಣ ನಂ
ವನವೊಳುಯ್ಯಾಲೆಯಾಡುತ್ತುಮಿರ್ಪುದುಂ, ಪ್ರೀತಿವಾಹನಮಹಾರಾಜಂ ಗ
ಸಿಂಧುರಾರೂಢನಾಗಿ ಬೀದಿಯೊಳ್ ಪೋಗುತ್ತುಂ ತೊಟ್ಟನೆ ಕಂಡು॥ ೧

ಸ್ಮರನ ಸರಲ್ಗಳ್ ನಡುಕೋ
ಲ್ವರ್ಗಂ ನಡೆ ಪ್ರೀತಿವಾಹನಂ ಪೋಗದೆ ನಿಂ ॥
ದರವಿಂದಾಕ್ಷಿಯ ರೂಪಂ
ಪರಿಭಾವಿಸಿ ನೋಡಿ ತೂಗಿ ತಲೆಯಂ ಬೇಗಂ ॥ ೧

ಅರಮನೆಗೆ ಪೋಗಿ ವಿರಹಸಂತಾಪದಿಂ ನಿಲಲಾಱದೆ ಬುದ್ಧ
ಸಿಯುಮಂ ಬೇಡಿ ಪೆರ್ಗಡೆಗಳಂ ಬುದ್ಧರಕ್ತಾಂಬರನಲ್ಲಿಗಟ್ಟುವುದು

ಬುದ್ಧಾತ್ಮಂ ತಿರಿವಂಗೆ ಸಿರಿ ದೊರೆಕೊಂಡಂತೆ ಪೆರ್ಚಿ ಋಷಿವಾಕ್ಯಮೇಕೆ ತಪ್ಪುಗುಮೆಂದು ಮನದೊಳ್ ಬಗೆದು ಸಿರಿ ಬರೆ ಮೋಣಕಾಲನಾಂತರೆಂಬಂತೆ ನಿಮ್ಮರಸಂಗಂ ಪ್ರಾಣಮುಮನರ್ಥಮುಮನೀವೆಂ ಕೂಸಾವ ಪಿರಿದೆಂದು ಕುಡುವುದುಂ, ಪೂತಿವಾಹನಮಹಾರಾಜಂ ಬುದ್ಧದಾಸಿಯೊಳ್ ಪ್ರಾಣವಲ್ಲಭನಾಗಿ] 1 ॥ ೧೬೯

ರತಿಪತಿಯು ಟಕ್ಕ ಕೊಳ ಭೂ
ಪತಿ ಮತ್ತಿನ ಕಾಂತೆಯರ್ಕಳಂ ನೋಡದೆ ಸ ।
ನ್ಮತಮಪ್ಪ ಪೆಱವುಕಾರ್ಯಮು
ನತಿಶಯದಿಂ ಬಿಟ್ಟು ಕೇಳದನ್ಯರ ಮಾತಂ ॥ ೧೭೦

[ಬುದ್ಧದಾಸಿಯುಮ್ ಪತ್ತಿ ಕಣ್ಣ ಮುಯಿಕ್ಕುವನಿತುಪೊತ್ತುಪ್ಪೊಡಮಗಲದೆ ಕೂರ್ಮೆಯಿಂದಿರ್ಪುದುಂ ಸಕಲಗುಣನಿಳಯೆಯೆನಿಪ್ಪೋಹಿಲೆ ಮಹಾದೇವಿ ಫಾಲ್ಗುನದ ನಂದೀಶ್ವರದಂದು ಮಹಾಮಹಿಮೆಯಿಂ ಜಿನಪೂಜೆಯಂ ಪ್ರೊಬಿಮಡಿಸುವುದುಂ ಬುದ್ಧದಾಸಿ ತನಗೆ ಪೂತಿವಾಹನಮಹಾರಾಜನೆರಡಿಲ್ಲದೆ ಸ್ನೇಹಂಗೆಯ್ವನಪ್ಪುದಱಿಂ ಜಿನಪೂಜೆಗೆ ವಿಘ್ನಮಂ ಮಾಡಿ ತಮ್ಮಯ್ಯನಪ್ಪ ಬುದ್ಧಾತ್ಮನ ಮತದಿಂ ಮುನ್ನಂ ಬುದ್ಧನ ಪೂಜೆಯಂ] 2 ॥ ೧೭೧

---

1 ಆಪುರಕ್ಕೆ ಯಭಿನಂದನಭಟ್ಟಾರಕರೆಂಬ ಋಷಿಯರ್ ತಮ್ಮ ಶಿಷ್ಯರ್ ನಂದನರೆಂಬ ಋಷಿಯರ್ವೆರಸು ವಿಹಾರಿಸುತ್ತಂ ಬಂದು ಪೊಬಪೊಳಲೊಳಗಿರ್ಪುದುಮೊಂದು ಪೆಣ್ಗೊಸನಾಥೆ ಕಾಯಿಕಸವನೆಂಜಲುಗೊಳನಾಯಸ್ಥಾಯುದ್ದ ತಿನ್ನುತ್ತಿರ್ಪುದುಂ, ನಂದನಮುನಿಗುರುಗಳ್ಗೆ ತೋಱಿ ಸಂಸಾರದಿಂದಂ ಬಿಟ್ಟು ಪಗರಣಮಿಲ್ಲೆಂಬುದುಮವರವಧಿಜ್ಞಾನಿಗಳಪ್ಪುದಱಿಂ ಸೀಂ ಪೇಳ್ದಂತುಟೆ ಸಂಸಾರಂ ದಿಟಂ ಪಗರಣಮಿಲ್ಲೀಮಗವೆ ಪೂತಿವಾಹನಮಹಾರಾಜಂಗೆ ಪ್ರಾಣವಲ್ಲಭೆಯಾದಪಳೆಂಬುದುಂ ಬುದ್ಧಾತ್ಮನೆಂಬ ಬೌದ್ಧಂ ಕೇಳ್ದು ಸಮಣೋ ಅಮೋಘನಯಣೋ ಎಂಬುದು ತಪ್ಪದೆಂದು ವಂಗವಂ ವಿಹಾರಕ್ಕೊಯ್ದು ಬುದ್ಧದಾಸಿಯೆಂದು ಪೆಸರನಿಟ್ಟು ನಡವುವುದುಂ ಪೂತಿವಾಹನಮಹಾರಾಜಂ ಕಂಡು ಕಣ್ಬೇಟಂಗೊಂಡು ತನಗರಸಿಮಾಡಿ (ಗ)

2 ಇರ್ಪುದುಂ ಓಹಿಲೆಮಹಾದೇವಿ ಫಾಲ್ಗುಣನಂದೀಶ್ವರದೊಳ್ ಜಿನಪೂಜೆಯುಂ ಮಾಡಲೆಂದೊಡರಿಸ ಬುದ್ಧದಾಸಿ ತಾನರಸನ ಕೂರ್ಮೆಯುನಱಿವಳಪ್ಪುದಱಿಂ ಬುದ್ಧಾತ್ಮನ ಮತದಿಂ ಜಿನಪೂಜೆಯಂ ವಾರಿಸಿ ಬುದ್ಧಪೂಜೆಯುಮಂ ಮುನ್ನಂ (ಗ)

ಅವೆಯುಪದಿಂದಂ ಪೊಱಮಡಿ
ಸುವ ಬಗೆಯಿಂ ರತಮನೊಪ್ಪಮಾಗಿರೆಕಗಮುಂ ।
ತ್ಸವದಿಂ ಮಾಡಿಸಿ ವಾರಣ
ನಿವೆಹಂ ಹಯನಿಕರವಾರವನಿತಾನಿಚಯಂ ॥ ೧೭೨

ಬೆರಸಗುವರ್ಾಗೆ [ಬುದ್ಧದಾಸಿ ಫರ್ಚಿಂದಂ] ಇರ್ಪುದುಂ ಓಹಿಲೆ ಮಹಾದೇವಿ ಬುದ್ಧದಾಸಿ ಜಿನಪೂಜೆಯಂ ಮಾಡಿಸಿ ಸುಗತನ ರಥಮಂ ಪೊಱಮಡಿಸಿದಳೆಂದು [1] ಸಭಾಕ್ಷೋಭಮಾಗೆ ಗರ್ಜಿಸಿ ॥ ೧೭೩

ಜಿನಪನ ಕೂರ್ಮೆಯನಾಕಾ
ಮಿನಿ ನಂಬಿ ಮಹಾಪ್ರತಾಪದಿಂ ಪೆಱರಂ ದು ।
ರ್ಮನದಿಂ ಕೈಕೊಳ್ಳದೆ ಕೆ
ಮ್ಮನೆ ತನ್ನನೆ ಕೊಂಡು ಕೊಸೆದು ಪೊಗೞುತಿರ್ಪಳ್ ॥ ೧೭೪

ಆದಿಯ ತಿರಿಕಂಗೊರ್ವೆಯೆ
ಮೇದಿನಿ ದೊರೆಕೊಂಡುದಪ್ಪೊಡೇಂ ಮುನ್ನಂ ತಾ ।
ನೋದಿಲ್ಲದವನ ನಂದನ
ನೋದಿದೊಡಂ ಬಗೆಪನಲ್ಲನನ್ಯರನೆಂದುಂ ॥ ೧೭೫

ಶಾಂತಿಯ ಪೆಸರ್ ಮೈಲಾರಮೆಂಬಂತೆ, ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ, ತೊತ್ತಿನ ಪೆಸರ್ ಸಿರಿಯ ದೇವಿ ಯೆಂಬಂತೆ, ಎಮ್ಮೆಯ ಪೆಸರ್ ಮಹಾದೇವಿ ಯೆಂಬಂತೆ, ಓಡಿನ ಪೆಸರ್ ಮಂಗಳ ಮೆಂಬಂತೆ ತಾನುಮರಸಿಯಾಗಿ [ಮಿಯಪ್ಪಂತು ಸೊಕ್ಕಿ] ತಮ್ಮಯ್ಯ ನಪ್ಪ ತಂಗುಪ'ದಿರಿಕನ ಮಾತಂ ಕೇಳ್ದು ದಕ್ಷಿಣಮಧುರಾಪುರದೊಳಂ ದುಂಪೊಱಮಡದ ಸುಗತನ ರಥಮಂ [2] ಪೊಱಮಡಿಸಿ [ಸದಾಕಾಲಂ ಪೊಱ ಮಡುವ] ಪಾಂಡ್ಯಾನ್ವಯಸ್ವಾಮಿಯಪ್ಪ ಜಿನಸ್ವಾಮಿಯ ಪೂಜೆಯಂ [ಪೊಱಮಡಲೀಯದೆ ಕೊರ್ವಿದೊಡೇನಾಯ್ತು, ಪೂತಿವಾಹನ ಮಹಾ

1 ಇರ್ಪುದುಂ ಅದನೊಹಿಲೆಮಹಾದೇವಿ ಕೇಳ್ದು (ಗ)
2 ಬುದ್ಧ ಪೂಜೆಯಂ (ಗ)

ರಾಜನ ಕೂರ್ಮೆಯ ಪೆಂಡತಿಯಪ್ಪ ತನ್ನ ದಲಮುಮನ್ನ ದಲಮುಂ ಕಾದಲಕ್ಕುಮೆಂದು ಪೊಣ್ದು ಸೋಮದತ್ತ ಮುನಿಪತಿಯಲ್ಲಿಗೆ ವಂದು ಭಕ್ತಿಯಿಂ ಬಂದಿಸಿ ತನಗಾದಪಮಾನಮಂ ಪೇೞ್ದು ] [1] ॥ ೧೩೬

ಪರಮಜಿನೇಶನ ರಥಮಿಾ
ಪುರದೊಳ್ ಮುನ್ನಿಂತು ನಡೆವುದಾಮಾರ್ಗದೊಳೀ ।
ಪ್ಪಿರೆ ನಡೆದೊಡುಣ್ಬೆನಲ್ಲದೊ
ಡರವರಿಸುವೆಳಲ್ಲೆನೆನಗೆ ಯಾವಜ್ಜೀವಂ ॥ ೧೩೭

ಆಹಾರಶರೀರನಿವೃತ್ತಿಯೆಂಬುದುಂ [ಸೋಮದತ್ತಭಟ್ಟಾರಕರಿಂತೆಂದರ್: — ವಜ್ರಕುಮಾರಮುನಿಕುಂಜರನಿಂ ನಿಮ್ಮ ಕಾರ್ಯಂ ತೀರ್ಗುಂ ನೀವಿದಕ್ಕುಮ್ಮಳಿಸದೆ ಅಲ್ಲಿಗೆ ಪೋಗಿಮೆನೆ ವಾತ್ಸಲ್ಯರತ್ನಾಕರನಲ್ಲಿಗೆ ಪೋಗಿ ವಿಧಿಪೂರ್ವಕಂ ಬಂದಿಸಿ ತನ್ನ ಮನದ ಕಾರ್ಯಮಂ ನೆಱೆಯೆ ಪೇೞ್ದು, ಸೋಮದತ್ತ ಮುನಿಪತಿಯು ಮುಂದೆ ನುಡಿದ ಪ್ರತಿಜ್ಞೆಯಂ ಮಾಡುವುದುಂ ಸಮ್ಯಕ್ತ್ವಚೂಡಾಮಣಿ ತನ್ನೊಳಿಂತೆಂದಂ ॥

ಕಲ್ಯಾಣಮುಮೆನಿಸುವ ವಾ
ತ್ಸಲ್ಯಂ ಕೇವಳಮೆ ಸರ್ವಸೌಖ್ಯಕ್ಕಂ ಮಾಂ ।
ಗಲ್ಯಂ ಮುಕ್ತಿಶ್ರೀಗಿದು
ಮೌಲ್ಯದ ತೊಡವುಗ್ರಕರ್ಮಭಯಸಂಹರಣಂ ] [2] । ೧೩೯

ತತ್ಸೌಖ್ಯಮೆನೊಲ್ವ ನರಂ
ಮಾತ್ಸರ್ಯಮನೆಯ್ದೆ ಬಿಟ್ಟು ಚಾತುರ್ವರ್ಣ್ಯಾ ।
ಕ್ಕುತ್ಸವದಿಂದಂ ಮಾೞ್ಪುದು
ವಾತ್ಸಲ್ಯಮನಱಿದು ಜೈನವಚನಾಂಬುಧಿಯೊಳ್ ॥ ೧೪೦

---

1 ಮಾಣಿಸಿದಳ್ತನ್ನರಸಿತನಮಂ ಕಾಣಲಕ್ಕುಮೆಂದು ಸೋಮದತ್ತಭಟ್ಟಾರಕರಲ್ಲಿಗೆ ಬಂದು (ಗ)

2 ಸಹಜಕವಿಜನಪಯಃಪಯೋಧಿಹಿಮಕರಾ ಕೇಳ್ದು (ಗ)

ಪಡಿಯಿಲ್ಲದ ಮನೆಯುಂ ಪೆ
ರ್ಗಡೆಯಿಲ್ಲದ ರಾಜ್ಯಮುಂ ಮಹಾ[1] ವಾತ್ಸಲ್ಯಂ ।
ಗಡವಿಲ್ಲದ ಗುಣಗಣಮುಂ[2]
ಬಡವನ ಯೌವನಮು[3] ಮೊಪ್ಪಲಾಱವು ಜಗದೊಳ್ ॥ ೧೪೧

ಅದಱಿಂ ವಾತ್ಸಲ್ಯಮೆಂಬುದು ಸಾಮಾನ್ಯಮಲ್ಲದಿದನುದಾಸೀನಂಗೆ ಯ್ಯಲಾಗದೆಂದು ಸಹಜಕವಿಜನಮನೋಹರೋದ್ಯಾನಕಳಕಂಠನೋಹಿಲೆಮಹಾದೇವಿಗಿಂತೆಂದಂ ॥ ೧೪೨

ವಾರಿಜನೇತ್ರೆ ದಿವ್ಯಗುಣಭೂಷಣೆ ಭವ್ಯಜನಾನುರಾಗೆ ನಿ
ಷ್ಕಾರಣಮೇಕೆ ಪೂಣ್ಕೆ ನಿನಗುರ್ವಿಯೊಳಾವಗಮಾವ ಕಾರ್ಯಮುಂ
ತೀರದದುಂಟೆ ನಾಳೆ ಜಿನಪೂಜೆಯನಚ್ಚರಿಯಾಗೆ ಖೇಚರ
ಶ್ರೀರಮಣೀಶರಿಂ ನಡೆಸುವೆಂ ನಿನಗುತ್ಸವಮಾಗಲರ್ತಿಯಿಂ[4] ॥ ೧೪೩

[ಎಂಬುದುಂ, ಓಹಿಲೆಮಹಾದೇವಿ ಸುಕವಿನಿಕರ ಪಿಕಮಾಕಂದನ ವಚನದಿಂ ಚಂದ್ರೋದಯದ ಸಮುದ್ರದಂತೆ ಪೆರ್ಚಿಂದಮಿಪ್ಪುದುಂ ವಾತ್ಸಲ್ಯರತ್ನಾಕರಂ ಚಾರಣಋದ್ಧಿಪ್ರಾಪ್ತನಪ್ಪುದಱಿಂ ಪವನವೇಗದಿಂ ದಮರಾವತೀಪುರಮನೆಯ್ದಿ ರಾಜಮಂದಿರಮಂ ಪುಗುವುದುಂ ॥ ೧೪೪

ಶ್ರೀವಜ್ರಕುಮಾರಮ
ಹಾಮುನಿಪನ ಬರವನಱಿದು ಭಾಸ್ಕರದೇವಂ ।
ಶ್ರೀಮಹಿತನೊಸೆದು ಪಡೆದು ಮ
ಹಾಮುದದಿಂದೆಟ್ಟು ಸಿಂಹವಿಷ್ಟರದಿಂದಂ ॥ ೧೪೫

ಅಂತು ಮಣಿಮಾಲೆಮಹಾದೇವಿಗಿದಿರೆಟ್ಟು ಬಂದು ಬಲಗೊಂಡು ಬಂದಿಸಿ ಭಕ್ತಿಯಿಂದಿದಿಗೊಂಡು ಪೋಗಿ ವಿಸ್ತೀರ್ಣಮಪ್ಪ ವಿಷ್ಟರ ಮನೇಱಲಿಕ್ಕಿ ಕಾಲಂ ಕರ್ಚಿ ತಳೋದಕಮಂ ತಲೆಯ ಮೇಲೆ ತಳಿದು ಕೊಂಡು ॥ ೧೪೬

---

1 ರಾಜ್ಯಲಕ್ಷ್ಮಿಯುಂ (ಗ) 2 ಗುಣಮುಂ ಮೋಘ (ಗ)
3 ಪೆರ್ಮಾತು (ಗ)
4 ಶ್ರೀರಮಣೀಶರಿಂ ನಡಸುತಮುಳ್ಳವರ್ಗೆಪಥಾತಮಪ್ಪನಂ (ಗ)

ಸುರತರುವಿನ ಪೊಲ್ಲೆಯು ಪಾ
ದರಿಯು ನಮೇರುವಿನ ಪಾರಿಜಾತದ ಪುಷ್ಪೋ ।
ತ್ಕರದಿಂ ವಜ್ರಮುನೀಂದ್ರನ
ಚರಣಮನಾನಂದಚಿತ್ತದಿಂ ಪೂಜಿಸಿದರ್ ॥ ೧೮೭

ಅಂತು ಪೂಜಿಸಿ ಮುನಿಕುಂಜರನ ಬರವಿಗೆ ಪೆರ್ಚಿ ಕಿಱಿದು ಬೇಗಂ ಭಾಸ್ಕರದೇವನುಂ ಮಣಿಮಾಲೆಯುಂ ಸರ್ವ್ವಸ್ತ್ವ ಚೂಡಾಮಣಿಯು ಕಾಲ್ಗಳಂ ತಮ್ಮ ತೊಡೆಯಮೇಲಿರಿಸಿ ಮೆಲ್ಲಮೆಲ್ಲನೊತ್ತುತ್ತುಂ ಧರ್ಮಮಂ ಕೇಳ್ದು ತದನಂತರಂ ಮುನೀಂದ್ರೋತ್ತಮರ ಮೊಗಮಂ ನೋಡಿ ಕರಕಮಳಮುಕುಳಿತರಾಗಿರ್ದಿಂತೆಂದರ್][1] ॥ ೧೮೮

ಉಮ್ಮಳಿಕೆ ಪೋಯ್ತು ನಯದಿಂ
ದೆಮ್ಮ ಘನಿಕುರಂಬಮಿಂದು ನೆಟ್ಟನೆ ಪೋದುವು ।
ನಿಮ್ಮಡಿ ಸಂತಸದಿಂದಂ
ನಿಮ್ಮ ಶ್ರೀಪಾದಪದ್ಮಮಂ ಕಂಡೀಗಳ್ ॥ ೧೮೯

[ಎಂದು ತಮ್ಮ ಭಕ್ತಿಯಂ ಪೊಱಗಣ ಜನಕ್ಕೆ ತೋರ್ಪಂತೆ ನುಡಿದವರ್ನಿಮ್ಮಡಿ ಬೆಸನಾವುದು ಬೆಸಸಿಮೆನೆ ಭಾಸ್ಕರದೇವಂಗೆ ವಾತ್ಸಲ್ಯರತ್ನಾಕರನಿಂತೆಂದಂ. ನೀಂ ನಿಮ್ಮ ಸಮಸ್ತವಿದ್ಯಾಧರಬಲಂಬೆರಸು ಎಮ್ಮೊಡನೆ ದಕ್ಷಿಣಮಧುರಾಪುರಕ್ಕೆ ವೆಂದು ಪೂತಿವಾಹನಮಹಾರಾಜನ ಪಿರಿಯರಸಿಯುರ್ವ್ವೀಹಿಲೆಮಹಾದೇವಿಯ ಜಿನಪೂಜೆಯಂ ಪೊಱಮಡಿಪು ದೆಂಬುದುಂ, ಮಹಾಪ್ರಸಾದಮಂತೆಗೆಯ್ವೆಮದಾವ ಗಹನಮೆಂದುಭಯಶ್ರೇಢಿಯ ವಿದ್ಯಾಧರರ್ಗೆಲ್ಲಂ ಬಟಿಯುನಟ್ಟುವುದುಮೆರಡುಗೇಳದೆ ತೆಂತಮ್ಮ ಮಹಾವಿಭೂತಿಯಿಂದೊದವಿ ವಿದ್ಯಾಧರಮಹೀವಲ್ಲಭರಮರಾವತೀಪುರಕ್ಕೆ ವರ್ಪುದುಂ ॥ ೧೯೦

---

[1] ಎಂದು ಸಂತೋಷಂಬಡೆ ನುಡಿದು ಚಾರಣವೃದ್ಧಿಪ್ರಾಪ್ತನಪ್ಪುದಱಿಂದ ಮರಾವತಿಪುರಕ್ಕೆ ತತ ಣದಿಂ ಪೋಪುದುಂ ಭಾಸ್ಕರದೇವನುಂ ಮಣಿಮಾಲೆಮಹಾದೇವಿಯುಮಿದಿರ್ಗೊಂಡುಚ್ಚಾಸನದೊಳಿರಿಸಿ ಕಾಲಂ ಕರ್ಚಿ ಪಾದೋದಕಮಂ ತಳೆಯು ಮೇಲೆ ತಳಿದುಕೊಂಡು ಪೂಜಿಸು (ಗ)

ಅರಮನೆಯಿಂದಂ ವಿಬುಧೇ
ಶ್ವರನಿಕರಂ ರಾಜಲೀಲೆಯಿಂ ಪೊಱಮಟ್ಟ್ |
ದರದಿಂ ಸಮಸ್ತವಿದ್ಯಾ
ಧರರಾಜರ್ವೆರಸು ವಜ್ರಮುನಿಪನ ಬೆಸನಿಂ ] [1] ॥ ೧೯೧

ದೆಸೆ ಮಾರ್ದನಿಯೆಡೆ ಪಱೆ ಘೂ
ರ್ಣಿಸೆ ದುಗ್ಧಾಂಬುಧಿಯ ತೆರೆಗಳಂ ಪೋಲ್ತತ್ತಂ |
ಪಸರಿಸೆ ಗಗನದ ತಳದೊ
ಳ್ಮಸುಗುವ ಬೆಳ್ಗೊಡೆಯುಮೊಸೆವ ಮುತ್ತಿನ ಕೊಡೆಯುಂ ॥೧೯೨

ನೆರೆದು ಮಹೀಧರತತಿಗಳ್ [2]
ಧರೆಯಂ ಬಿಟ್ಟಂತರಿಕ್ಷದೊಳ್ ತಮ್ಮನಿತುಂ |
ಕರವೊಪ್ಪಿರ್ದಪುವೆಂಬಂ
ತಿರೆ ರಂಜಿಸಿದುವು ಮದಾಂಧಸಿಂಧುರಘಟೆಗಳ್ ॥ ೧೯೩

ತಾರಾವಳಿಗಳ್ ವಜ್ರಕು
ಮಾರಮುನೀ [3] ಶ್ವರನನಿದಿರ್ಗೊಳಲ್ ಬಂದು ಸವಿ |

1 ಬೆಸನಾವುದು ಮುನಿವಲ್ಲಭ ಬೆಸಸೆಂಬುದು ಸುಕವಿನಿಕರಪಿಕವಸಂತಂ |
ಬೆಸಸಿದನಂಬರಚರಗತಿಗಸಹಾಯಪರಾಕ್ರಮಂಗೆ ತನ್ನೊಲವಿಂದಂ ||
ನಿನ್ನ ಸಕಲವಿದ್ಯಾಧರಬಲಂಬೆರಸು ದಕ್ಷಿಣಮಧುರೆಗೆ ಬಂದು ಪೂತಿವಾಹನ ಮಹಾರಾಜನಾತನ ಪಿರಿಯರಸಿ ಪ್ರೋಹಿಲೆಮಹಾದೇವಿಯು ಪೇಳ್ದ ಮನೆ ಗೆಯ್ದು ನಂದೀಶ್ವರದಷ್ಟಾಹ್ನಿಕಮಂ ಮಾಡುವುದೆಂಬುದು ಮಹಾಪ್ರಸಾದ ಬೆಸನಂ ಕೈ ಕೊಂಡೆನೆಂದುಭಯವಿದ್ಯಾಧರಶ್ರೇಣಿಯನಾಯ್ಕರೆಲ್ಲರುಮಂ ಬರಿಸಿ,
ಅರಮನೆಯಿಂದಾಗಳ್ ಭಾಸ್ಕರದೇವವಿಯಚ್ಚರೇಶ್ವರಂ ಪೊಱಮಟ್ಟಂ
ಶರನಿಧಿ ಪಲವುಂ ಘೂರ್ಣಿಸಿ ಮೊಱೆವಂತಿರೆ ಪಱೆಯ ದನಿಗಳೊಡನೆಸೆದಿರೆಗಂ ||
ಶರನಿಧಿ ನೋಡಲ್ವೇಳ್ಕುಂಬರಚಕ್ರಮನೆಂದು ನೆಲದಿ ನೆಗಳ್ದಪರಂಬಂ
ತಿರೆ ಗಗನತಳದೊಳೊಪ್ಪಂ ಬೆರಸಿರ್ದುದು ನಡೆವ ಖೇಚರೇಶ್ವರಸೈನ್ಯಂ ||
ಪನ್ನಿರಡುಗಾವುದಗಲಂ ಪುನ್ನಂ ಮೂವತ್ತುನಾಲ್ಕುಗಾವುದ ನೀಳಂ
ತನ್ನೊಡನೆನಡದುದೆಂದತ್ಯುನ್ನತಿಯಿಂ ಖೇಚರಾಧಿನಾಥನ ಕಟಕಂ ॥ (ಗ)
2 ಪರಿದೆಲ್ಲಾ ಪರ್ವತಮುಂ (ಗ) 3 ಖಚರಶ್ರಿರಮಣೀ (ಗ)

ಸ್ತ್ರರದಿನಿರ್ದಪುವೆನಿಸಿದ
ವ್ರೋರಂತಿರೆ ತುಱುಗಿದವೞ್ ತುರಗಚಯಂಗಳ್ ॥ ೧೯೪

ಮುನಿದಿಂದ್ರಂಗೆ ಸುರಾಂಗನಾತತಿ ಸುರೇಂದ್ರಾವಾಸದಿಂ ಪೞ್ಳಿವಂ
ದು ನಿತಾಂತಂ ನೆರೆದಿರ್ದರಂಬರದೊಳಂಬಂತೊಪ್ಪಿ ವಿದ್ಯಾಧರಾಂ
ಗನೆಯರ್ ಕೋಮಲಗಾತ್ರೆಯರ್ ವಿಕಸಿತಾಂಭೋಜಾಕ್ಷಿಯರ್ ಖೇಚರಾ
ವನಿಪಾಲರ್ಕಳ ಚಿತ್ತಮಂ ಕದಡುತುಂ ಬಂದರ್ ಮಹೋತ್ಸಾಹದಿಂ॥೧೯೫

[ಮತ್ತಂ ಬೞಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಱುಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ವಿನ ಚಲ್ಲಗಣ್ಣ ತುಱುಗೆಮೆಯ ವಿಶಾಲಗಂಡಸ್ಥಳದ ರಮಣೀಯ ಕರ್ಣಯುಗಳದ ಪವಳದ ಬಾಯ್ದೆರೆಯ ಚೆಲ್ವುವಡೆದ ಮೂಗಿನ ರೇಕೆಗೊರಲ ಘನಕುಚದ ನಳತೋಳ ಕೋಮಲಾಂಗುಲಿಯ ಕೆಂದಳದ ಬಡನಡುವಿನ ತೋರಜಘನದ ನೇರಿದಪ್ಪ ಬಾಸೆಯ ನುಣ್ಪುವಡೆದೂರುದ್ವಯದ ಮೃದುತಳದ ಮಂದಗಮನದ ಮುದ್ದುನುಡಿಯ ಕೋಮಲಾಂಗದ ವಿದ್ಯಾಧರವಾರನಾರೀಕದಂಬಂ ಕಾಮದೇವನ ರಾಜ್ಯಕ್ಕೆ ನಾವು ಮೊದಲಿಗರೆಂಬಂತೆ ಪೊಂಕಂಬೆರಸು ತರತರದಿಂದಿರಲುಂ, ಸ್ವರ್ಣದೀಪವನನುಕರಿಸುವ ಕನಕಮಯಮಪ್ಪ ಪೊನ್ನ ವಿಮಾನದಿಂ ಚಂದ್ರಮಂಡಲಮೆ ಪಲವುರೂಪಿಂ ನಭಸ್ಥಳದೊಳಿರ್ದುದೆನಿಸುವ ಬೆಳ್ಳಿಯ ವಿಮಾನಂಗಳಿಂ ಗಗನಶ್ರೀ ವಿದ್ಯಾಧರಸೈನ್ಯಮನರ್ತಿಯಿಂ ಶತಸಹಸ್ರವದನಂಗಳಿಂ ನೋಡಿದಪಳೆನಿಸುವ ಪದ್ಮರಾಗಮಯವಿಮಾನಂಗಳಿಂ ಮೌಕ್ತಿಕಾವಳಿಯಿಂ ಮುತ್ತಿನಾಗರಮನಿಳಿಸುವ ವಿಮಾನಂಗಳಿಂ ಖೇಚರಸೈನ್ಯದಗುರ್ವಿಗೆ ಕಣ್ಣಱಗದಂತೆ ವಿಧಾತ್ರಂ ಚೀನದ ವಸ್ತ್ರದಿಂ ಬಾಸಣಿಸಿದನೆಂಬಂತೆಸೆದು ಸುತ್ತಿದ ಪಚ್ಚೆಯ ವಿಮಾನಂಗಳಿಂ ವಿದ್ಯಾಧರತಂತ್ರಕ್ಕೆ ವಿಧಿ ಮಂತ್ರಿಸಿ ಕಾಡಿಗೆಯಂ ಸುಂಚಿಸಿದನೆಂಬಂತಿಂದ್ರನೀಲದ ವಿಮಾನಂಗಳಿಂ ಕಾಮನ ಮೀನಪತಾಕೆಯೊಡನೆಕ್ಕತುಳಕ್ಕಮುಚ್ಚಳಿಸ ಪೊಱಮಟ್ಟುವೆನಿಸಿ ಚೆಲ್ವುವಡೆದ ಮಹಾಧ್ವಜಂಗಳಿಂ ದಿನಕರಕಾಂ

ತಿಯುವಮಂ ನೀವಿಂ ಪರಿಕಿಸಿ ನೋಡಿಮೆಂದು ಸೂರ್ಯನೊಡನೆ ಕಯ್ವಾಯ್ದು ಮಧ್ಯಸ್ಥರಲ್ಲಿಗೆ ಬರ್ಪಂತೆ ಪೊಳವ ಪೊಂಗಾಲಿಗಳಿಂದೊಪ್ಪುವರದಂಗಳಿಂ, ಹಸ್ತ್ಯಶ್ವರಥಪದಾತಿಗಳೊಂದಳೊಂದು ಪೊರ್ದಲೀಯದೆ ನಿಯಮಿಸುವ ಕಟ್ಟಿಗೆಕಾಱರಿಂ, ಕಾಮದೇವನ ರೂಪಿಂಗೆಮ್ಮ ರೂಪೆ ಮಿಗಿಲೆಂಬಂತೆ ಕನಕಕಂಕಣಹಾರಕೇಯೂರ ಮಕುಟಾದ್ಯಾಭರಣಂಗಳಿಂ ತೊಳಗಿ ಬೆಳಗುವಂಬರಚರಕುಮಾರರಿಂದೆಸೆದು,| [1] ॥ ೧೯೬

ಅಮರೇಂದ್ರಂಗಮಹೇಶ್ವರಂಗಮಮರೇಂದ್ರಾವಾಸಮುಂ ನಾಗಲೋ
ಕಮುಮೊಪ್ಪಿದುರ್ವಪರ್ಗೆ ಕುಂದೆ ಸಿರಿಗಂ ತಾನೆಂದು ಮೆಯ್ವೆರ್ಚೆ ವಿ
ಕ್ರಮದಿಂ ಭಾಸ್ಕರದೇವನಂಬರದೊಳತ್ಯಾನಂದದಿಂ ಮಾಡಿದಂ
ಕ್ರಮದಿಂ ಖೇಚರಲೋಕಮುಂ ಮಹಿಮೆಯಿಂದೆಂಬಂತದೇನೊಪ್ಪಿತೋ॥

[ಎಲವೆದ ಶಂಖದ ಕಹಳೆಯ
ಸಲೆ ಪಲವುಂ ಪೆಂಪುವೆತ್ತ ಕರಡೆಯ ಪೊಸಮ |
ದ್ದಲೆಯ ತ್ರಿವಳಿಯ ಭೇರಿಗ
ಳುಲಿಯಿಂದರ್ಣವಮನೆಯ್ದೆ ಪೋಲ್ತುದು ಸೈನ್ಯಂ ॥ ೧೯೭

ತಳಗಳ್ ಬೆಳ್ಗೊಡೆಗಳ ಮಂ
ಡಳಿಯಿಂ ಸತ್ತಿಗೆಯ ಮೇಘಡಂಬರದ ನೆಳ |
ಲ್ಗಳನೊಪ್ಪುವೆತ್ತ ದಾಖಗ
ಬಲವೊರ್ವನೆಯಂತೆ ನಾಡೆ ಕಡುಚೆಲ್ವಿಂದಂ] ॥ ೧೯೯

ಸುರಲೋಕಂ ಮರ್ತ್ಯಲೋಕಂ ಫಣಿಪತಿಭುವನಂ ಪೂಜ್ಯಮೆಮ್ಮಿಂದ ಮೆಂಬಂ
ತಿರೆ ; ಮನ್ನಾಣ್ಣರ್ಮಿಂತರೆಂದುಬ್ಬರಿಸಿ ಕೊನೆದು ಕಾಮಾಸ್ತ್ರದಂತೊಪ್ಪಿ ನಾನಾ

---

(ಗ) ಪುಸ್ತಕದ ಪ್ರಕಾರ ಈ ಗದ್ಯದಲ್ಲಿ ಉದ್ದಕ್ಕೂ ಸ್ವಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ.

ಭರಣವ್ರಾತಂಗಳಿಂದಂ ನೆಱೆದು ಮೆಱೆಯುತಂ ಸೌಂದರಾಕಾರವೆಂ ಭೂ
ಸುರಲಾವಣ್ಯಾಬ್ಧಿ ಬೆಳ್ಳಂಗೆಡೆದವೊಲೆಸೆದರ್ ಖೇಚರಸ್ತ್ರೀಸಮೂಹಂ [1]॥
[ತ್ರಿದಶೇಂದ್ರಸ್ತ್ರೀಯರಿಂದಲ್ಲದೆ ಫಣಿಪತಿಯುಂ ನೋೞ್ಪೊಡಿಂ ಸ್ತ್ರೀಯರಿಂದ
ಲ್ಲದೆ ಚಕ್ರಾಧೀಶರುಂ ಭಾವಿಸುವೊಡೆ ಧರೆಯೊಳ್ ಪೆಂಪಿನಿಂ ಸ್ತ್ರೀಯರಿಂದ
ಲ್ಲದೆ ಮೇಣ್ಮಾವಿಸ್ಮಿಂದೆ ತಾವಿನ್ನ ಸೆಯುರದಱಿನೆವ್ಮಂತು ಮಾಂಗಲ್ಯರಾರೆಂ
ದೊದವಿಂ ಬಂದಿರ್ದುವೊಪ್ಪಂಬೆರಸು ಸಕಲವಿದ್ಯಾಧರಸ್ತ್ರೀಸಮೂಹಂ॥
ಅಂಗರ್ಗಂಗಳ್ ಸೋಲವುಂ ಪುಟ್ಟಿಸುತಿರೆ ನಳಿತೋಳ್ ಗಾಡಿಯುಂ ಕೂಡೆ ಮಾಡು
ತ್ತಿರೆ ಧಮ್ಮಿಲ್ಲಂಗಳತ್ತಂ ಖಚರರ ಮನವುಂ ಮಾಣದೋರಂತೆ ಚೆಚ್ಚು
ತ್ತಿರೆ ಲಾವಣ್ಯಂ ತುಳುಂಕುತ್ತಿರೆ ಮೃದುಗಮನಂ ಚಿತ್ತಮಂ ಪತ್ತಿ ನೂಂಕು
ತ್ತಿರೆ ಬಂದರ್ ಚೆನ್ನೆಯರ್ ಚೆನ್ನಳವಡೆ ಮುದದಿಂ ಖೇಚರಸ್ತ್ರೀಸ ಮೂಹಂ] ॥ ೨೦೨

ಸ್ಮರನಿನ್ನಾನಿಲ್ಲದಂದೀಜನಮನೆಱಗಿಸಲ್ಕೋಡಿಸಲ್ ಮೋಡಿಸಲ್ ಮ
ಚ್ಚರದಿಂದಲ್ಲಾಡಿಸಲ್ ಪೋಲಿಸಲವಯುವದಿಂ ತೊಳ್ದು ಬೆನ್ನಟ್ಟಿ ಮುಟ್ಟಲ್
ಪುರುಡಿಂ ತಾಗಲ್ಕದೇನೊರ್ವನೆ ನೆಱವನೆ ಪೇೞೆಂದು ಲೋಕಕ್ಕೆ ಪೇೞ್ವಂ
ತಿರೆ ಬಂದರ್ ಬಿಂಕದಿಂ ಸಂಕಿಸದೆ ಸಕಲವಿದ್ಯಾಧರಸ್ತ್ರೀಸಮೂಹಂ ॥

---

1 ತರಳಾಕ್ಷ್ಯರ್ ಸೋಲವುಂ ಪುಟ್ಟಿಸುತಿರೆ ನಳಿತೋಳ್ಕಾರ್ಮುಯಂ ಕೂಡೆವಾಸು
ತ್ತಿರೆ ಧಮ್ಮಿಲ್ಲಂಗಳತ್ತಂ ಖಚರರ ಮನವುಂ ಮಾಣದೋರಂತೆ ಚೆಚ್ಚು
ತ್ತಿರೆ ಲಾವಣ್ಯಂ ಬರಂಟುತ್ತಿರೆ ಮೃದುಗಮನಂ ಚಿತ್ತಮಂ ಕೂಡೆ ಪತ್ತು
ತ್ತಿರೆ ಬಂದರ್ ಚೆನ್ನೆಯರ್ ಚೆನ್ನಳವಡೆ ಭರದಿಂ ಖೇಚರಸ್ತ್ರೀಸಮೂಹಂ ॥
ಸ್ಮರರಾಜಾಗರಲಂಬು ಬೇಱೊಳವೆ ಬೇಱೊಂದಿಕ್ಷುಕೋದಂಡಮುಂ
ಟೆ ರತಿಸ್ವಾಮಿಗೆ ಮೀನಕೇತನಮುನಂಗಂಗುಂಟೆ ಬೇಱೊಂದು ವಿ
ಸ್ತರದಿಂ ವಿಮಾನಪತಾಕೆ ಕಬ್ಬಿನೆಳವಿಲ್ ಪುಷ್ಪೇಷುಗಳ್ ಭಾವಿಸಲ್
ಭರದಿಂದಾದವೊಲೆಂಬ ಪೊಂಕತದೆಸೆಕಂ ಮೆಯ್ವೆತ್ತುದಾಸ್ತ್ರೀಯರೊಳ್ (ಗ)

[ಅಂತು ಗಗನಚಕ್ರಕ್ಕೆ ಬೇರೊಂದು ಗಗನಚಕ್ರಂ ಬಿರ್ದು ವೆಂದುದೆಂಬಂತಾನುಂ ಮೊಣದೊಂದೆಡೆಯೊಳ್ ಪಲಕಾಲವಿರ್ದಲಸಿ ಕ್ಷೀರಸಾಗರಮುಸಿರ್ವಂತಾಗೆ ಮೇಗೆ ನೆಗೆದುದೆಂಬಂತಾನುಂ ವಾತ್ಸಲ್ಯ ರತ್ನಾಕರನ ಕೀರ್ತಿಲತೆಯ ದಾಂಗುಡಿಯುಂತಾನುಂ ಕರಮೊಪ್ಪಿ ದಕ್ಷಿಣ ಮಧುರೆಗೆ ವಿದ್ಯಾಧರಸಾಧನಂ ಬರ್ಪುದುಂ ಪೌರವರರ್ಕಂಡು ಬೆಱಗಾಗಿ ದೇವಲೋಕಂ ಮೇಲೆ ಬಿರ್ದುದೆಂದು ತಲ್ಲಣಿಸಿ ಬೆಬ್ಬಳಿಸಿ ನೋಡುತಿರ್ಪುದುಂ, ಬುದ್ಧದಾಸಿಯ ಪಕ್ಷಮುಳ್ಳರುಂ ಸುಗತಂಗೆ ಭಕ್ತರಪ್ಪರು ವಿಂತೆಂದರ್ ॥ ೨೦೪

ಬುದ್ಧನ ರಥಮಂ ಪೊಱಮಡಿ
ಪುದ್ಧತೆಯಿಂ ದೇವಲೋಕದಿಂ ದೇವರ್ ಸ !
ನ್ನದ್ಧಪರರಾಗಿ ಪಲವುಂ
ಪದ್ಧತಿಯಿಂ ಬಂದರಲ್ಲಿ ಸಂದೆಯಮುಂಟೇ ॥ ೨೦೫

ಎಂದು ರಾಗಿಸುತ್ತಿರ್ಪನ್ನೆಗಂ ಕಣ್ಣೊಳ್ ಮೞಲಂ ಪೊಯ್ದುಟ್ಟುದಂ ಕೊಂಡರೆಂಬಂತಾಗಿ ಬುದ್ಧದಾಸಿಯ ಪಕ್ಷದವರ ಮೊಗಂಗಳ್ ಕಱಂಕುವರಿದಂತೆ ಕರ್ಗಯ್ಯುಂ, ಕೂರ್ಪಡೆಯದ ಪೈತ್ಯಾಧಿಕನಂತೊಡಲುರಿಯೆಯ್ಯುಂ, ತಾಯ್ಸತ್ತ ಶಿಶುವಿನಂತೆ ಮೞುಗೆಯ್ಯುಂ, ಸಕಲಗುಣಗಣನಿಳಯೆಯುಪ್ಪೋಹಿಲೆಮಹಾದೇವಿಯ ರಾಜಭವನಕ್ಕೆವಂದು ವಿದ್ಯಾಧರರ ಗುರ್ವಿಯಿಂ ನಿಲೆ, ಪುರದೊಳಗಣ ಭವ್ಯಜನರುಂ ಪಟೆಯರುಂ ಪ್ರಧಾನರುಂ ಪರಿಚಾರಕರುಂ ಪೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ ಪೌರರುಂ ಲೆಂಕಿಯರುಂ ರಾಜಕುಮಾರರುಂ ಮತ್ತಿನರಸಿಯರುಂ ದಂಡನಾಥೆಯರುಂ ಪೆರ್ಚಿ ಮೇಗುಮೆಯ್ಯುಱಿಯದಂತೆ ರಾಗಿಸಿ ತಮ್ಮೊಳಿಂತೆಂದರ್] [1] ॥ ೨೦೬

---

1 ಅಂತೊಪ್ಪಂಬಡೆದ ಗಗನಚಕ್ರಕ್ಕೆ ಬಿರ್ದುವೆಂಬಂತಾನುಂ ಸುಕವಿಜನಮನಃ ಪದ್ಮಿನೀರಾಜಹಂಸನ ಕೀರ್ತಿಲತೆಯ ಕಂಗುಡಿಯೆಂಬಂತಾನುಂ, ದಕ್ಷಿಣ ಮಧುರೆಗೆ ಬರ್ಪ ವಿದ್ಯಾಧರರ ಬರವ ನಗರಜನಂಗಳ್ ಕಂಡು ಸ್ವರ್ಗಲೋಕಮುಂ ಮೇಲೆಬಿರ್ದಪುದೆಂದು ತಲ್ಲಣಿಸಿ ಬೆಚ್ಚಳಿಸಿ ನೋಡುತ್ತುಮಿರ್ಪುದುಮೋಹಿಲೆಮಹಾದೇವಿಯ ರಾಜಭವನಕ್ಕೆ ಬಂದು ನಿಲ್ವುದುಂ ಪರಿಜನಮುಂ ಪರಜನಮುಂ ಪಳೆಯರುಂ ಪೆರ್ಚಿ ಮುಯ್ಯುಂ ನೋಡಿ (ಗ)

ಅರಸಂ ಮರುಳಲ್ಲನೆ ಪಿರಿ
ಯರಸಿಯ ಸಾಹಸಮನಱಿದುಮಱಿಯದವೋಲ್ ಮ |
ಚ್ಚರಮಂ ಮಾಡಿದನೀಪುರ
ವರದೊಳ್ ಪೆಱರಗ್ಗಳಿಕ್ಕೆಗಳ್ ನಡೆದಪುವೇ || ೨೦೭

ಜಿನಪೂಜೆಯಲ್ಲದೀಮ
ತ್ತಿನ ಪೂಜೆಗಳನ್ನೆವರೆಗಮೀಪುರದೊಳ್ ಪೇ |
ೞನಿತುಂ ಕಾಲಂ ನಡೆದುವೆ
ಜಿನನಾಥನುಮೞಿವನೞಿವೊಡಿಂತಿಮ ಪೊಸದೇ || ೨೦೮

ಭಾವಿಸುವೆಂದೊಡೀಹಿಲೆಮಾ
ದೇವಿಯೆ ಪಾಂಡ್ಯಂಗೆ ಪಟ್ಟಮಾದೇವಿಯಿದಂ |
ಭಾವಿಸದೆ ಬುದ್ಧದಾಸಿಗೆ
ದೇವಿತನಂಗೊಟ್ಟನಿಂತು ಕಷ್ಟನುಮೊಳವೇ || ೨೦೯

ಕೆರಪಂ ತಲೆಗೇಱಿಸಿಕೊ
ಳ್ವರೆ ಕೂರ್ತೊಡೆ ಬುದ್ಧದಾಸಿಯಂ ಕೆಮ್ಮನೆ ನ |
ಮ್ಮರಸಂ ತಲೆಗೇಱಿಸಿ ಪಿರಿ
ಯರಸಿಯುರಂ ಬಗೆದನಿಲ್ಲ ಭೂಪರೆ ಕಷ್ಟರ್ || ೨೧೦

ಅರಸಿಯ ಕೈಕೊಂಡ ಜಿನೇ
ಶ್ವರಪೂಜೆ ಮಹಾವಿಭೂತಿಯಿಂ ನಡೆವಂತಾ |
ಯ್ತೆರಡಿಲ್ಲದೆಮಗಮದಱಿಂ
ಪಿರಿದಪ್ಪಪಮಾನವೃತ್ತಿ ಪಿಂಗಿದುದೀಗಳ್ || ೨೧೧

ಅರಸಿಯ ಸಮ್ಯಕ್ತ್ವಕ್ಕಂ
ಸರಸಿರುಹಾನನೆಯ ಜೈನಭಕ್ತಿಗಮಿದು ತಾಂ |
ಪಿರಿದಾಯ್ತು ಫಣೀಶ್ವರನುಂ
ಸುರೇಶನುಂ ಬಣ್ಣರಱಿದರಪ್ಪೊಡೆ ಬೇಗಂ || ೨೧೨

[ಎಂದು ತಂತಮ್ಮೊಳ್ ನುಡಿಯುತ್ತುಂ ರಾಗಿಸಿ ಮಂಗಳತೂರ್ಯ ಮೆಸೆಯೆ ಪಲವರ್ಣನೆವೆರಸು ಸಕಲಗುಣಗಣನಿಳಯೆಯಪ್ಪೀಹಿಲೆ ಮಹಾದೇವಿಯು ಮನೆಗೆವಂದು ಸಾಷ್ಟಾಂಗವೆಱಗಿ ಪೊಡೆಮಟ್ಟು ಸಮುದ್ರಂ ಘೂರ್ಣಿಸುವಂತೆ ಪಲವುಂತೆಱದಿಂ ಪೊಗೞ್ವುದುಂ][1] ॥ ೧೧೩

ಬಸೆದುಂ ಸ್ತುತಿಯಿಪ [2] ಪೌರರ
ಮಿಸುಗುವ ನಾಲಗೆಗಳೆಂಬ ಕೆಂದಳಿರಿಂದಂ ।
ಶಶಿಮುಖಿ ಪೋಲ್ತಿರ್ದಳ್ ಭಾ
ವಿಸುವೊಡೆ ಕರವೊಪ್ಪಿ ತೋರ್ಪ ಶೋಕೆಯ ಮರನಂ ॥ ೧೧೪

ಅಂತು ಜನಮೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ ಕಾರ್ಗಾಲದ ನವಿಲಂತಾನಂದಿತ ಚಿತ್ತರಾಗಿ ಗೆಲ್ಲಂಕದಂತೆ ಮೆಯ್ವೆರ್ಚಿ ಮದುವೆಯ ಮನೆಯಂತೊಸಗೆಗೆ ಮರುಳ್ಗೊಂಡು ಪಟ್ಟಂಗಟ್ಟಿದರಸನಂತೆ ಮಹಾವಿಭೂತಿವೆರಸು ಜೀವಿತಂಬಡೆದ ಬಂಟನಂತೆ ರಾಗಿಸಿ, ಪಸಾಯತಂಬಡೆದ ದಾಳಕಾಱನಂತೆ ನಲಿದು, ಕೆಟ್ಟ ಸಾಲಂ ಬಂದ ಪರದನಂತೆ ಮುಯ್ವಂ ನೋಡಿ, [ಪಿರಿದುಂ] ಲಾಭಮಾದ ಪೊಸಪರದನಂತೆ ಬಿಂಕಂಬೆರಸು, ಪುಟ್ಟಗೆಯ ಬಡಸೂಳೆಯಂತೆ ಪೊಂಗಿ, ಮನೆಮನೆದಪ್ಪದೆ ಗುಡಿಗಟ್ಟಿ, ಬೀದಿಬೀದಿತಪ್ಪದೆ [ಚಂದನದೆಳದಳಿರ್ಗಳಂ] ತೋರಣಂಗಟ್ಟಿ [ಬಸದಿಗಳೆಲ್ಲಮಲಂಕಾರಮಾಗೆ ದುಕೂಲದ ಸೂಸಕಂಗಳಂ] ಮುತ್ತಿನ ರಂಗವಲಿಗಳಂ ಚಿನ್ನದ ಕಂಭಗಟ್ಟನಿಂ [3] ಶೃಂಗಾರಂಮಾಡುವುದುಂ; ಮಱುದಿವಸಂ ॥ ೧೧೫

ಅಲ್ಲಲ್ಲಿಗೊಸಗೆವೆಱು ಮ
ತ್ತಲ್ಲಲ್ಲಿಗೆ ಶಂಖಪಟಹಭೇರೀರವಮು ।

---

1 ಎಂದು ನುಡಿಯುತ್ತುಂ ಪಲವರ್ಣನೆಗಳ್ವೆರಸು ಬಾದೋಹಿಲೆಮಹಾದೇವಿಯುಂ ಕಂಡು ಪೊಡಮಟ್ಟು (ಗ)   2 ದೆಸೆದೆಸೆಯ ಪೊಗಳ್ವ (ಕ. ಬ.)

3 ರತ್ನದ ವಂದನಮಾಲೆಗಳಂ ಬಳ್ಳಿಗಾವಣಂಗಳಂ ನಕ್ಷತ್ರಮಾಲೆಗಳಂ ಮಣಿವಿತಾನಂಗಳಂ ಚಿತ್ರಪಟಗಳಂ ಪೊಂಗಳಶಂಗಳಂ ಘಳಾವಳಿಗಳಂ ಬಸದಿವಸದಿ ತಪ್ಪದೆ (ಗ)

ತ್ತಲ್ಲಲ್ಲಿಗೆ ಗಾಂಧರ್ವರ
ಸಲ್ಲಲಿತದನಿಗಳೆಸೆಯೆ ಪುರದೊಳಗೆಲ್ಲಂ ॥ ೨೧೬

ಎಲ್ಲೆಲ್ಲಿ ನೋೞ್ಪೊಡಂ ಮ
ತ್ತಲ್ಲಲ್ಲಿಗೆ ಕರಡೆ ಡಕ್ಕೆ ಪಱಿಡಕ್ಕೆಗಳಂ ।
ತಲ್ಲಲ್ಲಿಗೆ ಕಹಳೆಯ ದನಿ
ಯೆಲ್ಲೆಡೆಯೊಳಮೊಪ್ಪೆ ಪುರದ ನಾಲ್ಕುಂದೆಸೆಯೊಳ್ [1] ॥ ೨೧೭

ಅಲ್ಲಲ್ಲಿಗೆ ನೃಪನಂದನ
ರಲ್ಲಲ್ಲಿಗೆ ಪಣ್ಣಿ ಬಂದ ಮದದಾನೆಗಳಂ ।
ತಲ್ಲಲ್ಲಿಗೆ ಹಯಸಂಕುಳ
ಮಲ್ಲಲ್ಲಿಗೆ ಬರ್ಪ ವಾರವನಿತಾನಿಕರಂ ॥ ೨೧೮

ಅಲ್ಲಲ್ಲಿಗೆ ಕೈದೀವಿಗೆ
ಯಲ್ಲಲ್ಲಿಗೆ ನೆರೆದು ನೋೞ್ಪ ನೋೞಕಜನ ಮ ।
ತ್ತಲ್ಲಲ್ಲಿಗೆ ರಥಸಂಕುಳ
ಮಲ್ಲಲ್ಲಿಗೆ ನೆರೆದು ಬರ್ಪ ಪಲವರ್ಚನೆಗಳ್ ॥ ೨೧೯

ಅಂತು ಪುರದೊಳೆಲ್ಲೆಡೆಯೊಳಮಲ್ಲಲ್ಲಿಗೆ ಪುಣ್ಯಾಂಗನೆಯರುಂ ಮಂಗಳವಱಿಗಳುಂ ಮಹಾಧ್ವಜಂಗಳುಂ ಮಣಿವಿತಾನಂಗಳುಂ ಜಯಜಯಧ್ವನಿಗಳುಮೆಸೆಯೆ [2] ॥ ೨೨೦

ಪದಿನಾಱು ನೆಲೆಯ ಮಣಿಮಾ
ಡದಿನೊಪ್ಪುವ ಪೊನ್ನ ರಥದಮೇಲೆಸೆದಿರೆ ರಾ ।
ಗದಿಸಿರಿಸಿ ಖೇಚರರ್ ಸಂ
ಪದದಿಂದಂ ನಲಿದು ಜೈನಚೈತ್ಯಾವಳಿಯಂ ॥ ೨೨೧

---

1 ತಲ್ಲಲ್ಲಿಗೆ ರಥಸಂಕುಳ । ಮಲ್ಲಲ್ಲಿಗೆ ನೆರೆದು ಬರ್ಪ ಪಲವರ್ಚನೆಗಳ್ (ಗ)

2 ಧ್ವಜಂಗಳುಂ ಪಂಚಮಹಾಶಬ್ದಮುಂ ಜನಸಂದಣಿಯುಂ ನೆರವಿಯ ಕೋಳಾಹಳಮುಂ ಜಯಜಯನಿನಾದಮೆಸೆಯೆ (ಗ)

ಆರಥದ ನಾಲ್ಕುದೆಸೆಯೊಳ್
ನೇರಿದವಾಗಿರಿಸಿ ರತ್ನಮಯುವೆನಿಸುವ ವಿ।
ಸ್ತಾರದ ಪೊನ್ನ ರಥಂಗಳ
ನಾರ್ಕೆದೋರಂತೆ ವೆಚ್ಚನಚ್ಚಿ ಖಗೇಶರ್ ॥ ೧೧೧

ಸುರಭೂಧರವೆಂ ಬೆಳ್ಳಿಯು
ಗಿರಿಗಳ್ ಬಳಸಿರ್ದುವೆನಿಸಿ ಚೆಂಬೊನ್ನ ರಥೋ।
ತ್ಕರವೆಂ ಸುತ್ತಿರ್ದುವು
ಕರವೊಪ್ಪಿರೆ ಖಚರರಾಜರೆಸೆವ ವಿಮಾನಂ ॥ ೧೧೨

ಪರಿವೇಷಂ ಸುತ್ತಿರ್ದುದು
ಖರಕಿರಣನನೆನಿಸಿ ಮೊದಲ ಕನಕದ ರಥವೆಂ।
ಕರವೊಪ್ಪಿರೆ ಸುತ್ತಿರ್ದರ್
ನೆರೆದು ಮಹಾವಿಭವದಿಂ ವಿಯಚ್ಚರಸತಿಯರ್ ॥ ೧೧೩

ಕೆಂದಾವರೆ ತಾನುರ್ವರೆ
ಯಿಂದಂ ಗಗನಕ್ಕೆ ನೆಗೆದುದೆನಿಸಿ ಮಹೀಶ।
ಸ್ಯಂದನದ ಮೇಲೆ ನಿಂದಿ
ರ್ದಂದು ಕರಂಗಳನೆ ಮುಗಿದು ಪೊಡೆಮಡುತಿರ್ದರ್ [1] ॥ ೧೧೪

---

1 ಸರಸಿರುಹಾವಳಿಗಳ್ ಭಾಸ್ಕರನಂ ನೋಡಲ್ಕೆವೆರಸು ಪೋದಪವೆಂಬಂ।
ತಿರೆ ಗಗನದೊಳ್ ಖಗೇಶರ್ ಪರಮಜಿನೇಶ್ವರಗೆ ಮುಗಿದ ಕೈವೆರಸಿರ್ದರ್ ॥
ಇಳೆಯನಿತನಿತಱ ತಾವರೆಗೊಳನೆಲ್ಲಂ ನೆರೆದು ಬಂದವೆಂಬಂತಿರೆ ಭೂ।
ತಳನಾಥನರಸಿಯರ್ನಿರ್ಮಲಾಂಗಿಯರ್ ಪರಮ ಜಿನನ ಪದದೊಳಗೆಱಗಲ್ ॥

ನೆರೆದಂಬರಚರನಾಯಕರರಸಿಯರಚ್ಚರ್ತುರ್ ನೋಡುತಿರೆ ತಧ್ವನಿತೋ।
ತ್ಕರದಲರ್ಗಣ್ಣಿನಂಬುರುಹಂ ಸುತ್ತಿರ್ದವೊಲಾಯ್ತು ಪರಮನ ರಥವುಂ ॥
ಕ್ಷಿತಿಪರ ಖಚರಾಧೀಶರ ಸತಿಯರ್ ಸೂಸುತ್ತುಮಿರ್ಪ ನಿರ್ಮಲಕಲಮಾ।
ಕ್ಷತೆ ಪೋಲ್ತುವು ಕಾವುಂ ಜಿನಪತಿಗಂಜಿ ನೆಲಕ್ಕೆ ಬಿಸುಡುವಲರಂಬುಗಳಂ ॥ (ಗ)

ಮತ್ತಂ ಸುತ್ತಿ ಮುತ್ತಿದ ವಿದ್ಯಾಧರವಿಮಾನದಿಂದವಱಿಂ ಪೊಱಗೆ ನಂದನವನಕ್ಕೆ ಕವಿದು ಮೊಱೆವ ಮುಱಿಮುಂಬಿಗಳೆನಿಸುವ ಗಾಂಧರ್ವರಿಂದಂ ಅವರಿಂ ಪೊಱಗೆ ಪೊನ್ನ ಬೆಳ್ಳಿಯ ಪಚ್ಚೆಯ ನೀಲದ ರಥಂಗಳಿಂದಂ ಅವಱಿಂ ಪೊಱಗೆ ಗಿರಿದುರ್ಗದಂತೆ ಸುತ್ತಿ ಮುತ್ತಿದ ವಾರಣಘಟೆಗಳಿಂದಂ ಅವಱಿಂ ಪೊಱಗೆ ಕಾಮದೇವನ ಕಯ್ಯ ಸೆಂಡಿನಂತೆ ಪರಿವ ತುರಗಂಗಳಿಂದಂ ಅವಱಿಂ ಪೊಱಗೆ ಸುಕುಮಾರರೆನಿಸುವ ರಾಜಕುಮಾರರಿಂದಂ ಅವರಿಂ ಪೊಱಗೆ ದೆವಕನ್ನೆಯರೆನಿಪ ಪೆಂಡವಾಸದೊಳ್ವೆಂಡಿರಿಂದಂ ಅವರಿಂ ಪೊಱಗೆ ಕ್ಷಿತಿಜಲಧಿಸುತ್ತುತ್ತೆನಿಸುವ ಮೇಘಡಂಬರದಿಂದಂ ಅವಱಿಂ ಪೊಱಗೆ ಮಿಂಚಿನ ಬಳ್ಳಿಯನನುಕರಿಸುವ ಕಡಿತಲೆಗಾಱರಿಂದಂ ಅವರಿಂ ಪೊಱಗೆ ಪೆರ್ಗಂಡಿರ ತಂಡಂಗಳಿಂದಂ ಅವಱಿಂ ಪೊಱಗೆ ಮಹಾಧ್ವಜಂಗಳಿಂದಂ ಅವಱಿಂ ಪೊಱಗೆ ಮಣಿವಿತಾನಂಗಳಿಂದಂ ಅವಱಿಂ ಪೊಱಗೆ ನಂದನವನದಂತೆ ತುಱುಗಿದ ಪೀಲಿಯ ತಳಗಳಿಂದಂ ಅವಱಿಂ ಪೊಱಗೆ ವಜ್ರವೇದಿಕೆಯಂತಿರ್ದ ಪೊನ್ನ ಪರಿಗೆಯಿಂದಂ ವನದುರ್ಗಮಂ ಪೋಲ್ವ ಬಿಲ್ವಡೆಯಿಂದಂ ಘರವಟ್ಟಗೆಯ ಕಟ್ಟಿಗೆಕಾಱರಿಂದಂ ಅವರಿಂ ಪೊಱಗೆ[1] ॥ ೭೦೬

ಮಿಸುಕದೆ ಭಾಸ್ಕರದೇವನ
ಬೆಸದಿಂದಂ ರೌದ್ರರೂಪನತ್ಯಂತಂ ಪೆ ।
ರ್ಚಿಸಿ ಖೇಚರಾಧಿನಾಥರ್
ದೆಸೆಗಳನವ್ವಳಿಸಿ ನಿಂದರಡಿರದೆ ನೆಲೆಯಿಂ ॥ ೭೦೭

ಜಿನಪೂಜೆಗೆ ಬಾಧೆಗಳಂ
ಮುನಿವವರೞಲಿಂದೆ ಮಾಡದಂತಾಗೆ ಮಹಾ ।
ತನುವಿಂ ವಿದ್ಯಾದೇವಿಗ
ಳನುನಯದಿಂ ಸುತ್ತಿ ಮುತ್ತಿ ನಿಂದರ್ ಚಲದಿಂ ॥ ೭೦೮

ಬೇಗಂ ವ್ಯೋಮಕ್ಕಂ ಭೂ
ಭಾಗಕ್ಕಂ ಧಾತ್ರನೊಸೆದು ಕೇಳ್ ಕೂಡಿಟ್ಟಂ ।

---

1 ಘರವಟ್ಟಗೆಯ ಬಲುನಾಯಕರಿಂದವೆಡೆಗೆಡೆಗೆ ಕಿಕ್ಕಿಱಿಗಿಱಿದಿರ್ದ ಕೈದೀವಿಗೆಗಳಿಂದಂ (ಗ)

ತಾಗೆ ಬಳಸಿರ್ದರೊಡನಿಂ
ಬಾಗಿರೆ ಸನ್ಮಂತ್ರದೇವಿಯರ್ ನಿರ್ಭಯದಿಂ ॥ ೨೨೯

ಅಂತು [ಜಂಬೂದ್ವೀಪದ ಖಚರಮಹೀವಲ್ಲಭಂ] [1] ಭವ್ಯರ್ಗೆ ಜಿನಮತದಯೋಜೆಯಿಂ ಬರೆದು ತೋಱಿದಪನೆನಿಸಿ ಪಲವುಶೋಭೆಗಳಿಂದೆ ರಮಣೀಯಮಾಗೆ ಗಗನತಳಮೆಳೆಯುಮೆಲ್ಲಂ ವಿಮಾನಮಯಮಾಗಿಯುಂ ಧರಾತಳಮೆಲ್ಲಂ ರಥಮಯಮಾಗಿಯುಂ ಅಂತರಿಕ್ಷಮೆಲ್ಲಂ ಧ್ವಜಮಯಮಾಗಿಯುಂ ದಿಗ್ಭಿತ್ತಿಗಳೆಲ್ಲಂ ಜಯಜಯನಿನಾದಮಯಮಾಗಿಯುಂ, ವಿದ್ಯಾಧರಕುಮಾರರಿಂ ದೇವಲೋಕಮಂ ರಾಜಕುಮಾರರಿಂ ಖೇಚರಲೋಕಮಂ ವಿದ್ಯಾದೇವತೆಗಳಿಂ ವ್ಯಂತರಲೋಕಮಂ ಮಕುಟಬದ್ಧರಿಂ ಜ್ಯೋತಿರ್ಲೋಕಮಂ ಚಾತುರ್ವರ್ಣ್ಯಸಂಘದಿಂ ಸಮವಸರಣಮಂ ಪೋಲ್ತೆಸೆಯೆ ಭಾಸ್ಕರದೇವಂ [ಜಿನಮಹಾಪೂಜೆಯ ನೆಂಟುದಿವಸಂಬರವಿಮಾರ್ಗದಿಂ ॥ ೨೩೦

ಬಿಸೆದು ಖಚರೇಶ್ವರಂ ಸಂ
ತಸದಿಂದಂ ಸೋಮದತ್ತಮುನಿಯುಮನಘಮಂ ।
ಘಸಮೂಹವಾಯು ವಾತ್ಸ
ಲ್ಯಸಮುದ್ರಂ ವಜ್ರಮುನಿಯುಮಂ ಮುದದಿಂದಂ ॥ ೨೩೧

ಬಂದಿಸೆ ನಿಮ್ಮಡಿಯ ಪ್ರಸಾದದಿಂ ಜಿನಪೂಜೆಯೊಳಾದ ಮಹಾಪುಣ್ಯಂ ದೊರೆಕೊಂಡುದೆಂದು ಸಕಲಗುಣಗಣನಿಳಯೆಯಪ್ಪೊಹಿಲೆ ಮಹಾದೇವಿಯುಂ ಪೊಗಳ್ವುದುಂ] [2] ॥ ೨೩೨

---

1 ಮಧ್ಯಮಲೋಕದ (ಗ)

2 ಬುದ್ಧದಾಸಿಯ ಪಕ್ಷದವರ್ಗೆ ಕಣ್ಣೊಳ್ ಪಾಳಲಂ ಪೊಯ್ದುಟ್ಟಿದಂ ಕೊಂಡರೆಂಬಂತೆಯಾಗೆ ಮೊಗಮೆಲ್ಲಂ ಕರಿಂಕುವರಿದಂತೆ ಕಗ್ಗಿಯುಂ ಕುಸಿಯ ತೆಗೆದ ತಲೆಯಂತೆ ಕುಂದೆಯುಂ ಕೂಳುವಡೆಯದ ಪೈತ್ಯವ್ಯಾಧಿಕನಂತೆ ಉಱಿಯೆಯುಂ ತಾಯಿ ಸತ್ತ ಮಗುವಿನಂತೆ ಮಬ್ಬಾಗಿಯುಂ ಜಿನಪೂಜೆಯನೆಂಟುದಿವಸಂಬರಂ ಪೊಹಿಲೆಮಹಾದೇವಿಯುಂ ತಾನುಂ ಮಾಡಿಸಿ ಸ್ವಸ್ನೇಹದಿಂ ಪೇಳ್ದ ಜೆಯೊಳ್ ಜಿನಪೂಜೆಯಂ ಮಾಡಿ ಸೋಮದತ್ತಭಟ್ಟಾರಕರುಮಂ ಭಾವಯುತದಿಗಂಬರದಾಸನುಂ ಮಣಿಮಾಲೆಮಹಾದೇವಿಯುಂ ತಾನುಂ ವಂದಿಸಿ ಸ್ವಸ್ನೇಹದಿಂದೊಹಿಲೆಮಹಾದೇವಿಯುಂ ಪೊಗಳ್ವುದುಂ (ಗ)

ನೀರೇಜಾನನೆ ವಜ್ರಕು
ಮಾರಮುನೀಶ್ವರನ ಸಾರೆ ಖಚರೇಶ್ವರನಂ ।
ಸಾರಮಿದೆನಿಸುವ ಸೂರ್ಯಾ
ಕಾರಜಿನಸ್ತೂಪೆಯಂ ಸವಿಸ್ತರದಿಂದಂ ॥ ೨೩೩

ಬೇಡುವುದುಮೋಹಿಲೆಮಹಾದೇವಿಯ ಮಾತನೆರಡುಗೇಳದೆ ವಜ್ರಮಯಮಪ್ಪ ಜಿನಪ್ರತಿಮಾವಳಿಗಳಿಂ ತುಱುಗಿದ ಸ್ತೂಪೆಯಂ ದಕ್ಷಿಣಮಧುರಾಪುರದೊಳಿರಿಸಿ [1] ಮಾನಿಸರ್ ಪುಗಬಾರದಂತದಱ ಸುತ್ತಲುಮೆರಡು ಕೋಶಾಂತರಂ ವಿಗುರ್ವಣೆಯಂ ಮಾಡಿ [2] ಭಾಸ್ಕರದೇವನಮರಾವತೀಪುರಕ್ಕೆ ಮಗುಳ್ದು ಪೋದನಿತ್ತಲೋಹಿಲೆಮಹಾದೇವಿಯುಂ ಸೋಮದತ್ತಭಟ್ಟಾರಕರುಮಂ ವಾತ್ಸಲ್ಯರತ್ನಾಕನುಮಂ ವಂದಿಸಿ ಪೂಣ್ಕೆಯುಮಂ ನೆಱಪಿ ತನ್ನ ಮನೆಗೆ ಪೋದಳಿನ್ನುಮಾಭಾಸ್ಕರದೇವನಿರಿಸಿ ಪೋದ ಸ್ತೂಪೆಯಂ ದೇವರ್ [3] ಅಷ್ಟಮಿ ಚತುರ್ದಶಿಗಳೊಳ್] ದೇವದುಂದುಭಿವೆರಸು ಬಂದು ಪೂಜಿಸುವರದುಕಾರಣದಿಂ ॥ ೨೩೪

ನುತವಾತ್ಸಲ್ಯಮ ಭವ್ಯ
ಪ್ರತತಿಗೆ ಗುಣರತ್ನನಿಚಯಮಂ ಮಡಗಿರಲು ।
ನ್ನತಮಪ್ಪ ಮಂದಿರಂ ಶಾ
ಶ್ವತಸುಖಮಂ ಕುಡುವ ಕಲ್ಪವೃಕ್ಷಂ ಧರೆಯೊಳ್ [4] ॥ ೨೩೫

ಎಂದು [ಗಣಧರಸ್ವಾಮಿಗಳ್] ವಾತ್ಸಲ್ಯದ ಕಥೆಯಂ [ಪೇಳೆ] ಕೇಳ್ದು ॥ ೨೩೬

ಗುಣದುಗ್ಧಾಂಭೋಧಿ ಪಾಪಾಚಲರಿಪು ಮದನೇಭೇಂದ್ರಕಂಠೀರವಂ ದುರ್ಗುಣದೂರಂ ವಾಗ್ವಧೂವಲ್ಲಭನುದಿತಯಶಂ ನಿರ್ಮಳಂ ಮರ್ತ್ಯಲೋಕಾ

---

1 ದಕ್ಷಿಣಮಧುರಾಪುರದ ತೆಂಕಣದೆಸೆಯ ಬೆಟ್ಟದೊಳು ನಿಲಿಸಿ (ಗ)

2 ಅಗಿಲಂ ಮಾಡಿ (ಗ)  3 ವಿದ್ಯಾಧರರ್ (ಗ)

3 ದೇವರಾಜವಹೀಜಂ (ಗ)

ಗ್ರಣಿ ತನ್ನೊಳ್ ನಾಡೆಯುಂ ಸಂತಸದಿನೊಸೆದನೋರಂತೆ ತ್ರೈವಿದ್ಯಚೂಡಾ
ಮಣಿಪಾದಾಂಭೋಜಭೃಂಗಂ [1] ಸುಕವಿಜನಮನಃಪದ್ಮಿನೀರಾಜಹಂಸಂ ||

ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ನಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನಸಪ್ತಮಾಂಗವ್ಯಾವರ್ಣನಂ
ಅಷ್ಟಮಾಶ್ವಾಸಂ.

---

1 ಉದಿತಯಶೋವಾರ್ಧಿಶಶ್ಚಂಗ್ರನುದ್ಯ | ದ್ಗುಣವಿತ್ತ್ರೈವಿದ್ಯಚಕ್ರೇಶ್ವವಿರಮಲಪದಾಂಭೋಜಭೃಂಗಂವಿಶಿಷ್ಟ | ಗ್ರಣಿ ಪೆರ್ಚಿಂ ತಾಳ್ದಿ ನಿಂದಂ ಸುಕವಿಜನಮನಃಪದ್ಮಿನೀರಾಜಹಂಸಂ (ಗ)

## ನವಮಾಶ್ವಾಸಂ.

ಶ್ರೀವಾತ್ಸಲ್ಯಂ ಮುಕ್ತಿ
ಶ್ರೀವನಿತೆಯನೊಲಿಸುವೌಷಧಂ ನಿಶ್ಚಯಮೆಂ ।
ದಾವೆಗಮಾವಿಭು ಮನದೊಳ್
ಭಾವಿಸಿದಂ ಸುಕವಿನಿಕರಪಿಕಮಾಕಂದಂ ॥ ೧

[ಮಗಧಾವನೀಶ್ವರಂ ಮ
ತ್ತಗಣಿತಗುಣಗಣರನಮಳರಂ ಗೌತಮರಂ ।
ಜಗತೀಪೂಜಿತಪದರಂ
ನಗೇಂದ್ರಧೈರ್ಯರನನಂಗಮದಸಂಹರರಂ ॥ ೨

ಅಮೃತಶ್ರೀಯ ಕ್ರೀಡಾವನಮೆನಿಸುವ ಪ್ರಭಾವನೆಯ ಕಥೆಯನೆನಗೆ ಬೆಸಸುವುದೆಂದು ನಮ್ರಮಸ್ತಕನಾಗಿ ಕೈಗಳಂ ಮುಗಿದು ಬೆಸಗೊಳ್ವುದುಂ ಗಣಧರಸ್ವಾಮಿಗಳಿಂತೆಂದು ಪೇೞ್ದರ್:—] [1] ಮೂಗಿಲ್ಲದ ಮೂಕೊಱೆಯನೆಂತು ಕಣ್ಣಿಲ್ಲದ ಕುರುಡನೆಂತು [ಕಿವಿ ಕೆಟ್ಟ ಕಿವುಡನೆಂತು] ಕೈಯಿಲ್ಲದ ಮೋಟನೆಂತು ಕಾಲಿಲ್ಲದ ಪೆಳವನೆಂತು ಶುಭಕಾರ್ಯಕ್ಕಂ ರಾಜಸಭೆಗಂ ಬಸಗೆಗಂ ಉತ್ಸಾಹಕ್ಕಂ ಬಳ್ಪಿಂಗಂ ಸಲ್ಲನಂತೆ ದರ್ಶನದೊಳಂ ದರ್ಶನದೆಂಟಂಗದೊಳಂ ಹೀನನಾಗಿ ಚಕ್ರವರ್ತಿಪದವಿಯುಮಂ ದೇವೇಂದ್ರಪದವಿಯುಮಂ ಮಹರ್ಧಿಕಪದವಿಯುಮಂ [2] ಪಡೆವ ಪಡೆಪಂ ಕಿಡಿಸದೆ, ನವನಿಧಿಯುಳ್ಳನಂತೆ ನವಗ್ರಹಬಲಮಂ ಪೆತ್ತನಂತೆ ದರ್ಶನಂ ಮೊದಲ್ಗೊಂಡೊಂಬತ್ತು ಗುಣಂಗಳೊಳ್ ನೆಱೆದು ಶುಭದ ತುತ್ತತುದಿಯನೆಯ್ದಿ ಕಳಸವಿಟ್ಟ ಬೆಸದಂತೆ ಸಂಪೂರ್ಣಾಂಗಮುಳ್ಳನಂತೆ ತೀವಿದ ಕೆಱೆಯಂತೆ ಪಗವಕ್ಕೆ [3] ಬಂದ

---

1 ಅಂತು ವಾತ್ಸಲ್ಯದ ಕಥೆಯನಱಿದು ಮುಂದಣ ಪ್ರಭಾವನೆಯ ಕಥೆಯ ಬೆಸಗೊಳ್ವುದುಮಿಂತೆಂದರ್. ತಲೆಯಿಲ್ಲದೊಡಲಂತೆ (ಗ)

2 ಮೋಕ್ಷಪದವಿಯುಂ (ಗ)  3 ಹಗಹಕ್ಕೆ (ಗ)

ಧಾನ್ಯದಂತೆ ಗಂಡುಗೂಸುವೆತ್ತ ಸಜ್ಜನದಂತೆ ಪೊಂಬಡೆದ[1] ಸೂಳೆಯಂತೆ ಸೇವೆಗಾದುವೊಕ್ಕ ಬಂದಿಗಾಱನಂತೆ ಒಲ್ಲಿದಂ ಕೈಕೊಂಡ ಸತಿಯಂತೆ ಲಂಚವೊಕ್ಕಿರ್ದ ಪ್ರಧಾನನಂತೆ ಪಗೆ ನಿರ್ಮೂಲಮಾದ ಪಂದೆಯಂತೆ ಚಿತ್ತದೊಳಾನಂದಂಬೆಱಸಿರ್ಪುದು ॥ ೩

ಮುನಿಯೆನಲುವೇಡ ಶ್ರಾವಕ
ನೆನವೇಡ ಮನೋಜ್ಞೆಯಂ ಪ್ರಭಾವನೆಯಂ ನೆ ।
ಟ್ಟನೆ ಮಾಡವೇೞ್ಪುದಲ್ಲದೊ
ಡನಂತಸುಖನಿಳಯನಾಗಲಾಱಂ ಕಡೆಯೊಳ್ ॥ ೪

ಇನ್ನಾ ಪ್ರಭಾವನೆಯ ಮಹಿಮೆಯೆಂತಪ್ಪುದೆಂದೊಡೆ ॥ ೫

[ವಿದಿತಂ ಕುರುಜಾಂಗಣಮೆಂ
ಬುದು ವಿಷಯಂ ಭೂತಳಾಗ್ರದೊಳ್ ಕಡುಚೆಲ್ವಿಂ ।
ದೊದವಿರ್ದುದು ತದ್ಧರಣೀ
ಸುದತಿಯ ಮುಖಮುಕುರಮೆನಿಪುದತಿಶಯದಿಂದಂ ॥ ೬

ಹಸ್ತಿನಾಪುರಮೆಂಬ ಪೊಱಲದನಾಳ್ವಂ] [2] ಮಹಾಪದ್ಮನೆಂಬ ಮಾಂಡಳಿಕನಾತನರಸಿ ಲಕ್ಷ್ಮೀಮತಿಮಹಾದೇವಿಯೆಂಬಳಾಯಿರ್ವರ್ಗಂ [ಪ್ರಿಯತನೂಜರ್] ಪದ್ಮನುಂ ವಿಷ್ಣುಕುಮಾರನುಮೆಂಬ [ವರ್ ॥ ೭

ಸ್ಮರನಿಭರ್ ದಿವಿಜೇಂದ್ರಸನ್ನಿಭಭೋಗಿಗಳ್ ಜಿನಪಾದಪಂ
ಕರುಹಭೃಂಗರುದಾತ್ತಕೀರ್ತಿಗಳುಗ್ರವೈರಿಬಲೇಭಕುಂ
ಜರವಿರೋಧಿಗಳುನ್ನತರ್ ದೃಢಚಿತ್ತರದ್ರಿನಿಭಕ್ಷಮರ್
ಪರಿಣತರ್ ವರಶಾಸ್ತ್ರವಿದ್ಯೆಗಳೊಳ್ ನೃಪಾಲನಸುಕ್ಷಮರ್ ॥ ೮

---

1 ಪೋಹಿಗೆ ಬಂದ (ಕ. ಖ.)

2 ಕುರುಜಾಂಗಣವಿಷಯದೊಳು ಹಸ್ತಿನಾಪುರವೆಂಬುದು ಪುರಮದನಾಳ್ವಂ (ಗ)

ಎನಿಸಿ ಪೆಂಪುವೆತ್ತ ಕುಮಾರರ ಗಾಡಿಯುಮಂ ನೋಡುತ್ತುಂ ಪರಮಾಂಡಳಿಕರುಮಂ ಪ್ರತಾಪಪರರುಮನಲ್ಲಾಡಿಸುತ್ತುಂ ಚರಿತ ಪುರಾಣಂಗಳುಮಂ ರಸಗೀತಮುಮುಮನಾಲಿಸುತ್ತುಂ ಪರನೃಪರುಮಂ ಕುದೃಷ್ಟಿಗಳುಮಂ ಸೋಲಿಸುತ್ತುಂ ಸದ್ಧರ್ಮಮುಮಂ ಭವ್ಯರುಮಂ ಪರಿಪಾಲಿಸುತ್ತುಂ ॥ ೯

ಸಕಲಗುಣೋಪೇತಂ ಭಾ
ವಕತಿಲಕಂ ಜಿನಮತಾಬ್ಧಿಚಂದ್ರಂ ಧಾತ್ರೀ ।
ಶಕದಂಬನಮ್ರಚರಣಂ
ಪ್ರಕಟಯಶಂ ಭೂರಿಭೂತಳಪ್ರಸ್ತುತ್ಯಂ ॥ ೧೦

ಮಹಾಪದ್ಮಮಹಾರಾಜಂ ರಾಜ್ಯಲಕ್ಷ್ಮಿಯ ಮನೋಹರನಾಗಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿರ್ಪನಂ, ಶ್ರುತಸಾಗರರೆಂಬಾಚಾರ್ಯರಯ್ನೂರ್ಮುನಿಗಳ್ವೆರಸು ಕ್ರಮಕ್ರಮದಿಂ ವಿಹಾರಿಸುತ್ತುಂಹಸ್ತಿನಾಪುರಕ್ಕೆವಂದು ಬಹಿರುದ್ಯಾನವನದೊಳಗಿರ್ಪುದುಂ ॥

ಮುನಿಮುಖ್ಯರ ಬರವಂ ಭೋಂ
ಕನೆ ಕಂಡು ಮಹಾನುರಾಗದಿಂದಂ ರಾಜ್ಯಂ ।
ತನಗೆ ದೊರೆಕೊಂಡ ತೆಱದಿಂ
ಮನದೊಳ್ ಕಡುವೊಂಗಿ ಋಷಿನಿವೇದಕನಾಗಳ್ ॥ ೧೨

ಅರಮನೆಗೆ ಬಂದು ರಾಜಕುಮಾರಕರ ನಡುವೆ ತಾರಾಗಣದ ನಡುವೆ ಚಂದ್ರನಂತಿರ್ದ ಮಹಾಪದ್ಮಮಹಾರಾಜಂಗೆ ಕೈಮುಗಿದು ಪೊಡೆಮಟ್ಟು ॥ ೧೩

ಎರ್ದಿಸಂಗಳಿಮುಖಮಾ
ಗಿರ್ದು ಕರಾಂಬುರುಹಯುಗಳಮಂ ಮುಗಿದು ಕರಂ ।
ಪೊರ್ದದೆ ಮೆಲ್ಲನೆ ದೂರದೊ
ಳಿರ್ದವಧಾರಿಸುವುದೇಕಚಿತ್ತದಿನಿತ್ತಲ್ ॥ ೧೪

ದ್ವಾದಶತಪಂಗಳಂ ಕರ
ಮಾದರದಿಂ ಮೂರ್ತಿಗೊಂಡು ನಮ್ರಿಯ ಪುರಿಕ ।
ತ್ವಾದರದಿಂ ಬಂದುವು ಪು
ಣ್ಯೋದಯದಿಂದೆನಿಸಿ ನೆಗಳ್ದ ದಿವ್ಯಮುನೀಂದ್ರರ್ ॥ ೧೫

ಶ್ರುತಸಾಗರರೆಂಬಾಚಾರ್ಯರ್ಶೈನೂರ್ವರ್ ಮುನಿವರರ್ವೆರಸು ಬಂದಿರ್ದಪರೆಂದು ಬಿನ್ನಪಂಗೆಯ್ವುದುಂ ಮಹಾಪದ್ಮಮಹೀವಲ್ಲಭನುಂ ಕರಮೊಸೆದು ಋಷಿನಿವೇದಕಂಗಂಗಚಿತ್ತಮನಿತ್ತು ಋಷಿಯಿರ್ದೆಡೆಗೇ ಱಡಿಯಂ ನಡೆದು ಪೊಡೆಮಟ್ಟಾನಂದಭೇರಿಯಂ ಪೊಯ್ಸುವುದುಂ ತದ್ಭೇರಿನಾದಮಂ ಕೇಳ್ದು ॥ ೧೬

ಶ್ರಾವಕರುಂ ಸಮಸ್ತಪರಿವಾರಮುಮುತ್ಸವದಿಂ ನರೇಂದ್ರರುಂ
ತಾವಿರದರ್ತಿಯಿಂ ನೆರೆದು ತತ್ಕ್ಷಣದಿಂ ನೃಪಮಂದಿರಕ್ಕೆನಾ
ನಾವಿಧದರ್ಚನೋಪಕರಣಂಬೆರಸುನ್ನತಿಯಿಂದೆ ಬಂದು ಸ
ದ್ಭಾವದಿನಿರ್ದರಂಬುಧಿರವಕ್ಕೆಣೆಯಾಗಿರೆ ತೂರ್ಯನಿಸ್ವನಂ ॥ ೧೭

ಅರಮನೆಗೆ ಸಕಲಭವ್ಯೋ
ತ್ಕರಮುಂ ಸಾಮಂತರುಂ ಮಹಾಮತ್ಯರುಮ ।
ಚ್ಚರಿಯಾಗಿರೆ ಬಂದಿರ್ದರ್
ಸರಾಗದಿಂ ದೇವರವನಿಗವತರಿಸಿದವೋಲ್ ॥ ೧೮

ಅರಮನೆಯ ಮುಂದಿರ್ಪುದುಂ, ಮಹಾಪದ್ಮಮಹಾರಾಜಂ ಸಮಸ್ತಾಂತಃಪುರಪುರಂಧ್ರಿಯರುಂ ಪದ್ಮನುಂ ವಿಷ್ಣುಕುಮಾರನುಂಬೆರಸು ಪೊಱಮಟ್ಟು ಪಾದಮಾರ್ಗದಿಂ ಹಂಸೆಗಳ್ ಶತಪತ್ರಷಂಡಕ್ಕೆ ಬರ್ಪಂತೆ ಮುನಿವೃಂದಾರಕನನೆಯ್ದೆವಂದು ಮೇರುಗಿರಿಯಂ ಪ್ರದಕ್ಷಿಣಂಗೆಯ್ವ ಚಂದ್ರಾದಿತ್ಯರ್ಕಳಂತೆ ಮುನಿನಿಕರಮಂ ತ್ರಿಃಪ್ರದಕ್ಷಿಣಂಮಾಡಿ ಭಕ್ತಿಪೂರ್ವಕಂ ಗುಣಾಕರರೆನಿಸುವ ಶ್ರುತಸಾಗರಮುನೀಂದ್ರರ ಪಾದಪದ್ಮಂ

ಗಳನರ್ಚಿಸಿ ವಂದಿಸಿ ಮತ್ತಮುೞಿದ ಮುನಿವರರ್ಗಂ ಗುರುಪರಿವಿಡಿ
ಯಿಂದರ್ಚಿಸಿ ವಂದಿಸಿ ಕೈಯಂ ಮುಗಿದು ಮುಂದೆ ಕುಳ್ಳಿರ್ದರ್] [1] ॥೧೯

ಕೊಲೆಯೊಳ್ ಪೊರ್ದದ ನಿವೃರ್ತಿ
ಅಲಸೆಯ ಸೊಬಗೆನಿಪ ಪಾಪಹೇತುಗಳಂ ಪಂ ।
ಬಲಿಸದ ಮಿಥ್ಯಾವಚನ
ಕ್ಕಲಸುವ ಜಿನಧರ್ಮಮಂ ಮನಂಬಿಡೆ ಕೇಳ್ದಂ । ೨೦

ಅಂತು [ಧರ್ಮಮಂ] ಕೇಳ್ದು ಸಂಸಾರಕ್ಕೆ ಹೇಸಿ [ಪಂಚೇಂದ್ರಿಯಂಗಳೆಂಬ ಗಂಧಸಿಂಧುರಂಗಳಂ ಮನಂಗಿಡೆ ನುಗ್ಗೊತ್ತಲುಂ, ಮೋಹವೃಕ್ಷದ ಬೇರಂ ಕಿತ್ತಾಕಾಶಕೆತ್ತಲುಂ ಕಷಾಯಭಟರಂ ಪಡಲ್ವಡಿಸಲುಂ ಬಗೆದಂದು ತನ್ನೊಳಂತೆಂದಂ] [2] ॥ ೨೧

ನೋಡ ಮಂಜಿನ ನಿಃಸಕ್ಕಟ ನಂಬಿ ಬಿತ್ತುವೆನೆಂಬನುಂ
ನಾಡೆಯುಂ ಪಿಡಿದೇಱುವೆಂ ದ್ವಿರದೇಂದ್ರವೈರಿಯನೆಂಬನುಂ
ಕೂಡೆ ಪೆರ್ವೊನಲಂ ತರಂಗಳನೊತ್ತಿ ತಾಳ್ದುವೆ [3] ನೆಂಬನುಂ
ಕೇಡಿನೊಳ್ಕಳಗೊಂಡ ರಾಜ್ಯಮನೊಲ್ವನುಂ ಮರುಳಲ್ಲನೇ [4] ॥ ೨೨

---

1 ಪ್ರಿಯನಂದನರಂತವರ್ಗರಸು ರಾಜ್ಯಂಗೆಯ್ಯುತ್ತಮಿರ್ದೊಂದುದಿವಂ ಶ್ರುತಸಾಗರರೆಂಬ ಋಷಿಯರಲ್ಲಿ (ಗ)

2 ಪಿರಿಯ ಮಗನಪ್ಪ ಪದ್ಮಂಗೆ ಧರಾಭಾರಮನೊಪ್ಪಿಸಿ ವಿಷ್ಣುಕುಮಾರಂಗೆ ಯುವರಾಜಪದವಿಯುಂ ಕೊಡುವುದುಂ ಶ್ರೀಜಿನಚರಣಾಲಂಕಾರ ಶೀರ್ಷನಿಂತೆಂದಂ (ಗ)

3 ನೊಗ್ಗಿ ತಾಂಗುವೆ (ಗ)

4 ಧನದ ಪೆರ್ಚಿನೊಳಾರ್ಕಿ ನಂಟರ ಕೂಟದೊಳ್ ಕಡುವೊಂಗಿ ಜ
ವ್ವನದ ಕೊರ್ವಿನೊಳಾರ್ವಿ ಮೈಮೆಗೆ ಮುಯ್ಯುನಾಂತಳಿಸೌಖ್ಯಮಂ
ಮನದಗೊಂಡು ಶರೀರಮಂ ಪಿಡಿದಲ್ಲಿಯುಂ ಮಾತಿಗೆಟ್ಟು ಕೆ
ಮ್ಮನೆ ಮರುಳ್ತನದಿಂ ಮಹೇಶ್ವರಲೀಲೆಯೊಳ್ತೊಡರ್ದಾಡಿದೆಂ ॥ (ಗ)

ಬೂದಿಯಾದ ಪುಳ್ಳಿಯಂತೆ ಪಿಂಡಿಯಾದ ಎಳನಂತೆ ಬಸಿಱಂ ಪೊಕ್ಕ ಕೂಟನಂತೆ [ರಸಂಬೋದ ಕಬ್ಬಿನಂತೆ ಪೇಡಿಯುಪ್ಪರಸಿನ ಮಾತಿನಂತೆ ಬೇಸಗೆಯ ಮುಗಿಲಂತೆ ಬಱಗಾಲದ ಬೆಳಸಿನಂತೆ ಮಳೆಗಾಲದ ಬಿಸಿಲಂತೆ ಬಲ್ಲಿದರಲ್ಲದರ ಪೊರ್ಮುಗೆಯಂತೆ ಮೂರ್ಖರ ನಗೆಮೊಗದಂತೆ ದೂರದ ಬರವಿನಂತೆ ಕೆಟ್ಟೊಕ್ಕಲ ಸಾಲದಂತೆ ಸಂಶಯಕ್ಕೆಡೆಯಾದರ್ಥಮುಮಂ, ಸಿಕ್ಕಿದೆರಲೆಯಂತೆ ಪಲ್ಲ ಸಂದಿಯಡಕೆಯಂತೆ][1] ಬಾಯ ತುತ್ತಿನಂತೆ ಬೇರಿಲ್ಲದ ಮರನಂತೆ ತೊಱೆಯ ತೀರದೂರಿನಂತೆ ಪಳ್ಳದೊಳಗಣ ಬಳಂಬೆಯಂತೆ ದ್ರೋಹನ ನಿತ್ತರಣೆಯಂತೆ ಕಳ್ಳನ ಸಿರಿಯಂತೆ ಗಾಳಿಯ ಸೊಡರಂತೆ ಬಡವನ ದರ್ಪದಂತೆ ಸಂಚಲಮಪ್ಪ ದೇಹಮುಮಂ, ಮುಗಿಲಂತೆ[ಸಂಜೆಯ ಕೆಂಪಿನಂತೆ]ನೀರ ರೇಖೆಯಂತೆ[2] ಪೊರೆದಂಕದಾಳನಂತೆ ಪತ್ತಿಸಿ ನೋಟ್ಪ ಸೂಳೆಯಂತೆ ಕಾವುವ ಕೋಟೆಯೊಡೆಯನಂತೆ ಕಾಳಗಕ್ಕೆ ಬಂದ ಬೂತಿನಂತೆ ಕೂಟ್ವೋಟ್ಟಿ ಬಾರಿಕನಂತೆ ದಂಡುವೇೞ್ಪರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂಮೊಟ್ಟಿ ಕೊಂಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ, ಮದ್ದುಕಣಿಕೆಯಂತೆ ಪಿತ್ತದಂತೆ ನಾಯಪಾಲಂತೆ ಮತಿಗಿಡಿಸುವ ಪೆಂಡಿರುಮಂ, ಕಾಪಿನಾಳಂತೆ ಬೇಲಿಯಂತೆ ಪೊಳೆಯಿಲ್ಲದ ತೊಱೆಯಂತೆ ಬಬ್ಬಂಟನಾಣೆಯಂತೆ ಧರ್ಮಕ್ಕೆ ಸಲಲೀಯ ದಡ್ಡಂಬರ್ದ ತಾಯ್ತಂದೆಯುಮಂ, ತೊಱೆಯೊಳ್ ಪೋಪರಂ ಬೆಟ್ಟೇಱೆ

---

1 ಹಿಪ್ಪೆಯಾದ ತಂಬುಲದಂತೆ ಧಾನ್ಯಂ ಪೋದ ಕಳಗಾಡಿನಂತೆ ಜೀವಂ ಪೋದೊಡಲಿನಂತೆ ಪಾಳು ಮನೆಯಂತೆ ಪಾಲ್ಬತ್ತಿದಾಕಳಂತೆ ಮಕ್ಕಳಿಲ್ಲದ ಸತಿಯಂತೆ ಕಡೆಯೊಳ್ ಸಿಪ್ಪಲಮಪ್ಪ ರಾಜ್ಯಮುಮಂ ತಱಗೆಲೆಯ ಪೂರದಂತೆ ತುದಿಗೋದ ಪಣ್ಣನಂತೆ ಲೋಭಿಯುಪ್ಪರಸಿನ ಮಾತಿನಂತೆ ಬೇಸಗೆಯ ಮುಗಿಲಂತೆ ಬಱಗಾಲದ ಬೆಳಸಿನಂತೆ (ಗ)

2 ದೂಳಿಯ ಪಟ್ಟೆಯಂತೆ ಬಯಲ ಕಾಳಗದಂತೆ ಮುಯ್ನೀರ ಹರಿಹದಂತೆ ತ್ರಿಖುದೆಲೆಯ ನುಣ್ಪಿನಂತೆ ಪೊಸಮಾವಿನ ಕಂಪಿನಂತೆ ಬೂದಿಯ ಬೊಟ್ಟಿನಂತೆ ಮಾಗೆಯ ಪೊತ್ತಿನಂತೆ ತೋಱು ಪಾಱುವಾಯುಷ್ಯಮಂ ಪಾದರದ ಕುಂಟಣಿಯಂತೆ ಮಿಂಚನ ಪೊಳ್ಪುಡಿಯಂತೆ (ಗ)

ಬೀೞ್ವರಂ ಪೆಟ್ಟುವೆಳಸಿಕೊಳ್ವರಂ ಕುತ್ತದೊಳ್ ಪೊರಳ್ವರಂ ಬೇಗೆಯೊಳ್ ನರಳ್ವರಂ ಬಯಲೊಳ್ ಕಾದುವರಂ ಕಳದೊಳೞಿವರಂ ಕಿರ್ಚಿನೊಳ್ ಬೆಯ್ವರಂ ಸೋಲ್ತೋಡುವರಂ [ಗಾಳದೊಳ್ನೇಲುವರಂ] ನೆರೆದು ನೋಡುವರಂತೆ ನೋೞ್ಪುಂ ಸಾವುಮಡಸಿದಾಗಳ್ ನೆರೆದು ಗುೞುಗುಮ್ಮನೆ ನೋಡುತಿರ್ಪ ನಂಟರುಮಂ, ಸೂಜಿಗೊಂಡ ಪುಣ್ಣನಂತೆ ಕಣ್ಣ ಶೂಲೆಯಂತೆ ನಾಲಗೆಯ ಪುಗುಳಂತೆ ಮೂಗಿನ ರಸಿಗೆಯಂತೆ ಶೂಲೆಯಂತೆ ಕೆಮ್ಮಿನಂತೆ ತೇೞ ವಿಷದಂತೆ ನಂಜಾಡಿವಂಬಿನಂತೆ ಬಸಿಱೊಳಿರ್ದಲಗಿನಂತೆ ಮಮ್ಮಲಮಱುಗಿಸುವ ಮಕ್ಕಳುಮಂ, ಸುೞಿಯೊಳ್ ಬಿರ್ದ ಪಱುಗೋಲಂತೆ ಬೆಟ್ಟುಂ ತಾಗಿದ ಪೊನಲಂತೆ ಕುಂಬಾಱನ ಚಕ್ರದಂತೆ ಮಕ್ಕಳಟ್ಟು ಬವರಿಸುಂತೆ [1] ಱಾಟಣದ ಮೊಗಪೆಯಂತೆ ಕಡೆವ ಕಡೆಗೋಲಂತೆ ಮಸೆವ ಸಾಣೆಯಂತೆ ಪ್ಯಹಾಳಿಯ ಕುದುರೆಯಂತೆ ಮಾಣದೆ ತಿರುಗುವ ಬಾೞುಮಂ, ನಂಬಿ ಮೆಯ್ಯಱಿಯದೆ ಭೋಗಕಾಂಕ್ಷೆಯಿಂದಿರ್ದನಪ್ಪೊಡೆ, ನೆರೆಮನೆಯ ಕಿರ್ಚುಮಂ ಪತ್ತಿದ ಪಗೆಯುಮಂ ಬರ್ಪ ಪುಲಿಯುಮಂ ತಿಂಬ ನಾಯುಮಂ ಕೊಲ್ವಾನೆಯುಮಂ ಮುನಿವರಸನುಮಂ ಬಡಿವ ಕಳ್ಳನುಮಂ [ನಿದ್ರಿಸುವ ಬಂಟನುಮಂ] ಪೆಱಗಕೂರ್ಪ ಸ್ತ್ರೀಯುಮಂ ಪೊಂಗಳಪುವ ಮಗನುಮನಳಪುವಂತಕ್ಕುಮೆಂದು ಕಳಕಳಿಸಿ ನಕ್ಕು [ಮನದೊಳ್ ರಾಜ್ಯಕ್ಕೆ ಪೇಸಿ ಪದ್ಮನುಮಂ ವಿಷ್ಣುಕುಮಾರನುಮಂ ಪರಿವಾರಮುಮಂ ಪ್ರಧಾನರುಮಂ ಬರಿಸಿ ಮಹೀನಾಥನಿಂತೆಂದಂ ॥ ೭೩

ಸನ್ನುತಧರ್ಮದ ಫಲದಿಂ
ದಿನ್ನೆವರಂ ರಾಜ್ಯಲಕ್ಷ್ಮಿಯೊಳ್ ನೆರೆದೆಂ ಮ ।
ತ್ತಿನ್ನಳಪಿಂ ನಿಲ್ವೊಡೆ ಬಿ
ನ್ನಣಮೇಂ ಬಿತ್ತನುಂಡ ತೆಱನಂತಕ್ಕುಂ ॥ ೭೪

ಬಿತ್ತಿಂಗಂ ಬೆಳದೊಕ್ಕಲ್
ಬಿತ್ತಂ ಮುಂದಣ್ಗೆ ಕಟ್ಟುವಂತಿರೆ ಮುನ್ನಿನ ।

---

1 ಹರಿಯಟ್ಟುಯನೂಲಿನಂತೆ (ಗ)

ಸತ್ತುಪದ ಫಲವುನನುಣುತುಂ
ಮತ್ತೀಳಸಿ ಬಿಡದೆ ಮಾಡವೇಪ್ಪುದು ತಪಮಂ ॥ ೨೫

ಅದುಕಾರಣದಿನಿನ್ನವರೆಗಂ ಪರತ್ರಯಂ ಕಿಡಿಸಿ ಸಂಸಾರದಲ್ಪಸುಖಮಂ ಮಹಾಸುಖಮೆಂದು ನಂಬಿ ಕೆಟ್ಟನೀಗಳ್ ಶಾಶ್ವತಸುಖಮಂ ಮಾಳ್ಪ ಜಿನರೂಪಮಂ ತಾಳ್ದುವೆ ಪುಣ್ಯಮಿಂದು ಸಮನಿಸಿತೆಂದು ತನ್ನ ಮನದ ಕಜ್ಜಮನಱಿಯೆ ಪೇಳ್ದು ಪದ್ಮಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸಮ್ಯಕ್ತ್ವಚೂಡಾಮಣಿಗೆ ಯುವರಾಜಪದವಿಯುಂ ಕುಡುವುದುಂ ವಿಷ್ಣುಕುಮಾರನಿಂತೆಂದಂ ॥] ೨೬

ಒಪ್ಪುವ ರಾಜ್ಯಶ್ರೀ ಲೇ
ಸಪ್ಪೊಡೆ ನೀನೇಕೆ ದೇವ ಬಿಡುವೈ ಕೇಳಂ ।
ತಪ್ಪ ನುಡಿ ಬೇಡ ನೃಪನೀ
ನಪ್ಪುದನಾನಪ್ಪೆನಱಸುಖಂಗಳ್ಗೆಱಗೆಂ ॥ ೨೭

[ತನು ಲೇಸಪ್ಪೊಡೆ ದೇವರೇಕೆ ತಪಮಂ ಕೈಕೊಳ್ವರಿಂತೀ ಸುಹೃಜ್ಜನಮಂ ಕಾಂತೆಯರಂ ಮಹಾಮಹಿಮೆಯುಂ ಶ್ರೀಯುಂ ಗಜಾನೀಕಮಂ।
ಧನಮಂ ಧಾತ್ರಿಯುನೊಲ್ಲದೋಸರಿಸಿ ಪೇೞಾಂ ಗಾಂಪನೇಂ ಪುಟ್ಟನೇಂ
ನಿನಗಾಂ ಬೇಳನೆನಲ್ಲನೀನುಡಿಗಳಂ ಮಾತಾಡವೇಡೆನ್ನೊಳಂ ॥ ೨೮

ಅರಸರೋಲಗಂ ಲೇಸು ಕಾಳಗಂ ಬಟ್ಟೆತೆಂಬಂತೆ ಸಂಚಲಚಿತ್ತಂಗಂ ದೂರದರ್ಶಿಯಲ್ಲದಂಗಂ ಮಿಥ್ಯಾತ್ವಮಿಶ್ರತಂಗಂ ಸಂಸಾರದೊಳಾದ ಸುಖಂ ಪಿರಿದಪ್ಪ ಸುಖಮಾಗಿ ತೋಱುಗುರ್ಂ ಬೞಕ್ಕಾದ ನರಕದುಃಖಕ್ಕೆ ಮೆಯ್ಯನೊಡ್ಡಬಾರದದಱಿಂ ದೇವರ್ಗೆಂದೊಡಮೆನಗೆ ರಾಜ್ಯದ ಮೇಲೆಳ್ಳನಿತಪ್ಪೊಡಂ ಮೋಹಮಿಲ್ಲೆಂದು ಪಲವಂ ನುಡಿಯುದೊಂದನೆ ಪರಿಚ್ಛೇದಮಾಗೆ ನುಡಿದುಸಿರದಿರ್ಪುದುಂ ಮಹಾಪದ್ಮಮಹಾರಾಜಂ ಮಗನ ಮಾತಿಂಗೆ ಬೆಱಗಾಗಿ ತನೆಮ್ನಳಂತೆಂದಂ ॥ ೨೯

ಸಂದ ತಿರಿಕಂಗೆ ತೊಮೆತು
ಪ್ಪಂ ದೊರೆಕೊಳಲುಣ್ಕಿ ನಲಿವ ತೆಱದಿಂ ಸೌಖ್ಯ ।

ಕ್ಕೆಂದುಂ ಬಾರದೆ ರೌರವ
ದಿಂದಂ ಬಂದಂಗೆ ಮೋಹಮುಕ್ಕುಂ ಸಿರಿಯೊಳ್ ॥ ೩೦

ಶರಧಿಪರೀವೃತಧಾತ್ರೀ
ಭರಮಂ ಶಾಳ್ದಂತೆ ಪೆಳವು ಸಮನಿಸೆ ಪೆರ್ಚಂ ।
ಪಿರಿದಾಗದಂತೆ ಸುಖಮುಂ
ಸುರಲೋಕದೊಳಂದು ಬಂದವಂಗಿದು ಪಿರಿದೇ ॥ ೩೧

ಅದುಕಾರಣದಿಂದೀತನಪ್ಪೊಡೆ ಸಾಮಾನ್ಯಮನುಷ್ಯನಲ್ಲೆಂದು ಪೆರ್ಚಿ ರಾಜ್ಯಭಾರಮಂ ಬಿಟ್ಟಮೊತ್ತಮೆಂ ಕಲ್ಲಭಾರಮನೀಡಾಡುವಂತೀಡಾಡಿ ಪಂಚೇಂದ್ರಿಯಂಗಳ ಸುಖಮಂ ಪಗೆಯಂ ಕಾಣ್ಬಂತೆ ಕಂಡು ಮಹಾಶ್ರೀಯಂ ಕೊಳದ ಪುಲ್ಲ ಕಡ್ಡಿಯಂ ತೊರೆವಂತೆ ತೊರೆದು ಸಮ್ಯಕ್ತ್ವಚೂಡಾಮಣಿವೆರಸು ಶ್ರುತಸಾಗರಮುನೀಶ್ವರರಲ್ಲಿ ಜಿನದೀಕ್ಷೆಯಂ ಕೈಕೊಂಡು ಮುಕ್ತಿಶ್ರೀ ಕಂಠಾಭರಣಮೆನಿಪ ಪರಮಾಗಮಮನೋದಿ ಪಲಕಾಲಂ ಗುರುಪಾದಸೇವೆಯೊಳಿರ್ದು ಗುರುಗಳಾಜ್ಞೆಯಿಂ ಬೇರೆವೇರೆ ಪೋಗಿ ಘೋರವೀರತಪದೊಳ್ ನೆಗೞುತ್ತುಮಿರ್ದು ಮಹಾಪದ್ಮಮುನಿನಾಥಂ ಅಷ್ಟಾಪದಗಿರಿಯೊಳ್ ಕರ್ಮಕ್ಷಯಂಗೆಯ್ದು ಸುಗತಿಲಕ್ಷ್ಮಿಯೊಳ್ ಕೂಡಿದಂ; ವಿಷ್ಣುಕುಮಾರಮುನೀಶ್ವರನುಂ ತಪಶ್ಶ್ರೀವಧೂಪ್ರಿಯನಾಗಿರ್ದನಿತ್ತಲ್ ॥।[1] ೩೨

ಧರೆಯಂ ಜೀಯೆನೆ ಮಾಡುತುಂ ವಿಬುಧರಂ ಶಿಷ್ಟೇಷ್ಟರಂ ಮನ್ನಿಸು
ತ್ತರಿಭೂಪಾಲರ ದರ್ಪಮಂ ಕಿಡಿಸುತುಂ ಸದ್ಧರ್ಮಮಂ ಪಾಲಿಸು
ತ್ತುರುಭೂಚಕ್ರಮನಾಜ್ಞೆಯಿಂ ನಡೆಸುತುಂ ಸದ್ರಾಜನೀತಿತ್ವದೊಳ್
ದೊರೆಯಿಲ್ಲೀತನೊಳೆಂಬಿನಂ ಪದುಮಭೂನಾರೀಶನಿರ್ಪನ್ನೆಗಂ ॥ ೩೩

---

1 ಎಂದು ಪಂಚ್ಛೇದಿಸಿ ಯುವರಾಜಪದವಿಯುಂ ಬಿಟ್ಟು ತಂದೆಯೊಡನೆ ಶ್ರುತಸಾಗರಭಟ್ಟಾರಕರಲ್ಲಿ ಜಿನದೀಕ್ಷೆಯಂ ಕೈಕೊಂಡು ಪರಮಾಗಮಮನೋದಿ ಗುರುಗಳಾಜ್ಞೆಯಿಂದೇಕವಿಹಾರಿಗಳಾಗಿ ಪೋದಲ್ಲಿ ಮುನಿನಾಥನಷ್ಟಾಪದಪರ್ವತದೊಳ್ ಕರ್ಮಕ್ಷಯಂಗೆಯ್ದಂ. ವಿಷ್ಣುಕುಮಾರಮುನಿ ವಿಹಾರಿಸುತ್ತಮಿರ್ದನಿತ್ತಲ್ ॥ (ಗ)

ಅನ್ನೆಗವಿಂತ್ತಲವೆಂತಿವಿಷಯದುಜ್ಜಯಿನಿಯೆಂಬ ಪುರಮನಾಳ್ವಂ ಜಯವರ್ಮಮಹಾರಾಜನೆಂಬರಸನಾತನ ಮಂತ್ರಿ ಬಲಿಯೆಂಬನಂತಾಬಲಿಯೊತವುಟ್ಟಿದರುಂ ಶುಕ್ರನುಂ ಬೃಹಸ್ಪತಿಯುಂ ಪ್ರಹ್ಲಾದನುಮೆಂಬರ ತಿಪ್ರವೀಣರ್ ವೇದಶಾಸ್ತ್ರಪ್ರವೀಣರವರೊಳ್ ಕೂಡಿ ಬಲಿ ಸುಖಮಿರ್ಪನ್ನೆಗಂ ॥ ೩೪

[ಪರಮತಪೋನಿಲಯರ್ ದು
ರ್ಧರಚರಿತರ್ ಕಾಲಜಲಧಿಬಡವಾನಳರು ।
ವರೆಪೂಜ್ಯರ್ ಸಕಳಾಗಮ
ಪರಿಣತರಮಳರ್ ಸಮಸ್ತಮುನಿಗಣಮೆಂದ್ಯರ್ ॥] ೩೫

ಅಕಂಪನಾಚಾರ್ಯರಯ್ನೂರ್ವರ್ ಮುನೀಶ್ವರರ್ವೆರಸು [ವಿಹಾರಿಸುತ್ತುಮುಜ್ಜಯಿನಿಗೆ ವಂದು ಪೊಱವೊಱಲೊಳಪ್ಪುದುಂ ಪೊಱಲೊಳಗಣ ಶ್ರಾವಕರೆಲ್ಲಂ ॥ ೩೬

ಪೆರ್ಚಿಯುಮುತ್ಸವಂಬೆರಸು ಭೂವಳಯಂ ತವೆಗಾದ ಮಾರ್ಗದಿಂ
ದರ್ಚನೆಗೊಂಡು ದಿವ್ಯಮುನಿವಾರ್ಗ್ಗರಿಯಿಂದಘಮೆಂಬ ಪಂಕಮಂ
ಕರ್ಚುವೆನೆಂಬವೋಲ್ಸರೆದು ತನ್ಮುನಿಪಾದಪಯೋಜಮಂ ಸಮಂ
ತರ್ಚಿಸಲೆಂದು ಪೋಪ ಜನದೊಂದುಲಿಪಂ ಜಯವರ್ಮಭೂಭುಜಂ॥೩೭

ಕೇಳ್ದು ಮಾಡದಮೇಲಿರ್ದು ದಿಶಾವಲೋಕನಂಗೆಯ್ಯುತ್ತುಮಿನಿಸೆರೆದ ನೆರವಿನಾನಾವಿಧಾರ್ಚನೆವೆರಸಲ್ಲಿಗೆ ಪೋದಪ್ಪರೆಂದು.. ಮಾಪ್ರಸ್ತಾವದೊಳ್ ಋಷಿನಿವೇದಕನುಂ ಬಂದು ಮಹೀವಲ್ಲಭಂಗೆ ಪೊಡೆಮಟ್ಟು ದೇವ ನಮ್ಮ ಪುರಕ್ಕಿಂದು ಶ್ರುತವಾರಾಶಿಗಳುಂ ಪರಮಾವಧಿಲೋಚನರುಂ ಚಾರಿತ್ರಮಯರುಮಪ್ಪ ಅಕಂಪನಾಚಾರ್ಯರಯ್ನೂರ್ವರ್ ಮುನೀಶ್ವರರ್ ವೆರಸು ಬಂದಿರ್ದಾರೆಂದು ಬಿನ್ನಪಂಗೆಯ್ವುದುಂ ನರೇಂದ್ರನವೆರಿರ್ದ, ದೆಸೆಗೇಳಡಿಯುಂ ನಡೆದು ಪೊಡೆಮಟ್ಟು ಋಷಿನಿವೇದಕಂಗೆ ಮೆಚ್ಚುಗೊಟ್ಟು ಕೆಲದೊಳಿರ್ದ ಬಲಿಯ ಮೊಗಮಂ ನೋಡಿ ॥ ೩೮

ಮನದೊಳನಿತೊಳವು ಸಂಶಯ
ಮನಿತುಮನೋರಂತೆ ದಿವ್ಯಮುನಿಪುಂಗವನೊಳ್ ।
ಮನಸಿಜಹರನೊಳ್ ತ್ರಿಭುವನ
ವಿನಮಿತನೊಳ್ ಕೇಳ್ವುದೆಂಬುದುಂ ಬಲಿ ನುಡಿದಂ ॥ ೩೯

ಜೀವವನೇಕಕರ್ಮಮನುಪಾರ್ಜಿಸಿ ಮಾಣದೆ ತತ್ಫಲಂಗಳಂ
ಜೀವನೆ ಮತ್ತಮನ್ಯಭವದೊಳ್ ಗಡ ತಾನಿರದುಣ್ಬನೆಂಬುದುಂ
ಭೂವರ ನಂಬಿ ಬೇಳನಿಸಬೇಡ ಪರತ್ರಯನಾರು ಕಂಡರೆ
............... .... ....... ಲೆ ಪೇಳ್ವಡೆ ಸತ್ತರನಾರು ಕಂಡವರ್ ॥ ೪೦

ಬಱುವಲಿಯರ ಮಾತಂ ಕೇ
ಳ್ದಱಿಯದೆ ದೆಸೆಗೆಟ್ಟು ಜೀವಮುಂ ಗತಿಯುಂ ಕೇ ।
ಳಱನುಂ ತಾವೊಳವೆಂಬೀ
ತೆಱವಳಿತನವೇಕೆ ನಿನಗೆ ಭುವನಾಧಿಪತೀ ॥ ೪೧

ಅದಱಿಂ ಜೀವಮುಂಟೆಂಬುದಕ್ಕಂ ಶುಭಾಶುಭಕರ್ಮವೊಳ
ವೆಂಬುದಕ್ಕಂ ತತ್ಫಲಮುಂಟೆಂಬುದಕ್ಕಂ ಮಱುಭವದೊಳ್ ತಾವೆ ಮಗು
ಳ್ದುಂಬರೆಂಬುದಕ್ಕಂ ಸ್ವರ್ಗನರಕಂಗಳೊಳವೆಂಬುದಕ್ಕಂ ಸಾಕ್ಷಿಯಾರಿ
ದೆಲ್ಲಂ ಗಾಳಿಯುಂ ಗಂಟಿಕ್ಕುವಂತೆ ಮಾಯಾವ್ಯವಹಾರಮಿದನರಸ ನೀಂ
ಕೆಮ್ಮನೆ ನಂಬಿ ಮರುಳಾಗಿ ತಪದಿಂದೊಡಲಂ ನಿಷ್ಕಾರಣಂ ಪರತ್ರಯುಂ
ಟೆಂದು ತವಿಸುವ ಕಷ್ಟಿಗರಪ್ಪ ಋಷಿಯರ ಮಾತಂ ಕೇಳ್ದು ರಾಜ್ಯದೊ
ಳಾದ ಭೋಗೋಪಭೋಗಂಗಳಂ ಕಿಡಿಸಿಕೊಳವೇಡೆಂಬುದುಮರಸನಿಂ
ತೆಂದಂ ॥ ೪೨

ಒಯ್ಯನೆ ದಿನಕರನುದಯಂ
ಗೆಯ್ಯದ ಮುನ್ನೊಪ್ಪುಗುಂ ನಿಶಾಕರಬಿಂಬಂ ।
ರಯ್ಯಮೆನೆ ಸೂರ್ಯನುದಯಂ
ಗೆಯ್ಯೆ ಬಱಿಕೊಕ್ಕಿಪ್ಪ ಬೆಳಗಲಾರ್ಪನೆ ಚಂದ್ರಂ ॥ ೪೩

ಅಂತು ಕುವಾದಿಯೆನಿಪ ನಿನ್ನಂತಪ್ಪತಿಧೂರ್ತರ್ ಮಹಾವಾದಿಗ
ಳಿಲ್ಲದನ್ನೆವರಮುಕ್ಕಿ ಸೊಕ್ಕಿ ತೇಜಮಂ ಪಾಟಿಸುವರಲ್ಲದೆ ಮಹಾವಾದಿ
ಗಳಾಸ್ಥಾನದೊಳ್ ಕುಂದಿಕುಸಿದೊಳಸೋರ್ದ ಕೇದಗೆಯೇಱಿದ ಕೋಡ
ಗಸಂತೆ ಸಿಡಿಮಿಡಿಗೊಂಡು ಮಿಡುಕದಿರ್ಪರದಲ್ಲದೆ ತಲೆಯೆತ್ತರದಱಿಂ
ಬಾಯ್ಗೆವಂದಂತೆ ಕೊನೆದುದ್ದವೇಱು ಪಲವನೆನ್ನ ಮುಂದೆ ಗೞಪದುಸಿರ
ದಿರೆಂಬುದುಂ ಬಲಿಯಿಂತೆಂದಂ ॥ ೪೪

ವಸುಧೇಶ್ವರ ನೀನವಧಾ
ರಿಸು ವ್ರೋದಿನೊಳನಗೆ ನಿನ್ನ ನಚ್ಚಿನ ಋಷಿಯರ್ ।
ವಸುಮತಿಯೊಳ್ ತಲೆಯುಂ ಸಂ
ಕಿಸದೆತ್ತಿರದಿರ್ಪೊಡವರೆ ದೇವರ್ ಧರೆಯೊಳ್ ॥ ೪೫

ಎಂಬುದು ಸುರಸನವನನಾಚಾರಕ್ಕೆ ಸೈರಿಸದೀತನ ವಿದ್ಯಾಗರ್ವ
ಮಂ ಕಿಡಿಸಲ್ವೇೞ್ಕುಮೆಂದು ಕಯ್ಯಂ ಪಿಡಿದೊಡಗೊಂಡು ಸಮಸ್ತನೃ
ಪಕುಮಾರರುಮಂತಃಪುರಪುರಂಧ್ರಿಯರುಂಬೆರಸು ಪಾದಮಾರ್ಗದಿಂದಕಂ
ಪನಾಚಾರ್ಯರಲ್ಲಿಗೆವಂದು ಮೂಱುಸೂೞ್ ಬಲಗೊಂಡು ಮುನಿವೃಂದಾ
ರಕರ ಚರಣಯುಗಳಮಂ ಬಹುವಿಧಾರ್ಚನೆಯಿಂದರ್ಚಿಸಿ ವಂದಿಸಿ
ಋಷಿಯರುಮಂ ಪರಿವಿಡಿಯಿಂದರ್ಚಿಸಿ ವಂದಿಸಿ ಮುಂದೆ ಕುಳ್ಳಿರ್ದು
ಮೋಕ್ಷದ ನಿಚ್ಚಣಿಕೆಯೆನಿಪ ಜಿನೇಂದ್ರಧರ್ಮಮಂ ಕೇಳ್ದಂತೆಂದಂ॥೪೬

ಮೊಱೆಯಿಲ್ಲಘಮಿಲ್ಲೊಳ್ಪಿ
ಲ್ಲಱನಿಲ್ಲ ಪರತ್ರೆಯಿಲ್ಲ ಜೀವನುಮಿಲ್ಲಂ ।
ದಱಿಯದೆ ಕೆಮ್ಮನೆ ಕುದಿವರ್
ತೆಱವಲಿತನದಿಂದೆ ಬಾಯ್ಗೆವಂದಂತೆ ಕೆಲರ್ ॥ ೪೭

ಇದಕ್ಕೆಮಗೆ ಸಂಶಯಂ ಮನದೊಳುಂಟು ಜೈನೋಕ್ತಿಯುಂ
ವಿದಗ್ಧಜನವಂದ್ಯ ನೀಂ ತಿಳಿಪು ಮೆಮ್ಮನಶ್ಶಂಕೆಯುಂ ।
ಸದಾ ಕಿಡಿಸವೇೞ್ಪುದೆಂದು ನರಪಾಲಕಂ ತಾನುಪಾ
ಯದಿಂದೆ ಬೆಸಗೊಳ್ವುದುಂ......ಮುನೀಂದ್ರೋತ್ತಮಂ ॥ ೪೮

ಗಂಭೀರವಚನರಚನೆಗ
ಳಂಬುಧಿಯ ನಿನಾದದಂತೆ ಕರಮೊಪ್ಪೆ ಮುನೀಂ |
ದ್ರಂ ಭೂಮಿಪತಿಗೆ ನುಡಿದಂ
ಶುಂಭಜ್ಜೈನಾಗಮೋಕ್ತಿಯಂ ಸಭೆ ಮೆಚ್ಚಲ್ || ೪೯

ಮೊಱೆಯಿಲ್ಲಪ್ಪೊಡೆ ಸತಿಗಾ
ದೆಱಕಂ ಮೇಣ್ ಕೂರ್ಪ ತಂಗಿಗೇಕಾಗದು ಮ |
ತ್ತಱಿಕೆಯ ತಾಯ್ಗೇಕಾಗದು
ಮೊಱೆಯುಂಟಲ್ಲೆಂಬುದಕ್ಕಿದಲ್ಲವೆ ದಿವ್ಯಂ || ೫೦

ಮತ್ತಂ ಭಾವಕರ್ಭಾವಿಸಿ ನೋಳ್ಪಂದು ಲೋಕದೊಳಾದ ಪ್ರಸಿದಮಪ್ಪಿದುವೆ ಪೇೞ್ಗುಮದಾವುದೆಂದೊಡೆ, ಸೂಳೆಯೊಡನೆನಿತು ಕಾಲಮಿರ್ದೊಡಂ ಮಿಂಡರೆಂಬರಲ್ಲದೆ ಪೆಱತಿಲ್ಲ ; ಕರ್ಮವಶದಿಂ ತಾಯೊಡನಕ್ಕ ತಂದೆಯೊಡನಕ್ಕ ಕರಮೊಳಪಿಂ ಕೂಡಿದೊಡೆ ಕೊಲೆಗಂ ಕವರ್ತೆಗಂ ಭಾಜನನಪ್ಪನದಱಿಂ ಮೊಱೆಯುಂಟಲ್ಲೆಂಬುದನಿಂಬಾಗಿ ನಂಬುವುದು[1] || ೫೧

ಅಂದಣಮನೇಱಿ ಭೃತ್ಯರ
ಸಂದಣಿಯಿಂ ಬರ್ಪ ಮನುಜರಂ ಕಂಡು ಸದಾ |
ನಂದದಿನೀತನ ಮುನ್ನಿನ
ದೊಂದು ಮಹಾಪುಣ್ಯಫಲಮಿದೆಂಬರ್ ನುಡಿಯಿಂ || ೫೨

ತರುಣಿಯರಿಕ್ಕೆ ಚಾಮರಮನಿರ್ಕೆಲದೊಳ್ ಬರೆ ವಾಜಿಸಿಂಧುರೋ
ತ್ಕರಮಮರೇಂದ್ರಲೀಲೆಯೊಳ್ ಬರ್ಪ ಮಹಾತ್ಮನನೆಯ್ದೆ ಕಂಡವರ್ |

---

1 ಪರಿಭವವಾದೊಡವಮಾನೀಪಂಭವವುಂ ನೋಡ ಸತ್ತೊಡಂ ಭವಭವದೊಳ್ |
ಕರವುಱಿದು ನೀಗಲೆಂಬೀನರವಾಕ್ಯದಿನಮ್ಮನಂಬುನೀಂ ಮಱುಭವಮಂ ||
ಮತ್ತಂ ಪರೀಕ್ಷತರಪ್ಪರ್ ಪರೀಕ್ಷಿಸಿ ನೋಳ್ಪಂದು ಜಗದೊಳ್ ಕಲೆವೆರಸಿ ಮುನ್ನಿನ ರೂಪುವೆರಸಿ ಪುಟ್ಟುವ ಮಕ್ಕಳುಮಂ ಮೋಹದಿಂ ಕನಸಿನೊಳ್ಬಂದು ಪುಟ್ಟುವ ಮಕ್ಕಳುಮಂ ಕಂಡು ಮಱುಭವಮುಂಟೆಂದು ನಂಬುವುದು. (ಕ)

ಪುರುಡಿಸಲರ್ತಿಯಿಂದಿವರ ಮುನ್ನಿನ ಮಾಡಿದ ಪುಣ್ಯದಿಂದಮೀ
ಸಿರಿ ದೊರೆಕೊಂಡುದೆಂಬ ಜನದೊಂದುಲಿಯಿಂದಱಿ ಪುಣ್ಯದೊಳ್ಮೆಯಂ॥

ಮತ್ತಂ ರೂಪಿನೊಳ್ ಚೆಲ್ವರಪ್ಪರುಮಂ ಸಿರಿಯೊಳ್ ಪಿರಿಯರಪ್ಪರುಮಂ ವಿಳಾಸಸಮೇತರುಮಂ ಸುಭಗರುಮಂ ಸರ್ವಾಭರಣಭೂಷಿತರುಮಂ ನೀರುಜರುಮಂ ದಿವ್ಯಾಹಾರಮನುಣ್ಬರುಮಂ ದಿವ್ಯವಸ್ತ್ರಮನುಡುವರುಮಂ ಸುಖಿಗಳುಮಂ ಕಂಡೊಡಿವರ ಮುನ್ನಿನ ದಾನಪೂಜೆಯ ತಪದ ಫಲದಿನಾದುವೆಂದು ನುಡಿವ ಲೋಕದ ಜನದುಲಿವಿಂ ಧರ್ಮಮುಂಟೆಂದಱಿವುದು ॥ ೫೪

ಕುರುಡರುಮಂ ಕುಂಟರುಮಂ
ತಿರಿಕರುಮಂ ಕಂಡೊಡಿವರ್ಗೆ ಮುನ್ನಿನ ಪಾಪೋ।
ತ್ಕರದಿನಿನಿತಾದುದೆಂಬೀ
ನರವಾಕ್ಯದಿನಮ್ಮ ಪಾಪಮುಂಟೆಂದಱಿ ನೀಂ ॥ ೫೫

ಕರಮರಿದಪ್ಪ ಬಾಧೆಗಳನೋವನೆ ಕೂಗಿರೆ ಬೆರ್ಚಿ ಕಂಪಿಸು
ತ್ತಿರೆ ಪಿಡಿದೊತ್ತಿ ಕಟ್ಟಿ ಬಿಡದೊಯ್ಯನೆ ಕೊಲ್ವರನೆಯ್ದೆ ಕಂಡೊಡೋ।
ಸರಿಸದೆ ಕಷ್ಟನೀಖಳನ ಮುನ್ನಿನ ಸಂಚಿತಪಾಪಮೆಂದು ಕೊ
ಕ್ಕರಿಸುವ ಲೋಕದೊಂದುಲಿಪಿನಿಂದಱಿ ಭೂಪತಿ ಪಾಪದುಣ್ಮೆಯಂ॥೫೬

ಮತ್ತಂ ಕೊಳ್ಪಟ್ಟು ಪುಯ್ಯಲಿಡುವರುಮಂ ಕೂೞ್ಪಡೆಯದಿರ್ಪರುಮಂ ನಿರ್ಭಾಗ್ಯರುಮಂ ಕುರೂಪಿಗಳುಮಂ ಪಂದೆಗಳುಮಂ ಕಂಡೊಡಿವರ ಮುನ್ನಿನ ಕರ್ಮದ ಫಲಮೆಂಬರದಱಿಂ ಪಾಪಮುಂಟೆಂಬುದಂ ಜಲಕ್ಕನಱಿವುದು ॥ ೫೭

ಅಳಿಪಂ ಘಾತಕನುಗ್ರನನ್ಯವನಿತಾಸಕ್ತಂ ವೃಥಾಳಾಪಿ ನಿ
ರ್ಮಳನಲ್ಲಂ ಗುಣಹೀನನನೂನನದಯಂ ಸತ್ರೊತ್ತ್ಳೃತಾಯತ್ತಾಖಿಳಂ।
ಘಳಿಲೆಂದೊರ್ಮೆಯೆ ಬೀೞ್ಗುಮುಗ್ರನರಕಾಂಭೋರಾಶಿಯೊಳ್ತಪ್ಪದೆಂ
ದಿಳೆ ಕೈಕೊಳ್ಳದೆ ಪೊಲ್ಲರಂ ಸಿತಗರಂ ನಿರ್ಧರ್ಮರಂ ಭೂಪತೀ ॥ ೫೮

ನುಡಿವುದಱಿಂದವೆಗುಣಮುಂ ಪಾಪಮುಂ ಪೊಲ್ಲಂಬುದುಮಂ ಅವೆಗುಣಿಗಳುಂ ಸದ್ಧರ್ಮದೂಷಕರುಂ ಪಾಪಿಗಳುಂ ನಿರ್ಧರ್ಮರುಂ ನರಕಕ್ಕಿೞಿವುದುಮಂ ನರಕಮುಂಟೆಂಬುದುಮಂ ಲೇಸಾಗಱಿವುದು ॥೫೯

ಪರಹಿತಂ ಗುಣಿ ನಿರ್ಮಳಂ ಶರನಲ್ಲನುತ್ತಮದಾನಿ ಸ
ತ್ಪುರುಷನುನ್ನತಧಾರ್ಮಿಕಂ ಪ್ರಭು ಸಾಯಲಾಗದು ಸತ್ತೊಡಂ
ಸುರನಿವಾಸಮಮೋಘಮಕ್ಕುಮವಂಗೆ ನಿಶ್ಚಯಮೆಂದು ಭೂ
ಧರಜನಂ ಗುಣವಂತರಂ ದಯೆಯುಕ್ತರಂ ಸುಜನರ್ಕಳಂ ॥ ೬೦

ನುಡಿವುದಱಿಂ ಧರ್ಮಮೊಳ್ಳಿತ್ತೆಂಬುದುಮಂ ತದ್ಧರ್ಮಮಂ ತಾಳ್ದರ್ ಮಹಾಪುರುಷರ್ಗೆ ಸ್ವರ್ಗಾಪವರ್ಗಮುಂಟೆಂಬುದುಮಂ ನಂಬುವುದು ॥ ೬೧

ಅವನೀವಲ್ಲಭ ಮುಂಪೇ
ೞ್ದುವಱಿಂದಂ ನಂಬು ಜೀವನುಂಟೆಂಬುದನು ।
ತ್ಸವದಿಂದೆ ಬೞಿದೆ ಗೞಿಪುವೆ
ಕುವಾದಿಗಳ ಮಾತನಣಮು ನಂಬದಿರಿನಿಸಂ ॥ ೬೨

ಎಂಬುದುಂ ಬಲಿ ತನ್ಮುನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು ಮುನಿರಾಜಹಂಸಂಗಭಿಮುಖನಾಗಿ ॥ ೬೩

ಶರನಿಧಿಯೊಡನೊರ್ಮೆಗೆ ಮು
ಚ್ಚರಿಸಿ ಕೊಳಂ ಪೊಣರ್ವ ತೆಱದಿನಂಗಜಮದಸಂ ।
ಹರನೊಳ್ ತನ್ನಳವಱಿಯದೆ
ಗುರುಲಘುವೆಂದಱಿಯದುಕ್ಕಿ ನೆಱೆ ಬಲಿ ನುಡಿದಂ ॥ ೬೪

ಏನೆಂದಱಿಯದೆ ಮಸಗಿದ
ಮಾನಕಷಾಯದಿನುದಗ್ರಚಿತ್ತಂ ಬಲಿ ಮ ।
ತ್ತಾನಿವರೊಳ್ ನುಡಿದು ಬೞಿ
ಕ್ಕೀನರಪನ ಸಭೆಯಿನೆಯ್ದೆ ಪೊಗೞಿಸಿಕೊಳ್ವಂ ॥ ೬೫

ಎಂದು ತನ್ನ ಮುನ್ನ ಪಿಡಿದ ಜೀವಭಾವಮನೆ ಬಲ್ವಿಡಿದಿಂ ತೆಂದಂ ||] ೬೬

ಅರಹಂತನೆಂಬನೆಲ್ಲಿದ
ನರಹಂತನೊಡರ್ಚವೇೞ್ದ ತಪದೊಳ್ ಫಲಮೇ |
ನರಹಂತಂ ಕೊಲಲಾಗೆಂ
ಬರಿದಪ್ಪ ಧರ್ಮಮದಱೊಳೇಂ ಗಳ ಲಾಭಂ || ೬೭

ಅದೆಂತೆಂದೊಡಮರಸನುಂ ಸಭಾಜನಮುಮವಧರಿಸಿ ! ನೆಲ್ಲುಂ ಪುಲ್ಲುಂ ಕಾಡೆಮ್ಮೆಯುಮೂರೆಮ್ಮೆಯುಂ ಕಾಟ್ಪಲಸುಂ ಊರ ಪಲಸುಂ ಕಾಡಾವುಮೂರಾವುಂ ಕಾಟ್ಪತ್ತಿಯುಂ ಪತ್ತಿಯುಂ ಕಟ್ಟಿಲೆಯುಂ ಬೆಳಗುಂ ಕುಲಹೀನನುಂ ಕುಲಜನುಂ ಸೂಳೆಯುಂ ಸಜ್ಜನಮುಂ ಕಾಡೆಳ್ಳುಮೂರೆಳ್ಳುಮೆಂತು ಲೋಕದೊಳೊಳವೆಂತು ಪೊಲ್ಲರುಮೊಳ್ಳಿದರುಮೊಳರಂತು ತಿರಿಕರುಂ ಸಿರಿವಂತರುಮೊಳರಪ್ಪುದಱಿಂ [ಅರಸನುಂ ಬಡವರುಮೊಳರೆಂತಂತೆ] ಧರ್ಮಮುಂ ಪಾಪಮುಮುಂಟಪ್ಪುದಱಿಂದವಱ ಫಲಮನೀವಂತಪ್ಪ ಸರ್ವಜ್ಞರುಮೊಳರಾಜಿನಸ್ವಾಮಿಯುಮಂ ಪೊಗೆಯಿಂ ಕಿಚ್ಚಂ ಮೊೞಗಿಂ ಮೞೆಯುಂ ಗಾಳಿಯಿಂ ಕತ್ತುರಿಯಂ ಬಣ್ಣದಿಂ ಮದುವೆಯುಂ ದಾೞಿಕಾಱರಿಂದರಸುಗಳಂ ಭೈತ್ರಕಾಱರಿಂ ದ್ವೀಪಗಳಂ ಜೋಯಿಸರಿಂ ಗ್ರಹಣಮನಱಿವಂತೆ, ಕೊಂದೊಡೆ ಪುಸಿದೊಡೆ ಕಳ್ದೊಡೆ ಪರಸ್ತ್ರೀಗೆಱಗಿದೊಡೆ ಪಿರಿದಂ ಬಯಸಿದೊಡೆ ಪೊಲ್ಲದೆಂದು ಪೇೞ್ವ ಜಿನೇಶ್ವರನಾಜ್ಞೆಯುಂ ಮೀಱಿದೊಡಾಪರಮೇಶ್ವರನ ಸಾಮಂತರಂತೆ ದಂಡನಾಯಕರಂತೆ ಕೊಂದೊಡೆ ಕೊಲ್ವ ಪುಸಿದೊಡೆ ನಾಲಗೆಯಂ ಸೀೞ್ವ ಕಳ್ದೊಡೆ ಸೂಲದೊಳಿಕ್ಕುವ ಪೆಱರ

---

1 ಪುರಕ್ಕೆ ಬಂದಿರ್ದುದುಂ ಜಯವರ್ಮಮಹಾರಾಜನವರಲ್ಲಿಗೆ ಬಲಿ ಮೊದಲಾಗೆಲ್ಲಾ ಮಂತ್ರಿಗಳುಂ ವಲ್ಲಭೆಯರುಂ ಮಕುಟಬದ್ಧರುಂಬೆರಸು ಬಂದು ಬಲಗೊಂಡು ಪೂಜಿಸಿ ವಂದಿಸಿ ಕುಳ್ಳಿರ್ದು ಧರ್ಮಮಂ ಕೇಳ್ವಲ್ಲಿ ಬಲಿ ಮಾಕೋರ್ಂದಿಂತೆಂದಂ || (ಗ)

ಪೆಂಡಿರ್ಗಳಿಪಿದೊಡೆ ತಲೆಯುನರಿವ ತಂತಮ್ಮ ಮೇಱೆಯಂ ತಪ್ಪಿ ದೊಡೆ ದಂಡಮಂ ಕೊಳ್ವ ಭೂಪಾಲರ ನಾಡವರ ಮಾಟದಿಂದೆ ಮುಂಬ ಟ್ಟೆಗಳೂರಂ ಪೊರ್ದಿ ಪೋಪಂತೆ ಕೊಲೆ ಪುಸಿ ಕಳವು ಪಾರದಾರಂ ಬಹುಕಾಂಕ್ಷೆ ಧರ್ಮಮಲ್ಲದೆನೆ ಜಿನವಲ್ಲಭನ ಮಾತನೆ ಪೊರ್ದಿ ನಡೆ ವವರ ಸಮಯಂಗಳಿಂದಮುಂ ಕೊಲ್ವ ಪುಸಿವ ಕಳ್ವ ಪಾದರವಾಡುವ ಮೇಱೆಯಂ ತಪ್ಪುವ ಮಾನಿಸರ್ಗಂ ಕಂಡೊಡೆ ಪಂಚಮಹಾಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದಮುಂ, ಕೊಲ್ಲಂ ಪುಸಿಯಂ ಕಳಂ ಪಾದರಿಗನಲ್ಲಂ ಪೆಱರರ್ಥಮಂ ಕೊಳ್ಳನೆಂದು ಕೀರ್ತಿಮೊದಲಾ ಗೊಡೆಯ ದಿವ್ಯಂಗಳಿಂ ಶುದ್ಧರಾಗಿ ಪೋಪರಿಂದಮುಂ, ಕೊಲ್ಲದ ಧರ್ಮ ದೊಳ್ ಧರ್ಮಪುತ್ರನಂ ಸತ್ಯದೊಳ್ ಕರ್ಣನಂ ಕಳವಿಲ್ಲೆಂಬುದಱೊಳ್ ಅರ್ಜುನನಂ ಶೌಚದೊಳ್ ಗಾಂಗೇಯನಂ ನಿಷ್ಪರಿಗ್ರಹದೊಳ್ ರಾಮನಂ ಕೊಂಡು ಕೊನೆದು ಪೊಗೞ್ವ ಪುರಾಣಂಗಳಿಂದಮುಮಱಿವುದು ‖ ೬೮

ಮೋನದೊಳಿರ್ಪ ಜಿನೇಶ್ವರ
ನೇನಂ ಪೆಱರ್ಗೀತ್ತನೆಂದು ನುಡಿವುದು ಲೋಕಂ ।
ಭೂನಾರೀಶ್ವರ ಕುಡುವೊಡೆ
ಮೋನದೊಳಿರ್ದರ್ಹನೀಗುಮದು ಸಂದೆಯಮೇ ‖ ೬೯

ಅದೆಂತೆಂದೊಡೆ ನೆಲನುಂ ಬಟ್ಟೆಯುಂ ಸೊಡರುಂ ಮನೆಯುಂ ಮೋನಿಗಳಾಗಿರ್ದುಂ ಬಿಡದೆ ತಮ್ಮಂ ಪತ್ತಿ ನಡೆವೊಕ್ಕಲಿಗಂಗಂ ನಡೆ ವಂಗಂ ಅಱಸುವಂಗಂ ಪೊಕ್ಕಿರ್ಪಂಗಂ ಧಾನ್ಯಮುಮಂ ಬಯಸಿದೆಡೆ ಯುಮಂ ಕುಸುಕಱೊಳಿರ್ದ ಮುಟ್ಟುಮಂ ನಿರ್ಬಾಧೆಯುಮಂ ಕುಡು ಗಂತೆ ವೀತರಾಗನಪ್ಪ ಜಿನಸ್ವಾಮಿಯುಂ ಸ್ವರ್ಗಮೋಕ್ಷಸುಖಮಂ ತನ್ನನೆ ಬಿಡದೆ ಪತ್ತಿರ್ದ ಮಾನಿಸಂಗಂ ಕುಡುಗುಂ ‖ ೭೦

ತೊಱೆಯುಂ ಶಾಸ್ತ್ರಮುಮೆಮ್ಮೆಯುಂ ಪಶುಗಳುಂ ಬೀಜಂಗಳುಂ ಕೆಯ್ಗಳುಂ
ಕೆಱೆಯುಂ ಪಳ್ಳಮುಮೆಯ್ದೆ ಪಣ್ತ ಮರನುಂ ತೋಂಟಂಗಳುಂ ವೆರ್ಚ್ಚಿಯುಂ

ಮೊಱೆವಾ ವಸ್ತುಗಳಂ ಜಿನೇಶ್ವರನಪ್ರೋಲತ್ಯಂತದಿಂ ದುಃಖಮಂ
ಮೊಱೆದಂಗೀವುವು [1] ವೀತರಾಗಮತಮಂ ಬಿಟ್ಟೀವ್ರವೇ ಲೋಕದೊಳ್ ||

ಅದುಕಾರಣದಿಂ ಸಕಲವೆಲ್ಲಂ ಜಿನೇಶ್ವರನೊಡಗೂಡಿ ಮೋನಿಗಳಾಗಿ ಫಲಮಂ ಕುಡುವುವಲ್ಲದೆ ತಮಗೆ ತಾವೆ ಕುಡುವುವಲ್ಲಂ || ೭೦

ವಿದಿತಂ ಜಿನೇಂದ್ರರೂಪ
ಪ್ಪುದು ನಿರ್ಗ್ರಂಥಂ ಸಮಂತದಂ ನೆಱೆ ತಾಳ್ದ |
ಪುರ್ದು ದಿವ್ಯಮಪ್ಪ ತಪಮಂ
ತದಱಿಂದಂ ಸಕಲಸೌಖ್ಯಮುಂ ಕೈಸಾರ್ಗುಂ || ೭೧

ನೆಲಂ ನಿರ್ಗ್ರಂಥಮಾದೊಡೆ ಬಿತ್ತುವಂಗೆ ರಾಗಂ, ಗಗನಂ ನಿರ್ಗ್ರಂಥಮಾದೊಡೆ ಮದುವೆಗುತ್ಸವಂ, ನೀರ್ ನಿರ್ಗ್ರಂಥಮಾದೊಡೆ ಕುತ್ತರ ಕೇಡು, ಕಿರ್ಚು ನಿರ್ಗ್ರಂಥಮಾದೊಡೆ ಅಡುಗೆಯ ಕಾರ್ಯಂ, ಅಕ್ಕಿ ನಿರ್ಗ್ರಂಥಮಾದೊಡೂಟದ ರುಚಿ, ಪಾಲ್ ನಿರ್ಗ್ರಂಥಮಾದೊಡಳೆಯ ಸವಿ, ಸೂರ್ಯಂ ನಿರ್ಗ್ರಂಥಮಾದೊಡೆ ದಿವಸಶುದ್ಧಿ, ಚಂದ್ರಂ ನಿರ್ಗ್ರಂಥಮಾದೊಡೆ ರಾತ್ರಿಶುದ್ಧಿ, ಮನಂ ನಿರ್ಗ್ರಂಥಮಾದೊಡೆ ಕಾರ್ಯದೊದವು, ರತ್ನಂ ನಿರ್ಗ್ರಂಥಮಾದೊಡೆ ಬೆಲೆಯ ಪೆರ್ಚು, ಪೊನ್ ನಿರ್ಗ್ರಂಥಮಾದೊಡೆ ಮನ್ನಣೆಯುಕ್ಕುಂ; ಅಂತೆ ಜಿನೇಶ್ವರನ [2] ತಪದ ನಿರ್ಗ್ರಂಥದಿಂದಮೆ ಲೋಕದ ಕಾರ್ಯಂಗಳೆಲ್ಲಂ ಸಿದ್ಧಿಯಕ್ಕುಂ|| ೭೨

ಧರೆಯುಂ ಪುಟ್ಟಿದ ಮಕ್ಕಳುಂ ದಿನಪನುಂ ಗೋವೃಂದಮುಂ ವಾರಣೋ
ತ್ಕರಮುಂ ವ್ಯೋಮಮುಮಬ್ಧಿಯುಂ ತುಗಗಮುಂ ಕಿರ್ಚುಂ ತರು
ವ್ರಾತಮುಂ
ಗಿರಿಯುಂ ಲೋಕದೊಳಾದ ವಸ್ತುವನಿತುಂ ನಿರ್ಗ್ರಂಥಮಪ್ಪಾಜಿನೇ
ಶ್ವರಮುದ್ರಾಂಕಿತಮಲ್ಲದುಂಟೆ ಜಗದೊಳ್ ಮತ್ತನ್ಯಸಲ್ಲಾಂಛನಂ ||೭೩

1 ದುಃಖಮುಂದಱಿದಂಗೀವುವು (ಕ. ಖ.)

2 ಜಿನೇಶ್ವರಂ ಪೇಳ್ದ ಮುನಿನಿರ್ಗ್ರಂಥದಿಂದಂ ಮೇಲಾದ ಲೋಕದ ಕಾರ್ಯಂ(ಗ)

ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯುಪ್ಪ ದಿನೇಶಬಿಂಬಮಂ
ಬತ್ತಲೆಯಿರ್ಪ ಮಕ್ಕಳುಗಳಂ ರತಿಯಿಂ ನೆರೆವಲ್ಲಿ ರಾಗದಿಂ
ಬತ್ತಲೆಯಿರ್ಪ ಪೆಂಡತಿಯನೋಪಣಕಂ ನೆಱೆ ಕಂಡು ಮಾನಿಸರ್
ಸತ್ತವರಂತಿರೆ ಭಾವಿಪೊಡೆ ಬತ್ತಲೆಯಿಲ್ಲದ ವಸ್ತುವಾವುದೋ ॥ ೭೬

ಸವಣರನಣ್ಣ ಕಂಡೊಡತಿದೋಷಮ ಪುಟ್ಟುಗುಮಪ್ಪೊಡುರ್ವಿಯೊಳ್
ಬವರಮದೇಕೆ ಬೇಡವಡೆಯುಂ ಕೊಲುವಗ್ಗದ ಕಳ್ಳರಪ್ಪರಂ
ವಿವರಿಸೆ ನಾಯ್ಗಳಂ ಪೊಲೆಯರಂ ಕುಲಹೀನರನುಗ್ರರಂ ಮಹೋ
ತ್ಸವದೊಳ್ ಕಂಡೊಡಲ್ಲಿ ಪರಿಪೂರ್ಣತೆಯಕ್ಕುಮ ಪುಣ್ಯಬಂಧದಾ ॥೭೭

ಋಷಿಯರನಾಗಳುಂ ಕಾಣ್ಬವರ ಮನೆಯ ಪಶುಗಳುಮೆಮ್ಮೆ
ಗಳುಂ ಕಱೆಯುವೆ, ಬಾಡುಮಕ್ಕಿಗಳುಂ ಬೇಯುವೆ, ಪುಳ್ಳಿಯುಳ್ಳೊಡಂ
ಕಿಚ್ಚುರಿಯುವೆ, ಮಕ್ಕಳುಂ ಮಱಿಗಳುಂ ಸಾವುವೆ, ಉಂಡೊಡಂ ಪಸಿವು
ಪೋಗದೆ, ನೀರುಂ ಕೂೞುಂ ರುಚಿಯಾಗವೆ ? ಆದಱಿಂ ಕಾಣದೊಡೆ [1]
ಲೇಸೆಂಬುದುಮನೇತಱಿಂದಱಿಯಲಕ್ಕುಂ ॥ ೭೮

ಸಿರಿಯಿಂ ಮೆಯ್ಯಱಿಯದ ಮ
ತ್ತ್ಯರೆಲ್ಲರುಂ ನೂರ್ಮರುಷಮುಂ ಬಾೞ್ವಪವರುಂ ।
ಪರಮಾರ್ಥಂ ಕಾಣದೆ ಋಷಿ
ಯರ ರೂಪಂ ಶ್ರೀಯುಮಾಯುಮಂ ತಾಳ್ದದರೇ ॥ ೭೯

ಕೂೞಿಲ್ಲದೆ ತಿರಿವವರುಂ
ಬಾೞಮೆಯೊಳ್ ಸತ್ತ ಮನುಜರುಂ ಋಷಿರೂಪಂ ।
ಕೇಳ್ ಗಳ್ ಕಂಡು ತಿರಿವರೆ
ಪೇೞವರೋರಂತೆ ಸತ್ತರೇ ಭೂತಳದೊಳ್ ॥ ೮೦

---

1 ಅವರೇಂ ಸಾವರೆ ಋಷಿಯರ ಕಾಣದರ ಮನೆಯ ಪಶುಗಳ್ ಮೊಕ್ಕಳಂ ಕಱೆವುವೆ, ಬಾಡುಮಕ್ಕಿಗಳುಂ ಬೇವುವೆ ಪುಳಿಯಿಲ್ಲದೊಡಂ ಕಿಚ್ಚುರಿವುವೆ ಮಕ್ಕಳು ಮಱಿಗಳುಂ ಸಾಯುವ ಉಣ್ಣದೊಡಂ ಪಸಿವಾಗದೇ ನೀರುಂ ಕೂೞುಂ ರುಚಿಯಪ್ಪವೆ ಯೆಂದಿಂಗಂ ಬಾಳ್ವರೆ ಋಷಿಯರಂ ಕಂಡೊಡೆ ಪೊಲ್ಲೆಂಬುದುಮಂ ಕಾಣದೊಡೆ (ಗ)

ಪೆಂಡಿರ ಪರಿಭವದಿಂದಂ
ಪಾಂಡವರುಂ ರಾಮಚಂದ್ರನುಂ ವನದೊಳ್ ಗೋ |
ಳುಂಡೆ ಗೊಳುತಿರ್ದರವರೇಂ
ಕಂಡರೆ ಮುಂ ದಿವ್ಯಮಪ್ಪ ಋಷಿಯರ ರೂಪಂ || ೮೧

ಭರತನುಮಾಶತ್ರುಘ್ನನು
ಮರವರಿಸದೆ ಗಂಡನಪ್ಪ ದುರ್ಯೋಧನನುಂ |
ಧರೆಯುಂ ಪಲಕಾಲಂ ರುಷಿ
ಯರ ರೂಪಂ ಕಾಣದಾಳ್ದರೇ ಪೇೞಿಮಿದಂ || ೮೨

ಪುರದೊಳಗಣ ಪಾರುವರೆ
ಲ್ಲರುಮಂ ಮತ್ತನ್ಯಸಮಯಿಗಳುಮಂ ಕಳ್ಕರ್ |
ಭರದಿಂದಂ ಕಂಡುಂ ಸಾ
ವರವೋಘಂ ಸೀಳ್ದು ಕೊಲೆ ತಳಾಱರ ಕೈಯೊಳ್ || ೮೩

ಎಂದುಂ ಋಷಿಯರ ಕಾಣದ
ಸಂದೂರೊಳಗಣ್ಣ ವಿಪ್ರರಂ ಪೊರ್ದಿರ್ದುಂ |
ಸಂದ ತಿರಿಕರ್ಗೆ ಬಡತನ
ಮೆಂದುಂ ಪಱಿಪಟ್ಟುದಿಲ್ಲದೇನಚ್ಚರಿಯೋ || ೮೪

ಬಸದಿಗಳ ಋಷಿಯರೆಂಬರ
ದೆಸೆಯಿಲ್ಲೆಂಬಗ್ರಹಾರದೊಳಗಿರ್ದುಂ ಚಿಂ |
ತಿಸುವುದುಮಂ ಸಾವುದುಮಂ
ವಸುಮತಿಯೊಳ್ ತಿರಿಯುತಿರ್ಪುದುಮನೇಕುಱಿಯರ್ || ೮೫

ಕಾಳಗದೊಳಂಬುಗಳ್ಕಳ
ಗೋಳಿಟ್ಟೊಳಱುತ್ತುಮಿರ್ಪ ವರ್ಸವಣಾತನಾ |
ಕಾಳಗದೊಳೇನೊ ಕಂಡು ವೃ
ಥಾಳಾಪಿಗಳಣ್ಣ ಸತ್ತರೇ ಪೇೞಿಮಿದಂ || ೮೬

ಜ್ವರದಿಂ ವಾತದಿನುಷ್ಣದಿಂ ಮಱುಕದಿಂ ಕಣ್ಬೇನೆಯಿಂ ಶ್ವಾಸದಿಂ
ಕುರುವಿಂ ಗೋಳಿಡುತಿರ್ಪವರ್ ಸವಣರಂ ಮುಂ ಕಂಡರೇ ಕುತ್ತದೊಳ್
ಪೊರಳುತ್ತಿರ್ಪವರನ್ಯಲಿಂಗಿಗಳ ರೂಪಂ ಕಂಡು ತದ್ಬಾಧೆಯು
ಬ್ಬರದಿಂ ಪಿಂಗಿ ಪೊಡರ್ಪುಗುಂದದೆ ಮಹಾಸಂತೋಷದಿಂದಿರ್ದರೇ ॥೮೭

ಸವಣರುಮಂ ಸಚ್ಛ್ರಾವಕ
ನಿವಹಮುಮಂ ನೋವು ಸಾವು ಕುತ್ತಂ ಬಂದಾಂ ।
ಕುವುವೆನ್ಯಸಮಯಿಗಳನೊ
ತ್ತವವೆಂಬುದು ಪಿರಿದುತನಮವರ್ಗಳಗಕ್ಕುಂ ॥ ೮೮

ಕುಂಚಮಂ ದೋಷಮೆಂಬೊಡೆ ಕುಂಚಮಪ್ಪುದು ಪೀಲಿ, ಪೀಲಿಯುಮಂ ದೋಷಮೆಂಬೊಡೆ ತಪೆಯುಂ ಸತ್ತಿಗೆಯುಂ ಪಿಡಿದು ಬರ್ಪರೆಲ್ಲರುಮಂ ಕಾಣಲಾಗದು ; ನಿರ್ಗ್ರಂಥಮಂ ದೋಷಮೆಂಬೊಡೆ ಮಕ್ಕಳುಂ ಮರಂಗಳುಂ ಪಶುಗಳುಂ ನಿರ್ಗ್ರಂಥಮಮಂ ಕಾಣಲಾಗದು ; ತಟ್ಟು ದೋಷಮೆಂಬೊಡೆ ತಟ್ಟೆಂಬುದು ಪಸೆ : ಪಸೆಯುಂ ದೋಷಮೆಂಬೊಡೆ ಚೋಳದೇಶಮೆಲ್ಲಮುಮದಱ ಮೇಲೆ ಪಟ್ಟಿರ್ಪುದು ; ತಿವುಳದೇಶದವರೆಲ್ಲರುಮಂ ಕಾಣಲಾಗದು; ಗುಂಡಿಗೆ ದೋಷಮೆಂಬೊಡೆ ಗುಂಡಿಗೆಯುಪ್ಪುದು ತೆಂಗಿನಕಾಯ್, ತೆಂಗಿನಕಾಯುಂ ದೋಷಮೆಂಬೊಡೆ ತೆಂಗಿನಕಾಯುಂ ತಿಂಬರುಮಂ [ಮೂಱುವ ಪರದರುಮಂ] ಕಾಣಲಾಗದು ; ಮೀಯದುದು ದೋಷಮೆಂಬೊಡೆ ಚಂದ್ರಾದಿತ್ಯರ್ಕಳಂದುಂ ಮೀಯರವರಂ ಕಾಣಲಾಗದು ; ಮಲಮಂ ತಾಳ್ದಿಪ್ಪುದು ದೋಷಮೆಂಬೊಡೆ ತಿಪ್ಪೆಯುಂ ತಾಳ್ದಿದ ನೆಲನುಮಂ ಗೊಬ್ಬರಮನೊಳಕೊಂಡ ಕೆಯ್ಗಳುಮಂ ಕಾಣಲಾಗದು; ವಮನಂಗೆಯ್ದು ನೀರಂ ಕುಡಿಯದುದೆ ದೋಷಮಪ್ಪೊಡೆ ಪ್ರತಿಜ್ಞೆಯಿಂ ಕುಡುವರಸುಗಳುಮನಂಕಂಗಳುಮಂ ಕಾಣಲಾಗದು ; ನಿಂದುಣಿಸು ದೋಷಮೆಂಬೊಡೆ ಜೀವಧನಂಗಳುಮಂ ಮರಂಗಳುಮಂ ಕಾಣಲಾಗದು ; ಕಯ್ಯೊಳುಂಬುದು ದೋಷಮೆಂಬೊಡೆ ಆನೆಯುಮಂ ಕಾಣಲಾಗದು ; ಲೋಚು ದೋಷಮೆಂಬೊಡೆ ತಿರ್ದಿದ

ಪುರ್ವಿನವರಂ ತಿರ್ದಿದ ಮೀಸೆಯವರಂ ಕಾಣಲಾಗದು; ಪಂಚಮಹಾವ್ರತಂಗಳಂ ತಾಳ್ದುವುದು ದೋಷಮೆಂಬೊಡೆ ಪಾಂಡವರಂ ಭೀಷ್ಮರಂ ಕರ್ಣನಂ ಪೊಗೞ್ವ ಮನುಷ್ಯರಂ ಕಾಣಲಾಗದು; ಪಲ್ಲಂ ಸುಲಿಯದುದು ದೋಷಮೆಂಬೊಡೆ ಕೊಡುಗೂಸುಗಳುಮಂ ಕುಮಾರರುಮಂ ಕಾಣಲಾಗದು; ಮೋಕ್ಷಸಾಧಕರಪ್ಪ ಋಷಿಯರಂ ಕಂಡೊಡೆ ಲೇಸಲ್ಲದೆ ಪೊಲ್ಲೆಂಬುದಕ್ಕೆ ಕಾರಣಮಿಲ್ಲ ॥ ೮೯

ಪಶುವಿನ ಜಿಹ್ವೆಯೊಳ್ ಪೊಲೆಯರಿರ್ಪೆಡೆಯೊಳ್ ಸುಧೆ ದೇವಿ ಪದ್ಮದೊಳ್ ಮಿಸುಗುವ ಲಕ್ಷ್ಮಿ ಪೊರ್ದಿ ನೆಲಸಿರ್ಪಳೆಂಬ ಮಹಾತ್ಮರೊಂದಿ[1] ಗರ್ಜಿಸಿ ಋಷಿಯರ್ಕಳಂ ಮುನಿಸಿನಿಂದಱಿಯುಟ್ಟ ತಗುಳ್ದು ಕಂಡೊಡುಬ್ಬಸಮವಕಾರ್ಯಮೆಂದು ಬಿಡೆ ದೂಱುವರೆಂಬುದಿದಾವ ವಿಸ್ಮಯಂ ॥

ಮತ್ತಂ ಪೊಗದ ಕೋಂಟೆಯುಮಂ ಸಾಯದ ಪಗೆಯುಮುಳ್ಳವರ್ ಕೋಂಟೆ ಪೋಪನ್ನೆಗಂ ಪಗೆ ಸಾವನ್ನೆಗಂ ಕಯ್ಯಲುಂಬೆಂ ಪಲ್ಲಂ ಸುಲಿಯೆಂ ಮೀಯೆಂ ಪೆಂಡಿರೊಳ್ ಕೂಡೆಂ ತಲೆಯುಂ ಕಟ್ಟೆಂ ವಿನೋದಮಂ ನೋಡೆಂ ಆಭರಣಂಗಳನೊಲ್ಲೆಂ ಬರ್ಮೆಯುಂಬೆನೆಂದು ಜಿನೇಶ್ವರನ ಪೇೞ್ದ ತಪದೋಜೆಯುಂ ಪೂಣ್ದು ಕೋಂಟೆಯುಂ ಕೊಳ್ವರ್ ಪಗೆಯುಂ ಕೊಲ್ವರದುಕಾರಣದಿಂ ಸ್ವರ್ಗಾಪವರ್ಗದುರ್ಗಮಂ ಸಾಧಿಸುವುದಕ್ಕಂ ಕರ್ಮವೈರಿಗಳಂ ಗೆಲ್ವುದಕ್ಕಂ ಜಿನರ ಪೇೞ್ದ ತಪಮೆ ಮುಖ್ಯಂ ॥ ೯೧

ಜಿನರಂದಮೆ ಜಿನರೋಜೆಯೆ
ಜಿನರೆಂದುದೆ ಜಿನರ ನಡೆವ ನಡೆವಳಿಯೆ ಜಗಂ ।
ಜಿನರ ವಶಮಾಗಿ ನಡೆವುದು
ಜಿನರಾಜ್ಞೆಯನೊಲ್ಲದದಟನೊರ್ವನುಮೊಳನೇ ॥ ೯೨

ಕೊಲೆ ಪುಸಿ ಪರವಧುಸಂಗಂ
ಕಳವೆಂಬಿವು ಬೇಡ ಬೇಡ ಬೇಡೆಂಬೀನಿ ।

---

1 ಪೊರ್ದದ ಮಹಾತ್ಮರೊಳೊಂದಿಯೆ ಮಾತ್ರಮಲ್ಲಿ (ಗ)

ಮೆರ್ಗಳ್ವೀತರಾಗನಾಜ್ಞೆಯು
ನುಱಿದಣ್ಣ ಪೊತಪುರ್ಗೆಯ್ವ ಗಂಡರುಮೊಳರೇ ॥ ೯೩

ಕಳ್ಳೊಂದನೆ ಶೈವಾದಿಗ[1]
ಳೆಲ್ಲಂ ಜಿನಮತಮನುಱಿದೆ ಲೇಸೆಂದಾರ್ದರ್ ।
ಕಳ್ಳಂ ಕುಡಿವರನೆಲ್ಲಂ
ಪೊಲ್ಲಂಬಿದನಣ್ಣ ಮೋಹಿಸಲ್ಕೆ ಜೀವರೆ ಪೇಟ ॥ ೯೪

ಅಡಗೊಂದನೆ ಜಿನರಾಜ್ಞೆಯು
ನೆಡಱ ಮಹೀತಳದೊಳಟ್ಟಿಱಿಂ ತಿಂದುಂ ತಾ ।
ಮೆಡಗಟ್ಟಿ ಮಡಕೆಗಳನೊಳ್
ಗಿಡಲಾರ್ಪರೆ ಪಾಲ ಕೆಲದೊಳಂ ಬೋನದೊಳಂ ॥ ೯೫

ಕೊಲೆವೇಡೆಂಬೀ ಜಿನರು
ಜ್ಞ ವ್ಯಳರಾಜ್ಞೆಗೆ ತಪ್ಪಿ ಸೈಂಧವಂ ಕೊಂದು ಮಹಾ ।
ಬಲನರ್ಜುನನಿಂದಱಿದಂ
ನೆಲದೊಳ್ ಜಿನರಾಜ್ಞೆಗೆಱಗದಂಗದು ಪಿರಿದೇ ॥ ೯೬

ಪುಸಿ ಬೇಡೆಂಬೀ ಜಿನಪತಿ
ಯೆಸೆವಾಜ್ಞೆಯುನೊಕ್ಕು ಧರ್ಮಜಂ ಲೋಕಕ್ಕಂ ।
ಪುಸಿದಣ್ಣದೊಂದು[2] ಕಷ್ಟಂ
ಪೆಸರ್ವಡೆದಂ ಪೊಲ್ಲನೆಂದು ಧರೆ ದೂಱುವಿನಂ ॥ ೯೭

ಪರವನಿತೆಯಾಗದೆಂಬೀ
ಯುರುಹತ್ಪರಮೇಶ್ವರಾಜ್ಞೆಯುಂ ಮೀಱಿ ಸುರೇ ।
ಶ್ವರವೈರಿ ರಾವಣಂ ರಾ
ಮರ ಕೈಯೊಳ್ ಸತ್ತನಾಬಳಂಗದು ಪಿರಿದೇ ॥ ೯೮

1 ವೈಶ್ಯಾದಿಗ (ಗ)   2 ಕುಂಭಕನಂ ಪುಸಿದಣ್ಣ ಕೊಂಧು (ಕ)

ಮೇರೆಯೊಳ್ ನಿಲ್ವಿಮೆಂಬೀ
ವೀರಜಿನಾಧೀಶನಾಜ್ಞೆಯಂ ಮಿಱುಕರಂ ।
ಕೌರವಪತಿ ದುರ್ಯೋಧನ
ನಾರಯ್ಯದೆ ಸತ್ತನೆಂಬುದಂ ಕೇಳ್ದಱಿಯಾ ॥ ೯೯

ಜಿನನಾಥನ ಮುದ್ರೆಯೆ ಲೋ
ಕಂ ನಡೆವುದು ನಡೆವ ಲೋಕದ ಕ್ರಮಮುಂ ನೆ ।
ಟ್ಟನೆ ಜಿನರ ನುಡಿಯೆ ಭಾವಿಪೊ
ಡಿನಿತಱೊಳೊಂದೂನಮುಂಟೆ ವಸುಧಾಧಿಪತೀ ॥ ೧೦೦

ನಾಡವರೆಲ್ಲಂ ಚಕ್ರವರ್ತಿಯುನಱಿಯುದನಿತಱಿಂ ಚಕ್ರವರ್ತಿಯಿಲ್ಲನಲ್ಬಾರದು, ಗೌಂಡಗಳುಂ ಒಲ್ಲೊಕ್ಕಲ್ಗಳುಮೞಿವೊಡೆ ಸಾಲ್ಗುಂ; ಜಗಮೆಲ್ಲಂ ಪೊನ್ನಂ ಪರೀಕ್ಷಿಸಲಱಿಯದನಿತಱಿಂ ಪೊನ್ನಂ ಪೊಲ್ಲೆನಲ್ಬಾರದು, ಪರದರುಮಕ್ಕಸಾಲಿಗರುಮಱಿವೊಡೆ ಸಾಲ್ಗುಂ, ಲೋಕಮೆಲ್ಲಂ ಮರ್ದಿನ ಶಕ್ತಿಯುನಱಿಯುದನಿತಱಿಂ ಮರ್ದಿಂಗೆ ಶಕ್ತಿಯಿಲ್ಲೆನಲ್ಬಾರದು, ವೈದ್ಯರುಂ ಶಾಸ್ತ್ರಜ್ಞರುಮಱಿವೊಡೆ ಸಾಲ್ಗುಂ; ದೇಶಮೆಲ್ಲಮಕ್ಕರಮನಱಿಯುದನಿತಱಿಂದಕ್ಕರಮಿಲ್ಲೆನಲ್ಬಾರದು, ಸೇನಬೋವರುಮಕ್ಕರಿಗರುಮಱಿವೊಡೆ ಸಾಲ್ಗುಂ; ಅಂತೆ ಕಿಱುಕುಳ ವ್ಯಂತರಂಗಳ ಪೊಲ್ಲ ಗ್ರಹಂಗಳ್ ಶೈವಾದಿಗಳ ನೆಗೞ್ದ ಪ್ರಮಾಣಮಲ್ಲದು; ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ ಕಂಚಿಯ ಕಾಮಕೋಟಿಯುಂ ಕೊಳ್ಳಪಾಕೆಯ ಭೂತಕೋಟಿಯುಂ ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ [1] ಪೊಣಮಾಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯುಮೆಂಬಿವಮೊದಲಾದ ಮಹಾವ್ಯಂತರಂಗಳ್ ಮೋನದಿಂ ಮುಟ್ಟಪಡಂ ಬೆರಸಿಪೊರ್ಡಂ ಪೊಲೆಯರ ದನಿಯಪ್ಪೊಡಂ ಕೇಳದಂತು ಕಂಚುವಱಿವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್: ಚಂದ್ರಾದಿತ್ಯಗ್ರಹಂಗಳ್

1 ಮಾಕಮ್ವೆಯುಸಾನಿಯುಂ (ಕ. ಖ.)

ಕಳ್ಳಡಗುಂ ಜೇನುಂ ಗಿಣ್ಣ ಣಂಬೆ ಮೊದಲಾದುವಲ್ಲದೆ ಶುದ್ಧಮಪ್ಪಾಹು ತಿಯುಂ ಕೊಳ್ಳವು; ದೇವೇಂದ್ರನುಮಗ್ನಿಯುಂ (ಮೊದಲಾದ) ದಿಕ್ಪಾಲಕರೆಲ್ಲರುಂ ಮದ್ಯಮಾಂಸವರ್ಜಿತಮಪ್ಪ ಪೂಜೆಗಳಂ ಕೊಳ್ವರ್; ಮೋನದಿಂ ಮುಟ್ಟುಪಡದಿಂದನ್ನಶುದ್ಧಿಯಿಂ ಪಾತ್ರಶುದ್ಧಿಯಿಂದುಣ್ಬುದು; ತೊವಲ್ ಮೊದಲಾದವಂ ಮುಟ್ಟದೆ ನೋಡದೆ ಕಾಳಾಮುಖರುಂಬರ್; ಕೊಲಲುಂ ಪುಸಿಯಲುಂ ಕಳಲುಂ ಪೆಱರ ಪೆಂಡಿರ್ಗೆಳಸಲುಮಾಗದು, ಜೇನಂ ಗಿಣ್ಣಂ ತಿನವೇಡ, ಮಱೆದುಂ ಯಜ್ಞಶಾಲೆಯೊಳುಣವೇಡ, ನಾಯ್ಮೊದಲಾದ ಪ್ರಾಣಿಗಳಂ ನೋಯಿಸವೇಡೆಂದು ವ್ರತಂಗಟ್ಟುವಲ್ಲಿ ಮಾಣಿಗಳಂ ಬ್ರಾಹ್ಮಣರ್ ನಿಯಮಿಸುವರಪ್ಪುದಱಿಂ ಲೋಕಮೆಲ್ಲಂ ಜಿನರಾಜ್ಞೆಯಿಂ ನಡೆದಪುದೆಂದಱಿಗೆ ॥ ೧೦೧

[ಮನೆದೈವಮುಣ್ಣದೆಂದೊ
ಯ್ಯನೆ ಪೊಲಸಂ ತಿಂಬ ಮನುಜರುಂ ಪೊಲಸಿನ ಭಾ।
ಜನಮುಂ ಪೊಱಗಿರಿಸುವರೆನೆ
ಜಿನಪತಿ ಬೇಡೆಂಬ ವಸ್ತುವಂ ಮನ್ನಿಪರೇ ॥ ೧೦೨

ನಿನ್ನೊಳ್ ಧರ್ಮದ ಪೆಂಪುಂ
ನಿನ್ನೊಳ್ ವಿಸ್ತರಮುಮೆಸೆವುವೆಂದೊಡೆ ನಲಿವರ್।
ಮುನ್ನಂ ಪಾತಕರಾದೊಡ
ಮಿನ್ನದಱಿಂ ಜಿನರ ನುಡಿಗೆ ಸೋಲದರೊಳರೇ ॥] ೧೦೩

ಪರವನಿತೆಗೆಱಗದುದುಮ
ನ್ಯರ್ಥಮಂ ಬಯಸಲೊಲ್ಲದದು ನಿನಗೆಸೆಗುಂ।
ಕರಮೆನೆ ದುಷ್ಟನುಮೊಸಗೆನೆ
ಪರಮಜಿನಾಧೀಶರಾಜ್ಞೆಗೊಸೆಯದರೊಳರೇ ॥ ೧೦೪

ಕೊಲೆಯುಮಸತ್ಯಮುಮಿವನೊಳ್
ನೆಲಸಿರ್ದುವೆನೆ ಕೊಲ್ವ ಪುಸಿವ ಕಷ್ಟಂ ಬಿಡದು।

ವಿಕ್ಕಳಿಸಿ ಕಡುನೋಿವನೆನೆ ಭೂ
ತಳದೊಳ್ ಜಿನರಾಗದೆಂಬುದಂ ಮನ್ನಿಪರಾರ್ ॥ ೧೦೫

ಕಳ್ಳನುಮಂ ಪರವನಿತೆಗೆ
ನಲ್ಲನುಮಂ ಕಂಡು ನೀನೆ ಪಾದರಿಗಂ ನೀಂ ।
ಕಳ್ಳನೆನೆ ಮುನಿವರೆನೆ ಜಿನ
ವಲ್ಲಭನಾಗೆಂಬುದಕ್ಕೆ ನಲಿವರುಮೊಳರೇ ॥ ೧೦೬

ನೆಱೆ ಕಳ್ಗ ಡುಹಿಗಳಂ ಕಂ
ಡಱಿಯದೆ ಕಳ್ಗ ಡುಹಿಯೆಂದೊಡಾನುಡಿಗೆ ಕರಂ ।
ಮಱುಗುವರೆನೆ ಜಿನರಾಗೆಂ
ಬಱಿಕೆಯು ಕಳ್ಳಂಗೆ ಮುನಿಯದಿರ್ಪವರೊಳರೇ ॥ ೧೦೭

ಸೊಪ್ಪಾದ ಪೊನ್ನುಮಂ ಕಪ್ಪಾದ ರತ್ನಮುಮಂ ಪೆಸರ್ವೋದ ಪೆಂಡತಿಯುಮಂ ಮುಕ್ಕುವೋದ ಸುರಿಗಿಯುಮಂ ತೂಂತುವೋದ ಮಡಳಿಯುಮಂ ಲೋಕಂ ಕೈಕೊಳ್ಳರೆಂದೊಡೆ ಮೆಯ್ಯೆಲ್ಲಂ ದೋಷಿಯಪ್ಪ ದೇವನನೆಂತುಂ ಕೈಕೊಳರ್, ವ್ಯಸನಿಗಳಪ್ಪರೆ ಕೊಂಡಾಡುವರ್; [1] ಜಗದೊಳ್ ಕೊಲ್ಲದರುಂ ಕೊಲ್ವರುಂ ಕಳದವರುಂ ಕಳ್ವರುಂ ಪರಸ್ತ್ರೀಗೆಱಗದರುಂ ಪಾದರಿಗರುಂ ಮೇರೆಯಿಂ ನಡೆವರುಂ ಮೀಱಿ ನಡೆವರುಂ ಕಳ್ಳಂ ಕುಡಿಯದರುಂ ಕಳ್ಳಂ ಕುಡಿವವರುಮುಳ್ಳೊಡಂ ಪೊಲ್ಲದಂ ಬಿಟ್ಟು ಜಿನರಾಜ್ಞೆಯಿಂ ನಡೆವ ಮೊದಲವರ್ಗಳಂ ಪೆಸರ್ಗೊಳ್ವರಪ್ಪುದಱಿಂದಮುಂ, ಧಾನ್ಯದೊಳಕ್ಕಿ ಪಾಲೊಳ್ ತನಿವಾಲ್ ತುಪ್ಪದೊಳ್ ಬೆರಸದುದು ಬಂಟರೊಳ್ ನಿಚ್ಚಟಗಲಿ ತೊಡವಿನೊಳುಜ್ಜಳಿಕೆ ಸಿರಿಯೊಳ್ಕ್ರಿಡಿ ಕಾಲದೊಳಗ್ಗಳಿಕೆ ರಾಜ್ಯದೊಳಸಹಾಯತನಮು

1 ವ್ಯಸನಿಗಳಲ್ಲದವರ್ ನಿರ್ದೋಷಿಯಪ್ಪ ದೇವನನೆ ಕೈಕೊಳ್ವರಪ್ಪುದಱಿಂದಮುಂ ತಂಗಿನಕಾಯು ತಿರುಳಂ ನಾರುಂ ಊರೊಳ್ ಶುದ್ಧರುಂ ಕಳ್ಳರುಂ ಮನೆಯೊಳಿರ್ಪಂಡಿರುಂ ತೊತ್ತಿರುಂ ಕೆಯ್ಯೊಳು ಸಸಿಯುಂ ಪುಲ್ಲುಂ ಬೆರಸಿರ್ದೊಡಂ ಮುಖ್ಯಮಪ್ಪುದನೆ ಪೆಸರ್ಗೊಳುವಂತೆ. (ಗ)

ಮಪ್ಪ ನಿರ್ಗ್ರಂಥಮೆನೆ ಜನಂ ಬಯಸುವುದಱಿಂದಮುಂ ಲೋಕಮೆಲ್ಲಂ ಜಿನರೋಜೆಯೆ ಜಗಮೆಲ್ಲಂ ಜಿನರ ನಡೆವಳಿಯೆ ಸಕಲಮೆಲ್ಲಂ ಜಿನರಾಜ್ಞೆಯೆ ಮತ್ತೊರ್ವರ ಮಹಿಮೆಗೆಡೆಯಿಲ್ಲ; ಬಾೞ್ತೆಯುಪ್ಪವದಱಿಂದಿವೆಲ್ಲಂ [1] ದೈವಮೆಂಬೊಡೆ ಕಾಲ್ಗೆ ಕೆರಪು ಪಸಿವಿಂಗೆ ಕೂೞ್ ತೃಷೆಗೆ ನೀರ್ ತಲೆಗಣ್ಣೆ ಬಾಯ್ಗೆಲೆ ಕೆಯ್ಗೆ ಬೇಲಿ ಶಿಶುವಿಂಗೆ ಪಾಲ್ ಪಶುವಿಂಗೆ ಪುಲ್ ಕುದುರೆಗೆ ಖಾಣಂ ಕಱುವಿಂಗೆ ಪಿಟ್ಟು ಮಡಿಗಸಗಂ ಸೀರೆಗೆ ಪೊಳೆಯು [2] ನಿಂತಿವೆಲ್ಲಂ ದೈವಮಕ್ಕುಂ; ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರುಮರಸರುಂ ತಳಾರರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್; ಸಾಮರ್ಥ್ಯಮೆ ದೈವಮೆಂಬೊಡೆ ಸುಣ್ಣದಿಂದರಿಸಿನದಿಂ ಕೆಂಪಪ್ಪುದು [ಎಲೆಯಡಿಕೆಸುಣ್ಣದಿಂ ಪಲ್ ಕಱುಪಪ್ಪುದು] ಅಣಿಲೆತಿಗಡೆಯಿಂ ಬಸಿಱೊಡೆವುದು; ಅಮೇಧ್ಯದ ಮೇಲುಗುಪ್ಪೊಡೆ ಗಂಟಲ್ ನೋವುದು; ತ್ರಿಫಲೆಯ ಸೇವೆಯಿಂ ಮಲಶುದ್ಧಿಯಕ್ಕುಂ; ಪುಣಿಸೆಯ ಕೊನರುಮುಪ್ಪುಂ ಕಣ್ಬೇನೆಯುಂ ಕಳವುದು; ಸುಂಟಿಯುಮಮರ್ದುವಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದ ಕೇಡು, ತೊಟ್ಟಿಯಲೆಯ ಕಷಾಯಮಟ್ಟಿಮೆಯುಂ ಕಳವುದು; ಅಂತಾದೊಡಿವೆಲ್ಲಂ ದೈವಮಕ್ಕುಂ [ಎಂಬುದುಂ ಬಲಿ ಜೀವಸಲ್ಲೆಂದು ನುಡಿವುದುಂ ಅಕಂಪನಾಚಾರ್ಯರಿಂತೆಂದರ್ ‖ ೧೦೮

ಪೆಱಗಣ ಮಾತುಗಳಂ ಮು
ನ್ನಱಿವವರಂ ಮುಂದೆ ಬರ್ಪ ಕಾರ್ಯಮನಿಂತಂ |
ದಱಿಯದು ಜೀವಂ ಜೀವಂ
ಪಱಿದೊಡೆ ಧಾರಿಣಿಯೊಳಱಿಯಲಾರ್ಕುಂ ದೇಹಂ ‖ (?) ೧೦೯

---

[1] ಬಾೞ್ತೆಗೆಟ್ಟವೆಲ್ಲಂ (ಕ. ಬ.)

[2] ಕುಳ್ಳಿರ್ಪುದಕ್ಕೆ ವ ಣೆ ಪಡುವುದಕ್ಕೆ ಹೊರಬು ತೊಳಸುವುದಕ್ಕೆ ಸಟ್ಟುಗಯೆಂಬಿವು ಮೊದಲಾಗೊಂದಕ್ಕೊಂದು ಬಾರ್ತೆಯಾದವಿನಿತಱೊಳ್ ದೈವಮಲ್ಲವು; ಕ್ರೂರತ್ವಮೆ ದೈವಮಪ್ಪೊಡೆ ಪುಲಿಯುಂ ಪಂದಿಯುಂ ನಾಯುಂ ತೋಳನುಂ. (ಗ)

ಜಾತಿಸ್ಮರತ್ವದಿಂದಂ
ಭೂತಳದೊಳ್ ತಮ್ಮ ಭವಮನಱಿವರ್ ಕೆಲರುಂ ।
ಪ್ರೀತಿಯೊಳಸುವಿಲ್ಲದೊಡಂ
ತಾತಂಗಾಭವಮನಱಿಯಲೆಂತಾದಪುದೋ ॥ ೧೧೦

ಹಮ್ಮಯ್ಸಿ ಕಿಱಿದುಬೇಟ
ಕ್ಕೊಮ್ಮಯೆ ಪೋಪಂದು ಪುಗುವುದಸು ಬೇಗಂ ಜೀ ।
ವಮ್ಮತ್ತಿಲ್ಲಪ್ಪೊಡೆ ತನು
ವಮ್ಮದದಿಂದಂ ಬಱಿಕ್ಕೆ ಪುಗದದದೇನೋ ॥ ೧೧೧

ಪೆಣನಂ ಕಡಿವೊಡೆ ಮಿಡುಕದೆ
ಪೆಣಿಸುದು ಜೀವಮಿರದೆ ದೇಹಮುಳ್ಕೊಡವುದಿಂ ।
ನ್ನಣಕಮಸುವಿಲ್ಲದೊಡೆ ವಾ
ರುಣಿಯೊಳ್ ಸುಡೆ ಕಲಿಯುಳಿಡುಕದಿರ್ಪುದದೇನೋ ॥ (?) ೧೧೨

ಆವಿವರಬ್ಬೆಯೆಯುಯ್ಯನೆ
ಯೀವಿಧಿಯಿಂ ಸತ್ತಿಪಂದು ಪಿಡಿದುಂಬುವು ತ ।
ದ್ಭಾವದಿಪನೆ ಭೂತಪಿಶಾ
ಚಾವಳಿಗಳ್ ಮರುಳ ಧರೆಯೊಳಸುವಿಲ್ಲೆಂಬಾ ॥ ೧೧೩

ಭರದಿಂದಂ ಗ್ರಹವಾದಿ ಬಂದು ನುಡಿಸಲ್ ಕೇಳ್ ತದ್ಗ್ರಹಂ ಬಂದು ನಿ
ಷ್ಠುರನೀತಂ ಕಡುಗೋಪದಿಂ ಮುನಿದು ಮುನ್ನೆನ್ನಂ ಕರಂ ಕಾಡಿದಂ
ಪಿರಿದುಂ ದರ್ಪದಿನೆಂದು ಪೇೞ್ವುದು ಮಹಾಕ್ರೂರಗ್ರಹಂ ಜೀವನು
ರ್ವರೆಯೊಳ್ ತಾನಣಮಿಲ್ಲದಿರ್ದೊಡದನಿನ್ನೇಕೆಂಬುದಂತಾಗ್ರಹಂ ॥ ೧೧೪

ಮತ್ತಂ ಮುನ್ನಿನ ಭವದ ಗಂಡನೀಕೆಗೆ ಮಕ್ಕಳಾಗಲೀಯನೆಂಬ ಪೂರ್ವಭವದ ಪಗೆವಂ ನಿನ್ನನುಣಲೀಯದೆ ಪಲಕಾಲಂ ಗ್ರಹವಾಗಿ ಪಿಡಿದಿರ್ದಪನೆಂಬ ನಾಡವರ ನುಡಿಯಿಂದಿವರಿಂತಪ್ಪೆಡೆಯೊಳಂತಪ್ಪರಾಗಿ

ಪುಟ್ಟಿದರೆಂದು ಗ್ರಹವಾದಿಗಳ್ ಪೇೞ್ವ ವ್ಯಂತರನ ವಚನಂಗಳಿಂ, ಜಾತಕ ಫಲಮಂ ನೋಡಿ ಮತ್ತೀತಂ ಮುನ್ನಿಂತಪ್ಪಾತನೆಂದು ಪೇೞ್ವ ದೈವಜ್ಞರ ಮಾತುಗಳಿಂ , ಕಲೆವೆರಸಿ ಪುಟ್ಟುವ ಮಕ್ಕಳಿಂ ಕಂಡುಂ, ಜೀವನೊಳ ವೆಂದಱಿವುದು ; ಕೆಮ್ಮನಾನೆಗಂಡಱಿಯುನರಸುವ ಮುಂಗ್ಯರ ಕಂಕ ಣಮಂ ಕನ್ನಡಿಯಿಂ ನೋೞ್ಪ ಗಾಂಪನಂತೆ ಗಾಪಿಲನಾಗವೇಡೆಂದು ಪಲವುದೃಷ್ಟಾಂತಂಗಳಿಂ ಜೀವಸಿದ್ಧಿಯುಮಂ ಪ್ರಾಭೃತಮುಮಂ ಬಿಡಿ ಮತ್ತಿಂ ತೆಂದಂ ॥ ೧೧೪

ಭೂವಸಿತ್ರೀಶ್ವರನಱಿಯದೆ
ಭಾವಿಸದೆ ತಗುಳ್ದು ನಿನ್ನನತ್ಯಾದರದಿಂ ।
ದೇವನೆ ದಿಂಡನೆ ಯೆಂದೊಡೆ
ದೇಷಂ ನಿನಂತದೆಂತು ದೊಡ್ಡಿಪನಪ್ಪೈ ॥ ೧೧೫

ಪಲವುಮಾತಂ ಪೆಟ್ಟುವೆಚ್ಚಿ ಗಱಿಪದೆ ಜೀವನುಂಟಕ್ಕುಮಪ್ಪೊಡೆ ನಿನ್ನ ದೇಹವಮಂ ಪೊಱಮಟಸಿ ಜೀಗಪಿಪಾನರೆವ ನೆರವಿಗಮರಸಂಗಂ ತೋಱು ಬಱಿದೆ ಮಾತಂ ಬಲ್ಲೆನೆಂದು ನುಡಿಯಲ್ವೇಡೆಂಬುದುಮಕಂ ಪನಾಚಾರ್ಯರಿಂತೆಂದರ್ ॥ ೧೧೬

ಮರುಳ್ ಮರುಳ್ತನದಿಂದು
ರ್ವರೀಶನಾಸ್ಥಾನರಂಗದೊಳ್ ನೀಂ ಪಿತ್ತ ।
ಜ್ವರಮಾದರಂತೆ ಗಱುವ
ಸಿರಿಸಿಲ್ಲದ[1] ನುಡಿವ ಬಡತನಂ ಚದುರಿಕೆಯೋ ॥ ೧೧೭

ಸೊಗಯಿಪ ಮಾಗಿಯೊಳಂ ಜೀ
ಸಗೆಗಾಲಮನಣ್ಣ ತೋಱಲಕ್ಕುಮು ಪೇೞ್ವೇ ।
ಸಗೆಯೊಳ್ ಮಱೆಗಾಲಮನೀಂ
ಬಗೆದಂತಿರೆ ಪೇೞ ತೋಱಲಕ್ಕುಮು ಜೀಗಂ ॥ ೧೧೮

[1] ಸರಗಿಲ್ಲದ (ಕ.) ಸಿರನಿಲ್ಲದ (ಬ.)

ಅದು ಕಾರಣದಿಂ ನೀಂ ನುಡಿಯಲಱಿಯದಂಕಕಾಱನಾಕಾಶಮಂ ನೋಡಿದನೆಂಬಂತೆ, ಎನ್ನ ನುಡಿಗುತ್ತರಮಂ ಕಾಣದೇನಾನುಮೊಕ್ಕ ಸಕ್ಕಂ ಗಱಪಿದೆಯಾದೊಡಮೀಂ ಪಾಲೊಳಗೆ ತುಪ್ಪಮುಂಟೆಂಬುದುಮಂ ಮರದೊಳಗೆ ಕಿಚ್ಚುಂಟೆಂಬುದುಮನೆಲ್ಲರುಂ ಬಲ್ಲನಿತರೊಳ್ ಬಱಿವಪ್ಪುರದಕ್ಕೆ ತಕ್ಕ ಕ್ರಿಯೆಯುಂ ಮಾಡದೊರ್ಮೆಯೆ ಗಮ್ಮನೆ ತೋಱಬಾರದು ; ಕ್ರಮದಿಂ ಪಾಲಂ ಕಾಸಿ ಹೆಪ್ಪಸಿಟ್ಟು ಕಡೆದು ಬೆಣ್ಣೆಗೊಂಡು ಪದನಱಿದು ಕಾಸಿದಾಗಳ್ ತುಪ್ಪಮಕ್ಕುಂ ; ಮರನುಮನೋಜಾಯಿಲನಾಗಿ ಪೊಸೆಯೆ ಕಿರ್ಚಕ್ಕುಂ, ಎಳ್ಳಂ ಗಾಣದೊಳಿಕ್ಕಿ ಪಿೞಿಯೆ ಬೞಿಕ್ಕೆಣ್ಣೆಯಕ್ಕುಂ ; ಅಂತೆ ಕರ್ಮವಶದಿಂ ಶರೀರಿಯಪ್ಪ ಜೀವಮನೊರ್ಮೆಯೆ ನಿನಗೆ ತೋಱಲ್ಬಾರದು ; ದಾನಾದಿಧರ್ಮದೊಳ್ ಕೂಡಿ ಏಕಾದಶನಿಲೆಯೊಳ್ ಕೂಡಿದ ಧರ್ಮದೊಳಕ್ಕೆ ದಶಧರ್ಮದೊಳ್ ಕೂಡಿದನಗಾರಧರ್ಮದೊಳಕ್ಕೆ ನೆಗೞ್ದು ಪಾಪಾಂಕುರಂಗಳಂ ಕಿಡಿಸೊಟ್ಟಿ ಮೆಲ್ಲನೆ ಸ್ವಸ್ವರೂಪನಾಗಿ ಶಾಶ್ವತಸುಖದೊಳ್ ಕೂಡಿದಂದು ಬೇಱಕ್ಕುಮಲ್ಲದಂದು ಮನೆಯ ಬಸತನಕ್ಕೆ ಪೊಡೆಯುಂ ಕೊಯ್ದರೆಂಬಂತೆ ಮಾಡಿದೊಡೆ ನಿನಗೆ ಕರ್ಮಬಂಧಮಪ್ಪ ಜೀವಮನಂತು ಬೇರ್ಕೆಯ್ದು ತೋಱಲ್ಬಪ್ಪುದು ॥ ೧೭೦

ಸೊರೆಯೊಳಗೆ ತೀವಿ ಮಣ್ಣಂ
ಸರದಿಯೊಳಿಕ್ಕಿದೊಡೆ ನೆಗೆಯಲಾರ್ಪುದೆ ಪಾಪೋ ।
ತ್ಕರದೊಳ್ ಬೆರೆಸಿದ ಜೀವ್ರೋ
ತ್ಕರಮುಂ ನಿರ್ವೃತಿಗೆ ನೆಗೆಯಲಾರ್ಕುಮೆ ಬೇಗಂ ॥ ೧೭೧

ತಾರಗೆ ಪಗಲೊಳ್ ಪದುಮಾ
ಕಾರಂ ಮೇಲ್ಕವಿದ ಮುಗಿಲ ಮಱಿಯೊಳ್ ತಮ್ಮಾ ।
ಕಾರಂಗೆಟ್ಟಿರ್ಪವೋಲಘ
ಭಾರದಿನಂತಿಂತು ಮಿಡುಕಲಾಱವು ಜೀವಂ ॥ ೧೭೨

ಜಾಂಡಲಕೆಯ ಬೀಜಂ ಭೂ
ಮಂಡಲದೊಳ್ ಪಸುರಡಂಗಿ ಪಾಱುವ ತೆಱದಿಂ ।

ಖಂಡಿಸೆ ಪಾಪಸಮೂಹಂ
ಮಂಡಿತಮೋಕ್ಷಕ್ಕೆ ಸಾರ್ಗಮೆಸುಗಿದು ಸಹಜಂ ॥ ೧೨೩

ಎಂದಿಂತು ದೃಷ್ಟಶ್ರುತಾನುಭೂತಂಗಳಿಂದಱಿವುದೆಂದು ಸರ್ವಜ್ಞನುಮಂ ನಿರ್ಗ್ರಂಥಮಪ್ಪ ತಪಮುಮಂ ಮೋಕ್ಷಿಯುಮಂ ಜೀವಮುಮನುಂಟೆಂಬುದುಂ] ॥ ೧೨೪

ಪಲವುಪೊಗಟ್ತೆಗಳಿಂ ಭೂ
ತಲನಾಥಂಬೆರಸು ಸಭೆಯ ಜನಮೆಲ್ಲಂ ಕೈ ।
ಕೊಳಲಧಿಕಮೆಚನರಂಚನೆಗೆ
ನೆಲೆಯಾದಂ ಸುಕವಿನಿಕರಪಿಮಾಕಂದಂ ॥ ೧೨೫

ಅಱಿಮಪರುಂ ಮತ್ತೇನೆಂ
ದಱಿಯದರುಂ ತಿಳಿಯೆ ನುಡಿದನಮೃತದ ಮಳೆಗಳ್ ।
ಕಱೆವಂತೆ ನಚ್ಚಿ ಪಲವುಂ
ತೆಱದಿಂದಂ ಸುಕವಿನಿಕರಪಿಕಮಾಕಂದಂ ॥ ೧೨೬

ಎಂದು ಜಯವರ್ಮಮಹಾರಾಜಂ ಜಿನಶ್ರೀಚರಣಾಳಂಕಾರಶೀರ್ಷನ ವಾಗ್ಮಿತ್ವಕ್ಕಂ ಭಾವಯುತದಿಗಂಬರದಾಸನ ಜಿನಾಗಮಪರಿಣತಿಗಂ ಸುಕವಿಜನಮನಃಪದ್ಮಿನೀರಾಜಹಂಸನ ಕೊಂಕಿಲ್ಲದ ಜಿನಭಕ್ತಿಗಂ ಸಹಜಕವಿಜನಮನಃಪದ್ಮಿನೀರಾಜಹಂಸನ ಕೊಂಕಿಲ್ಲದ ಜಿನಭಕ್ತಿಗಂ ಸಹಜಕವಿಜನಮನಃಪಯೋಧಿಹಿಮಕರನ ಕುತುವೃತ್ತಾರಕ್ಕಂ [ಮುಯ್ಯುಮ್ಮದಮಾಗೆ ಕಾಲ ಮೇಲೆ ಬಿಬ್ದು ಮತ್ತೆ ಕಾಲಂ ತಲೆಯ ಮೇಲಿಟ್ಟುಕೊಂಡು ಜೀಯ ಬಾಪೆಂದು ಮತ್ತೆ ಪೊಗಟೆ, ನುಡಿದು ಗೆಲ್ವುದು ತೊಱೆಯನೀಸಾಡಲಾಱದ ನಿಶ್ಶಕ್ತನ ಕಾಲಂ ಪಿಡಿದಂತಾಗೆ ಕಾಳಗದೊಳ್ಸೋಲ್ತು ಪಂದೆ ಪೆಱಗೆ ಲಜ್ಜಿಸಿ ಕೆಱೆಯಂ ಪಾಯ್ದನೆಂಬಂತೆ ಬಲಿಜಯವರ್ಮ ಮಹಾರಾಯನ ಮೊಗಮಂ ನೋಡಲ್ ಲಜ್ಜಿಸಿ ತನ್ನ

ಸೋಲ್ತುದಕ್ಕೆ ಲಜ್ಜಿಸಿ ಪೆಯ್ಯುಱಿಯದೆ ಮುನಿಸರೋಜಿನೀರಾಜ
ಹಂಸನನಿಂತೆಂದಂ] [1] ॥ ೧೨೭

ಪೆಱರಿಂತಲ್ಲದೆ ಬಂದೆನ
ಗೆಱಗರ್ ಕಡುಭಕ್ತಿಯಿಂದಮೆಂದುಕ್ಕೆವದಿಂ
ಬಱಿದೇಂ ಪ್ರಾಣಿಸಿ ನೀನೊಳ
ಗೞಿಯದರಂ ವಚನರಚನೆಯಿಂ ಸೋಲಿಸುವೈ ॥ ೧೨೮

[ಮಾಯೆ ತಪಮಂ ಪ್ರೋಣಕ್ಕೆಯೆ
ಗಾಯದಿನುಣಲೆಂದು ವಶ್ಯಮಂತ್ರಂಗಳನ ।
ನ್ಯಾಯಪರನಾಗಿ ಸಾಧಿಸಿ
ಮಾಯಾವಿ ಧರಿತ್ರಿಯಂ ಮರುಳ್ಮಾಡಿದಪೈ ॥ ೧೨೯

ಪಲವುಮದುರ್ಗಗಳಿಂ ಮುಖವಶ್ಯಮಂ ಮಾಡಿಕೊಂಡು ಜನವಶ್ಯ
ರಾಜವಶ್ಯಮಂತ್ರಂಗಳನುಣ್ಣದಟ್ಟಿದು ಕುದಿದು ಮಱುಗಿ ಸಾಧಿಸಿ
ತನ್ಮಂತ್ರಬಲದಿಂದೆನ್ನ ನಾಲಗೆಯಂ ಸ್ತಂಭಿಸಿ ಗೆಲ್ವೆಯಂತಲ್ಲದೆನ್ನಂ
ಗೆಲಲ್ ನಿನ್ನಳವಲ್ಲದೆಂದು ಮುನಿಸಿಂ ಕಣ್ಗಾಣದೆ ಬಾಯ್ಗೆವಂದಂತೆ
ನುಡಿವುದುಂ ನೆರೆದ ನೆರವಿಯೆಲ್ಲಮಿಂತೆಂದರ್ ॥ ೧೩೦

ಜಯವರ್ಮಮಹಾರಾಜಂ
ನಯದೆ ಮುನೀಶ್ವರನೊಳಾದವಿ ನುಡಿದಾಂ ಗೆಲ್ವೆಂ ।
ನಯದಿಂದಮೆಂದು ಬಂದಂ
ಭಯಬಂದುಳ್ಳಳ್ಕಿ ನುಡಿಯಲಾಱದೆ ಕಷ್ಟಂ ॥ ೧೩೧

ಮಾತನಱಿಯದ ಸೂಳೆ ಕುಂಟಣಿಯಂ ಬೈದಳೆಂಬ ನಾಣ್ಣುಡಿ
ಯಂತೆ ಪರಮಾವಧಿಲೋಚನನಪ್ಪ ಮಹಾತ್ಮನ ವಚನಕ್ಕುತ್ತರಮಂ
ಕುಡಲಾಱದೆ ಬಾಯ್ಗೆವಂದಂತೆ ನುಡಿದಪನತಿಧೂರ್ತನೆಂದು ಕಂಡರೆಲ್ಲಂ

ಮುಯ್ಪುವಾಗೆ ಬಿದ್ದ ಕಾಲಂ ತಲೆಯ ಮೇಲಿಟ್ಟುಕೊಂಡು ಮತ್ತೆ
ಮತ್ತೆ ಪೊಗಳ್ವುದುಂ ಬಲಿ ಲಜ್ಜಿಸಿ ಕ್ರೋಧದಿಂ ಕಣ್ಗಾಣದೆ ಬೈಯ್ದು (೧)

ಜಜೆಯೆ ಜಯವರ್ಮಮಹಾರಾಜಂ ಬಲಿಯ ಮಾತಿಂಗೆ ಮುನಿದು ಸಭಾ ಸದಗ್ರಿಂತೆಂದಂ ][1] ಕರಗಸದ ಬರವುಂ ಪೋಗುಂ, ಕಿಚ್ಚ ನುರಿಯುಂ ಪೊಗೆಯುಂ ದುಷ್ಟಾಶ್ವದ ಮುಂತುಂ ಪಿಂತುಂ ಬೆಟ್ಟಮನೇಱುವುದು ಮಿೞು ವುದುಂ ಪುಲಿಯ ಕೂರ್ಮೆಯುಂ ಪಗೆಯುಂ ಸುರಿಗಿಯ ಮೊನೆಯುಂ ಬಾಯಧಾರೆಯುಂ ವಿಷದ ಕಯ್ಪುಂ ಸೀಪ್ಪುಂ ಮೂರ್ಖನ ನಗೆಯುಂ ಮುನಿಸುಂ ಪೇಲ ನುಣ್ಪುಂ ಪೆಂಪುಂ ಕಯ್ಪುಸೋರೆಯ ಮಿಡಿಯುಂ ಕುಡಿಯುಂ ನಾಯ್ವೇಳದ ಕಾಯುಂ ಪಣ್ಣುಂ ಲೋಭಿಯ ಮನಮುಂ ಧನಮುಂ ಕಳ್ಳನ ಚೆನ್ನುಂಪೊನ್ನುಂ ಭಯದ ಬಟ್ಟೆಯ ನೀರುಂ ನೆೞಲುಂ ಪೊಲೆಯರ ಮನೆಯ ಕೂೞುಂ ಬಾಡುಂ ಬೆಸನಿಯ ನುಡಿಯುಂ ನಡೆ ಯುಂ ಪೊಲ್ಲಂತಂತೆ ಮಿಥ್ಯಾದೃಷ್ಟಿಯ ನೆಗೞ್ತೆಯುಮೊಂದು ಪೊಲ್ಲೆಂದು [ ಮುನಿದು ಬಲಿಯನಿಂತೆಂದಂ ॥ ೧೩೨

ಪಿರಿಯರಿವರ್ ಸರ್ವಜ್ಞರ
ದೊರೆಯೆನ್ನದೆ ಸೊಕ್ಕಿ ಮೂರ್ಖತನದಿಂ ಕಾಣಂ ।
ಹೊರಸೇಱಿದಂತೆ ನುಡಿವ್ಯ
ಮರುಳಂ ಪಿರಿರೊಳರೆ ಲೋಕದೊಳ್ ನಿನ್ನಿಂದಂ ॥ ೧೩೩

ನೀನತಿಧೂರ್ತನೆ ದುಷ್ಟಂ
ದೀನನುಮನೆನ್ನ ಮುಂದೆ ಮುನಿಪುಂಗವನಂ ।
ಹೀನವಚನಂಗಳಿಂದಭಿ
ಮಾನಂಗಿಡೆ ನುಡಿದೆಯಾದೊಡೇನಾಯ್ತಿನ್ನುಂ ॥ ೧೩೪

ಬರ್ಮಗೆ ಪ್ರಾಣಕ್ಕೆ ತಪ್ಪಲಾಗದು ನಿನ್ನ ಮಾಡಿದ ದುಷ್ಟತನ ಮಪ್ಪೊಡೆ ಕೊಲೆಗೆ ಪ್ರಾಪ್ತಿಯೆಂದು ಜಡಿದು ನುಡಿದರಸಂ ಬಲಿಗೆ ವಿರಸ ನಾಗಿ ಕೋಪದಿಂ ಬಡಿದು ಪಿರಿದಪ್ಪಪಮಾನಮಂ ಮಾಡಿ ತನ್ನ ಪುರದಿಂ

1 ಎಂದು ಬಾಯ್ಗೆ ಬಂದಂತೆ ನುಡಿವುದುಂ ಜಯವರ್ಮಮಹಾರಾಜಂ ಮುನಿದು ನಿನಗಂಜುವನೆವ್ವಾಳ್ವ ದೇಶದಿಂ ಪೋಮುಟ್ಟು ಪೋಗೆಂದು ಜಡಿದರಸಂ ಪ್ರಧಾನರ ಮೊಗಮಂ ನೋಡಿ (ಗ)

ಪೊಱಮಡಿಸಿ ಕಳೆವುದು ಬಲಿಯವಂಶದವರೆಲ್ಲಂ ಪೊೞಲೊಳರಲಾಗ ದೆಂದು ಗೋಸಣೆಗೊಳಿಸೆ ಬಲಿ ಜಯವರ್ಮಮಹಾರಾಜಮುನಿಪತಿಗೆ ಪುನರ್ನಮಸ್ಕಾರಂಗೆಯ್ದು ಮನೆಗೆ ಪೋದನಿತ್ತಲ್ ಬಲಿಯೊಡವುಟ್ಟಿ ದರ್ ಶುಕ್ಲಬೃಹಸ್ಪತಿ ಪ್ರಹ್ಲಾದರ್ ಮೊದಲಾಗೊಡೆಯ ಬಂಧುಗಳೆಲ್ಲಂ ಪೊಱಮಟ್ಟು ಬಲಿಗೂಡಿ ಚಿಂತಾಕ್ರಾಂತರಾಗಿ ನೆರೆದು ಪೋಗುತ್ತುಂ ಬಲಿಯನಿಂತೆಂದರ್ ॥ ೧೩೫

ಅಣ್ಣ ಸುಖೋನ್ನತಿಯಿಂದಂ
ತಣ್ಣನೆ ಲೇಸಾಗಿ ಮುದದಿನುಣ್ಬರ ಬಾಯೊಳ್ ।
ತಿಣ್ಣನೆ ಕಿರ್ಚಂಪುಡಿಯಂ
ಮಣ್ಣಂ ಪೊಯ್ದಂತು ಮಾಡಿದೈ ದೂರ್ತಿಂದಂ ॥ ೧೩೬

ಎಂದು ಬಲಿಯಂ ಮೂದಲಿಸಿ ಬಯ್ವುದುಂ, ನೃಪನೊಳಾದ ಪರಿಭವಾನಳನುಂ ನಂಟರೊಳಾದ ದುಃಖಾನಳನುಂ ತಿಣ್ಣಮಾಗೆ ಮುನೀಂದ್ರೋತ್ತಮನಮೇಲೆ ಕೋಪಂ ಪುಟ್ಟೆ ಬಲಿಯಿಂತೆಂದಂ ॥೧೩೭

ಜಯವರ್ಮಾಧೀಶನಾಸ್ಥಾನದೊಳಮೆಯವದಿಂದೆನ್ನನಂದೋಟುಮಾಟ
ದ್ದ ಯತೀಶಾಂಭೋಜಸೂರ್ಯಂಗಳನಳವಡೆ ನಾನಾಪ್ರಕಾರಂಗಳಿಂ
ಸಂ
ಶಯಮೇಕೀನ್ನಣ್ಣನಾಂ ಕೊಲ್ಲದೊಡೆ ಮನುಜನೇ ಮಂತ್ರಿಯೋ ನೋಡಿ
ಮೆಂದ
ಪ್ರಿಯವಾಕ್ಯಾಳಾಪನಾಗಳ್ ಮನದ ಮುಳಿಸಿನುದ್ರೇಕದಿಂ ನೊಂದು
ಪೋದಂ ॥ ೧೩೮

ಅಂತು ಪೋಗಿ ಹಸ್ತಿನಾಪುರಕ್ಕೆವಂದು ಪದ್ಮಂಗಾಳಾಗಿರ್ಪದು ಮೊಂದುದಿವಸಂ] ॥ [1] ೧೩೯

[1] ನಕ್ಕು ಪುನರ್ನಮಸ್ಕಾರಂಗೆಯ್ದು ಮನೆಗೆ ಪೋದನಿತ್ತಲ್ ಬಲಿಯುಂ ತನ್ನೊಡವುಟ್ಟಿದರ್ವೆರಸ ಲಜ್ಜೆಯಿನಿಯಂ ಪೊಱಮಟ್ಟು ಹಸ್ತಿನಾಪುರಕ್ಕೆ ವಂದುಮಹಾ ಪದ್ಮರಾಜನಂ ಕಾಣ್ಬುದುಂ ಪಿಂತನೆ (ಗ)

ಪರಿತಂದೊರ್ವಂ ಧಾತ್ರೀ
ಶ್ವರಂಗೆ ಪೊಡೆಮಟ್ಟು ದೇವ ನಮ್ಮ ಬಲಂ ಭಾ ।
ಸುರಸಿಂಹಕೀರ್ತಿ ಧರಣೀ
ಶ್ವರನಿಂ ಪರಿಭವವಮನಾಂತುದಾಹವದೆಡೆಯೊಳ್ ॥ ೧೪೦

[ಎಂದು ಬಿನ್ನಪಂಗೆಯ್ವುದುಮರಸಂ ವಿರಸಮಾದ ಸೂಳೆಯಂತೆ ಲಜ್ಜಿಸೆ ಮುನ್ನನೇಕಸೂಳ್ ತನ್ನಟ್ಟಿದ ದಂಡಾತಂಗಮಾಸದುದಱಿಂ ಪಿರಿದಪ್ಪ ಲಜ್ಜೆ ಪುಟ್ಟೆ ಕೊಕ್ಕರಿಸುತ್ತಿರೆ ಅರಸನ ಮನದ ಹೇವಮನಱಿದು ಬಲಿ ಮನದೊಳೊಳ್ಳಿತಪ್ಪ ಪ್ರಸ್ತಾವಮಾಯ್ತೆಂದು ಪೆರ್ಗಡೆ ಪದ್ಮಮಹೀ ಶ್ವರರಂಗೆ ಪೊಡೆಮಟ್ಟು ದೇವರೆನಗಾಬೆಸನಂ ದಯೆಗೆಯ್ವುದೆಂದು] [1] ॥

ಭರವಸದಿಂ ಬೇಡುವುದುಂ
ನರಪಂ ದಯೆಗೆಯ್ದು ಬೆಸನನಾಗಳ್ ಕೈಕೊಂ ।
ಡರವರಿಸದೆ ಪಿರಿದುಬಲಂ
ಬೆರಸರಿಯುಂ ಗೆಲ್ವ ಬುದ್ಧಿಯಿಂ ಬಲಿನಡೆದಂ ॥ ೧೪೨

ನಡೆದು [ಕತಿಪಯಪ್ರಯಾಣಂಗಳಿಂ] ಕುಂಭಪುರಮನೆಯ್ದಿ [ಮೂವಳಸಾಗಿ ಸುತ್ತಿ ಮುತ್ತಿ ಛಲದಿಂ ತನ್ನಂ ಬಿಟ್ಟು ಕಾದಿ] ಕೋಂ ಟೆಯುಂ ಕೊಂಡು ಸಿಂಹಕೀರ್ತಿಯುಂ [ಗ್ರಾಮಸಿಂಹಮಂ ಕಟ್ಟುವಂತೆ ಕೋಡಗಗಟ್ಟಂ] ಕಟ್ಟಿ ತಂದು ಪದ್ಮಮಹೀಪವಲ್ಲಭಂಗೊಪ್ಪಿಸುವುದುಂ ಪದ್ಮಮಹಾರಾಜಂ ಮೆಚ್ಚಿ ಮಹಾಮಂತ್ರಿಪದವಿಯಂ ಕೊಟ್ಟು ಮತ್ತ ಮವಂ ಮಾಡಿದ ಕೆಲಸಕ್ಕೆ ಸಂತೋಷಂ ಬಟ್ಟು ಮೆಚ್ಚಿದೆಂ ಬೇಡಿಕೊ ಳ್ಳೆಂಬುದುಂ ॥ ೧೪೩

ಬಲಿ ಪಿರಿದುಂ ಪೆರ್ಗಡೆ ಮಹೀ
ತಳಪತಿ ನಿನ್ನೀವ ಮೆಚ್ಚನನ್ನವರಂ ನಿ ।

---

[1] ಎಂಬುದುಮರಸನ ಖಿನ್ನವಾದ ಮೊಗಮಂ ಕಂಡೆನಗಿದವಸರನೆಂದಾ ಬೆಸನಂ ಮುಂದಣ್ಗೆವಂದು (ಗ)

ಶ್ವ ಲನಾಗಿ ದಿವ್ಯಚಿತ್ತದೊ
ಳೆನಿಸುಂ ತಾಳ್ದಿನ್ನ ಮನಕೆ ಬಂದವಸರದೊಳ್ || ೧೪೪

ಬೇಡಿಕೊಂಡಪೆನೆಂಬುದುಮರಸನುಂ 'ತಥಾಸ್ತು' ಎಂದೊಡಂ ಬಡುವುದುಂ ಬಲಿ ಪರಮವಿಶ್ವಾಸಿಯಾಗಿ ಪಲವುಕಾಲಮಿರ್ಪುದುಮಕಂಪ ನಾಚಾರ್ಯ‌ರಯ್ನೂರ್ವರ್ ಮುನೀಶ್ವರರ್ ವೆರಸು ಧರಾತಳಮಂ ಕ್ರಮ ಕ್ರಮದಿಂ ವಿಹಾರಿಸುತ್ತುಂ ಹಸ್ತಿನಾಪುರಕ್ಕೆವಂದಾಪುರದ ಬಡಗಣ ದೆಸೆಯ ಪಿರಿದಪ್ಪ ಸಿತಗಿರಿಯೊಳ್ [ಚಾತುರ್ಮಾಸನಮಪ್ಪುದಱಿಂ ಯೋಗಂ ಕೈಕೊಂಡಿರ್ದರ್.] ಇರ್ಪುದುಂ || ೧೪೫

ವರಮುನಿವೆಲ್ಲಭರಿರ್ದ ದ
ನರಸಂ ಕೇಳ್ದರ್ತಿವಟ್ಟು ರಾಜಕುಮಾರರ್ |
ವೆರಸು ಮಹೋತ್ಸವದಿಂ ಭಾ
ಸುರತೇಜಂ ಪೋಗಿ ಭಕ್ತಿಪೂರ್ವಕದಿಂದಂ || ೧೪೬

ವಂದಿಸಿ ಕಿಱಿದುಬೇಗಂ ಧರ್ಮಮಂ ಕೇಳ್ದು ಪುನರ್ನಮಸ್ಕಾರಂ ಗೆಯ್ದು ರಾಜಭವನಕ್ಕೆ ಬಂದಿರ್ಪುದುಂ ಬಲಿ ರಾಗದಿಂ ಮೆಯ್ಯಱಿಯ ದರಸುವ ಬಳ್ಳಿ ಕಾಲ್ಗೊಳ್ ತೊಡರ್ದುದೆಂಬಂತೆ ಅಱಿಸಿ ಕೊಳ್ವ ಪಗೆ ಮನೆಗೆ ವಂದಂ ಪುಣ್ಯಂಗೆಯ್ದೆನೆಂದು ಪದ್ಮ ಮಹಾರಾಜನಲ್ಲಿಗೆ ವಂದು ಭಂಡಾರದೊಳರ್ದ ವೆಚ್ಚಂ ಕಾರುಣ್ಯಂಗಯ್ವುದೆನೆ ಪದ್ಮಮಹೀನಾಥಂ ಕೊಟ್ಟೆಂ ಬೇಡಿಕೊಳ್ಳೆಂಬುದುಂ ಮಹಾಪ್ರಸಾದಮೆಂದಿಂತೆಂದಂ || ೧೪೭

ನಿನಗಂ ನಾಡಿಂಗಂ ಶಾಂ
ತಿನಿಮಿತ್ತಂ ಯಜ್ಞಮಂ ಮಹೋತ್ಸವದಿಂ ನೆ |
ಟ್ಟನೆ ಧಾತ್ರಿ ಪೊಗಟೆ ಮಾಡುವ
ಮನಮಾಗಿರ್ದಪುದು ದೇವ ಪುಣ್ಯೋದಯದಿಂ || ೧೪೮

ನರನಾಥ ಯಜ್ಞಮೆಂಬುದು
ಪಿರಿದಪ್ಪ ಫಲಕ್ಕೆ ಕಾರಣಂ ಸಕಲಸುರಾ |

ಸುರರೆಲ್ಲಂ ಮನದೊಳ್
ಸ್ತುರದಿಂದಂ ತೃಪ್ತರಾಗಿ ನಲಿವುದಱಿಂದಂ ॥ ೧೪೯

ದೇವ ನಿನ್ನ ರಾಜ್ಯಮಂ ಪದಿನೈದು ದಿವಸಂಬರಮೀವುದೆಂದು ಬೇಡುವುದುಂ ಪದ್ಮನವನ ಬೇಡಿದನಾಚಾರಕ್ಕಂ ತಾಂ ಬೇಡಿಕೊಳ್ಳೆಂದುದಕ್ಕಂ ವಿಸ್ಮಯಂಬಟ್ಟು ದೇವರ್ಗಂ ಕ್ಷತ್ರಿಯರ್ಗಂ ಪುನರ್ವಚನಮಂ ನುಡಿಯಲಾಗದೆಂಬ ನೀತಿಯುಮಂ ಭಾವಿಸಿ ಬಲಿಯ ಮನದ ಕಪಟಮನೇನೆಂದಱಿಯದೆ [ಸೀಸೇನಂ ಮಾಡಿದೊಡಮಕ್ಕು ಪದನೆನಗೆ ಪೇಳಲ್ವೇಡ] ಆನೆನ್ನ ಮುನ್ನಿನ ನುಡಿದ ಕಾರಣಮಾಗೆ ಪದಿನೈದುದಿವಸದ ರಾಜ್ಯಮಂ ಕೊಟ್ಟೆನೆಂದು ಕೊಟ್ಟು ತನ್ನಂತಃಪುರಪುರಂಧ್ರಿಯರೊಳ್ ಕೂಡಿರ್ದನನ್ನೆಗಮಿತ್ತಲ್ ॥ ೧೫೦

ಅಂದೆನ್ನಂ ಜಯವರ್ಮನ
ಮುಂದೆ ಮಹಾಭಂಗಮಾಗೆ ಸೋಲಿಸಿದವನಂ ।
ಕುಂದದೆ ಕೇಳ್ ನಾನಾವಿಧ
ದಿಂದಂ ಚಿತ್ತಕ್ಕೆ ಬಂದ ಕೊಲೆಯಿಂ ಕೊಲ್ವೆಂ ॥ ೧೫೧

ಎಂದು ಮನದೊಳಾಲೋಚಿಸಿ [ಕುಟಿಲಬುದ್ಧಿಯಿಂ ತನ್ನೊಳಗ ನಾರ್ಗಮಱಿಸಲೊಲ್ಲದೆ ಪದ್ಮನುಮಂ ಪುರಮುಮಂ ನಂಬಿಸಲ್ವೇಡಿ ಯಜ್ಞಂಮಾಡಿಪಪೆ ನೆಂಬಿವನೆ ಪ್ರಕಟಂಮಾಡಿ ಮನಗೆ ವಂದು][1] ॥ ೧೫೨

ಈ ನರವಲ್ಲಭನಪ್ಪೊಡೆ
ತಾನಧಿಕಂ ಜೈನಧರ್ಮದೊಳ್ ಋಷಿವಧೆಯಂ ।

---

[1] ಕುಟಿಲಮನಂ ತನ್ನ ಮನದ ಕಾರ್ಯಮನೊರ್ವಂಗಱಿಪದೆ ನಾಲ್ಕುಯ್ದು ದಿವಸದೊಳಗೆ ಪುರಮುಮಂ ಪುರಿಗ್ರಹಮುಮನಳವಡಿಸಿ; ಪದಿನೈದು ದಿವಸದರಸಂ ಮರದಿಂ ಮೈಯುರಿಯುದುಕ್ಕಿ ಪರದೇಶಂಗಳ್ । ಗರಗಂಪಂಗೊಂಡುಮೋಣ್ಕ್ರದವಳಿದುದು ಬಲಿಯ ರಾಜ್ಯದುನ್ನತಿಯಿಂಬಂ ॥ ಮತ್ತಮೆನ್ನ ಕಾರ್ಯಂ ಪ್ರಜೆಗೆ ತುಷ್ಟಿಯಾದಲ್ಲದೆ ತೀರದೆಂದು ತಪ್ಪಜ್ಜರ ಪಜ್ಜರ ಗೊಜ್ಜರ ಪಡೆದ ಪೊನ್ನೆಲ್ಲಮಂ ಪುರಜನಕ್ಕೆಲ್ಲಂ ಮಹಾದಾನಂಗೊಟ್ಟು (ಗ)

ತಾನಱಿದನಪ್ಪೊಡೆನ್ನಂ
ನಾನಾವಿಧದಿಂದೆ ಕೊಂದು ತೂಗದೆ ಮಾಣಂ ॥ ೧೫೩

[ಅದರಿಂದೆನ್ನ ದ್ರೋಹಮರಸನ ಕಿವಿಯಂ ಮುಟ್ಟದಂತಾಗೆ ಮಾಪ್ಪೆನೆಂದುಪಾಯದಿಂ ಜೋಗಂಕ್ಕೆಕೊಂಡು ಋಷಿಯರ್ ಪೋಗರೆಂ ಬುದನಱಿವನಪ್ಪುದಱಿಂದೆನ್ನ ಯಜ್ಞಂ ತೀರ್ವನ್ನೆಗಂ ಋಷಿಯರೀ ಪೊಬಲೊಳಿರವೇಡಮಂದು ಘೋಸಣೆನಗಬ್ಬಿದುಮಕಂಸನಚಾರ್ಯರ ಱಿದು ಸಮಸ್ತಋಷಿಯರ್ಗಂತೆಂದರ್] ॥ ೧೫೪

ಅವರವರ ಪುಣ್ಯಪಾಪಂ
ಸವನವದಿಂ ಫಲವನೀಗುಮವರ್ಗಂ ಪೆಱಪಂ ।
ಭುವನದೊಳು ಮಾಱ್ಪೆನೆಂಬಿಂ
ತವರಧಿಕರೆ ಪುಣ್ಯಪಾಪನಿಚಯಕ್ಕಿಳಯೊಳ್ ॥ ೧೫೫

ನಿಷ್ಕಾರಣಮಱಿಯದೆ ಜಡ
ರುಕ್ಕಿವದಿಂ ಪೆಱರನಳಿಮೆವೆಂಬೀಮನದಿಂ ।
ದಿಕ್ಕನೆ ಬೀೞ್ವರ್ ನರಕದೊ
ಳಕ್ಕಟ ದುಃಖಕ್ಕೆ ಮೂರ್ಖರಪ್ಪರೆ ನೋಂತರ್ ॥ ೧೫೬

ಬಱಿದೆ ಜಡಮತಿಗಳೇನಂ
ದಱಿಯದೆ ಮುನಿಸೊವವೆ ಕೊಲ್ವೆವೆಂಬರ್ ಮನದಿಂ ।
ಪೆಱರಂ ತಮ್ಮಳವಲ್ಲದು
ಮರುಕಂ ಕ್ಕೆಸಾರ್ಗ ಮತ್ತಮಪರಳಿದಪರೇ ॥ ೧೫೭

ನರಕಗತಿಗಿಳಿವೊಡಂ ಸಿ
ರ್ಜನಿಳಯಮನೆಯ್ದಿ ಸುಖಮನುಣ್ಬೊಡಮನ್ಯರ್ ।
ನೆರಮಲ್ಲರದಱಿನನ್ಯರ್
ಭರವಶದಿಂ ಮುಸಿದುಮೊಸೆದುಮೇಗೆಯ್ದಪರೋ ॥ ೧೫೮

ಎಮ್ಮ ಕತದಿಂದಮಾತಂ
ಕೆಮ್ಮನೆ ದುಃಖಕ್ಕೆ ನೋಡ ಗುಱಿಯಾದಪನೆಂ ।

ಬುಮ್ಮಳಮಲ್ಲದೆ ಕೊಂದಪ
ನಮ್ಮಂ ಖಳನೆಂಬ ನೋವು ಕೇಳಮಗುಂಟೇ ॥ ೧೫೯

[ಬೇಸಗೆಯ ಬಿಸಿಲ್ ತಾಮ
ತ್ಯಾಸುರಮಾಗೊದವಿ ಕಾಯ್ದೊಡಂ ತಾವರೆಗಳ್ |
ಬೇಸಱವದಱಿಂ ಪುಣ್ಯನಿ
ವಾಸಿಗಳಂ ಕಿಡಿಪವೆಂಬವರ್ಗೆಂಟೆರ್ದೆಯೊ ॥ ೧೬೦

ಶಶಿ ಮಿತ್ರನಾಗಿಯುಂ ಸಂ
ತಸದಿಂ ನೆಯ್ದಿಲನಲರ್ಚಲಾಱಂ ಪಗಲೊಳ್ |
ಪುಸಿಯಲ್ಲದಱಿಂದಂ ರ
ಕ್ಷಿಸಲಾರ್ಪರೆ ಪುಣ್ಯಹೀನರಂ ಪೆಱರೊಲವಿಂ ॥ ೧೬೧

ಮತ್ತಂ,] ಪಡೆಯದ್ದೈಸಿರಿಗಿಱಿದು ಪೇಳ್ವ, ಪೆಱರ ಪೆಂಡಿರ್ಗೆ ಬಳದೊಡಿಸುವ, ಪೆಂಡಿರಂ ಕೊಟ್ಟು ಪಾನ್ಯಂಬಡೆವ, ಮಗಳಂ ಮಾಱಿ ಮದುವೆಯಪ್ಪ, ಪಡಿಯನೊಡೆದು ಪಣೆಯಂ ಮಾಡುವ, ಮಾಳಗೆಯುಂ ಸುಟ್ಟು ಸೀತನೆಯುಂ ತಿಂಬ, [1] ಮಗನಂ ಕೊಂದು ಗಂಡುದೋಱುವ, [ನೆಲೆವಾಱಿಂ ಮಾಱಿ ಸೂಳಗೆಯ್ವ, ಬೆಳದ ಕೆಯ್ಯಂ ಕೊಟ್ಟು ಕಡಗಮಂ ಕೊಳ್ವ, ಕವಿಲೆಯಂ ಕೞಿದು ನಾಯನೂಡುವ, ಕಂಕಣಮಂ ಕೊಟ್ಟು ಪಿಂಡಿಯಂ ತಿಂಬ, ಲೋಗರ ಕಾರ್ಯಕ್ಕೆ ಬಡಿದು ಕೊಳ್ವ, ಬಾಡಿಗೆಯ ಮನೆಗೆ ತ್ರಿಪಿದು ಕೊಳ್ವ, ಛತ್ರದ ಕೂಟಗೆ ಮೆಯ್ಯಾಂಪ, ನಡುಮನೆಯೊಳ್ ಬಾವಿಯನಗೆವ, ತೊಱೆಗೆ ನೀರನಡಕುವ,] [2] ಕನಸಿನ ಪೊನ್ನನಗೆಂಬ, ಬೋನಸನೊಡೆದು ಹಲ್ಲೆಯ ಮಾಡುವ,] ಪಟ್ಟೆಯುಂ ಪಱಿದು ಚಂಡಂ ಮಾಡುವ] ಕಟ್ಟಿಗ್ಗರಂತೆ, ಶಾಶ್ವತಮಲ್ಲದ ಶರೀರಮಂ ಪಿಡಿದು ರತ್ನತ್ರಯಂಗಳಂ ಕಿಡಿಸುವುದು [ಬುದ್ಧಿಯಲ್ಲದಱಿಂ, ತಂತಮ್ಮ ಮಾಡಿದ ಪಾಪಫಲೋದಯದಿಂ ಸಾವುಂ ನೋವುಮಡಸುಗುಂ, ತಂತಮ್ಮ ಮಾಡಿದ ತಪದ ದಾನದ ಫಲದಿಂ ಸುಖಮುಂ ದೀರ್ಘಾಯುಷ್ಯಮುಂ ನಿರ್ವಿಘ್ನಮುಮಕ್ಕುಂ, ಪೆಱರೇಗೆಯ್ದುಂ ಮುನಿದುಂ ಶ್ರೀಯು

1 ಸುಟ್ಟು ಹುಲುಗುಡಿಸಲಂಕಟ್ಟುವ (ಗ) 2 ಮನೆಯಪೊನ್ನ ಕೊಟ್ಟು (ಗ)

ಮನಾಯುಷ್ಯಮುಮಂ ನೋವುಮಂ ಮಾಡಲ್ ಸಮರ್ಥರಲ್ಲೆಂದು ನರಮಾಗಮೆಭಾವನೆಯಿಂ ನಿರ್ಮಳಚಿತ್ತರುಂ ಮಂದರಧೈರ್ಯರುಂ ನಿರ್ಭಯರುಮಾಗಿರಮೆಂದೆಲ್ಲರ್ಗಮೆಱಪಿ ಸಕಲಋಷಿಯರ್ವೆರಸು ಬಲಿ ಮಾಡುವ ಉಪಸರ್ಗಂ ಪಿಂಗುವನ್ನೆಗಂ ಆಹಾರಶರೀರನಿವೃತ್ತಿಯೆಂದು ಕೈಯ್ಯನಿಕ್ಕಿಕೊಂಡು ಜಿನಪಾದಾಂಭೋಜಂಗಳಂ ಮನದೊಳ್ ತಾಳ್ದಿದರನ್ನೆಗಮಿತ್ತಲ್] 1 ॥

[ಮುನಿಯರುಮೆಲ್ಲರುಮಾಗೋ
ಸನೆಯುಂ ಕೇಳ್ದಾಗಳಂತೆ ಪೊಱಲಿಂದಂ ಭೋಂ ।
ಕನೆ ಪೋದರೆಂಬ ಮಾತನೆ
ಘನಮಾಗಿರೆ ಮಾಡಿ ಕುಟಿಲಚಿತ್ತಂ ಪುರದೊಳ್ ॥ ೧೬೩

ಪದಿನೈದುದಿವಸಮೆರಸಂ
ಮುದದಿಂ ಮೆಯ್ಯೇಱಿಯದುಕ್ಕೆ ಪುರಜನಮೆಲ್ಲಂ ।
ಗದಗದಗಂಪಂ ಗೊಂಡುದು
ಮುದಮೆಱದುದು ಬಲಿಯ ರಾಜ್ಯದುಗ್ರತೆಯಿಂದಂ ॥ ೧೬೪

ಅಂತುಗ್ರನುಂ ಸಂಚಿತಪಾಪ ಚಿತ್ತನುಮಪೂರ್ವೈಶ್ವರ್ಯೈಶ್ವರ್ಯನುಮಾಗಿ ಪುರಜನಮುಮಂ ನಾಡುಮಂ ಪರಿಗ್ರಹಮುಮನೊಂದೆರಡು ದಿವಸದೊಳ್ ತನಗೆ ವಶಗತಮಾಡಿ ರಾಜ್ಯಶ್ರೀಯುಮಂ ಮೆಯ್ಯೇಱಿಯದೆ] 2 ॥

---

1 ಎಂದು ಬಗೆದು ಜೋಗಿನೊಳ್ ಋಷಿಯರ್ ಪೋಗದುವನಱಿದು ಋಷಿಯರೆಲ್ಲರುಂ ಪುರದಿಂ ಪೊಱಮಟ್ಟು ಪೋಪುದುಂ, ಪುರದೊಳೊಡೆಯರ್ಮಾಡವರೆನ್ನದೆ ನಿಲ್ವಡೆನ್ನ ಯಜ್ಞಂ ತೀರ್ವನ್ನೆಗಂ ತೊಡುವುದುಡುವುದುಣ್ಬುದು ರಾಜ್ಯಲೀಲೆಯೊಳಿರ್ಪುದೆಂದು ಘೋಷಣೆಗೇಳಿಸಿ (ಗ)

2 ಬುದ್ಧಿಯಲ್ಲದೆಂದೆಲ್ಲರ್ಗಮಱಿಪಿ ಸಕಲಋಷಿಯರ್ವೆರಸು ಬಲಿಮಾಡುವೀಯುಪಸರ್ಗಂ ಪಿಂಗುವಿನಮಹಾರಶರೀರ ನಿವೃತ್ತಿಯೆಂದಿರ್ಪುದುಂ ವಿದೇಹವಿಷಯದ ವೀತಫಲಾಪುರದೊಳ್ ಸಮುದಾಯಂ ಬೆಸಿದರ್ ವಿಷ್ಣುಗಳೆಂಬಾಚಾರ್ಯರಾಕಾಶದೊಳ್, ಪರಮತಪೋಧನರ್ಗೆ.... (ಗ)

ಎನಗೆ ಸಮಾನಪುಣ್ಯರಣಮಿಲ್ಲ ಧರಿತ್ರಿಯೊಳೆಂದು ಸಾಗರೇ
ಶನ ಸಿರಿಯಂ ಫಣೀಶ್ವರನ ವೈಭವಮ[1]ನರ್ಕನ ತೇಜಮಂ ಮನೋ |
ಜನ ಸೊಬಗಂ ವಿಯಚ್ಚರನ ವೀರಮನಾದಿಯ ಭೂಪರೊಪ್ಪನಿಂ
ದ್ರನ ವಿಭುತ್ವಮಂ ಪಡೆದು ಪಾಡಿಸುವಂ ಬಲಿ ಕೊರ್ವಿ ನಿಚ್ಚಲುಂ ॥

ಅಂತು ಪುಲ್ಲ ಕೀರ್ತನಂತುರಿದು [ಪಿರಿದಪ್ಪ ಪೆರ್ಚಿಂದಮಾನೀ ಪೊಲಲೊಳೇನಂ ಮಾಡಿದೊಡಂ ಬೇಡೆಂದು ಮಾರ್ಕೊಂಡು ಮಾಣಿಸುವ ಗಂಡರಾರೆಂದು] ನಾಂದವರೆಯುಂತೆ ಪೊಟ್ಟೇಳಿಸಿ [ಮುಯ್ಯಂ ನೋಡಿ] ಪಾಪಿಯ ಬಲ್ಲಾಳಂಬ ಮಾತಂ ನನ್ನಿಮಾಡಿ [ಮುನೀಂದ್ರೋತ್ತಮರಪ್ಪ ಕಂಪನಾಚಾರ್ಯರಿರ್ದ ಸಿತಗಿರಿಯ ಸಮೀಪಕ್ಕೆ ಬಂದು][2] ॥ ೧೬೭

ಪಿರಿದಪ್ಪ ಯಜ್ಞಶಾಲೆಗೆ
ಧರೆ ಬಯಲಿದು ಬೇಗಮಿಲ್ಲಿ ಚೆಲ್ವಾಗಿರೆ ಚ |
ಪ್ಪರಮನಳವಡಿಸಿ ಮಾಡುವು
ದಿರವೇಡೆಂದೆಯ್ದೆ ಪೆರ್ಗಡೆಗೆ ಬೆಸಸುವುದುಂ ॥ ೧೬೮

ಅರೆಗಾವುದಂತರಂಬರ
ಮರಸಿನ ಬೆಸದಿಂದೆ ಭೂಮಿಶೋಧನೆಯಂ ಪಿ |
ಸ್ತರಮಾಗೆ ಮಾಡಿ ಚೆಲ್ವಾ
ಗಿರೆ ಸಮೆದರ್ ಚೆಲ್ವು ಕಣ್ಗೆವರೆ ಕಾವಣಮಂ ॥ ೧೬೯

[ಆಗಳಲ್ಲಿಗುಚಿತಮಪ್ಪವೆಲ್ಲಮಂ ಮಾಡಿ ಬಂದು ಬಲಿಗೆ ತನ್ನ ಮಾಡಿದ ಬೆಸನಂ ಬಿನ್ನಪಂಗೆಯ್ವುದುಂ ಪ್ರಸನ್ನಮನನಾಗಿ ಪೆರ್ಗಡೆಗೆ ಪಸಾಯದಾನಮಂ ಕೊಟ್ಟು ಯಜ್ಞಶಾಲೆಯಂ ನೋೞ್ಪುತ್ತಿರ್ಯಿ, ಗಂಧಗಜಾರೂಢನಾಗಿ ಬಂದು ಚಪ್ಪರಂಗಳ ಚೆಲ್ವುಮಂ ಮಂಟಪಂಗಳ

[1] ಭೋಗವು (ಗ)  [2] ತಡೆಯದೆ ಸಿತಗಿರಿಗೆ ಬಂದು (ಗ)

ವಿಳಾಸವುಮಂ ಜಗಲಿಗಳ ಭಂಗಿಗಳುಮಂ ಹೋಮಕುಂಡಂಗಳುಮಂ ನೋಡುತ್ತುಂ ಗುಹೆಯ ಬಾಗಿಲ್ಗೆ ಬಂದು ಸಿಕ್ಕಿದರೆಂದು ಮನದೊಳ್ ಕಳಕಳಿಸಿ ನಕ್ಕು ಪೆಱರಂ ವಂಚಿಸಲ್ವೇಡಿ ಕೆಲದೊಳಿರ್ದರ ಮೊಗಮಂ ನೋಡಿ ಕೇಳಿಮೀಗುಹೆಯೊಳೇನಾನುಂ ಕ್ರೂರಮೃಗಂಗಳಿರ್ದು ಪೋಪ ಬರ್ಪ ಪ್ರಜೆಗೆ ಪೀಡೆಯಂ ಮಾಡುಗುಮದಱಿಂದೊಳಗಣ ಪ್ರಾಣಿಗಳಂ ಪೊಱಮಟ್ಟು ಪೋಪಂತು ಮಾಡುವಮೀಗುಹೆಯ ಬಾಗಿಲೊಳ್ ಪಿರಿದಪ್ಪ ಪುಳ್ಳಿಗಳನೊಟ್ಟಿ ಕಿಚ್ಚನಿಡೆಂಬುದುಂ ॥ ೧೩೦

ಕರಮೆನಲ್ಪ್ಸತತಪ್ಪ ಸಾವಯ ಪುಲ್ಲನುಜ್ವಲಮಾಗಿ ತಾ
ನುರಿವ ತಾಱಿಯ ತೆಂಗಿನೆಕ್ಕೆಯ ಮಾವಿನಿಂಧನಮಂ ಮಸುಂ
ಧರೆಯೊಳೊಪ್ಪುವ ನೆಲ್ಲ ಪುಲ್ಲನಮರ್ಕೆಯಿಂ ಕಿಱುವಳ್ಳಿಯುಂ
ತರಿಸಿ ಮೆಲ್ಲನೆ ತೀವಿದರ್ ಗುಹೆಯಲ್ಲಿ ತತ್ಕ್ಷಣದಿಂ ಭಟರ್ ॥ ೧೩೧

ಕಟ್ಟೊರಿದ ಪುಳ್ಳಿಗಳಂ
ನಟ್ಟನೆ ಕೊದಳಿಗಳನೆಯ್ದೆ ಕಾಷ್ಟೆರಣಿಗಳಂ ।
ತೊಟ್ಟನೆ ಪಱಿಸೀರೆಗಳಂ
ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ ॥ ೧೩೨

ಅಂತು ತೀವಿಸಿ ಗುಹೆಯ ಬಾಗಿಲಂ ನಿಶ್ಛಿದ್ರಮಾಗೆ ಮಾಡಿ ತುಪ್ಪದೆಣ್ಣೆಯ ಕೊಡಂಗಳಂ ತರಿಸಿ ನಾನಾವಿಧದಿಂದೆನ್ನ ಮುನಿಸು ಪೋಷಿನಂ ಮನಮಾರೆ ನಾಳ್ ಕಿಚ್ಚಂ ತಗುಳ್ಚಿ ಪೋಗದಂತು ಕೊಲ್ವೆನೆಂದಿರ್ಪನ್ನೆಗಂ ವಿದೇಹವಿಷಯದ ಮಿಥಿಳಾಪುರದೊಳ್ ॥ ೧೩೩

ಪರಮಗುಣಾಢ್ಯರ್ ಸಿಸಿರ್ಗಳ
ಚರಿತರ್ ದುರಿತಾಪಹಾರಿಗಳ್ ಸಶ್ರುತಸಾ ।
ಗರರವಧಿಲೋಚನರ್ ಮಂ
ದರಧೈರ್ಯರ್ ಸಕಳಭವ್ಯನಂದಿತಪಾದರ್ ॥ ೧೩೪

ವಿಷ್ಣುಗಳೆಂಬಾಚಾರ್ಯರ್ ಸಮುದಾಯಂಬೆರಸಲ್ಲಿ ಜೋಗು ಗೊಂಡಿರ್ಪುದುಂ ಧರ್ಮರುಚಿಗಳೆಂಬ ಋಷಿಯರ್ ಇರುಳ್ ಕಾಯಶುದ್ಧಿಗೆಂದು ಪೊಱಮಟ್ಟಾಕಾಶಮಂ ನೋಡುವುದುಂ][1] ॥ ೧೩೧

ಪರಮತಪೋಧನರ್ಗೆ ಬೆಸಕೆಯ್ವ ಮಹಾತ್ಮರೆ ಸೌಖ್ಯಭಾಜನರ್
ಧರಣಿಯೊಳಂತುಟಂ ಬಗೆಯಲೀಖಳನುತ್ತಮಯೋಗಿಸಂಕುಳ
ಕ್ಕಿರದುಪಸರ್ಗಮಂ ಮುನಿದು ಮಾಡಿ ಮಹಾನರಕಕ್ಕೆ ಸಂದಪಂ
ದುರಿತದಿನಕ್ಕಟಾ ಕುಟಿಲನೆಂದು ದಯೋನ್ನತಿಯಿಂ ಧರಿತ್ರಿಯೊಳ್[2] ॥

[ನಡುಗುವಂತೆ] ನಡುಗುವ ಶ್ರವಣನಕ್ಷತ್ರಮಂ [ತಾಟ್ಟನೆ ಕಂಡು ಮಹಾತಪೋಧನರ್ಗಲ್ಲಿಯಾನುಂ ಘೋರೋಪಸರ್ಗಮಾಗಲೆವೇಟ್ಕುಮಲ್ಲದಂದೀ ನಕ್ಷತ್ರಮಿಂತು ನಡುಗದೆಂದು ತಮ್ಮಾಳ್ ನುಡಿಯುತ್ತುಮೊಳಗಣ್ಗೆವಂದು ॥ ೧೩೩

ಗುರುಗಳ್ಗಱಿಪುವುದುಂ ಸ
ಚ್ಚರಿತರ್ ಲೇಸಾಗಿ ಕೇಳ್ದು ತದ್ವಚನಮನಾ ।
ಚ್ಚರಿವಟ್ಟು ನೋಡಿ ಕಂಡರ್
ಪರಮಾವಧಿಯಿಂ ಮುನೀಂದ್ರರುಪಸರ್ಗಮುಮಂ ॥ ೧೩೪

---

1 ಮತ್ತಮಲ್ಲಿಗೆ ತಕ್ಕ ಹೋಮಕುಂಡಂ ಮೊದಲಾಗಲ್ಲದಂ ಮಾಡುವುದುಂ ಬಂದು ನೋಡಿ ಪರ್ಗಡೆಗೆ ಮುಚ್ಚು ಕೊಟ್ಟು ಬಹುಜನಮಂ ನಬಿಸಲ್ವೇಡಿ ಗುಹೆಯೊಳಗೇನಾನುಮೊಂದು ದುಷ್ಟಮೃಗಂಗಳಿರ್ದೊಡೆ ಬಪ್ಪ ಪ್ರಜಗಳಿಗೆ ಬಾಧೆಯುಂ ಮಾಡದಂತಾಗ ಬಾಗಿಲೊಳ್ ಪುಳ್ಳಿಯನೊಟ್ಟಿ ಕಿಚ್ಚನಿಡುವನೆಂದು ನೆಲ್ಲ ಸೌಸವೆಯು ಬರಗಿನ ನವಣೆಯು ಹಾರಕಿನ ಪುಲ್ಲುಮುಂ ತಾರಯು ಶೇಗಿನ ಅತ್ತಿಯು ಪ್ರಣಿಸೆಯು ತಟ್ಟಾಱಿದ ಪುಳ್ಳಿಗಳುಂ ಕಾಳುಬೆರಣೆಗಳುಮಂ ಇಱಿವೆರಣೆಗಳುಮಂ ಘಱಿದ ಸೀರೆಗಳುಮಂ ಕಿಱುಗುಣಿಗಳುಮಂ ಕೊರಪುಗಳುಮಂ ತೆಕ್ಕನೆ ತೀವಿದ ತುಪ್ಪದೆಣ್ಣೆಯ ಕೊಡಂಗಳುಮಂ ತರಿಸಿ ನಾಳೆ ಸುಮುಹೂರ್ತಮಪ್ಪುದುಮನ್ನೆಗಮಾಕಂಪನಾಚಾರ್ಯರಱಿದು ಋಷಿಯರ ಯೋಗಮಂ ನೋಡಿ.— ಅಪರವರ ಪುಣ್ಯಪಾಪಂ .... ಪರಮತಪೋಧನರ್ಗೆ (೧೪೪ ರಿಂದ ೧೬೪ ರ ವರೆಗೆ ಇರುವ ಪದ್ಯಗದ್ಯಗಳನ್ನೂ ಟಿಪ್ಪಣಿಗಳನ್ನೂ ನೋಡಿ).

2 ತುರಿತ ಮಿದೆಂದು ನಾಡೆಯುದೆ ಕ್ಕೈಮಿಗೆ ಕಂಪಿಸುವಂತೆ ಭೀತಿಯಿಂ (ಗ)

ಅಂತು ಪರಮಾವಧಿಲೋಚನದಿನಱಿದಕ್ಕಟಾ ಕುರುಜಾಂಗಣವಿಷಯದ ಹಸ್ತಿನಾಪುರದೊಳ್ ಜೋಗುಗೊಂಡಿರ್ದ ಕಂಪನಾಚಾರ್ಯರ್ಗಮವರೊಡನಿರ್ದೈನೂರ್ವರ್ ಸಾಧುಗಳ್ಗಂ ಬಲಿಯೆಂಬ ರೌದ್ರಾತ್ಮನ ದೆಸೆಯಿಂ ಪಿರಿದಪ್ಪುಪಸರ್ಗಮಾಗಿರ್ದುದೆಂಬುದಂ ಸಿದ್ಧವಿದ್ಯೆಗಳೊಳ್ ಪರಿಣತನುಂ ವಾತ್ಸಲ್ಯರತ್ನಾಕರನುಮಪ್ಪ][1] ಪುಷ್ಪದೇವನೆಂಬ ಬ್ರಹ್ಮಚಾರಿ ಮುನಿದಿಂತೆಂದಂ ॥ ೧೩೯

ಕೋಡಗಗಟ್ಟುಗಟ್ಟುಸೆನೆ ವಾರಿಧಿಯೊಳ್ ಪಿಡಿದೊತ್ತಿ ಜೀವಮ
ಲ್ಲಾಡೆ ತೊಡಂಕಿ ನೂಂಕಿಸೆನೆ ಮೇರುನಗಕ್ಕೆಳದುಯ್ದು ಮೇಗಣಿಂ
ಕೂಡಿ ಸಮಂತುರುಳ್ಚಿಸೆನೆ ಪನ್ನಗಸಂಕುಳದಿಂ ಭಯಂಕರಂ
ಮಾಡಿ ತಗುಳ್ಚಿ[2] ಬರ್ಚಿಸೆನೆ ಲೋಕಮಗುರ್ವಿಸಲೆನ್ನ ವಿದ್ಯೆಯಿಂ ॥

[ಕಾಲನವುಂಕಿ ಪತ್ತಿ ಪಿಡಿದೋವದೆ ಭೋರೆನೆ ಬೀಸಿ ಕಂಬದೊಳ್
ಲೀಲೆಯಿನಟ್ಟಿ ಮೋದಿಸೆನೆ ಕೆಚ್ಚನೆ ಕಾಯ್ದು ಕನಲ್ದು ಕೊಳ್ಳಿಯೊಳ್
ಸೋಲೆ ತಗುಳ್ದು ಚುಚ್ಚಿಸೆನೆ ಪೆರ್ಬುಲಿಯಿಂ ಗಜದಿಂ ಬಿಗುಳ್ದು ಕ
ಣ್ಣಾಲಿ ತುಳುಂಕೆ ಮುಟ್ಟಿಸೆನೆ ಕೊರ್ವಿದ ಗಾಂಪನನೆನ್ನ ವಿದ್ಯೆಯಿಂ ॥ ೧೪೧

ಶರನಿಧಿವಾರಿಯುಂ ತಳದೊಳಾಂಪೆನೊ ದೇವನಗೇಂದ್ರಮಂ ಮನಂ
ಮುರಿಯದೆ ಕಿತ್ತು ತರ್ಪೆನೊ ದಿನೇಶನ ಬಿಂಬಮನುದ್ಧತಿಕ್ಕೆಯಿಂ
ಕರದೊಳಡರ್ತು ನೂಂಕುವೆನೊ ಪನ್ನಗರಾಜನನೊತ್ತಿ ಕಟ್ಟಿಚೆ
ಚ್ಚರಿಸಿ ಕರಾಗ್ರದೊಳ್ ನಿಱಿಪೆನೋ ಪಿಡಿದೇಱುವೆನೋ ಸುರೇಭಮಂ ॥

ಲವಣಾಂಭೋರಾಶಿಯಂ ದಾಂಟುವೆನೊ ಕುಳನಗಾನೀಕಮಂ ಪಾದದಿಂ ಭೂ
ಭುವನಕ್ಕಾಶ್ಚರ್ಯಮಪ್ಪಂತೊದೆವೆನೊ ನೆಲೆಯಿಂ ಪಾಱಿ ದಿಕ್ಪಾಲರಂ ಮು

---

1 ಅಂತು ಪರಮಾವಧಿಯಿಂದಮಕಂಪನಾಚಾರ್ಯರ್ಗೊಂದುಪಸರ್ಗಮಾದುದನಱಿದು ಋಷಿಯರ್ಗೆ ಪೇಳುವುದುಂ ಸಿದ್ಧವಿದ್ಯೆಗಳೊಳ್ ಪರಿಣತನಪ್ಪ (ಗ)

2 ಮಗುಳ್ಚಿ (ಗ)

ಜ್ಞಪದಿಂ ಜೇಯೆಂಬಿನಂ ಕಟ್ಟುವನೊ ಶರಭಮಂ ನೂರನಿನ್ನೂರನತ್ತು
ತ್ತ್ವಪದಿಂ ಕೀಳಟ್ಟು ಪೇಟೇಲುವನೊ ಧರಣಿಯಂ ಪುಯ್ಯೆನೋ ತೂಂ
ತುವ್ರೋಗಲಿ ॥೧೯೩

ಎಂದು ತಾಂ ವಿದ್ಯಾಧರಮೋಕ್ಷ್ವರನಪ್ಪುದಱಿಂ ವಿಷ್ಣುಮುನೀಶ್ವರನ ಮುಂದೆ ತನ್ನ ಪ್ರತಾಪಮಂ ನುಡಿದು ಬಲಿಯುನವೆಯುವದಿಂದೆನ್ನ ವಿದ್ಯೆಗಳಿಂದಡಸಿ ಕಟ್ಟಿ ಸಮುದ್ರದೊಳಿಟ್ಟು ಕೊಂದಪನೆಂದು ಮಸಗಿ ಗರ್ಜಿಸುವುದುಂ ವಿಷ್ಣುಮುನೀಶ್ವರಂ ಪುಷ್ಪದೇವನನಿಂತೆಂದಂ] [1] ॥

ಕಡುಮೊಱರ್ಗಿ ಮಾಡಿದುದಂ
ತಡೆಯದೆ ನಾಂ ಮೊಱೆಟ್ಟನೆಂದು ಮಸಗುವ ಪುರುಷಂ ।
ಕಡುಕಷ್ಟಂ ನಾಯ್ ಕಚ್ಚಿದೊ
ಡೊಡಗಚ್ಚಲ್ ಬೂಗುಱೆ ಬೊಗುಳೇಂ ಬಂದಪುದೇ ॥ ೧೯೪

[ಮುನಿಸಿಂ ತನಗಿದಿರಲ್ಲದ
ಮನುಜಂಗಿದಿರಾಗವೇಡದೆಂತೆನೆ ಗಜಗ ।
ರ್ಜನೆಗೆ ಮುನಿವಂತೆ ಪಂಚಾ
ನನನಡವಿಯೊಳರ್ದ ನರಿಗೆ ಮುನಿಗುಮ ಜಗದೊಳ್] ॥ ೧೯೫

ಎಂದು ಪುಷ್ಪದೇವನಂ [ಮೆಲ್ಲನೆ ನ್ಯಾಯವಚನಂಗಳಿಂ] ಸಾಣಿಸಿ ವಿಷ್ಣುಕುಮಾರಮುನಿತಿಲಕನ ಮೊಗಮಂ ನೋಡಿ ತಪೋಧನರ್ಕ್ಕೆ ಪ್ರಾಕರಕ್ಕ ಪ್ರಭಾವನೆಯುಂ ಮಾಡದಂದು ಪೊಸಬಸುರಿಯುಂ ಮಾಡಿ ತೂಂತುವೋದ ಕಳಶಮನಿಡುವಂತೆ, ಮಗಳ ಮದುವೆಯುಂ ಮಾಡಿ ರಂಡೆಯಾಗೆಂದು ಪರಸುವಂತೆ, ಪಟ್ಟಮಂ ಕಟ್ಟಿ ಸಾಯೆಂದು ಸೇಸೆಯನಿಕ್ಕುವಂತೆ, ಉಯ್ಯಾಲಿಸಿಕ್ಕಿ ಗೋಮೂತ್ರದಿಂ ಕೈಗರ್ಚೆ ಲೆಡುವಂತೆ, ಬಿರ್ದಿಕ್ಕೆ ಕಲ್ಲೊಳಿಡುವಂತೆ, ತೋಂಟಮಂ ಮಾಡಿ ಕಡಿವಂತೆ, ಕೆಯ್ಯಂ ಮಾಡಿ ಕಿಚ್ಚಿಡುವಂತೆ, ಮಗನಂ ನಡೆಪಿ ಬಾವಿಯೊಳ್ ನೂಂಕುವಂತೆ, ಕುದುರೆಯುಂ ಪೊರೆದು ಕಳ್ಳರ್ಗೆ ಕುಡುವಂತೆ, ಸಿಂಹಾಸನಮನೇಱಿ ಮಸಿಯುಂ ಪೂಸು

1 ಬೆಸಸಿದೆಂಬುದುಂ ವಿಷ್ಣುಮುನೀಂದ್ರನಿಂತೆಂದಂ (ಗ).

ವಂತೆ, ಮಹಾವ್ರತಮುಮಣುವ್ರತಮುಂ ನಿಷ್ಫಲಮೆಕ್ಕುಮದುಕಾರಣದಿಂ ‖ ೧೮೭

[ಮುನಿವರರುಪಸರ್ಗಂ ನೆ
ಟ್ಟನೆ ಕಿಡುವೊಡೆ ಸರಳಭವ್ಯವಂದಿತಪದ ಮೇ ।
ದಿನಿಪೂಜ್ಯ ದಿವಿಜಶೇಖರ
ವಿನಮಿತದುರಿತಾಪಹಾರಿ ನಿನ್ನಿಂ ಕಿಡುಗುಂ ‖ ೧೮೮

ಎಂಬುದುಂ ಸುಕವಿನಿಕರಪಿಕಮಾಕಂದಂ ಮುಗುಳ್ನಗೆನಕ್ಕು ಮನದೊಳಾಮಾತಿಂಗೆ ಕರಮೆಲ್ಲದೆ ಲಜ್ಜಿಸಿ ಜಿಷ್ಣುಮುನಿಪತಿಗೆ ಪೊಡೆಮಟ್ಟು ವಿನಯದಿಂ ತಲೆಯುಂ ಬಾಗಿ ಕರಕಮಲಂಗಳಂ ಮುಗಿದು‖೧೮೯

ಸನ್ನುತಮುನಿವರರಿರ್ದಂ
ತೆನ್ನನೆ ನಿಮ್ಮಡಿಗಳಕ್ಕರಿಂದೇಱಿಸಿ ಸಂ ।
ಪನ್ನತೆಯಿಂದುಪಸರ್ಗಮ
ದನ್ನಱಿ ಪಿಂಗಿಸುವೆಯೆಂಬುದನುಚಿತಮಲ್ತೇ ‖ ೧೯೦

ನಿಮ್ಮಡಿಗಳೆಮ್ಮ ಮೆಯ್ಯೊಳಾದ ಗುಣಮುಂ ಕಂಡೀಮಾತಂ ಬೆಸಸದಿರೆಂಬುದಂ ಜಿಷ್ಣುಮುನೀಶ್ವರರಿಂತೆಂದರ್ ‖ ೧೯೧

ನೆಱೆಯೆ ಧರಿತ್ರಿ ಕೈಮುಗಿವಿನಂ ಪದೆಪಿಲ್ಲದೆ ರಾಜ್ಯಲಕ್ಷ್ಮಿಯುಂ
ತೊಱೆದು ಮನುಷ್ಯಲೋಕಸುಖಮುಸ್ಥಿರಮೆಂದಳಿಪಿಂದೆ ಸೋಲ್ತು ಪೊಱಮಡುಗಿಡದಮ್ಮ ಜೇಯೆನಿಸಿ ಯಿಾವ್ರೊತಲಂ ಜಿನದೀಕ್ಷೆಗೊಡ್ಡಿ ಮತ್ತಱಿಕೆಯ ಮೂಱುಮೂಢಮುಮನೊರ್ಮೆಯೆ ಬಿಟ್ಟು ಮಹಾನುರಾಗದಿಂ ‖೧೯೨

ಪಗೆಯುಳ್ಳನಂತೆ ಪರಸಮಯಮುಂ ಸಾರದೆ, ದೂರದ ನಂಟರಂ ಕಂಡರಂತೆ ಸಂಶಯಮಾಗದೆ, ಕಳ್ಳೋಡುವನಂತೆ ಸುಮಾರ್ಗಕ್ಕಂಜದೆ, ಸಾಲಗೊಂಡ ಬಡವನಂತೆ ತಪಕ್ಕೆನಡುಗದೆ, ಕಿಚ್ಚನಂತೆ ಸದ್ಧರ್ಮಕ್ಕೆ ಕಾಯದೆ, ನಿರ್ಮಲಚಿತ್ತದಿಂದುತ್ತಮಮಪ್ಪ ತಪಮಂ ಮನವಿಕ್ಕದೆ ಪೆಱದೆಗೆಯದೆ ಪೆಱನ ಸವಕ್ಕೆಮಾಡದೆ ಮೋಕ್ಷಾಪೇಕ್ಷೆಯಿಂ ನಿಜಬುದಿ

ಯಿಂದರ್ತಿವೆರಸು ನೆಗೞ್ದುಯುಪ್ಪುದಱಿಂ ನಿನಗೆ ತಪದ ಮಾಹಾತ್ಮ್ಯ ದಿಂದಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯಂ ಈಶತ್ವಂ ವಶಿತ್ವಂ ಕಾಮರೂಪಿತ್ವಂ ಎಂಬಷ್ಟಗುಣೈಶ್ವರ್ಯಮುಂ ಪುಟ್ಟಿದುವಪ್ಪುದಱಿಂ ನಿನ್ನಿಂದಕಂಪನಾಚಾರ್ಯರುಪಸರ್ಗಂ ಪೋಕು ಮೆಂದು ಪೇೞ್ದುದಱಿಂ ॥

ಜೀವವಧೆಯಾಗದಂತಱಿ
ಳಾವನಿತಳಪೂಜ್ಯಪೋಗಿ ಪಿಂಗಿಸುವುದು ಸ ।
ದ್ಭಾವದಿನೆನೆ ದುಷ್ಕೃತವಿ
ದ್ರಾವಣನಪರಿಮಿತಧೈರ್ಯನನುಪಮವಾಕ್ಯಂ ॥ ೧೯೪

ಮುನಿಪನ ಮಾತಂ ಭಾವಿಸಿ
ಮನದೊಳ್ ಬೆಱಗಾಗಿ ವಿಷ್ಣುಮುನಿವಲ್ಲಭನೊ ।
ಯ್ಯನೆ ಜಿಷ್ಣುಮುನಿಗೆ ಪೊಡೆಮ
ಟ್ಟನುನಯದಿಂ ಪೋಪೆನೆಂಬ ಬಗೆಯುಂ ತಂದಂ ॥ ೧೯೫

ಬೇಳನಿಸಿ ನೆಗಪ್ತೆಗೆ ಬೆಂ
ಬೀೞದೆ ತಲ್ಲಣಿಸದಾರ್ತು ಕೂರ್ತವಯುವದಿಂ ।
ಕೇಳ ಪ್ರಭಾವನಾಂಗವ
ನೇೞಿಸದಚ್ಚುರ್ತು ತಾಳ್ದವೇೞ್ಪುದು ಭವ್ಯಂ ॥ ೧೯೬

ಅಕ್ಷಯಲಕ್ಷ್ಮಿಯುನೆಯ್ದುವ
ಪೇಕ್ಷೆಯುನುಳ್ಳಂ ಪ್ರಭಾವನಾಂಗಮದಂ ಪಾ ।
ಪಕ್ಷಯಮಂ ಮಾಡುವುದನು
ಪೇಕ್ಷಿಸದೆ ಮನೋನುರಾಗಮಂ ತಳೆಗೆಂದಂ ॥ ೧೯೭

ಬಡವನೆನವೇಡ ಪೊನ್ನು
ಳ್ಳೊಡೆಯುನುವೆನವೇಡ ಕೇಳ್ ಪ್ರಭಾವನೆಯುಂ ನೇ ।
ರ್ಪಡೆ ಮಾೞ್ಪುದು ಮಾಡದವಂ
ಪಡೆಯಲ್ಕಾರ್ತಪನ ದೇವನಿಳಯದ ಸುಖಮಂ ॥ ೧೯೮

ಮುನಿಯೆನಿಪೊಡೆ ಶ್ರಾವಕ
ನೆನಿಪೊಡೆ ಮನೋಜ್ಞೆಯಿಂ ಪ್ರಭಾವನೆಯುಂ ನೆ |
ಟ್ಟನೆ ಮಾಡಪೇೞ್ಪುದಲ್ಲದೊ
ಡನಂತಸುಖನಿಳಯನಾಗಲಾಱುಂ ಕಡೆಯೊಳ್ ‖ ೧೯೯

ಅನುಪಮನಿರ್ವಾಣಶ್ರೀ
ವನಿತೆಯ ಪೊಸಜವ್ವನಂ ಪ್ರಭಾವನೆಯೆಂದೆಂ |
ದನವರತಂ ಬಣ್ಣಿಪೆನಿ
ನ್ನೇನೆಂದಾಂ ಬಣ್ಣಿಪೆಂ ಪ್ರಭಾವನೆಯೊಳ್ಪಂ ‖ ೨೦೦

ಎಂದು ಪ್ರಭಾವನೆಯೊಳಾದ ಪರಮೈಶ್ವರ್ಯಮಂ ಬಗೆದಿದನೇೞಿ ಸಱಿಪುರ್ದು ಸದ್ದೃಷ್ಟಿಯುಪ್ಪಂಗಂ ಪಾಪಭೀರುವಪ್ಪಂಗಂ ಧರ್ಮಾನುರಾಗಿಯುಪ್ಪಂಗಂ ಸಜ್ಜ್ಞಾನಿಯುಪ್ಪಂಗಂ ಸುಗತಿಗಮನಭಯಮುಳ್ಳಂಗಂ ಉಚಿತಮಲ್ಲೆಂದು ಶೆಳಗಾದಾಗಳ್ ಗುರುವಂದನೆಯುಂ ಮಾಡಿ ಜಿಷ್ಣುಮುನೀಶ್ವರನಾಜ್ಞೆಯಿಂ ಮಿಥಿಲಾಪುರವಂ ಪೂಱಮಟ್ಟು ಋದ್ಧಿಪ್ರಾಪ್ತನಪ್ಪುದಱಿಂ ಮನದಿಂ ಮುನ್ನಂ ಹಸ್ತಿನಾಪುರಮನೆಯ್ದಿ ಪದ್ಮಮಹಾರಾಜನರಮನೆಯುಂ ಪುಗುವುದುಂ ‖ ೨೦೧

ಪಿರಿದಪ್ಪ ಭಕ್ತಿಯಿಂ ವಿ
ಷ್ಟರದಿಂದೆರ್ದಿಕ್ಕೆಯುಂ ಪುರಂಧ್ರೀನಿಕರಂ |
ಬೆರಸಿದಿರ್ವಂದು ಮುನೀಶ್ವರ
ಚರಣದ್ವಯಪಲ್ಲವಕ್ಕೆ ಮಱಿದುಂಬಿಯವೋಲ್ | ೨೦೨

ನಮ್ರಮಸ್ತಕನಾಗಿ ರಾಜಭವನದೊಳಗಣ್ಗೊಡಗೊಂಡು ಬಂದು ಭದ್ರಾಸನದೊಳ್ ಕುಳ್ಳಿರಿಸಿ ಕಾಲಂ ಕರ್ಚಿ ತಳೋದಕಮಂ ತಲೆಯೊಳ್ ತಳಿದುಕೊಂಡು][1] ‖ ೨೦೩

---

1 ಅಣಿಮಾದ್ಯಷ್ಟಗುಣಸಮೇತನಪ್ಪ ನೀನೆ ಪೋಗಿ ಜೀವವಧೆಯಾಗದಂತುಪಸರ್ಗಮಂ ಪಿಂಗಿಸಿ ಬಪ್ಪುದೆನೆ ಮಹಾಪ್ರಸಾದಂ ಕೈಕೊಂಡನೆಂದು ವಂದಿಸಿ ವೃದ್ಧಿಪ್ರಾಪ್ತನಪ್ಪುದಱಿಂ ಹಸ್ತಿನಾಪುರಕ್ಕೆ ವಂದರಮನೆಯುಂ ಪುಗುವುದುಂ ಪದ್ಮಮಹಾರಾಜನಿದಿರ್ಗೊಂಡು ಪೋಗಿ ಪಿರಿದು ಮಣೆಯೊಳಿರಿಸಿ ಕಾಲಂ ಕರ್ಚಿ ಪಾದೋದಕಮಂ ತಲೆಯೊಳ್ತಳಿದುಕೊಂಡು ಕಾಲಮಾಲೆ ಬಿದ್ದು. (ಗ)

ವರವಿಮಾಯುಲೆಂದು ವಾಸವ
ಪುರದಿಂ ಸುರಭೂಜವಿಳಿದು ಬಂದುದು ಮತ್ತಾ ।
ನ್ನರವರನೆಗೆಂದಾಮುನಿಯುಂ
ಪರಮೋತ್ಸವದಿಂದೆ ನೋಡಿ ಕಣ್ಣಾಣಿವಿನೆಗಂ ॥ ೭೦೪

[ಕೈಗಳಂ ಮುಗಿದು] ನಿಮ್ಮಡಿ ಬಿಜಯಂಗೆಯ್ದ ಕಾರಣಮಾವುದು ಬೆಸಸಿಮೆಂಬುದುಂ ವಾತ್ಸಲ್ಯರತ್ನಾಕರನಿಂತೆಂದಂ[1] ॥ ೭೦೫

ದುರಿತದ ಮುಂಗಾಲ್ಪಾವದ[2]
ನರೆಮನ ಬ್ರಹ್ಮೇತಿಕಾಬರಣುಗಿನ[3] ಗಿಳಿ ಸಿ ।
ಷ್ಕರುಣದ ನೆಲೆ ದುರ್ಗುಣದಾ
ಗರಮೆನಿಸುವ ನಿನ್ನ ಮಂತ್ರಿ ಬಲಿಯೆಂಬ ಖಳಂ ॥ ೭೦೬

[ನಿನ್ನರಸಂ ಮಾಣಿಸಿ ಯಜ್ಞದ ನೆವದಿಂ ಕಣ್ಗಟ್ಟಿ ತಿರಿಪಿ ಮಾಸಾರ್ಧರಾಜ್ಯಮಂ ಬೇಡಿಕೊಂಡು ಮುನ್ನಿನ ಕೋಪದಿಂದೆ ಸಿತಗಿರಿಯೊಳಿರ್ದಕಂಪನಾಚಾರ್ಯರ್ ಮೊದಲಾದಯ್ನೂರ್ವರ್ ಮುನಿವರರ್ಗಂ ಘೋರೋಪಸರ್ಗಮಂ ಮಾಡಿದಪನದನೀನುಪೇಕ್ಷಿಸಿ ಮಿಥ್ಯಾದೃಷ್ಟಿಗಳಂ ತುಸಿರದಿರ್ಪುದುಚಿತಮಲ್ತು ॥ ೭೦೭

ತೊಡರದೆ ನಮ್ಮಾಮ್ನಾಯದೊ
ಳಡೆಯುತುಗದ ಬಂದ ಜೈನಧರ್ಮಮನೆಡೆಯೊಳ್ ।
ಕಿಡಿಸಿ ಮುನಿಸಂಕುಳಕ್ಕಾ
ದೆಡರಂ ಕಡೆಗಣಿ ನೋಡುತಿರ್ಪುದೆ ನೃಪತೀ ॥ ೭೦೮

ಅಂತಲ್ಲದೊಡಂ 'ರಾಜ್ಞಾ ಹಿ ರಕ್ಷಿತೋ ಧರ್ಮಃ' ಎಂಬ ಮಾತುಮಂ 'ದುರ್ಬಲಸ್ಯ ಬಲೋ ರಾಜಾ' ಎಂಬ ರಾಜನೀತಿಯುಮಂ 'ಸರ್ವೇಷಾಂ ಪಾರ್ಥಿವೋ ಗುರುಃ' ಎಂಬ ನೀತಿವಾಕ್ಯಮುಮಂ

1 ವಿಷ್ಣುಕುಮಾರ ಮುನಿಯಿಂತೆಂದಂ (ಗ) 2 ಪುಂಜಂ ಪಾಪದ (ಗ)
3 ಪಾಪಿಷ್ಠರಪ್ಪರಣುಗಿನ (ಗ)

'ಭೃತ್ಯಾಪರಾಧಸ್ಯ ಸ್ವಾಮಿನೋ ದಂಡ' ಮೆಂಬ ಪುರಾಣವಚನಮಂ ನೆನೆದಪ್ಪೊಡಂ ಮುನಿವರರುಪಸರ್ಗಮಂ ಮಾಣಿಸುವುದೆಂಬುದುಂ] [1] ॥

ಬೆಱಗಾಗಿ ಕೇಳ್ದು ಕೋಪಂ
ಪೊಱಮಡೆ ಕಣ್ಗೆಟ್ಟು ಪುಸಿದು [2] ಯಜ್ಞದ ನೆವದಿಂ ।
ನೆಱೆ ಮುನಿಚಯಕ್ಕೆ ತಪ್ಪುವ
ಕುಱಿಯಂ ತಱಿದೊಟ್ಟಿ ಕೊಲ್ಲದೆಂತುಂ ಮಾಣೆಂ ॥ ೨೧೦

ಇಱುಂಪೆಗೆಱಂಕೆ ಮೂಡಿದಂತೆ ಕೊರ್ವಿ ಕೊಱೆದು ಪಾಯ್ದ ರಕ್ಕಸಿಯ ನಿಱಿಯನುರ್ಚಿದರೆಂಬಂತೆ [ಸಿಂಹದ ಕೇಸರಮಂ ಕಿತ್ತರೆಂಬಂತೆ,] ಎನ್ನನೇಳಿದಂಮಾಡಿ [ಮೂಗನರಿದು ಕನ್ನಡಿಯಂ ತೋಱುವಂತೆ] ಕಣ್ಣಂ ಕುತ್ತುವ ಚೆಲ್ಲಮನಾಡಿ [ಧೂರ್ತನೆನ್ನ ಕೈಯಂ ಕೊಂಡೆನ್ನ ಕಣ್ಣಂ ಕುತ್ತುವಂತೆ ಸೊಕ್ಕಿ ಎನ್ನ ಗುರುಗಳನೆನ್ನ ಪೊಱಲ ನೆನ್ನಂ ಬಗೆಯದೆ ನಾನಾವಿಧೋಪಸರ್ಗಂಮಾಡಿದಪಂ ಗಡಮೆಂದು] ॥

ಬಲಿ ಮಾಡಿದ ದೂರ್ತಿಂಗು
ಮ್ಮಳಮಾಗಿ ಕನಲ್ದು ನೊಂದು ಸಿಂಹಾಸನಮಂ ।
ತಳದೊಳ್ ಪೊಯ್ದು ನರೇಶಂ
ಮುಳಿಸಿಂ ಮೆಯ್ಯಱಿಯದೆಳ್ದು ಪರಿಮವಸರದೊಳ್ ॥ ೨೧೧

[ಕಂಡು ವಿಷ್ಣುಕುಮಾರಮುನಿಪಂ ಧರಣೀಶ್ವರನ ಮನದ ಭಕ್ತಿಯುಮಂ ಸದ್ಧರ್ಮದೊಳಾದ ಪಕ್ಷಮುಮಂ ಸ್ವಸಮಯದೊಳಾದ ವಾತ್ಸಲ್ಯಮುಮಂ ನೋಡಿ ಮೆಚ್ಚಿ ಬೇಡೆಂದು ಮಾಣಿಸಿ ಧರ್ಮದೊಳಾದ ನಿನ್ನ ತಾತ್ಪರ್ಯಮಂ ನೋಡಲೆಂದು ಬಂದೆವಿಂದು ನಿನ್ನ ಮನದ

---

1 ಯಜ್ಞದ ನೆವದಿಂ ನಿನ್ನ ರಾಜ್ಯಮಂ ಪಕ್ಷಂಬರಂ ಬೇಡಿಕೊಂಡು ಮುನ್ನಂ ಮುನಿಸುಂಟಾಗಿ ಪೂರ್ವದ ಖಿರಕಂಪನಾಚಾರ್ಯರ್ಮೊದಲಾದೈನೂರ್ವರ್ಮಹಾತಪೋಧನರಂ ಕಿಚ್ಚಿನೊಳಿಟ್ಟು ಕೊಂದಪನಿದನುಪೇಕ್ಷಿಸಿ ನೋಡುತ್ತಿರಲಾಗದೆಂಬುದುಂ (ಗ)

2 ಕೋಪದಿಂ ಮೆಯ್ಯಱಿಯದೆ ಕಣ್ಗೆಟ್ಟುತಿಂಪಿ (ಗ)

ನಿರ್ಮಳಿಕೆಯುಮಂ ಧರ್ಮದೊಳಾದಱಕೆಯುಮಂ ಸನ್ಮುನಿಗಳೊ
ಳಾದ ಪಕ್ಷಪಾತಮುಮಂ ಕಂಡು ಪಿರಿದು ಸಂತೋಷಮಾಯ್ತೆಂದು
ಮತ್ತಮಿಂತೆಂದಂ ॥ ೨೧೩

ನರಪ ನೀಂ ಮುನಿದಂದು ಕೊಂದಪೆಯೆಲ್ಲರಂ ಕೊಲೆಯಾಗೆ ನಿ
ಷ್ಠುರಮಹಾದುರಿತಾಳಿ ಸಾರುಗು ಕರ್ಮ ಸಾರ್ದೊಡೆ ಪೊಲ್ಲಮೀ
ಯರಿಬಲೀಂದ್ರನ ಮಾಡುವೊಂದತಿಬಾಧೆಯಂ ಕ್ಷಣದಿಂದಮು
ಚ್ಚರಿಯೆನಲ್ಗಡ ಜೀವಬಾಧೆಯುಮಾಗದಂತಿರ ಬುದ್ಧಿಯಿಂ ॥ ೨೧೪

ಮಾಣಿಸಲಾವೆ ಸಾಲ್ವೆವೆಂದು ಜನಪತಿಯ ಕೋಪಾವೇಶಮಂ
ಪಿಂಗೆ ನುಡಿದು ರಾಜಭವನದಿಂ ಪೊಱಮಟ್ಟು ಲೀಲೆಯಿಂದಣಿಮಾದ್ಯಷ್ಟ
ಗುಣೈಶ್ವರ್ಯನಪ್ಪುದಱಿಂ ತನ್ನ ರೂಪಂ ಕಿಱಿದುಮಾಡಿ ॥ ೨೧೫

ಕೊರಳ ಜನ್ನಿವರಂ ಪೊಸಕ್ಕೆಯುಮೆಯ್ದೆ ಮಿಂಚುವ ಬೆಳ್ಳಿಯು
ತ್ತರಿಗೆ ಭಾಸುರಮಪ್ಪ ತೇಜಮುಗುರ್ವು ಪರ್ವಿರೆ ಚೆಲ್ವಿನಿಂ
ಬೆರಲೊಳೊಪ್ಪುವ ದರ್ಭೆ ಪಿಂಗಳನೇತ್ರಮುಟ್ಟದುಕೂಲಮೊ
ಪ್ಪಿರೆ ಧರಾಮರವೇಷಮಂ ಮುನಿಕುಂಜರಂ ನೆಱೆ ತಾಳ್ದಿದಂ ॥ ೨೧೬

ಉರದೊಳಂ ನೆಱೆ ಬಾಹುಮೂಲದೊಳಂ ಲಲಾಟದೊಳಂ ಮನೋ
ಹರಮೆನಲ್ ನಿಡುಬೊಟ್ಟು ಶೋಭಿಸೆ ಪೊಂಗಿ ಬಾಗಿದ ಕುಬ್ಜಕಾ
ಲ್ಕರಮೆ ಕುಗ್ಗಿದ ಹಸ್ತಮೊಪ್ಪುವ ಹೇಮವರ್ಣಮಗಲ್ದುರಂ
ನಿರುಪಮಾಕೃತಿ ಕಚ್ಚನಪ್ಪ ಶಿರೋರುಹಂ ಪೊಚೆವಾನನಂ ॥ ೨೧೭

ಅಂತು ವಾಮನರೂಪಂ ಕೈಕೊಂಡು ಪುರಮಲ್ಲಮುಚ್ಚರಿವಡೆ
ಪೊಱಲೊಳಗಣಿಂ ಪೊಱಮಟ್ಟು ಮೆಲ್ಲನೆ ಸಿತಗಿರಿಗೆ ವರ್ಪುದುಂ, ನೆರೆದ
ನೆರವಿ ಪರಮೇಶ್ವರನೆಂದು ರೂಪಿಂಗಂ ತೇಜಕ್ಕಂ ಸೋಲ್ತು ಬೆನ್ನನೆ
ಜಯಜಯನಿನಾದದಿಂ ಪೊಗೞುತ್ತುಂ ಪೊಡೆವಡುತ್ತುಂ ಕವಿದುವರೆ
ಯಜ್ಞಶಾಲೆಯ ಪೊಱಗಿರ್ದ ಬಲಿಯುಂ ಶುಕ್ರನುಂ ಪ್ರಹ್ಲಾದನುಂ
ಕಂಡು ಸಾಕ್ಷಾದ್ವಿಷ್ಣುವೆಂದು ॥ ೨೧೮

ಮನದೊಳುತ್ಸವಮಾಗೆ ಪೆರ್ಚಿ ಕಡಂಗಿ ನಿಲ್ಲದೆ ಭಕ್ತಿಯಿಂ
ಜನಸಮೇತಮುದಾತ್ತವೃತ್ತಿಯಿನಾದರಂಬೆರಸರ್ಚ್ಚಿಱಿಂ ॥
ತನಗೆ ಸಂತಸಮೆಂದು ಪುಟ್ಟಿರೆ ರಾಗದಿಂದಿದಿರ್ವಂದು ಕೋ
ಕನದನಾಭನ ಗೆತ್ತು ಪಾದಯುಗಕ್ಕೆ ಮೆಗ್ಗಿದನಾಖಳಂ ॥ ೨೧೯

ಎನ್ನ ಮಾಡುವ ಮಾಟಮಂ ನೆಱೆ ಕೇಳ್ದು ವೈಷ್ಣವಲೋಕದಿಂ
ಪನ್ನಗಾಶಯನರ್ಚ್ಚಱಿಂದಮೆ ನೋಡಲೆಂದನುರಾಗದಿಂ
ತನ್ನ ಕೂರ್ಮೆಯಿನಿಲ್ಲಿಗೋವದೆ ಬಂದನೆಂದೊಡೆ ಭೂತಳ
ಕ್ಕೆನ್ನ ನೋಂತುದನಾರು ನೋಂತರೊ ಭಾವಿಪಂದು ಧರಿತ್ರಿಯೊಳ್ ॥

ಎಂದು ಪೆರ್ಚಿ ಮೇಗುಮೆಯ್ಯಱಿಯದೆ ಕೃತಕಧರಾಮರನನಿದಿರ್ಗೊಂಡು ಪೋಗಿ ಯಜ್ಞಶಾಲೆಯುಮಂ ಮಂಟಪಂಗಳುಮಂ ತೋಱಿ ಪಿರಿದಪ್ಪಾಸನದೊಳ್ ಕುಳ್ಳಿರಿಸಿ ಕಾಲಂ ಕರ್ಚಿ ಪಾದೋದಕಮಂ ತಲೆಯಮೇಲೆ ತಳಿದುಕೊಂಡು ಮಗುಳ್ ಮಗುಳ್ ಪೊಡೆಮಟ್ಟು ಕೈಗಳಂ ಮುಗಿದು ಮುಂದೆ ನಿಂದಿರ್ದಂತೆಂದಂ ॥ ೨೨೦

ದೇವಮಾನವರಾಜವಂದಿತಪಾದಪಂಕಜ ದೈತ್ಯವಿ
ದ್ರಾವಣಾಚ್ಯುತ ವಿಷ್ಣುಲೋಕದಿನೆನ್ನ ಮಾಡಿದ ಪುಣ್ಯದಿಂ
ದೇವ ನೀನವನೀತಳಕ್ಕಿಳಿದಿಲ್ಲಿಗುನ್ನತಿಯಿಂದೆ ಸ
ದ್ಭಾವದಿಂದಮೆ ಬಂದೆಯೆಂದೊಡೆ ನಾನೆ ಧನ್ಯನುರ್ವಿಯೊಳ್ ॥ ೨೨೧

ಪಲವುಕಾಲಮನೇಕಪುಷ್ಪನಿಕಾಯದಿಂ ಹರಿ ನಿನ್ನನ
ಗ್ಗಳದ ಭಕ್ತಿಯಿನೆಯ್ದೆ ಪೂಜಿಸಿಯುಂ ಮಹಾತಪದಿಂದಮು
ಮ್ಮಳಿಸದಾರ್ತು ಶರೀರಮಂ ನೆಲಕಿಕ್ಕಿಯುಂ ನೆಱೆ ಕಾಣದಾಂ
ಜಲರುಹೋದರ ಕಂಡೆ ನಿನ್ನ ಪದಾಬ್ಜಮಂ ಕೃತಕೃತ್ಯನೆಂ ॥ ೨೨೨

ಎನ್ನಂತೆ ಪುಣ್ಯದಿಂದಧಿಕರಿಲ್ಲೆಂದು ತನ್ನ ಪುಣ್ಯಕ್ಕೆ ತಾನೆ ಪೊಂ ವಿಸ್ಮಯಂಬಟ್ಟು ಕೃತಕವಿಪ್ರನ ಮೊಗಮಂ ನೋಡಿ ಭಕ್ತಿಯಿಂ ವಿನಮಸ್ತಕನಾಗಿ ದೇವರೀಯಜ್ಞಶಾಲದೊಳನಗೆ ಸಂತೋಷಮುಮುತ್ಸ

ಮನದನುರಾಗದಿಂ ಕೃತಕಧರಾಮರಂಗೆ ಮೂಱಡಿನೆಲನಂ ಕೊಟ್ಟೆನೆಂದು ಧಾರೆಯನೆಱೆವುದುಂ ವಿಷ್ಣುಕುಮಾರಮುನಿ ರಾಜ್ಯಂಕೈಕೊಂಡು ಬಲಿಯುಂ ನೆರೆದ ನೆರವಿಯುಂ ನೋಡೆ ನೋಡೆ ಮೂಱಡಿಗೊಟ್ಟಂಗಾಱಡಿಯಾಗಿ ಮಾಡುವೆನೆಂಬಂತೆ ಕುಳ್ಳಿರ್ದ ರೇಖ್ಯಂದದಿಂ ತೊಟ್ಟನೆ ಭಯಂಕರವಾಗೆ ||][1]

೨೨೯
ದಿವಿಜೇಂದ್ರಾದೀಂದ್ರರೊಳ್ ಮೆಚ್ಚರಿಸೆ ಸೆಣಸಿ ಪೂಕೊಂಡು ಕೈವ್ರೊಯ್ದು ಕೋಪ್ರೋ
ದ್ಭವದಿಂದೆಕ್ಕೆಕ್ಕೆಯಿಂ ಮೊದಲಿಸಿ ಬಳೆದನೆಂಬಂದದಿಂ ವ್ಯೋಮಮಂ ಮು ।
ಟ್ಟುವಿನಂ ಗಾತ್ರಂ ವಿಯನ್ಮಂಡಲಕೆ ತಡೆಯೆ ತೂಂತಿಟ್ಟನೆಂಬಂತೆ ಸಿಂದಂ
ಭುವನಕ್ಕಚ್ಚರ್ಯಮಾಗಲ್ ದಿವಿಜಮನುಜವಿದ್ಯಾಧರಾರಾಧ್ಯಪಾದಂ ||

ಮಕುಟಂ ಸೌಧರ್ಮಕಲ್ಪಂ ರವಿ ಹಿಮಕಿರಣಂ ಕುಂಡಲಂ ನೀಲಮೇಘ
ಪ್ರಕರಂ ತೊಂಗಲು ರತ್ನಗಳ್ ಬೆಮರಿನೊಗೆದ ಬಿಂದೂತ್ಕರಂ ಕೂಡೆ ತಾರಾ

---

[1] ಭೂಮಿಯುತ ದಿಗಂಬರವೇಷಂ ಮಾಣಿಸಿ ಬಳ್ಳಿಯು ಕಟಕಮು ಗ್ರಮುಂ ನವ
ರ್ಘಮಣಿಯ ಕೋವಣಮುಂ ಬೆಳ್ಳಿಯುತ್ತರಿಗೆಯುಂ ಮುತ್ತಿನ ಶರದ ಯಜ್ಞೋಪ
ವೀತಮುಂ ರತ್ನಕುಂಡಲಮುಂ ದುಕೂಲಾಂಬರಮುಮೊಸೆಯೆ ವಾಮನರೂಪಂ
ಕೈಕೊಂಡು ಆಕಾಶದಿಂ ನೆರೆದ ನೆರವಿಯೆಲ್ಲಂ ವಿಸ್ಮಯಂಬಡೆ ಬಂದು ನಿಂದಿರ್ಪುದುಂ
ಮುಂದೆ ವಿಷ್ಣು ಪ್ರತ್ಯಕ್ಷವಾದನೆಂದು ಬಲಿ ತನ್ನೊಡವುಟ್ಟಿದರ್ವೆರಸು ಸಾಷ್ಟಾಂಗ
ಪ್ರಣತನಾಗಿ ಎಱಗಿ ಪೊಡವಟ್ಟು ಪೊನ್ನ ಮುತ್ತಿನ ಮಾಣಿಕದ ರತ್ನದ ರಾಶಿಯುಂ
ಮುಂದೆ ಪೂಜಿಸಿ ನಿಮ್ಮಡಿ ಕೈಕೊಳಲ್ವೇಳ್ಕುವೆಂದು ಪ್ರಾರ್ಥಿಸುವುದುಂ, ಎಮಗೆ
ಅವಱಿನೇಂ ಬೆಸನಿಲ್ಲಮೆಮಗೆ ಯಜ್ಞ ಮಾತ್ರಂ ಹೋಮಕುಂಡಕ್ಕೆ ತಕ್ಕಂ
ತಾಗಿ ಮೂಱಡಿ ನೆಲನಂ ಕುಡುವೊಡೆ ಕುಡಿಮೆನೆ ಶುಕ್ರನುಂ ಬೃಹಸ್ಪತಿಯುಂ
ಪ್ರಹ್ಲಾದನುಮಿವಂ ಬ್ರಾಹ್ಮಣನಲ್ಲ ನಿನ್ನ ಮಾಡುವ ರುಷಿವಧೆಯನಱಿದು ಸಾಮ
ರ್ಥ್ಯದಿಂ ಬಳ ಮಹಾರುಷಿವನ್ನೆ ಕಿಡಿಸಲ್ಬಂದನಿಲ್ಲಿ ಸಂಶಯಮಿಲ್ಲ ; ನೀನೀಪರಮೇಶ್ವರನ
ಕಾರುಣ್ಯಮಂ ಪಡೆಯಲ್ವೇಳ್ಪಡೆ ಪೊಡೆವಟ್ಟು ಅಱಿಯದೆ ಗೆಯ್ದೆನೆಂದು ರುಷಿ
ವಧೆಯುಂ ಮಾಣ್ಬುದೆನೆ, ಮಾಣದಂತು ಕೊಡುವೀ ಮೂಱಡಿ ನೆಲನುಮಾಱಡಿಗೆ
ಕಾರಣಮುಕ್ಕು ಮೇದೊಡಂ ಮಾಣದೆ ಮೂಱಡಿ ನೆಲನಂ ಕೊಟ್ಟೆನೆಂದು ಪೆಯ್ದು
ಟಿರ್ ಧಾರೆಯನೆಱೆವುದುಂ || (ಗ)

ನಿಕರಂ ದೇವೇಂದ್ರಶೈಲಂ ತನು ಕುಲಗಿರಿಗಳ್ ಲೀಲೆಯಿಂ ತೊಂಗಲೆಂಬಂ
ತೆ ಕರಂ ಪೆಂಪಿಂದಗುರ್ವಾಪರಿಸೆ ಗಗನಮಂ ಮುಟ್ಟಿ ನಿಂದಂ ಮುನೀಂದ್ರಂ॥

ಅಂತು [ದಿಶಾವಳಯಮೆಲ್ಲಂ ತನುಜ್ಯೋತಿರ್ಮಯಮುಮಂ ಗಗನತಳಮೆಲ್ಲಂ ಜಯಜಯನಿನಾದಮಯಮುಮಂ ಧರಾವಲಯಮೆಲ್ಲಂ ದೇಹಮಯಮುಮಾಗೆ] ಮಂದರಕ್ಕೆ ಪ್ರತಿಮಂದರಮಾದಂತೆಯುಮಂ ಧರಣಿಯುಂ ಗಗನದೆಡೆಯನಳಯಲೆಂದೆತ್ತಿದ [1] ವಿಧಾತ್ರನ ಕಯ್ಯ ದಂಡಮೆಂಬಂತೆ ಷೋಡಶಾಭರಣಭೂಷಿತನುಂ ದೇವಾಂಗನಾಸಹಸ್ರಪರಿವೇಷ್ಟಿತನುಮಾಗಿ[2] [ಜಗಕ್ಕಾಶ್ಚರ್ಯಮುಮದ್ಭುತಮುಮಾಗೆ ವಿಗುರ್ವಿಸಿ ನಿಂದು ॥ ೨೩೨

ಪರಮಗುಣಾಂಬುರಾಶಿ ಜಿನಧರ್ಮಸಮುತ್ಪ್ರಥಿತೀತಶಕ್ತಿ ಮಾ
ಣ್ದಿರಿಸದೆ ವಜ್ರವೇದಿಕೆಯೊಳೊಂದಡಿಯಂ ಭರದಿಂದೆ ಮಾನುಷೋ
ತ್ತರಧರಣೀಂದ್ರದೊಳ್ ತಡೆಯದೊಂದಡಿಯಂ ನಯದಿಂದಮಿಟ್ಟು ನಿ
ರ್ಜರಪತಿಸಂದ್ಯಸೊಂದಡಿಗೆ ಭೂತಳಮಿಲ್ಲದುದಗ್ರತೇಜದಿಂ ॥ ೨೩೩

ಕಾಲನಾಕಾಶಕ್ಕೆತ್ತಿ ಜಿನಪಾದಭಕ್ತನಪ್ಪಾತಂಗೆ ಮೂಱುಂಲೋಕಮೇಕಚ್ಛತ್ರಮೆಂಬಂತಾನುಂ ತದ್ಗಿರೀಂದ್ರದಳವಿಯುಮಂ ಮನುಷ್ಯಕ್ಷೇತ್ರಪ್ರಮಾಣಮುಮಂ ಕಾಲಿಂದಾದಯುಗ್ಮ ನೋಡುವಂತಾನುಂ ಸುತ್ತಿದ ದ್ವೀಪಸಮುದ್ರಂಗಳಂ ಭವ್ಯರ್ಗೆ ಕಮಯರಂಬರೆದು ತೋಱುವಂತಾನುಂ ಮಾನವರ್ಗೆ ಮೇರೆಯೆಂದಱಿಪ್ಪವಂತಾನುಂ ತಿರಿಪ್ರುತ್ತುಮಿರ್ಪ್ಪದುಂ ಸಮಸ್ತದೇವಸಮೂಹಕ್ಕಾಸನಕಂಪಮುಮಂ ಭಯಮುಮಾಗೆ ಬೇಗಮಱಿದು ಚತುರ್ವಿಧದೇವನಿಕಾಯಮುಮುಂ ತಂತಮ್ಮ ಮಹಾವಿಭೂತಿಗಳ್ವೆರಸು ದೇವದುಂದುಭಿಗಳಸೆಯೆ ಭೋರೆನೆ ಬಂದು][3] ॥ ೨೩೪

---

[1] ವಲನಾಕಾಶದಂತರವಾನಲೆಯಬೆಂದತ್ತಿದ (ಗ). [2] ದೇವಾಂಗನಾಪರಿವೇಷ್ಟಿತನುಮಾಗಿ.

[3] ವಜ್ರವೇದಿಕೆಯೊಳೊಂದಡಿಯುಂ ಮಾನುಷೋತ್ತರದೊಳೊಂದಡಿಯುನಿಟ್ಟು ಮತ್ತೊಂದಡಿಗೆ ನೆಲನಿಲ್ಲದೆ ಕಾಲನೆತ್ತಿ ಜಿನಭಕ್ತನಪ್ಪಂಗೆ ಮೂಱುಂಲೋಕಮುಮೇಕಚ್ಛತ್ರಮೊಂದು ತೋಱುವಂತಾನುಂ ತದ್ಗಿರೀಂದ್ರದಳವಿಯುಂ ಕಾಲಿಂದಾರೈವಂತಾನುಂ ದ್ವೀಪಸಮುದ್ರಮುಂ ಭವ್ಯರ್ಗೆ ಕಮೆಯಾರಂ ಪೇಳ್ದು ತೋಱುವಂತಾನುಂ

ಸುರತರುನಿಪೋತುವೆರವಂ
ದರಸುಮನಂ ವಿಷ್ಣುಮುನಿಮುವೋಲುತ್ಸಾಹಂ ।
ಬೆರಸು ನಲಿನಲಿದು ಚಿತ್ರಿಯು
ಸರಿಯಂತಿರೆ ಸುರಿವರಂಗಳಮಮಳಗುಣಾಢ್ಯರ್ ॥ ೨೩೫

ಪೊಸಮುತ್ತಿನ ಪೊಸವಜ್ರದ
ಪೊಸಪಚ್ಚೆಯ ಪೊಸಕೆನಿಪ್ಪ ವೈಡೂರ್ಯದ ರಂ ।
ಜಿಸುವ ಪೊಸಸೂರ್ಯಕಾಂತದ
ಶಶಿಕಾಂತದ ರತ್ನರಾಶಿಯಿಂ ಪೂಜಿಸಿದರ್ ॥ ೨೩೬

ಸುರಿದಪ್ಪುದ ನೃತ್ಯದ ಬಳ್ಸರಿ
ಧರಣಿಯೊಳಂಬುತೆ ವಿಷ್ಣುಮುನಿಪನ ಕೇಳಿದೊಳ್ ।
ತರತರದಿಸಿದರ್ ಮಾಡಿದ
ರರವಿಂದಾಸನಿಯಾದಸುರಿಯರ್ ಬಹುವಿಧದಿಂ ॥ ೨೩೭

ಮಂಗಳನೆ[illegible]ಪು ರವಂ ಗಿ
ತಂಗಳ ನಿಸ್ವನದನೇಕಜಯಜಯನಾದಂ ।
ಪೊ[illegible]ಸುವೆಡೆದೆ[illegible]ಪ್ಪಿ [1] ಸುರರ ಸ
ರಂ ಗಗನದೊಳಾದ ಮೊಸುಮಸೆದುವು ಪಟಹ್ರಂ ॥ ೨೩೮

ಶರಣಾಗೆಂಬ ಸ್ಥಿರರೆಂಬ ಮೊದದಿಂ ಜೀಯೆಂಬ ದೇವೆಂಬ ಭಾ
ಸುರತೇಜೋರಾಶಿ ಮಹಾಪ್ರಸಾದ ನುಡಿಯೆಂಬಾಶ್ಚರ್ಯಮೆಂಬಬ್ಬರದಿಂ
ಸ್ಥಿರನಾಗೆಂಬ ಮಹಾಭವ್ಯ ಭಾವುಮಹಾಭಾವಯ್ಯಾಯ್ಯ ನೋಡೆಂಬ ದೇ
ವರ ನಾನಾವಿಧಸುಸ್ವರಂ ನೆಗೆದುದಾಕಾಂತಂಬರಂ ಪ್ರೋಮದೊಳ್ ॥

ಜಿನಧರ್ಮದ ಪೆಂಪಂ ಪೋ
ದಿರಿಗಳಿಪುವ ತೆಱದಿನಮರರಾವಮನಿಸವಕೇೞ ।

ಮಹಾಮಹಿಮರ ಮೇರುಮಂತಿಳನಂ ಕಾಲು ಅಗ್ರವೃತ್ತಮಪೂರ್ವ[illegible]ಪೂರ್ವ
ದೇವನಿಕಾಯುಮುಂ ತಂತಮ್ಮ ಮಹಾವಿಭೂತಿಯಿಂ ದೇವದುಂದುಭಿಗಳಸೆವ (ಗ)

1 ಪೊಂಗುವ ಸ್ವರದರವಂ (ಗ)

ಕನದೊಡನೊಡನೆ ತಗುಳ್ದು
ಬ್ಬ್ಯನೆ ರಾಗಂಬೆರಸು ಧಾತ್ರಿಯುಂ ಬಲವೆಂದರ್ ॥ ೭೪೦

ಅಂತಗುರ್ವಪ್ಪಿನಂ ಧೀರತೆಯೊಳಿರ್ಪಿನಂ [1]
ಮುನಿಸಿಕರಪೂಜ್ಯನಂ ಸಕಳಸಾಮ್ರಾಜ್ಯನಂ
ಕಾಶ್ಮೀರದವರೆಲ್ಲ ಗೊಲ್ಲದೇಶದರೆಲ್ಲ
ಚೋಳದೇಶದರೆಲ್ಲ ಚೇರಮಾಳವವರೆಲ್ಲ [2]
ಸೌರಾಷ್ಟ್ರದವರೆಲ್ಲ ಗೌಳದೇಶವರೆಲ್ಲ
ವೆಂಗಿನಾಡವರೆಲ್ಲ ಅಂಗದೇಶದರೆಲ್ಲ
ಕಾಮಾಕ್ಷಿಯಾವರಲ್ಲ ಸೌವಾರದವರೆಲ್ಲ
ಪಾರಿಯಾತ್ರಿಯರೆಲ್ಲ ಮಾಳವಾವಸಿಯೆಲ್ಲ
ಕುಂತಳಾವನಿಯೆಲ್ಲ ಗುರ್ಜರಾವನಿಯೆಲ್ಲ
ಪಾಂಡ್ಯರಾಜವರೆಲ್ಲ ಮಲಯವಿಷಯದರೆಲ್ಲ
ಸುರಪಟಹನಿನದಮುಂ ದಿವಿಜರನಿನಾದವುಂ
ಶಂಖಧ್ವನಿಗಳುಂ ಘಂಟಾಧ್ವನಿಗಳುಂ
ಕಹಳಾರವಗಳುಂ ಗಾನದ ರವಂಗಳುಂ
ಘೋಂಕನೊರ್ಮೊರೆಯೆ ಕೇಳ್ದು ಸಂತೋಷದಿಂದೆಬ್ಬು
ಗಗನತಳಮುಂ ನೋಡಿ ನೆರದೆಲ್ಲನೊಡಗೂಡಿ
ಕಾರ್ಮುಗಿಲ್ಲನಿಸಿ ರಾಗದೊದವಿಂ ನಲಿದು
ನಲಿನಲಿದು ಪರಿಪರಿದು ಕೂರ್ಪರಿಂ ಕರೆಕರೆದು
ಪಲವುಮರ್ಘ್ಯಂಗಳಿಂ ಪಲವುಮರ್ಚನೆಗಳಿಂ
ಪಲವುಪರ್ಣಗಳ್ವೆರಸಿ ಪಲವುತೆರದಿಂ ಪರಂ
ಪೂಜಿಸಿ ಮುನೀಂದ್ರನಂ ಬಣ್ಣಿಸಿ ಯತೀಂದ್ರನಂ
ಪರಮ ದೇವಕರ್ಗಳುಂ ಸುರಿಪ ದೇವಕರ್ಗಳುಂ
ಪೊಡೆಮಡುವ ದಿವಿಜರುಂ ಬಣ್ಣಿಸುವ ದಿವಿಜರುಂ
ಜೀಯೆಂಬ ದಿವಿಜರುಂ ದೇವೆಂಬ ವಿಬುಧರುಂ

---

1 ಸ್ಥಿರತಮುಳ್ಳಗರ್ವನಂ ( ). 2 ಲಾಳದೇಶದವರೆಲ್ಲ ಚೋಳನಾಡವರೆಲ್ಲ (ಗ).

......................ಸುತ್ತಿದವುರೀಶರಂ
ಕಣ್ತಣಿವಿನಂ ಕಂಡು [ಪಿರಿದುಂ ಮನಂಗೊಂಡು]
ಕೊಲಲಾಗದೆಂಬ ನುಡಿ ಪುಸಿಯಾಗದೆಂಬ ನುಡಿ
ಕಳಲಾಗದೆಂಬ ನುಡಿ ಜಾರೆ ವೇಡೆಂಬ ನುಡಿ
ಕಾಂಕ್ಷೆ ವೇಡೆಂಬ ನುಡಿ ಕಳ್ಳಾಗದೆಂಬ ನುಡಿ
[ಅಡಗಾಗದೆಂಬ ನುಡಿ ಮಧುವಾಗದೆಂಬ ನುಡಿ]
ಪೆಱವು ಧರ್ಮದೊಳುಂಟೆ ಪೆಱವು ವಾಕ್ಯದೊಳುಂಟೆ
ಬುದ್ಧಿಯಿಂ [1] ನೋಡುವೊಡೆ ಚರ್ಚೆಯಿಂ [2] ಮಾಡುವೊಡೆ
ಜಿನನಾಥನಿಂ ಬಿಟ್ಟು ಜಿನಮುನಿಗಳಿಂ ಬಿಟ್ಟು
ಜಿನಧರ್ಮದಿಂ ಬಿಟ್ಟು ಜಿನಸಮಯದಿಂ ಬಿಟ್ಟು
ಮತ್ತೆ ಪೂಜ್ಯರುಮೊಳರೆ ಮತ್ತೆ ನಿಸ್ಪೃಹರೊಳರೆ
ಮತ್ತೊಂದು ಲೇಸುಂಟೆ ಮತ್ತೊಂದು ಶುಭವುಂಟೆ
ಪೈಲಾಪದೊಳ್ [3] ನಿಂದ ನೆ ವಿಜಿನಪತಿ ಯಿಂದ
ವಾರಿನಿಧಿಯೊಳ್ ನಿಂದ ನೇಮಿಜಿನಪತಿಯಿಂದ [4]
ಚೋಳಮಹಿಯೊಳ್ ನಿಂದ ದಿವಿಜವಲ್ಲಭನಿಂದ [5]
ಲಲಿತಪುರದೊಳ್ ನಿಂದ ಶಾಂತಿಜಿನಪತಿಯಿಂದ
ಬಂದಣಿಕೆಯೊಳ್ ನಿಂದ ಶಾಂತಿಜಿನಪತಿಯಿಂದ
[ಶಾರಿಯೂರೊಳ್ ನಿಂದ ಶಾಂತಿಜಿನಪತಿಯಿಂದ]
ಹಾನುಗಲ್ಲೊಳ್ ನಿಂದ ಮಲ್ಲಿನಾಥ [6] ಜಿನನಿಂದ [7]
ಎಳವತ್ತಿಯೊಳ್ ನಿಂದ ಚಂದ್ರಜಿನಪತಿಯಿಂದ
ಮೊಳವದೆ ನೆಲೆನಿಂದ ಸಕ್ಷೀರಜಿನನಿಂದ

---

1 ಬದ್ಧಿಯಿಂ (ಗ). 2 ಚರ್ಚೆಯಿಂ ( ). 3 ಪುರದ (ಗ).
4 ಪುರುಜಿನಾಧಿಪನಿಂದ (ಗ). 5 ವಿಜಯವಲ್ಲಭನಿಂದ (ಗ).
6 ಪುರುದೇವ (ಗ) 7 ಪಟವಳಿಯೊಳು ನಿಂದ ಪುರುದೇವ ಜಿನನಿಂದ, ಹುಲಿಗೆಱೆಯೊಳು ನಿಂದ ಶಂಭುಜಿನಪತಿಯಿಂದ ಶ್ರೀ ಕೊಪಣದೊಳುನಿಂದ ಶಶಿನಾಥಜಿನನಿಂದ, ಮುಳುಗುಂದದೊಳು ನಿಂದ ಚಂದ್ರಕ್ಷಜಿನನಿಂದ, ಪಟ್ಟಗೆಱೆಯೊಳು ನಿಂದ ಕಲಿದೇವ ಜಿನನಿಂದ, ಎಳವತ್ತಿಯೊಳ್ (ಗ)

ಆಶ್ರಮದೊಳುಪ್ಪಿರ್ದ ಸುವ್ರತೇಶ್ವರನಿಂದ
ಗೌಳಮುಖಿಯೊಳ್ ನಿಂದ ಶಂಭವ ಜಿನಪತಿಯಿಂದ
ತೀರೆಯೊಳ್ ನೆಲಸಿಂದ ಪಾರ್ಶ್ವಜಿನಪತಿಯಿಂದ
[ತಪಸಿಧಿಯೊಳ್ ನಿಂದ ಪಾರ್ಶ್ವಜಿನಪತಿಯಿಂದ]
ಕೌಶಾಂಬಿಯೊಳ್ ನಿಂದ ಪದ್ಮಪರಿವೃಢನಿಂದ
ಅಹಿಚ್ಛತ್ರದೊಳ್ ನಿಂದ ಪಾರ್ಶ್ವಜಿನಪತಿಯಿಂದ
ಸಾಮರ್ಥ್ಯಮುಂಟೆಂದು ತಾಮಱಿವುದಿದನೆಂದು
ಕೊಲ್ಲದೊಡೆ ಕೊಲೆಯಿಲ್ಲ ಪುಸಿಯದೊಡೆ ಪಗೆಯಿಲ್ಲ
ಕಳ್ಳದೊಡೆ ಸಾವಿಲ್ಲ ಶೌಚದಿಂ ನೋಪಿಲ್ಲ
ಮೋಹಿಯಿಂ ಕೇಡಿಲ್ಲ ........... .....
ಭಾವಿಸುವೊಡೀವ್ರತಂ ಲೋಕದೊಳ್ ಸುವ್ರತಂ
ಜಿನನಿಗದಿತವ್ರತಂ ಅರ್ತಿಯಿಂದಾವ್ರತಮ
ನಾಚರಿಸೆ [1] ಕೇಡಿಲ್ಲ ನರಕಕ್ಕೆ ಪೋಗಿಲ್ಲ
ಜಿನರ ಸಚ್ಚರಣಮಂ ದುರಿತಕುಲಹರಣಮಂ
ಪೊರ್ದಿದಂಗರಿದಲ್ಲ ನರಕಗತಿ ಮುನ್ನಿಲ್ಲ
ಸಾಮರ್ಥ್ಯಮುಂಟೆಂದು ತಾಮಱಿವುದಿದನೆಂದು
ಜಿನರ ಸ್ವರೂಪಮಂ ಪಾಪಸಂತಾಪಮಂ
ತಾಳ್ದಿದಂಗೆಡರಿಲ್ಲ ದುಃಖಕ್ಕೆ ಸಲಲಿಲ್ಲ
ಜಿನಪತಿಯನರ್ಚಿಸುಗೆ ಋಷಿಯರಂ ಪೂಜಿಸುಗೆ
ಸದ್ಧರ್ಮಮಂ ಪಿಡಿಗೆ ದುಷ್ಕರ್ಮಮಂ ಬಿಡುಗೆ
ಸಮ್ಯಕ್ತ್ವಮಂ ಪಿಡಿಗೆ ಮಿಥ್ಯಾತ್ವಮಂ ಬಿಡುಗೆ
ಸಕಲಸುಖಮೆಲ್ಲಮಂ ಪಡೆವಮನಮ ಕ್ಷೇಮಂ [2] ॥ ೭೪೧

ಎಂದು ಜನಮೆಲ್ಲಂ ನಚ್ಚಿ ಮೆಚ್ಚಿ ಬಿಚ್ಚಳಿಸುತ್ತುಮಿರೆಯಿರೆ ॥

ಜಿನಪಾದಭಕ್ತನೆನಿಸುವ
ಮುನಿಗೀತ್ರೈಲೋಕ್ಯಮೆಲ್ಲಮುಂ ಗಹನಮೆ ಪೇ ।

---

1 ಮನವತಿಯಿಂ ವ್ರತಮನಾದರಿಸಿ (ಗ). 2 ಮನಮುಳ್ಳೊಂ (ಗ).

ಮುನಿಸೇಕೆ ದೇವ ಪಾದಮ
ನನಂತಗುಣರಾಶಿ [1] ತಡೆಯದುಡುಗಳ ವೇಟ್ಕುಂ ॥ ೬೪೩

ಅಣಿಮಾದ್ಯಷ್ಟಗುಣಂಗಳ್
ಕ್ಷಣದಿಂದಂ ನಿಮಗೆ ಜೈನಪದಭಕ್ತಿಯಿನೊ ।
ಳ್ಗಣಮುಂ ಪುಟ್ಟಿದುವೆನೆ ಧಾ
ರಿಣಿಯೊಳ್ ನಿಮ್ಮಂತು ದೇವ ನಿರ್ಮಳನಾವಂ ॥ ೬೪೪

ದಯೆಯಿಂ ಭಾವಿಸುವುದು ಸಂ
ಶಯಮಿಲ್ಲದೆ ಜೈನತತ್ತ್ವಮಂ ನೆನೆವುದು ದು ।
ರ್ನಯಮಂ ಬಿಡುವುದು ಧರ್ಮ
ಪ್ರಿಯನಪ್ಪುದು ಸುಕವಿನಿಕರಪಿಕಮಾಕಂದಂ ॥ ೬೪೫

[ಎಂದು ಸಮಸ್ತದಿವಿಜನಿಕುರಂಬಂ ಪ್ರೊತೆಯಡುತ್ತುಂ ಪಾದದೊಡ ನೊಡನೆ ತೊಳಲುತ್ತುಂ ಪೂಜಿಸುತ್ತಿರ್ಪನ್ನೆಗಮಿತ್ತಲಿಂದ್ರನ ಬೆಸದಿಂ ದೇವಕುಮಾರರ್ ಬಲಿಯನಂಬಲಿಯ ಮೊಟ್ಟೆಯುಮಂ ಕಟ್ಟಿದಂತೆ ಕೆಂದ ಡಗಗಟ್ಟಿಗಟ್ಟಿ ಹಸ್ತಿನಾಪುರದಿಂ ಪೊರಮಡಿಸಿ ಕಳೆವುದುಂ, ಬಳಿಕ ಋಷಿಯರುಂ ಸೌಧರ್ಮೇಂದ್ರಾದಿ ಸುರೇಂದ್ರರುಂ ಶಿತಗಿರಿಯ ಗುಹೆಯ ಬಾಗಿಲೊಳಿರ್ದ ಕಸಮಂ ಕಿಚ್ಚಂ ಪಿಂಗಿಸಿ ಜಗದುತ್ತುಂಗರುಂ ಕರ್ಮ ಮದೇಭಸಂಪದುವೆನಿಸಕಂಪನಾಚಾರ್ಯರ ಧ್ಯೈರ್ಯಧರಾಧರರೆನಿಸು ವಯ್ನೂರ್ವರ್ ಮುನಿವರರ ಘೋರೋಪಸರ್ಗಮಂ ಪಿಂಗಿಸಿ ವಾತ್ಸಲ್ಯ ರತ್ನಾಕರರಾದ್ರೆಲ್ಲಿಗೆವಂದು ॥ ] [2] ೬೪೬

---

1 ಗುಣಸಲಯು (ಗ), 2 ಎನುತ್ತಂ ದೇವರ್ ನೆರಪಿ ಪೊರಮಡುತ್ತಂ ಪಾದ ದೊಡನೆ ತೊಳಲುತ್ತಂ ಅರ್ಚಿಸುತ್ತಮಿರ್ದರನ್ನೆಗಂ ಸೌಧರ್ಮೇಂದ್ರನ ಬೆಸದಿಂ ಪ್ರ ಕೀರ್ಣಕದೇವರ್ಕಳಿದು ಬಲಿಯನಂಬಲಿಯ ಮೊಟ್ಟೆಯುಮಂ ಕಟ್ಟುವಂತೆ ಕಟ್ಟಿ ಬಾಯು ಬಡಿದು ತನ್ನ ಮುಂದಿಕ್ಕುವುದುಮಾ ಇಂದ್ರನನೇಕವಿಧದಿಂದವನ ಬಯ್ದು ಸಿನ್ನಿಂ ದಂ ಬಿಟ್ಟು ನಿಗೋದರಾಶಿಗಳ್ ಲೋಕದೊಳಿಲ್ಲೆಂದು ಪೂಜಿಸುವುದಿಸಿ ಕಳೆದು ಪುರ ಮೆಲ್ಲಂ ಬ್ರಹ್ಮೇತಿಕಾ ನೆಂದು ಕಂಡಕಂಡ ಮರ್ಮಂಗಳಿಂ ಬಿಟ್ಟದು ಕಳೆವುದುಂ, ಸಿಗ್ಗಾಗಿ ಜಗ್ಗನೆ ಜರಿದು ಪಾಪಭರದಿಂ ಬೀಳ್ವಂತೆ ನರಕಕ್ಕೆ ಪೋದನಿತ್ತಲಿಂದ್ರಾ ಶೀತಗಿರಿಯ ಬಾಗಿಲೊಳಿರ್ದ ಪುಳ್ಳಿಯೆಲ್ಲಮಂ ಕಳಯಿಸಿ ರುಷಿಯರನರ್ಚಿಸಿ ಘೋ ರೋಪಸರ್ಗಂ ಪಿಂಗಿದುದು ಕೈಯಿಂ ತಿಕೊಳ್ಳಿವೆಂದು ಘೋರೋಪಸರ್ಗಮಂ ವರ್ಣಿಸಿ ವಿಷ್ಣುಮುನೀಂದ್ರನಲ್ಲಿಗೆ ಪೋಗಿ (ಗ).

ಮುನಿನಿಕರಕ್ಕೆ ಪಿಂಗಿದುದು ದುಶ್ಚರಿತಾನ್ವಿತನುಗ್ರಮೂರ್ತಿ ದು
ರ್ಮನನೆನಿಸಿರ್ದ ಪಾಪಿ ಬಲಿ ಮಾಡಿದದೊಂದುಪಸರ್ಗಮಿಂದು ಸ |
ಜ್ಜನನುತ ಸಚ್ಚರಿತ್ರ ಗುಣಬೋಧಸುಧಾರ್ಣವ ಭವ್ಯಬಂಧು ನಿ
ರ್ಮಲನಿಜತತ್ವ[1] ನೀನುಡುಗು ಪಾಪಮನೆಂಬುದುಮಾ ಮುನೀಶ್ವರಂ ||

[ವಿಗುರ್ವಣೆಯನುಪಸಂಹರಿಸಿ ತನ್ನ ಮುನ್ನಿನ ರೂಪಂ ಕೈಕೊಂಡು ಸಂತೋಷದಿಂದಿರ್ಪುದುಂ ದೇವನಿಕಾಯಮೆಲ್ಲಂ ಸಹಜಕವಿಜನಮನೋಹರೋದ್ಯಾನವನಕಳಕಂಠರೂಪನಂ ಕಣ್ಣಾರೆ ನೋಡಿ ಮನದೊಳ್ ಭಕ್ತಿ ಕೈಗಣ್ಮಿ ಪಲರ್ಚನೆಯಿಂದರ್ಚಿಸಿ ಕರಕಮಲಂಗಳಂ ಮುಗಿದು][2] || ೭೪೮

ಜಿನಪದಭಕ್ತಿಯೊಳ್ ಗುಣದೊಳುನ್ನತಿಯೊಳ್ ಸಕಲಾಗಮಾರ್ಥದೊಳ್
ವಿನಯದೊಳುನ್ನತವ್ರತದೊಳೂಜೆಯೊಳೊಪ್ಪುವ ಸಚ್ಚರಿತ್ರದೊಳ್
ಮುನಿಪದಭಕ್ತಿಯೊಳ್ವಿಮಲಧೈರ್ಯದೊಳೂರ್ಜಿತಮಪ್ಪಕೀರ್ತಿಯೊಳ್
ನಿನಗೆ ಸಮಾನರಾರ್ ಸದೃಶರಾರ್ ದೊರೆಯಾರೆಣೆಯಾರ್ ಮುನೀಶ್ವರಾ[3] ||

ಜನವಿನುತಮೆನಿಸು ವೀಯೆಂ
ಟನೆಯಂಗಂ ನಿನ್ನ ಮೆಯ್ಯೊಳಿರ್ದುದಱಿಂ ದೇ |
ವನಿಕಾಯಪೂಜ್ಯನಾದ್ಯೈ
ಮುನೀಂದ್ರ ನಿನ್ನಂತು ಧನ್ಯರಾರ್ ಭೂತಲದೊಳ್[4] || ೭೫೦

[ಮೋಕ್ಷಶ್ರೀಕಾಮಿನಿಗಿದು
ನಿಕ್ಷೇಪದ ನಿಧಿ ಸುಖಕ್ಕಿದಕ್ಷಯನಿಧಿ ಪಾ |

---

[1] ದಯಾವಾರಿಧಿ ನಿರ್ಮಳಚಿತ್ತ ಕೀರ್ತಿಕಾಮಿನಿಕುಚಹಾರ (ಕ. ಬ.).

[2] ವಿಗುರ್ವಣೆಯನುಡುಗಿ ಕೆಳ್ಳಿರ್ಪುದುಮಿಂದ್ರಾದಿದೇವರ್ಕಳೆಲ್ಲಂ ಪೂಜಿಸಿ ಭಾವಯುತದಿಗಂಬರಪಾಸಂಗ ಕೈಗಳಂ ಮುಗಿದು (ಗ).

[3] ಜನನುತಧರ್ಮದೊಳ್ ವಿನಯದೊಳ್ ವ್ರತವಾಗಮದೊಳ್ ನೆಗಳ್ತೆಯೊಳ್
ಮುನಿಪದಭಕ್ತಿಯೊಳ್ ವಿಮಲಧೈರ್ಯದೊಳುನ್ನತಮಪ್ಪ ಕೀರ್ತಿಯೊಳ್ |
ಜಿನಮತವಾ ಜಗಕ್ಕೆಸೆಯೆ ಭೋಂಕನೆ ನಿನ್ನೊಲು ತೋಱಿ ಬಲ್ಲರಾರ್
ನಿನಗೆ ಸಮಾನಮಾರುಪಮೆಯಾರ್ ದೊರೆಯಾರ್ ಧರೆಯೊಳ್ ಮುನೀಶ್ವರಾ (ಗ).

[4] ಮನೋಜಹರ ಸುಕವಿನಿಕರ ಪಿಕಮಾಕಂದಾ (ಗ)

ಪಕ್ಷಯುಮೆಂದಿದನಱಿಕೆಯೊ
ಳೀಕ್ಷಿತಿಯೊಳ್ ತಾಳ್ದಿ ನಿಂದವಂಗೆಡರುಂಟೇ ॥ ೨೪೧

ಎಂದು ನಾನಾವಿಧದಿಂ ಪ್ರಭಾವನಾಂಗಮುಮಂ ವಾತ್ಸಲ್ಯರತ್ನಾಕರನುಮಂ ಪೊಗೞ್ದು ಚತುರ್ವಿಧದೇವಸಮೂಹಮುಂ ತಂತಮ್ಮ ನಿವಾಸಂಗಳ್ಗೆ ಪೋದರ್. ಪದ್ಮಮಹಾರಾಜಂ ಧರ್ಮದೊಳಾದೈಶ್ವರ್ಯಮುಮಂ ಪ್ರಭಾವನಾಂಗದೊಳಾದ ಮಹಿಮೆಯುಮಂ ಕಂಡು ಮಹಾಭಕ್ತಿಯಿಂ ಸಮ್ಯಕ್ತ್ವಚೂಡಾಮಣಿಯ ಪಾದಪದ್ಮಂಗಳಂ ಮನವಾರೆ ಪೂಜಿಸಿ ಪೊಡೆವಟ್ಟು ಪಲವುಂ ಸದ್ವ್ರತಂಗಳಂ ತಾಳ್ದಿ ಧರ್ಮದೊಳ್ ದೃಢಚಿತ್ತನಾಗಿ ಪೋದಂ ॥ ][1] ೨೪೨

ಬಲಿ ಮುನ್ನಂ ಜಯಧರ್ಮಭೂಧರನ ಮುಂದಾರಯ್ಯದುರ್ಕಿಂದೆ ಸಂ
ಚಲಚಿತ್ತಂ ನುಡಿದಾಱದಿರ್ದೊಡೆ ನೃಪಂ ಚೀಃ ಸೋಲ್ತೆಯಿನ್ನೆಂದೊಡು[2]
ಮ್ಮಳದಿಂದಿಲ್ಲಿಗೆ ವಂದು ಕೊರ್ವಿ ಮುಳಿಸಿಂ ಯೋಗೀಂದ್ರನಂ ಕೊಲ್ವೆನೆಂ
ದಱದಂ ಕರ್ಮಮೆ ಕಷ್ಟಮೊರ್ವರಱಿಮಂ ಪಾರ್ವಂಗೆ ಲೇಸಕ್ಕುಮೇ ॥

[ ಪರರ ಮನೆಯ ಸೂಜಿಯ ಕೇಡಂ ಬಯಸುವ ಕಳ್ಳಂಗೆ ತನ್ನ ಮನೆಯ ಕುಱಿಂ ಕೆಟ್ಟುದೆಂಬಂತೆ ನಿರ್ದೋಷಿಗಳಪ್ಪಕಂಪನಾಚಾರ್ಯರ್ಗುಪಸರ್ಗಂಮಾಡಿದ ಬಲಿ ಪಾಪದ ಫಲದಿಂ ಬೋಂಡಾಗಿ ಕಟ್ಟುವೆತ್ತನೆಂದು ಪಾಪದೊಳಾದ ಪ್ರತ್ಯಕ್ಷಫಲಮಂ ಕಂಡು ವಿಸ್ಮಯಂಬಟ್ಟರದಱಿಂ ॥

ಕುಸಿಯದೆ ಪೆಱರಱಿವಂ ಚಿಂ
ತಿಸುವಂ ತಾನಱಗುಮಂತೆ ತೊದಱಲ್ಲದೆ ಚಿಂ ॥
ತಿಸುವಾತಂ ಪೆಱಗೆರ್ಪ್ಪಂ
ವಸುಮತಿಯೊಳ್ ತಾನೆ ಸಿರಿಗೆ ನೆಲೆಯಾಗಿರ್ಕುಂ ॥ ೨೪೩

---

1 ಎಂದು ಪೊಗಳ್ದು ಪೊಡಮಟ್ಟು ದೇವಸಿಕಾಯುಂ ತಂಸಿವಾಸಕ್ಕೆ ಪೋದರ್ ಪದ್ಮಮಹಾರಾಜನುಂ ಪ್ರಧಾನರ ಮೊಗಮಂ ನೋಡಿ (ಗ)

2 ನುಡಿದಲರದಲ್ಲಿ ಪಿರಿದುಂ ಬೋಡಾಗಿ ಪೊಪಿಲ್ಲದು (ಗ),

3 ಬಂದು ನೋಡ ಮುನಿಸಿಂ (ಗ)

ಮಗಧಾವನೀಶ ಪಾಪಂ
ಪುಗದಂತೆ ನೆಗೞ್ತೆಯ ಪ್ರಭಾವನೆಯಂ ಕೈ |
ಮಿಗೆ ಕೂರ್ತು ಪದಪಿನಿಂ ಮೊ
ಡಗೆ ಪಾಪಂ ಕಿಡುಗುಮದಱ ಕೇಡಿಂ ಮೋಕ್ಷಂ ॥ ೨೫೬

ಮತ್ತನ್ನದೆ ದೊರೆಕೊಳ್ಗುಂ
ಚಿತ್ತಂ ತಲ್ಲಣಿಸದೊಂದೆ ಮನದಿಂ ಗುಣಮಂ |
ಪತ್ತುಗೆ ಕಡೆಯುಂಗಮದ
ತ್ಯುತ್ತಮಮೆಂದೊಲ್ದು ನಂಬಿ ಪೊರ್ದುಗೆ ಭವ್ಯಂ ॥ ೨೫೭

ಎಂದು ಪ್ರಭಾವನೆಯೊಳಾದ ಪ್ರತ್ಯಕ್ಷಫಲಮಂ ಗಣಧರ ಸ್ವಾಮಿ
.ಗಳ್ ಪೇೞೆ ಕೇಳ್ದು ॥][1] ೨೫೮

ವಿಪುಳಪ್ರಖ್ಯಾತಕೀರ್ತಿಧ್ವಜನಮಳಗುಣಂ ವಾಗ್ವಧೂವಲ್ಲಭಂ ಕಾ
ಮಮದೇಭೇಂದ್ರಪ್ರತಾಪಕ್ಷಯಹರಿ ಗಜಮತ್ತುಂಗನತ್ಯೂರ್ಜಿತಂ ರ |
ಮ್ಯಮನಂತ್ರೈವಿದ್ಯಚಕ್ರೇಶ್ವರನಮಲಪದಾಂಭೋಜಭೃಂಗಂ ಯಶಶ್ರೀ
ರಮಣಂ ಸೋತ್ಸಾಹನಾದಂ[2] ಸುಕವಿಜನಮನಃಪದ್ಮಿನೀರಾಜಹಂಸಂ ॥

ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ನಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ದರ್ಶನಾಷ್ಟಮಾಂಗವ್ಯಾವರ್ಣನಂ
ಸವಮಾಶ್ವಾಸಂ.



1 ಎಂದು ಮುಗುಳ್ನಗೆಯಂ ನಕ್ಕು ಸುಕವಿಜನಮನಃಪದ್ಮಿನೀರಾಜಹಂಸನಂ ಬಂದಿಸಿ ಸಮ್ಯಕ್ತ್ವದೃಢನಾಗಿ ಪೋದನದುಕಾರಣದಿಂ ಪ್ರಭಾವನೆಯು ಸಮಸ್ತ ಕರ್ಮನಿರ್ಮೂಲಕರಮೆಂದು ಪೇಳ್ ಕೇಳ್ದು (ಗ).

2 ಧೈರ್ಯಮಹಾಮೇರುಕ್ಷಿತೀಂದ್ರಾ ಜಿನಸಮಯಮಹಾವಾರ್ಧಿ ತ್ರೈವಿದ್ಯಲಕ್ಷ್ಮೀ ರಮಣಾ ಶ್ರೀಪಾದಭೃಂಗಂ (ಕ. ಖ.)

University of Mysore.

Oriental Library Publications

KANNADA SERIES No. 16

ನಯಸೇನವಿರಚಿತಂ

# ಧರ್ಮಾಮೃತಂ

ಉತ್ತರಭಾಗ—ಅಧ್ಯಾಯಗಳು ೧೦–೧೪

---

# DHARMAMRITAM

BY

NAYASENA

PART II—CHAPTERS 10—14

EDITED BY

ARTHASASTHRA-VISARADA, VIDYALANKARA

DR. R. SHAMA SASTRY, B.A., PH.D., M.R.A.S.,

*Curator, Government Oriental Library, Mysore: Director of Archæological Researches in Mysore; Periodical Lecturer to the Post-Graduates' Classes of the Calcutta University, and B.B.R.A.S Campbell Memorial Medalist*

---

MYSORE

PRINTED AT THE GOVERNMENT BRANCH PRESS

1926

# ವಿಷಯಾನುಕ್ರಮಣಿಕೆ.

# ಉಪೋದ್ಘಾತ

---

## ನಯಸೇನ

ಈ ಗ್ರಂಥದ ಕರ್ತೃವು ತನ್ನ ಹೆಸರನ್ನು "ನಯಸೇನ ಮುನೀಂದ್ರ" ನೆಂದೂ (I ೮,೨೧) "ನಯಸೇನ ಬುಧ" ನೆಂದೂ (I, ೫೮), ಆಶ್ವಾಸಾಂತ್ಯ ಗದ್ಯದಲ್ಲಿ "ನಯಸೇನದೇವ" ನೆಂದೂ ಹೇಳಿಕೊಂಡಿದ್ದಾನೆ. ಆಶ್ವಾಸಾಂತ್ಯ ಗದ್ಯಪದ್ಯಾದಿಗಳಿಂದ ಈತನಿಗೆ ಸುಕವಿನಿಕರಪಿಕಮಾಕಂದ, ವಾತ್ಸಲ್ಯರತ್ನಾಕರ, ಸುಕವಿಜನಮನಃ ಪದ್ಮಿನೀರಾಜಹಂಸ ನೂತ್ನಕವಿತಾವಿಳಾಸ ಮುಂತಾದ ಬಿರುದುಗಳು ಇದ್ದಂತೆ ಕಾಣುತ್ತದೆ (I ೫೩). ಇವುಗಳನ್ನು ಅವನಿಗಿಂತ ಹಿಂದೆ ಇದ್ದ ಜೈನ ಕವಿಗಳ ಸಂಪ್ರದಾಯುವನ್ನು ಅನುಸರಿಸಿ ಆಯಾ ಕಥಾ ನಾಯಕನಿಗೂ ಸಂದರ್ಭಾನುಸಾರವಾಗಿ ಉಪಯೋಗಿಸಿದ್ದಾನೆ. ಈತ ನಿಗೆ ತರ್ಕಶಾಸ್ತ್ರದಲ್ಲಿ ಪೂರ್ಣಪಾಂಡಿತ್ಯವಿದ್ದಿತಂತೆ. (I ೨೧). ತನಗೆ

ಗುರು ವಿದ್ಯಾಬ್ಧಿ ನರೇಂದ್ರಸೇನಮುನಿಪಂ ತ್ರೈಲೋಕ್ಯಚಕ್ರೇಶ್ವರಂ
ಪರಮಶ್ರೀಜಿನನಿಷ್ಟದೈವನಮಳಂ ಶ್ರೀ ಜೈನಯೋಗೀಶ್ವರರ್
ಪರಮಾರ್ಥಂ ತನಗಾಳ್ದರುತ್ತಮವಿನೇಯರ್ ಬಂಧುವರ್ಗಂ...(I ೫೬)

ಎಂದು ಹೇಳಿಕೊಂಡಿದ್ದಾನೆ. ಆದ್ದರಿಂದ, ಈ ಗ್ರಂಥವನ್ನು ಬರೆದಾಗ ಪ್ರಾಯಶಃ ಆತನು ಸಂನ್ಯಾಸಿಯಾಗಿದ್ದನೆಂದು ತೋರುತ್ತದೆ. ನರೇಂದ್ರ ಸೇನ ಮುನಿಯು ತಪಸ್ಸು ಶ್ರುತ ಇವೆರಡನ್ನೂ ಉಳ್ಳವನೆಂದೂ (I, ೨೦), ತನ್ನ ಶಿಷ್ಯನಾದ ನಯಸೇನನಿಗೆ ತರ್ಕಶಾಸ್ತ್ರವನ್ನು

ಸಮಗ್ರವಾಗಿ ಹೇಳಿಕೊಟ್ಟು ಪ್ರಸಿದ್ಧನಾಗಿದ್ದನೆಂದೂ, ಸಿದ್ಧಾಂತದಲ್ಲಿ ಜಿನಸೇನಾಚಾರ್ಯರನ್ನೂ, ಶಾಸ್ತ್ರಪಾಂಡಿತ್ಯದಲ್ಲಿ ಪೂಜ್ಯಪಾದಮುನಿಗಳನ್ನೂ, ಷಟ್ತರ್ಕದಲ್ಲಿ ಪ್ರಸಿದ್ಧರಾದ ಸಮಂತಭದ್ರಮುನಿಗಳನ್ನೂ ಮೀರಿಸಿದ್ದನೆಂದೂ (I ೨೪), ಆತನಿಗೆ 'ಭುವನೈಕಮಲ್ಲನುತಪಾದಾಂಭೋಜ' ರಾದ ಗುಣಚಂದ್ರ ಪಂಡಿತರು 'ತ್ರೈವಿದ್ಯಮಹಾಭಿಧಾನ' ವನ್ನು 'ಕೂರ್ತಟ್ಟಿಕಱಿಂ' ಕೊಟ್ಟರೆಂದೂ, ನರೇಂದ್ರಸೇನ ಮುನಿಯಂಥ 'ವಾಗ್ಮೀಶ' ರೇ ಮತ್ತೊಬ್ಬರಿಲ್ಲವೆಂದೂ ಹೊಗಳಿದ್ದಾನೆ. ಈ ಗ್ರಂಥದ ಕೊನೆಯಲ್ಲಿ (XIV ೧೬೮)

> ಮುಳುಗುಂದದೊಳಿರ್ದು ಮಹೋ
> ಜ್ಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾ ।
> ವಳಿಗಱಿಪಿದಂ ಧರಿತ್ರೀ
> ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ॥

ಎಂದು ಹೇಳಿರುವುದರಿಂದ ನಯಸೇನನ ಸ್ಥಳವು ಧಾರವಾಡ ಡಿಸ್ಟ್ರಿಕ್ಟಿನಲ್ಲಿರುವ ಮುಳುಗುಂದವೆಂದು ತೋರುತ್ತದೆ. ಈತನ ಕಾಲವು ಹನ್ನೆರಡನೆಯ ಶತಮಾನದ ಆದಿಭಾಗವೆಂದು 'ಧರ್ಮಾಮೃತ' ದಿಂದಲೇ ಸುಲಭವಾಗಿ ನಿಶ್ಚಯಿಸಬಹುದು. ಹೇಗೆಂದರೆ, ಅವನು ತನ್ನ ಈ ಗ್ರಂಥವು

> ಗಿರಿಶಿಖಿವಾಯುಮಾರ್ಗಶಶಿಸಂಖ್ಯೆಯೊಳಾವಗಮೊಂದಿ ವರ್ತಿಸು
> ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ
> ಬೆರಸೆಸೆದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್
> ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕವಾರದೊಳ್ ॥

ಮುಗಿಯಿತೆಂದು ಹೇಳಿದ್ದಾನೆ. ಇದರ ಪ್ರಕಾರ ಧರ್ಮಾಮೃತದ ಕಾಲವು ಶಾಲೀವಾಹನ ಶಕ ೧೦೩೭ ಆಗುತ್ತದೆ. ಡಾ॥ ಸ್ವಾಮಿ ಕಣ್ಣು ಪಿಳ್ಳೆಯವರ ಇಂಡಿಯನ್ ಎಫೆಮೆರಿಸ್‌ನ ಪ್ರಕಾರ ಈ ಪದ್ಯದಲ್ಲಿ ಉಕ್ತವಾಗಿರುವ ನಂದನಸಂವತ್ಸರ ಮುಂತಾದವುಗಳು ಕ್ರಿ. ಶ. ೧೧೧೫ ರಲ್ಲಿ

ಬರುತ್ತವೆ. ಆದರೆ ೧೦೩೭ ಕ್ಕೆ ೭೮ ನ್ನು ಸೇರಿಸಿದರೆ ಕ್ರಿ. ಶ. ೧೧೧೫ ಆಗುತ್ತದೆ. ಕ್ರಿ. ಶ. ೧೧೧೫ ನೆಯ ವರ್ಷದಲ್ಲಿ ನಂದನ ಸಂವತ್ಸರಾದಿಗಳು ಬರುವುದಿಲ್ಲ. ಇದನ್ನು ನೋಡಿದರೆ ಮೇಲಣ ಪದ್ಯದಲ್ಲಿ ಮೊದಲನೆಯ ಪದವು ತಪ್ಪು ಬಿದ್ದಿರಬಹುದೋ ಏನೋ ಎಂಬ ಸಂದೇಹವು ಬರುತ್ತದೆ. ಆದರೆ ನಮಗೆ ದೊರೆತಿರುವ ಪ್ರತಿಗಳಲ್ಲೆಲ್ಲಾ ಇರುವುದು ಇದೊಂದೇ ಪಾಠ; ಅದೂ ಸ್ಪಷ್ಟವಾಗಿದೆ. ಇಂತಹ ಸಂದರ್ಭಗಳಲ್ಲಿ ಮಾತೃಕೆಯ ಪ್ರಮಾಣವಿಲ್ಲದೆ ಸ್ವೇಚ್ಛೆಯಾಗಿ ಮೂಲವನ್ನು ತಿದ್ದುವುದು ಸರಿಯಲ್ಲವೆಂದು ಭಾವಿಸಿ 'ಗಿರಿ' ಎಂಬ ಶಬ್ದವನ್ನೇ ಉಳಿಸಿದೆ. 'ಗಿರಿ' ಶಬ್ದಕ್ಕೆ 'ಏಳು' ಎಂದೇ ಅರ್ಥ. ಜೈನರಲ್ಲಿಯೂ ಅದಕ್ಕೆ 'ನಾಲ್ಕು' ಎಂದು ಅರ್ಥ ಎಲ್ಲಿಯೂ ಬಂದಿಲ್ಲ.

## ಧರ್ಮಾಮೃತ

ಈ ಗ್ರಂಥದಲ್ಲಿ, ಸಾಗಾರರು ಅಥವಾ ಗೃಹಸ್ಥರು ಆಚರಿಸಬೇಕಾದ ಸಮ್ಯಗ್ದರ್ಶನ ಮತ್ತು ಅದರ ಎಂಟು ಅಂಗಗಳನ್ನೂ [1] 'ಅಣುವ್ರತ'ಗಳಾದ ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹಗಳನ್ನೂ ಅನುಷ್ಠಾನ ಮಾಡಿ, ಹಿಂದೆ ಸದ್ಗತಿಯನ್ನು ಪಡೆದವರ ಕಥೆಗಳು—ಒಂದೊಂದು ಅಧ್ಯಾಯದಲ್ಲಿ ಒಂದೊಂದರಂತೆ—ಹದಿನಾಲ್ಕು ಅಧ್ಯಾಯಗಳಲ್ಲಿ ಉಕ್ತವಾಗಿವೆ. 'ಜಿನ ಮತದೊಳನಿತು ಸಾರಮದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳ್' ಎಂದು ಕವಿಯು ಹೇಳಿಕೊಂಡಿದ್ದಾನೆ. ಮಗಧರಾಜನಾದ ಶ್ರೇಣಿಕಮಹಾರಾಜನು [2] ವಿಪುಲಾದ್ರಿಗೆ ಬಂದಿದ್ದ ವರ್ಧಮಾನ ಸ್ವಾಮಿಯ ಮುಂದೆ ಗೌತಮರನ್ನು ಕುರಿತು "ದರ್ಶನ ನಿಶ್ಶಂಕಾದ್ಯಷ್ಟಗುಣಗಳು ಪಂಚಾಣು ವ್ರತಗಳು ಈ

---

1 ನಿಶ್ಶಂಕೆ, ನಿಷ್ಕಾಂಕ್ಷೆ. ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ.

2 ಇವನು ಧರ್ಮಾಸಕ್ತನಾದ ಬಬ್ಬ ವೃದ್ಧಮಗಧರಾಜನೆಂದು ಉತ್ತರಾಧ್ಯಯನ ಸೂತ್ರದಲ್ಲಿ (ಅಧ್ಯಾಯ ೨೦) ಉಕ್ತವಾಗಿದೆ. ಇವನನ್ನೇ ಬೌದ್ಧರು ಬಿಂಬಿಸಾರನೆಂದು ಕರೆದಿದ್ದಾರೆ.

ಪದಿನಾಲ್ಕು ಮಹಾರತ್ನಗಳೊಂದೊಂದರಲ್ಲಿಯೂ ಚರಿಸಿ ನಿರ್ವೃತಿಯನ್ನು ಪಡೆದ ಮಹಾ ಪುರುಷರ ಕಥೆಗಳನ್ನು ತನಗೆ ತಿಳಿಯುವಂತೆ ಹೇಳಬೇಕೆಂದು ಕೇಳಿಕೊಂಡಂತೆಯೂ ಆಗ ಗೌತಮರು ಈ ಕಥೆಗಳನ್ನು ಹೇಳಿದಂತೆಯೂ ತಿಳಿಸುತ್ತಾನೆ (I ೮-೪.)

ಗ್ರಂಥಾದಿಯಲ್ಲಿ, ಮಹಾವೀರ ಸಿದ್ಧರು ಆಚಾರ್ಯರು ಉಪಾಧ್ಯಾಯರು ಸಾಧುಗಳು ಯಕ್ಷಿ (ಗಜಮುಖ) ಯಕ್ಷ 'ವಾಕ್ಸುಂದರಿ' ಸರಸ್ವತಿ (?) ಇವರನ್ನು ಪ್ರಾರ್ಥಿಸಿ (I ೧-೮) ಅನಂತರ ಅರ್ಹದ್ಬಲ್ಯಾಚಾರ್ಯರಿಂದ ಅಕಳಂಕದೇವರ ವರೆಗಿನ ಗುರುಪರಂಪರೆಯನ್ನು ವಂದಿಸುತ್ತಾನೆ (I ೯-೩೮). ಇವರ ಪರಿಗಣನೆಯಲ್ಲಿ ಕಾಲಕ್ರಮವನ್ನು ಅನುಸರಿಸಿದಂತಿಲ್ಲ. ಆಮೇಲೆ, ತನ್ನ ಹಿಂದೆ ಇದ್ದ ಪ್ರಸಿದ್ಧ ಕವಿಗಳನ್ನೂ ಅವರ ಕಾವ್ಯಗಳ ವಿಶೇಷ ಗುಣಗಳನ್ನೂ

ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ
ದಸವೃಶಮಪ್ಪಪೂರ್ವರಸಮೆಯ್ದೆ ಗಜಾಂಕುಶನೊಳ್ಪುವೆತ್ತು ರಂ
ಜಿಸುವ ಸದರ್ಥದೃಷ್ಟಿ ಗುಣವರ್ಮನ ಜಾಣ್ ಕವಿರತ್ನನೋಜೆ ಶೋ
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳ್ ಮತ್ಕೃತಿಯೊಳ್ ನಿರಂತರಂ ॥

ಎಂಬ ಪದ್ಯದಲ್ಲಿ (I, ೩೯) ಹೇಳಿ

ರಸಭಾವಂ ಗಮಕಂ ಕಾ
ಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ ।
ಕುಸುಱಿಯ ಬಗೆ ........

ಇವಿಷ್ಟರಿಂದಲೂ ಶೋಭಿಸತಕ್ಕದ್ದೇ ಸತ್ಕಾವ್ಯವೆಂಬದಾಗಿಯೂ ಹೊಸಗನ್ನಡ ಬರೆಯುತ್ತೇವೆಂದು ಕನ್ನಡ ಮಾತಿನಲ್ಲಿ ಸಂಸ್ಕೃತವನ್ನು ತಂದು ಗಿಡಿಯಬಾರದೆಂದೂ ತನ್ನ ಅಭಿಪ್ರಾಯವನ್ನು ಸೂಚಿಸಿ (I ೪೦-೪೩) ದೋಷದರ್ಶಿಗಳಾದ ಜಡರನ್ನೂ, ಕುಕವಿಗಳನ್ನೂ ನಿಂದಿಸಿ (I ೪೩-೪೮),

ಕಾವ್ಯದಲ್ಲಿ ' ಸಹಜ ' ವಿಲ್ಲದಿದ್ದರೆ ಅದು ಶೋಭಿಸದೆಂದು

ಮೆಱೆಯಿಲ್ಲದೆ ಪೊಯ್ಯಿರ್ರಿಂ
ಬೆಳಗುವೆ ಧರೆ ಮೆಱುಗಿ ಕುದಿದು ಶಾಸ್ತ್ರದ ಬಲದಿಂ ।
ದಳಪಿಂ ಪೇಟ್ವೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ॥

ಉಪ್ಪಿಲ್ಲದೆ ಕೇಳೊಕ್ಕಳ
ತುಪ್ಪಮನೆಱೆದುಣ್ಬೆನೆಂಬೊಡುಂಬುಣಿಸೇಂ ಸ್ವಾ ।
ದಪ್ಪುದೆ ಸಹಜಂ ತನಗಿನಿ
ಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ ? ॥

ಎಂಬ ಪದ್ಯಗಳಲ್ಲಿ ಹೇಳಿ, ಕಾಳಿದಾಸನು ರಘುವಂಶದ ಆದಿಯಲ್ಲಿ ಹೇಳಿಕೊಂಡಿರುವಂತೆ

ಪೞಗೋಲೊಳ್ ವಾರ್ಧಿಯು ತಡಿ
ಗುಱದೆ ಭರಂಗೆಯ್ದು ಪೋಪೆನೆಂಬೆಗ್ಗನವೋಲ್ ।
ನೆಱೆ ಜಿನವಾಕ್ಯಾಂಬುಧಿಯುಮ
ನುಱದೀಸುವೆನೆಂಬ ಧಿಟ್ಟರೆವ್ಮಿಂ ಪೆಱರಾರ್ ॥

ಎಂದು ಸ್ವಾಹಂಕಾರಖಂಡನೆಯನ್ನು ಮಾಡಿಕೊಂಡು, ಪುಣ್ಯ ಚರಿತ್ರೆಯನ್ನು ಕಾವ್ಯದಲ್ಲಿ ಗ್ರಥಿಸುವುದರಿಂದ ಉಂಟಾಗುವ " ಕರ್ಮ ನಿರ್ಜರೆಯನಂತಿಂತುಂತೆನಲ್ ಬರ್ಕುಮೆ " ? ಎಂದು ಕೇಳಿ, ನರೇಂದ್ರ ಸೇನ ಮುನಿಯೇ ತನ್ನ ಗುರು, ಜಿನನೇ ಇಷ್ಟ ದೇವತೆ, ಜೈನಯೋಗೀ ಶ್ವರರೇ ಒಡೆಯರು, ಉತ್ತಮ ವಿನೇಯರೇ ನಂಟರು, ಎಂದು ಹೇಳಿ, ತನ್ನ ಬಿರುದುಗಳನ್ನು ತಿಳಿಸಿ, ಧರ್ಮಾಮೃತವನ್ನು ' ಅಱಿಯೆ ' ಪೇೞ್ವೆನೆಂದು ಪ್ರತಿಜ್ಞೆ ಮಾಡುತ್ತಾನೆ (I ೫೯). ಅನಂತರ ಶ್ರೇಣಿಕನಿಗೆ ಗೌತಮಮುನಿಗಳು ಈ ಕಥೆಗಳನ್ನು ಹೇಳಿದ ಸಂದರ್ಭವನ್ನು ವಿವರಿಸಿ ಕಥೆಹೇಳುವುದಕ್ಕೆ ಆರಂಭಿಸುತ್ತಾನೆ.

ಇದಕ್ಕೆ ಹಿಂದೆಯೇ ಆದಿಪಂಪನಿಂದ ಮೊದಲುಮಾಡಿಕೊಂಡು ಆದಿಪುರಾಣ, ಶಾಂತಿಪುರಾಣ, ಅಜಿತನಾಥಪುರಾಣ ಮುಂತಾದ ಚಂಪೂ ರೂಪವಾದ ಜೈನಪುರಾಣ ಗ್ರಂಥಗಳು ಹುಟ್ಟಿದ್ದುವು. ಆದರೆ ಇವು ಪುರಾಣಗಳನಿಸಿಕೊಂಡಿದ್ದರೂ ಪುರಾಣಶೈಲಿಯಲ್ಲಿಲ್ಲ ; ಪ್ರೌಢವಾದ ಸಂಸ್ಕೃತ ಚಂಪೂಕಾವ್ಯಶೈಲಿಯಲ್ಲಿವೆ. ಗದ್ಯದಲ್ಲಿ ಬರೆದ "ಭವ್ಯಕೋಟಿಗೆ ಅಱಿಪಿದ" ಚಾವುಂಡರಾಯನನ್ನು ಬಿಟ್ಟರೆ ಮಿಕ್ಕ ಪುರಾಣಕರ್ತೃಗಳೆಲ್ಲರೂ ವಿದ್ವಾಂಸರ ಮೆಚ್ಚಿಗೆಗೋಸ್ಕರ ಬರೆದರು. ಆದರೆ ಹನ್ನೆರಡನೆಯ ಶತಮಾನದ ಆರಂಭದಲ್ಲಿ ತಮ್ಮ ತಮ್ಮ ಧರ್ಮದ ತತ್ತ್ವಗಳನ್ನೂ, ಶ್ರೇಷ್ಠತೆಯನ್ನೂ ಜನಸಾಮಾನ್ಯಕ್ಕೆ ಸುಲಭವಾದ ಭಾಷೆಯಿಂದ ತಿಳಿಸಬೇಕೆಂಬ ಒಂದು ಸಂಕಲ್ಪವು ಕನ್ನಡ ವೀರಶೈವ ಕವಿಗಳಲ್ಲಿ ಬಂದಂತೆ ಜೈನಕವಿಗಳಲ್ಲಿಯೂ ಬಂದಂತೆ ತೋರುತ್ತದೆ. ನಯಸೇನನ ಧರ್ಮಾಮೃತವೂ ಬ್ರಹ್ಮಶಿವನ (ಕ್ರಿ. ಶ.1125) ಸಮಯಪರೀಕ್ಷೆಯೂ, ವೃತ್ತವಿಲಾಸನ (ಕ್ರಿ. ಶ. 1160) ಧರ್ಮಪರೀಕ್ಷೆಯೂ ಇದಕ್ಕೆ ನಿದರ್ಶನಗಳಾಗಿವೆ. ಸಾಮಾನ್ಯ ಜನರಿಗೆ ಅರ್ಥವಾಗುವಂತೆಯೂ, ರುಚಿಸುವಂತೆಯೂ ಗ್ರಂಥವನ್ನು ಬರೆಯಬೇಕೆಂಬ ಉದ್ದೇಶವಿದ್ದಿರಬಹುದಾದುದರಿಂದಲೇ

ಪೊಸಕನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡವುಂ ಚಿಂ।
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ॥ (I. ೪೧)

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ ತಂ।
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ॥ (I.೪೨)

ಎಂದು ತನ್ನ ಕಾಲದಲ್ಲಿ ಸಂಸ್ಕೃತಭೂಯಿಷ್ಠವಾಗಿ ಬರೆಯುತ್ತಿದ್ದವರ ಶೈಲಿಯನ್ನು ಹಳಿದು ತಾನು "ಸುದ್ದಗನ್ನಡ"ದಲ್ಲಿ ಬರೆಯುವ

ನೆಂದು ಸೂಚಿಸಿದ್ದಾನೆ. ಇದರಿಂದ ಸಂಸ್ಕೃತಶಬ್ದವನ್ನೇ ಪ್ರಯೋಗಿ
ಸುವುದಿಲ್ಲವೆಂದು ಆಂಡಯ್ಯನಂತೆ ಹಟಮಾಡಿಕೊಂಡು ನಯಸೇನನೂ
ಬರೆಯುವುದಕ್ಕೆ ಹೊರಟನೆಂದು ಹೇಳುವುದಕ್ಕಾಗುವುದಿಲ್ಲ. ಆಂಡ
ಯ್ಯನು ತನ್ನ ಉದ್ದೇಶ್ಯವನ್ನು ಬಹುಶ್ರಮಪಟ್ಟು ಸಾಧಿಸಿದನು.
ಆದರೂ ಸಂಸ್ಕೃತಶಬ್ದಪೂರ್ಣವಾದ ಗ್ರಂಥವು ಎಷ್ಟು ದುರವಗಾ
ಹವೋ ಅವನ ತದ್ಭವಪೂರ್ಣವಾದ ಕಾವ್ಯವೂ ಅಷ್ಟೇ, ದುರವಗಾಹ
ವಲ್ಲದಿದ್ದರೂ, ಕ್ಲಿಷ್ಟವೂ ವಿಚಿತ್ರವೂ ಆಯಿತು. ನಯಸೇನನು ಹೀಗೆ
ಸಂಸ್ಕೃತ ಶಬ್ದಗಳನ್ನೇ ಉಪಯೋಗಿಸುವುದಿಲ್ಲವೆಂದು ಹೊರಟವನಾಗಿ
ಕಾಣುವುದಿಲ್ಲ. ವ್ಯವಹಾರದಲ್ಲಿರುವ ಸಂಸ್ಕೃತಶಬ್ದಗಳನ್ನು ಉಪಯೋಗಿ
ಸುತ್ತ, ಕೋಶಸಹಾಯವಿಲ್ಲದೆ ಅರ್ಥವಾಗದ ಉದ್ಗ್ರಂಥಮಾತ್ರದೃಷ್ಟ
ವಾದ ಕ್ಲಿಷ್ಟ ಶಬ್ದಗಳನ್ನು ತ್ಯಜಿಸಿ, ಸಂಸ್ಕೃತಕಾವ್ಯ ಸರಣಿಯನ್ನು
ಬಿಟ್ಟು ಕನ್ನಡನುಡಿಯ ಮಾರ್ಗವನ್ನೇ ಅನುಸರಿಸಿ ಬರೆಯಬೇಕೆಂಬುದು
ಇವನ ಆಶಯವಾಗಿ ಕಾಣುತ್ತದೆ. ಆದ್ದರಿಂದಲೇ ಪ್ರಥಮಾಶ್ವಾಸದ
ಪೀಠಿಕಾ ಭಾಗವನ್ನು ಬಿಟ್ಟರೆ ಮುಂದೆ ಬಹುಮಟ್ಟಿಗೆ ಸುಲಭವಾದ
ಸಂಸ್ಕೃತ ಶಬ್ದಗಳನ್ನೇ ಬೆರೆಸಿಕೊಂಡು ಸಾಮಾನ್ಯ ಜನರಿಗೆ ಅರ್ಥ
ವಾಗುವಂಥ ಕನ್ನಡ ಶೈಲಿಯಲ್ಲಿ ತನ್ನ ಗ್ರಂಥವನ್ನು ಬರೆದಿದ್ದಾನೆ. ಕಂದ
ಗಳೂ ಪ್ರಸಿದ್ಧ ವೃತ್ತಗಳೂ ಹೆಚ್ಚು. ಅಪ್ರಸಿದ್ಧ ವೃತ್ತಗಳು ಅಪೂರ್ವ.
ಇವೆಲ್ಲಕ್ಕಿಂತಲೂ ಸ್ಪಷ್ಟವಾಗಿ ನಯಸೇನನ ಶೈಲಿಯ ವೈಲಕ್ಷಣ್ಯವು
ಕಂಡುಬರುವುದು ಅವನ ಗದ್ಯದಲ್ಲಿ. ಕನ್ನಡ ಚಂಪೂಗ್ರಂಥಗಳಲ್ಲಿ
ಬರುವ ಗದ್ಯವೆಂದರೆ ಕಾದಂಬರೀ ಹರ್ಷ ಚರಿತೆಗಳ ಶೈಲಿಯ ಛಾಯೆಯೇ
ಹೆಚ್ಚು; ಈ ವಿಧವಾದ ಶೈಲಿಗೂ ನಯಸೇನನ ಗದ್ಯ ಶೈಲಿಗೂ ಅಜಗಜಾಂ
ತರವಿರುವುದು. ಆದರಲ್ಲಿ ಹುಡುಕಿದರೂ ಪ್ರಾಚೀನ ಕವಿಪ್ರಿಯಗ
ಳಾದ ಪರಿಸಂಖ್ಯೆ, ವಿರೋಧಾಭಾಸ, ಶ್ಲೇಷೆ, ಅತ್ಯುಕ್ತಿ ಇವು ಸಿಕ್ಕುವು
ದಿಲ್ಲ. ಎಲ್ಲೆಲ್ಲಿ ನೋಡಿದರೂ ಉಪಮೆ; ಸರಪಣಿಯಂತೆ ಸಾಲು ಹಿಡಿದು
ಬರುವ ಉಪಮೆ; ಪ್ರತಿಯೊಬ್ಬನೂ ತನ್ನ ಸುತ್ತುಮುತ್ತಿನ ದೈನಂದಿನ
ಪ್ರಪಂಚದಲ್ಲಿ ನೋಡಿರಬಹುದಾದ ಸಂಗತಿಗಳ ಸಾದೃಶ್ಯ; ಎಲ್ಲರ

ಛಾಯಲ್ಲಿಯೂ ಇದ್ದಿರಬಹುದಾದ ಗಾದೆಗಳು, ಸಾಮತಿಗಳು. ಇವು ಹೆಚ್ಚಾಗಿಯೇ ಇರುವುದರಿಂದ ಒಂದುವಿಧವಾದ ಚಮತ್ಕಾರರಾಹಿತ್ಯವೂ, ನೀರಸತೆಯೂ, ಅನವೀಕೃತತ್ವವೂ ಪಂಡಿತರಾದವರಿಗೆ ತೋರಬಹುದು. ಆದರೆ ಸಾಮಾನ್ಯಜನರಿಗೆ ಇವು ಮನಸ್ಸಿಗೆ ಹಿಡಿಯುವಷ್ಟು ಕಾವ್ಯದ ಚಮತ್ಕಾರ ವಿಶೇಷಗಳೂ, ಅಲಂಕಾರ ವೈಚಿತ್ರ್ಯಗಳೂ ಹಿಡಿಯುವುದಿಲ್ಲ; ಆದ್ದರಿಂದಲೇ ಈ ಗ್ರಂಥವು ಕುಮಾರವ್ಯಾಸ ಭಾರತ, ತೊರವೆಯ ರಾಮಾಯಣ ಮುಂತಾದ ಗ್ರಂಥಗಳಂತೆ ಜನಸಾಮಾನ್ಯ ರಂಜಕವಾಗಿದ್ದಂತೆ ತೋರುತ್ತದೆ. ಇವುಗಳಲ್ಲಿ ಕಂಡುಬರುವ ಪಾಠಭೇದಗಳೂ, ಅಧಿಕ ಪಾಠಗಳೂ, ಪ್ರಕ್ಷೇಪಗಳೂ ಈ ಗ್ರಂಥಗಳು ಜನರಲ್ಲಿ ಬಹಳವಾಗಿ ಬಳಕೆಯಲ್ಲಿದ್ದಿರಬೇಕೆಂಬುದಕ್ಕೆ ಸಾಕ್ಷಿಗಳಾಗಿವೆ.

ಕನ್ನಡದ ಶಬ್ದರೂಪಗಳನ್ನು ಉಪಯೋಗಿಸುವುದರಲ್ಲಿಯೂ ನಯಸೇನನು ವ್ಯಾಕರಣಗಳನ್ನೂ ಪೂರ್ವಕವಿಪ್ರಯೋಗಗಳನ್ನೂ ಇಟ್ಟುಕೊಂಡು ಶುದ್ಧ ಹಳಗನ್ನಡ ಮಾತ್ರವನ್ನೇ ಅಂಗೀಕರಿಸಿಲ್ಲ. ಆವನು (ತನ್ನ ಕಾಲದ) ಹೊಸಕನ್ನಡದಲ್ಲಿ ಕಾವ್ಯವನ್ನು ಬರೆಯುವನೆಂದು ಸೂಚಿಸಿದ್ದಾನೆ; ಆದ್ದರಿಂದಲೇ ಇವನ ಗ್ರಂಥದಲ್ಲಿ ಅಱಕುಳ ಕ್ಷಳಘಟಿತವಾದ ಶಬ್ದಗಳು ಪ್ರಾಸಸ್ಥಾನಗಳಲ್ಲಿ ಮಿಳಿತವಾಗಿ ಕಂಡುಬರುತ್ತವೆ. ಅರಿಸಮಾಸಗಳು ದೊರೆಯುತ್ತವೆ. 'ಅರ್ತಿ' 'ಬಿರ್ದು' 'ಎರ್ದು' 'ಚೆಲುವು' (I. 2.) ಮುಂತಾದ ಕೆಲವು ಮಧ್ಯಕನ್ನಡದ ರೂಪಗಳು ಸಿಕ್ಕುತ್ತವೆ. ಇಲ್ಲಿ 'ಅರ್ತಿ' 'ಬಿರ್ದು' 'ಎರ್ದು' ಎಂಬ ಈ ರೂಪಗಳನ್ನು ಕುರಿತು ಸ್ವಲ್ಪ ವಿಚಾರಮಾಡಬೇಕು.

ರೇಫಕ್ಕೂ ಳಕಾರಕ್ಕೂ ಮಧ್ಯಸ್ಥವಾಗಿ ಉಚ್ಚಾರವಾಗುವ ಱಕಾರವು ಕನ್ನಡದಲ್ಲಿ ಸುಮಾರು ಕ್ರಿ. ಶ. ೯೦೦ರವರೆಗೆ ಸ್ವಸ್ವರೂಪದಲ್ಲಿದ್ದು ಅಲ್ಲಿಂದ ಮುಂದೆ ಕೆಲವು ಕಡೆ ರೇಫವೂ ಮತ್ತೆ ಕೆಲವು ಕಡೆ ಳಕಾರವೂ ಆದಂತೆ ಕಂಡುಬರುತ್ತದೆ. ಆದ್ದರಿಂದ 'ಅರ್ದಿದುದು', 'ಬಿರ್ದು,' 'ಏಳು,' 'ಏಳ್ಗ,' 'ಗರ್ದೆ' ಎಂಬ ರೂಪಗಳು ಕ್ರಿ. ಶ. ೧೦೧೯ನೆಯ

ಒಂದು ಶಾಸನದಲ್ಲಿ ದೊರೆಯುತ್ತವೆ. (ಇವಕ್ಕೆ ಅಱ್ದುದು, ಬಿಱ್ದು, ಏಱು, ಏಱ್ಗೆ, ಗಱ್ದೆ ಎಂಬಿವು ಪ್ರಾಚೀನ ರೂಪಗಳು.) ಇದರಂತೆ ಬಳಿ, ಗಳ್, ಗಱ್ ಎಂಬಿವು ಕ್ರಿ. ಶ. ೧೦೪೮ ನೆಯ ಒಂದು ಶಾಸನದಲ್ಲಿಯೂ, ನೆಗೞ್, ಸಗಳ್, ಬಳಿ, ಕಱ್ತು, ಎಂಬಿವು ಕ್ರಿ. ಶ. ೧೦೭೫ ನೆಯ ಒಂದು ಶಾಸನದಲ್ಲಿಯೂ, ಪೊಗಳ್, ನೆಗರ್ತ್ತ್, ಪಾಳ್, ಅಳಿ, ಎಂಬಿವು ಕ್ರಿ. ಶ. ೧೦೮೩ ನೆಯ ಒಂದು ಶಾಸದಲ್ಲಿಯೂ, ಕೞರ್, ಅಳಿ ಪೊಗಳ್ತ್ತು, ನೆಗಳ್ತ್ತು ಇವು ೧೧೮೧ ನೆಯ ಒಂದು ಶಾಸನದಲ್ಲಿಯೂ, 'ಎಳ್ ನಗರ್ ನಾಡೆೞ್ಪತ್ತು' ಎಂಬುದು ಕ್ರಿ. ಶ. ೮೯೦ ನೆಯ ಒಂದು ಶಾಸನದಲ್ಲಿಯೂ, (ಬೌರಿಂಗ್ ಪೇಟೆ ೧೭), 'ಎಡವಲೆಯೆೞ್ಪತ್ತುಂ' ಎಂಬುದು ಕ್ರಿ. ಶ. ೧೧೧೫ ನೆಯ ಒಂದು ಶಾಸನದಲ್ಲಿಯೂ, (ಚಿಕ್ಕಮಗಳೂರು ೭೮) ದೊರೆಯುತ್ತವೆ.

ಕೇಶಿರಾಜನ ಶಬ್ದಮಣಿದರ್ಪಣದಿಂದಲೂ ಇದನ್ನು ಊಹಿಸಬಹುದು. ಅವನ ಕಾಲಕ್ಕೆ ಆಗಲೇ (ಸುಮಾರು ೧೨೬೦) ೞಕಾರವು (ಉಚ್ಚಾರಣೆಯಲ್ಲಿ) ನಷ್ಟವಾಗಿ ಹೋಗಿತ್ತು. ಇದನ್ನು ಅವನಿಗಿಂತ ಸುಮಾರು ೧೫೦ ವರ್ಷಗಳ ಹಿಂದೆ ನಯಸೇನನಿಗೆ ಸಮಕಾಲಿಕನಾಗಿ ಇದ್ದ ಹರಿಹರನು

> ನೋಡುವೊಡೊಂದಕ್ಕರಮದು
> ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ ।
> ಕೂಡೆ ಕವಿತ್ರತಿ ವಿಚಾರಿಸ
> ಬೇಡದಱಿಂ ಱೞಕುಳಕ್ಷಳಂಗಳನಿದಱೊಳ್ ॥ (ಗಿರಿಜಾ ಕಲ್ಯಾಣ)

ಎಂದು ಹೇಳಿದ್ದಾನೆ. ಕೇಶಿರಾಜನು ಈ ಸಂಗತಿಯನ್ನು ಇಷ್ಟು ಸ್ಪಷ್ಟವಾಗಿ ಹೇಳಿಲ್ಲ. ಆದರೂ ಅವನು ೞಕಾರ ಶುದ್ಧಿಗಾಗಿ ಶ್ರಮಪಟ್ಟಿರುವುದರಿಂದ ಅವನ ಕಾಲಕ್ಕೆ ೞಕಾರಘಟಿತವಾದ ಶಬ್ದಗಳು ಯಾವ ರೂಪದಲ್ಲಿದ್ದುವು ಎಂಬುದನ್ನು ತಿಳಿಯಬಹುದು. (೧) ಱಕಾರವನ್ನು 'ಱ' ಕಾರವೆಂದೇ ವ್ಯವಹಾರ ಮಾಡುವಾಗ ೞಕಾರವನ್ನು

ಮಾತ್ರ ಱೞ (ಱಕಾರದಂತೆ ಇರುವ ೞಕಾರ) ಎಂದು ವಹರಿಸುತ್ತಾನೆವ್ಯ (ಸೂತ್ರ ೧೮ ಇತ್ಯಾದಿ). ಅದನ್ನು ಆಗಲೂ ಈಗಿನಂತೆಯೇ 'ರಳ' ಎಂದು ಕರೆಯುತ್ತಿದ್ದಿರಬಹುದು. (೨) ಜನರು ೞಕಾರಕ್ಕೂ ಳಕಾರಕ್ಕೂ ಭೇದ ಮಾಡದೆ ೞಕಾರವನ್ನು ಳಕಾರದಂತೆ ಉಚ್ಚರಿಸುತ್ತಿದ್ದದ್ದರಿಂದ ಯಾವ ಯಾವ ಶಬ್ದಗಳಲ್ಲಿ ೞಕಾರವಿರಬೇಕೆಂಬುದನ್ನೂ, ಯಾವ ಯಾವ ಶಬ್ದಗಳಲ್ಲಿ ಳಕಾರವಿತ್ತೆಂಬುದನ್ನೂ ತೋರಿಸಿ ಒಂದು ಪಟ್ಟಿಯನ್ನು ಕೊಟ್ಟಿದ್ದಾನೆ. (೩) ಕೆಲವು ಕಡೆಗಳಲ್ಲಿ ಳಕಾರವಿರಬೇಕೋ ೞಕಾರವಿರಬೇಕೋ ಅವನಿಗೇ ಸಂದೇಹ (ಸೂತ್ರ ೨೨-೨೫). (೪) ೞಕಾರವು ಸೇರಿದ ಸಂಯುಕ್ತಾಕ್ಷರಗಳನ್ನೂ ರೇಫ ಸೇರಿ ಆದ ಸಂಯುಕ್ತಾಕ್ಷರವನ್ನೂ ಪ್ರಾಸಸ್ಥಾನದಲ್ಲಿ "ಪಿರಿಯರು" ಉಪಯೋಗಿಸುತ್ತಿದ್ದರು.[1] (ಸೂತ್ರ ೨೪). ಪ್ರಾಸಸ್ಥಾನದಲ್ಲಿ ಸಮಾನಾಕ್ಷರಗಳು ಇರಬೇಕಾದದ್ದನ್ನು ನೋಡಿದರೆ, ಮೇಲಣ ಸಂದರ್ಭದಲ್ಲಿ ಕವಿಗಳು ೞಕಾರ ಘಟಿತವಾದ ಸಂಯುಕ್ತಾಕ್ಷರಗಳಲ್ಲಿಯೂ ೞಕಾರಕ್ಕೆ ಬದಲಾಗಿ ರೇಫವನ್ನೇ ಉಪಯೋಗಿಸುತ್ತಿದ್ದಂತೆ ಊಹಿಸಬಹುದಾಗಿದೆ. (೫) ಉರ್ದು, ಬಿರ್ದು, ನುರ್ಗಿದುದು, ತರ್ಗಿದುದು ಮುಂತಾದ ಶಬ್ದಗಳು ಸರೇಫ ಪದಗಳು (ಉದ್ದು, ಬಿದ್ದು, ನುಗ್ಗಿದುದು, ತಗ್ಗಿದುದು ಇತ್ಯಾದಿಯಾಗಿ ದಕಾರದ್ವಯ ಅಥವಾ ಗಕಾರದ್ವಯ ಘಟಿತವಾದವುಗಳಲ್ಲ) ಎಂದು ಸೂಚಿಸಿದ್ದಾನೆ (ಸೂತ್ರ ೩೩-೩೮). ಇದರಿಂದ ಅವನ ಕಾಲಕ್ಕೆ ಉರ್ದು ಮುಂತಾದ ಶಬ್ದಗಳಲ್ಲಿ ೞಕಾರವು ರೇಫವಾಗಿ ಪರಸವರ್ಣತೆಯನ್ನು (ಉದ್ದು ಇತ್ಯಾದಿಯಾಗಿ) ಪಡೆದಿತ್ತೆಂದು ಸೂಚಿಸಿ ಕೇಶಿರಾಜನು ('ಉೞ್ದು' ಮುಂತಾದ ಪ್ರಾಚೀನರೂಪವನ್ನು ಎತ್ತದೆ,) ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ 'ಉದ್ದು' ಇತ್ಯಾದಿಗಳನ್ನು ತಪ್ಪೆಂದು ಖಂಡಿಸಿ, 'ಉರ್ದು' ಮುಂತಾದ ಮಧ್ಯಮ ರೂಪಗಳೇ ಸರಿಯೆಂದು ಹೇಳಿದ ಹಾಗಾಯಿತು. ಆದರೆ ಅವನೇ 'ಅತ್ತಿ ಎಂದು ಪ್ರೀತಿ; ಅದನ್ನರ್ತಿಯೆಂದು ಪೇೞ್ವುದಬದ್ಧಂ' ಎನ್ನುತ್ತಾನೆ,

[1] ನೇಮಿಚಂದ್ರನು ಕೞ್ತಲೆ, ಮಾರ್ತಂಡ, ಸಾರ್ತಂದರ್, ಪೊೞ್ತಱೊಳ್ ಎಂಬ ಶಬ್ದಗಳನ್ನು ಪ್ರಾಸಸ್ಥಾನಗಳಲ್ಲಿ ಪ್ರಯೋಗಿಸಿದ್ದಾನೆ; ಲೀಲಾವತಿ V ೧೧೧.

(ಸೂತ್ರ ೨೩೩; ಪಟ್ಟಿ). ಉದುರ್ಗ, ಬಿದುರ್ಗ ಇತ್ಯಾದಿಯಾದ ರೇಫ ಘಟಿತ ರೂಪಗಳು ಸಾಧುವೆಂದು ಹೇಳಿ ಅದರಂತೆಯೇ ಇರುವ 'ಅರ್ತಿ' ಎಂಬ ರೂಪವು ಅಶುದ್ಧವೆಂದು ಹೇಳಿರುವುದಕ್ಕೆ ಕಾರಣವು ಸ್ಪಷ್ಟವಾಗಿಲ್ಲ. ಪ್ರಾಯಶಃ ಅವನಿಗಿಂತ ಹಿಂದೆ ಇದ್ದ ಕವಿಗಳಲ್ಲಿ ಅವನಿಗೆ ಆ ರೂಪ ಸಿಕ್ಕಲಿಲ್ಲವೆಂದು ತೋರುತ್ತದೆ. ಆದರೆ ಅವನ ಪ್ರಮಾಣದ ಮೇಲೆ, ಈ ರೂಪ ಸಿಕ್ಕುವ ಕಡೆ ಅದನ್ನು ಅತ್ತಿ ಎಂದು ತಿದ್ದುವುದು ಸರಿಯಾಗಿ ತೋರಲಿಲ್ಲ. ಧರ್ಮಾಮೃತದ ಲಿಖಿತ ಪ್ರತಿಗಳಲ್ಲಿ ಈ ಶಬ್ದವು ಅರ್ತಿ, ಅರ್ತ್ಥಿ, ಅರ್ಥಿ, ಇತ್ಯಾದಿಯಾಗಿ ರೇಫದೊಡನೆಯೇ ದೊರೆತದ್ದರಿಂದ, ನಯಸೇನನು ತನ್ನ ಕಾಲಕ್ಕೆ ವ್ಯವಹಾರದಲ್ಲಿ ಇದ್ದಿರಬಹುದಾದ ರೇಫಘಟಿತವಾದ 'ಅರ್ತಿ' ಮುಂತಾದ ರೂಪಗಳನ್ನೇ ಉಪಯೋಗಿಸಿರಬೇಕೆಂದು ನಿಷ್ಕರ್ಷಿಸಿ ಇಂಥ ರೂಪಗಳನ್ನೇ ಈ ಗ್ರಂಥದಲ್ಲಿ ಉಪಯೋಗಿಸಿದೆ.

---

# ಕಥಾ ಸಾರಾಂಶ

---

## ಹತ್ತನೆಯ ಆಶ್ವಾಸ.

### ಅಹಿಂಸಾವ್ರತದ ಕಥೆ.

ಮಾಳವದೇಶದ ಉಜ್ಜೈನೀ ಪಟ್ಟಣದಲ್ಲಿ ವಿಶ್ವಂಧರ ಮಹಾರಾಜನೆಂಬ ದೊರೆಯು ಆಳುತ್ತಿದ್ದನು. ಅಲ್ಲಿ ಗುಣಪಾಲನೆಂಬ ರಾಜಶ್ರೇಷ್ಠಿ ಇದ್ದನು. ಅವನಿಗೆ ಧನಶ್ರೀಯೆಂಬ ಹೆಂಡತಿಯೂ ಸುಬಂಧುಶ್ರೀಯೆಂಬ ಮಗಳೂ ಇದ್ದರು. ಒಂದು ದಿನ ವಿಶ್ವಂಧರ ಮಹಾರಾಜನು ಆನೆಯ ಮೇಲೆ ಹೋಗುತ್ತ, ಉದ್ಯಾನವನದಲ್ಲಿ ಉಯ್ಯಾಲೆಯಾಡುತ್ತಿದ್ದ ಸುಬಂಧುಶ್ರೀಯನ್ನು ಕಂಡು ಮೋಹಿಸಿ ಅವಳನ್ನು ಮದುವೆ ಮಾಡಿಕೊಡಬೇಕೆಂದು ಗುಣಪಾಲನಿಗೆ ಹೇಳಿ ಕಳುಹಿಸಿದನು. 'ದೊರೆಯು ಅಪೇಕ್ಷಿಸಿ ಹೇಳಿಕಳುಹಿಸಿದ ಮೇಲೆ ಪ್ರತಿ ಹೇಳುವುದಕ್ಕಾದೀತೇ ?' ಎಂದು ಸೆಟ್ಟಿಯು ಹೆಗ್ಗಡೆಗಳೊಡನೆ ಲೋಕಾಭಿರಾಮವಾಗಿ ಮಾತನಾಡಿ ಈ ವಿಚಾರದಲ್ಲಿ ತನ್ನ ಹೆಂಡತಿಯ ಮತ್ತು ಮಗಳ ಅಭಿಪ್ರಾಯವೇನೆಂದು ವಿಚಾರಮಾಡಿದನು. ಅವರು ಐಶ್ವರ್ಯಕ್ಕೋಸ್ಕರ ಮಿಥ್ಯಾದೃಷ್ಟಿಯೊಡನೆ ಮದುವೆಯನ್ನು ಸ್ವಲ್ಪವೂ ಒಪ್ಪಲಿಲ್ಲ. ತನ್ನ ಅಭಿಪ್ರಾಯವೂ ಅದೇ ಆಗಿದ್ದುದರಿಂದ ರಾಜನನ್ನು ಪ್ರತಿಭಟಿಸಿ ನಿಲ್ಲಲಾರದೆ, ತನ್ನ ಧನ ಕನಕ ವಸ್ತು ವಾಹನಗಳನ್ನೆಲ್ಲಾ ಬಿಸಾಟು ಮಗಳನ್ನೂ ಗರ್ಭಿಣಿಯಾಗಿದ್ದ ಹೆಂಡತಿಯನ್ನೂ ತನ್ನ ಪ್ರಾಣಮಿತ್ರನಾದ ಶ್ರೀದತ್ತನೆಂಬವನಲ್ಲಿ ಗೋಪ್ಯವಾಗಿರಿಸಿ ಯಾರಿಗೂ ತಿಳಿಯದಂತೆ ಆ ಊರನ್ನೇ ಬಿಟ್ಟು ಹೋದನು. ಮಹಾರಾಜನು ಈ ವರ್ತಮಾನವನ್ನರಿತು, ಧರ್ಮರಕ್ಷಣೆಗೋಸ್ಕರ ಆಸ್ತಿಯನ್ನೆಲ್ಲಾ ತೊರೆದು ಹೋಗಬೇಕಾದರೆ ಆ ಧರ್ಮವೇ ಶ್ರೇಷ್ಠ

ಮಾದದ್ದಾಗಿಸಬೇಕೆಂದು ಅದರಲ್ಲಿ ನಂಬಿಕೆ ಹುಟ್ಟಿ ಗುಣಪಾಲನನ್ನು ಹೇಗಾದರೂ ಮಾಡಿ ಹುಡುಕಿ ತರಬೇಕೆಂದು ತನ್ನ ಭಟರಿಗೆ ಅಪ್ಪಣೆ ಮಾಡಿದನು.

ಒಂದು ದಿವಸ ಶಿವಗುಪ್ತರೆಂಬಾಚಾರ್ಯರು ತ್ರಿಗುಪ್ತರೆಂಬ ತಮ್ಮ ಶಿಷ್ಯರೊಡನೆ ಚರಿಗೆ ಮಾಡಿಕೊಂಡು ಬಂದು ಶ್ರೀದತ್ತನ ಮನೆಯಲ್ಲಿ ಉಳಿದರು. ಅವರನ್ನು ಧನಶ್ರೀಯು ನಮಸ್ಕರಿಸಿ ಹೋಗಲು ಅವಳ ಸಲ್ಲಕ್ಷಣಗಳನ್ನೂ ಕಂದಿದ ಮುಖವನ್ನೂ ನೋಡಿ ತ್ರಿಗುಪ್ತರು ತಮ್ಮ ಗುರುಗಳನ್ನು 'ಈಕೆ ಯಾರು ? ಇವಳು ಏಕೆ ಈ ಹೀನಸ್ಥಿತಿಯಲ್ಲಿದ್ದಾಳೆ ?' ಎಂದು ಕೇಳಲು ಶಿವಗುಪ್ತರು ಅವಳ ವೃತ್ತಾಂತವನ್ನು ತಿಳಿಸಿ ಆಕೆಯ ಹೊಟ್ಟೆಯಲ್ಲಿ ಹುಟ್ಟತಕ್ಕ ಮಗನು ಮುಂದೆ ರಾಜನಾಗುವನೆಂದು ಹೇಳಿದರು. ಅಪರ ಕಾಲೊತ್ತುತ್ತ ಅಲ್ಲಿಯೇ ಕುಳಿತಿದ್ದ ಶ್ರೀದತ್ತನು ಇದನ್ನು ಕೇಳಿ 'ಇವಳ ಹೊಟ್ಟೆಯಲ್ಲಿ ಹುಟ್ಟುವ ಮಗನು ಈ ಭೂಮಂಡಲಕ್ಕೆ ಅಧಿಪತಿಯಾಗುತ್ತಾನೆಯೇ ! ಹಾಗಾದರೆ ಅವನನ್ನು ಹೇಗಾದರೂ ನಾಶಮಾಡಿಬಿಡಬೇಕು' ಎಂದು, ಪೂರ್ವವೈರದಿಂದ ದ್ವೇಷವನ್ನು ತಂದುಕೊಂಡು, ಧನಶ್ರೀಗೆ ಪ್ರಸವವಾಗಲು ಆಕೆಗೆ ಗರ್ಭಸ್ರಾವವಾಯ್ತೆಂದು ವರ್ತಮಾನವನ್ನು ಹುಟ್ಟಿಸಿ ಮಗುವನ್ನು ಕದ್ದು ಅದನ್ನು ಕೊಲ್ಲುವಂತೆ ಒಬ್ಬ ಹೊಲೆಯನಿಗೆ ಒಪ್ಪಿಸಿದನು. ಆದರೆ ಆ ಹೊಲೆಯನಿಗೆ ಸುಂದರವಾದ ಮಗುವನ್ನು ಕೊಲ್ಲಲು ಮನಸ್ಸು ಬಾರದೆ ನಿರ್ಜನವಾದ ಕಾಡಿಗೆ ತೆಗೆದುಕೊಂಡು ಹೋಗಿ ಅಲ್ಲಿ 'ತೀಕ್ಷ್ಣವಾದ ಈ ಬಿಸಿಲಿನಲ್ಲಿ ಅದೇ ಸತ್ತು ಹೋಗುತ್ತದೆ. ನಾನೇಕೆ ಕೈಯಾರ ಕೊಂದು ಪಾಪ ಕಟ್ಟಿಕೊಳ್ಳಲಿ !' ಎಂದು ಅದನ್ನು ಮಲಗಿಸಿ ಹೋದನು. ಆ ಕಾಡಿನಲ್ಲಿಯೇ ಶ್ರೀದತ್ತನ ಮೈದುನನಾದ ಇಂದ್ರದತ್ತ ಸೆಟ್ಟಿಯು ವ್ಯಾಪಾರಕ್ಕೆ ಹೋಗುತ್ತಾ ಬೀಡುಬಿಟ್ಟಿರಲು, ಅವನ ಕಡೆಯವರು ಸೌದೆ ಆರಿಸಿಕೊಳ್ಳುವುದಕ್ಕಾಗಿ ಬಂದು ಈ ಮಗುವನ್ನು ಕಂಡು ಅದನ್ನು ತೆಗೆದುಕೊಂಡು ಹೋಗಿ ತಮ್ಮ ಒಡೆಯನಿಗೆ ಕೊಟ್ಟರು. ಇಂದ್ರದತ್ತನು ಅದನ್ನು ಸಂತೋಷದಿಂದ ಮನೆಗೆ ತಂದು ತನ್ನ ಹೆಂಡತಿ

ಯಾದ ರಾಧೆಯೇ ಆ ಮಗುವನ್ನು ಹೆತ್ತಳೆಂದು ವರ್ತಮಾನವನ್ನು ಹುಟ್ಟಿಸಿ ಆ ಮಗುವನ್ನು ಸಾಕುತ್ತ ಬಂದನು.

ಗುಣಪಾಲಸೆಟ್ಟಿಯು ಈ ವರ್ತಮಾನವನ್ನು ಕೇಳಿ ತನ್ನ ತಂಗಿಯಾದ ರಾಧೆಗೆ ಇಷ್ಟು ದಿವಸವೂ ಮಕ್ಕಳಿಲ್ಲದೆ ಈಗ ಮಕ್ಕಳಾದದ್ದಕ್ಕೆ ಆಶ್ಚರ್ಯಪಡುತ್ತ ಧನಶ್ರೀಯ ಮಗುವು ಇವರಿಗೆ ಸಿಕ್ಕಿರಬಹುದೇ ಎಂದು ಸಂದೇಹಪಟ್ಟು ತಂಗಿಯ ಮನೆಗೆ ಬಂದು ನೋಡಲು, ಮಗುವು ಗುಣಪಾಲಸೆಟ್ಟಿಯ ಅಚ್ಚೊತ್ತಿದಂತಿತ್ತು. ಆದ್ದರಿಂದ ಅದನ್ನು ಕೊಲ್ಲಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ತಂಗಿಗೆ ಬಹುದಿವಸದ ಮೇಲೆ ಗಂಡು ಮಗುವಾದದ್ದಕ್ಕಾಗಿ ಸಂತೋಷವನ್ನು ನಟಿಸುತ್ತ ಅವರಿಂದ ಮಗು ಸಿಕ್ಕಿದ ಬಗೆಯನ್ನು ತಿಳಿದುಕೊಂಡನು. ಅನಂತರ ತಂಗಿಯನ್ನೂ ಅಳಿಯನನ್ನೂ ತನ್ನ ಊರಿಗೆ ಕರೆದುಕೊಂಡು ಹೋಗಿದ್ದು ಅಲ್ಲಿ ದಾದಿಯ ಸಹಾಯದಿಂದ ಮಗುವನ್ನು ಕದ್ದು, ಅದು ಸತ್ತಿತೆಂಬ ವರ್ತಮಾನವನ್ನು ಹರಡಿ, ಅದನ್ನು ಕೊಲ್ಲುವಂತೆ ಒಬ್ಬ ಮಾದಿಗನ ಕೈಗೆ ಕೊಟ್ಟನು. ಅವನು ಕರೆದುಕೊಂಡು ಹೋಗುತ್ತ ಅದರ ಆಟ ಪಾಟಗಳಿಗೆ ಮನ ಸೋತು ಅದನ್ನು ಒಂದು ಹೊಳೆಯ ದಡದಲ್ಲಿದ್ದ ಮರಳ ದಿಣ್ಣೆಯ ಮೇಲೆ ಮಲಗಿಸಿ ಹೋದನು. ಅಲ್ಲಿ ನೀರು ಕುಡಿಯುವುದಕ್ಕೆಂದು ಬಂದ ಹಸುಗಳು ಆ ಮಗುವನ್ನು ಕಂಡು ಅದರ ಸುತ್ತಮುತ್ತಲೂ ಮುತ್ತಿಕೊಂಡು ಕೆನೆಯುತ್ತ ಅದನ್ನು ಬಿಟ್ಟು ಹೋಗದಿರಲು ದನಕಾಯುವವರು ಹಸುಗಳನ್ನು ಹುಡುಕಿಕೊಂಡು ಬಂದು, ಮಗುವನ್ನು ಕಂಡು ಅದನ್ನು ತಮ್ಮ ಒಡೆಯನಾದ ಗೋವಿಂದನೆಂಬ ತುರುಗಾಬನಿಗೆ ಕೊಟ್ಟರು. ಅವನು ಅದನ್ನು ತನ್ನ ಹೆಂಡತಿಯಾದ ನಂದೆಯ ಕೈಗೆ ಕೊಟ್ಟು ಮಗುವಿಗೆ ಧನಕೀರ್ತಿಯೆಂದು ಹೆಸರಿಟ್ಟು ಸಾಕುತ್ತ ಬಂದನು.

ಕೆಲವು ಕಾಲ ಕಳೆಯಿತು. ಆಮೇಲೆ ಒಂದು ದಿನ ಶ್ರೀದತ್ತನು ತನ್ನ ಮಗಳ ಮದುವೆಗಾಗಿ ತುಪ್ಪವನ್ನು ಕೊಳ್ಳಲೆಂದು ತುರುಪಟ್ಟಿಗೆ ಬಂದು ಅಲ್ಲಿದ್ದ ಧನಕೀರ್ತಿಕುಮಾರನನ್ನು ನೋಡಿದನು. ಕೂಡಲೆ, ಅವನು ಗುಣಪಾಲಸೆಟ್ಟಿಯ ಮಗನೆಂದು ನಿಶ್ಚಯಿಸಿ, ಅವನೊಡನೆ ತನ್ನ

ಮಗನಿಗೆ ಒಂದು ಕಾಗದವನ್ನು ಬರೆದುಕೊಟ್ಟು ಕಳುಹಿಸಿ ಅದರಲ್ಲಿ, ಧನಕೀರ್ತಿಯನ್ನು ಕಂಡಕೂಡಲೆ ಅವನನ್ನು ಕೊಂದು ಮನೆಯ ಹಿತ್ತಿಲಲ್ಲಿ ಹೂಳಬೇಕೆಂದು ತಿಳಿಸಿದನು. ಅವನು ಉಜ್ಜಯಿನಿಗೆ ಬಂದು ಅಲ್ಲಿ ಸಿಂಪಾನದಿಯ ತಡಿಯಲ್ಲಿ ಮಲಗಿರಲು, ಅಲ್ಲಿ ಮೃಗಸೇನೆಯೆಂಬ ಸೂಳೆ ತಿರುಗಾಡುತ್ತ ಬಂದು ಅವನಲ್ಲಿದ್ದ ಓಲೆಯನ್ನು ನೋಡಿ ವ್ಯಸನ ಪಟ್ಟು, ಅದಕ್ಕೆ ಬದಲಾಗಿ 'ಇವನನ್ನು ಕಂಡ ಕೂಡಲೆ ನಿನ್ನ ತಂಗಿಯನ್ನು ಕೊಟ್ಟು ಮದುವೆ ಮಾಡಿಬಿಡು' ಎಂದು ಬೇರೊಂದು ಓಲೆಯನ್ನು ಬರೆದಿಟ್ಟಳು. ಅದರಂತೆ ಶ್ರೀದತ್ತನ ಮಗನಾದ ಮಹಾಬಲನು ತನ್ನ ತಂಗಿ ಶ್ರೀಮತಿಯನ್ನು ಧನಕೀರ್ತಿಗೆ ಕೊಟ್ಟು ಮದುವೆ ಮಾಡಿದನು.

ಶ್ರೀದತ್ತನು ಹಿಂತಿರುಗಿಬಂದು ತನ್ನ ಪ್ರಯತ್ನವು ವ್ಯರ್ಥವಾದದ್ದನ್ನು ನೋಡಿ, ಒಬ್ಬ ಕ್ರೂರಪುರುಷನನ್ನು ನಾಗಾಲಯದಲ್ಲಿಟ್ಟು 'ಇಲ್ಲಿಗೆ ಬಂದವನನ್ನು ಹಿಂದುಮುಂದೆ ನೋಡದೆ ತಲೆಕತ್ತರಿಸು' ಎಂದು ಗೊತ್ತುಮಾಡಿ ಅಲ್ಲಿಗೆ ಧನಕೀರ್ತಿಯೊಡನೆ ನೈವೇದ್ಯವನ್ನು ಕಳುಹಿಸಿಕೊಟ್ಟನು. ಅವನು ಹೋಗುತ್ತಿದ್ದುದನ್ನು ಮಹಾಬಲನು ಕಂಡು 'ಮದವಣಿಗನ ಕೈಯಲ್ಲಿ ಕೆಲಸಮಾಡಿಸುತ್ತಾರೆಯೋ? ನಾನು ಹೋಗುತ್ತೇನೆ' ಎಂದು ಅದನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋಗಿ ಅಲ್ಲಿ ಘಾತುಕನಿಂದ ಹತನಾದನು. ಇಷ್ಟಾದರೂ ಶ್ರೀದತ್ತನು ಹಿಂತೆಗೆಯದೆ ತನ್ನ ಹೆಂಡತಿಯನ್ನು ಕರೆದು ಅವಳಿಗೆ ನಡೆದ ಸಂಗತಿಯನ್ನೆಲ್ಲಾ ತಿಳಿಸಿ ಧನಕೀರ್ತಿಯನ್ನು ವಿಷಪ್ರಯೋಗದಿಂದ ಕೊಲ್ಲಬೇಕೆಂದು ಹೇಳಿದನು. ಅವಳು ಲಡ್ಡುಗೆಗಳನ್ನು ಮಾಡಿ ದೊಡ್ಡವುಗಳಿಗೆ ವಿಷವನ್ನು ಹಾಕಿ ಚಿಕ್ಕವುಗಳನ್ನು ಹಾಗೆಯೇ ಬಿಟ್ಟಿದ್ದು, ಮಗಳನ್ನು ಕರೆದು ಅವಳ ಗಂಡನಿಗೆ ಬಡಿಸಬೇಕೆಂದು ಹೇಳಿ ಯಾವುದನ್ನೂ ಅರಿಯದಂತೆ ನೆರೆಮನೆಗೆ ಹೋಗಿದ್ದು ಬಿಟ್ಟಳು. ಗಂಡನೆಂದು ದೊಡ್ಡ ಲಡ್ಡುಗೆಗಳನ್ನು ಕೊಟ್ಟು ಅವನನ್ನು ಕೊಲ್ಲುವಳೆಂದು ತಾಯಿಯ ಯೋಚನೆ. ಅಷ್ಟುಹೊತ್ತಿಗೆ ಸರಿಯಾಗಿ ತಂದೆಯೂ ಹಸಿದು ಬರಲು

ಇಬ್ಬರಿಗೂ ಬಡಿಸುತ್ತ, ಗಂಡನಿಗೆ ದೊಡ್ಡದನ್ನು ಬಡಿಸಿ ತಂದೆಗೆ ಚಿಕ್ಕದನ್ನು ಬಡಿಸಿದರೆ 'ತಂದೆಗಿಂತ ಇವಳಿಗೆ ಗಂಡನೇ ಹೆಚ್ಚಾದನಲ್ಲಾ' ಎಂದು ಯಾರಾದರೂ ಆಕ್ಷೇಪಿಸ ಬಹುದೆಂಬ ಶಂಕೆಯಿಂದ ಗಂಡನಿಗೆ ಚಿಕ್ಕ ಲಡ್ಡುಗೆಯನ್ನೂ ತಂದೆಗೆ ದೊಡ್ಡ ಲಡ್ಡುಗೆಯನ್ನೂ ಬಡಿಸಿದಳು. ಅದನ್ನು ತಿಂದು ಶ್ರೀದತ್ತನು ಮೃತನಾದನು. ಇದನ್ನು ನೋಡಿ ಅವನ ಹೆಂಡತಿಯಾದ ವಿಶಾಖೆಯು ನಡೆದ ಸಂಗತಿಯನ್ನೆಲ್ಲಾ ಹೇಳಿ, ಧನಕೀರ್ತಿಯು ಗುಣಪಾಲನ ಮಗನೆಂದು ತಿಳಿಸಿ ತಾನೂ ನಂಜಿನ ಲಡ್ಡುಗೆಗಳನ್ನು ತಿಂದು ಸತ್ತುಹೋದಳು.

ಇದೆಲ್ಲಾ ಮಹಾರಾಜನ ಕಿವಿಗೆ ಬೀಳಲು, ಅವನು ಬಂದು ಧನಕೀರ್ತಿಯ ತೇಜಸ್ಸನ್ನು ನೋಡಿ ಮೆಚ್ಚಿ ಅವನನ್ನು ಅರಮನೆಗೆ ಕರೆದುಕೊಂಡುಹೋಗಿ ಉಪಚರಿಸುತ್ತ ಅವನಿಗೆ ತನ್ನ ಮಗಳಾದ ವಿಶ್ವಾವತಿಯನ್ನೂ ಅರ್ಧರಾಜ್ಯವನ್ನೂ ಕೊಡಬೇಕೆಂದು ಯೋಚಿಸುತ್ತಿದ್ದನು. ಅಷ್ಟು ಹೊತ್ತಿಗೆ ಗುಣಪಾಲನು ಕೌಶಾಂಬಿಯಲ್ಲಿ ಇರುವುದಾಗಿ ವರ್ತಮಾನ ಬಂತು. ಅವನನ್ನು ಕರೆಸಿ ಅವನ ಅನುಮತಿಯಿಂದ ಮದುವೆಯನ್ನು ನೆರವೇರಿಸಿ ಅರ್ಧರಾಜ್ಯವನ್ನು ಅಳಿಯನಿಗೆ ಬಳುವಳಿಯಾಗಿ ಕೊಟ್ಟನು.

ಕೆಲವು ದಿವಸದಮೇಲೆ ಯಶೋಧರರೆಂಬ ಋಷಿಗಳು ಆವೂರಿಗೆ ಬರಲು, ಗುಣಪಾಲನು 'ಧನಕೀರ್ತಿಗೆ ಶ್ರೀದತ್ತನು ತಂದೊಡ್ಡಿದ ಐದು ಕಂಟಕಗಳೂ ಪರಿಹಾರವಾಗಿ ರಾಜ್ಯಪ್ರಾಪ್ತಿಯಾದದ್ದು ಯಾವಪುಣ್ಯದಿಂದ?' ಎಂದು ಕೇಳಿದನು. ಅದಕ್ಕೆ ಅವರು ಹಿಂದಿನ ಜನ್ಮದ ಕಥೆಯನ್ನು ಹೇಳಿದರು :—

"ಹಿಂದೆ ಮೃಗಸೇನನೆಂಬ ಬೆಸ್ತರವನಿದ್ದನು. ಅವನು ಒಂದುದಿನ ಧರ್ಮಶ್ರವಣಮಾಡಿ ಯಾವುದಾದರೂ ಒಂದು ವ್ರತ ಬೇಕೆಂದು ಗುರುಗಳನ್ನು ಕೇಳಿದನು. ಅದಕ್ಕೆ ಗುರುಗಳು 'ನೀನು ಮೊದಲು ಸಿಕ್ಕಿದ ಮೀನನ್ನು ಬಿಟ್ಟುಬಿಡು ; ಇದೇ ವ್ರತ' ಎಂದು ಹೇಳಿದರು. ಅನಂತರ

ಅವನು ಬಲೆ ಬೀಸುತ್ತಾ ಹೋಗಲು, ಎಲ್ಲೆಲ್ಲಿ ಬಲೆಹಾಕಿದರೂ ಮೊದಲು ಸಿಕ್ಕಿದ ಮೀನೇ ಸಿಕ್ಕುತ್ತ ಇತ್ತು. ಐದುಸಾರಿ ಪ್ರಯತ್ನಮಾಡಿ, ಐದು ಸಾರಿಯೂ ಅದೇ ಮೀನೇ ಬಂದುದರಿಂದ ಅದನ್ನು ಐದುಸಾರಿಯೂ ಬಿಟ್ಟು, ಬರಿಯ ಬಲೆಯನ್ನು ಬೆನ್ನಿಗೆ ಹಾಕಿಕೊಂಡು ಹೋದನು. ಅದನ್ನು ಕಂಡು ಅವನ ಹೆಂಡತಿ ಘಂಟೆ ಯೆಂಬವಳು ಆಕ್ಷೇಪಿಸಲು ಶ್ರಾವಕನಾಗುತ್ತೇನೆಂದು ಮನೆಬಿಟ್ಟು ಬರುತ್ತ ಕತ್ತಲೆಯಲ್ಲಿ ಹಾವು ಕಡಿದು ಸತ್ತುಹೋದನು; ಘಂಟೆಯೂ ಅವನ ವ್ರತವನ್ನು ಹಿಡಿದೆನೆಂದು ಕೊಂಡು ಅವನೊಡನೆಯೇ ಸತ್ತುಹೋದಳು. ಆಮೇಲೆ ಆ ಮೃಗ ಸೇನನೆಂಬ ಬೆಸ್ತನು ಧನಕೀರ್ತಿಯಾಗಿ ಹುಟ್ಟಿ ಮೀನನ್ನು ಐದುಸಾರಿ ಬಿಟ್ಟ ಫಲದಿಂದ ಶ್ರೀದತ್ತನ ಐದು ಕಂಟಕಗಳಿಂದ ಪಾರಾಗಿ ರಾಜ್ಯ ವನ್ನು ಪಡೆದನು. ಘಂಟೆಯು ಶ್ರೀಮತಿಯಾದಳು. ಆ ಮೀನು ಮೃಗಸೇನೆಯೆಂಬ ಸೂಳೆಯಾಗಿ ಹುಟ್ಟಿತು."

ಇದನ್ನು ಕೇಳಿ ವಿಶ್ವಂಧರ ಗುಣಪಾಲರೂ, ಅವರ ಹೆಂಡಿರೂ ದೀಕ್ಷೆಯನ್ನು ಕೈಕೊಂಡರು. ಧನಕೀರ್ತಿಯು ಬಹುಕಾಲ ರಾಜ್ಯ ವಾಳುತ್ತಿದ್ದು ಒಂದುದಿನ ತನ್ನ ಕೆನ್ನೆಯ ಮೇಲಣ ನರೆಯನ್ನು ನೋಡಿ ವೈರಾಗ್ಯಹುಟ್ಟಲು, ಸುಕೀರ್ತಿಯೆಂಬ ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ ತಾನು ಸಂನ್ಯಾಸವನ್ನು ವಹಿಸಿದನು. ಶ್ರೀಮತಿಯೂ ದೀಕ್ಷೆ ಯನ್ನು ತೆಗೆದುಕೊಂಡಳು. ಇವರೆಲ್ಲರಿಗೂ ಬಳ್ಳೊಳ್ಳೆಯ ಲೋಕ ಗಳು ಪ್ರಾಪ್ತವಾದುವು.

---

## ಹನ್ನೊಂದನೆಯ ಆಶ್ವಾಸ

### ಸತ್ಯವ್ರತದ ಕಥೆ

ವೆಂಗಿದೇಶದಲ್ಲಿ ಪ್ರತಿಪಾಲಪುರವೆಂಬುದೊಂದು ಪಟ್ಟಣ. ಅಲ್ಲಿ ಧನದಮಹಾರಾಜನೆಂಬ ರಾಜನು ಆಳುತ್ತಿದ್ದನು. ಅವನು ಆ ಪುರಿನಲ್ಲಿದ್ದ ಸಂಘಶ್ರೀ ಎಂಬ ಬೌದ್ಧನ ಮಗಳಾದ ಕಮಲಶ್ರೀ ಎಂಬಾಕೆಯ ರೂಪವನ್ನು ಕೇಳಿ ಮೋಹಗೊಂಡು ಅವಳನ್ನು ಮದುವೆಯಾಗಿ ಸುಖದಿಂದಿರುತ್ತ ಕೆಲವುಕಾಲದ ಮೇಲೆ ತನ್ನ ಧರ್ಮವನ್ನು ಅಲಕ್ಷ್ಯ ಮಾಡಿದ್ದಕ್ಕಾಗಿ ವ್ಯಥೆಪಟ್ಟು ಕಮಲಶ್ರೀಗೆ ಉಪದೇಶಮಾಡಿ ಅವಳನ್ನು ಜೈನಧರ್ಮದ ಕಡೆಗೆ ತಿರುಗಿಸಿದನು. ಅದರಂತೆ ಸಂಘಶ್ರೀಯನ್ನೂ ಬೌದ್ಧಧರ್ಮದಿಂದ ಬಿಡಿಸಿ ಜಿನಧರ್ಮವನ್ನು ಅವಲಂಬಿಸುವಂತೆ ಮಾಡಬೇಕೆಂದು ಅವನಿಗೆ ತನ್ನ ಧರ್ಮವನ್ನು ಪರಿಪರಿಯಾಗಿ ಬೋಧಿಸಿದನು; ಆದರೂ ಅವನು ತನ್ನ ಮಾರ್ಗಕ್ಕೆ ಬರಲಿಲ್ಲ.

ಒಂದುದಿನ ಚಾರಣ ಋಷಿಗಳು ಅಂತರಿಕ್ಷದಲ್ಲಿ ಪ್ರಯಾಣ ಮಾಡುತ್ತಿದ್ದರು. 'ಇದು ಜಿನಧರ್ಮದ ಮಹಿಮೆ, ನೋಡು!' ಎಂದು ಸಂಘಶ್ರೀಗೆ ಅದನ್ನು ತೋರಿಸಿದನು. ಸಂಘಶ್ರೀಯು ಅದನ್ನು ನೋಡಿ ಮನಸ್ಸಿನಲ್ಲಿದ್ದ ಶಂಕೆಯನ್ನು ತೊರೆದು ಜಿನಮತವನ್ನು ನಂಬಿ ಶ್ರಾವಕ ವ್ರತಗಳನ್ನು ಕೈಕೊಂಡು ಸುಖದಿಂದಿದ್ದನು.

ಒಂದುದಿನ ಅವನ ಗುರುವಾದ ಬುದ್ಧಶ್ರೀಯೆಂಬ ಭಿಕ್ಷುವು ಬಂದು ಅವನಿಗೆ ದುರ್ಬೋಧನೆಮಾಡಿ ಪುನಃ ಬೌದ್ಧಮತಕ್ಕೆ ತಿರುಗಿಸಿದನು. ಅದನ್ನು ತಿಳಿದು ಧನದ ಮಹಾರಾಜನು ಪುನಃ ಅವನಿಗೆ ಜೈನಧರ್ಮವನ್ನು ಬೋಧಿಸಲು ಮೊದಲುಮಾಡಿದನು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ. ಒಂದುದಿನ ನೆರೆದ ಸಭೆಯಲ್ಲಿ ಅವನಿಗೆ ಬೋಧಿಸುತ್ತ 'ನೀನು ಅಂದು ಅಂತರಿಕ್ಷದಲ್ಲಿ ಹೋಗುತ್ತಿದ್ದ ಚಾರಣಋಷಿಯು

ರನ್ನು ನೋಡಿದುದು ಉಂಟೇ ಇಲ್ಲವೇ?' ಎಂದು ಕೇಳಲು ಅವನು 'ಇಲ್ಲ' ವೆಂದು ಸುಳ್ಳುಹೇಳಿದನು. ಕೂಡಲೇ ಅಲ್ಲಿಯ ಪುರದೇವತೆಗ ಳೆಲ್ಲಾ ಬಂದು ಕೋಪದಿಂದ ಅವನ ಎರಡು ಕಣ್ಣುಗಳನ್ನೂ ಕಿತ್ತುಹಾಕಿ ದರು. ಸಭಿಕರೆಲ್ಲರೂ ಬಾಯಿಗೆ ಬಂದಹಾಗೆ ಬೈದರು. ಹೀಗೆ ಸಂಘ ಶ್ರೀಯು ಕಣ್ಣು ಕಳೆದುಕೊಂಡು ಅವಮಾನಪಟ್ಟು ಆ ಕೊರಗಿನಲ್ಲಿಯೇ ಸತ್ತುಹೋದನು. ಅವನಿಗೆ ರೌರವನರಕ ಪ್ರಾಪ್ತಿಯಾದದ್ದಲ್ಲದೆ ಅವನ ವಂಶದಲ್ಲಿ ಏಳು ತಲೆಯುವರೆಗೂ ಹುಟ್ಟಿದ ಮಕ್ಕಳೆಲ್ಲವೂ ಕುರುಡಾಗಿ ದ್ದುವು. ಆ ದೇಶಕ್ಕೆ ಅಂಧಕವಿಷಯವೆಂದು ಹೆಸರು ಬಂತು.

ಧನದ ಮಹಾರಾಜನು ತನ್ನ ಮಗನಾದ ಇಂದ್ರಗುಪ್ತನಿಗೆ ರಾಜ್ಯ ವನ್ನು ಒಪ್ಪಿಸಿ ತಪಸ್ಸಿನಿಂದ ಕೈವಲ್ಯವನ್ನು ಪಡೆದನು.



# ಹನ್ನೆರಡನೆಯ ಆಶ್ವಾಸ

## ಅಸ್ತೇಯಾಣುವ್ರತದ ಕಥೆ

ಅವಂತೀದೇಶದ ಉಜ್ಜಯಿನೀ ಪಟ್ಟಣದಲ್ಲಿ ಧರ್ಮಧರ ಮಹಾರಾಜನೆಂಬ ದೊರೆಯು ಆಳುತ್ತಿದ್ದನು. ಅಲ್ಲಿ ಜಿನದತ್ತನೆಂಬ ರಾಜಶ್ರೇಷ್ಠಿಯಿದ್ದನು. ಅವನ ಹೆಂಡತಿ ಜಿನೇಂದ್ರದಾಸಿ. ಅವರ ಮಗ ಜಿನದಾಸ. ಇವರು ಸುಖದಿಂದ ಜೀವಿಸುತ್ತಿರಲು ಒಂದುದಿನ ಜಿನಪಾಲಿತರೆಂಬ ಋಷಿಗಳು ಆ ಊರಹತ್ತಿರಕ್ಕೆ ಬಂದು ಕತ್ತಲೆಯಾದ್ದರಿಂದ ಮುಂದಕ್ಕೆ ಹೋಗದೆ ಗಂಧವತಿಯೆಂಬ ನದಿಯ ತಡಿಯಲ್ಲಿ ಸ್ಮಶಾನದೊಳಗೆ ಮಲಗಿದರು. ಇತ್ತಲಾಗಿ ಉಜ್ಜಯಿನಿಯಿಂದ ಅದೇ ರಾತ್ರಿ ವಿಡಂಬನೆಂಬ ಸಾಧಕನು ನಿಧಿಸಿಕ್ಷೇಪವನ್ನು ಸಾಧಿಸುವುದಕ್ಕೋಸ್ಕರ ಅಲ್ಲಿಗೆ ಬಂದು ಜಿನಪಾಲಿತ ಮುನಿಯನ್ನು ಹೆಣವೆಂದು ಭಾವಿಸಿ ಅವರ ದೇಹದ ಹತ್ತಿರಕ್ಕೆ ಮತ್ತೆರಡು ಹೆಣಗಳನ್ನು ಎಳೆದು ತಂದುಹಾಕಿ ಆ ತಲೆಗಳನ್ನು ಒಲೆಯ ಗುಪ್ಪುಗಳಾಗಿ ಮಾಡಿಕೊಂಡು ಅಲ್ಲಿ ಬೆಂಕಿಯನ್ನು ಹೊತ್ತಿಸಿ ಚರುವನ್ನು ಮಾಡುತ್ತಿದ್ದನು. ಆದರೆ ಜಿನಪಾಲಿತಮುನಿ ಮಾತ್ರ ಅಲ್ಲಾಡದೆ ಸ್ಥಿರವಾಗಿ ಮಲಗಿದ್ದನು. ಸ್ವಲ್ಪಹೊತ್ತಿಗೆ ತೋಳಿನ ಬುಡವು ಹತ್ತಿಕೊಂಡು ಅಲ್ಲಿದ್ದ ನರಗಳು ಕಿತ್ತುಹೋಗಲು ತೋಳು ತನ್ನ ಷ್ಟಕ್ಕೆ ತಾನೇ ನೆಗೆಯಿತು. ಅದನ್ನು ಕಂಡು ವಿಡಂಬನು ಹೆದರಿ, ಬಿಟ್ಟದ್ದನ್ನು ಬಿಟ್ಟು ಹಿಂದುಮುಂದು ನೋಡದೆ ಓಡಿಹೋದನು. ಜಿನಪಾಲಿತಮುನಿಯು ಅವನು ಓಡಿದುದರಿಂದ ಆದ ಪ್ರಾಣಹಿಂಸೆಯನ್ನು ನೆನೆದು ವ್ಯಥೆಪಡುತ್ತಿರಲು ನಗರದೇವತೆಗಳು ಆತನ ಮನಸ್ಸಿನ ಧೈರ್ಯಕ್ಕೂ ಜೀವದಯೆಗೂ ಮೆಚ್ಚಿ ಆತನನ್ನು ಪೂಜಿಸಿ ಸ್ತುತಿಸಿದರು. ಮಾರನೆಯದಿನ ಬೆಳಗ್ಗೆ ಜಿನದತ್ತನು ಆತನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ

ದೇಹಾರದಲ್ಲಿ ಇಳಿಸಿ ತಾನೇ ಔಷಧಿ ಪಥ್ಯಪಾನಗಳನ್ನು ಕೊಡುತ್ತಾ ಸೇವಿಸುತ್ತಿದ್ದನು. ಹುಣ್ಣೆಲ್ಲವೂ ಮಾಯಲು, ಮುನಿಯು ಸಂಚಾರಕ್ಕೆ ಹೊರಟನು. ಜಿನದತ್ತನೂ ಅವನನ್ನು ಅಗಲಲಾರದೆ ಸ್ವಲ್ಪದೂರ ಹಿಂಬಾಲಿಸುತ್ತ ಹೋದನು. ಇದನ್ನು ನೋಡಿದ ಅವನ ಮಗನು ತನಗೆ ಅವಕಾಶ ಸಿಕ್ಕಿತೆಂದು ಬಂಗಾರವನ್ನಿಟ್ಟಿದ್ದ ಕೊಟಡಿಯ ಬಾಗಿಲನ್ನು ತೆಗೆದು ಬಂಗಾರಕ್ಕೆ ಕೈಹಾಕುತ್ತಿರಲು, ಅಷ್ಟುಹೊತ್ತಿಗೆ ಸರಿಯಾಗಿ ಜಿನದತ್ತನು ಬಾಗಿಲಿಗೆ ಬಂದನು. ಜಿನದಾಸನು ತಂದೆ ಬಂದುದನ್ನು ತಿಳಿದು ಚಿನ್ನದ ಹಿಂದೆಯೇ ಅವಿತುಕೊಂಡನು. ತಂದೆಯು ಚಿನ್ನ ಕಡಿಮೆಯಾಗಿದ್ದುದನ್ನು ನೋಡಿ ಕೋಣೆಯನ್ನೆಲ್ಲಾ ಹುಡುಕಿ ಕಳ್ಳರಾರನ್ನೂ ಕಾಣದೆ ಜಿನಪಾಲಿತಮುನಿಯೇ ಕದ್ದುಕೊಂಡಿರಬೇಕೆಂದು ನಿಶ್ಚಯಿಸಿ ಅವನನ್ನು ಒಳ್ಳೆಯಮಾತಿನಿಂದ ಪುನಃ ತನ್ನ ಮನೆಗೆ ಕರೆದುಕೊಂಡು ಬಂದು ದುರ್ಜನನಾಗದಂತೆ ಉಪಾಯದಿಂದ ತನ್ನ ಬಂಗಾರವನ್ನು ಬರಮಾಡಿಕೊಳ್ಳುವೆನೆಂದು ಆತನಿಗೆ ಈ ಕಥೆಯನ್ನು ಹೇಳಲುಪಕ್ರಮಿಸಿದನು—

ವ್ಯಾಘ್ರಖೇಡವೆಂಬುದೊಂದು ಪಟ್ಟಣ. ಅಲ್ಲಿ ದಿನಕರನೆಂಬವನೊಬ್ಬನಿದ್ದನು. ಕರಾಳನೆಂಬ ಅವನ ಮಗನು ಕೆಟ್ಟವರ ಸಹವಾಸಕ್ಕೆ ಬಿದ್ದು ಒಂದುದಿವಸ ಅರಮನೆಗೆ ಕನ್ನವಿಕ್ಕಿ ಹೊನ್ನನ್ನು ಕದ್ದುಕೊಂಡುಹೋಗುತ್ತಿರುವಾಗ, ತಳಾರರು ಅಟ್ಟಿಕೊಂಡು ಬರಲು ಒಬ್ಬ ವರ್ತಕನ ಮರೆಹೊಕ್ಕನು. ಆ ವರ್ತಕನು ಕರುಣೆಯಿಂದ ಅವನನ್ನು ತನ್ನ ಹೊದಿಕೆಯೊಳಗೆ ಸೇರಿಸಿಕೊಂಡು ತಳಾರರಿಗೆ ಅಲ್ಲಿ ಯಾರೂ ಇಲ್ಲವೆಂದು ಹೇಳಿ ಕಳುಹಿಸಿದನು. ಆದರೂ ಈ ಉಪಕಾರವನ್ನು ನೆನೆಯದೆ ಕರಾಳನು ಒಳಗಿದ್ದ ಹಣದ ಚೀಲವನ್ನು ನೋಡಿ ಅದರ ಆಸೆಗೆ ಆ ವರ್ತಕನನ್ನು ಕೊಂದು ಆ ಹಣವನ್ನು ಕದ್ದುಕೊಂಡುಹೋದನು. ಹೀಗೆ ಕೆಲವರು ತಮ್ಮ ದೌರ್ಜನ್ಯವನ್ನೇ ತೋರಿಸುತ್ತಾರೆಯಲ್ಲದೆ ಉಪಕಾರವನ್ನು ಸ್ಮರಿಸುವುದಿಲ್ಲ.

ಜಿನಪಾಲಿತ ಮುನಿಯು ಈ ಕಥೆಯನ್ನು ಕೇಳಿ ಆಶ್ಚರ್ಯಪಟ್ಟು ಬಹುಶಃ ಇವನ ಮನೆಯಲ್ಲಿ ಯಾವುದೋ ಕಳುವಾಗಿದೆ;

ಅದನ್ನು ನಾನು ಕದ್ದಿರಬೇಕೆಂಬ ಭ್ರಾಂತಿಯಿಂದ ಹೀಗೆ ಹೇಳುತ್ತಿರಬಹುದು. ಪಾಪ! ಇವನೇನು ಮಾಡಿಯಾನು? ಇದೆಲ್ಲಾ ದುಷ್ಕರ್ಮದ ಫಲ ಎಂದು ನಿರ್ಧರಿಸಿ ಉತ್ತರವಾಗಿ ತಾನೂ ಒಂದು ಕಥೆಯನ್ನು ಹೇಳಿದನು.—

ದ್ವಾರಾವತಿಯೆಂಬ ಪಟ್ಟಣದಲ್ಲಿ ನಾರಾಯಣನೆಂಬ ರಾಜನು ಆಳುತ್ತಿದ್ದನು. ಅಲ್ಲಿಗೆ ದಂಡಕರೆಂಬ ಋಷಿಗಳು ಬರಲು, ಅವರ ದೇಹಸ್ಥಿತಿ ಸರಿಯಾಗಿಲ್ಲದಿದ್ದುದರಿಂದ, ನಾರಾಯಣನು ಅವರನ್ನು ಕರೆದುಕೊಂಡುಹೋಗಿ ಚಾತುರ್ಮಾಸ್ಯವನ್ನು ಅಲ್ಲಿಯೇ ಕಳೆಯಬೇಕೆಂದು ಹೇಳಿ ಒಪ್ಪಿಸಿ, ಔಷಧಿ ಪಥ್ಯಪಾನಾದಿಗಳಿಂದ ಉಪಚರಿಸುತ್ತಿದ್ದನು. ರೋಗ ವಾಸಿಯಾದನಂತರ ವೈದ್ಯನು ಬಂದು ರಾಜನಿಂದ ಸನ್ಮಾನಪಡೆಯಲು 'ತಮ್ಮ ದೇಹಸ್ಥಿತಿ ಈಗ ಅನುಕೂಲವಾದುದಕ್ಕೆ ಸಂತೋಷ' ಎಂದು ಋಷಿಗಳನ್ನು ಕುರಿತು ಹೇಳಿದನು. ಅದಕ್ಕೆ ಅವರು 'ಕರ್ಮದಿಂದ ದುಃಖ ಬರುತ್ತದೆ; ಅದರ ಉಪಶಮದಿಂದ ಇದೂ ಶಾಂತವಾಗುತ್ತದೆ' ಎಂದರು. ಆದರೆ ವೈದ್ಯನಿಗೆ ತನ್ನ ಔಷಧದ ಮಾಹಾತ್ಮ್ಯವನ್ನು ಹೊಗಳದೆ ಹೋದರಲ್ಲಾ ಎಂದು ಕೋಪಹುಟ್ಟಿ ಕೆಲವು ಕಾಲಕ್ಕೆ ಸತ್ತು ಒಂದು ಕೋಡಗದ ಜನ್ಮವನ್ನು ಪಡೆದನು. ದಂಡಕರೂ ಒಂದುದಿವಸ ಆ ಕಪಿಯಿದ್ದ ಕಾಡಿಗೆ ಹೋಗಿ ಒಂದು ಮಾವಿನ ಮರದ ಕೆಳಗಿದ್ದಾಗ ಪೂರ್ವವೈರದಿಂದ ಆ ಕಪಿಯು ಒಂದು ಬಣಗಿದ ಮಾವಿನ ಕೊಂಬೆಯನ್ನು ಕಿತ್ತು ಋಷಿಯ ತೊಡೆಯನ್ನು ಇಬ್ಭಾಗವಾಗುವಂತೆ ಚುಚ್ಚಿತು. ಆದರೆ ಋಷಿಯೇನೋ ಕದಲಲಿಲ್ಲ. ಆ ಧೈರ್ಯವನ್ನು ಕಪಿಯು ನೋಡಿ ಆಶ್ಚರ್ಯಪಟ್ಟು ಮರುಗಿ ಇತರ ಕೋತಿಗಳ ಸಹಾಯದಿಂದ ಆ ಕೊಂಬೆಯನ್ನು ಕಿತ್ತು, ತನಗೆ ವೈದ್ಯಜ್ಞಾನವಿದ್ದುದರಿಂದ ತಕ್ಕ ಚಿಕಿತ್ಸೆಮಾಡಿ, ವ್ರಣವನ್ನು ವಾಸಿಮಾಡಿತು. ಹೀಗೆ ಕೆಲವು ಮೂರ್ಖರು ಅವಿಚಾರಿಗಳಾಗಿ ಸಾಧುಗಳನ್ನು ಸುಮ್ಮನೆ ಕಾಡುವರು.

ಈ ಕಥೆಯನ್ನು ಕೇಳಿ ಜಿನದತ್ತನು ಸ್ವಲ್ಪಹೊತ್ತು ಸುಮ್ಮನಿದ್ದು ಮತ್ತೊಂದು ಕಥೆಯನ್ನು ಹೇಳಿದನು.—

ಭಾನುಪುರವೆಂಬುದೊಂದು ಊರು. ಅಲ್ಲಿ ಕಪಿಲನೆಂಬ ಹಾರುವ ನಿದ್ದನು. ಆತನು ಗಾರುಡವಿದ್ಯೆಯನ್ನು ಕಲಿಯದೆ ಲಾಭವೂ ಕೀರ್ತಿ ಯೂ ಬರುವುದಿಲ್ಲವೆಂದುಕೊಂಡು ಪೂರ್ವದೇಶಕ್ಕೆ ಹೋಗಿ ಅಲ್ಲಿ ಪ್ರಸಿದ್ಧ ನಾದ ಒಬ್ಬ ಮಂತ್ರವಾದಿಯಿಂದ ಅದನ್ನು ಕಲಿತು ಬರುತ್ತ ದಾರಿಯಲ್ಲಿ ಒಂದು ಹುಲಿ ಸತ್ತು ಬಿದ್ದಿದ್ದುದನ್ನು ನೋಡಿದನು. ಅದು ಹಾವುಕಚ್ಚಿ ಸತ್ತುಹೋಗಿತ್ತೆಂದು ತಿಳಿದು ಮಂತ್ರಹಾಕಿ ಅದನ್ನು ಎಬ್ಬಿಸಿದನು. ಆ ಹುಲಿಯು ಎದ್ದು ತನ್ನ ಪ್ರಾಣವನ್ನು ಕೊಟ್ಟವನೆಂಬ ಉಪಕಾರ ವನ್ನು ನೆನೆಯದೆ ಅವನನ್ನು ಹಿಡಿದು ಸೀಳಿ ತಿಂದುಹಾಕಿತು. ಇದು ಯಾವ ಧರ್ಮ !

ಈಗ ಜಿನದತ್ತನ ಮನೋವೃತ್ತಿಯು ಸ್ಪಷ್ಟವಾಗಿ ತಿಳಿದು ಮುನಿ ಯು ಮತ್ತೊಂದು ಕಥೆಯನ್ನು ಹೇಳಿದನು:—

ಕೇಸರೀಪುರವೆಂಬುದೊಂದು ಊರು; ಅಲ್ಲಿ ವಾಸವನೆಂಬ ರಾಜನು ಆಳುತ್ತಿದ್ದನು. ಆ ಪುರಿನ ರಾಜಶ್ರೇಷ್ಠಿಯಾದ ಅಮಲನೆಂಬ ವನ ಮಗನಾದ ವಿಮಲನೆಂಬ ಹುಡುಗನು ಒಡವೆವಸ್ತುಗಳನ್ನು ಹಾಕಿ ಕೊಂಡು ತನ್ನ ಮನೆಯ ಅಂಗಳದಲ್ಲಿ ಆಡುತ್ತಿರಲು ನೆರೆಮನೆಯಾಕೆ ಕಂಡು ಒಡವೆಯಾಸೆಗೆ ಆ ಮಗುವನ್ನು ಕೊಂದು ಅದರ ಹೆಣವನ್ನು ಬೀದಿಯಲ್ಲಿ ತಿರುಗುವ ಬಸವನ ಕೊಂಬಿಗೆ ಸಿಕ್ಕಿಸಿದಳು. ಸೆಟ್ಟಿಯು ಮಗನನ್ನು ಕಾಣದೆ ಹುಡುಕುತ್ತ ಬಂದು ಬಸವನ ಕೋಡಿನಲ್ಲಿ ಅವನ ಹೆಣವನ್ನು ಕಾಣಲು ಬಹುದುಃಖವಾಯಿತು. ಅದೇ ಕೊಂದುಹಾಕಿ ತೆಂಬ ಭ್ರಾಂತಿಯಿಂದ ಊರವರೆಲ್ಲರೂ ಅದನ್ನು ನಾನಾವಿಧವಾಗಿ ಹಿಂಸೆ ಮಾಡುವುದಕ್ಕೆ ಮೊದಲುಮಾಡಿದರು. ಅದು ಅವರ ಹಿಂಸೆಯನ್ನು ತಡೆ ಯಲಾರದೆ ಓಡಾಡುತ್ತ ಹೋಗಿ ತನ್ನ ಶುದ್ಧಗುಣವನ್ನು ತೋರಿಸುವು ದಕ್ಕೋ ಎಂಬಂತೆ ಕಮ್ಮಾರನ ಮನೆಗೆಹೋಗಿ ಅವನು ಕಾಯಿಸುತ್ತಿದ್ದ ಕಬ್ಬಿಣವನ್ನು ಕಚ್ಚಿ ಗುಂಪಿಗೆ ಇದಿರಾಗಿ ಬಂತು. ಅದನ್ನು ನೋಡಿ ಅವರು ಬೆರಗಾಗಿ 'ಇದು ಎಂದಿಗೂ ಮಗುವನ್ನು ಕೊಂದಿರಲಾರದು. ಯಾರೋ ದುರಾತ್ಮರು ಒಡವೆಯ ಆಸೆಗಾಗಿ ಹೀಗೆ ಮಾಡಿ ತಮ್ಮ

ತಪ್ಪನ್ನು ಬಡ ಬಸವನ ಮೇಲೆ ಹಾಕಿದ್ದಾರೆ. ನಿಜವಾದ ಕಳ್ಳರನ್ನು ಕಂಡುಹಿಡಿಯಬೇಕು ' ಎಂದು ತಳಾರನಿಗೆ ನೇಮಿಸಲು ಅವನು ಉಪಾಯದಿಂದ ಆ ಕಳ್ಳಹೆಂಗಸನ್ನು ಕಂಡು ಹಿಡಿದನು. ಪ್ರಜೆಗಳೆಲ್ಲರೂ ಆ ಮೇಲೆ 'ಆ ಬಡ ಪ್ರಾಣಿಯನ್ನು ಅನ್ಯಾಯವಾಗಿ ಹೊಡೆದು ಗೋಳಾಡಿಸಿದೆವಲ್ಲಾ ' ಎಂದು ವ್ಯಸನಪಟ್ಟರು. ಆದ್ದರಿಂದ ಅವಿಚಾರಿಗಳಾಗಬಾರದು. ಯಾವುದನ್ನೂ ಸರಿಯಾಗಿ ವಿಚಾರಿಸಿ ಮಾಡಬೇಕು.

ಸೆಟ್ಟಿಯು ಉತ್ತರವಾಗಿ ಮತ್ತೊಂದು ಕಥೆಯನ್ನು ಹೇಳಿದನು :—

ಭಾರತಿ ಎಂಬ ನದಿಯ ತೀರದಲ್ಲಿ ಕಪಾಲಿ ಎಂಬ ಒಬ್ಬ ತಪಸ್ವಿಯಿದ್ದನು. ಒಂದುದಿನ ಆ ಹೊಳೆಯಲ್ಲಿ ಪ್ರವಾಹ ಬಂದು ಅದರಲ್ಲಿ ಒಂದು ಆನೆಯ ಮರಿಯು ಕೊಚ್ಚಿಕೊಂಡು ಬರುತ್ತಿರಲು ಅದನ್ನು ಹಿಡಿದು ಕಟ್ಟಿಹಾಕಿ ಕಾಪಾಡುತ್ತ ಬಂದನು. ಕೆಲವು ದಿವಸಕ್ಕೆ ಅದು ಪಟ್ಟದಾನೆಗಿಂತಲೂ ಚೆನ್ನಾಗಲು ಆ ವರ್ತಮಾನವು ರಾಜನ ಕಿವಿಗೆ ಮುಟ್ಟಿ ಅವನು ಅದನ್ನು ತನಗೆ ಕೊಡಬೇಕೆಂದು ಹೇಳಿಕಳುಹಿಸಿದನು. ತಪಸ್ವಿಯು ಹೆದರಿಕೊಂಡು ಕಳುಹಿಸಿಕೊಟ್ಟನು. ಆದರೆ ಅದು ಅರಮನೆಯಲ್ಲಿರದೆ ಕಾಪಿನವರನ್ನು ಕೊಂದು ತನ್ನ ಮೊದಲಿನ ಸ್ಥಳಕ್ಕೇ ಓಡಿಹೋಯಿತು. ಮತ್ತೆ ತರಿಸಿಕೊಂಡನು ; ಮತ್ತೆ ಓಡಿಹೋಯಿತು. ಹೀಗೆ ಹಲವುಸಾರಿ ನಡೆಯಲು ರಾಜನು ಕೋಪಿಸಿಕೊಂಡು 'ನನಗೆ ಕೊಟ್ಟುಬಿಟ್ಟ ಆನೆಯನ್ನು ಕೊಡಲಾರದೆ ತನ್ನ ಮಠದಮೇಲೆ ಅದಕ್ಕೆ ಅಭಿಮಾನವನ್ನು ಹತ್ತಿಸಿದ್ದಾನೆ. ಆದ್ದರಿಂದ ಅವನು ನನ್ನ ದೇಶವನ್ನೇ ಬಿಟ್ಟು ಹೋಗಲಿ ! ' ಎಂದು ಆಜ್ಞೆಮಾಡಿದನು. ಅದರಂತೆ ಕಪಾಲಿಯು ತನ್ನ ಮೇಲಣ ಅಪವಾದವನ್ನು ಕಳೆದುಕೊಳ್ಳುವುದಕ್ಕೋಸ್ಕರ ಪುನಃ ಆನೆಯನ್ನು ತಂದು ಒಪ್ಪಿಸಿ ಹಿಂತಿರುಗಿ ಬರಲು ಆನೆಯು ಕೋಪದಿಂದ ಒಂದು ಉಪಕಾರಸ್ಮರಣೆ ಇಲ್ಲದೆ ಅವನನ್ನು ಕೊಂದುಹಾಕಿತು. ಪ್ರಪಂಚದಲ್ಲಿ ನಿರ್ದಯರಾದ ದುರ್ಜನರು ಒಳ್ಳೆಯದನ್ನು ಮಾಡುತ್ತಾರೆಯೇ ?

ಇದನ್ನು ಕೇಳಿ ಜಿನಪಾಲಿತಮುನಿಯು ನಕ್ಕು ಪ್ರತ್ಯುತ್ತರವಾಗಿ ಇನ್ನೊಂದು ಕಥೆಯನ್ನು ಹೇಳಿದನು :—

ದಂತಿಪುರವೆಂಬ ಊರಿನಲ್ಲಿ ಅನಂತಶ್ರೀಯೆಂಬ ಸೂಳೆಯೊಬ್ಬಳಿದ್ದಳು. ಅವಳಿಗೆ ಅವಳ ಸ್ನೇಹಿತಳಾದ ವಾಸವದತ್ತೆ ಯೆಂಬವಳು ಒಂದು ಗಿಣಿಯನ್ನು ತಂದುಕೊಡಲು ಅದನ್ನು ಚಿನ್ನದ ಪಂಜರದಲ್ಲಿಟ್ಟು ಸಾಕುತ್ತಿದ್ದಳು. ಆವೂರಿನ ಮಿಕ್ಕಸೂಳೆಯರು ಹೊಟ್ಟೆಯ ಕಿಚ್ಚಿನಿಂದ ವಾಸವದತ್ತೆಗೆ ಹಣದಾಸೆಯನ್ನು ತೋರಿಸಿ ಅನಂತಶ್ರೀಯನ್ನು ಕೊಲ್ಲಲು ಏರ್ಪಡಿಸಿದರು. ವಾಸವದತ್ತೆಯು ವಿಷಬೆರಸಿದ ಮದ್ಯವನ್ನು ಬಹು ಸ್ನೇಹದಿಂದ ತಂದು ಕೊಡಲು ಅನಂತಶ್ರೀಯು 'ಇಲ್ಲಿಟ್ಟು ಹೋಗು. ಸಾಯಂಕಾಲಕ್ಕೆ ಇಬ್ಬರೂ ಪಾನಮಾಡೋಣ' ಎಂದು ಹೇಳಿ ಮಂಚದ ಮೇಲೆ ಮಲಗಿದಳು. ವಾಸವದತ್ತೆಯು ಅದರಂತೆ ಮದ್ಯದ ಬಟ್ಟಲನ್ನು ಮಂಚದ ಕೆಳಗಿಟ್ಟು ಹೊರಟುಹೋದಳು. ಪಂಜರದ ಗಿಳಿಯು ಮದ್ಯವನ್ನು ನೋಡುತ್ತಿದ್ದು ಅದರ ವಾಸನೆಗೆ ಮುತ್ತಿದ ನೊಣಗಳು ಸಾಯುತ್ತಿರಲು ಅದು ವಿಷವೆಂದು ತಿಳಿದು ಆ ಮದ್ಯವನ್ನು ಉರುಟಿಸಿತು. ಕೂಡಲೆ ಅನಂತಶ್ರೀಯು ಮಹಾಕೋಪದಿಂದ ಆ ಗಿಣಿಯನ್ನು ಕೊಂದು ಚೆಲ್ಲಿಹೋದ ಮದ್ಯವನ್ನು ನೋಡುತ್ತಿರಲು ಅದಕ್ಕೆ ಮುತ್ತಿ ಸಾಯುತ್ತಿದ್ದ ನೊಣಗಳು ಕಣ್ಣಿಗೆ ಬಿದ್ದುವು. ಆಗ ಅವಳಿಗೆ ಜ್ಞಾನೋದಯವಾಗಿ 'ಈ ಗಿಣಿಯಿಂದ ನಾನು ಬದುಕಿಕೊಂಡೆ. ಇದನ್ನು ಅನ್ಯಾಯವಾಗಿ ಕೊಂದೆನಲ್ಲಾ!' ಎಂದು ವ್ಯಥೆಪಟ್ಟಳು. ಆದ್ದರಿಂದ ಬುದ್ಧಿವಂತರು ಅವಳ ಹಾಗೆ ಅವಿವೇಕಿಗಳಾಗದೆ ಯಾವುದನ್ನೂ ವಿಚಾರದಿಂದ ಮಾಡಬೇಕು.

ಇದಕ್ಕೆ ಬದಲಾಗಿ ವೈಶ್ಯನು ಮತ್ತೊಂದು ಕಥೆಯನ್ನು ಹೇಳಿದನು :—

ಅವನಿಭೂಷಣವೆಂಬ ಪಟ್ಟಣದಲ್ಲಿ ಒಬ್ಬ ಕುಶಲನಾದ ಬಡಗಿಯಿದ್ದನು. ಅವನು ಒಂದುದಿನ ವಿಂಧ್ಯಪರ್ವತಕ್ಕೆ ಮರ ಕಡಿಯುವುದಕ್ಕೆ ಹೋಗಿ ಮರಗಳನ್ನು ನೋಡುತ್ತಿರುವಾಗ ಒಂದು ಮದದಾನೆಯು ಓಡಿ

ಬರಲು ಒಂದು ದೊಡ್ಡ ಮರವನ್ನು ಹತ್ತಿ ಕುಳಿತುಕೊಂಡನು. ಆನೆಯು ಅವನನ್ನು ಏನೂ ಮಾಡಲಾರದೆ ಅಲ್ಲಿ ಸ್ವಲ್ಪಹೊತ್ತು ಇದ್ದು ಹೊರಟು ಹೋಯಿತು. ಅನಂತರ ಆ ಮರದಿಂದ ಇಳಿದುಬಂದು ಅದು ತನಗೆ ಆಶ್ರಯಕೊಟ್ಟಿತೆಂಬ ಪರಿಜ್ಞಾನವಿಲ್ಲದೆ ಆ ಮರವನ್ನೇ ಕಡಿದುಹಾಕಿ ಬಿಟ್ಟನು. ದುರ್ಜನರು ಸಜ್ಜನರನ್ನು ತೊಂದರೆಗೀಡುಮಾಡುತ್ತಾರೆಂಬುದೇನಾಶ್ಚರ್ಯ ?

ಇದನ್ನು ಕೇಳಿ ಮುನಿಗಳು 'ಸಂದೇಹಕ್ಕೆ ಸಿಕ್ಕಿರುವ ಇವನಿಗೆ ಹೇಗೆ ನಂಬುಗೆಯುಂಟುಮಾಡುವುದು' ಎಂದು ನಕ್ಕು ಇನ್ನೊಂದು ಕಥೆಯನ್ನು ಹೇಳಿದರು :—

ಅಮರಖೇಟವೆಂಬ ಊರಿನಲ್ಲಿ ಚಂದ್ರದತ್ತನೆಂಬ ಬ್ರಾಹ್ಮಣನಿದ್ದನು. ಅವನ ಹೆಂಡತಿ ಯಜ್ಞದತ್ತೆಯೆಂಬಾಕೆ ಒಂದು ಮುಂಗುಸಿಯನ್ನು ಸಾಕುತ್ತಿದ್ದಳು. ಒಂದುದಿವಸ ಆಕೆಯು ತನ್ನ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಎಲ್ಲಿಯೋ ಹೋಗಿರಲು ಒಂದು ಹಾವು ಆ ಮಗುವನ್ನು ಕಚ್ಚುವುದಕ್ಕೆ ಬರುತ್ತಿತ್ತು. ಅದನ್ನು ಕಂಡು ಮುಂಗುಸಿಯು ಹಾರಿ ಬಂದು ಆ ಹಾವನ್ನು ಕೊಂದು ಸಂತೋಷದಿಂದ ತನ್ನ ಒಡತಿಯ ಕಾಲಮೇಲೆ ಬಿದ್ದು ಹೊರಳಾಡುತ್ತಿರಲು ಆಕೆಯು ಮುಂಗುಸಿಯ ಬಾಯ ನೆತ್ತರವನ್ನು ನೋಡಿ ಅದು ಮಗುವನ್ನು ಕೊಂದಿರಬೇಕೆಂದು ಯೋಚಿಸಿ ತನ್ನ ಕೈಲಿದ್ದ ಒನಕೆಯಿಂದ ಅದರ ತಲೆಯನ್ನು ಎರಡು ಪಾಲಾಗುವಂತೆ ಒಡೆದಳು. ಆಮೇಲೆ ಮಗು ಸತ್ತಿತಲ್ಲಾ ಎಂದು ಗೋಳಾಡುತ್ತ ಮನೆಗೆ ಬಂದು ನೋಡಲು ಮಗು ಸುಖವಾಗಿ ನಿದ್ರಿಸುತ್ತಿತ್ತು. ಅದರ ಹತ್ತಿರ ಹಾವು ಎರಡು ತುಂಡಾಗಿ ಬಿದ್ದಿತ್ತು. ಅದನ್ನು ಕಂಡು 'ನನ್ನ ಮಗುವನ್ನು ಕಾಪಾಡಿದ ಮುಂಗುಸಿಯನ್ನು ಕೊಂಡಾಡದೆ ಕೊಂದುಹಾಕಿದೆನಲ್ಲಾ' ಎಂದು ವ್ಯಥೆಪಟ್ಟಳು. ಆದ್ದರಿಂದ ಸತ್ಪುರುಷರು ಆಕೆಯಹಾಗೆ ಅವಿಚಾರಿಗಳಾಗದೆ ಯಾವುದನ್ನೂ ವಿಚಾರಮಾಡಿ ಮಾಡಬೇಕು.

ಅದಕ್ಕೆ ಪ್ರತ್ಯುತ್ತರವಾಗಿ ಸೆಟ್ಟಿಯು ಈ ಕಥೆಯನ್ನು ಹೇಳಿದನು :—

ಕಾಮುಕವನವೆಂಬ ಒಂದು ಕಾಡಿನಲ್ಲಿ ಒಂದು ದೊಡ್ಡ ಹಾಳು ಭಾವಿಯಿತ್ತು. ಅದರೊಳಗೆ ಒಂದು ಹಾವು, ಒಂದು ಹುಲಿ, ಒಂದು ಕೋತಿ ಮತ್ತು ಒಬ್ಬ ಅಕ್ಕಸಾಲೆ ಇವರೆಲ್ಲರೂ ಬಿದ್ದಿರಲು, ಆ ದಾರಿಯಲ್ಲಿ ಕಾಶಿಗೆಂದು ಹೋಗುತ್ತಿದ್ದ ಕೌಶಿಕನೆಂಬ ಬ್ರಾಹ್ಮಣನು ಆ ಭಾವಿಯೊಳಗೆ ನೀರು ಸೇದಬೇಕೆಂದು ಒಂದು ಪಾತ್ರೆಗೆ ಹಗ್ಗಕಟ್ಟಿ ಬಿಟ್ಟನು. ಆ ಹಗ್ಗವನ್ನು ಹಿಡಿದುಕೊಂಡು ಒಂದುಸಾರಿ ಹುಲಿಯೂ, ಆಮೇಲೆ ಹಾವೂ, ಆಮೇಲೆ ಕೋತಿಯೂ ಕೊನೆಗೆ ಅಕ್ಕಸಾಲೆಯೂ ಮೇಲಕ್ಕೆ ಬಂದರು. ಆ ಮೂರು ಪ್ರಾಣಿಗಳೂ ಬ್ರಾಹ್ಮಣನ ಉಪಕಾರಕ್ಕೆ ಕೃತಜ್ಞತೆಯನ್ನು ತೋರ್ಪಡಿಸಿ ಏನಾದರೂ ಕಷ್ಟ ಪ್ರಾಪ್ತವಾದರೆ ಆಗ ತಮ್ಮನ್ನು ಜ್ಞಾಪಿಸಿಕೊಳ್ಳಬೇಕೆಂದು ಹೇಳಿದುವು. ಅಕ್ಕಸಾಲೆಯೂ 'ಈ ಕಾಡಿನ ಹತ್ತಿರವೇ ತಾಮ್ರಕೂಟವೆಂಬ ನಮ್ಮೂರು ಇದೆ. ಅಲ್ಲಿಗೆ ಬರಬೇಕು' ಎಂದು ಕೈಮುಗಿದು ಬೇಡಿಕೊಂಡನು. ಅದಕ್ಕೆ ಬ್ರಾಹ್ಮಣನು 'ನಾನು ಹಿಂತಿರುಗಿ ಹೋಗುವಾಗ ಅವಶ್ಯವಾಗಿ ಬರುತ್ತೇನೆ' ಎಂದು ಉತ್ತರಕೊಟ್ಟು ಹೊರಟುಹೋದನು. ಹಿಂತಿರುಗಿ ಬರುತ್ತ ಮೊದಲು ಕಪಿಯಿದ್ದ ಸ್ಥಳಕ್ಕೆ ಬರಲು ಅದು ಹಣ್ಣು ಹಂಪಲುಗಳನ್ನು ಕೊಟ್ಟು ಉಪಚರಿಸಿತು. ಹುಲಿಯಿರುವ ಕಡೆಗೆ ಬರಲು ಅದು ರತ್ನದ ಆಭರಣಗಳನ್ನು ಕೊಟ್ಟಿತು. ಬ್ರಾಹ್ಮಣನು ಅದನ್ನು ಬಹು ಸಂತೋಷದಿಂದ ಸ್ವೀಕರಿಸಿ ಅಕ್ಕಸಾಲೆಯ ಮನೆಗೆ ಬಂದನು. ಅಲ್ಲಿ ಅವನ ಸತ್ಕಾರವನ್ನು ಕೈಕೊಂಡು ಮರುದಿವಸ ಹುಲಿಯಿಂದ ಬಂದ ಆಭರಣಗಳನ್ನು ಮುಂದಿಟ್ಟು ಅವುಗಳನ್ನು ಕರಗಿಸಿ ಗಟ್ಟಿಮಾಡಿಕೊಡಬೇಕೆಂದು ಅವನ ಕೈಯಲ್ಲಿ ಕೊಟ್ಟನು. ಆದರೆ ಆ ದುರಾತ್ಮನು ಅವುಗಳನ್ನು ತೆಗೆದುಕೊಂಡುಹೋಗಿ ರಾಜನಿಗೆ ಒಪ್ಪಿಸಲು ರಾಜನು ಭಟರನ್ನು ಕರೆಸಿ ಬ್ರಾಹ್ಮಣನನ್ನು ಕೋಳಕ್ಕೆ ಹಾಕಿಸಿದನು. ಆಗ ಬ್ರಾಹ್ಮಣನು ಹಾವನ್ನು ನೆನೆಯಲು ಅದು ಬಂದು ರಾಜನ ಮಗನನ್ನು

ಕಚ್ಚಿತು. ಯಾರು ಏನುಮಾಡಿದರೂ ವಿಷವಿಳಿಯಲಿಲ್ಲ; ಆಗ ಕೌಶಿ
ಕನು ಮಂತ್ರಹಾಕಿ ಆ ವಿಷವನ್ನು ಇಳಿಸಿ ಸನ್ಮಾನಿತನಾಗಿ ನಡೆದ
ವೃತ್ತಾಂತವನ್ನೆಲ್ಲಾ ಹೇಳಿದನು. ಅರಸನು ಆಶ್ಚರ್ಯಪಟ್ಟು 'ಈ ಅಕ್ಕ
ಸಾಲೆ ವಿಶ್ವಾಸಘಾತಕ; ಇವನನ್ನು ದೋಚಿಕೊಂಡರೆ ದೋಷವಿಲ್ಲ'
ಎಂದು ಅವನ ಆಸ್ತಿಯನ್ನೆಲ್ಲಾ ಕಿತ್ತುಕೊಂಡುಬಿಟ್ಟನು. ಹೀಗೆ ಉಪ
ಕಾರಸ್ಮರಣೆಯಿಲ್ಲದವರು ಕೆಲವರು ಇರುತ್ತಾರೆ.

ಅದಕ್ಕೆ ಪ್ರತಿಯಾಗಿ ಮುನಿಗಳು ಮತ್ತೊಂದು ಕಥೆಯನ್ನು
ಹೇಳಿದರು :—

ಅವಂತಿ ದೇಶದ ಉಜ್ಜೈನಿ ಪಟ್ಟದಲ್ಲಿ ಮಹೇಂದ್ರನೆಂಬ ರಾಜನು
ಆಳುತ್ತಿದ್ದನು. ಅವನಲ್ಲಿ ಕುಬೇರನೆಂಬುವನು ರಾಜಶ್ರೇಷ್ಠಿಯಾಗಿ
ದ್ದನು. ಅವನಿಗೆ ಯಾರೋ ಒಬ್ಬರು ಬಂದು ಅಪೂರ್ವವಾದ
ಮಾವಿನ ಹಣ್ಣನ್ನು ತಂದುಕೊಡಲು ಅದನ್ನು ತಂದು ತನ್ನ ರಾಜನಿಗೆ
ಸಮರ್ಪಿಸಿ 'ದೊರೆಯೇ, ಇದನ್ನು ಮುದುಕರು ತಿಂದರೆ ಹುಡುಗರಾಗು
ವರು, ರೋಗಿಗಳು ತಿಂದರೆ ಅವರ ರೋಗ ವಾಸಿಯಾಗುವುದು' ಎಂದು
ಹೇಳಿದನು. ರಾಜನು ಆಶ್ಚರ್ಯಪಟ್ಟು, ಕುಬೇರನಿಗೆ ಸನ್ಮಾನ
ಮಾಡಿ, ಆ ಬೀಜವನ್ನು ತನ್ನ ಉದ್ಯಾನವನದಲ್ಲಿ ನೆಡಿಸಿದನು. ಕೆಲವು
ಕಾಲಕ್ಕೆ ಅದು ದೊಡ್ಡಮರವಾಗಿ ಹಣ್ಣು ಬಿಟ್ಟಿತು. ಆಗ ಒಂದು
ಹದ್ದು ಒಂದು ಹಾವನ್ನು ಕೊಂದು ಕಚ್ಚಿಕೊಂಡು ಅದರಮೇಲೆ
ಹಾರಿ ಹೋಗುತ್ತಿರಲು ಒಂದೆರಡು ವಿಷದ ತೊಟ್ಟುಗಳು ಬಂದು
ಹಣ್ಣಿನ ಮೇಲೆ ಬಿದ್ದು ಅದು ವಿಷಪೂರಿತವಾಗಿ ತೊಟ್ಟು ಕಳಚಿ
ಕೆಳಗೆ ಬಿತ್ತು. ಅದನ್ನು ರಾಜಕುಮಾರನು ತಿಂದು ಪ್ರಾಣಬಿಡಲು,
ರಾಜನು ಮಹಾ ದುಃಖದಿಂದಲೂ ಕೋಪದಿಂದಲೂ ಆ ಮರವನ್ನು ಕಡಿ
ಯಿಸಿ ಕುಬೇರನನ್ನು ಸಾಯುಬಡಿಸಿ ಅವನ ಸರ್ವಸ್ವವನ್ನೂ ಕಿತ್ತು
ಕೊಂಡನು. ಇಷ್ಟರೊಳಗೆ ಆ ಊರಿನ ಕುಂಟರು, ಕುರುಡರು, ರೋಗಿ
ಗಳು ಮುಂತಾದವರು ಸತ್ತರೆ ಸಾಕೆಂದು ಆ ಮರದ ಹಣ್ಣುಗಳನ್ನು

ತಿನ್ನಲು ಅವರ ದೇಹಗಳು ಬಂಗಾರದಂತಾದುವು. ದೊರೆಯು ಇದನ್ನು ನೋಡಿ ಆಶ್ಚರ್ಯಪಟ್ಟು ಕುಬೇರನ ಆಸ್ತಿಯನ್ನು ಹಿಂದಕ್ಕೆ ಕೊಟ್ಟು ಅವನ ಕ್ಷಮೆಯನ್ನು ಬೇಡಿಕೊಂಡನು. ಹೀಗೆ ಕೆಲವರು ಅವಿಚಾರತೆಯಿಂದ ಕೆಲಸ ಮಾಡುವರು, ಸಜ್ಜನರಾದವರು ಹಾಗಲ್ಲದೆ ಯಾವುದನ್ನೂ ವಿಚಾರಿಸಿ ಮಾಡಬೇಕು.

ಇದನ್ನು ಕೇಳಿ ವೈಶ್ಯನು ಮತ್ತೊಂದು ಕಥೆಯನ್ನು ಹೇಳಿದನು:—

ಸಾನಂದಗಿರಿಯೆಂಬ ಪಟ್ಟಣದಲ್ಲಿ ಅಮಿತನೆಂಬ ಬೇಡರವನಿದ್ದನು. ಅವನು ಒಂದು ದಿನ ದೈತ್ಯವನವೆಂಬ ಅಡವಿಯಲ್ಲಿ ಬಾಯಾರಿಕೆಯಾಗಿ ಮುಂದೆ ಹೋಗಲಾರದೆ ಕುಳ್ಳಿರಲು ಅವನನ್ನು ಒಂದು ಕೋತಿಯು ಕಂಡು ಅವನಿಗೆ ನೀರಿದ್ದ ಸ್ಥಳವನ್ನು ತೋರಿಸಿತು. ಅಲ್ಲಿ ಅವನು ನೀರು ಕುಡಿದು ಬಾಯಾರಿಕೆಯನ್ನು ತೀರಿಸಿಕೊಂಡು 'ನಾನು ಇನ್ನೂ ಬಹು ದೂರ ಹೋಗಬೇಕಾಗಿದೆ. ಆದ್ದರಿಂದ ನೀರಿದ್ದ ಕಡೆಯಲ್ಲಿಯೇ ಅದನ್ನು ಸ್ವಲ್ಪ ಶೇಖರಿಸಿಕೊಂಡು ಹೋಗಬೇಕು. ಇಲ್ಲದೆ ಮುಂದೆ ಬಾಯಾರಿಕೆಯಿಂದ ಸಾಯಬಾರದು' ಎಂದುಕೊಂಡು ಆ ಕೋತಿಯನ್ನು ಕೊಂದು ಅದರ ತೊಗಲಿನಲ್ಲಿ ನೀರನ್ನು ತುಂಬಿಕೊಂಡು ಹೋದನು. ಹೀಗೆ ಕೆಲವರು ಉಪಕಾರಸ್ಮರಣೆಯಿಲ್ಲದವರುಂಟು.

ಅದನ್ನು ಕೇಳಿ ಮುನಿಗಳು ಈ ಕಥೆಯನ್ನು ಹೇಳಿದರು :—

ಕೌಶಾಂಬಿಯೆಂಬ ಪಟ್ಟಣದಲ್ಲಿ ವಿಶಾಖನಂದನನೆಂಬ ವರ್ತಕನಿದ್ದನು. ಅವನ ಮಗನಾದ ಅಂಗಾರಕನೆಂಬವನು ಮನೆಯ ಹೊರಗಡೆ ಒಂದು ಮಣೆಯ ಮೇಲೆ ಬಟ್ಟೆಯನ್ನು ಹಾಸಿ ಅದರ ಮೇಲೆ ಒಂದು ಪದ್ಮರಾಗಮಣಿಯನ್ನಿಟ್ಟು ನೋಡುತ್ತಿರಲು, ಆ ಮಾರ್ಗವಾಗಿ ಮೇಧಾವಿ ಮುನೀಶ್ವರರೆಂಬ ಒಬ್ಬರು ಮುನಿಗಳು ಬಂದರು. ಅವರನ್ನು ಕಂಡು ನಮಸ್ಕರಿಸಿ ಒಳಗೆ ಕರೆದುಕೊಂಡು ಹೋಗಿ ಬರುವಷ್ಟರೊಳಗೆ ಒಂದು ನವಿಲು ಆ ರತ್ನವನ್ನು ಮಾಂಸವೆಂಬ ಭ್ರಾಂತಿಯಿಂದ ನುಂಗಿ ಹೋಯಿತು. ಹೀಗೆ ಅಂಗಾರಕನು ಮತ್ತೆ ಅಲ್ಲಿಗೆ ಬಂದಾಗ ರತ್ನವಿಲ್ಲದುದನ್ನು ಕಂಡು

ಮೇಧಾವಿಮುನಿಗಳೇ ತೆಗೆದುಕೊಂಡಿರಬೇಕೆಂದು ಯೋಚಿಸಿ ಹಿಂತಿರುಗಿ ಬಂದು ಅವರನ್ನು ಕುರಿತು 'ಸಕಲವಸ್ತುವನ್ನೂ ತೊರೆದ ನಿಮಗೆ ಈ ರತ್ನದ ಮೇಲೇಕೆ ಮೋಹ ? ಕೊಟ್ಟುಬಿಡಿ' ಎಂದು ಅವರನ್ನು ಪೀಡಿಸಿದನು. ಮುನಿಗಳಿಗೆ ಈ ಮಾತನ್ನು ಕೇಳಿ ಆಶ್ಚರ್ಯವಾಯಿತು. ಏನೇನು ಹೇಳಿದರೂ ವರ್ತಕನು ನಂಬಲಿಲ್ಲ. ಆದ್ದರಿಂದ ಅವರು 'ಸುಮ್ಮನಿರುವುದೇ ಲೇಸೆಂದು' ಮೌನದಿಂದಿದ್ದರು. ಮಾತನಾಡಿಸಿದರೂ ಆಡುವುದಿಲ್ಲವೇ ಎಂದು ವೈಶ್ಯನು ಅವರನ್ನು ಸೊಪ್ಪು ಸೊವಡಾಗುವವರೆಗೂ ಹೊಡೆದನು. ಆದರೂ ಅವರು ಅಲ್ಲಾಡದೆ ಶುಕ್ಲಧ್ಯಾನದಲ್ಲಿದ್ದರು. ಆಗ ಕೇವಲಿಪೂಜೆಮಾಡುವುದಕ್ಕೆಂದು ಚತುರ್ವಿಧದೇವತೆಗಳೂ ನೆರೆಯಲು ಅಂಗಾರಕನು ಸುಮ್ಮನಾದನು. ಈ ಮಧ್ಯೆ ಹೊಡೆಯುತ್ತಿರುವಾಗ ಒಂದು ಕೋಲಿನ ತುದಿ ಮುರಿದು ಹಾರಿಹೋಗಿ ಆ ನವಿಲಿನ ಕತ್ತನ್ನು ಕತ್ತರಿಸಿತು. ಅದರೊಳಗಿಂದ ಕೂಡಲೆ ಆ ಮಣಿಯು ಹೊರಕ್ಕೆ ಬಿತ್ತು. ಅದನ್ನು ಕಂಡು ಅಂಗಾರಕನಿಗೆ ಪಶ್ಚಾತ್ತಾಪ ಹುಟ್ಟಿ ವೈರಾಗ್ಯವುಂಟಾಗಲು ಜಿನದೀಕ್ಷೆಯನ್ನು ಪಡೆದನು. ಹೀಗೆ ಅಜ್ಞಾನಿಯಾಗಿ ಕಳ್ಳರಲ್ಲದವರನ್ನು ಕಳ್ಳರೆನ್ನುವುದು ಧರ್ಮವಲ್ಲ.

ಇಷ್ಟಾದರೂ ವೈಶ್ಯನಿಗೆ ನಂಬುಗೆ ಬರಲಿಲ್ಲ. ಆದ್ದರಿಂದ ಸುಮ್ಮನೆ ಬಾಯಿ ನೋಯಿಸಿಕೊಳ್ಳುವುದೇಕೆಂದು ಅವರು ಮೌನವಾಗಿದ್ದುಬಿಟ್ಟರು. ಸೆಟ್ಟಿಗೆ ಅದನ್ನು ನೋಡಿ ಮತ್ತೂ ರೇಗಿತು. ಇದೆಲ್ಲವನ್ನೂ ಕೊಠಡಿಯ ಬಾಗಿಲ ಹಿಂದೆ ನಿಂತು ಕೇಳುತ್ತಿದ್ದ ಜಿನದಾಸನು ತಮ್ಮ ತಂದೆಯ ಲೋಭಕ್ಕೂ ಅವಿವೇಕಕ್ಕೂ ಬೇಸರಗೊಂಡು ಬಾಗಿಲನ್ನು ತೆರೆಯಿಸಿ 'ತಗೂ ನಿನ್ನ ಚಿನ್ನವನ್ನು' ಎಂದು ಅದನ್ನು ತಂದೆಯ ಮುಖದ ಮೇಲೆ ಎಸೆದು ಮುನಿಗಳಿಂದ ಜೈನದೀಕ್ಷೆಯನ್ನು ಕೈಕೊಂಡನು. ಮಗನು ಸಂನ್ಯಾಸ ತೆಗೆದುಕೊಂಡುದನ್ನು ನೋಡಿ ಜಿನದತ್ತಸೆಟ್ಟಿಗೂ ವೈರಾಗ್ಯ ಹುಟ್ಟಲು ಅವನೂ ದೀಕ್ಷೆಯನ್ನು ಪಡೆದು ಮುಂದೆ ಸದ್ಗತಿಯನ್ನು ಹೊಂದಿದನು.

---

# ಹದಿಮೂರನೆಯ ಆಶ್ವಾಸ

## ಬ್ರಹ್ಮ (ಚರ್ಯ)ದ ಕಥೆ

ವತ್ಸಕಾವತೀ ದೇಶದ ಕೌಶಾಂಬಿಯೆಂಬ ನಗರದಲ್ಲಿ ದಂತಿಬಲನೆಂಬ ರಾಜನು ಧಾರಿಣೀದೇವಿಯೆಂಬ ಹೆಂಡತಿಯಿಂದಲೂ ಪ್ರಮಾಥನಂದನನೆಂಬ ಮಗನಿಂದಲೂ ಕೂಡಿ ರಾಜ್ಯವಾಳುತ್ತಿದ್ದನು. ಒಂದು ದಿನ ವಸಂತಕಾಲದಲ್ಲಿ ಇವರೆಲ್ಲರೂ ವನವಿಹಾರ ಮಾಡುತ್ತಿದ್ದಾಗ ವಸಂತನೆಂಬ ರಾಜಪುತ್ರನು ತನ್ನ ಹೆಂಡತಿಯಾದ ವಸಂತತಿಲಕೆಗೆ ಮಾವಿನ ಹಣ್ಣುಗಳನ್ನು ನೆಲಕ್ಕೆ ಬೀಳದಂತೆ ಬಾಣ ಪ್ರಯೋಗ ಮಾಡಿ ಕುಯ್ದುಕೊಡುತ್ತಿರಲು ಆದನ್ನು ಪ್ರಮಾಥಿಕುಮಾರನು ತಾನೂ ಧನುರ್ವಿದ್ಯೆಯಲ್ಲಿ ನೈಪುಣ್ಯವನ್ನು ಪಡೆಯಬೇಕೆಂದು ಸಂಕಲ್ಪಿಸಿ ಪಾಟಲಿಪುತ್ರನಗರಕ್ಕೆ ಹೋಗಿ ಅಲ್ಲಿ ದ್ರೋಣಾಚಾರ್ಯರನ್ನು ಪ್ರಾರ್ಥಿಸಿಕೊಂಡನು. ಅವರು ಅನುಗ್ರಹಿಸಲು ಕ್ಷಿಪ್ರದಲ್ಲಿಯೇ ಅವನು ಧನುರ್ವಿದ್ಯೆಯಲ್ಲಿ ಬಹು ಕುಶಲನಾದನು.

ಒಂದು ದಿನ ಆ ಊರಿನ ದೊರೆಯಾದ ಸಿಂಹಸೇನಮಹಾರಾಜನ ಮಗಳಾದ ಚಂದ್ರಲೇಖೆಯು ಊರಹೊರಗಿದ್ದ ಚೈತ್ಯಾಲಯಕ್ಕೆ ಹೋಗುತ್ತಿರಲು ಆಗ ಒಂದು ಮದದಾನೆಯು ಬಂಧನವನ್ನು ಕಿತ್ತುಕೊಂಡು ಎದುರಾಗಿ ಬಂದಿತು. ಎಲ್ಲರೂ ದಿಕ್ಕಾಪಾಲಾಗಿ ಓಡಿ ಹೋಗುತ್ತಿರಲು ಪ್ರಮಾಥಿಕುಮಾರನು ಅದನ್ನು ಹಿಡಿದು ನಿಲ್ಲಿಸಿ ಅದರ ಸ್ಥಳದಲ್ಲಿ ಕಟ್ಟಿಹಾಕಿದನು. ಈ ಧೈರ್ಯ ಶೌರ್ಯಾದಿಗಳನ್ನು ನೋಡಿ ರಾಜಪುತ್ರಿಯು ಅವನನ್ನ ಮನಸ್ಸಿನಲ್ಲಿ ವರಿಸಿದಳು ; ಊರಿನವರೆಲ್ಲರೂ ಹೊಗಳಿದರು. ಇದನ್ನು ಕಂಡು ದ್ರೋಣಾಚಾರ್ಯರ ಮಿಕ್ಕ ಶಿಷ್ಯರಿಗೆ ಸೈರಣೆ ಹುಟ್ಟಲಿಲ್ಲ. ಅದು ದ್ರೋಣಾಚಾರ್ಯರಿಗೆ ತಿಳಿದು ಅವರ ಯೋಗ್ಯತೆಯನ್ನು ಅವರಿಗೆ ತಿಳಿಸುವ ಉದ್ದೇಶದಿಂದ, ಭೂಮಿಗೆ ಬೀಳದಂತೆ ಬಾಣ

ಹೊಡೆದು ತೆಂಗಿನಕಾಯನ್ನು ಇದ್ದ ಕಡೆಗೇ ತರಿಸಬಲ್ಲವರಾರು ನೋಡೋ ಣವೆಂದು ಒಂದು ಪಂತವನ್ನು ಹೂಡಿದರು. ಅದರಲ್ಲಿ ಮಿಕ್ಕವರೆಲ್ಲರೂ ಸೋತು ಪ್ರಮಾಥಕುಮಾರನೊಬ್ಬನೇ ಜಯಶೀಲನಾದನು. ಇದರಿಂದ ಇತರ ಶಿಷ್ಯರಿಗೆ ಹೊಟ್ಟೆಯಕಿಚ್ಚು ಇನ್ನೂ ಹೆಚ್ಚಾಯಿತು. ಆದುದ ರಿಂದ ಒಂದು ದಿನ ಮದದಾನೆಯೊಂದು ಎದುರಿಗೆ ಬರುತ್ತಿರಲು ಎಲ್ಲರೂ ಅವನನ್ನು ಉಬ್ಬಿಸಿ ಅದನ್ನು ತಡೆಯುವಂತೆ ಹೇಳಿದರು. ಅದರ ಕಾಲಿಗೆ ಸಿಕ್ಕಿ ಸಾಯುವನೆಂದು ಅವರ ಆಸೆ. ಆದರೆ ಅವನು ಲಕ್ಷ್ಯವಿಲ್ಲದೆ ಹೊಡೆದು ಅಟ್ಟಿದನು ಅಲ್ಲಿಂದ ಅವರು ತಮ್ಮ ಕೀಳುತನವನ್ನು ಬಿಟ್ಟು ಅವನಲ್ಲಿ ಗೌರವವನ್ನು ಇಟ್ಟರು.

ಕೆಲವು ಕಾಲಾನಂತರ ಸಿಂಹಸೇನಮಹಾರಾಜನ ಪ್ರಕಟನೆ ಯಂತೆ ಚಂದ್ರಕವೇಧವೆಂಬ ಬಾಣಪ್ರಯೋಗವನ್ನು ತೋರಿಸಿ ಅವನ ಮಗಳಾದ ಚಂದ್ರಲೇಖೆಯನ್ನೂ, ಜೊತೆಯಲ್ಲಿ ಅರ್ಧ ರಾಜ್ಯವನ್ನೂ ಸಂಪಾ ದಿಸಿ ಸುಖವಾಗಿರುತ್ತಿದ್ದು, ಒಂದು ದಿನ, ಕೌಶಾಂಬೀಪುರವನ್ನು ಶತ್ರು ಗಳು ಮುತ್ತಿರುವರೆಂದು ಕೇಳಿ ತಾನೂ ತನ್ನ ಹೆಂಡತಿಯೂ ರಥಾರೂಢ ರಾಗಿ ಹೊರಟರು. ದಾರಿಯಲ್ಲಿ ಒಂದು ಕಾಡು ಸಿಕ್ಕಲು ಅದರೊಳಗೆ ಸುವೇಗನೆಂಬೊಬ್ಬನ ಕೈಗೆಸಿಕ್ಕಿದರು. ಅವನು ಹಿಂದೆ ರಾಜನಾಗಿದ್ದು ದಾಯಾದರು ರಾಜ್ಯವನ್ನು ಕಿತ್ತುಕೊಳ್ಳಲು ಕಾಡಿಗೆ ಬಂದು ಅಲ್ಲಿ ಕಳ್ಳ ರನ್ನು ಕಟ್ಟಿಕೊಂಡು ಅವರಿಗೆ ಯಜಮಾನನಾಗಿರುತ್ತ ದ್ರೋಣಾಚಾರ್ಯರ ಪ್ರತಿಮೆಯನ್ನು ಮಾಡಿಟ್ಟುಕೊಂಡು ಅದರ ಮುಂದೆ ಧನುರ್ವಿದ್ಯೆಯನ್ನು ನಿತ್ಯವೂ ಅಭ್ಯಾಸಮಾಡುತ್ತಿದ್ದನು. ಈಗ ಅವನು ಚಂದ್ರಲೇಖೆ ಯನ್ನು ನೋಡಿ ಮೋಹಗೊಂಡು ಪ್ರಮಾಥಿಕುಮಾರನನ್ನು ಅಡ್ಡಗಟ್ಟಿ ದನು. ಏಟುತಿಂದುಬಂದ ಅವರ ಪರಿವಾರದವರು ಬೇಡವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಪ್ರಮಾಥಿಕುಮಾರನಿಗೂ ಸುವೇಗನಿಗೂ ಘೋರವಾದ ಯುದ್ಧವಾಗಿ ಕೊನೆಗೆ ಪ್ರಮಾಥಿಕುಮಾರನ ಬಾಣಗಳೆ ಲ್ಲವೂ ಮುಗಿದುಹೋಗಿ ಎರಡು ಮಾತ್ರ ಉಳಿದುಕೊಂಡುವು. ಆಗ ಚಂದ್ರಲೇಖೆಯು ತನ್ನ ಪತಿಯು ಸಾವು ನಿಶ್ಚಯವೆಂದು ಭಾವಿಸಿ ಶತ್ರು

ವಿನ ಕೈಗೆ ಸಿಕ್ಕುವುದಕ್ಕಿಂತ ಸಾಯುವುದೇ ಮೇಲೆಂದು ತಾನು ತನ್ನ ಗಂಡನಿಗೂ ಸುವೇಗನಿಗೂ ಮಧ್ಯೆ ಬಂದು ನಿಂತಳು. ಸುವೇಗನು ಅವಳ ಸೌಂದರ್ಯವನ್ನು ನೋಡಿ ತಬ್ಬಿಬ್ಬಾಗಲು ಆಗ ಪ್ರಮಾಥಕುಮಾರನು ಗುರಿನೋಡಿ ಬಾಣಪ್ರಯೋಗ ಮಾಡಿದನು. ಶತ್ರುವಿನ ತಲೆಯು ನೆಲಕ್ಕೆ ಉರುಳಿತು. ಅವನಿಗೆ ನರಕ ಪ್ರಾಪ್ತಿಯಾಯಿತು.

ಅನಂತರ ಕೌಶಾಂಬಿಗೆ ಬಂದು ಮುತ್ತಿಗೆ ಹಾಕಿದ್ದ ಶತ್ರುಗಳನ್ನು ಓಡಿಸಿ ತಾಯಿತಂದೆಗಳ ಕಣ್ಣಿಗೆ ಆನಂದವನ್ನು ಬೀರುತ್ತ ಸೌಂದರ ಮಹಾದೇವಿ ಚಂದ್ರಲೇಖೆಯವರೊಡನೆ ಸುಖವಾಗಿದ್ದನು.

ಹಲವು ಕಾಲ ರಾಜ್ಯವಾಳಿದ ಮೇಲೆ ಒಂದು ದಿನ ತಲೆ ನರೆತುದನ್ನು ನೋಡಿಕೊಂಡು ವೈರಾಗ್ಯ ಹುಟ್ಟಿ ರಾಜ್ಯವನ್ನು ತನ್ನ ಮಗನಾದ ವಿಮಲಕೀರ್ತಿಗೆ ಕೊಟ್ಟು ಸಮಾಧಿಮರಣದಿಂದ ಮುಡಿಪಿ ದೇವಗತಿಯನ್ನು ಪಡೆದನು.

---

# ಹದಿನಾಲ್ಕನೆಯ ಆಶ್ವಾಸ

## ಅಪರಿಗ್ರಹದ ಕಥೆ

ಕುರುಜಾಂಗಣದೇಶದ ಶ್ರಾವಂತಿಯೆಂಬ ಪಟ್ಟಣದಲ್ಲಿ ಉಪರಿಚರನೆಂಬ ರಾಜನು ಪದ್ಮಾವತಿ, ಪ್ರಭಾವತಿ, ಸುಪ್ರಭೆ, ಕನಕಪ್ರಭೆಯೆಂಬ ನಾಲ್ಕು ಜನ ಪಟ್ಟದರಸಿಯರೊಡನೆ ಸುಖದಿಂದ ರಾಜ್ಯವಾಳುತ್ತಿದ್ದನು. ಪದ್ಮಾವತಿಯ ಹೊಟ್ಟೆಯಲ್ಲಿ ಅನಂತವೀರ್ಯನೆಂಬ ಮಗನು ಹುಟ್ಟಿದನು.

ಒಂದು ದಿನ ರಾಜನು ತನ್ನ ಹೆಂಡತಿಯರೊಡನೆ ಜಲಕ್ರೀಡೆಯಾಡುತ್ತಿರಲು ವಿಮಾನದಲ್ಲಿ ಹೋಗುತ್ತಿದ್ದ ಮದನವೇಗೆಯೆಂಬ ಖೇಚರಸ್ತ್ರೀಯು ತನ್ನ ಗಂಡನಾದ ವಜ್ರದಾಡನಿಗೆ ಅದನ್ನು ತೋರಿಸಿ 'ಇವರೇ ಪುಣ್ಯವಂತರು! ನಾವು ಹೆಸರುಮಟ್ಟಿಗೆ ಖೇಚರರು' ಎಂದಳು. ವಜ್ರದಾಡನಿಗೆ ಮಾತ್ಸರ್ಯಹುಟ್ಟಿ ಹೆಂಡತಿಯನ್ನು ಅಲಕಾ ಪಟ್ಟಣದಲ್ಲಿ ಬಿಟ್ಟು ಬರುತ್ತ, ಒಂದು ದೊಡ್ಡ ಅರೆಯಬಂಡೆಯನ್ನು ಕಂಡು ರಾಜನು ಜಲಕ್ರೀಡೆಯಾಡುತ್ತಿದ್ದ ಕೊಳವು ಕಾಣದಂತೆ ಮುಚ್ಚಿಬಿಟ್ಟನು. ಯಾರು ಏನು ಮಾಡಿದರೂ ಅಷ್ಟು ದೊಡ್ಡ ಬಂಡೆಯನ್ನು ಅಲ್ಲಾಡಿಸುವುದಕ್ಕೂ ಆಗದೆ ಹೋಗಲು ಅರಸಿಯರು ಅದು ಕರ್ಮಫಲವೆಂದು ಶಾಂತರಾದರು. ಆದರೆ ರಾಜನಿಗೆ ಮಾತ್ರ ಆ ವೈರಾಗ್ಯಬುದ್ಧಿಯುಂಟಾಗಲಿಲ್ಲ. ಹೆಂಡಿರು ಎಷ್ಟು ಉಪದೇಶಮಾಡಿದರೂ ಈ ಪ್ರಪಂಚದ ವೈಭವದಮೇಲೇ ಜ್ಞಾನವು ಎಳೆಯುತ್ತ ಸರ್ಪಾಶ್ರಯವೆಂಬ ಗುಹೆಯಲ್ಲಿ ಒಂದು ಹಾವಾಗಿ ಹುಟ್ಟಿದನು. ಅವನ ಹೆಂಡತಿಯರು ಆನಂದ, ಕಾಂತ, ಅಮಿತಕಾಂತ, ಸುಕಾಂತ ಎಂಬ ಸಾಮಾನಿತದೇವರಾಗಿ ಹುಟ್ಟಿದರು.

ಇತ್ತ ಅನಂತವೀರ್ಯನು ಪಟ್ಟಾಭಿಷಿಕ್ತನಾಗಿ ರಾಜ್ಯವಾಳು ತ್ತಿರಲು ಶ್ರಾಂತಿಗೆ ಸಾರಸ್ವತರೆಂಬ ಮುನಿಗಳು ಬಂದರು. ಅವರಿಂದ ತಮ್ಮ ತಾಯಿತಂದೆಗಳ ವಿಚಾರವನ್ನು ತಿಳಿದು ಅವರು ಹೇಳಿದಂತೆ ಹಾವಾಗಿದ್ದ ತಮ್ಮ ತಂದೆಗೆ ಧರ್ಮವನ್ನು ಉಪದೇಶಿಸಿದನು. ಅಷ್ಟು ಹೊತ್ತಿಗೆ ಅವನ ತಾಯಿಯರೂ ದೇವಲೋಕದಿಂದಿಳಿದುಬಂದು ಅಪರಿ ಗ್ರಹದ ಮಹತ್ವವನ್ನು ಬೋಧಿಸಿದರು. ಅನಂತರ ಸಾರಸ್ವತರು ಬಂದು ಆ ಹಾವಿಗೆ ಅಣುವ್ರತಗಳನ್ನು ಕೊಟ್ಟು ಸಂನ್ಯಸನದ ಮಹಿ ಮೆಯನ್ನು ತಿಳಿಸಿದರು. ಅನಂತವೀರ್ಯನೂ ತಂದೆಗೆ ಸದ್ಗತಿಯಾಗ ಲೆಂದು ಆ ಹಾವಿನ ಆಯುಸ್ಸಿನಲ್ಲಿ ಇನ್ನೂ ಮಿಕ್ಕಿದ್ದ ಹದಿನೈದುದಿನವೂ ಜಿನಪೂಜಾದಿಗಳನ್ನು ಮಾಡಿಸುತ್ತಿದ್ದನು. ಆದರೂ ಆ ಹಾವು ಸಾಯು ವಾಗ ವಜ್ರದಾಡನು ಮಾಡಿದ ಸಾಹಸವನ್ನೇ ನೆನೆಯುತ್ತ ಸತ್ತುದರಿಂದ ಭವನವಾಸಿಗಲೋಕದಲ್ಲಿ ವಿಮಲನೆಂಬ ದೇವನಾಗಿ ಹುಟ್ಟಿತು. ಇದನ್ನು ತಿಳಿದು ಆಶ್ಚರ್ಯಪಟ್ಟು 'ಇದೆಲ್ಲಾ ಅಪರಿಗ್ರಹದ ಫಲ' ಎಂದುಕೊಂಡು ಅನಂತವೀರ್ಯನು ರಾಜ್ಯವನ್ನು ತನ್ನ ಮಗನಾದ ಸುಬಾಹು ಕುಮಾರನಿಗೆ ಕೊಟ್ಟು ತಾನು ದೀಕ್ಷೆಯನ್ನು ಕೈಕೊಂಡು ತಪಸ್ಸಿಗೆ ಹೊರಟುಹೋದನು.

ಇತ್ತಲಾಗಿ ವಿಮಲನು ಭವನವಾಸಿಯಾದ ವಜ್ರದಾಡನನ್ನು ಕಂಡು ಪೂರ್ವ ವೈರದಿಂದ, ಆ ಖಚರನನ್ನು ಹಿಡಿದು ಅವನ ವಿದ್ಯೆಯನ್ನೆಲ್ಲಾ ನಾಶಗೊಳಿಸಿ ಅವನನ್ನು ಅವನ ಹೆಂಡತಿಯರನ್ನು ನೀರಲ್ಲಿ ಮುಳುಗಿಸಿ ಅದ್ದಿ ತೆಗೆದು ತನ್ನ ಹೊಟ್ಟೆಯುಕಿಚ್ಚನ್ನು ತೀರಿಸಿಕೊಂಡನು. ವಜ್ರ ದಾಡನು ಹೀಗೆ ಹಗೆಯು ಕೈಯಲ್ಲಿ ಸತ್ತು ರೌದ್ರಧ್ಯಾನದಿಂದ ಮೊದಲ ನರಕದಲ್ಲಿ ಹುಟ್ಟಿದನು. ವಿಮಲದೇವನು ಹಸ್ತಿನಾಪುರದ ರಾಜನಾದ ಜಯದತ್ತಮಹಾರಾಜನ ಹೆಂಡತಿ ವಿಜಯಮಹಾದೇವಿಯು ಹೊಟ್ಟೆ ಯಲ್ಲಿ ಗುರುದತ್ತನೆಂಬ ಮಗನಾಗಿ ಹುಟ್ಟಿ ಕಾಲಕ್ರಮದಲ್ಲಿ ತಂದೆಯ ರಾಜ್ಯಕ್ಕೆ ಬಂದು ಚಂಪಾಪುರದ ಧಾತ್ರೀವಾಹದ ಮಹಾರಾಜನ ಮಗ ಳಾದ ಅಭಯಮತಿಯನ್ನು ಮದುವೆಯಾಗಿ ಸುಖದಿಂದಿದ್ದನು.

ಇತ್ತ ವಜ್ರದಾಡನು ನರಕದಿಂದ ಬಂದು ನೀಲಗಿರಿಯೆಂಬ ಪರ್ವತದ ಹುಲಿಯಾಗಿ ಹುಟ್ಟಿ ಅದರ ತಪ್ಪಲಲ್ಲಿದ್ದ ಜನರನ್ನೆಲ್ಲಾ ಕಾಡುತ್ತಿದ್ದನು. ಅಲ್ಲಿಯ ಪ್ರಜೆಗಳು ಅದರ ಕಾಟವನ್ನು ತಡೆಯಲಾರದೆ ಗೋಳಿಡಲು ರಾಜನು ಹೋಗಿ ಪೂರ್ವವೈರದಿಂದ ಹುಲಿಯ ಗುಹೆಯತುಂಬ ಪುಳ್ಳೆಗಳನ್ನು ಒಟ್ಟಿಸಿ ಬೆಂಕಿ ಹೊತ್ತಿಸಿದನು. ಹುಲಿಯು ಒಳಗೇ ಬೆಂದು ಸತ್ತು ಪಳ್ಳಖೇಟವೆಂಬ ಊರಿನಲ್ಲಿದ್ದ ಇಳಾಭರಣನೆಂಬವನ ಹೆಂಡತಿ ಕಂಟಕಿಯೆಂಬಾಕೆಯ ಹೊಟ್ಟೆಯಲ್ಲಿ ಹಲಮುಖನೆಂಬ ಮಗನಾಗಿ ಹುಟ್ಟಿತು.

ಗುರುದತ್ತ ಮಹಾರಾಜನು ಅಮೃತಾಶ್ರಯಭಟ್ಟಾರಕರಿಂದ ತನ್ನ ಪೂರ್ವಜನ್ಮ ವೃತ್ತಾಂತವನ್ನು ತಿಳಿದು ವೈರಾಗ್ಯಹುಟ್ಟಿ ತಪಸ್ವಿಯಾಗಿ ತಿರುಗುತ್ತ ಪಳ್ಳಖೇಟಪುರದಲ್ಲಿ ಬಂದು ನಿಂತನು. ಅಲ್ಲಿ ಹಲಮುಖನು ತನ್ನ ಗದ್ದೆಗೆ ಉಳಲೆಂದು ಹೋಗುತ್ತ ದಾರಿಯಲ್ಲಿ ನಿಂತಿದ್ದ ಗುರುದತ್ತಭಟ್ಟಾರಕರನ್ನು ಕುರಿತು ‘ಇಲ್ಲಿಗೆ ನನ್ನ ಹೆಂಡತಿ ಅನ್ನವನ್ನು ತೆಗೆದುಕೊಂಡು ಬರುತ್ತಾಳೆ; ಇಲ್ಲಿ ಕೆಸರಾಗಿದ್ದದ್ದರಿಂದ ಪಶ್ಚಿಮದಿಕ್ಕಿನ ಗದ್ದೆಗೆ ಹೋದನೆಂದು ತಿಳಿಸಿ’ ಎಂದು ಹೇಳಿಹೋದನು. ಆದರೆ ಹೆಂಡತಿ ಸಾಯಂಕಾಲದವರೆಗೂ ಅನ್ನವನ್ನು ತರಲಿಲ್ಲ; ಅಲ್ಲಿದ್ದ ಋಷಿಗಳು ನನಗೇನೂ ಹೇಳಲಿಲ್ಲವೆಂದು ಸುಳ್ಳುನುಡಿದಳು. ಅವಳ ಮಾತನ್ನು ಕೇಳಿ ಹಲಮುಖನು ಕೋಪಗೊಂಡು ಗುರುದತ್ತನ ಒಟ್ಟಿಗೆ ಎಣ್ಣೆಯನ್ನು ಹುಯ್ದು ಹೊತ್ತಿಸಿದನು. ಆದರೆ ಆತನು ಎಲ್ಲವನ್ನೂ ತೊರೆದು ಕೇವಲ ಜ್ಞಾನಿಯಾಗಿ ನಿಲ್ಲಲು ಚತುರ್ವಿಧ ದೇವತೆಗಳೂ ಕೇವಲಿಪೂಜೆಯನ್ನು ಮಾಡಿ ನಾನಾವಿಧದಿಂದ ಸ್ತುತಿಸಿದರು. ಇದನ್ನು ನೋಡಿ ಹಲಮುಖನು ಹೆದರಿ ತನ್ನ ಹಿಂದಿನ ವೃತ್ತಾಂತವನ್ನೆಲ್ಲ ತಿಳಿದು ವಿರಕ್ತನಾಗಿ ದೀಕ್ಷೆಯನ್ನು ಪಡೆದನು.

# ಧರ್ಮಾಮೃತಂ

## ದಶಮಾಶ್ವಾಸಂ

ಶ್ರೀದಯಿತೆಗೆ ನಿರ್ವಾಣ
ಶ್ರೀದಯಿತೆಗೆ ದರ್ಶನಾಂಗಮೆಂಟುಂ ಚಿತ್ತಾ |
ಹ್ಲಾದಕರಮೆಂದು ನಂಬಿದ [1]
ನಾದರದಿಂ ಸುಕವಿನಿಕರಪಿಕಮಾಕಂದಂ ॥ ೧

[ಅಂತು ಮುಕ್ತಿಶ್ರೀಶೀಘ್ರಾಕರ್ಷಣವಾಗಿಸುವ ದರ್ಶನಾಂಗಮುಮಂ ಲೇಸಾಗಿ ಕೇಳ್ದು ಶ್ರೇಣಿಕಮಹಾರಾಜಂ ವಿಶ್ವಲೋಕೈಕವಂದ್ಯರೆನಿಸಿದ ಗೌತಮಸ್ವಾಮಿಗಳ್ ಪೊಡೆಮಟ್ಟು ಸುಗತಿವನಿತೆಯ ಕಡೆಗಣ್ಣ ಚೆಲ್ಲಮೆನಿಸುವ ಕೊಲ್ಲದ ಪ್ರತಮನೆನಗಱಿಪುವುದೆಂದು ಕೈಗಳಂ ಮುಗಿದು ಬೆಸಗೊಳ್ವುದುಂ ॥ ೨

ಮುನಿರತ್ನಂ ಪರಮಜಿನೇ
ಶನ ಮತಮಂ ಸಕಲಜೀವಹಿತಮಂ ಗಂಭೀ |
ರನಿನಾದದಿಂದೆ[ನುಡಿದರ್]
ಮನದೊಳ್ ಕಡುರಾಗಮೊದವೆ ನಲಿಯೆ ನರೇಂದ್ರಂ] [2] ॥ ೩

ಇಂತೆಂದು ಪೇೞ್ದರ್ ॥ ೪

ಕರೆಗೊಯ್ದ ಸೀರೆಯಂತೆ ರಾಶಿಗೆ ಬಂದಾರಂಬದಂತೆ ಪತ್ರಂಸೇಳ್ದ ಸಾಲದಂತೆ ಕೈನೀರೆಱೆದ ಮದುವೆಯಂತೆ ಫಲಮಾದ ತೋಂಟದಂತೆ

---

1 ಕರನೆನಿಸಿ ಮೆರೆದಿಹ (ಕ. ಬ.)

2 ಅಂತು ದರ್ಶನಮುಮನೆಂಟಂಗಮುಮಂ ಮನದೆಱಕದಿಂ ಕೈಕೊಂಡು ಮುಂದಣ ಮುಕ್ತಿವನಿತೆಯ ಚಲ್ಲೆಗಂಗಳೆನಿಸುವ ಕೊಲ್ಲದವ್ರತದ ಕಥೆಯುಂ ಬೆಸಸಿಮೆಂಬುದುಂ (ಗ)

ಕೈಗರ್ಚಿದೂಟದಂತೆ ಗೆಲ್ಲಂಗೊಂಡ ಕಾಳಗದಂತೆ ಕಾಲ್ವಿಡಿದ ನಲ್ಲಳಂತೆ ಮೀಸೆಬಂದ ಜವ್ವನದಂತೆ ಪೊತ್ತಿಸಿದ ಸೊಡರಂತೆ ದರ್ಶನದೆಂಟಂಗದೊಳಂ [1] ಮುನ್ನಂ ಸಂಪೂರ್ಣನಾಗಿ ನೆರೆದು, ಮಾಡಿದ ಮನೆಯಂ ಪುಗುವಂತೆ ಪಣ್ಣಿದಾನೆಯನೇಱುವಂತೆ ಮಡಿಯನುಡುವಂತೆ ಸಮೆದಾಭರಣಮಂ ತುಡುವಂತೆ ಪರಿದಾಡುವ ಮಗನಂ ಮುದ್ದಾಡುವಂತೆ ಸಜ್ಜನಳಾದ ಸೂಳೆಯಂ ಸಿಂಗಾರಂಗೆಯ್ದಂತೆ ತನಗಾದೂರಂ ಸೇರುವಂತೆ [2] ಹಿತವಂಗೆ ಕಾರ್ಯಮನಱಿಪುವಂತೆ ಬುದ್ಧಿವಂತನಪ್ಪ ಮಗಂಗೆ ಬಯ್ಕೆಯಂ ತೋಱುವಂತೆ ಕೇಡಿಂಗ[ಂ ಬಡತನಕ್ಕಮ]ಪ್ಪ ಪೆಂಡತಿಗೆ ಮನೆವಾರ್ತೆಯಂ ನುಡಿವಂತೆ ಕೊಲ್ಲದ ವ್ರತಮಂ ಕೈಕೊಂಡು ॥ ೫

ಮನಮೊಸೆದು ನಡೆದನಪ್ಪೊಡೆ
ಮನಕತಮಂ ನೋವನೆಲ್ಲಿಯುಂ ಪೊರ್ದದೆ ಮೇ ।
ದಿನಿಪೂಜ್ಯನಾಗಿ ಮುಕ್ತ್ಯಂ
ಗನೆಗಾತನೆ ಕಾಮನೆನಿಸಿ ಸೊಗಯಿಸಿ ತೋರ್ಕುಂ ॥ ೬

ಇನ್ನೀಸುವ್ರತದೊಳಾದ ಫಲಮೆಂತಪ್ಪುದೆಂದೊಡೆ ॥ ೭

[ಭರತಕ್ಷ್ಮಾವನಿತೆ ಮನೋ
ಹರಮಾಗುಟ್ಟಿರ್ದ (ಪೊಚ್ಚ) ಪೊಸಚಿನ್ನದವೋಲ್ ।
ಕರಮೊಪ್ಪುವುದೊದವಿದ ತ
ತ್ಪುರಂಗಳಂ ಶೋಭೆವೆತ್ತು ಮಾಳವದೇಶಂ] ॥ ೮

ನೆಗೞ್ದರ್ಮಾಳವೋರ್ವೀವಳಯದೊಳಮರಾಧೀಶನಂತಪ್ಪ ಸದ್ಭೋಗಿಗಳಂ ದೇವೇಂದ್ರಧಾತ್ರೀರುಹಮನಿೞಿಸಿ ಕಯ್ವಾರದಿಂದೀವ ಸತ್ತ್ಯಾಗಿಗಳಂ ಶ್ರೇಯಾಂಸನೊಳ್ ಮಚ್ಚರಿಸಿ ಬಿಡದೆ ನಿರ್ಲೋಭದಿಂದೀವ ಸದ್ದಾನಿಗಳಿಂದುಜ್ಜೈನಿಯೆಂಬಾಪುರವರಮೆಸೆಗುಂ ನಾಡೆಯುಂ ಶೋಭೆಯಿಂದಂ ॥ ೯

---

1 ಮುನ್ನಂ ದರ್ಶನದೊಳ್ (ಗ)    2 ಊರನೆಱೆವಂತೆ (ಗ)

ಆ ಪುರಮನಾಳ್ವಂ ವಿಶ್ವಂಧರಮಹಾರಾಜನಾತನ ರಾಜಶ್ರೇಷ್ಠಿ ಗುಣಪಾಲನೆಂಬನಾತನ ಭಾರ್ಯೆ ಧನಶ್ರೀಯೆಂಬಳ್ ॥ ೧೦

[ಸುರರಾಜನ ಸತಿಗೆ ವಿಯ
ಚ್ಚರರಾಜನ ಸತಿಗೆ ಕಾಮದೇವನ ಸತಿಗ ।
ಚ್ಚರಿ ಜಿನಭಕ್ತಿಯೊಳಂ ಸುಂ
ದರರೂಪಿನೊಳಂ ಸಹಸ್ರಮಡಿ ಮಿಗಿಲೆನಿಪಳ್ ॥ ೧೧

ಸುರರಾಜಂಗಂ ಖಚರೇ
ಶ್ವರಂಗಮಾರಯ್ದು ನೋೞ್ಪೊಡಿಮ್ಮಡಿ ಮಿಗಿಲು ।
ರ್ವರೆಯೊಳ್ ಜಿನಭಕ್ತಿಯೊಳಂ
ಸಿರಿಯೊಳಮೈಶ್ವರ್ಯದೊದವಿನೊಳಮಾಪರದಂ ॥ ೧೨

ನೆಗೞ್ದಾ ಗುಣಪಾಲಂಗಂ
ಮೃಗನಯನೆಯೆನಿಪ್ಪ ತದ್ಧನಶ್ರೀಗಂ ಕೈ ।
ಮಿಗೆ ರಾಗಂ ಪುಟ್ಟಿದಳು
ರ್ವಿಗೆ ಲಕ್ಷ್ಮಿಯೆ ಪುಟ್ಟುವಂತೆ ಕನ್ಯಾರತ್ನಂ] [1] ॥ ೧೩

ಸುಬಂಧುಶ್ರೀಯೆಂಬಳಂತವರ್ ಸುಖ [ಸಂಕಥಾವಿನೋದ] ದಿಂದಿರ್ಪುದುಂ ಒಂದುದಿವಸಂ [ಧನಶ್ರೀ ಬೆಳಗಪ್ಪ ಜಾವದೊಳ್ ಸುರಗಜಮುಂ ಚಂದ್ರನುಮಾದಿತ್ಯನುಂ ತನ್ನಲ್ಲಿಗೆ ಬಂದುದಂ ಕನಸುಗಂಡು ನೇಸಱ್ ಮೂಡುವುದುಮೆೞ್ಚರ್ತು ಗುಣಪಾಲ ಸೆಟ್ಟಿಗಱಿಪುವುದುಂ ಸೆಟ್ಟಿ ತತ್ಸ್ವಪ್ನಫಲಂಗಳಂ ಋಷಿಯರಲ್ಲಿ ಬೆಸಗೊಳ್ವಮೆಂದು ಪಲವುತೆಱದರ್ಚನೆ ವೆರಸು ಬಸದಿಗೆ ವಂದು ಜಿನಭವನಮಂ ಮೂಱುಸೂೞ್ಬಲಗೊಂಡು ಒಳಗಂ ಪೊಕ್ಕು ದೇವರನರ್ಚಿಸಿ ಪೊಡೆಮಟ್ಟು ಶ್ರುತಮುಮಂ ಋಷಿಯರುಮಂ ಪೂಜಿಸಿ ಭಕ್ತಿಯಿಂ ವಂದಿಸಿ ವಿನಯದಿಂದಿರ್ವರುಂ ಕೈಮುಗಿದು ಕನಸುಗಳ ಫಲಮಂ ಬೆಸಗೊಳ್ವುದುಂ ಅವರಿಂತೆಂದರ್ ॥ ೧೪

---

1 ಆ ಇರ್ವರ್ಗಂ ಪುಟ್ಟಿದ ಮಗಳ್ (ಗ)

ಸರಸಿರುಹನೇತ್ರೆ ಸುರಸಿಂ
ಧುರಮುಂ ಕಂಡುದಱಿನಧಿಕಜಿನಭಕ್ತನಮು ।
ರ್ವರೆಪೂಜ್ಯನಂ ಮುನೀಶ್ವರ
ಚರಣಾಂಭೋಜಾತಭೃಂಗನಂ ನೀಂ ಪಡೆವೈ ॥ ೧೫

ಶಶಿಯುಂ ಕಂಡುದಱಿಂದಂ
ಶಶಿಮುಖಿ ತತ್ವಜ್ಞನಂ ಮಹಾಪ್ರಭುವಂ ಸಂ ।
ತಸದಿಂದೆ ಪಡೆವೆ ಮಗನಂ
ಕುಸುಮಾಯುಧನಿಭನನುದಿತಧರ್ಮಾನ್ವಿತನಂ ॥ ೧೬

ರವಿಯುಂ ಕಂಡುದಱಿಂದಂ
ಧವಳಾಕ್ಷಿ ಜಿನೇಂದ್ರಸಮಯವರ್ಧನನಂ ಮಾ ।
ನವರತ್ನನಂ ಧರಿತ್ರೀ
ಧವನಂ ಪಡೆವೈ ಮನೋಜನಿಭನಂ ಮಗನಂ ॥ ೧೭

ಎಂಬುದುಮವರಿರ್ವರುಂ ಸಂತಸದಂತಮನೆಯ್ದಿ "ಸವಣೋ ಅಮೋಘವಅಣೋ" ಎಂಬ ಋಷಿವಾಕ್ಯಮೆಂತುಂ ತಪ್ಪಲಱಿಯದೆಂದು ನಿಶ್ಚಯಿಸಿ ನಂಬಿ ದೇವರ್ಗಂ ಪುನರ್ನಮಸ್ಕಾರಂಗೆಯ್ದು ಮನೆಗೆ ವಂದು ಮನಮೊಸೆದಿರ್ಪುದುಂ ಕೆಲವುದಿವಸಕ್ಕೆ ಧನಶ್ರೀಗೆ ಗರ್ಭಮಾಗಿ ಜಿನೇಂದ್ರಪೂಜೆಯುಂ ಮಾಡಲುಂ ಜಿನೇಂದ್ರ ಪೂಜೆಗಳಂ ನೋಡಲುಂ ಜಿನಾಗಮಮನೋದಲುಂ ಜಿನಮುನಿವರರಂ ಬಂದಿಸಲುಂ ಮಿಥ್ಯಾದೃಷ್ಟಿಗಳ್ಗಂಜಲುಂ ದಿವ್ಯಾಹಾರಮನುಣಲುಂ ಬಸದಿಗೆ ಪೋಗಲುಂ ಪಲರಂ ಪೊಡೆಮಡಿಸಿಕೊಳಲುಂ ಸಿಂಹಾಸನಮನೇಱಲುಂ ಭವ್ಯರಂ ಸದ್ಧರ್ಮಮಂ ಪಕ್ಷಪಾತದಿಂ ರಕ್ಷಿಸಲುಂ ಪ್ರಜೆಗೆಡೆಯಾಗದಂತುಪಕಾರಂ ಮಾಡಲುಂ ಶ್ರಾವಕಗೋಷ್ಠಿಯೊಳಿರಲುಂ ಜಿನಸನ್ನಿವಾಸದೊಳೋಲಗಂಗುಡಲುಂ ಜಿನಸ್ತವನಂಗಳನೆ ಮಾಣದೆ ಪಾಡಲುಂ ತ್ರಿಷಷ್ಟಿಶಲಾಕಾಪುರುಷರ ಕಥೆಗಳಂ ಕೇಳಲುಂ ಬಯಕೆ ತಿಣ್ಣಮಾಗೆ ॥ ೧೮

ತರುಣಿಗೆ ಸಂತಸಮಪ್ಪಂ
ತಿರೆ ಗೀತಾತೋದ್ಯವಾದ್ಯನೃತ್ಯಮನರ್ಹ ।

ತ್ಪರಮೇಶ್ವರನಾಸ್ಥಾನದೊ
ಳಿರುಳುಂ ಪಗಲುಂ ಸುಭೋಗಮಂ ಮಾಡಿಸುವರ್ ॥ ೧೯

ಪಲವುಪಚಾರವೆರಸು ಕೆಲದೊಳ್
ಲಲನೆಯರೋಲಗಿಸೆ ಗೀತವಾದ್ಯಂ ಪದೆದೆ ।
ತ್ತಲುಮೆಸೆಯೆ ಜಿನರ ಪೂಜೆಯ
ನಲಂಘ್ಯಗುಣಸತಿಯಾಗೆ ಪೊಱಮಡಿಸುತ್ತುಂ ॥ ೨೦

ಮೊಸರಿಂ ಪಾಲಿಂ ಘೃತದಿಂ
ಪೊಸಕಬ್ಬಿನ ರಸದಿನಾಗಳುಂ ಜಿನನಾಥಂ ।
ಗೊಸೆದಭಿಷೇಕವನೊಪ್ಪಿರೆ
ಬಿಸರುಹಮುಖಿಗರ್ತಿಯಪ್ಪಿನಂ ಮಾಡಿಸುವಂ ॥ ೨೧

ಇರವಂತಿಯ ಜಾಜಿಯ ಪಾ
ದರಿಯ ಸರೋರುಹದ ಪೂಗಳಿಂದಾದಿಜಿನೇ ।
ಶ್ವರನಾದಿಯಾದ ತೀರ್ಥಂ
ಕರರಂ ತರಳಾಕ್ಷಿಯ ಬಯಕೆ ಪೋಪಿನಂ ಪೂಜಿಸುವಂ ॥ ೨೨

ಅರಲಿಂ ಕುಂಕುಮದಿಂ ಕ
ರ್ಪುರದಿಂ ತೀರ್ಥಕರದಿವ್ಯಚೈತ್ಯಾವಳಿಯಂ ।
ಸರಸಿಜನೇತ್ರೆಯ ಮುಂದಾ
ದರದಿಂ ಲೇಸಾಗಿ ಮಾಡುವಂ ಪೂರಣೆಯಂ ॥ ೨೩

ಪಸಿಯಡಕೆಯ ನಾರಂಗದ
ಮಿಸುಗುವ ಸನ್ಮಾದುಫಲದ ಫಲನಿಕರದಿನ ।
ರ್ಚಿಸುತುಂ ಮೃಗೇಂದ್ರಮಧ್ಯೆಯ
ಪೊಸಬಯಕೆಯಲಂಪು ಪೋಪಿನಂ ಜಿನಪತಿಯಂ ॥ ೨೪

ಸರಸಕರಣವೆಳರುಣಂಬಡೆ (?)
ಕರಮೊಪ್ಪುವ ಬಂಧಕರಣವೆಂಬಿವಱಿಂದ ।

ಚ್ಚರಿಯಾಗೆ ಜಿನರ ಕೀರ್ತಿಯ
ನರವಿಂದಾನನೆಯು ಮುಂದೆ ನೆಱೆ ಪಾಡಿಸುತುಂ ॥ ೨೫

ಭರತೇಶ್ವರನಷ್ಟಾಪದ
ಗಿರಿಯೊಳ್ ಲೇಸಾಗಿ ಸಮೆದ ಚೈತ್ಯಾವಳಿಯಂ ।
ತರಳಾಕ್ಷಿಗೆ ಬಣ್ಣಿಸುತುಂ
ಪುರುಪರಮೇಶ್ವರನ ಚರಿತೆಯಂ ಕೇಳಿಸುತುಂ ॥ ೨೬

ಜಿನರ ಪ್ರತಿಮೆಗಳಂ ನೆ
ಟ್ಟನೆ ಪೊನ್ನಿಂ ಮಾಡಿ ಪಲವ್ರತೆಱದರ್ಶನೆಯಿಂ ।
ದನವರತಂ ಪೂಜಿಸುತುಂ
ವನಜಾಸ್ಯೆಗೆ ಪಿರಿದು ಸಂತಸಂ ಪುಟ್ಟುವಿನಂ ॥ ೨೭

ಮತ್ತಂ ಜಿನಭವನಂಗಳೊಳ್ ನಾನಾವಿಧರಂಗವಲ್ಲಿಯನಿಕ್ಕಿಸುತ್ತುಂ ಪೊನ್ನಿಂ ಸಮೆಗ ವಂಶಮಾಲೆಗಳಂ ಕಟ್ಟಿಸುತ್ತುಂ ನಾನಾಧ್ವಜಂಗಳನೆತ್ತಿಸುತ್ತುಂ ಆಹಾರಾಭಯಭೈಷಜ್ಯಶಾಸ್ತ್ರದಾನಮಂ ಮಾಡಿಸುತ್ತುಂ ಧನಶ್ರೀಯ ಬಯಕೆಯನೀಮಾರ್ಗದಿಂ ಸಲಿಸುತ್ತುಮಿರ್ಪುದುಮೊಂದುದಿವಸಂ ವಿಶ್ವಂಧರಮಹಾರಾಜಂ ಮಹಾವಿಭೂತಿಯಿಂ ಗಂಧಗಜಾರೂಢನಾಗಿ ವನಕ್ರೀಡೆಗೆ ಪೋಗುತ್ತುಂ ತನ್ನ ಮನೆಯ ಪೆಱಗಣ ನಂದನವನದೊಳ್ ಶೃಂಗಾರಂಗೆಯ್ದು ವಿರಾಜಿಸಿ ವಿಳಾಸಿನೀಜನಪರಿವೃತೆಯಾಗಿ ಪೊನ್ನುಯ್ಯಲನಾಡುವ ಸುಬಂಧುಶ್ರೀಯಂ ತೊಟ್ಟನೆ ಕಾಣ್ಬುದುಂ ॥ ೨೮

ನನೆಯಂಬಂ ತೊಟ್ಟು ಕಾಮಂ ಮುಳಿದು ನರಪನಂ ನೋಡಿ ಲೇಸಾಗಿ ಭೋರ್ಭೋ
ರೆನೆ ಕಾಯ್ಪಿಂದಾರ್ದು ಬಾಣಂ ನಡೆ ಗಱಿಯನಗುರ್ವಪ್ಪಿನಂ ಕಚ್ಚಿ ಬೇಗಂ
ಮನದಿಂ ಮುಂ ಪಾಯ್ದು ಮತ್ತಂ ತುಱುಗಿ ನಡುವಿನಂ ದೇಹಮಂ ನಾಡೆಯುಂ ಕಾ
ಮಿನಿಯುಂ ಶ್ಯಾಮಾಂಗಿಯುಂ ಮತ್ತೆ ನಿಸದೆ ಮಱುಗೊಂಡಿರ್ದು ತೊಳ್ದಿಚ್ಚನಾಗಳ್ ॥ ೨೯

ಅಂತಾಪ್ರೊಸನನೆಯ ಬಿರಿಮುಗುಳ ಕುಸುಮಬಾಣಂಗಳಂ ತೋಡುಂ ಬೀಡುಂ ಕಾಣಬಾರದೆನಿಸಿ ಕಿವಿವೆರಂ ತೆಗೆದು ನೇರನಱಿದೆಸೆವುದುಂ ವಿಶ್ವಂಧರಮಹಾರಾಜಂ ಝುರ್ಝುರಿತಗಾತ್ರನಾಗಿ ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು ವಿರಹಾನಳನಿಂ ಬೆಂದು ಸೈರಿಸಲಾಱದೆ ॥ ೩೦

ತಡೆಯದೀವನಜಾತನೇತ್ರೆಯೊಳಂಗಜಾತನ ಕೈಯ ಕೈ
ಪೊಡೆಯೆನಿಪ್ಪ ವಿದಗ್ಧೆಯೊಳ್ ನೆರೆದಂದು ಕಾಯ್ದುಱಿ ಚುಚ್ಚುವೆ
ನ್ನೊಡಲ ಮನ್ಮಥತಾಪವೋಡುಗುಮಲ್ಲದಂದು ಮನೋಭವಂ
ಗೊಡಲನೊಪ್ಪಿಸಿ ಪೋಗಲೊಲ್ಲದೆ ಬಾೞಬಾರದು ನೋವಿನಿಂ ॥ ೩೧

ಕನ್ನೆಯನೊಯ್ಯನೆ ಮಱೆಗೊಂ
ಡೆನ್ನಂ ಕಯ್ಗಾಯದೆಚ್ಚಪಂ ಮನಸಿಜನೀ ।
ಕನ್ನೆಯನಗಲ್ದ ಬಿರುದಿಂ
ದೆನ್ನಂ ಮೂದಲಿಸಿ ಕಾದಲಾರ್ಪನೆ ಕಾಮಂ ॥ ೩೨

ಅರಲಂಬಂ ಪಿಡಿದೀತಂ
ಸ್ಮರನುರ್ವಿಯ ಜನಮನೆಚ್ಚು ನೋಯಿಸಿ ತವಿಪಂ ।
ಸರಲಂಬಂ ಪಿಡಿದಿಸುವೊಡೆ
ನರರಂ ಝಷಕೇತು ಕೊಂದು ಕೂಗದೆ ಮೋಣಂ ॥ ೩೩

ತನುವಿಲ್ಲದೆಯುಂ ಲೋಕದ
ಜನಮಂ ಕಯ್ಗಾಯದೆಚ್ಚಪಂ ಕೂಗಿಡಲಿಂ ।
ತನುವುಂಟಪ್ಪೊಡೆ ರತಿನಾ
ಥನ ಕಯ್ಯೊಳ್ ಮಿಡುಕಿ ಪೋಪ ಗಂಡರುಮೊಳರೇ ॥ ೩೪

ಬಿಲ್ಲೊಳ್ ಕೋವಿದರೆನಿಸಿದ
ಬಿಲ್ಲಾಳಪ್ಪವರನಱಿವೆನತನುವ ತೆಱದಿಂ ।
ನಿಲ್ಲದೆ ಮೆಯ್ಯೊಳ್ ಪುಣ್ಣಿನಿ
ಸಿಲ್ಲದೆ ವೇದನೆಯ ಮಾಳ್ಪ ಗಂಡರುಮೊಳರೇ ॥ ೩೫

ಎಂದು ಮನದೊಳ್ ಗುಜುಗುಜುಗೊಂಡು ದಿವಿಜರಂತೆ ಮೆಯ್ಯಿಕ್ಕದೆ ನಿರ್ಜಿತರಾದರಂತೆ ಮಿಡುಕದೆ ಕಣ್ಣುಳ್ಳ ದೈವದಂತೆ ಕಣ್ಣಂ ಬಿಟ್ಟು ಮರನಂ ನಟ್ಟಂಬಿನಂತೆ ದಿಟ್ಟಿಯಂ ತೆಗೆಯಲಾಱದೆ ಬೇಗೆವೋದ ಬೆಟ್ಟದಂತೆ ಮೆಯಬಿಸುಪನಾಗೆ, ಕಾಳಗದ ನಡುವಾದ ಪಂದೆಯಂತೆ ನಡನಡ ನಡುಗಿ, ಉದ್ಧವೇಱಿದ ಪಸುಗೂಸಿನಂತೆ ಪೋಗಲಱಿಯದೆ, ಒಡೆಯರ ಮನೆಗೆ ಬಂದ ಬಂಟರಂತೆ ಕನ್ನೆಯನೆ ನೋಡಿ, ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕದಡಿ, ಕಿಱಿದಾನುಂಬೇಗಮಿರ್ದು, ವನಕ್ರೀಡೆಗೆ ಪೋಗಲೊಲ್ಲದರಮನೆಗರಸಂ ಮಗುಳ್ದು ಬಂದು ಕಣ್ಣೊಳಂ ಮನದೊಳಂ ಸುಬಂಧುಶ್ರೀಯ ರೂಪೆ ತೋಱಿ ಮತಿಗೆಟ್ಟು ವಿಹ್ವಲೀಭೂತನಾಗಿ ಸೈರಿಸಲಾಱದೆ ॥ ೩೬

ಪೊಸನೀರೇಜದ ನಾಳದಿಂ ನಿಮಿರ್ದ ನೀಳಾಂಭೋಜಪುಷ್ಪಂಗಳಂ
ಪೊಸತಪ್ಪಾಮ್ರಮಹೀಜದಾತಳಿರ್ಗಳಂ [1] ಚೆನ್ನೆಯ್ದಿಲಿಂ ಬಾಳೆಯಿಂ
ದೊಸೆದುಂ ಮಾಡಿದ ಪಾಸಿನೊಳ್ ಪೊರಳುತುಂ ಜೊಂಪಂಗಳೊಳ್ ಪೋಗಿ ಸೇ
ವಿಸುತುಂ ಚಂದನಪಂಕದೊಳ್ ಮುೞುಗುತುಂ ಶೀತಾಂಬುವಂ ಮೀಯುತುಂ ॥ ೩೭

ಕಾಮಸಂತಾಪಮನೆಂತುಂ ಮಾಣಿಸಲಾಱದೆ ಪೆರ್ಗಡೆಗಳಂ ಕರೆದು ತನ್ನ ಮನದ ಕಾರ್ಯಮನೆಲ್ಲಮನಿಂಬಾಗೆ ಪೇೞ್ದು ॥ ೩೮

ಆವಾವುಪಾಯದಿಂದಂ
ನೀವಿಂದು ಸುಬಂಧುವಂ ಮನೋಹರಮಪ್ಪಂ ।
ತಾವಗಮೆನ್ನೊಳ್ ನೆರೆಪುವು
ದಾವೆಗಮಿಂ ನೆರೆಪದಂದು ನೋವೆಂ ತಿಬ್ಬಂ ॥ ೩೯

ಎಂದು] [2] ಪೆರ್ಗಡೆಗಳಂ ಗುಣಪಾಲಸೆಟ್ಟಿಯಲ್ಲಿಗೆ ಸುಬಂಧುಶ್ರೀಯಂ ಬೇಡಿಯಟ್ಟುವುದುಂ [ಅವರ್ ಗುಣಪಾಲಸೆಟ್ಟಿಯ ಮನೆಗೆ

[1] ಪಂದುತಳಿರಿಂ (ಕ. ಖ.)

[2] ವಿಶ್ವಂಭರಮಹಾರಾಜಂ ಸುಬಂಧುಶ್ರೀಯ ರೂಪಂ ಕಂಡು ಸೋಲ್ತು (ಗ)

ವೆರ್ಪುದುಂ ಸೆಟ್ಟಿ ಪೆರ್ಗಡೆಗಳಂ ವಸ್ತ್ರತಾಂಬೂಲಾದಿಗಳಂ ಮನ್ನಿಸಿ ನಿಮ್ಮ ಬಂದ ಕಾರ್ಯಮನೆಮಗಱಿಯೆ ಪೇೞಿಮೆಂಬುದುಮವರಿಂತೆಂದರ್ ॥ ೪೦

ಮದಗಜಗಮನೆಯನಂಬುಜ
ವದನೆಯನಳಿನೀಲಕುಟಿಲಕುಂತಳೆಯೆಂದೆಂ ।
ಬಳ ಹಾವಭಾವಲಾವ
ಣ್ಯದ ನೆಲೆಯಂ ಜಿನಪದಾಬ್ಜಮದಮಧುಕರೆಯಂ ॥ ೪೧

ನಿಮ್ಮ ಮಗಳಪ್ಪ ಸುಬಂಧುಶ್ರೀಯಂ ನಂದನವನದೊಳುಯ್ಯಾಲಾಡುವಳಂ ವಿಶ್ವಂಧರಮಹಾರಾಜಂ ವನಕ್ರೀಡೆಗೆ ನೃಪಕುಮಾರಪರಿವೃಢನಾಗಿ ಪೋಗುತ್ತುಂ ಕಂಡು ಕಣ್ಬೇಟಂಗೊಂಡು ಕಾಮಸಂತಾಪದಿಂ ಕರಮಲ್ಲದೆ ನೊಂದು ರಾಜಮಂದಿರಕ್ಕೆ ಬಂದು ಕುಸುಮಾಸ್ತ್ರನ ಕುಸುಮಶರದ ಕೋಳಂಗಿರಲಾಱದೆಮ್ಮನಿಲ್ಲಿಗೆ ಸುಬಂಧುಶ್ರೀಯಂ ಬೇಡಿಯಟ್ಟಿದಂ; ನೀವುಂ ತಲೆಯೊಡೆಯರ್ಗೆ ತಲೆಸುತ್ತಂ ಮಾರ್ಕೊಂಡರೆನಿಸಿ ನಗೆಯಂ ಮಾಡಿಕೊಳ್ಳದೆ ಸರ್ವಸ್ವಕ್ಕವೊಡೆಯನಪ್ಪ ಕುಲಸ್ವಾಮಿಗೆ ಮಾರ್ಕೊಳ್ಳದೆ ಕೂಸಂ ಕುಡುವುದೆಂಬುದುಂ ಪೆರ್ಗಡೆಗಳ ಮಾತಂ ಕೇಳ್ದು ಗುಣಪಾಲಸೆಟ್ಟಿ ಬೆಱಗಾಗಿ ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕವಚನಗಳಿಂ ನಂಬೆ ನುಡಿದು ಮತ್ತಮಿಂತೆಂದಂ ॥ ೪೨

ಅರಸಂ ಗಡ ಪಿರಿದಪ್ಪಾ
ದರದಿಂ ಗಡ ಮತ್ತನೂಜೆಯಂ ಬೇಡಿ ಪುರಂ ।
ದರವಿಭವನಟ್ಟುವಂ ಗಡ
ನರರೆನ್ನಿಂ ಬಿಟ್ಟು ಧನ್ಯರಾರುರ್ವರೆಯೊಳ್ ॥ ೪೩

ಸ್ಮರತಾಪದಿಂದಮುರ್ವೀ
ಶ್ವರನೆನ್ನ ಪ್ರಿಯತನೂಜೆಯಂ ಕಂಡು ಸವಿ ।
ಸ್ತರದಿಂ ಸೋಲ್ತಂ ಗಡ ಮು
ರ್ವರೆಯೊಳ್ ಮತ್ತನಯೆಯುಂತು ನೋಂತವರೊಳರೇ ॥ ೪೪

ಪರದರಮೆಗವೇಕುರ್ವಿ
ವರನೊಲವಿಂ ಬೇಡಿ ನಿಮ್ಮನಟ್ಟುವುದೇಕಾ ।
ದರದಿಂ ಸ್ತ್ರೀಯರ ಸೊಬಗಂ
ನಿರಂತರಂ ಬೇಗವಱಿಯರೆಂಬರುವೊಳರೇ ॥ ೪೫

ಎನಗಂ ಮತ್ತೆನ್ನೊಡವೆಗ
ಮೆನುನಯದಿಂದೊಡೆಯನೆಂದೊಡೆನ್ನಾತ್ಮಜೆಯಂ ।
ಜನಪತಿ ಕುಡವೇಡ್ಕೆಂದೆಲೆ
ವನಿತೆಗೆಕಣ್ಣ ಬುದ್ಧಿಯಱಿಯಂಭೂಪಂ ॥ ? ೪೬

ತಾನೆನ್ನಲ್ಲಿಗೆ ಕೂಸಂ ಬೇಡಿಯಟ್ಟಿದನೆಂದೊಡೆನ್ನಿಂ ಬಿಟ್ಟು ಧನ್ಯರುಂ ಪುಣ್ಯವಂತರುಮಿಲ್ಲೆಂದು ಮೆಳ್ಪಡೆ ನುಡಿದು ಪೆರ್ಗಡೆಗಳನ ರಮನೆಗೆ] [1] ಕಟಿಪಿ ಸೆಟ್ಟಿ ತನ್ನೊಳಿಂತೆಂದಂ ॥ ೪೭

ಜಿನಪದಸೇವೆಯಿಲ್ಲದನ ರೂಪು ವಿಳಾಸ ಮಹೋನ್ನತಿಕ್ಕೆ ಮೇ
ದಿನಿ ಸೊಬಗೊಳ್ಪು ತೇಜ ಮಹಿಮಾಸ್ಪದಮುದ್ಧತಿ ವಿದ್ಯೆ ಶೌಚಮಾ
ತನ ವಿಭವಂ ಕುಲಂ ದಲಮುಮಾಪ್ತ ಗುಣಾಳಿಗಾಡಿ ಯೌ
ವನಮಿನಿತುಂ ಕುಟುಂಬನೆರಸಗ್ನಿಯ ತಣ್ಪು ವಿಷಾನ್ನಭೋಜನಂ ॥ ೪೮

ಗಿರಿಶಿಖರಾಗ್ರದಿಂ ಕೆಡೆಯೆ ನೂಂಕುವುದೊರ್ವಯೆ ಕಟ್ಟಿ ತಂದು ನಿ
ಷ್ಠುರಗಜರಾಜಿಯಿಂ ತುಳಿಸಿ ಕೊಲ್ವುದು ಪೆರ್ಗಡಲಲ್ಲಿ ಗಂಟಲಂ
ಮುರಿದು ತಳರ್ಚದಿಕ್ಕುವುದು ಲೇಸು ಕುದೃಷ್ಟಿಗೆ ಸೋಲ್ತು ಕೂಸನಾ
ದರದೊಳ ಬೇಗವೀವುದಱನೆಯ್ದೆ ವಿಚಾರಿಸಿ ನೋಡೆ ಪ್ಪಡುರ್ವಿಯೊಳ್ ॥

ಮತ್ತಂ ಮಿಥ್ಯಾದೃಷ್ಟಿಯ ಸಿರಿಯನುರಿಯೆಂದು ಬೆಚ್ಚಲುಂ, ಕುದೃಷ್ಟಿಯ ರೂಪು ಸಂತಾಪಮೆಂದು ನಡುಗಲುಂ, ಸದ್ಧರ್ಮದೂಷಕನ ಮುಖಮಂ ಯಮಗಜಾರಿ ಪೊಯ್ದು ಕೊಲ್ವ ನಖಮೆಂದಂಜಲುಂ, ಕುದ ರ್ಶನಪ್ರೀತನ ಭೋಗಮಂ ನಾಗವಿಷಮೆಂದು ತಲ್ಲಣಿಸಲುಂ, ಕುಮಾ

1 ಸಂತೋಷಮಾನೆ ಪೆರ್ಗಡೆಗಳ್ಗೆ ನುಡಿದು (ಗ)

ರ್ಗಾನುರಾಗಿಯಪ್ಪರಸನಂ ವಿರಸನೆಂದು ಬಗೆಯಲುಂ, ದರ್ಶನದೂರನ ಶೃಂಗಾರಮಂ ಸಂಹಾರಮೆಂದು ಭಯಂಗೊಳಲುಂ, ನಿಶ್ಶ್ರೇಯಸಶ್ರೀಯನೆಯ್ದುವೆನೆಂಬ ಶ್ರಾವಕಂಗೆ ಬೇೞ್ಪುದಿನಿತಲ್ಲದೆ [1] ದುರ್ಮೋಹದಿಂ ಮನದೊಳಟ್ಟುರ್ತು ಮಿಥ್ಯಾದೃಷ್ಟಿಯಪ್ಪನ ರೂಪುಮಂ ವಿಳಾಸಮುಮಂ ಪ್ರತಾಪಮುಮಂ ಸಂಪತ್ತುಮಂ ಕಂಡು ರಾಗಿಸಿ ಪೊರ್ದಿ ಕೂಸುಗುಡುವನುಂ ಕೆಳೆಗೊಳ್ವನುಂ ನರಕಕ್ಕೆ ಭಾಜನನಕ್ಕುಮಲ್ಲದೆ ಶ್ರಾವಕನಪ್ಪ [2] ನೇಗೆಯ್ದುಂ ಸುಗತಿಯನೆಯ್ದಲಾಱನೆಂದು ಪರಮಾಗಮಮಂ ಭಾವಿಸಿ ಧನಶ್ರೀಯ ಮನದ [ನಿರ್ಮಳಿಕೆಯುಮಂ ಸಮ್ಯಕ್ತ್ವಮುಮನಾರಯಲೆಂದು ಗುಣಪಾಲಸೆಟ್ಟಿ ಯಿಂತೆಂದಂ ॥ ೫೦

ಧರಣೀವಲ್ಲಭನುಗ್ರವೈರಿಹರಣಂ ಬಾಲಾರ್ಕತೇಜಂ ಮಹೀ
ಶ್ವರವಂದ್ಯಂ ಮನವೊಲ್ದು ಸೋಲ್ತು ಪದಪಿಂ ಸದ್ರಾಗದಿಂದಟ್ಟಿದಂ
ಪಿರಿದುಂ ಸ್ನೇಹದಿನಿಂದು ಕೇಳ ಕನಕಾಂಭೋಜಾಕ್ಷಿಯಂ ಬೇಡಿ ನ
ಮ್ಮರಸಂ ನೋಡ ಸುಬಂಧುವಂ ಧರಣಿಯೊಳ್ ನಮ್ಮಂತು ಮುಂ ನೋಂತರಾರ್ ॥ ೫೧

ಪರದರ ಸಿರಿಯಿಂದರಸರ
ಸಿರಿ ಸರಿಯಲ್ಲದೊಡೆ ಕೂಸನಿತ್ತೊಡಾತನ ದೆಸೆಯಿಂ ।
ಪಿರಿದಪ್ಪುದವಿದ ಶೌರ್ಯಂ
ದೊರೆಕೊಳ್ಗುಂ ಮೇಲೆ ರಾಜ್ಯಮುಂ ಕೈಸಾರ್ಗುಂ ॥ ೫೨

ಕುಲಮಂ ಪೇೞ್ವೊಡೆ ರಾಜಪುತ್ರನದಟಂ ತಾನಲ್ಲನಿನ್ನೆಂಬೊಡು
ಜ್ಜ್ವಲಚಂಡಾಂಶುನಿಭಂ ವಿಭೂರ್ಜಿತಯಶಂ ತಾನಲ್ಲನೆಂಬಂದಿಳಾ
ವಲಯಾಧೀಶ್ವರವಂದಿತಕ್ರಮಯುಗಂ ಶ್ರೀಮಂತನಲ್ಲೆಂಬೊಡ
ಗ್ಗಳಮಪ್ಪಿಂದ್ರಸಮಾನನೂರ್ಜಿತಯಶಂ ಗೀರ್ವಾಣಶೈಲಕ್ಷಮಂ][3] ॥

---

1 ನಿಶ್ಶ್ರೇಯಸಶ್ರೀಯನೆಯ್ದಿಸುವ ಗತಿಯನೇಗೆಯ್ದುಂ ಬಿಡಲಾಱನೆಂಬುದಿನಿತಲ್ಲದೆ (ಗ) 2 ಶ್ರಾವಕನೆಯ್ದುವ ಸುಗತಿಯು (ಗ)

3 ನಿರ್ಮಳಿಕೆಯನಾರಯಲೆಂದು (ಗ)

ಸುಬಂಧುಶ್ರೀಯುನರಸಂಗೆ ಕುಡುವೆಮೆಂಬುದುಂ ಧನಶ್ರೀ ಸೆಟ್ಟಿಯ ಮಾತಿಂಗೆ ವಿಸ್ಮಯಂಬಟ್ಟು ನೀರೊಳಗಿರ್ದ ನಲ್ಲಳ ನೆಳಲಂ ಕಂಡು ನಲ್ಲಳೆಂದು ಮತಿಗೆಟ್ಟು ಪಾಯ್ದು ಸಾವ ಸಾಧುವಿಟನಂತೆ ನಿತ್ಯಮಲ್ಲದ ಸಂಸಾರಸುಖಕ್ಕಮಲ್ಪಶ್ರೀಗಮಾಸೆಗೆಯ್ದು ಮಿಥ್ಯಾದೃಷ್ಟಿಗೆ ಕೂಸಂ ಕೊಟ್ಟು ಮಗವಿಂಗಂ ತನಗಂ ಪಿರಿದಪ್ಪ ನರಕದುಃಖಮಂ ಮಾಡಿ ಕೊಂಡಪನೆಂದು ತನ್ನೊಳ್ ಮಱುಗಿ ಸೆಟ್ಟಿಗಿಂತೆಂದಳ್ ॥ ೫೪

[ಪಲಕಾಲಂ ಸಂಸೃತಿಯೊಳ್
ನೆಲೆಗೊಳ್ಳದೆ ಪಿರಿದುಪುಣ್ಯದಿಂದಂ ಪಾಪಂ ।
ತೊಲಗಿದೊಡೆ ನಿನಗೆ ಪುಟ್ಟಿದ
ಳಲಂಘ್ಯಗುಣೆ ರಿಪುಗೆ ಬೆರ್ಚಿ ಮರೆವುಗುವವೊಲುಂ] ॥ ೫೫

ಜಿನಧರ್ಮವೆಂಬುದಂ ಮು
ನ್ನನಂತಭವಭವದೊಳಲ್ಲಿಯುಂ ಪೊರ್ದದೆ ತಿ ।
ಱನೆ ತಿರಿದು ಪುಣ್ಯವಶದಿಂ
ವನರುಹಮುಖಿ ತನ್ನ ಕರ್ಮದೊಂದುಪಶಮದಿಂ ॥ ೫೬

ಕಾಕತಾಳನ್ಯಾಯದಿಂ ನಿನ್ನಂತಪ್ಪ ಮಹಾಪುರುಷನ ಬಸಿಱೊಳ್ ಬಂದು ಜಿನಧರ್ಮಮಂ ಪೊರ್ದಿದಳಂತು ಪೊರ್ದಿದ ಮಗಳಂ ಕಳ್ಳಂಗಂಜಿ[ದರಂ ಪುಸಿಗೊಪ್ಪಿಸಿದರೆಂಬಂತಾನುಂ ಸಿಂಹದ ಬಾರಿಯೊಳ್ ಬರ್ದುಂಕಿದವನಂ ಪಿಟ್ಟಮೆಳಸಿದಂತಾನುಂ ಪಗೆವರ ಕೊಲೆಯಂ ಬಂಚಿಸಿ ಪೋಪನಂ ಕರಡಿಯ ಮುಂತಿಕ್ಕಿದರೆಂಬಂತಾನುಂ] [1] ಮಿಥ್ಯಾದೃಷ್ಟಿಯಪ್ಪನ ರಾಜ್ಯಶ್ರೀಯುಮಂ ಸಂಪತ್ತುಮಮುನ್ನತಿಕ್ಕೆಯುಮಂ ಕಂಡು ಶೂನ್ಯಹೃದಯರಂತೆ ಮೇಲಣನಂತಭವದ ದುಃಖಮಂ ಭಾವಿಸದೆ ಪೆರ್ಚಿಂದಂ ಕೂಸಂ ಕುಡುವೆನೆಂಬ ನಿಮ್ಮ ಮರುಳ್ತನಕ್ಕೆನಗೆ ಪಿರಿದುಂ ವಿಸ್ಮಯಮಾದಪುದು ; ನಿಮ್ಮಂತಪ್ಪ ಸದ್ದೃಷ್ಟಿಗಳುಮಿಂತಪ್ಪ ಕಜ್ಜಮಂ ಮನದೆ ಕೊಳ್ವರೆಂದೊಡಿಂ ಮತ್ತಿನಬಿಶ್ರಾವಕರ ಮತಿಹೀನತೆಗಂ ಕೇಡಿಂಗಮೆಬಿಲಲಾಗದು ॥ ೫೭

---

[1] ಸೀಕರ್ಗರಡಿಯ ಮುಂದಿಕ್ಕಿದರೆಂಬಂತಾನುಂ, ಕಿಚ್ಚಿಂಗೆ ತಲ್ಲಣಿಸಿ ಬಂದವನಂ ಕುದಿವೆಣ್ಣೆಯೊಳಿಕ್ಕಿದರೆಂಬಂತಾನುಂ, (ಗ)

ಸಿರಿ ಭಾವಿಪೊಡೆತ್ತಾನುಂ
ದೊರೆಕೊಳ್ಗುಂ ಜೈನದರ್ಶನಂ ಧಾರಿಣಿಯೊಳ್ ।
ದೊರೆಕೊಳ್ಳದದಱಿನಱಿವೊಡೆ
ಸಿರಿಗಂ ಸದ್ದರ್ಶನಕ್ಕಮೇನಂತರಮೋ ॥ ೫೮

[ಪಲವುಭವಕ್ಕೊರ್ಮೆ ಮಹೀ
ತಳದೊಳ್ ಸಾಮ್ರಾಜ್ಯಲಕ್ಷ್ಮಿ ದೊರೆಕೊಳ್ಗುಂ ನಿ ।
ರ್ಮಳಮಪ್ಪಜೈನಧರ್ಮಂ
ಮಳರಹಿತಂ ಬೇಗಮಂತೆ ದೊರೆಕೊಂಡಪುದೇ ॥ ೫೯

ಬಲದಿಂ ಕುತ್ಸಿತದಾನದ
ಫಲದಿಂದೆತ್ತಾನುಮೊರ್ಮೆ ಸಿರಿ ಸಮನಿಸುಗುಂ ।
ಫಲೆಱಲೆನಲಱುವುದದಕ್ಕಂ
ಪೞಯಿಲ್ಲದ ದರ್ಶನಕ್ಕಮೇನಂತರಮೋ ॥ ೬೦

ಕಿಡುವ ಸಿರಿಗಳಿಪಿ ಕೆಮ್ಮನೆ
ಕಿಡದ ಸುಖಾಸ್ಪದಮನೀವ ಸದ್ದರ್ಶನಮಂ ।
ಬಿಡುವಾತಂ ಬಿದಿರ್ಕೂಟಮ
ನೊಡಬಡದೆ ಗಂಜೆಗುಡಿವ ಮರುಳಂ ಪೋಲ್ಕುಂ ॥ ೬೧

ಅಱುಸಿರಿಗಮಲ್ಪಬುದ್ಧಿಗ
ಮಳಿಪಿ ಸದಾ ಸುಖಮನೀವ ಸದ್ದರ್ಶನಮಂ ।
ತಿಳವಿಲ್ಲದೆ ಬಿಡುವಂ ಭೂ
ತಳಮಂ ಬಿಸುಟಳಿಪಿ ತಿರಿವ ಮರುಳಂ ಪೋಲ್ಕುಂ ॥ ೬೨

ದರಿಯ ಮರಂ ಸಣ್ಣ ಮರಂ
ಸುರಧನು ತಿರಿದುಂಬ ತಿರಿಕರೊಳ್ ಕೂಟಮಿದೊಂ ।
ದರಿಸಿನದ ಬಣ್ಣಮೆನ್ನದೆ
ಸಿರಿ ಶಾಶ್ವತಮೆಂದು ನಂಬಿ ಪದೆವನೆ ಗಾಂಪಂ ॥ ೬೩

ಮರುಳರಸುತನಂ ಮೋಘದ
ನೆರವಿಯು ನೆರೆಪರ್ಕನುಷ್ಣ ಮಳಪನ ಧನಮು ।
ಮರೆಯೊಳ್ ಸಂಪತ್ತೆನ್ನದೆ
ಕರಮಾದರದಿಂದಮೊಲ್ದು ಪದೆವನೆ ಗಾಂಪಂ ॥ ೬೪

ಸಿರಿಯುಳ್ಳವರಂ ಧನದೊಳ್
ಪಿರಿಯರುಮಂ ಕಾಣಲಪ್ಪುದಿಳೆಯೊಳ್ ಪಲರಂ ।
ದರುಶನಶುದ್ಧರುಮಂ ಸ
ಚ್ಚರಿತರುಮಂ ನೋಡ ಕಾಣಲೇಂ ಬಂದಪುದೇ ॥ ೬೫

ಕಲ್ಲುಂ ಕಬ್ಬುನಮುಂ ನೋ
ಡಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನಂ ।
ಸಲ್ಲಲಿತಮಪ್ಪ ರತ್ನಮ
ನೆಲ್ಲಿಯುಮೋರಂತೆ ಪಡೆಯಲಪ್ಪುದೆ ಧರೆಯೊಳ್] । ೬೬

ಅಂತು ಪಡೆಯಲ್ಬಾರದಪೂರ್ವಮಪ್ಪ ದರ್ಶನಮುಂ ಸದ್ಧರ್ಮಮುಂ ಪಿರಿದಪ್ಪ ಪುಣ್ಯದಿಂದಲ್ಲದೆ ಸಮನಿಸವಂತಪ್ಪ ದರ್ಶನಮುಮಂ ಸದ್ಧರ್ಮಮುಮಂ [ಔದಾಸೀನ್ಯಂಗೆಯ್ದು ಬಿಟ್ಟು, ಸಂಸಾರದಱಸಿರಿಗಂ ಮರುಳಿಲ್ಲದ ಸಂಪತ್ತಿಗಮಳಪಿ, ಪಾದರಿಗಗಂಡನಂ ನಂಬಿ ಮನೆಯ ಗಂಡನಂ ಬಿಡುವಂತೆ ಸಜ್ಜನವೆಂಡತಿಯನೊಲ್ಲದೆ ಗಾಳುವಪ್ಪ ಸೂಳೆಯುಂ ಮಚ್ಚುವಂತೆ] ಮೂಱುದಿನದ ಪಗರಣಕ್ಕೆ ಗಡ್ಡಮೀಸೆಮುಂಡೆಯುಂ ಬೋಳಿಸಿಕೊಳ್ವಂತೆ ಮುಂದಿರ್ದ ಕೆಱೆಯನೆಯ್ದಲಾಱದಲಸಿ ಕೆಸಱ ನೀರಂ ಕುಡಿವಂತೆ ಸ್ವರ್ಗಮೋಕ್ಷದೊಳಪ್ಪನಂತಸುಖಮಂ ನೀರೊಳೆಬ್ಬುನರಕತಿರ್ಯಗ್ಗತಿಗಳೊಳ್ ತಿಱನೆ ತಿರಿವ ಕಜ್ಜಮನೆತ್ತಿಕೊಳ್ವೊಡೆ ನೀಮಱಿವಿರ್ ; ನಿಮಗಾದಿತ್ಯಂಗೆ ಸೊಡರಂ ತೋಱಿಸಿದರೆಂಬಂತೆ [ತೊಱೆಗೆ ನೀರನಡುಕಿದರೆಂಬಂತೆ] ಎನ್ನಂತಪ್ಪ ಜಡಮತಿಗಳ್ ಬುದ್ಧಿವೇೞ್ಪುದುಚಿತಮಲ್ಲದು ; ಗಂಡನಿದಿರೊಳ್ ಪೆಂಡತಿ ನುಡಿಯಲಾಗದು ; ಮೀಱಿ ಕೊಟ್ಟರಪ್ಪೊಡೆಮಗೆ ಬಸದಿಯೆ ಶರಣೆಂದು ಧನಶ್ರೀ ನುಡಿದು ಮಾಣ್ಬುದುಂ ॥ ೬೭

[ಸರಸೀರುಹಮುಖಿಯರ್ಹ
ತ್ಪರಮೇಶ್ವರಪಾದಪಂಕಜಭ್ರಮರೆಯ ಮಾ |
ತೆರಡಿಲ್ಲವೆಂದು ಚಿತ್ತಮ
ನುರುಮುದದಿಂ ನಚ್ಚಿ ಪೆರ್ಚೆ ವನಿತೆಯ ಮೊಗಮಂ] ‖ ೬೮

ಆದರದಿಂದಂ ಹೃದಯಾ
ಹ್ಲಾದದಿನಚ್ಕಿರ್ತು ನೋಡಿ ದರ್ಶನದೊಳ್ ಮು |
ನ್ನಾದಿಯ ಸೀತೆಗೆ ರಂಭೆಗೆ
ಮೇದಿನಿಯೊಳಗೀಕೆ ನೋಡೆ ಪಾಸಟಿಯಪ್ಪಳ್ ‖ ೬೯

[ಸಿರಿಯೇವುದೊ ಧನಮೇವುದೊ
ಪಿರಿದಪ್ಪೈಶ್ವರ್ಯಮೇವುದವನೀತಳದೊಳ್ |
ದರುಶನಮಿಲ್ಲದ ಪೆಂಡತಿ
ದೊರೆಕೊಂಡ ನರಂಗೆ ರಾಜ್ಯಮೇವುದೊ ಧರೆಯೊಳ್ ‖ ೭೦

ದರುಶನಮಿಲ್ಲದ ಪೆಂಡಿರ
ವರಭೋಗಂ ನರಕಗತಿಯ ಪೆರ್ಬಟ್ಟೆ ಮಹಾ |
ದುರಿತದ ನೆಲೆ ದುರ್ಗುಣದಾ
ಗರ ಮದದಿಂದಡಸಿ ಪೊಯ್ವ ಪೆರ್ಬುಲಿಯ ನಖಂ ‖ ೭೧

ಒದವಿದ ಧರ್ಮಬುದ್ಧಿ ತನಗಿಲ್ಲದ ಗಂಡನ ಮಾತನೊಲ್ದು ಕೇ
ಳದ ಜಿನಪಾದಮಂ ನೆನೆದು ಪೂಜಿಸಿ ನೋಡುವ ಚಿತ್ತವೃತ್ತಿಯಿ
ಲ್ಲದ ಮುನಿಗನ್ನಮಂ ಕುಡುವುದಾರತೆಯಿಲ್ಲದ ನಿರ್ಮಳಕ್ಕೆಯಿ
ಲ್ಲದ ಮುನಿಭಕ್ತಿಯಿಲ್ಲದ ಕುಲಾಂಗನೆಯೇಂ ಸತಿಯೆಂಬ ಲೆಕ್ಕಮೇ ‖ ೭೨

ವಿದಿತಮೆನಿಪ್ಪ ಸಚ್ಚರಿತಮಿಲ್ಲದ ನಿರ್ಮಳಜೈನಭಕ್ತಿಯಿ
ಲ್ಲದ ಪತಿಗಂಜಿ ಬೆರ್ಚಿ ಬೆಸಕೆಯ್ಯದ ದಾನದೊಳರ್ತಿ ತಿಣ್ಣಮಿ
ಲ್ಲದ ಪತಿಯೆಂದುದಂ ಪದೆದು ಕೇಳದ ಪಾಪಿಗಳಪ್ಪವರ್ಗೆ ಬೆ
ಚ್ಚದ ಪತಿಯರ್ಥಮಂ ಕಳುವ ಪೆಂಡತಿಯುಂ ಸತಿಯಾಗಿ ಸಲ್ವಳೇ ‖ ೭೩

ಎಂದು ಕುಲಾಂಗನೆಯೊಳಾದ ವಿಪರೀತಭಾವನೆಯುಂ ಭಾವಿಸಿ ನೋಡಿ ದರ್ಶನಮುಂ ಧರ್ಮಬುದ್ಧಿಯುಮಿಲ್ಲದ ಪೆಂಡತಿಗಳಪಿ ಮೋಹದಿಂ ದಿರ್ಪವಂ ಪಱಿದ ಪಱುಗೋಲನೇಱಲಾ ಪಱುಗೋಲುಂ ತಾನುಂ ತೊಱೆಯೊಳದ್ದು ಸಾಯುವಂತೆ ಪೆಂಡತಿಯುಂ ತಾನುಮೊಡನೆ ನರಕಕ್ಕಿೞಿದು ದುಃಖಮಂ ಪೊರ್ದುಗುಂ ; ದರ್ಶನಶುದ್ಧಿಯುಂ ಸದ್ಧರ್ಮಸಮೇತೆಯು ಮಪ್ಪ ಪೆಂಡತಿಯುಂ ನಚ್ಚಿ ಕೂರ್ತು ಕೈಕೊಂಡಾತಂ ಬಲ್ಪೆತ್ತ ಪ್ರಮನೇಱಿದವನೆಂತು ಸಮುದ್ರದೊಳಾಳದೆ ಸುಖದಿಂ ಸಮುದ್ರದ ತಡಿಯನೆಯ್ದುಗುಮಂತೆ ಪೆಂಡಿರುಂ ತಾನುಂ ಸ್ವರ್ಗಮೋಕ್ಷಮನೆಯ್ದಿ ಪಿರಿದಪ್ಪ ಸುಖಮನೆಯ್ದುವರದಱಿಂ ॥ ೭೪

ಈವನಿತೆಯನಮಳಾಂಗಿಯ
ನೀವನಿತಾಜನವಿನೂತರತ್ನಯನಖಿಳೋ ।
ರ್ವೀವಳಯಸ್ತುತೆಯಂ ಪಡೆ
ದೀವಿಭವಮಿದೆನಗೆ ಪುಣ್ಯದಿಂ ಸಮನಿಸಿತೋ ॥ ೭೫

ಮನದೊಳ್ ರಾಗಿಸಿ ಕೂಸಂ
ಜನನಾಥಂಗಿತ್ತು ಧರೆಯನಾಳ್ವಂ ಸುಖಮಂ ।
ಬಿನಿತಂ ಬಗೆಯದೆ ಮೇಲ
ಪ್ಪನಿತಂ ಮುಕ್ತಿಯನೆ ಬಗೆದಳಂತಿದು ಚೋದ್ಯಂ ॥ ೭೬

ಧನಮಂ ಗಳಿಸುವ ಗಂಡನ
ಧನಮಂ ಕಳ್ದೀವಿ ತಮ್ಮವರ್ಗೀವ ಗುಣಂ ।
ವನಿತೆಯರ್ಗೆ ಸಹಜಮಿಂತೀ
ವನಿತೆಗಮಾಕಷ್ಟೆಯರ್ಗಮೇನಂತರಮೋ ॥ ೭೭

ಮುಱಿಕಿಸುವ ಧರ್ಮಮಂದೊಡೆ
ಗುಱುಗುಱಿಸುವ ಗಂಡನಿದಿರೊಳದ್ದಾಡುವ ಬೇ ।
ಳ್ವಱಿಸುಗಳಂ ಕಿಸುಗುಳೆಯರ
ನಱಿವೊಡೆ ಪೋಲಿಪುದೆ ಧರ್ಮರತ್ನಾಕರೆಯಂ ] ॥ ೭೮

ಎಂದು ಮನದೊಳ್ ಪೊಗೞ್ದು ಧನಶ್ರೀಯ ಸಮ್ಯಕ್ತ್ವದೊಳಾದ ನಂಬುಗೆಗೆ ಕರಂ ಮೆಚ್ಚಿ ಸಂತೋಷಂಬಟ್ಟು ಮುಯ್ವಂ ನೋಡಿ ಕರ್ಮರಾಜನೊಡ್ಡನಿಱಿಯಲ್ ನೆರಂಬಡೆದೆನೆಂದು ಪೆರ್ಚಿ ಸುಬಂಧುಶ್ರೀಯ ಸಮ್ಯಕ್ತ್ವಮುಮಂ [ಜಿನಭಕ್ತಿಯುಮಂ] ಆರಯಲೆಂದು ಮಗಳಂ ಕರೆದು ತೊಡೆಯನೇಱಿಸಿಕೊಂಡು [ಕದಪಂ ಕರ್ಚಿ ತಂಬುಲಮನಿಕ್ಕಿ ಮೊಗಮಂ ನೋಡಿ ಕಿಱಿವುಬೇಗಂ ಮಗಳ ಮುದ್ದುನುಡಿಗಳಂ ಕೇಳ್ದು ಹರ್ಷಚಿತ್ತನಾಗಿ] ಗುಣಪಾಲಸೆಟ್ಟಿ ಮೆಲ್ಲನಿಂತೆಂದಂ ॥ ೭೮

ನಿನ್ನಂತು ಮಗಳ್ ಪುಣ್ಯ
ಕ್ಕಿನ್ನೋಂತವರಾರೊ ಮಾಳವೇಶ್ವರನದಟಂ ।
ಸನ್ನುತ ಗುಣಗಣನಿಳಯಂ
ನಿನ್ನಂ ತನಗರಸಿಮಾಡಿದಪ್ಪಂ ಪದೆಪಿಂ ॥ ೭೯

ನೀನರಸಿಯಾದೆಯಪ್ಪೊಡೆ
ಮಾನವಪತಿ ನಿನಗೆ ಮುಖ್ಯಪದಮಂ ಕುಡುಗುಂ ।
ಶ್ರೀನಿಳಯೆಯಾಗಿ ಸುಖದಿಂ
ನೀನಿರ್ಪ್ಪೆ ರಾಜ್ಯಲೀಲೆಯಿಂ ಕ್ರೀಡಿಸುತುಂ ॥ ೮೦

[ನೀಂ ಪಟ್ಟದರಸಿಯಾದೊಡೆ
ಪೆಂಪಿಂದಂ ನಿನಗೆ ಪುಟ್ಟಿದಾತಂಗಿಳೆ ಸಾ ।
ಗರ್ಂ ಪಡಿಮಾತೊಯ್ಯನೆ ರಾ
ಜ್ಯಂ ಪೆಱತೇನಕ್ಕ ನಮಗೆ ಸಾಗರ್ಂ ಕ್ರಮದಿಂ ॥ ೮೧

ಪರದಂಗೆ ಪುಟ್ಟಿ ನಿನ್ನಂ
ತರಸುತನಕ್ಕಂ ಮಹಾವಿಭೂತಿಗಮುರ್ವೀ ।
ಧರನ ಕಡುಗೂರ್ಮೆಗಂ ವಿ
ಸ್ತರದಿಂ ರಾಜ್ಯಾಸ್ಪದಕ್ಕಮಿಂ ನೋಂತವರಾರ್] ॥ ೮೨

ಎಂಬುದುಂ ಸುಬಂಧುಶ್ರೀ ತಂದೆಯ ಮಾತಿಂಗೆ ನಕ್ಕು ನಿಮ್ಮಂತಪ್ಪ ಮಹಾಪುರುಷರಿಂತಪ್ಪ ನಿರ್ಬುದ್ಧಿತನಮಂ ಮಾಡಲಾಗದೀಶ್ರೀಗೆಱಗಿ ಧರ್ಮಮಂ ಬಿಡುವುದಾವ ಬುದ್ಧಿ [1]; ಕಾಚಂ ಬಿಟ್ಟೋಡಂ ಪಿಡಿವ, ತಾಯುಂ ಬಿಟ್ಟು ರಕ್ಕಸಿಯುಂ ಪೊರ್ದುವ, ಭೂಪರಂ ಬಿಟ್ಟು ಪೊಲೆಯರಂ ಕೆಳಗೊಳ್ವ, ನಂಟರಂ ಬಿಟ್ಟು ಪಗೆಯುಂ ಕೂಡುವ, ಕುದುರೆಯನೊಲ್ಲದೆ ನಾಯನೇಱುವ, ಪಟ್ಟದಾನೆಯುಂ ಕೊಟ್ಟು ಕೋಡಗಮಂ ಕೊಳ್ವ, ಪಾಲನೊಲ್ಲದೆ ನಂಜಂ ಕುಡಿವ, ಸಕ್ಕರೆಯನೊಲ್ಲದೆ ಮಳಲಂ ಮೆಲ್ವ, ಕಂಕಣಮನೊಲ್ಲದೆ ಬಳೆಯಂ ತುಡುವ, ಧಾನ್ಯಮಂ ಕೊಟ್ಟು ಪೊಳ್ಳಂ ಕೊಳ್ವ, ನೆಲೆವಾೞಂ ಬಿಟ್ಟು ತಿರಿದುಂಬ, ಮರುಳಂ ಪೋಲ್ಕುಂ; ಬೆಕ್ಕು ಪಾಲಂ ಕಾಣ್ಬುದಲ್ಲದೆ ಮೇಗೆ ಬಂದಡಸುವ ಬಡಿಗೆಯುಂ ಕಾಣದಂತೆ ಮೂರ್ಖರಪ್ಪರುಮಿಲ್ಲಿಯ ಸುಖಮನೆ ಶಾಶ್ವತಮಾಗಿ ಕಾಣ್ಬರಲ್ಲದೆ ಮೇಗಣ ನರಕದೊಳಾದ ಮಹಾದುಃಖಮನಱಿಯರೆನಗಿಂತಪ್ಪ ಮಾಯಾವಚನಂಗಳಿಂ ಮಕ್ಕಳ ಕೈಯ ಮಾಣಿಕಮಂ ಗುಗ್ಗುರಿಯಂ [2] ತೋಱಿ ನಂಬಿಸಿ ಕೊಳ್ವಂತೆ ಸುದರ್ಶನಮಂ ಬಿಡಿಸಿ ಕಿಡುವ ಕಜ್ಜಮಂ ಪೇೞ್ವ ಈ ಶ್ರೀಯುಮನಲ್ಪಸುಖಮುಮಂ ತೋಱಿ ಟಕ್ಕಿಕ್ಕಿ ಮಾತಾಡವೇಡ ॥ ೧೩

ಜಿನಧರ್ಮಂ ಪ್ರಾಣಿಗಾರ್ಮಂ ತ್ರಿಭುವನತಿಲಕಂ ಸರ್ವಲೋಕೈಕಪೂಜ್ಯಂ
ಮನುಜೇಂದ್ರಶ್ರೀವಿಲಾಸಂ ವಿಬುಧಪತಿನುತಶ್ರೀವಧೂಕರ್ಣಪೂರಂ ।
ಘನಮುಕ್ತಿಶ್ರೀರಮಾಂಗೀವಿಮಳಮುಖಲಸದ್ದರ್ಪಣಂ ಖೇಚರಶ್ರೀ
ವನಿತಾಲಂಕಾರಮಾದ್ಯತ್ಸಕಲಸುಖನುಮಂ ಬೇಗಮೀವಿಂದ್ರಭೂಜಂ ॥

ಆಸದ್ಧರ್ಮಂ ಪುಣ್ಯನಿ
ವಾಸಿಗೆ ದೊರೆಕೊಳ್ಗುಮಘಸಮೇತಂಗನ್ಯತಾ ।

---

1 ಮಾತಿನಂದಕ್ಕೆ ಮುಗುಳ್ನಗೆಯುಂ ನಕ್ಕು ನಿಮ್ಮಂತಪ್ಪ ಮಹಾಪುರುಷರಿಂತಪ್ಪ ಮಾತುಗಳಂ ನಿರ್ಬುದ್ಧಿತನದಿಂ ಮಾತನಾಡಲಾಗದಳಿಶ್ರೀಗೆಱಗಿ ಧರ್ಮಮಂ ಕೆಡಿಸುವುದಾವುದು ಕಜ್ಜಂ (ಗ).

2 ಗುರುಗುಂಜೆಗಳಂ (ಗ).

ವಾಸಂಗೆ ಮಿಕ್ಕ ಪುರುಷಾ
ಭಾಸಂಗಸುಖಾವಹಂಗೆ ದೊರೆಕೊಂಡಪುದೇ ॥ ೮೫

ವಿಮಳಮಿದೆನಿಸುವ ಜೈನಾ
ಗಮಮಂ ನೀಮಱಿದುಮಱಿಯದೆಗ್ಗರ ತೆಱದಿಂ ।
ರಮಣೀಯಮೆಂದು ರಾಜ್ಯ
ಕ್ರಮಕ್ಕೆ ಬೆಚ್ಚಿಲ್ಲದೆಳಸಲಪ್ಪುದೆ [1] ಮನದೊಳ್ ॥ ೮೬

ಅಂತಲ್ಲದೊಡಂ ಕರ್ಮರಾಜನೆಂಬ [ವ್ಯಾಧರಾಜಂ ಕೋಪಮೆಂಬ ತೀವ್ರಾಯುಧಮನುರ್ಚಿಕೊಂಡು ಮಿಥ್ಯಾತ್ವರುಚಿಯೆಂಬ ಕುದುರೆಯನೇಱಿ ಮಾಯೆಯೆಂಬಡ್ಡಣಮಂ ಪಿಡಿದು ಮೋಹಮೆಂಬ ಸುರಿಗೆಯಂ ಕಟ್ಟಿ ಲೋಭಮೆಂಬ ಸಮಂಗಮಂ ತೊಟ್ಟು ಮಾಣದಷ್ಟಮದಮೆಂಬ ಝುಂಝುಕಮನಿಕ್ಕಿ ರಾಗದ್ವೇಷಮೆಂಬ ಕೀೞಂ ಪಿಡಿದು ತ್ರಿದಂಡಮೆಂಬ ನೋಟಂಬೆರಸು ಶಂಕಾದ್ಯಷ್ಟಮಳಮೆಂಬ ಮೇಳದಾಳ್ವೆರಸು ಆರ್ತರೌದ್ರಧ್ಯಾನಮೆಂಬ ಮುಂಗೊಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೊಳೆಯದ ವೀರರ್ವೆರಸು ಕುದಾನಪ್ರೀತಿಯೆಂಬ ಪೊಣ್ಕೆಯಾಳ್ವೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು ಸದ್ದರ್ಶನಾಂತರಾಯಮೆಂಬೇಱುಗಳಂ ಋಷಿದೂಷಣಮೆಂಬ ಬಡಿಗಳಂ ಕೆಡೆಯೆ ಮೋದುತ್ತುಂ ಸುತತ್ತ್ವಭೀತಿಗಳೆಂಬಂಬುಗಳಿಂದಂ ಮೆಯ್ಗಾಣದೆ ಸುರ್ಬುತ್ತುಂ] [2] ಬೞಲ್ದರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ ಮತ್ತಂ ದಂಡಣೆಗಳಂ ಮಾಡುವಂತೆ ಕೋಟಿಕೋಟಿ ಸಾಗರೋಪಮಕಾಲಕ್ಕೊರ್ಮೆ ಹೀನರಾಜ್ಯಮುಮನಲ್ಪಶ್ರೀಯುಮನಱುಸುಖಮುಮಂ ತೋಱಿ ನರಕದೊಳಂ ತಿರಿಕದೊಳಮೆಡೆಯಱಿಯದೆ ನಿಷ್ಕರುಣನಾಗಿ ಮೆಚ್ಚಿದ ಕೊಲೆಗಳಂ ಕೊಲ್ವಾತನಂ ಕಂಡು ಬೆಚ್ಚಿ ಶರಣರಪ್ಪರೊರ್ವರುಮಿಲ್ಲದೊಳಱ

1 ಎಳಸದಿರ್ಪುದು (ಗ).

2 ಚಕ್ರವರ್ತಿ ಮಿಥ್ಯಾತ್ವಮೆಂಬಕುದುರೆಯನೇಱಿ ರಾಗದ್ವೇಷಮೆಂಬ ಕೀೞಂ ಪಿಡಿದು ಬಹುಕಾಂಕ್ಷೆಯೆಂಬ ಕವಣೆಯಂ ಮೆಟ್ಟಿ ಸದ್ಧರ್ಮದ್ವೇಷಮೆಂಬ ಮುರಗೋ

[ಪೇೞಿ] ಬೞಿಯ್ವಿಟ್ಟಿಂತೆನುಮೆನ್ನ ಭಾಗ್ಯದಿಂ ಸದರ್ಮಸಮೇತ ನಪ್ಪ ನಿನ್ನಂ ಶರಣ್ಬುಗುವಂತೆ ಪುಟ್ಟಿದೆನ್ನಂ ರಕ್ಷಿಸದೆ ಕರ್ಮ ರಾಜಂಗೆ ಮಗುೞ್ ಪಿಡಿದೊಪ್ಪಿಸುವುದು ಪಾೞಿಯಲ್ಲದೆಂತುಂ ನಿಮ ಗೆನ್ನಮೇಲೆ ಮುಳಿಸುಳ್ಳೊಡೆ ನಿಮ್ಮ ಮೆಚ್ಚಿದ ದಂಡನೆಯುಂ ಮಾಡಿಮೇ ಗೆಯ್ದುಂ ಮಿಥ್ಯಾದೃಷ್ಟಿಗೆ ಕುಡುವೆವೆಂಬ ಬಗೆಯಂ ಮಾಣ್ಬುದೆಂದು ಕಣ್ಣನೀರಂ ನೆಗಪುವುದುಂ ಮಗಳ ಮನದ ಸ್ವಚ್ಛತೆಗಂ ಸಮ್ಯಕ್ತ್ವ ದೊಳಾದ ನಂಬುಗೆಗಂ ಗುಣಪಾಲಸೆಟ್ಟಿ ಮನದೊಳಚ್ಚರ್ಗ ॥ ೯೭

ಎನ್ನ ಗುಣಕ್ಕಂ ಬಗೆವಂ
ದೆನ್ನವಧೂಟಿಯ ಗುಣಕ್ಕಮೀಕೆಯ ಗುಣಮ ।

---

ಡಂ ಮಲಗಿ ಜಿನದೂಷಣೆಯೆಂಬ ಖಡ್ಗಂಬೆರಸು ಋಷಿವೈರಮೆಂಬ ಚಮ್ಮಟಿಗೆವೆರಸು ಕೋಪಮೆಂಬ ಸಬಳಮಂ ಪಿಡಿದು, ಮಾನಮೆಂಬ ಖಡ್ಗಮಂ ಪಿಡಿದು ಮಾಯೆಯೆಂಬ ಸುರಗಿಯುಂ ಕಟ್ಟಿ ಲೋಭಮೆಂಬ ಸವಗಮಿಕ್ಕಿ ಮೋಹಮೆಂಬಸಿಕಮನಿಕ್ಕಿ ಶಲ್ಯತ್ರ ಯಮೆಂಬ ಕಾಲಾಳ್ಪಿನಾಳ್ವೆರಸು ಕುಲಮದಮೆಂಬ ರಥಂಬೆರಸು ಜಾತಿಮದಮೆಂಬ ಕೊಂತದಾಳ್ವೆರಸು ಅಜ್ಞಾನಮದಮೆಂಬ ಕಡಿತಲೆವೆರಸು ಐಶ್ವರ್ಯಮದಮೆಂಬ ಬಿಟ್ಟೇಱುಕಾಱರ್ವೆರಸು ಬಲಮದಮೆಂಬ ಕಟ್ಟುಗೆಕಾಱರ್ವೆರಸು ರೂಪುಮದ ಮೆಂಬ ಕುದುರೆಯದಳಂ ಬೆರಸು ತಪೋಮದಮೆಂಬ ಸೂಱೆಕಾಱರ್ವೆರಸು ವಿಜ್ಞಾನ ಮದಮೆಂಬ ಪೂಣ್ಕೆಯಾಳ್ವೆರಸು ಹಿಂಸಾನಂದಮೆಂಬ ಮುಂಗುಡಿಯಾಳ್ವೆರಸು ಅನೃತಾನಂದಮೆಂಬ ಬಾಂಗುಳಾಳ್ವೆರಸು ಸ್ತೇಯಾನಂದಮೆಂಬ ಮನ್ನೆಯಾಳ್ವೆ ರಸು ಸಂರಕ್ಷಣಾನಂದಮೆಂಬ ನಾಯಕರ್ವೆರಸು ಪರವನಿತಾರತಿಯೆಂಬ ನಂಬುಗೆ ಯಾಳ್ವೆರಸು ಶಂಕಾದ್ಯಷ್ಟಗುಣಂಗಳೆಂಬ ಕರಿಘಟೆಗಳ್ವೆರಸು ಸಪ್ತವ್ಯಸನಮೆಂಬ ಜೀವಿತದಾಳ್ವೆರಸು ಕುದಾನಪ್ರೀತಿಯೆಂಬ ಮೇಳದಾಳ್ವೆರಸು ನಿರ್ದಯಮೆಂಬ ಬಿಲ್ಪಡೆವೆರಸು ದುರಾಚಾರಮೆಂಬ ಕಳ್ವಾಳ್ವೆರಸು ರೌದ್ರಧ್ಯಾನಮೆಂಬ ಗುಪ್ತನಡೆ ವೆರಸು ಆರ್ತಧ್ಯಾನಮೆಂಬ ಮನ್ನಣೆಯರ್ವೆರಸು ದುಷ್ಟಗೋಷ್ಠಿಯೆಂಬ ಸಾಮಂತರ್ವೆರಸು ದುರ್ಬುದ್ಧಿಯೆಂಬ ಪೊಱಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು ದರ್ಶನಾಂತರಾಯಮೆಂಬೇಱುಗಳಿಂ ಸದ್ಧರ್ಮವಿಘ್ನಮೆಂಬ ಪೊಯ್ಲು ಗಳಿಂ ಸನ್ಮುನಿನಿಂದೆಯೆಂಬ ಇಱಿಡುಗಳಿಂ ಸತ್ಪೂಜಾಭಂಗಮೆಂಬ ಬಯ್ಗುಳಿಂ ಸದ್ದ ರ್ಶನಾಲಸ್ಯಮೆಂಬ ಕೊಂತಂಗಳಿಂ ತತ್ವಭೀತಿಯೆಂಬ ತಿವುಗಳುಗಳಿಂ ಸದ್ಗೋಷ್ಠಿ ದೂರಮೆಂಬ ಕಡಿಖಂಡಂಗಳಿಂ ಬೀೞೆ ಮೋದುತ್ತುಂ ದಂಡಣೆಯುಂ ಮಾಡು ತ್ತುಂ. (೧)

ತ್ಯೃನ್ನ ತಪೊನಿಸಿದುದದಱಿಂ
ದೆನ್ನಂತಾರ್ ಪುಣ್ಯವಂತರವನೀತಳದೊಳ್ ॥ ೮೮

[ಬದರೀಕಂಟಕರೆಂದೆನಿ
ಸದೆ ಪಂದೆಯು ಯುದ್ಧದಂತೆ ಸದ್ಧರ್ಮಕ್ಕಂ ।
ಜಿದರಿವರೆನಿಸದೆ ಸರ್ವ್ವ
ಕ್ತ್ವದೊಳಂತಿವರಿರ್ವರಂತೆ ನೇರಿದರೊಳರೇ ॥ ] ೮೯

ದುರಿತಾರಿಯುನದಟಲೆದೋ
ಸರಿಸದೆ ಮೋಕ್ಷಕ್ಕೆ ಸಲ್ವ ಜೀವಾದಿಗಮುಂ ।
ರ್ಮರೆಯೊಳ್ ಸುತತ್ತ್ವರುಚಿ ತಾಂ
ಸಿರಿಖಂಡದ ಕಂಪಿನಂತೆ ಸಹಜಮೆನಿಕ್ಕುಂ ॥ ೯೦

ದುರಿತಯುತನಾಗಿ ಗಮ್ಮನೆ
ನರಕಕ್ಕಿಟಿಯಲ್ಕೆ ಬಗೆವ ಜೀವಾಳಿಗಮುಂ ।
ರ್ಮರೆಯೊಳ್ ಕುತತ್ತ್ವರುಚಿ ತಾಂ
ದೊರೆಕೊಳ್ಗುಂ ಪೇಲ್ಗೆ ಪುಟ್ಟುವಂತಸುಗಂಧಂ ॥ ೯೧

[ಮತ್ತಂ ಕತ್ತುರಿಕರ್ಪೂರಶ್ರೀಖಂಡಾದಿದ್ರವ್ಯಂಗಳಂ ಸೋಂಕಿ ಪರಿವ ಗಾಳಿ ಗಂಮಪ್ಪಂತೆ ಪಾಪದೊಳ್ ಪೊರ್ದದ ಪೊಲ್ಲಮೆಯೊಳೊಂದದ ಜಿನೇಂದ್ರಧರ್ಮಮಂ ಪೊರ್ದಿದ ಮಹಾತ್ಮರ್ಗೆ ಸುತತ್ತ್ವವಿಚಾರಮುಂ ಮಿಥ್ಯಾತ್ವಭೀರುತ್ವಮುಂ ಸಹಜಮಕ್ಕುಂ ; ಅಮೇಧ್ಯಕಳ್ಮಾಂಸಾದಿ ದುರ್ಗಂಧಮಪ್ಪಂತೆ ಲೋಲತೆಯೊಳ್ ಪೊರ್ದಿದ ಪೊಲ್ಲಮೆಯೊಳೊಂದಿದ ಮಿಥ್ಯಾದರ್ಶನಂಗಳಂ ಪೊರ್ದಿದ ದುರಾತ್ಮಂಗೆ ಕುಮಾರ್ಗಾನುರಾಗಮುಂ ಕುತತ್ತ್ವರುಚಿಯುಂ ಮಿಥ್ಯಾತ್ವಪ್ರೀತಿಯುಂ ಸಹಜಮೆಂದು ತನ್ನೊಳ್ ವಿಚಾರಿಸಿ ಧನಶ್ರೀಯ ಗುಣಂಗಳಂ ಮನದೊಳ್ ಪೊಗೞ್ದು ತನ್ನ ಮನದ ಕಾರ್ಯಮನಿರ್ವರ್ಗಂ ತಿಳಿಯೆ ಪೇೞ್ದು ॥ ೯೨

ತಡೆದಿಲ್ಲಿ ನಿಂದೆನಪ್ಪೊಡೆ
ಕುಡವೇೞ್ಕುಂ ಭೂಭುಜಂಗೆ ಮಗನಂ ಕೂಸಂ ।

ಕಡುಗೂರ್ತು ಕೊಟ್ಟನಪ್ಪೊಡೆ
ಕಿಡುಗುಂ ಮೇಲಪ್ಪ ನಮ್ಮ ಮೋಕ್ಷದ ಸೌಖ್ಯಂ] ॥ ೯೩

ಎಂದಾಲೋಚಿಸಿ [1] ಧನಶ್ರೀ ಗರ್ಭಿಣಿಯಪ್ಪ ಕಾರಣದಿಂ [ದೊಡಗೊಂಡು ಪೋಗಲೊಲ್ಲದೆ] ತನ್ನ ಪ್ರಾಣಮಿತ್ರನಪ್ಪ ಶ್ರೀದತ್ತನೆಂಬ ಪರದನ ಮನೆಯೊಳ್ ಗುಪ್ತದಿಂದಿರಿಸಿ ನೂಱೆಂಟುಕೋಟಿ ಪೊನ್ನುಮಂ ನಿರ್ವಾಹಮುಮಂ ಬಿಸುಟ್ಟು ॥ ೯೪

ಮಗಳನೊಡಗೊಂಡು ಪುರದಿಂ
[ಬಗೆಯದೆ ಪೆಱಪೆಱತನಳಪದೊಂದಕ್ಕಂ ಕೈ ।
ಮಿಗೆ ಜೈನಧರ್ಮವಾರಿಧಿ
ಮೃಗಾಂಕನನುಪಮಗುಣಾಂಬುನಿಧಿ ಪೊಱಮಟ್ಟಂ ॥ ೯೫

ಅಂತು] ಪೊಱಮಟ್ಟು ಕತಿಪಯಪ್ರಯಾಣಂಗಳಿಂ ಕೌಶಾಂಬಿಯೆಂಬ ಪುರಮನೆಯ್ದಿ ॥ ೯೬

ಸಿರಿಯಂ ಚಿಂತಿಸಿ ಕಂದಿ ಕುಂದಿರದೆ ನಿರ್ವಾಹಕ್ಕೆ ಕೇಡಾದುದೆಂ
ದಿರುಳೆಲ್ಲಂ ಮತಿಗೆಟ್ಟು ಬಾಯ್ವಿಡದೆ ದೇಶತ್ಯಾಗಮಾಯ್ತೆಂದು ನಿ
ಷ್ಠುರದುಃಖಕ್ಕೆಡೆಯಾಗದುತ್ತಮಗುಣಂ ಚಾರಿತ್ರಪಾರಾಯಣಂ
ಪಿರಿದುಂ ಸಂತಸದಿಂದಮಿರ್ದನಮಳಶ್ರೀಧರ್ಮರತ್ನಾಕರಂ [2] ॥ ೯೭

[ಅಂತಿರ್ಪುದುಮಿತ್ತಲರಸಂ ಗುಣಪಾಲಸೆಟ್ಟಿ ಪೆಂಡಿರ ಮಕ್ಕಳ ಕೈಯುಂ ಪಿಡಿದು ಪಿರಿದಪ್ಪ ಧನಮುಮಂ ನಿರ್ವಾಹಮುಮಂ ನೀಡಾಡಿ ಪೋದನೆಂಬುದಂ ಕೇಳ್ದು ಬೆಱಗಾಗಿ ಪ್ರಧಾನರ ಮೊಗಮಂ ನೋಡಿ ॥ ೯೮

ತನ್ನ ತನೂಜೆಯುಮೆನಗಿ
ತ್ತುನ್ನತಿಯಿಂದಿರದೆ ಬಿಟ್ಟು ನಿರ್ವಾಹಮುಮಂ ।
ಪೊನ್ನುಮನೀಡುವ ಮರುಳವ
ನನ್ನರ್ಱರೊಳರೆ ಬಗೆವೊಡುರ್ವೀತಳದೊಳ್ ॥ ೯೯

[1] ಎಂದು ಮೆಚ್ಚಿ (ಗ)   [2] ನೊಲಪಿಂ ವಾತ್ಸಲ್ಯರತ್ನಾಕರಂ (ಗ)

ತಾನಪ್ಪೊಡೆ ವೈಶ್ಯಾತ್ಮಜ
ನಾನಪ್ಪೊಡೆ ರಾಜಪುತ್ರನೆಂದೊರೆಯುಳ್ಕೆಂ ।
ದೇನಿರದೆ ಪೋದನಪ್ಪೊಡ
ಮೇನೆಂತರವಣ್ಣ ನೋಡೆಪ್ಪೊಡೆನಗಂ ತನಗಂ ॥ ೧೦೦

ಸುತೆಯುಂ ಕೊಟ್ಟೆನಗಖಿಳ
ಕ್ಷಿತಿಯುಮನಾಳ್ದಿರದೆ ಸುಖದಿನತಿಚಪಳಂ ದು ।
ರ್ಮತಿಯಾಗಿ ಬೆಚ್ಚಿ ಪೋಪೊಂ
ದತಿಶಯಮೇಕೆಂತು ಪುಣ್ಯಹೀನರುಮೊಳರೇ ॥ ೧೦೧
ಎಂದು ಹಾಸ್ಯಂಮಾಡಿ ನಗುವರಸಂಗೆ ಪೆರ್ಗಡೆಗಳಿಂತೆಂದರ್॥೧೦೨

ದೇವಲೋಕವಿಭೂತಿಗಂ ವರಚಕ್ರವರ್ತಿಯ ಲಕ್ಷ್ಮಿಗಂ
ಭಾವಿಪಂದಪವರ್ಗಲಕ್ಷ್ಮಿಯ ಕೂರ್ಮೆಗಂ ಪಿರಿದಪ್ಪ ವಾ
ಕ್ಷ್ಣೇಪಧೂಪ್ರಿಯನಲ್ಕೆಗಂ ಸುಖದೊಂದು ಪತ್ತುಗೆಗಂ ಜಯ
ಶ್ರೀವಧೂವರಮಪ್ಪ ವೃಮೆಗಮುನ್ನತಿಕ್ಕೆಗಮಾಜ್ಞೆಗಂ ॥ ೧೦೩

ಕೊಲೆಯೊಳ್ ಪೊರ್ದದಿರ್ದ ಸದ್ಧರ್ಮಮೆ ಮುಖ್ಯಮಪ್ಪುದಱಿಂ ಧರ್ಮದ ಮೋಹದಿಂ ಶ್ರೀಯುಮಂ ಸಂಪತ್ತುಮನುದಾಸೀನಂಮಾಡಿ ದೇವ ನೀಂ ಶ್ರಾವಕನಲ್ಲಮಪ್ಪುದಱಿಂ ಮಿಥ್ಯಾತ್ವಕ್ಕಂ ಮೇಲೆ ಬರ್ಪ ನರಕದುಃಖಕ್ಕಂ ಭಯಸ್ಥನಾಗಿ ಕುಡಲೊಲ್ಲದೆ ಪೋದನೆಂಬುದಂ][1]
ವಿಶ್ವಂಧರಮಹಾರಾಜಂ ಚೋದ್ಯಂಬಟ್ಟು ॥ ೧೦೪

ಸಿರಿಯುಂ ಬಿಟ್ಟು ವಿಭೂತಿಯುಂ ತೊಱೆದು ನಿರ್ವಾಹಕ್ಕೆ ತಚ್ಚಿತ್ತದೊಳ್
ಪಿರಿದುಂ ಮೋಹಿಸಲೊಲ್ಲದಂಜಿ ಮಗಳಂ ವೈಶ್ಯಾತ್ಮಜಂ ಸಂತಸಂ
ಬೆರಸುತಪ್ಪುಹದಿನೀಯದೆನ್ನ ಸಿರಿಯುಂ ಪೆಂಪಂ ಮನಂಗೊಳ್ಳದಾ
ದರಮಂ ಧರ್ಮದೊಳುಂಟುಮಾಡಿ ಪೊಱಮಟ್ಟೀದೇಶದಿಂದೋಡಿದಂ ॥

1 ಅಂತಿರ್ಪುದುಮಿತ್ತಲ್ ಗುಣಪಾಲಸೆಟ್ಟಿಯ ಪೋಗಂ ಕೇಳ್ದು (ಗ)

ಅದಱಿಂದಾತಂ ನಂಬಿ
ದುರ್ಗದೆ ದೈವಂ ವೈಶ್ಯವಂಶತಿಳಕಂ ಪಿಡಿದಿ ।
ದುರ್ಗದೆ ಧರ್ಮವೆಂದು ನಚ್ಚಿದ
ನುದಿತೋದಿತಕೀರ್ತಿವೊಳಪ್ರೋರ್ವೀನಾಥಂ ॥ ೧೦೬

[ಪಿರಿದಪ್ಪ ಸಿರಿಯನೊಲ್ಲದೆ
ಪರತ್ರಿಯನೆ ನಂಬಿ ಪಿಡಿದನೆಂದಂದಿಂತೀ ।
ಧರೆಯೊಳಗಾವೈಶ್ಯಾಂಬರ
ತರಣಿಯ ನಚ್ಚಿದ ಧರ್ಮವೆದುವೆ ಸುಧರ್ಮಂ ॥ ೧೦೭

ಎಂದಾಜಿನಧರ್ಮದೊಳ್ ಪ್ರೀತಿಯುಂ ಕುಧರ್ಮದೊಳ್ ಭೀತಿಯುಂ ಪುಟ್ಟೆ ಗುಣಪಾಲಸೆಟ್ಟಿಯುವೇಲೆ ಮೋಹಮುಂ ಸ್ನೇಹಮುಮೊಗೆ ಮನೆಗಂ ಭಂಡಾರಕ್ಕಂ ಕಾಪಂ ಪೇೞ್ದು ಜಿನಸಮಯವಾರ್ಧಿವರ್ಧನಚಂದ್ರನನೆಲ್ಲಿಯುಮಟ್ಟಿಯಱಸಿ ತನ್ನಿಮೆಂದು ದೆಸೆದೆಸೆಗೆ ಪರಿಚಾರಕರನಟ್ಟಿದನಿತ್ತ ಧನಶ್ರೀ ॥ ೧೦೮

ಗುಣಪಾಲಸೆಟ್ಟಿಯುಪ್ಪೊಡೆ
ಗುಣಾಢ್ಯನವಿನೀತನಲ್ಲನಾರ್ಗಂ ವೈಶ್ಯಾ ।
ಗ್ರಣಿ ಪುಣ್ಯನಿಳಯನಾಯುದ
ಕಣಿ ಸತ್ಯನಿಧಾನನೆಲ್ಲಿಯುಂ ಕೆಟ್ಟಪನೇ ॥ ೧೦೯

ವಾತ್ಸಲ್ಯರತ್ನಾಕರನಪ್ಪೊಡಧಿಕಪುಣ್ಯನುಂ ವಣಿಗ್ವಂಶಾಗ್ರಗಣ್ಯನುಮಪ್ಪನೆಲ್ಲಿ ಪೊಕ್ಕೊಡಮಾಪತ್ತುಮೆಡರುಮಿಲ್ಲೆಂದು] [1] ಮನಮಂ ಸಂತೈಸಿಕೊಂಡು [ಸುಖದಿಂ] ಕೆಲವುದಿವಸಮಿರ್ಪುದುಮೊಂದುದಿವಸಂ ಶಿವಗುಪ್ತರೆಂಬಾಚಾರ್ಯರ್ ತ್ರಿಗುಪ್ತರೆಂಬ ತಮ್ಮ ಶಿಷ್ಯರ್ವೆರಸು [ಚಂದ್ರಗತಿಯಿಂ ಚರಿಗೆಗೆವರ್ಪುದುಂ ಶ್ರೀದತ್ತಸೆಟ್ಟಿ ಕಂಡು ॥ ೧೧೦

1 ಅಂತು ಮೆಚ್ಚಿ ಗುಣಪಾಲಸೆಟ್ಟಿಯನೊಡಗೊಂಡು ಬರ್ಪುದೆಂದು ದೆಸೆದೆಸೆಗೆ ಚರರನಟ್ಟಿ ಮನೆಗೆ ಕಾಪಂ ಪೇೞ್ದನಿತ್ತಲ್ ಧನಶ್ರೀ (ಗ)

ಕರವೊಾದರದಿಂದಾವೆುುನಿ
ವರರಂ ಸದ್ಭಕ್ತಿಪೂರ್ವಕಂ ನಿಲಿಸಿ ದುರಂ।
ತರಚರಿತರಂ ಮಹಾಗುಣ
ನಿರತರನಘನಿಕರತೀವ್ರವಜ್ರಾಯುಧರಂ ॥ ೧೧೧

ಬಳಗಣ್ಣಿದಿರ್ಗೊಂಡೊಯ್ಯನೆ
ಬಳಸಿದ ವಿಷ್ಟರದೊಳಿರಿಸಿ ಕಾಲಂ ಚಿತ್ತೋ।
ಜ್ಜ್ವಲನಾಗಿ ಕರ್ಚಿ ತಾಂ ತ
ಜ್ಜಳವೆುಂ ಮಸ್ತಕದೊಳಾಂತು ಪೂಜಿಸಿ ಪದವೆುಂ ॥ ೧೧೨

ಪದಪಿಂ ಶುದ್ಧಾನ್ನಮನೀ
ವುದುಮುಂಡು ಮುನೀಂದ್ರರಿರ್ವರುಂ ಕುಳ್ಳಿರೆ ಸಂ।
ಮದದಿಂ ಮುನೀಂದ್ರವಂದ್ಯನ
ಪದಯುಗಳಮನೊತ್ತುತಿರ್ದನಿರ್ಪನ್ನೆವರಂ ॥ ೧೧೩

ಧನಶ್ರೀ ವಂದಿಸಿ ಪೋಪುದುಂ ತ್ರಿಗುಪ್ತಮುನೀಂದ್ರಂ ಧನಶ್ರೀಯುಂ ಕಂಡು ಮನದೊಳ್ ವಿಸ್ಮಯಂಬಟ್ಟು ಶಿವಗುಪ್ತಭಟ್ಟಾರಕರ್ಗೆ ಪೊಡೆಮಟ್ಟು ಕೈಗಳಂ ಮುಗಿದು ವಿನಯದಿಂದಿಂತೆಂದಂ ॥ ೧೧೪

ಈವನಜಾಸ್ಯೆಗುತ್ತಮಗುಣಾನ್ವಿತೆಗಗ್ಗಳಭದ್ರಲಕ್ಷಣಂ
ತೀವಿದುವೈದೆ ಭಾವಿಸುವೊಡೆಲ್ಲೆಡೆಯುಂ ನೆರೆದೊಪ್ಪೆ ಚೆಲ್ವಿನಿಂ
ಶ್ರೀವಧುವನ್ನಳನ್ನಳೆನಿಪೀವಧುವುಂ ಕಡುಕಂದಿ ಕುಂದಿ ಸ
ದ್ಭಾವಮನೊಕ್ಕು ಹೀನರವೊಲನ್ಯನಿವಾಸದೊಳಿರ್ಪುದಾರಿದೇಂ ॥ ೧೧೫

ಸಂಸಾರದೊಳ್ ಬಿಟ್ಟು ಪೆಱತೊಂದು ಕಷ್ಟಮಿಲ್ಲೆಂಬುದುಂ ಶಿವಗುಪ್ತಭಟ್ಟಾರಕರಿಂತೆಂದರ್ ॥ ೧೧೬

ಅಂತೆನವೇಡ ಧಾರಿಣಿಯೊಳೀಲಲಿತಾಂಗಿಯೆ ಪುಣ್ಯವಂತೆ ಭೂ
ಕಾಂತನಡರ್ತು ತನ್ನ ಮಗಳಂ ಕುಡವೇಟ್ಕನಲೀಕೆಯಾಣ್ಮನೋ

ರಂತೆ ಜಿನೇಂದ್ರಧರ್ಮಯುತನಲ್ಲದವಂಗೆ ಮನೊತ್ಮಜಾತೆಯಂ
ಸಂತತಮಾಯೆನೆಂದು ಬಿಸುಟಗ್ಗದ ಧಾನ್ಯಧನಂಗೃಹಂಗಳಂ ॥ ೧೧೭

ಪೋಗುತು ಮಾವನಿತೆ ಗರ್ಭಿಣಿಯಪ್ಪುದಱಿಂದೊಡಗೊಂಡು ಪೋಗಲೊಲ್ಲದೆ ಶ್ರೀದತ್ತಸೆಟ್ಟಿ ತನಗಿಷ್ಟನಪ್ಪುದಱಿಂದಿಲ್ಲಿ ಗುಪ್ತದೊಳಿರಿಸಿ ಪೋದನದಱಿಂದೀಧನಶ್ರೀ ಕಂದಿ ಕುಂದಿದಳೆಂಬುದುಂ, ಇಂತೀಧನಶ್ರೀಯ ಗರ್ಭದ ಕೂಸೀಮಂಡಳಕ್ಕೆಲ್ಲಮೊಡೆಯನಕ್ಕುಮೆಂದು ತಮ್ಮೊಳ್ ನುಡಿದು ಪೋಪುದುಂ ಶ್ರೀದತ್ತಸೆಟ್ಟಿ ಕೇಳ್ದು ಕಾರಣಮಿಲ್ಲದೆ ಮುಳಿದು ॥

ಈಸಸಿವದನೆಯ ಗರ್ಭದ
ಕೂಸೀದೇಶಕ್ಕೆ ಮುಖ್ಯನಪ್ಪಂ ಗಡ ನಾ ।
ನಾಸಿಸುವನುಪಾಯದೊಳ್ ವಿ
ನಾಶಂಮಾಡಲ್ಕೆವೇೞ್ಕುಮೆಂದತಿಮುಳಿಸಿಂ ॥ ೧೧೯

ಪೂರ್ವವೈರಮುಂಟಪ್ಪುದಱಿಂ ಮಸಗಿ ಕೃತಕದಿನಿರ್ವರ್ತೊತ್ತಿರನೀಧನಶ್ರೀ ಪೆಱಲೊಡಮೆಮಗಱಿಪಿಮೆಂದು ಬೇರೇಕಾಂತದೊಳ್ ಕಲಿಸಿ ಕೂರ್ಪರಂತೀ ಧನಶ್ರೀಗೆ ಸಂಘಾತಮಾಗಿರಿಮೆಂದಿರಿಸುವುದುಂ ಧನಶ್ರೀ ನವಮಾಸಂ ನೆಱೆದು ಗಂಡುಗೂಸಂ ಪೆಱುವುದುಂ ಮುನ್ನಮಿರಿಸಿದ ತೊೞ್ತಿರ್ವರುಂ ಪರಿತಂದು ಶ್ರೀದತ್ತಸೆಟ್ಟಿಗಱಿಪುವುದುಂ ॥ ೧೨೦

ಮುನಿಸೊದವೆ ಕೊಲ್ವೆನೆಂಬೀ
ಮನದಿಂ ಪರಿತಂದು ನೋಡಿ ಕೂಸಂ ಕಂಡೊ ।
ಯ್ಯನೆ ಕೂರ್ಪರಂದದಿಂದಂ
ವನಿತೆಯನಿೞ್ಕುತ್ತರ್ಮ ತಡವಿ ಕೃತಕದಿನಾಗಳ್ ][1] ॥ ೧೨೧

---

1 ಶ್ರೀದತ್ತಸೆಟ್ಟಿಯ ಮನೆಯೊಳ್ ನಿಂದು ತ್ರಿಗುಪ್ತಿಭಟ್ಟಾರಕರಿಂತಪ್ಪ ಭದ್ರಲಕ್ಷಣೆ ಬಡವಟ್ಟಂತೇಕೆ ಇರ್ದಪಳೆಂದು ಶಿವಗುಪ್ತಭಟ್ಟಾರಕರಂ ಬೆಸಗೊಳ್ವುದುಂ ತತ್ಪ್ರಪಂಚಮೆಲ್ಲಮಂ ಪೇಳ್ದೀಧನಶ್ರೀ ಪುಣ್ಯಾಂಗನೆ ಯೀಕೆಯ ಗರ್ಭದ ಕೂಸು ಈ ಮಾಳವದೇಶಕ್ಕಧಿಪತಿಯಕ್ಕುಮೆಂಬುದುಂ ಶ್ರೀದತ್ತಸೆಟ್ಟಿ ಕೇಳ್ದು ಕಾರಣಮಿಲ್ಲದೆ ಮುನಿದು ಕೊಲ್ವ ಮಸಕದಿಂದಿರ್ದ ಧನಶ್ರೀ ಪ್ರಸೂತೆಯಾಗಲೊಡನೆ (ಗ)

ಕುವಳಯನೇತ್ರೆಗೆ ಗರ್ಭ
ಸ್ರವಮಾದುದು ಕೆಟ್ಟೆನೆನಗೆ ಕೈಲೆಡೆ [1] ಯೆಂದೀ ।
ಧವಳಾಕ್ಷಿಯನಣ್ಣೊ [2] ವಣಿ
ಗ್ಭವನಿರಿಸಿದನಕಟ ಪೊಲ್ಲದಾಯ್ತೆಂದಾಗಳ್ ॥ ೧೦೨

ಧನಶ್ರೀಯುಂ ಪಾಸಿನಮೇಲೆ ಪಟ್ಟಿರಿಸಿ ಕೂಸಿನ ಪೊರೆಯೊಳಿರ್ದವರೆಲ್ಲರುಮಂ ಪೋಱಮಡಿಸಿ ಕಳೆದು ಕೂಸು ಸತ್ತುದೆಂದು ಪುಸಿದು ಪೊಱಗಣ್ಗೆ ಕೂಸನೊಯ್ದು ಮೆಲ್ಲನೇಕಾಂತದೊಳೊರ್ವ ಕ್ರೂರನಪ್ಪ ಪೊಲೆಯಂಗೆ ಸಾಲ್ವನಿತು ಪೊನ್ನಂ ಕೊಟ್ಟು ಮುನ್ನಮೆ ಸಮಕಟ್ಟಿ ಕೊಲ್ಲೆಂದಾತನ ಕಯ್ಯೊಳ್ ಕೊಟ್ಟು ಕಳೆದಿತ್ತಲ್ ॥ ೧೦೩

[ಸಾವಿಲ್ಲದೊಡೀಕೂಸಿನ
ಭಾವಮುಮೀಶಿಶುವಿನೋಜೆಯುಂ ಗುಣಮುಂ ಸ ।
ದ್ಭಾವಮುಮೊಳ್ಪುಂ ಸಕಳೋ
ರ್ವೀವಳಯಮುಮನೆಱಗಿಪ್ಪುದಿದು ಸಂದೆಯಮೇ] ॥ ೧೦೪

ಎನ್ನನೆ ನಂಬಿ ತನ್ನ ಸತಿಯುಂ ಗುಣಪಾಳನುದಾತ್ತವೈಶ್ಯವಂ
ಶೋನ್ನತನಟ್ಟಿಱಿಂದಿರಿಸಿ ಪೋದನವಂಗೆ ಮನೋನುರಾಗದಿಂ
ದೆನ್ನ ಸಖಿತ್ವಮಂ ಮೆಱೆದು ಕೂಸುಮನೀಕೆಯುಮಂ ಸಮಂತು ಸಂ
ಪನ್ನತೆಯಿಂದಮೊಪ್ಪಿಸುವ ಭಾಗ್ಯಮನಾಂಪಡೆಯೆಂದುರಾತ್ಮನಂ ॥ ೧೦೫

[ಪೊಂಗಂ ಮುದದಿಂದಾದಿ
ತ್ಯಂಗಂ ಪುಟ್ಟಿದವೊಲಧಿಕತೇಜಂ ಚೆಲ್ವಿಂ ।
ಗಂಗಜನನಿೞಿಪ ರೂಪು ಬೆ
ಡಂಗುಂ ಸತ್ತೆನಗೆ ಪೊಲ್ಲದಾಯ್ತೆಂದತ್ತಿಂ] ॥ ೧೦೬

ಎಂದು ಧನಶ್ರೀಯು ಮನದ ಸಂಕಲ್ಪಂ ಪೋಪಂತಾಗೆ ಮಾಯಾವಿ ಪ್ರಳಾಪಂಗೆಯ್ಯೆ ಧನಶ್ರೀ ಅವನ ಮನದ ಕಪಟಮನಱಿಯದೆ ನಿಶ್ಚಯಮತ್ತಪನೆಂದು ನಂಬಿ ದುಃಖಮನಾಱಿಸಲೆಂದಿಂತೆಂದಳ್ ॥ ೧೦೭

---

1 ಕೈಯೆಡ (ಬ. ಕ.)    2 ನೋಡ (ಕ. ಬ.)

ಕಱಿದವರ್ಗೇಕೆ ಪಂಬಲಿಪುದೇಕೆ ಪಲುಂಬುವುದೇಕೆ ಚಿತ್ತದೊಳ್
ಕೊಪೆವುದದೇಕೆ ಚಿಂತಿಸುವುದೇಕೆ ಬೞಲ್ವುದದೇಕೆ ದುಃಖದೊಳ್
ಮುೞುಗುವುದೇಕೆ [1] ಬಾಯ್ವಿಡುವುದೇಕೆ ಕನಲ್ವುದದೇಕೆ ಶೋಕದೊಳ್
ಪೞಯಿಸುತಿರ್ಪುದೇಕೆ ಬಗೆಗೆಟ್ಟು ಬೞಲ್ವುದದೇಕೆ ನೋವುದೋ ॥ ೧೨೮

ಬೇಡೆಂದು ಪೋಣಿಸುವುದುಂ ಮಾಯಾವಿಪ್ರಳಾಪಮಂ ಮಾಣ್ದು [ಋಷಿಯರ ವಚನಮಂ ಪುಸಿಮಾಡಿದೆರ್ದೆಯುಂ ನೀವಿಕೊಂಡು ಮಗವು ಸತ್ತುದೆಂದು ರಾಗಿಸಿ] ದರ್ನಿತ್ತಲ್ ಪೊಲೆಯುಂ ಪಸುಗೂಸಂ ನಿರ್ಮಾನುಷ್ಯಮಪ್ಪಡವಿಗೊಯ್ದು ಗಂಟಲಂ ಮುಱಿದು ಕೊಲ್ವೆನೆಂದು ಮಗವಂ [ನೋಡುವುದುಂ ॥ ೧೨೯

ಅರುಣತೆಯಿಂದಮೊಪ್ಪುವಧರಂ ಕನಕಚ್ಛವಿ ನೀಳ್ದ ಬಾಹು ಪಂ
ಕರುಹಮುಖಂ ನಿಮಿರ್ಕೆವಡೆದೊಪ್ಪುವ ನಾಭಿ ನೊಸಲ್ ಪೊದಳ್ದ ಭಾ
ಸುರತರಕಂಪಿನಿಂದೆಸೆವ ಪಾಣಿತಳಂ ನಸುಗೆಂಪನಾಳ್ವಸ
ತ್ತರಳವಿಲೋಚನೋದಯಮುಗಲ್ದುರಮುನ್ನತಿವೆತ್ತ ಮಸ್ತಕಂ ॥ ೧೩೦

ಸೊಗಯಿಸಿ ತೋಱಿ ಕರಂ ಮಿಗೆ
ಮೊಗಮಂ ನೋಡುತ್ತೆ ನಲಿವ ಶಿಶುವಂ ಪೊಲೆಯುಂ ।
ಮಿಗೆ ನೋಡಿ ನೋಡಿ ತನ್ನೊಳ್
ಬಗೆದಂ ದಯೆ ಪುಟ್ಟೆ ಮೋಹಮೊದವಿರೆ ಮನದೊಳ್] [2] ॥ ೧೩೧

ಕೊಲೆಯನುಡುಗಿ ಬಂದು ಪಳ್ಳದೊಳ್ ಪುಳಲಂ ಬಗೆದು ಮಾವಿನೆೞದಳಿರ್ಗಳಂ ಪಾಸಿ ಕೂಸನಲ್ಲಿ ಪಟ್ಟಿರಿಸಿ ಸುರರಾಜನಿಭನಪ್ಪೀತನೀತೀವ್ರಮಪ್ಪ ಬಿಸಿಲೊಳ್ ತಾನೆ ಹುಡುಹುಡನೆ ಮಗ್ಗಿ ಮಿಡುಮಿಡು ಮಿಡುಕಿ ಸಾಯದೆ ಮಾಣನಾನೇಕೆ ಪಾಪಮಂ ಮಾಡಿಕೊಳ್ವೆನೆಂದು ಸಿರದೆ ಪೋದನನ್ನೆಗಮಿತ್ತಲಾತನ ಪುಣ್ಯಮೆ ಬರ್ಪಂತೆ ಖಿಲ್ವಬಿಲ್ವಸಂಯೋಗದಿಂ ಶ್ರೀದತ್ತಸೆಟ್ಟಿಯ ಮೈದುನನಪ್ಪಿಂದ್ರದತ್ತಸೆಟ್ಟಿ ಪರದುವೋಗುತ್ತುಮಲ್ಲಿ

---

1 ಕೊಲೆವುದದೇಕೆ ಚಕ್ಕನೆ ಮನಂ ಮುಱಿದಿರ್ಪುದದೇಕೆ ಮಲ್ಕಲು ಮಱುಗುತೆ ಮತ್ತೆ (ಗ)

2 ನೋಡಿ ಚೆಲುವನಪ್ಪ ಕೂಸಂ ಕಂಡು (ಗ)

[ಬಿಟ್ಟಿರ್ಪುದುಂ, ಆತನ ಬೀಡಿನವರಿಂಧನಾರ್ಥಮೆತ್ತಿತ್ತ ತೊಟಲುತ್ತು ಮೆಳದಳಿರಮೇಲೆ ಪಟ್ಟಿರ್ದು ನಲಿವ ಶಿಶುವಂ ಕಂಡು ॥ ೧೩೨

ಕರವೊಳ್ಳಿತಾಯು ಸೆಟ್ಟಿಗೆ
ಪಿರಿದುತ್ಸವಮಾಗೆ ರಾಗದಿಂ ಶಿಶುವಂ ನಾಂ ।
ತ್ವರಿತದಿನೆಯೊಪ್ಪಿಸಿ ಕೊಡೆ
ಪಿರಿದಪ್ಪೊಂದರ್ಥಲಾಭಮುಂ ನಮಗಕ್ಕುಂ ॥ ೧೩೩

ಎಂದು ಕೂಸಂ ನಿಧಾನಮನೆತ್ತುವಂತೆತ್ತಿ ಕೊಂಡು ಬಂದಿಂದ್ರದತ್ತಸೆಟ್ಟಿಗೊಪ್ಪಿಸುವುದುಂ ತನಗೆ ಮಕ್ಕಳಿಲ್ಲದುದಱಿಂ ಬಡವಂ ಕಡಾರದ ಪೊನ್ನಂ ಕಂಡಂತೆ ಪೆರ್ಚಿ ತನ್ನ ಭಾರ್ಯೆ ಶ್ರೀದತ್ತನ ತಂಗೆಯಪ್ಪ ರಾಧೆಯಂ ಕರೆದು ನಿನಗೆ ಪುತ್ರಲಾಭಮಾಯ್ತೆಂದು ಬಾಲಾರ್ಕಸನ್ನಿಭ ಶಿಶುವಂ ಕೊಟ್ಟು ಕೂಸಂ ತಂದವರ್ಗೆ ಗುಪ್ತದಿಂ ಬೇಟ್ಪನಿತು ಪೊನ್ನಂ ಕೊಟ್ಟು ಸೆಟ್ಟಿತಿ ಗೂಢಗರ್ಭದಿಂ ಗಂಡುಗೂಸಂ ಪೆತ್ತಳೆಂದೊಸಗೆಯುಮಂ ಜಿನಾಭಿಷೇಕಪೂಜೆಯುಮಂ ಮಾಡಿ ಸಂತೋಷದಿಂದಿರ್ಪುದುಂ ॥ ೧೩೪

ಪಡೆದನೊಪ್ಪುವ ಪುತ್ರನಂ ಸುರರಾಜಸನ್ನಿಭನಂ ಮನಂ
ಬಿಡೆ ಮನೋಭವರೂಪನಂ ಪಡೆದಿಂದ್ರದತ್ತವಣಿಗ್ವರಂ
ತಡೆಯದೆಂಬುದನೆಯ್ದೆ ತೊಟ್ಟನೆ ಕೇಳ್ದು ವಿಸ್ಮಯಮಾದುದೆಂ
ದುಡಗದಾವಚನಕ್ಕೆ ನಾಡೆಯುಮಳ್ಕಿ ಬಳ್ಕಿ ನಿರಂತರಂ] [1] ॥ ೧೩೫

ಎನ್ನ ತಂಗೆಯಪ್ಪ ರಾಧೆಗೆ ಗರ್ಭಮಿಂದುವರಮಿಲ್ಲೆಂಬುದನಿಂಬಾಗಿ ಬಲ್ಲೆಂ ಭೋಂಕನೆ ಮಗನಂ ಪಡೆದಳೆಂಬ ಮಾತಾದುದು ಧನಶ್ರೀಯ ಮಗನಕ್ಕುಮೋ ವಿಪರೀತಮಿದನಾರ್ಯೆವೆನೆಂದು ಬೆಗಡುಗೊಂಡು ತಂಗೆಯ ಮನೆಗೆ ವಂದು [ಗುಣಪಾಲಸೆಟ್ಟಿಯೊಳಚ್ಚೊತ್ತಿದಂತಪ್ಪ ಶಿಶುವಂ ಕಂಡಱಿದು ಬೆರ್ಚಿ] [2] ಕಲ್ಲಂ ತಾಗಿದ ಮಿಾಂಟೆಯಂತೆ ಮುಟ್ಟ

1 ಬಿಟ್ಟು ಕೂಸಂ ಕಂಡು ತನ್ನ ಪೆಂಡತಿಯಪ್ಪ ರಾಧೆಗೆ ಕೊಟ್ಟು ಗೂಢಗರ್ಭದಿಂ ಗಂಡುಗೂಸಂ ಪೆತ್ತಳೆಂದು ತನ್ನ ಪುರಕ್ಕೆ ಪೋಗಿ ರಾಗದಿಂದಿರ್ಪುದುಮದಂ ಶ್ರೀದತ್ತಸೆಟ್ಟಿ ಕೇಳ್ದಿಂತು (ಗ)   2 ಕೂಸಂ ನೋಡಿ (ಗ)

ಗೆಟ್ಟು ಪೆಂಡಿರ ಪ್ರೊಲ್ಲಮೆಯುಂ ಕಂಡ ಗಂಡನಂತೆ ಮನಂಮುಱಿದು ಬೇಸ ಗೆಯೊಳುಪ್ಪಂ ತಿಂದನಂತೆ ಮಲ್ಮಲಂ ಮಱುಗಿ ಸತ್ತಂ ಕೊಲ್ವೆನೆಂಬ ಬಗೆಯಂ ತಂದುಪಾಯದಿಂ [ಶ್ರೀದತ್ತಸೆಟ್ಟಿ ಪುಸಿಗೂರ್ಮೆಯಿಂದಿಂದ್ರ ಸೆಟ್ಟಿಯನಿಂತೆಂದಂ ॥ ೧೩೬

ಅನುಜೆಗೆ ಪುತ್ರರಿಲ್ಲ ಸಿರಿಯುಂ ಧನಮುಂ ವ್ಯಥೆಯಾದುದೆಂದು ಮ
ನ್ಮನದೊಳಗಾಗಳುಂ ಮಱುಗುತಿರ್ದೆನಿಳಾವಳಯೈಕವಂದ್ಯನಂ
ತನಯನನೀಗಳರ್ತಿವೆರಸಾದರದಿಂ ನೆಱೆ ಕಂಡು ಸಂತಸಂ
ಮನದೊಳುದಾತ್ತಮಾದುದೆಲೆ ಪೋದುದು ಚಿಂತೆಯುಮೆನ್ನ ದುಃಖ
ಮುಂ॥ ೧೩೭

ಎಂದು ಚಾಟುಕಾರವಚನಂಗಳಿಂ ನಂಬೆ ನುಡಿದು ತಂಗೆಯ ಮೈದುನನ ಮೊಗಮಂ ನೋಡಿ ಮುನ್ನಪ್ಪೊಡಿನಿತುಕಾಲಮುಱಿಯುದ ನಲ್ಲಂ ರಾಧೆಗೆ ಗರ್ಭಮಿಲ್ಲೆಂಬುದಂ ಬಲ್ಲೆನಿದೆನಗಾಶ್ಚರ್ಯಮಾದ ಪುದಿದನೆನಗಱಿಪಂತಾಗೆ ಪೇಳೆಮೆನೆ ದಿಟಮಿಾತನೆನಗೆ ಕೂರ್ಪನೆಂದು ಕೂಸಿನ ವೃತ್ತಾಂತಮೆಲ್ಲಮಂ ಪೇಳೆ ರಾಧೆಯು ಮಾತಂ ಕೇಳ್ದು ಕೃತಕದಿಂ ರಾಗಿಸಿ ॥ ೧೩೮

ಬಸಗೆಯನಿಂಬಾಗಿರೆ ಸಂ
ತಸದಿಂ ಮಾಡಿಸೆನೆ ಗೆವುವುಗೇನೊಪ್ಪಿರೆ (?) ಕ ।
ಟ್ಟಿಸೆನೆ ಬಯಕೆಯುಮನೀಯೆನೆ
ಪೊಸತಾಗಿರೆ ನಂಟರಕ್ಕಱಿಂ ನೋಡುವಿನಂ ॥ ೧೩೯

ಬಡವರ ಮಕ್ಕಳಂತೆ ಹೀನೋತ್ಸಾಹಮಂ ಮಾಡದೆನ್ನ ತಂಗೆಯು ಮನೆನ್ನಳಿಯನುಮನೆನ್ನೂರಿಂಗೊಡಗೊಂಡು ಪಿರಿದಪ್ಪುತ್ಸಾಹಮಂ ಮಾಡವೇಳ್ಪುದೆಂದಿಂದ್ರದತ್ತಸೆಟ್ಟಿಯುಮನೊಡಂಬಡಿಸಿ ರಾಧೆಯು ಮಂ ಕೂಸುಮನನುಜ್ಞಯಿನಿಗೊಡಗೊಂಡು ಬಂದು ಕಪಟೋತ್ಸಾಹಮಂ ಮಾಡಿ ಕೆಲವುದಿವಸಂಬಱಿಕ್ಕೆ ನಿಷ್ಠುರನಪ್ಪೊರ್ವ ಮಾದೆಗಂಗೆ ಪಿರಿದ

ಸ್ಪರ್ಧೆಯಂ ಕೊಟ್ಟೊಡಂಬಡಿಸಿ ಕೂಸಂ ನಡಪುವ ದಾದಿಯನೊಡಂಬಡಿಸಿ ಕೂಸು ಸತ್ತಿತೆಂದು ಮಾಡಿ ಪೊರಗಣ್ಗೊಯ್ದು ಮಾದೆಗನ ಕೈಯೊಳ್ ಕೊಲ್ಲೆಂದು ಕೊಟ್ಟಟ್ಟಿ ರಾಧೆಯುಮಂ ತನ್ನ ಪೆಂಡತಿಯಪ್ಪ ವಿಶಾಖೆಯುಮಂ ತನ್ನ ಮಗನಪ್ಪ ಮಹಾಬಳನುಮಂ ನಂಬಿಸಲ್ವೇಡಿ ಮಾಯಾಪ್ರಳಾಪಮಂ ಪಣ್ಣಿ ॥ ೧೪೦

ಪಿರಿದಪ್ಪ ಸ್ಪರ್ಧೆವನೀವೆನೆನ್ನ ಮಗಳಂ ಕೂತಿ ಲವೆನಟ್ಟಿ ಕರ್ತುರ್ ಮಾಣ್ದಿರದುತ್ಸಾಹಮನೀಪುರಕ್ಕೆ ವಿಭವಂ ತಾನಾಗೆ ಮಾಟ್ಪೆಂ ನರೇಶ್ವರನಂ ಮಾಣಿಸಿ ಭೂಷಣಾವಳಿಗಳಂ ಚೆಲ್ವಾಗಿ ಮುಂದಿರ್ದು ಚೆಚ್ಚರದಿಂ ಮಾಡಿಸಿ ಕೂರ್ಮೆಯಿಂ ಕುಡುವೆನೆಂದಿರ್ದೆಂ ಮಹೋತ್ಸಾಹದಿಂ ॥ ೧೪೧

ಎನ್ನ ಪಡೆದೊಡವೊಗಂ ವೈ
ಶ್ಯೋಲನ್ನ ತನೆನಿಸಿರ್ದ ನಿನ್ನ ತಂದೆಯು ಪಡೆದಾ ।
ಪೊನ್ನಿಂಗೆ ನೀನೆ ಮುಖ್ಯನೆ
ನಿಕ್ಕಂ ನಿನ್ನಂತು ಭಾಗ್ಯಹೀನರುಮೊಳರೇ] [1] ॥ ೧೪೨

ಅನಿಮಿಷಸನ್ನಿಭನಂ ಚಂ
ದ್ರನನಿಳಿಸುವ ಸೌಮ್ಯರೂಪನಂ ಪಡೆದುಂ ನಂ ।
ದನನಂ ಪಡೆಯದ ತೆಱದಿಂ
ನಿನಗಾದುದು ದುಃಖಮಕ್ಕ ಪಾಪೋದಯದಿಂ ॥ ೧೪೩

ಕಂದರ್ಪನಿಭಂ ತಂಗೆಗೆ
ನಂದನನುದಯಾರ್ಕತೇಜನಾದಂ ಲೇಸಾ ।
ಯ್ತೆಂದಿರ್ದೆನೆನ್ನ ತನು ದ
ಳ್ಳೆಂದುರಿದಪುದೀಗಳೆತ್ತ ಪೋಪೆನೊ ಕಱುವೇ ॥ ೧೪೪

---

1 ತನ್ನ ತಂಗಿಯಪ್ಪ ರಾಧೆಯುಮಂ ಕೂಸುಮಂ ತನ್ನ ಮನೆಗೊಡಗೊಂಡು ಬಂದು ಕೆಲವುದಿವಸಮಿರಿಸಿ ಕೃತಕದಿಂ ಮುನ್ನೊರ್ವ ಮಾದೆಗನನೊಡಂಬಡಿಸಿ ಕೂಸು ಸತ್ತುದೆಂದು ಮಾಡಿ ಪೊಱಗೊಯ್ದು ಮಾತಂಗನ ಕಯ್ಯೊಳ್ ಕೊಲ್ಲೆಂದು ಕೊಟ್ಟಟ್ಟಿ ರಾಧೆಯುಮಂ ತನ್ನ ಪೆಂಡತಿಯಪ್ಪ ವಿಶಾಖೆಯುಮಂ ತನ್ನ ಮಗನಪ್ಪ ಮಹಾಬಳನುಮಂ ನಂಬಿಸಲ್ವೇಡಿ ಮಾಯಾಪ್ರಲಾಪಮಂ ಪಣ್ಣಿ (ಗ)

ಎಂದು ತಂಗೆಯನೇಱಲುಮಿೞಿಯಲುಂ ನೋಡಿ ಕೃತಕದಿಂ ಪ್ರಳಾಪಂಗೆಯ್ಯುತ್ತಿರ್ದನಿತ್ತಲ್ ಮಾದೆಗಂ ಕೂಸನಡವಿಗೊಯ್ದು ಗಂಟಲಂ ಮೆಟ್ಟಿ ಕೊಲ್ವೆನೆಂದು ಕೂಸಂ ಪೆಗಲಿಂ ನೆಲಕ್ಕಿೞಿಪುವುದುಮಿೞಿಯಲೊಲ್ಲದೆ ಮಾದೆಗನ ಪಱಿಗಡ್ಡಮನೆಡಗಯ್ಯೊಳ್ ಪಿಡಿದು ಬಲದ ಕಯ್ಯೊಳ್ ಮೊಗಮಂ ಪೊಯ್ಯುತ್ತುಂ ಕುಂಕುಮದುರುಳಿಯನನುಕರಿಸಿರ್ದ ಮಡಂಗಳಿಂದೆರ್ದೆಯನೊದೆಯುತ್ತುಮಿರೆ ದುರಾತ್ಮಂ ಶಿಶುವಿನ [ರೂಪುಮಂ ಗಾಡಿಯುಮಂ ವಿಳಾಸಮುಮಂ] ಮುದ್ದಾಟಮುಮಂ ನೋಡಿ ಕರುಣಮುಂ ಸ್ನೇಹಮುಂ ತಿಣ್ಣಮಾಗೆ ಕೊಲಲಾಱದೆ ತೊಱೆಯ ಪುಳಿನಸಳದೊಳ್ ಮಳಲ ಪಾಸಂ ಮಾಡಿ ಮೆಲ್ಲನಲ್ಲಿ ಪಟ್ಟಿರಿಸಿ ನಿನ್ನ ಮೆಚ್ಚಿದಂತಾಗೆಂದು ಪೋದನನ್ನೆಗಂ ॥ ೧೪೫

ತೊಱೆಯೊಳ್ ನೀರುಣಲೆಂದು ಬಂದು ತುಱುಗಳ್ ಪಟ್ಟಿರ್ದ ಪೂರ್ಣೇಂದುವಂ
ನೆಱೆ ಪೋಲ್ತುನ್ನತನಂ ಸುರೇಂದ್ರನಿಭನಂ ತದ್ಬಾಲನಂ ಕಂಡು ಮೂ
ಗಿಱಿಯುತ್ತುಂ ಕುಡಿವಾಲವೆತ್ತಿ ಕೆನೆಯುತ್ತಾನಂದದಿಂ ಸುತ್ತಿ ಮು
ತ್ತಿಱಿದತ್ತಿತ್ತಲವುಂಕಿ ಪೋಗದಿರೆ ಕಂಡೆಯ್ತಂದು ಗೋಪಾಲಕರ್ ॥೧೪೬

[ಇದೇನಾನೊಂದಾಶ್ಚರ್ಯಮಾಗಲೆವೇೞ್ಕುಮೆಂದು ಬಳಸಿರ್ದ ಜೀವಧನಂಗಳಂ ತೊಲಗಬಡಿದು ನೋೞ್ಪುದುಂ ॥ ೧೪೭

ಲೀಲೆಯೊಳ ಮಳಲ ಜಗಲಿಯ
ಮೇಲೆ ಸರೋಜಾತಸಖಗೆ ಮಿಗಿಲೆನಿಸುವ ಸ ।
ಲ್ಲೀಲೆಯ ತೇಜೋಧಿಕನಂ
ಬಾಲಕನಂ ನಲಿಯುತಿರ್ದನಂ ಕಂಡಾಗಳ್ ॥ ೧೪೮

ಈತಂ ಭಾವಿಸಿ ನೋೞ್ಪೊಡೆ
ಭೂತಳನಾಥಂಗೆ ಪುಟ್ಟಿದನ್ನಂ ಧರಣೀ ।
ಖ್ಯಾತಂ ಕೇವಲಮಲ್ಲಂ
ಪ್ರೀತಿಯಿನೀಶಿಶುವನೊಯ್ದು ಕರಮುತ್ಸವದಿಂ ॥ ೧೪೯

ನಮ್ಮಾಳ್ದಂಗೆ ಕುಡುವೆನೆಂದು ಗೋಪಾಲರಾಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ತುಱುಗಾಱಂಗೆ ಕುಡುವುದುಮಾತಂ ಕರಮೊಸೆದು ಗೋಪಾಲರ್ಗೆ ಮುಚ್ಚುಗೊಟ್ಟು ತನ್ನ ಪೆಂಡತಿಯಪ್ಪ ನಂದೆಯೆಂಬ ತುಱುಗಾತಿಯಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೂಸಗೆಯಂ ಮಾಡಿ ಕೂಸಿಂಗೆ ಧನಕೀರ್ತಿಯೆಂದು ಪೆಸರಿಟ್ಟು ಕೊಂಡಾಡಿ ನಡಪುತ್ತುಮಿರ್ಪುದುಂ ಶುಕ್ಲಪಕ್ಷದ ಚಂದ್ರನಂತೆ ಬಳೆದು] [1] ॥ ೧೫೦

ಧನಕೀರ್ತಿಕುಮಾರಂ ಕಾ
ಮನಿಭಂ ತುಱುಪಟ್ಟಿಗರಸನಾಗಿರ್ಪನೆಗಂ ।
ಮನವೊಲ್ದೊಂದುದಿನಂ ವೈ
ಶ್ಯನುತಂ ಶ್ರೀದತ್ತಸೆಟ್ಟಿ ಕರಮಾದರಡಿಂ ॥ ೧೫೧

ತನ್ನ ಮಗಳಪ್ಪ ಶ್ರೀಮತಿಯ ಮದುವೆಯಂ ಮಾೞ್ಪೆನೆಂದು ತುಪ್ಪಮಂ ಕೊಳಲೆಂದು ಪಲಂಬರ್ ಭೃತ್ಯರ್ವೆರಸು ತುಱುಪಟ್ಟಿಗೆವಂದು ಗೋಪಾಲಪರಿವೃಢನಾಗಿರ್ದ ಧನಕೀರ್ತಿಕುಮಾರನಂ ಕಂಡು ಗುಣಪಾಲಸೆಟ್ಟಿಯ ಮಗನಪ್ಪನೆಂದು ನಿಶ್ಚಯಿಸಿ [ಮನದೊಳ್ ಬೆಗಡುಗೊಂಡು ॥ ೧೫೨

ಪಿಂಗದೆ ನಾನಾಮಾದೀ
ಗಂಗೆ ಮಹಾನಿಷ್ಠುರಂಗೆ ಪಲನಂ ಪೊನ್ನಂ ।
ಭಂಗಿಯೊಳ್ ಕೊಟ್ಟು ಮತ್ತೊಂ
ದಂ ಗಡ ಬಗೆದಳಿಪದೊಯ್ದು ಬೇಗಂ ಶಿಶುವಂ ॥ ೧೫೩

ಕೊಲ್ಲೆಂದಟ್ಟಿದೊಡಾತಂ
ಕೊಲ್ಲದೆ ಕಡುಕಷ್ಟನಾಗಿ ತುಱುಗಾಱಂಗಿ ।

---

1 ಕಂಡು ತಮ್ಮಾಳ್ದನಪ್ಪ ಗೋವಿಂದನೆಂಬ ತುಱುಂಗಾಱಂಗಱಿಪುವುದುಮಾತಂ ಶಿಶುವಂ ಮನೆಗೊಯ್ದು ಧನಕೀರ್ತಿಯೆಂಬ ಪೆಸರನಿಟ್ಟು ನಡಪುವುದುಂ (ಗ)

ತ್ತಲ್ಲಿಯುಮರ್ಥವನೋವದೆ
ಮೆಲ್ಲನುಪಾರ್ಜಿಸಿದನಕ್ಕುಮತಿಲೋಭತೆಯಿಂ ॥ ೧೫೪

ಆದೊಡಮೇನಾಯ್ತು ಬೋಜಂಗನ ಕಷ್ಟತಿಕ್ಕೆಯಲ್ಲದೆ ಸೂಳೆ ಗಂಡರಿಲ್ಲದಿರಳೆಂಬಂತೆ ಮಾದೆಗನ ಕಷ್ಟತಿಕ್ಕೆಯುಕ್ಕುಮಲ್ಲದಾನೆಂತುಮಿವನಂ ಕೊಲ್ಲದೆ ಮಾಣೆನೆಂದು ತನ್ನೊಳ್ ಗುಜುಗುಜಿಸಿಕೊಂಡು ತುಱುಗಾಱನಂ ವಸ್ತ್ರತಾಂಬೂಲಭೋಜನಾದಿಗಳಿಂ ತನಗೆ ವಶಗತಂಮಾಡಿ ಕೆಳಗೊಂಡು ಪತ್ತೆಂಟುದಿವಸಮಲ್ಲಿರ್ದೊಂದು ದಿವಸಂ ಗೋವಿಂದನಂ ಬರಿಸಿ ತಾಂಬೂಲಮಂ ಕೊಟ್ಟು ಶ್ರೀದತ್ತನಿಂತೆಂದಂ ॥ ೧೫೫

ಪಿರಿದಪ್ಪವಸರಮಾದುದು
ಭರವಶದಿಂದೆನ್ನ ಪುತ್ರನಲ್ಲಿಗೆ ಬೇಗಂ ।
ಬರೆದೋಲೆಯನೀಗಳ ಚಿ
ಚ್ಚರದಿಂದಂ ಪೋಗಿ ಕುಡುವನಂ ತತ್ಕ್ಷಣದಿಂ ॥ ೧೫೬

ನೀಂ ಪೇೞ್ವುದೆಂಬುದುಂ ಗೋವಿಂದಂ ತನ್ನ ಮಾನಿಸರ ಮೊಗಮಂ ನೋಡಿ ಪೇೞಲೆಂದಿರ್ಪುದುಂ ಶ್ರೀದತ್ತನಿಂತೆಂದಂ ॥ ೧೫೭

ಮತ್ತಿನ ಬಂಟರೊಳಾಗದು
ಚಿತ್ತಜನಿಭನೆನಿಪ ನಿನ್ನ ಮಗನಂ ಸೌಂದ ।
ರ್ಯೋತ್ತಮನಂ ಧನಕೀರ್ತಿಯ
ನುತ್ತಮಗುಣಗಣನನಟ್ಟವೇೞ್ಪುದು ಬೇಗಂ ॥ ೧೫೮

ಎಂಬುದುಂ ಗೋವಿಂದಂ ಶ್ರೀದತ್ತಂ ಮುಂ ಕೂರ್ತು ಕೊಟ್ಟ ದ್ರವ್ಯಾದಿಗಳಂ ನೆನೆದು ಮಱುಮಾತನೀಯದೆ ತನೂಜನಂ ಪೋಗವೇೞ್ವುದುಂ ತತ್ಕ್ಷಣದಿಂ ॥ ೧೫೯

ಧನಕೀರ್ತಿಗೆ ಕೂರ್ಪಂತೊ
ಯ್ಯನೆ ಮಾಯಾಪುಂಜನಿತ್ತು ತಾಂಬೂಲಮುಮಂ ।

ಧನಮುಘುನಾತನ ಚಿತ್ತ
ಕ್ಕನುನಯಮುಮಪ್ಪಂತು ಮಾಡಿ ಕೃತಕದಿನಾಗಳ್ ॥ ೧೬೦

ತನ್ನ ಪಂಕ್ತಿಯೊಳುಣಲಿಕ್ಕಿಸಿ ಚಿತ್ತೋತ್ಸಾಹಮಂ ಮಾಡಿ ತನ್ನ ಪಾಸಿನ ಕೆಲದೊಳ್ ಮತ್ತೊಂದು ಪಾಸನಿಕ್ಕಿಸಿ ನೀನಿಲ್ಲಿ ಪಟ್ಟಿರೆಂದೇಕಾಂತಕ್ಕೆ ಪೋಗಿ ॥ ೧೬೧

ಎನಗೆ ಕೂರ್ಪೊಡೆ ಬೇಗದಿಂ ತಡವಿಲ್ಲದಿಂದೆ ಮಹಾಬಲಾ
ಮನೆಯ ಪಿತ್ತಿಲೊಳೀತನಂ ಪಿಡಿದೊಯ್ದು ಭೋಂಕನೆ ಕೊಂದು ನೆ
ಟ್ಟನೆ ಪೆಱರ್ಗನುರಾಗದಿಂದಮೆ ಪೇೞದೊರ್ವಯೆ ಗುಪ್ತದಿಂ
ಮನದೆಗೊಂಡುೞಿ ಪೂೞ್ವುದೆಂದು ಕಷಾಯದಿಂ ಬರೆದೋಲೆಯಂ ॥ ೧೬೨

ಮುದ್ರಿಸಿ ಬೞಗಪ್ಪ ಜಾವದೊಳ್ ಧನಕೀರ್ತಿಯ ಕೈಯೊಳ್ ಕೊಟ್ಟು ಪೋಗೆಂದಟ್ಟುವುದುಂ] [1] ಆತಂ ಪೊಱಮಟ್ಟು ಪವನವೇಗದಿಂದುಜ್ಜಯಿನಿಗೆ ಬಂದು ಪಥಶ್ರಾಂತನಾಗಿ ಬೞಲ್ದು ಸಿಂಪಾನದಿಯಂ ಪೊಕ್ಕು ಮೆಯ್ಯಂ ಕರ್ಚಿಕೊಂಡು ತೃಷೆ ಪೋಪಿನಂ ನೀರಂ ಕುಡಿದು ತನ್ನ ದೀತೀರದೊಳೊಪ್ಪುವ ಕೆಂದಳಿರ ಮಾವಿನ ಕೆೞಗೆ ಪಟ್ಟಿರ್ದನನ್ನೆಗಮಿತ್ತಲ್, ಮೃಗಸೇನೆಯೆಂಬ ಸೂಳೆ ಪೊತ್ತುವೋಗಿಂಗೆ ಕೆಳದಿಯರ್ವೆರಸು ಪೊೞಲಿಂ ಪೊಱಮಟ್ಟು ಸಿಂಪಾನದಿಯ ತಡಿವಿಡಿದು ಬರುತ್ತಂ ॥ ೧೬೩

ಕೆಂದಳಿರೋಳಿಯಿಂ ಮೆಱವ ತುಂಬಿಗಳಿಂ ನೆರೆದಿರ್ದ ಕೋಕಿಲಾ
ನಂದದಿನೊಪ್ಪಿ ಮನ್ಮಥಮಹೀಶ್ವರನೋಲಗಶಾಲೆಯಂತಿರಾ
ನಂದದಿನಿರ್ದ ಮಾಮರದ ಚೆಲ್ವು ಲತಾಂಗಿಯ ಕಣ್ಗೆ ಸೋಲಮಂ
ಕುಂದದೆ ಮಾಡೆ ಬಣ್ಣಿಸುತೆ ಮಾಮರನಲ್ಲಿಗೆ ಮೆಲ್ಲನರ್ತಿಯಿಂ ॥ ೧೬೪

---

[1] ಮತ್ತಂ ಕೊಲುವ ಕಜ್ಜಮನೆತ್ತಿಕೊಂಡು ಗೋವಿಂದಂ ತನಗೆ ಪಾನಿಗನಪ್ಪುದಱಿಂದಿವನನೊಂದು ಕಾರ್ಯಕ್ಕಟ್ಟದಪೆನೆಂದೊಡಂಬಡಿಸಿ ಮಹಾಬಳಂಗೀತನಂ ಬೇಗಂ ಕೊಲ್ವುದೆಂದೋಲೆಯಂ ಬರದು ಧನಕೀರ್ತಿಯ ಕಯ್ಯೊಳ್ ಕೊಟ್ಟಟ್ಟುವುದುಂ (ಗ)

ಮೃಗಸೇನೆ ಬಂದು ತಚ್ಚೂತಮಹೀಜಾತದ ಕೆಳಗೆ ಪಟ್ಟಿರ್ದ ಜಿನಸಮಯವಾರ್ಧಿವರ್ಧನಚಂದ್ರನಂ ಕಂಡು ಕಳೆದ ಧನಮಂ ಕಣ್ಣೞಿದುದೆಂಬ ಮಾತಂ ದಿಟಂಮಾಡಿ ॥ ೧೬೫

ತಂದೆಯುಮನೆ ಕಂಡ ತೆಱದಿಂ
ದಿಂದೀವರನಯನೆ ಮನದೊಳಕ್ಕರ್ತು ಮಹೀ ।
ವಂದಿತನಂ ಗುಣನಿಳಯನ
ನಂದಾಗಳ್ ನೋಡಿ ಪೊಗಲಾಱದೆ ಪದೆಪಿಂ ॥ ೧೬೬

ಸಾರೆ ಕುಳ್ಳಿರ್ದು ॥ ೧೬೭

ತಳಿರನಿೞಿಸುವ ಪಾದಮಂ ಬಾಳೆಯ ಕಂಬದಂತೊಪ್ಪುವ ನೀಳ್ದೊಡೆಗಳಂ
ಪೊಳೆವ ನಯನಮಂ ನಿಡಿದೋಳನುನ್ನತಿವೆತ್ತ ಲಲಾಟಮಂ ಬಾಯ್ದೆರೆಯಂ
ಕುಲಿಶಚಕ್ರಾದಿಲಕ್ಷಣಾಂಕಿತಮಪ್ಪ ಕೆಂದಳದೊಳೊಪ್ಪುವ ರೇಖೆಗಳಂ
ಜಲರುಹಾನನೆ ಮನವೊಲ್ತುನೋಡುತುಂ ಬಂಬಳಬಾಡುತುಂ ಸ್ನೇಹದಿಂದಂ ॥ ೧೬೮

ಅಂತಿರ್ದು ತೊಟ್ಟನೆಕೆಳ ಸೋಗಿಲೊಳಿರ್ದೋಲೆಯಂ ಕಂಡು ತಾಂ ಜಾಣೆಯುಂ ಸಕಲಶಾಸ್ತ್ರಪ್ರವೀಣೆಯುಮಪ್ಪುದಱಿಂ ಕಳೆದು ಕೊಂಡು ಮುದ್ರೆಯನೊಡೆದು ವಾಚಿಸಿ ನೋಡಿ ಚಿಂತಾಕ್ರಾಂತೆಯಾಗಿ ತನ್ನೊಳಿಂತೆಂದಳ್ ॥ ೧೬೯

ಮನಸಿಜರೂಪನಂ ಸುರಸಮಾನನನುನ್ನತಸೂರ್ಯತೇಜನಂ
ಮುನಿನುತನಂ [1] ಸಮಸ್ತಶುಭಲಕ್ಷಣಯುಕ್ತನನಿಂತು ಕೊಲ್ವೆನೆಂ
ಬಿನಿತನೊಡರ್ಚಿ ಕೊಲ್ವ ಬಗೆದಂದನೊ ತೊಟ್ಟನೆ [2] ಪಾಪಕರ್ಮನಂ
ದನುಪಮಚಿತ್ತೆ ನೊಂದು ಸುರಿದಳ್ ಬಸಮಲ್ಲದ ಕಣ್ಣನೀರ್ಗಳಂ ॥ ೧೭೦

1 ಮನುನಿಭನಂ (ಗ)   2 ಬಗೆದಂದಪನೇಕೆ (ಗ)

ಅಂತಾಮನದ ನೋವಿಂದಿರಲಾಱದೆ ಸ್ವೈರಣೆಗೆಟ್ಟು ಕಣ್ಣ ನೀರನಿಕ್ಕಿ ಕುಮಾರನ ಮೋಹದಿಂ ಶ್ರೀದತ್ತನಿಟ್ಟದೋಲೆಯುಂ ಸೀಳ್ದು ಸಿಂಪಾನದಿಯೊಳಿಕ್ಕಿ ಕಳದಿಯನಟ್ಟಿ ಮನೆಯಿಂದೋಲೆಯುಮಂ ಕಂಠ ಮುಮಂ ತರಿಸಿ ಮಹಾಬಲ ನನಗೆ ಕೂರ್ಪನಪ್ಪೊಡೆ ಈವೋಲೆಗಂಡಾ ಕ್ಷಣದೊಳ್ ಶೀಘ್ರಂ ತನ್ನ ತಂಗೆಯಪ್ಪ ಶ್ರೀಮತಿಯುನೀತನೊಳ್ ತಡೆಯು ದಿಂದೆ ನೆರೆಪುತ್ರದು, ನೆರಪದೊಡೆನ್ನಾಣೆ ಕಡೆಗಣಿಸವೇಡೆಂದು ಬರೆದು ಮುನ್ನಿನಂತೋಲೆಯುಂ ಮುದ್ರಿಸಿ ಧನಕೀರ್ತಿಯ ಸೋಗಿಲೊಳಿಕ್ಕಿ ತನ್ನ ಪಾಸಕ್ಕೆ ಪೋದಳನ್ನೆಗಮಿತ್ತಲ್ ಕುಮಾರನೆೞ್ಚತ್ತು ॥ ೧೭೧

ಪೊೞಲೊಳಗೆ ಬಂದು ವೈಶ್ಯನ
ನಿಳಯಮನಾರಯ್ದು ಪೊಕ್ಕು ವೈಶ್ಯಾತ್ಮಜನಂ ।
ಬಲಯುತನಂ ಕಂಡು ಮಹಾ
ಬಲನಂ ಮಾತಾಡಿ ಮುನ್ನ ಮುಖವಾರ್ತೆಗಳಂ ॥ ೧೭೨

ಶ್ರೀದತ್ತನಿಟ್ಟದೋಲೆಯು
ನಾದರದಿಂದೀಯೆ ಕಳೆದುಕೊಂಡಂತವನ ।
ತ್ಯಾದರದಿಂ ಪೊಡೆಮಟ್ಟು
ಶ್ರೀದಯಿತಂ ಬಿಟ್ಟು ನೋಡಿ ಸಂತಸದಿಂದಂ ॥ ೧೭೩

ಕರವೊಳ್ಳಿತೆಯ್ದನಯ್ಯಂ
ಸ್ಮರಸದೃಶನನಿವನನೆನ್ನ ತಂಗೆಗೆ ವರನಾ ।
ಗಿರೆ ಮಾಡಿ ಬಗೆವೊಡೀಕೆಗೆ
ವರನೀತನೆ ತಕ್ಕನುೞಿದವರ್ ತಗರಿಳೆಯೊಳ್ ॥ ೧೭೪

ಎಂದು ಪೆರ್ಚಿ ಮಹಾಬಲಂ ತನ್ನಯ್ಯಂಗತಿಭಕ್ತನಪ್ಪುದಱಿಂದಿ ದನೇಱಸಿರಲಾಗದೆಂದು ತಮ್ಮಬ್ಬೆಯಪ್ಪ ವಿಶಾಖೆಗಱಿಪಿ ಮೌಹೂರ್ತಿ ಕರು ಕರೆದು ಶ್ರೀಮತಿಯ ಮದುವೆಗೆ ದಿವಸಮಂ ಬೆಸಗೊಳ್ವುದುಂ ಅವರಿಂತೆಂದರ್ ॥ ೧೭೫

ಇಂದೀಮಗವಿನ ಮದುವೆಯು
ನೊಂದುಂ ಭಯಮಿಲ್ಲದುತ್ಸವಂಬೆರಸು ಧರಾ ।
ವಂದಿತ ಮಾಡಿದೆಯಪ್ಪೊಡೆ
ಮುಂದೀಯಾಣ್ಮಂ ಧರಾತಳಾಧಿಪನಕ್ಕುಂ ॥ ೧೩೬

ಈಲಗ್ನದೊಳ್ಮಹಾಬಲ
ಮೇಲೆನಿಸುವ ನಿನ್ನ ತಂಗೆಗುತ್ಸವದಿಂದಂ ।
ಲೀಲೆಯೊಳ್ ಮದುವೆಮಾಡಿದೊ
ಡಾಲಲನೆಯ ಗಂಡನಿಳೆಗೆ ವಲ್ಲಭನಕ್ಕುಂ ॥ ೧೩೭

[ಮತ್ತಮಿಂದಿನ ದಿನಶುದ್ಧಿಯುಮಂ ಲಗ್ನದ ಫಲಮುಮಂ ಪೇಳ್ದೊಡೀ ಕನ್ನೆಯುಮೀಕೆಯ ವಲ್ಲಭನುಂ ಜಿನಸಮಯವಜ್ರಪ್ರಾಕಾರರುಂ, ಮಾಳವದೇಶಾಧೀಶ್ವರರುಂ ಸದ್ಧರ್ಮರಾಗಿಗಳುಮಪ್ಪರೆಂದಾದೇಶಂಗೆಯ್ವುದುಂ] [1] ನೈಮಿತ್ತಿಕರ ಮಾತಂ ಮಹಾಬಲಂ ಕೇಳ್ದು ಸಂತೋಷಂಬಟ್ಟು [ಮೆಚ್ಚಿ ಮೆಚ್ಚುಗೊಟ್ಟು ಎಮ್ಮಯ್ಯಂ ದಿನವೊಳ್ಳಿತಪ್ಪ ಕಾರಣದಿಂದವಧಿಮಾಡಿ ವರನನಟ್ಟಿದ ಕಾರ್ಯಮನೇಱಿಸಲಾಗದೆಂದು] ॥ ೧೩೮

ಸರಸಿಜನೇತ್ರೆಯರ್ ನೆರೆದು ಮಂಗಳಮಂ ಮನವೊಲ್ದು ಪಾಡೆ ಭೋ
ರ್ಗರೆಯೆ ಸಮುದ್ರದಂತೆ ಪಱೆಗಳ್ ಪಲವುಂ ಪಸುರ್ವಂದರೊಪ್ಪೆ ಚಾ
ಮರಮನನಂಗಜಂಗಮಲತಾಂಗಿಯರಿಕ್ಕೆ ಮನೋನುರಾಗದಿಂ
ಪರಸಿ ಸಮಸ್ತಬಂಧುತತಿ ಸೇಸೆಯನಿಕ್ಕೆ ಮಹೋತ್ಸವಂಗಳಿಂ ॥ ೧೩೯

ಶ್ರೀಮತಿಗಂ ಧನಕೀರ್ತಿಗಂ ಪಾಣಿಗ್ರಹಣಂಮಾಡಿ ಸುಖಮಿರ್ಪುದುಂ ಶ್ರೀದತ್ತಸೆಟ್ಟಿ ಧನಕೀರ್ತಿಯನುಪಾಯದಿಂ ಮಗ್ಗಿಸಿದೆನೆಂದು ತನ್ನ ಬುದ್ಧಿಗಂ ಚಾತುರ್ಯಕ್ಕಂ ಮೆಚ್ಚಿ ತುಱುಪಟ್ಟಿಯೊಳೆರಡು ಮೂಱುದಿವಸಂಬರಮಿರ್ದು ತುಱುಪಟ್ಟಿಯಂ ಪೊಱಮಟ್ಟುಜ್ಜಯಿನಿಗೆ ವಂದು ತನ್ನ ಮನೆಯಂ ಪೊಕ್ಕು ತನ್ನ ಮಗಳ್ಗೆ ಮದುವೆಯಾದ ಧನಕೀರ್ತಿಯಂ ಕಂಡು ಬೆಱಗಾಗಿ ॥ ೧೪೦

1 ಎಂಬುದುಂ (ಗ)

[ಇಂತಲ್ಲದೆ ಕೊಲಬಾರದು
ಸಂತತಮಿಾಖಳನನೆಂದುಪಾಯದೊಳಾನೇ |
ಕಾಂತದೊಳ್ ಗೋಲೆಯನಟ್ಟಿದೊ
ಡಿಂತಾದುದು ಪುಣ್ಯಮುಳ್ಳವರ್ ಸತ್ಪರೇ || ೧೯೧

ಖಳಗಿಱಿಯಲೆಂದು ಪೊಕ್ಕು ತಾಂ ಮೊಗರಿಯಪಟ್ಟನೆಂಬಂತೆ ಕಳಲೆಂದು ಪೋದಾತನುಟ್ಟುದಂ ... ಮುನಿದಿಂತಲ್ಲದೆ ಸಾಯನೆಂದು ಬಗೆದಿಲ್ಲಿಗಟ್ಟಿದೊಡಂ ಸಾವು ತಪ್ಪಿ ತನೂಜೆಗೆ ಮದವಣಿಗನಾಗಿರ್ದನೆಂದು ಚಿಂತಿಸಿ ಪೊಲೆಯರೊಳಂ ಕೆಟ್ಟುದಂ ಕೇಳಯಂಗಮೆಱಿಪಲಾಗೆಂಬ ನಾಣ್ನುಡಿಯನವಧಾರಿಸಿ ತನ್ನ ಬಗೆಯನೊರ್ವಂಗಪ್ಪೊಡಮಱಿಪಲೊಲ್ಲದೆನ್ನ ಮುನಿಸಿಂತಲ್ಲದೆ ಪೋಗದೆಂದು ಶ್ರೀಮತಿ ರಂಡೆಯಾದೊಡಮಕ್ಕೆಂದು ಮತ್ತಂ ಧನಕೀರ್ತಿಯಂ ಕೊಲ್ವ ಕಜ್ಜಮನೆತ್ತಿಕೊಂಡು ಮತ್ತಂ|| ೧೯೨

ಕ್ರೂರನಪ್ಪನನೊರ್ವನಂ ಕ್ಷಣದಿಂ ತಳಾಱನ ನಂಟನಂ
ಬೀರನಂ ಕರೆದೊಯ್ದನಾತನ ಬೇಡಿದರ್ಥಮನಿತ್ತು ಸಂ
ಹಾರಿಸಿಂದುರಗಾಲಯಕ್ಕೆ ನಿವೇದ್ಯಮಂ ಶುಚಿಯಾಗಿ ವಿ
ಸ್ತಾರದಿಂದಿರುಳಣ್ಣ ತಂದಪನಂ ವಿಚಾರಿಸದಾಕ್ಷಣಂ || ೧೯೩

ಎಂದು ಸಮಕಟ್ಟಿ ನಾಗಾಲಯದೊಳಾತನನಿರಿಸಿ ಬಂದು ಮನೆಯವರನಱಿಯಲೀಯದೆ ಅಳಿಯನಪ್ಪ ಧನಕೀರ್ತಿಯಂ ಬೇರೆ ಕರೆದು ನಿನಗಂ ಶ್ರೀಮತಿಗಂ ವಿಘ್ನಮಿಲ್ಲದೆ ವಿವಾಹಮಾಗೆ ನಾಗೇಂದ್ರಂಗೆ ನಿನ್ನಿಂದಮೆ ಚರುವನಿತ್ತಿಸುವೆನೆಂದು ಪರಸಿದೆನದಂ ಪುಸಿಮಾಡಲಾಗದು ಭಯಮಿಲ್ಲದೀನಾಗಾಲಯದ ಧರಣೀಂದ್ರಂಗೆ ತೋಱಿ ಪೊಡೆಮಟ್ಟು ಬಾಯೆಂದು ಬೇರೊಂದು ಮನೆಯೊಳಿರಿಸಿದ ಚರುಗಮಂ ಕುಡುವುದುಂ] [1] || ೧೯೪

[1] ಮಯ್ದು ಧನಕೀರ್ತಿಯನೇಕಾಂತಕ್ಕುಯ್ದು ನೀನೀಚರುವಂ ನಾಗಾಲಯಕ್ಕುಯ್ದು ನಾಗೇಂದ್ರಂಗೆ ತೋಱಿಬಾಯೆಂದಟ್ಟೆ ಪಱಿಗೊರ್ವ ಕ್ರೂರನಂ ಕೊಲ್ವುದೆಂದಟ್ಟುವುದುಂ ಅವಂ ಮುನ್ನಮೆ ಪೋಗಿರ್ದನನ್ನೆಗಂ ಚರುವನೊಯ್ವಾತನಂ ಮಹಾಬಳಸಿದಿರೊಳ್ ಕಂಡು ಎಲ್ಲಿಗೆ ಪೋದಪೆಯೆಂದು ಬೆಸಗೊಳ್ವುದುಂ ಧನಕೀರ್ತಿಯಿಂತೆಂದಂ (ಗ)

ಉರಗಾಲಯಕ್ಕೆ ನೀನೀ
ಚರುವಂ ಕೊಂಡೊಯ್ದು ನಾಗರಾಜಂಗತ್ಯಾ ।
ದರದಿಂ ತೋಱಿ ಬೞಿಕ್ಕಾ
ದರದಿಂ ಪೊಱಮಟ್ಟು ಬರ್ಪುದೆಂದಿರದೆನ್ನಂ ॥ ೧೮೫

ಎಂದು ಮಾವಂ ಬೆಸಸಿದೊಡೆ ಪೋದಪೆನೆಂಬುದುಂ ಮಹಾಬಲಂ ತಮ್ಮಯ್ಯಂಗೆ ಮುನಿದು ॥ ೧೮೬

[ಮರುಳೀಮದವಣಿಗನನಾ
ದರಿಸದೆ ದೇಸಿಗನನಟ್ಟುವಂತಿರೆ ಮತ್ತೊ ।
ರ್ವರನಟ್ಟಿದಿವನ ಕಯ್ಯೊಳ್
ಚರುವಂ ಕೊಟ್ಟಟ್ಟೆ ಪೊಲ್ಲಗೆಯ್ದಂ ಮೂರ್ಖಂ ॥ ೧೮೭

ಎಂದು ತಮ್ಮಯ್ಯನ ಕಪಟವೃತ್ತಿಯನಱಿಯದೆ ಬಯ್ದು] ಮೈದುನನ ಕಯ್ಯ ಚರುವಂ ಕಳೆದುಕೊಂಡು ಧನಕೀರ್ತಿಯುಂ ಮನೆಗೆ ಪೋಗೆಂದಟ್ಟೆ ನಾಗಾಲಯಕ್ಕೆ ಮಹಾಬಲನೊರ್ವನೆ ಬಂದು ಭಯಮಿಲ್ಲದೆ ಪುಗುವುದುಂ ॥ ೧೮೮

ಅವರಿವರೆಂದು ಭಾವಿಸದೆ ನೋಡದೆ ಘೋಂಕನೆ ಬಾಗಿಲಲ್ಲಿ ನಿಂ
ದವನಮದೊರ್ತ್ತಿ ಸಾರ್ಚಿ ತಲೆಯಂ ಪಿಡಿದೊತ್ತಿ ಧರಿತ್ರಿಗಿಕ್ಕಿ ಮ
ತ್ತವಯವದಿಂ ಕಱುತ್ತಿಱಿದು ಕೊಂದು ಮಹಾಬಲನಂ ತಳಾಱನಂ
ತವಿತಥಮಪ್ಪ ಪನ್ನಗನಿವಾಸದಿನೋಡಿದನಂಜಿ ನಿರ್ದಯಂ ॥ ೧೮೯

ಅಂತು ಮಹಾಬಲಂ ಪರಲೋಕಪ್ರಾಪ್ತನಪ್ಪುದುಮತ್ತಲ್ ಧನಕೀರ್ತಿಯುಂ ಶ್ರೀದತ್ತಸೆಟ್ಟಿ ಮನೆಯೊಳ್ ಕಂಡು ವಿಸ್ಮಯಂಬಟ್ಟು ಸಾರೆವಂದು ಚರುವನೇಗೆಯ್ದೆಯೆಂದು ಬೆಸಗೊಳ್ವುದುಂ ಧನಕೀರ್ತಿಯಿಂತೆಂದಂ ॥ ೧೯೦

ಎಮ್ಮ ಭಾವನುದಾರಗುಣಂ ನಾಗಾಲಯದಲ್ಲಿಗೆ ಭಕ್ತಿಯಿಂ
ನಿಮ್ಮ ಪೇಳ್ಕೆಯಿನುತ್ಸವದಿಂ ಪೋಪೆನ್ನನಿದೆಲ್ಲಿಗೆ ಪೋದಪೈ
ಕೆಮ್ಮನೆಂಬುದುಮಾಂ ಭಯದಿಂ ನೀಮೆಂದುದನೆಂದೊಡೆ ಕೋಪದಿಂ
ನಿಮ್ಮನೋವದೆ ಬಯ್ದು ಮಗುಳ್ಚೀನೆಂದು ಮಗುಳ್ದ ನಿವೇದ್ಯಮುಂ ॥ ೧೯೧

[ಎನ್ನ ಕಯ್ಯ ಚರುವಂ ಕಳೆದುಕೊಂಡು ನಾಗಾಲಯಕ್ಕೆ ಪೋದನೆಂಬುದುಂ] [1] ಪಾಬ್ವಿಸಿಲೊಳ್ ಸಾಸವೆಯುಂ ಕುಡಿದರಂತೆ ಮಱುಗಿ ಸುಂಟಿತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡು ಮಿಡುಕಿ ನಾಗಭವನಕ್ಕೋರ್ವನೆ [ಪರಿತಂದು ಕಡಿಖಂಡಮಾಗೆ ಪೊಯ್ಸಿ ಕೊಂಡು ಸತ್ತಿರ್ದ ಮಗನ ಪೆಣನಂ ಕಂಡು ಮಹಾದುಃಖಿತನಾಗಿ ಮನೆಗೆ ವೆಂದು ನಗರಜನಕ್ಕಂ ಕಳ್ಳರೆನ್ನ ಮಗನಂ ಕೊಂದರೆಂದು ಕೃತಕದಿಂ ಸಾವಂ ಪ್ರಕಟಂಮಾಡಿ ಪೆಣನಂ ಮನೆಗೆ ತಂದು ಮಱುದಿವಸಂ ಸಂಸ್ಕರಿಸಿ ನೀರಿೞಿದು ಲೌಕಿಕಕ್ರಿಯೆಯೆಲ್ಲಮಂ ನೆಱೆಯೆ ತೀರ್ಚಿ ॥ ೧೯೨

ಮಗನಂ ನೆನೆನೆನೆದಿರುಳುಂ
ಪಗಲುಂ ಪಂಬಲಿಸಿ ಮಱುಗಿ ಕಳ್ಳನ ತಾಯುಂ ।
ತಗಣಿತದುಃಖದಿನೊಳಗೊಳ
ಗೊಗೆದ ಮಹಾಶೋಕದಹನದಿಂ ಬೇಯುತ್ತುಂ ॥ ೧೯೩

ಈತನಂ ಕೊಲಲೆಂದತಿಧೂರ್ತರ್ಗಗ್ಗದ ನಿಷ್ಠುರರಪ್ಪವ
ಗೋರ್ತು ಮಾಣದೆ ಮೂರ್ಖನೆನಾನಂದರ್ಥಮನಿತ್ತೊಡವೆಲ್ಲರುಂ
ಪ್ರೀತಿಯಿಂ ಕೊಲಲೊಲ್ಲದೆ ಪೋಗರ್ ನಾನೆ ದರಿದ್ರನೆನಾದೆನು
ರ್ವೀತಳಸ್ತುತನಪ್ಪ ಮಗಂಗೆ ಕೇಡಿನಿತಾದುದು ಪಾಪದಿಂ ॥ ೧೯೪

ಪಣ್ಣಿಂಗಿಟ್ಟೊಡೆ ಕಾಯ್ ಬಿರ್ದುದೆಂಬ ನಾಣ್ಣುಡಿನುಡಿನವರ ಮಾತೆ ನಗಾದುದೆಂದು ಮೂಗಷ್ಕೆಯುತ್ತು] [2] ಧನಕೀರ್ತಿಯುಮೇಲೆ ತೀವ್ರಮಪ್ಪ ಮುನಿಸಾಗಿ ॥ ೧೯೫

ಎನ್ನ ಕಂದನುದಾರಗುಣಂ ಮತ್ತೀತನ ಕಾರಣದಿಂದೆ ಸ
ತ್ತೆನ್ನನಾಱಡಿಗೊಂಡನಿದಂ ನಾಂ ಚಿಂತಿಸಿ ಸಾಯದೆ ಬುದ್ಧಿಯಿಂ
ದೆನ್ನ ವೈರಿಯನೀತನನಾನಿಂದಿಲ್ಲಿಯೆ ಮೆಲ್ಲನೆ ಕೊಂದು ಕೇ
ಳೆನ್ನ ಚಿತ್ತತೊಳಾಗಬಿಲ ನೋವಂ ಚಲದಿಂದಮ ತೀರ್ಚುವೆಂ ॥ ೧೯೬

---

[1] ತಾನೊಯ್ದನೆಂಬುದುಂ (ಗ)

[2] ಪರಿದು ನೋಡಿ ಸತ್ತ ಮಗನಂ ಕಳ್ಳರ್ ಕೊಂದರೆಂದು ಸಂಸ್ಕರಿಸಿ (ಗ)

ಎಂದು ಮನದೊಳಾಲೋಚಿಸಿ ವಿಶಾಖೆಯುಂ ಕರೆದು ಏಕಾಂತದೊಳ್ ಧನಕೀರ್ತಿಯ ಪ್ರಪಂಚಮನೆಲ್ಲಮನಱಿಪಿ ನೀನೀತನಳಿಯನೆಂದು ಮೋಹಿಸದೆನಗೆ ಕೂರ್ಪುಡೆನ್ನ ಮಾತನಂತಿಂತೆನ್ನದುದಾಸೀನಂಮಾಡದೆನ್ನಮನದೞಲುಂ ಮಹಾಬಲನ ಪಗೆಯುಂ ಪೋಪಂತು ವಿಷಪ್ರಯೋಗದಿಂದೊರ್ವರುಮಱಿಯದಂತಿಂದುನಾಳಿನೊಳಗೆ ತಡೆಯದೆ ಕೊಲಲ್ವೇಳ್ಕೆಂದು ಕಯ್ಯುಂ ಮುಗಿದು ಪ್ರಾರ್ಥಿಸುವುದುಂ ॥ ೧೯೭

[ಸರಸಿಜಾಕ್ಷಿ ವಿಶಾಖೆ ಗಂಡನ ಮಾತನೇಳಿಸಲಾಗದೆಂ
ದುರಗರಾಜಸಮಾನಭೋಗಿಯನಿಂದು ಮೋಣದೆ ಕೊಲ್ವೆನಂ
ದಿರದೆ ದೊಡ್ಡಿದುಮಪ್ಪ ಲಡ್ಡುಗೆಯಲ್ಲಿ ತೀವ್ರದ ನಂಜನೋ
ಸರಿಸದಿಕ್ಕಿ ಮಗಳ್ಗೆ ನಿನ್ನ ವರಂಗೆ ನೀನನುರಾಗದಿಂ ॥ ೧೯೮

ತಡೆಯದಿಕ್ಕುವುದೆಂದು ಪೇೞ್ದು ವಿಶಾಖೆ ನೆರೆಮನೆಗೆ ಪೋಗಿ .ದೂರ್ತಿಂದಱಿಯದವಳಂತಿರ್ಪುದುಂ ಶ್ರೀಮತಿ ಧನಕೀರ್ತಿಯ ಕಾಲಂ ಕರ್ಚಿ ವಿನಯದಿಂದೊಳಗಣ್ಗೆ ಕರೆದು ಪ್ರಿಯದಿಂದೇಱಲಿಕ್ಕಿ ತಳಿಗೆಯಲಿಕ್ಕುವುದುಂ] [1] ಆ ಪ್ರಸ್ತಾವದೊಳ್ ॥ ೧೯೯

ಹಿಂಸಾವಿರಹಿತಸ್ಯ ನೀ
ನಿಂ ಸಲೆ ಬಾಪ್ ಪಾಪಕರ್ಮನೆಂ ಪೆಱರಱಿವಂ ।
ಹಿಂಸೆಯನೆ ಬಯಸಿ ಮಱುಗುವ
ನಾಂ [2] ಸತ್ತಪೆನೆಂದು ಪೂಣ್ದು ಬರ್ಪನ ತೆಱದಿಂ ॥ ೨೦೦

ಶ್ರೀದತ್ತಸೆಟ್ಟಿಯುಂ ಪಸಿದು ಬರ್ಪುದುಂ ಇದಿರಾಗಿ ಪರಿತಂದಾ ಶ್ರೀಮತಿ ಕಾಲಂ ಕರ್ಚಿ ಬೇಗಮೊಳಗಣ್ಗೆ ಕರೆದು ವಿಸ್ತರಮಪ್ಪ ವಿಷ್ಟರಮನಿಕ್ಕಿ ಪಿರಿಯಡ್ಡಣಿಗೆಯುಮಂ ಪರಿಯಣಮುಮನಿಟ್ಟು ॥ ೨೦೧

---

1 ಲಡ್ಡುಗೆಯೊಳ್ ವಿಷವನಿಕ್ಕಿ ನಿನ್ನ ಮದವನಿಗಗಿವನಿಕ್ಕೆಂದು ಶ್ರೀಮತಿಗೆ ಪೇೞ್ವುದುಂ (ಗ) 2 ಬಯಸಿ ಸಲೆ ಕುದಿದಾಂ (ಗ)

ದ್ದೊದುವಾಗಿ ನುಣ್ಪೆಸೆದು ಸಕ್ಕರೆಯೊಳ್ ಸಮನಪ್ಪ ಪೆಂಪಿನಾ
ಲಡ್ಡುಗೆಯುಂ ಮನೋಮುದದಿನನ್ನವರಂಗಳಿಪಿಂನೆ ಮುನ್ನವಾರಿ
ಬಡ್ಡಿಸಿದಂದು ನೋಡ ಪದೆದೀಗಳ ಡೊಂಬಿತಿ ಜೋಡೆ ಸೋಲದಿಂ
ಬಡ್ಡಿಸಿದಪ್ಪಳೆಂದು ನೆಱಿ ದೂರುವರೆನ್ನನವಜ್ಞೆಯಿಂ ಪೆಱರ್ ॥ ೨೦೨

ಎಂದು ಕಿಱಿಯುವಪ್ಪ ಲಡ್ಡುಗೆಗಳಂ ಧನಕೀರ್ತಿಗಿಕ್ಕಿ ವಿಷದೊಳ್ ಪುದಿದಿರ್ದ ದೊಡ್ಡಿದುವಪ್ಪ ಲಡ್ಡುಗೆಗಳಂ ತಂದೆಗೆ ಬಡಿಸುವುದುಮಿರ್ವರುಂ ರುಚಿಕರವಾದುದೆಂದು ಬಾಯ್ಸುವಿಗೆ ಸೋಲ್ತು ಮೆಲ್ವುದುಂ ಶ್ರೀದತ್ತಂ ವಿಷಮಾವರಿಸಿ ನಿಲಲಾಱದೆ ಕಣ್ಮರಿದು ನೆಲಕ್ಕೆ ಬಿರ್ದು ನಿಶ್ಶಕ್ತನಾಗಿ ಮೆಯ್ಯಱಿಯದೆ ಬೆಸುತು ॥ ೨೦೩

ಪೆಱರಱಿವಂ ಬಯಸುವರೀ
ತೆಱದಿಂ ಮತಿಗೆಟ್ಟು ಸಾವರೆಂದೆಲ್ಲರ್ಗಂ ।
ನೆಱಿ ಸಾಱಿ ತೋಱಿ ಬೇಗದಿ
ನಱಿಪುವವೋಲ್ ಯಮಪುರಕ್ಕೆ ಸಂದ ಕುಟಿಲಂ ॥ ೨೦೪

[ತಂದೆಯು ನೋವಂ ತೊಟ್ಟನೆ
ನಂದನೆ ಕಂಡಱ್ತು ಬೆರ್ಚಿ ಬಾಯ್ವಿಟ್ಟು ಮನಂ ।
ಗುಂದಿ ಪಿರಿದಪ್ಪ ತಲ್ಲಣ
ದಿಂದಂ ಮೆಯ್ಯಱಿಯದಯ್ಯನಂ ನೋಡುತ್ತುಂ ॥ ೨೦೫

ಇರೆ ಮದವಣಿಗಂ ಮಾವನ
ಮರಣಕ್ಕತಿದುಃಖಮಾಗೆ ಮನದೊಳ್ ಮಱುಗು ।
ತ್ತಿರೆ ಮನೆಯುವರೆಲ್ಲಂ ಭೋ
ರ್ಗರೆದಱುತುಂ ನೊಂದು ಬೆಂದು ಪಱಿವಿಸುತಿರ್ದರ್ ॥ ೨೦೬

ಅಂತವರ ಹಾಹಾಕ್ರಂದನಮಂ ನೆರೆಮನೆಯೊಳಿರ್ದ ವಿಶಾಖೆ ಕೇಳ್ದು ಧನಕೀರ್ತಿ ಸತ್ತನೆಂದು ಗಂಡನ ಸಾವನಱಿಯದೆ ರಾಗಿಸಿ ಶ್ರೀದತ್ತಸೆಟ್ಟಿಬೇಳಾಗಿತನ್ನರ್ಥಮಂ ಪಲವುಸೂಳ್ ಕ್ರೂರರಪ್ಪವರ್ಗೆ ಕೊಟ್ಟು

ಕೊಲಲಾಱನಂತಪ್ಪ ಧನಕೀರ್ತಿಯುಂ ಕಿವಿಗೇಳದಂತಱಿಯದಂತಪಯ ವದಿಂದೊರ್ಮೆಯೆ ಘಮ್ಮನೆ ಕೊಂದೆವೆಂದು ಪೆಟ್ಟುವೆರ್ಚೆ ಪೆಱರಂ ನಂಬಿ ಸಲ್ವೇಡಿ ಹಾಹಾಶೋಕಮಂ ಪಣ್ಣೆ ಕೇಳ್ದು ಕೆಟ್ಟೆನಱದೆನೆಂದು ಪುಯ್ಯಲಿ ಟ್ಟೞುತ್ತುಮಱಿಯದಂತೆ ಬಂದೊಳಗೆ ಪೊಕ್ಕು ಸತ್ತಿರ್ದ ಗಂಡನುಮಂ ಕೆಲದೊಳ್ ಕುಳ್ಳಿರ್ದಳಿಯನುಮಂ ಕಂಡು ॥ ೧೦೬

ಬೇಱಾಗಿ ತಳೋದರಿ ಮೆ
ಯ್ಯಱಿಯದೆ ನಿಲಲಾಱದೆೞ್ದು ಗೋಳಿಟ್ಟೞುತುಂ ।
ಮಱುಕದಿನಾಣ್ಮನ ಪೆಣನಂ
ಪೆಱೆಮುಖಿ ತಕ್ಕೈಸಿಕೊಂಡು ಕೆಟ್ಟೆನೆನುತ್ತುಂ] [1] ॥ ೧೦೭

ಆನೊಂದಂ ಬಗೆಯಲ್ ಬಿದಿ
ತಾನೊಂದಂ ಬಗೆದು ವಾರ್ಧಿಗರ್ದುದೆನ್ನಂ ।
ನೀನೞಿವೆಯೆಂದು ಮಾಡಿದೊ
ಡಾನಱಿದೆಂ ಮಗಳ್ ನಿನ್ನ ಪುಣ್ಯಂ ಕಿಱಿದೇಂ ॥ ೧೦೮

[ಕುಂದದೆ ಕಿಱಿಯಂದಿಂತೊ
ಟ್ಟೆಂದುವರಂ ನಿನ್ನ ನೞಿಪುಪಾಯಮನದಟಿಂ ।
ಸಂದಿಸಿ ಮಾಡಿದ ಫಲಮಂ
ಸಂದೆಯಮಿಲ್ಲಣ್ಣ ತಾನೆ ಕಂಡಂ ತುದಿಯೊಳ್] ॥ ೧೧೦

ಕೊಱೆಯಿಲ್ಲದ ಜಿನಧರ್ಮದ
ಫಲದಿಂ ನೀನುಗ್ರಮಪ್ಪ ಕಂಟಕಮಂ ಮುಂ ।
ಪಲವಂ ನೀಗಿದೆ ಹಿಂಸೆಯ
ಫಲದಿಂದೆನ್ನಾಣ್ಮನೆಯ್ದಿದಂ ಯಮಪುರಮಂ ॥ ೧೧೧

ಮುನಿವರರೆಂಬ ದಿವ್ಯವಚನಂ ಪುಸಿಯಪ್ಪುದೆ ಕಂದ ಮೊಳವಾ
ವಸಿಪತಿಯಾಗಿ ಜೈನಸಮಯಾಂಬುಧಿಗಗ್ಗದ ಚಂದ್ರನಾಗಿ ಮೇ

1 ಅಂತು ಸಾವುದುಂ ವಿಶಾಖೆ ಕಂಡು (ಗ)

ದಿನಿಪತಿವಂದ್ಯನಾಗಿ ಪರಮಾಂಡಳಿಕರ್ ಬೆಸಕೆಯ್ಯೆ ರಾಜ್ಯಗೋ
ಮಿನಿಧರನಪ್ಪ ನಿನ್ನನಘವಿಂಶ್ರಿತರಿನ್ನುಱುಯಲ್ಕೆ ಬರ್ಕುಮೇ ॥ ೧೦೨

ಎಂದಳಿಯನ ಮೊಗಮಂ ನೋಡಿ ಬಸಿಱುಂ ಬಡಿದುಕೊಂಡತ್ತು ॥ ೧೦೩

ನರಪತಿಪೂಜ್ಯನಪ್ಪ ಧನಕೀರ್ತಿಗೆ ಪೆಂಡತಿಯಾಗಿ ಪುಣ್ಯದಿಂ
ಧರಣಿಯನಾಳ್ದು ಬೞಿಕ್ ಬೆಸಕೆಯ್ಯೆ ವಿಳಾಸಿನಿಯರ್ ವಿಳಾಸದಿಂ
ಪರಮವಿಭೂತಿಯುಂ ಪಡೆಯಲಿರ್ದವಳಂ ಮುನಿದಕ್ಕ ನಿನ್ನನ
ಚ್ಚರಿಯೆನೆ ರಂಡೆಮಾಡುವಳಿಪಂ ಬಗೆವರ್ಗಱವಾಗದಿರ್ಕುಮೇ ॥ ೧೦೪

ಎಂದು ಮಗಳ ಮೊಗಮಂ ನೋಡಿ ಪಳಯಿಸಿ ತಲೆಯಂ ಪೊಯ್ದು ಕೊಂಡತ್ತು ನೆರೆದ ನಂಟರ ಬಳಸಿರ್ದ ಪೌರರ ಮೊಗಮಂ ನೋಡಿ ॥ ೧೦೫

ಇರುಳೊಳ್ ಚಂದ್ರನ ರಶ್ಮಿಯುಂ ಕಿಡಿಸಲೆಂದಿರ್ಪಾತನುಂ ಕೋಪದು
ಬ್ಬರದಿಂದಂ ಪಗಲೊಳ್ [1] ದಿವಾಕರನ ತೀವ್ರೋಷ್ಣಾಂಶುವಂ ಮಾಣಿಪೆಂ
ಭರದಿಂದೆಂಬನುಮುರ್ವಿಯೊಳ್ ನಿಖಿಲಪುಣ್ಯಾಂಭೋಧಿಯಪ್ಪಾತನಂ
ಪುರುಡಿಂದಂ ಕೊಲಲೆಂದು ಕಾಯ್ವ ನರನುಂ ಗಾಂಪಂ ಪೆಱರ್ ಗಾಂಪರೇ ॥

ಮರುಳಾಗಿ ಕೆಮ್ಮನೀತನ
ನುರಿಯುಂ ಕಾಣ್ಬಂತೆ ಕಂಡು ಱಿಕ್ಕಟಮುನಿಸಿಂ ।
ಹರಿಯಿಸುವೆನೆಂದು ಪಾಪದ
ಭರದಿಂ ನರಕಕ್ಕೆ ಜಗುಳ್ದನೆನ್ನಾತ್ಮೇಶಂ ॥ ೧೦೬

[ಪೆಱರಂ ನಂಬದೆ ನಂಬಿ ತನ್ನ ಸತಿಯಂ ಪೋಗುತ್ತುಮಿರ್ದೊಯ್ಯನ
ಱ್ಕುಱಿನೆನ್ನಾಣ್ಮನನಾಪ್ತನೆಂದು ಗುಣಪಾಲಂ ಗುಪ್ತದಿಂ ಬುದ್ಧಿವೇ
ಱ್ದುಱೆ ತಾಂ ಕೈಯೆಡೆಯೆಂದು ಪೇಱುರಿಸಿ ಪೋದಂತಪ್ಪುದಂ ಗಾವಿಲಂ
ಮಱೆದಂತಾತನ ಪುತ್ರನಂ ಕಿಡಿಪೆನೆಂಬಾತಂಗಿದೇಂ ಚೋದ್ಯಮೇ]॥ ೧೦೭

---

[1] ಭರದಿಂ ಪುಣ್ಣಿಮೆಯೊಳ್ ಶಶಾಂಕನೊದವಂ ಮಾಣ್ಪೆರ್ಪೆನೆಂಬಾತನುಂ
ಕರಮುಕ್ಕಿಂ ಪಗಲೊಳ್ (ಗ)

ಎಂದು ಕಪಟಮಿಲ್ಲದೆ ಮಾಯೆಯುಂ ಬಿಟ್ಟು ಶ್ರೀದತ್ತಂ ಮಾಡಿದ ಪೊಲ್ಲಮೆಯೆಲ್ಲಮನೊಂದುಗುಂದದೆಲ್ಲಮನೆಲ್ಲರ್ಗಮಱಿಪಿ [ಗುಣಪಾಲ ಸೆಟ್ಟಿಯ ಮಗನೆಂದಱಿಯೆ ಪೇೞ್ದು ಧನಕೀರ್ತಿಕುಮಾರನಂ ಮಾಳವಾಧೀಶ್ವರನಾಗಿ ಜಿನಧರ್ಮದೊಳ್ಜೆಯಿಂ ನಡೆದು ಪ್ರಾಣಿಗಳನೋವಿ ವಾತ್ಸಲ್ಯರತ್ನಾಕರನೆನಿಸಿ ಸುಖದಿಂ ರಾಜ್ಯಂಗೆಯ್ಯೆಂದು ಪರಸಿ ಮಗಳುಮಂ ದರ್ಶನಶುದ್ಧಿಯೊಳ್ ಶಚೀಮಹಾದೇವಿಯುಮಂ ಪತಿವ್ರತಾಗುಣದೊಳ್ ಪ್ರಭಾವತಿಯುಮಂ ಸೀತೆಯುಮಂ ದೃಢವ್ರತದೊಳ್ ಚೇಳನಿಯುಮಂ ಸದ್ದರ್ಶನಗುರುಭಕ್ತಿಗಳೊಳ್ ರುಕ್ಮಿಣೀಮಹಾದೇವಿಯುಮಂ ಸುಲೋಚನೆಯುಮಂ ಪೋಲ್ತು ಪಟ್ಟನರಸಿಯಾಗೆಂದು ಪರಸಿ] ಪಲರುಂ ಬೇಡ ವೇಡೆನೆ ಮನದಱಲಿಂದಿರಲಾಱದೆ ವಿಷಪೂರಿತಮಪ್ಪ ಲಡ್ಡುಗೆಗಳಂ ತಿಂದು ವಿಶಾಖೆಯುಂ ಸಾವುದುಂ ॥ ೨೧೯

ಪುರಜನಮುಂ ಬಾಂಧವರುಂ
ತರಳಾಕ್ಷಿಯ ವಚನದಿಂದಮಱಿದಾತನ ನಿ।
ಷ್ಕರುಣತೆಗೆ ನಾಡೆಯುಂ ಕೊ
ಕ್ಕರಿಸಿ ಮನಂನ್ನೊಂದು ಮಱುಗಿ ಚೋದ್ಯಂಬಟ್ಟರ್ ॥ ೨೨೦

ಜಿನಸಮಯದಾಗಮಂಗಳ
ನನುನಯದಿಂ ಕೇಳದೋದದಾನೊಳ್ದನೆಂ ।
ದನವರತಂ ಪೊಂಗಿರ್ಪಾ
ತನ ಮಾಡುವ ಧರ್ಮದಲ್ಲಿ ಪುರುಳಱಸುವುದೇ ॥ ೨೨೧

ಚರಿತಪುರಾಣಮಂ ಸಮಯದುನ್ನತಿಯುಂ ಭುವನತ್ರಯಂಗಳೊಂ
ದಿರವನಪೂರ್ವಮಪ್ಪ ಜಿನಧರ್ಮದ ಪೆಂಪಿನಗುರ್ವುವೆತ್ತ ದು
ರ್ಧರತಪಮಂ [1] ಚತುಸ್ಸಮಯದೋಜೆಯನೊಳ್ದನಾಗಿ ನಿಚ್ಚಲುಂ
ವರಮುನಿನಾಥರೊಳ್ ನೆಱ ವಿಚಾರಿಸಲೊಲ್ಲದನುಂ ಮನುಷ್ಯನೇ॥ ೨೨೨

---

ಅಗುರ್ವೆತ್ತ ಲೋಗರ ಮತಮುಂ (೧)

ಎಂದು ತಮ್ಮೊಳ್ ನುಡಿದು ಶ್ರೀದತ್ತಸೆಟ್ಟಿಯ ಮಾಡಿದ ಕಷ್ಟತೆಗೆ ಬೈದು ಜೈನಧರ್ಮಮನಱಿಯದ ಜಡಂ ಮಾಡದ ಪಾಪಮಿಲ್ಲೆಂದು ಪೇಸಿ ಶ್ರೀದತ್ತನ ವಿಶಾಖೆಯ ಪೆಣಂಗಳ್ಗಂ ದಹನಕ್ರಿಯೆಗಳಂ ಮಾಡಿ ಲೌಕಿಕಕ್ರಿಯೆಯೆಲ್ಲಮಂ ನೆಱೆಪುವುದುಂ ‖ ೧೨೩

[ಪಿರಿದಪ್ಪಾಪತ್ತಂ ಪರಿ
ಹರಿಸಿ ಮಹಾಪುಣ್ಯಮೂರ್ತಿ ಕೀರ್ತಿನಿಧಾನಂ ।
ಪರಮಾರ್ಥಂ ಬದುಕಿದನು
ರ್ವರೆಯೊಳಿದಾಶ್ಚರ್ಯಮೆಂದು ಕೈಮುಗಿದು ಜನಂ ‖ ೧೨೪

ಬಂದೆಕೊರಲೊಳ್ ಪೊಗೞುತ್ತುಮಿರೆ ‖ ೧೨೫

ನಿನ್ನಂತು ನೋಂತರಾರ್ ಧೈ
ರ್ಯೋನ್ನತ ನಿನ್ನಂತು ಪುಣ್ಯಮೂರ್ತಿಗಳಾರ್ ನಿ ।
ನ್ನನ್ನರ್ ಗುಣವಂತರದಾರ್
ನಿನ್ನಂತಾರ್ ಧರೆಗೆ ಕೀರ್ತಿಭಾಜನರಾದರ್ ‖ ೧೨೬

ನೀನುಂ ನಿಸ್ಮಯ್ಯನಂತೆ ವೈಶ್ಯಾಗ್ರಗಣ್ಯನುಂ ವಿಶೇಷಪುಣ್ಯನುಂ ಜಿನಸಮಯವಾರ್ಧಿವರ್ಧನನುಮಾಗಿ ಬಾೞೆಂದು ಪುರಜನಮುಂ ಬಂಧುವರ್ಗಮುಂ ನೆರೆದು ಪರಮಾಶೀರ್ವಚನಶತಸಹಸ್ರಂಗಳಿಂ ಪರಸಿ ನಾನಾಪ್ರಕಾರದಿಂ ಪೊಗೞ್ದು] ಶ್ರೀದತ್ತಸೆಟ್ಟಿಯ ಮನೆಗಮರ್ಥಕ್ಕಮೊಡೆಯನಾಗೆಂದಿರಿಸಿ ಪೋದರದಂ ವಿಶ್ವಂಧರಮಹಾರಾಜಂ ಕೇಳ್ದು ‖ ೧೨೭

[ಮಾಳವಪತಿಯಪ್ಪಂ ಗಡ
ಪಾಲಿಸುವಂ ಗಡ ಸಮಸ್ತಭೂಪಾಲಕರಂ ।
ಲೀಲೆಯೊಳ್ ವೀರದೊಳ್ ಬಾ
ಯ್ಕೇಳಿಸುವಂ ಗಡ ಸಮಸ್ತವಸುಧಾತಳಮಂ ‖ ೧೨೮

ಜಿನಸಮಯವರ್ಧನಂ ಗಡ
ಮನವರತಂ ಭವ್ಯಜನವಿನೋದಂ ಗಡ ಮಾ ।

ತನನಿಂದು ನೋೞ್ಪವೆಂದಿಂ
ತನುಪಮಗುಣನಿಳಯನಕ್ಕುಱಿಂ ನಲಿಯುತ್ತುಂ ॥ ೨೨೯

ಧನಕೀರ್ತಿಕುಮಾರನರಮನೆಗೆ ಮಹಾವಿಭೂತಿಯಿಂ ರಾಜಕುಮಾರಪರಿವೃತನಾಗಿ ಮಾಳವಾಧೀಶಂ ಬಂದು ವಾತ್ಸಲ್ಯರತ್ನಾಕರನಂ ನೋಡಿ ಮೆಚ್ಚಿ ॥ ೨೩೦

ಈತೇಜಮುಮೀರೂಪುಂ
ಮಾತೇನಿಂತಪ್ಪ ವಿನಯಮುಮಂ ಗುಣಮುಮಂ ವಿ ।
ಖ್ಯಾತಿಯುಮೀತನನಿನಿತುಂ
ಭೂತಳಪತಿಮಾೞ್ಪುದೆಂಬುದೊಂದಚ್ಚರಿಯೇ ॥ ೨೩೧

ಎಂದು ತನ್ನೊಳ್ ನುಡಿದು ಬೞಿಕ್ಕಮಾತನ ವೃತ್ತಾಂತಮೆಲ್ಲಮಂ ಕೇಳ್ದು ತಲೆಯಂ ತೂಗಿ ಗುಣಪಾಲಸೆಟ್ಟಿಯುಪ್ಪೊಡೆ ಪುಣ್ಯಮೂರ್ತಿಯುಂ ದೃಢವ್ರತನುಮಪ್ಪನಂತಪ್ಪ ಮಹಾಪುರುಷಂಗೆ ಪುಟ್ಟಿದನೆಂದೊಡೀತನುಂ ಕೇವಳನಲ್ಲನಾದೇಶಪುರುಷನಪ್ಪನೆಂದು ಧನಕೀರ್ತಿಯನರಮನೆಗೊಡಗೊಂಡು ಪೋಗಿ ವಿಶ್ವಾವತಿಕನ್ನೆಯುಮನರ್ಧರಾಜ್ಯಮುಮಂ ಕುಡಲೆಂದಿರ್ಪುದುಂ ॥ ೨೩೨

ಗುಣಪಾಲಸೆಟ್ಟಿ ವೈಶ್ಯ
ಗ್ರಣಿ ದೇವಮನೋನುರಾಗದಿಂದಿರ್ದಂ ಧಾ ।
ರಿಣಿಪೂಜ್ಯನಪ್ಪ ನರರ
ಗ್ರಣಿ ಕೌಶಾಂಬಿಪುರಿಯೊಳ್ ಮಹೋನ್ನತಿಯಿಂದಂ ॥ ೨೩೩

ಎಂದೊರ್ವಂ ಬಿನ್ನವಿಪುದು
ಮಂದಾಗಳ್ ಕೇಳ್ದು ಭೂಭುಜಂ ಮೆಚ್ಚಿ ಸದಾ ।
ನಂದಂ ಮೊಯ್ಯೋೞಿಯದೆ ಮುದ
ದಿಂದಂ ಮೆಯ್ವೋರ್ಜ ನಲಿದು ರಾಗಿಸಿ ನಯದಿಂ ॥ ೨೩೪

ಬಂದ ದೂತಂಗಂಗಚಿತ್ತಮಂ ಕೊಟ್ಟು ಮಱುದಿವಸಂ ಕೌಶಾಂಬಿಗೆ ಪೆರ್ಗಡೆಗಳನಟ್ಟಿ ಗುಣಪಾಲಸೆಟ್ಟಿಯುಂ ಬರಿಸಿ ಪುರದೊಳಷ್ಟಶೋಭೆಯುಂ ಮಾಡಿಸಿ ಸಕಳಸಾಮಂತಪರಿವೃತನಾಗಿ ಧನಕೀರ್ತಿಯುಮಂ ತಾನುಂ] [1] ಮಹಾವಿಭೂತಿಯಿಂದಿದಿರ್ಗೊಂಡು ಮನೆಯುಂ ಪುಗಿಸಿ ಮುನ್ನಿನ ಪದವಿಯುಂ ಕೊಟ್ಟು ॥ ೨೩೫

ನಿನ್ನರ್ಥಮುಮಂ ಮನೆಯುಮ
ನಿನ್ನೆವರಂ ಕಾದು ಮೋಹದಿಂ ರಕ್ಷಿಸಿದೆಂ ।
ನಿನ್ನರ್ಥಮುಮಂ ಮನೆಯುಮ
ನುನ್ನತ ಕೈಕೊಂಡು ಸುಖದೊಳಿರ್ ಸಂತಸದಿಂ ॥ ೨೩೬

[ನಿನ್ನಭಿಮಾನಮುಮಂ ವ್ರತ
ದುನ್ನತಿಯುಮನಱಿದು ಬೞಿಕೆ ಚೋದ್ಯಂಬಟ್ಟೆಂ ।
ನಿನ್ನಂ ತಪ್ಪಿಲ್ಲದೆ ಕಾ
ಣ್ಬನ್ನೆವರಂ ದಿವ್ಯಭೋಗಮಂ ತೊಱೆದಿರ್ದೆಂ] ॥ ೨೩೭

ಎನಗೆ ಸಖನಾಗಿಯುಂ ನಂ
ಟನಾಗಿಯುಂ ನೀನೆ ನಿನ್ನ ನಂಬಿರ್ದ ಜಿನೇ ।
ಶನ ಧರ್ಮದಂದಮಂ ಪೇ
ೞ್ದನುಪಮಜಿನಪಾದಸೇವೆಯಂ ಮಾಡೆನಗಂ ॥ ೨೩೮

ಎಂದು ತನ್ನ ಕೂರ್ಮೆಯುಂ ಸಭೆಗೆಲ್ಲಂ ತೋಱುವಂತೆ ನುಡಿದು ॥

ನಿನ್ನ ತನೂಭವಂಗೆ ಧನಕೀರ್ತಿಗೆ ಮಾಳವದೇಶದರ್ಧಮಂ
ಭಿನ್ನಸರೋಜವಕ್ತ್ರೆವೆರಸಿತ್ತಪೆನರ್ತಿಯೊಳಂತಿದಕ್ಕೆ ಮ
ತ್ತೆನ್ನದೆ ಸತ್ಯಶೌಚಸಿಧಿ ಮಾನವವಂದಿತ ಮರ್ತ್ಯರತ್ನ ವೈ
ಶ್ಯೋನ್ನತ ನೀನೊಡಂಬಡುವುದೆಂದು ಮಹೀಶ್ವರವಂದಿತಕ್ರಮಂ ॥ ೨೪೦

1 ಧನಕೀರ್ತಿಯುಂ ಬರಿಸಿ ವಿಶ್ವಾವತಿಯೆಂಬ ತನ್ನ ಮಗಳುಮನರ್ಧರಾಜ್ಯಮಂ ಕುಡಲೆಂದಿರ್ದನನ್ನೆಗಂ, ಚಾರರ್ವಂದು ಗುಣಪಾಲನಿರ್ದೆಡೆಯುನಱಿಪುವುದುಂ ಪೆರ್ಗಡೆಗಳನಟ್ಟಿಯುಂ ಬರಿಸಿ (ಗ)

ಕೈಮುಗಿದು ಬೇಡಿಕೊಂಡು ಮತ್ತಮಿಂತೆಂದಂ ॥ ೨೪೧

ಜಿನಪಾದಭಕ್ತನಲ್ಲಂ
ಜನೇಶನೆಂದೆನ್ನದೆಸೆಗೆ ಬೆಚ್ಚದೆ ಮುನ್ನಂ ।
ವಿನುತವ್ರತಮಂ ಕೊಟ್ಟೊ
ಯ್ಯನೆ ನಂಬಿ ಬಱಿಕ್ಕೆ ವೈಶ್ಯವಂಶಲಲಾಮಾ ॥ ೨೪೨

[ಧನಕೀರ್ತಿಗೆನ್ನ ಮಗಳಂ ಪ್ರಾಣವಲ್ಲಭೆಮಾಡೆಂದು ಮುನ್ನಾ ತನ ಮನವನಱಿವನಪ್ಪುದಱಿಂ ಗುಣಪಾಲಸೆಟ್ಟಿಯು ಮನದ ಸಂಶಯಮಂ ಪಿಂಗೆ ನುಡಿದೊಡಂಬಡಿಸಿ ರಾಜಭವನಕ್ಕೆ ಪೋಗಿ ಗುಣಪಾಲಸೆಟ್ಟಿಯು ದರ್ಶನಶುದ್ಧಿಯೊಳಾದ ದೃಢತೆಯುನಂದಿನ ದಿವಸಮೆಲ್ಲಂ ಪೊಗೞ್ದು ಮೞು ದಿವಸಂ ನೈಮಿತ್ತಿಕರಂ ಕರೆದು ಶುಭದಿನಮಂ ಬೆಸಗೊಂಡು][1] ॥ ೨೪೩

ಪಸೆ ಪಸುರ್ವಂದರೊಪ್ಪೆ ಗಣಿಕಾನಿಕರಂ ಮನವೊಲ್ದು ಪಾಡೆ ಸಂ
ತಸದಿನಮರ್ಕವೆತ್ತಿರೆ ವಿವಾಹಗೃಹಂ ವರರತ್ನದಿಂ ವಿರಾ
ಜಿಸೆ ಪಱೆಗಳ್ಪಯೋಧಿ ಮೊಱೆವಂತಿರೆ ತಮ್ಮೊಳಗುರ್ವುವೆತ್ತು ಘೂ
ರ್ಣಿಸೆ ಜಿನಪೂಜೆಯೊಪ್ಪೆ ಪೊಗೞುತ್ತಿರೆ ಸುತ್ತಲುಮಿರ್ದ ಬರ್ಪವರ್ ॥

ಧನಕೀರ್ತಿಕುಮಾರಂಗಂ
ತನೂಜೆಗಂ ಮನದೊಳೊಸೆದು ಪರಮೋತ್ಸವದಿಂ ।
ಜಿನಗಂಧೋದಕದಿಂದಂ
ಜನಾಧಿಪಂ ತಾನೆ ಬಂದು ಕೈನೀರೆಱೆದಂ ॥ ೨೪೪

[ಅಂತು ಕೈನೀರೆಱೆದು ವಿವಾಹಮಂ ಮಾಡಿ ಗುಣಪಾಲಸೆಟ್ಟಿ ಮೊದಲಾದ ಬಂಧುಸಮೂಹಕ್ಕಂ ರಾಜನಿಕುರಂಬಕ್ಕಮುಡಲುಂ ತುಡಲುಂ ಕೊಟ್ಟು ತದನಂತರಂ ಹಯವಾರಣಭಂಡಾರಗಳೊಳರ್ಧಮನಳಿಯಂಗೆ ಕೊಟ್ಟು ಕ್ಷೀರೋದಕನ್ಯಾಯದಿಂದೊಡಗೂಡಿ ರಾಜ್ಯಶ್ರೀಯನನುಭವಿಸುತ್ತುಂ ಪತ್ತೆಂಟುದಿವಸಮನುಭವಿಸುತ್ತಿರ್ಪನ್ನೆಗಂ][2] ॥ ೨೪೫

---

1 ಎಂದೊಡಂಬಡಿಸಿ (ಗ)

2 ಅಂತು ಮದುವೆಯುಂ ಮಾಡಿ ತನ್ನರ್ಧರಾಜ್ಯಮುಂ ಕೊಟ್ಟು ಮಹಾಮಹಿಮೆಯಿಂದಿರ್ಪುದುಂ (ಗ)

ನಿಮಗೆ ಸಮಾನಮಿಲ್ಲ ಧರಣೀತಳದೊಳ್ ತಡವೇಕೆ ಬೇಗಮೊ
ಪ್ಪುವ ಜಿನಮಾರ್ಗಮಂ ದುರಿತಹಾರಿಯನಕ್ಷಯಸೌಖ್ಯದಾಯಿಯಂ
ಪ್ರವರಗುಣಾಬ್ಧಿಯಂ ನೆಱೆ ವಿಚಾರಿಸಿ ಪೊರ್ದುವುದೆಂದು ಪೇೞಲೆಂ
ದವಿತತಮೋಕ್ಷಲಕ್ಷ್ಮಿ ಪದೆದಟ್ಟಿದ ದೂತನೆ ಬರ್ಪ ಮಾರ್ಗದಿಂ ॥ ೧೪೭

ಯಶೋಧರರೆಂಬರೊರ್ವರೇಕವಿಹಾರಿಗಳ್ ವಿಹಾರಿಸುತ್ತುಮುಜ್ಜ
ಯಿನಿಗೆ [ವಂದು ಪೊಱಮೊೞಲೊಳಿರ್ಪುದುಂ ಋಷಿನಿವೇದಕಂ ಕಂಡು
ಬಂದು ವಿಶ್ವಂಧರಮಹಾರಾಜಂಗೆ ಬಿನ್ನಪಂಗೆಯ್ವುದುಂ ಋಷಿನಿವೇದಕಂ
ಗಂಗಚಿತ್ತಮಂ ಕೊಟ್ಟಾನಂದಭೇರಿಯಂ ಪೊಯ್ಸಿ ಗುಣಪಾಲಸೆಟ್ಟಿ ಮೊದ
ಲಾದ ಶ್ರಾವಕರುಂ ಧನಕೀರ್ತಿಮೊದಲಾದ ಕುಮಾರಕರುಂ ವಿಶ್ವಾವತಿ
ಮೊದಲಾದ ನಂದನೆಯರುಂ ಧನಶ್ರೀಯುಂ ಶ್ರೀಮತಿಯುಂಮೊದಲಾದ
ಶ್ರಾವಕಿತಿಯರುಂ ಲಕ್ಷ್ಮೀಮತಿಮೊದಲಾದರಸಿಯರುಂ ಬೆರಸು ಅರ
ಸುವ ಬಳ್ಳಿ ಕಾಲೊಳ್ ತೊಡರ್ದುದೆಂಬಂತೆ ಸುವ್ರತಾರೂಢರಾಗಲೆಂ
ದಿರ್ದೆಮಗೆ ಮಹಾಪುರುಷರ್ ಭಾಗ್ಯದಿಂದಿದಿವ-ಂದರೆಂದು ವಿಶ್ವಂಧರ
ಮಹಾರಾಜಂ ॥ ೧೪೮

ರಾಗದಿನತಿಶಯದಿಂ ತಳು
ವಾಗದೆ ಪೊಱಮಟ್ಟು ಬಂದು ಪಿರಿದುತ್ಸವದಿಂ ।
ಯೋಗೀಂದ್ರವಂದ್ಯಪಾದನ
ನಾಗಳ್ ಬಲವಂದು ಮೂಱುಸೂೞಮನೀಶಂ ॥ ೧೪೯

ಪಲವರ್ಚನೆಯಿಂದರ್ಚಿಸಿ ತ್ರಿಕರಣಶುದ್ಧಿಯಿಂ ಬಂದಿಸಿ ಪ್ರೊಡೆ
ಮಟ್ಟು ಕುಳ್ಳಿರೆ ಗುಣಪಾಲಸೆಟ್ಟಿ ಸುಕವಿನಿಕರಪಿಕಮಾಕಂದಂಗಭಿ
ಮುಖನಾಗಿ ಕರಕಮಲಂಗಳಂ ಮುಗಿದು ವಿನಯದಿಂದಾಪ್ತಾಗಮಪದಾ
ರ್ಥಂಗಳಂ ಚಿತ್ತದ ಶಂಕೆ ಪೋಪಿನಂ ಕೇಳ್ದು, ಅರಸನುಂ ಧನಕೀರ್ತಿ
ಯುಂ ಮೊದಲಾದನೇಕರುಂ ಕೇಳ್ದು ನಂಬಿ ಪಂಚಾಣುವ್ರತಮಹಾವ್ರತ
ರತ್ನಂಗಳಂ ಧರಿಯಿಸಲೆಂದಿರ್ಪುದುಂ, ಗುಣಪಾಲಸೆಟ್ಟಿ ಧರ್ಮಶ್ರವಣಾ

ನಂತರಂ ಪರಮಾವಧಿಲೋಚನರಪ್ಪ ತಪೋನಿಧಿಗಳಂ] [1] ಧನಕೀರ್ತಿಗೆ ಶ್ರೀದತ್ತಸೆಟ್ಟಿ ಮಾಡಿದ್ದುದುಂ ಕಂಟಕಂಗಳುಂ ತಪ್ಪಿ ರಾಜ್ಯಮಾದುದಾವ ಭವದ ಪುಣ್ಯದ ಫಲಮೆಂದು ಬೆಸಗೊಳ್ವುದುಂ ॥ ೬೪೦

ಪರಮಾವಧಿಲೋಚನದಿಂ
ದುರಿತೇಂಧನದಹನನಱಿದು ಪೇೞ್ದಂ ಸಖೆ ಯ್ಕೋಂ ।
ಕರಿಸಿ [2] ಧನಕೀರ್ತಿಧರಣೀ
ಶ್ವರವೆಂದಿತಪಾದಯುಗನ ಮುನ್ನಿನ ಭವಮಂ ॥ ೬೪೧

[ಸುರರಾಜನ ಪುರವರದೊಳ್
ದೊರೆಯೆನಿಸಿ ನೆಗೞ್ತೆವೆತ್ತ ಪುರಮುಜ್ಜಯಿನೀ ।
ಪುರಮದರ ಕೆಲದೊಳಿರ್ಪುದು
ಸಿರಿಷ್ಟಮೆಂಬೂರ್ ಧರಿತ್ರಿಯೊಳ್ ಕಡುರಯ್ಯಂ] ॥ ೬೪೨

ಆ [ಶಿರಿಷ್ಟ] ಗ್ರಾಮದೊಳ್ ಮೃಗಸೇನನೆಂಬ ಮೀಂಬುಲಿಗನಿರ್ಪನಾತನ ಪೆಂಡತಿ ಘಂಟೆಯೆಂಬಳಾ [ಯಿರ್ವರುಂ ಪಲಕಾಲಂ ಪಾಪಾನುರಾಗದಿಂದಿರ್ದೊಂದು] [4] ದಿವಸಂ ಬಲೆಯಂ ಕೊಂಡು ಸಿಂಪಾನದಿಗೆ ಪೋಗುತ್ತುಮೆಡೆಯೊಳ್ ಯಶೋಧರರೆಂಬ ಋಷಿಯರ ಕೆಲದೊಳ್ ಧರ್ಮಮಂ ಕೇಳ್ವ ನೆರಪಿಯುಂ ಕಂಡು [ಪಾಪದುಪಶಮದಿಂದೇನಾನುಮೊಂದು ಚೋದ್ಯಮಾಗಲೆವೇೞ್ಕುಮೆಂದು ನೋಡಲರ್ತಿವೆರಸು ಶಾಂತರೂಪದಿಂದೆಯ್ದುವಂದು ಬಲೆಯನಿೞಿಪಿ ದೂರದೊಳ್ ಕುಳ್ಳಿರ್ದು] ತನ್ನೊಳಿಂತೆಂದಂ ॥ ೬೪೩

ಹಾರದ ಮುತ್ತಿನ್ನೈಸರದ ವಜ್ರದ ಕಂಕಣದೊಪ್ಪುವೆತ್ತ ಕೇ
ಯೂರದ ರತ್ನಕುಂಡಲದ ವಸ್ತ್ರದ ಮುದ್ರಿಕೆಯೊಂದು ಮಿಕ್ಕಲಂ

---

1 ಬರ್ಪುದುಂ ಅವರ ಬರವಂ ಋಷಿನಿವೇದಕನಿಂದಱಿದು ವಿಶ್ವಂಧರಮಹಾರಾಜಂ ಸಕಲಪರಿಜನಂವೆರಸು ಪೋಗಿ ವಂದಿಸಿ ಧರ್ಮಶ್ರವಣಾನಂತರಂ (ಗ)

2 ಸಖಿಜೇಂಕರಿಸೆ (ಬ.), ಸಖೆಜೆಂಕಱಿಸಿ (ಕ)

3 ಈ ಪುರದ ಕೇಲದೊಳ್ ಸಿರಸಿಗ್ರಾಮಮೆಂಬುದು (ಗ)

4 ತನೊಂದು (ಗ)

ಕಾರದ ಮಾರ್ಪುಪ್ಪ ಪುರುಷರ್ ನೆರೆದದ್ಭುತಮೆಲ್ತೊ ಕಟ್ಟಲುಂ
ಸೀರೆಯುಮಿಲ್ಲದೀಗುರುವನರ್ಚಿಸಿ ಕೈಮುಗಿದಂಜಿ ಸುತ್ತಲುಂ ॥ ೭೫೪

ಇರ್ದಪರೀತಂ ಪ್ರತ್ಯಕ್ಷದೇವನಾಗಲೆವೇಳ್ಕುಮೆಂದು ತಾನುಂ ಕಯ್ಯುಗಿದು ಧರ್ಮಮಂ ಕೇಳುತ್ತುಮಿರೆ ॥ ೭೫೫

ವರಮುನಿ ಮಧುರಸ್ವರದಿಂ
ಪರಮಾಗಮಮಂ ಸಮಸ್ತಭವ್ಯಜನಕ್ಕಾ ।
ದರದಿಂ ಪೇಟುತ್ತಿರೆ ನಿ
ಷ್ಕರುಣಿವ ನಲೆ ಜಾಲಗಾರನುಂ ಕೇಳುತ್ತುಂ ॥ ೭೫೬

ಇರ್ದನನ್ನೆಗಂ ಸಕಲಶ್ರಾವಕರುಂ ತಂತಮ್ಮ ಬಯಸುವ ವ್ರತಂಗಳಂ ಕಯ್ಕೊಂಡು ದರ್ಶನದೊಳಂ ದೃಢರಾಗಿ ಮುನಿವರಂಗೆ ಪೊಡೆಮಟ್ಟು ಪೋಪ್ಪುದುಂ ಮೃಗಸೇನನುಮೆರ್ದು ನಿಂದಿರ್ದು ಕಯ್ಯಂ ಮುಗಿದು ॥ ೭೫೭

ದೇವ ಮಹಾಪ್ರಸಾದ ಪರಮೇಶ್ವರ ನಿನ್ನನವಜ್ಞೆಗೆಯ್ದು ಸ
ದ್ಭಾವಮನೊಕ್ಕು ಬತ್ತಲಿಗನೆಂದೆಳಸಿರ್ದೆನನಂತಕಾಲಮುಂ
ಕೇವಲಮೆನ್ನ ಕರ್ಮವಶದಿಂ ನೆರೆದೀಪ್ರಜೆಗೆಲ್ಲಮರ್ತಿಯಿಂ
ಭಾವಿಸಿ ಬೇಡಿದಂತುಟನೆ ನೀನೊಸೆದೀವುದನೆಯ್ದೆ ಕಂಡು ಕೇಳ್ ॥ ೭೫೮

ದೇವನೆಂದಾನೀಗಳ್ ನಂಬಿದೆನೆನಗೊಂದು ವ್ರತಮಂ ದಯೆಗೆಯ್ವುದೆನೆ ಮುನೀಶ್ವರರಿಂತೆಂದರ್ ॥ ೭೫೯

ಕಳ್ಳಂ ಮಾಣೆನೆ ನಿಮ್ಮಡಿ
ಕಳ್ಳಲ್ಲದೊಡಿಂದೆ ಸಾವೆನೆನೆ ಮುನಿ ಮತ್ತಂ ।
ಪೊಲ್ಲದು ಕೊಲೆಯುಂ ಮಾಣೆನೆ
ಕೊಲ್ಲದೊಡಾನೆಂತು ಪೊರ್ಜುವೆನೆನ್ನಂಗನೆಯುಂ ॥ ೭೬೦

ಪುಸಿಯುಂ ಮಾಣೆನೆ ನಿಮ್ಮಡಿ
ಪುಸಿಯುಂ ಮಾಣಲ್ಕೆ ಬಾರದು ಧರೆಯೊಳ್ ।

ಪುಸಿ ಮುಖ್ಯಮೆಂಬುದಂ ಭಾ
ವಿಸಿ ಮುನಿಪಂ ಕಳಪನುಱುವುದೆಂಬುದುಮಾಗಳ್ ॥ ೨೬೧

ಕಳವೆಂಬುದು ಮುನಿಪತಿ ಮ
ತ್ಕುಲಕ್ಕೆ ಬಿಡಬಾರದದನೆ ಬಿಟ್ಟೊಡೆ ಬಾಟ್ವೆಂ ।
ದಳವಾವುದೊ ಪೇೞಿಂ ಭೂ [1]
ತಳದೊಳ್ ಮೀಂಗುಲಿಗನಪ್ಪಸಂಗದು ಮುಖ್ಯಂ ॥ ೨೬೨

ಎಂಬುದುಂ [ಪಂಚಾಣುವ್ರತಪೊಂದುಂ ಕೈಕೊಳ್ಳದೆನೆ ಮತ್ತೆ ನೀಂ ಬಲೆಯಂ ಬೀಸಿದಲ್ಲಿ ಮೊದಲ್ ಸಿಕ್ಕಿದೊಂದು ಮೀನಂ ಬಿಡುವುದೆನೆ, ಅಂತೆ ಗೆಯ್ವೆನೆಂದು] [2] ಬಲೆಯಂ ಕೊಂಡು ಸಿಂಪಾನದಿಯ ಪೆರ್ಮಡು ವಿಂಗೆ ಪೋಗಿ ಜಾಲಮಂ ಬೀಸುವುದುಂ ಪಿರಿದಪ್ಪ ಮೀನ್ ಬಂದೊಡೆ ಗುರುವಚನಮನುಲ್ಲಂಘಿಸಲಾಗದೆಂದು ಕುಱುಪಿಂಗೆ ನೇಣಂ ಕಟ್ಟಿ ಮಗುೞೆ ಮಡುವಿನೊಳ್ ಬಿಟ್ಟು ಸಿಂಪಾನದಿಯ ತಡಿವಿಡಿದರೆಗಾವುದಂ ತರಮಂ [ಪೋಗಿ ಬಲೆಯಂ ಬಿಡುವುದುಂ ಮುನ್ನಂ ಬಿಟ್ಟ ಮೀನೆ ಸಿಕ್ಕೆ ಕುಱುಪಂ ಕಂಡಱಿದು ॥ ೨೬೩

ಯತಿಪತಿವಂದ್ಯಂ ಕೊಟ್ಟ
ವ್ರತಮಂ ನೆನೆದಾಗಳಂತೆ ಬಿಟ್ಟಾ ಮೀನಂ ।
ದ್ಯುತಿವೆರಸು ತೊಱೆಯ ತಡಿವಿಡಿ
ದತಿಶಯದಿಂ ಪೋಗಿ ನೂಱುಮಾರಂತರಮಂ] [3] ॥ ೨೬೪

---

1 ಬಿಡದದನೆ ಬಿಟ್ಟೆನಪ್ಪೊಡೆ ಬಾಳ್ವೆಂ । ದಳಿಪಾವುದೊ ಪೇಳಿ ಮಹೀ (ಗ)

2 ಆತಪ್ಪೊಡೆ ನೀನಿಂದು ಮೊದಲಾಗಿ ಬಲೆಯೊಳ್ ಮುನ್ನಂ ಬಂದ ಮೀನಂ ಬಿಟ್ಟು ಕಳೆವುದೆಂಬುದುಮದಕ್ಕೊಡಂಬಟ್ಟು ಮಹಾಪ್ರಸಾದಂ ಕೈಕೊಂಡೆನೆಂ ಬಂದುಮವರಿಂತೆಂದರ್ :—

ಸಾವೆಡೆಯೊಳ್ ನೀನೊಲವಿಂ ಶ್ರಾವಕರಪ್ಪವರು ತಾಳ್ದ ಸುವ್ರತಚಯಮಂ ।
ಶ್ರೀವರಮುನಿಸಾಕ್ಷಿಯೊಳಾವಗಮೊಳಕೊಂಡೆನೆಂದು ನೆಱೆ ನೆನೆ ಮನದೊಳ್ ॥

ಎನುತ್ತಂ ಜೀವಮಂ ಬಿಡುವುದೆಂಬುದುಂ ಅಂತೆ ಗೆಯ್ವೆನೆಂದು (ಗ)

3 ಬಂದು (ಗ)

ಬಲೆಯುಂ ಬೀಸುವುದುಂ ಸಂ
ಚಲಮೆನಿಸದೆ ಮತ್ತಮಾಮಹಾಮತ್ಸ್ಯಮೆ ನಿ ।
ಶ ಲಮಾಗೆ ಬಂದೊಡಾಮಿಾಂ
ಗುಲಿಗಂ ಬೆಱಗಾಗಿ ನೆನೆದು ತನ್ನ ವ್ರತಮಂ ॥ ೨೬೫

ಮಗುಳೆ ತೊಱೆಯೊಳ್ ಬಿಟ್ಟು ಮತ್ತಮರೆಗಾವುದಂತರಂ ತೊಱೆಯ ತಡಿವಿಡಿದು ಪೋಗಿ ಬಲೆಯುಂ ಬೀಸುವುದುಂ, ಮುನ್ನಿನ ಮಿಾನೆ ಬರ್ಪುದುಂ ಮುನಿ ಕೊಟ್ಟ ವ್ರತಮಂ ॥ ೨೬೬

ಅವಧರಿಸಿ ಮಗುಳೆ ತೊಱೆಯೊಳ್
ವಿವೇಕದಿಂ ಬಿಟ್ಟು ತೊಱೆಯ ತಡಿವಿಡಿದು ಮಹೋ ।
ತ್ಸವದಿಂ ಮೃಗಸೇನಂ ಮಾ
ನವರತ್ನಂ ನೂಱುಮಾರಿನಂತರದೆಡೆಯೊಳ್ ॥ ೨೬೭

ಪೋಗಿ ಜಾಲಮಂ ಬೀಸುವುದುಂ ಮುನ್ನಿನ ಮಹಾಮತ್ಸ್ಯಮೆ ಬಲೆಯೊಳ್ ಬರೆ ವಿಸ್ಮಯಂಬಟ್ಟು ನಿಂದಿರ್ಪುದುಂ ॥ ೨೬೮

ಕೊಲೆಯೊಳ್ ಮತಿಯುಂ ಮಾಣದೆ
ನಿಲಿಸುವರೀಮಾರ್ಗದಿಂದೆ ನರಕಕ್ಕಿೞಿವರ್ ।
ಚಲದಿಂದಮೆಂದು ತೋರ್ಪವ್ರೊ
ಲಲಂಘ್ಯಗುಣನರ್ಕನಪರವಾರಿಧಿಗಿೞಿದಂ ॥ ೨೬೯

ಅಂತು ನೇಸಱ್ ಪಡುವುದುಂ ಬಱಿದೆ ಪೋಗಲಾಗದೆಂದು ಪುಳ್ಳಿಗಳಂ ಕೊಂಡು ಮನೆಗೆವರ್ಪುದುಂ ತಳ್ವಾದನೆಂದು ಕನಲುತ್ತುಮಿರ್ದ ಘಂಟೆ ಮಿಾನಿಲ್ಲದೆ ಬಱಿದೆ ಪುಳ್ಳಿಯುಂ ಕೊಂಡು ಬಂದ ಮೃಗಸೇನನಂ ಕಂಡು ಕಿನಿಸಿ ಪೊಱಗಣ್ಗೆ ನೂಂಕುವುದುಂ ಭಯಸ್ಥನಾಗಿ ಕಾಲಮೇಲೆ ಬಿರ್ದು ತನ್ನ ತಳ್ವಿದ ಕಾರಣಮೆಲ್ಲಮಂ ಪೇೞೆ ಕಣ್ಗಳಿಂ ಕಿಡಿಯುಂ ಕೆಂಡಮುಂ ಪಾಯೆ ॥ ೨೭೦

ಕೆಲನಂ ಪೊಯ್ಯೆ ತಗುಳ್ದು ಬಿರ್ದ ಮೊಲೆಗಳ್ ಪರ್ದಾಡುವಂತಿರ್ದು ಕೆಂ ದಲೆ ಕೋಪೋದ್ಭವದುಗ್ರದಿಂ ನಡುಗೆ ಸೀಳ್ದಂದಾಗಿ ನೀರ್ಪಾಯ್ವಿನಂ ಕೊಪೆಗಣ್ಕಿಳ್ಳಿಸೆ ದೊಡ್ಡ ಪೊಟ್ಟೆ ಕುಣಿಯಲ್ ಪೊಯ್ದಳ್ ಮಹಾಕೋಪಿ ಕಾ ವಲಿಯಂತಪ್ಪ ಕರಾಗ್ರದಿಂದೊದೆಯುತ್ತುಂ ಕರ್ಗಿರ್ದ ಪಾದಂಗಳಿಂ ॥

ಅಂತು ನುರ್ಗಾಗೆ ಬಡಿದು ನಿನಗೆ ವ್ರತಮನಿತ್ತ ಋಷಿಯರ ಮನೆಗೆ ಪೋಗೆಂದು ಪೊಱಮಡಿಸಿ ಪಡಿಯಂ ಕೀಱುವುದುಂ ಮೃಗಸೇನಂ ದುಃಖಿತನಾಗಿ ॥. ೧೩೨

[ಒಂದುದಿನಂ ವ್ಯವಸಾಯಂ
ಕುಂದಿದೊಡೀಕಾಂತೆ ಮುಳಿದು ಬಯ್ದು ಪಳದಱಿಂ ।
ಸೌಂದರಿಯುಂ ಸುತರುಂ ಬೇ
ಡೆಂದಱಿಪುವ ದಿವ್ಯಮುನಿಯ ವಚನಮನೀಗಳ್ ॥ ೧೩೩

ಅನ್ನವರ ಕಂಡು ಪಾಪದಿ
ನುನ್ನತಸದ್ಧರ್ಮರತ್ನಮಂ ಬಿಟ್ಟಳಿಪಿಂ ।
ದೆನ್ನ ಸತಿಯೆಂದು ನಂಬಿದೆ
ನಿನ್ನಱಿದೆಂ ಸತಿಯರಾಗದೆಂಬುದನೀಗಳ್] ॥ ೧೩೪

ಮುಳಿದೆನ್ನಂ ಕರುಣಿಸದ
ಗ್ಗಳಮಾಗಿರೆ ಬಡಿದ ಸತಿಯುಮಂ ಮನೆಯುಮನು ।
ಜ್ಜ್ವಲಮಾಗಿ ತೊಱೆದು ನೆಟ್ಟನೆ
ಮಲರಹಿತನನೆಯ್ದಿ ಕೇಳ ಬೆಳಗಾದಾಗಳ್ ॥ ೧೩೫

ಶ್ರಾವಕಕ್ರಮಮಂ ಕೊಳ್ವೆನೆಂದು ಚಿತ್ತದೊಳ್ ನೆನೆಯುತ್ತುಂ ಸಿದ್ರೆಗೆಯ್ವುದುಂ ನಡುವಿರುಳಪ್ಪಾಗಳ್ ಕಪ್ಪೆಯನಟ್ಟುತ್ತುಂ ಬಂದ ಪಾವು ಕಪ್ಪೆ ತಪ್ಪಿ ಮೃಗಸೇನನನುಂಗುಟಮಂ ಪಿಡಿವುದುಂ ವಿಷಮೇಱಿ ಕಂಠಗತಪ್ರಾಣನಾಗಿ ಸುವ್ರತದ ಫಲದಿಂ ನಿನಗೆ ಧನಕೀರ್ತಿಯಾಗಿ ಪುಟ್ಟಿದಂ ॥ ೧೩೬

ಭರವಸದಿಂದಾಮೀನಂ
ಗುರುವಚನಮನೊಳ್ಳಿತಾಗಿ ಮನದೊಳ್ ನೆನೆದಾ ।
ದರದಿಂದಮೆಯ್ದು ಸೂೞ್ವರ
ಭರದಿಂದಂ ಬಿಟ್ಟನಪ್ಪ ಕಾರಣದಿಂದಂ ॥ ೧೭೭

ಶ್ರೀದತ್ತಂ ಮಾಡಿದೈದುಂ ಕೊಲೆಯಂ ಪರಿಹರಿಸಿ ವಿಶ್ವಂಧರ ಮಹಾರಾಜನ ರಾಜ್ಯದರ್ಧಕ್ಕೆ ಮುಖ್ಯನಾದನಿಂತು ॥ ೧೭೮

ಮೃಗಸೇನನ ಪೆಣನಂ ತೊ
ಟ್ಟಗೆ ಸವಳದೆ ಘಂಟೆ ಕಂಡು ದುಃಖಿಸಿ ತಾನುಂ ।
ಮೃಗಸೇನನ ಸುವ್ರತಮಂ
ಮೃಗಾಕ್ಷಿ ಕೇಳ್ದಾನುಮೆಯ್ದೆ ತಾಳ್ದಿದೆನೆನುತುಂ ॥ ೧೭೯

ಗಂಡನೊಡನೆ ಸತ್ತು ತದ್ವ್ರತಮಂ ಕೈಕೊಂಡೆನೆಂದ ಫಲದಿಂ ಘಂಟೆಯುಂ ಶ್ರೀದತ್ತಸೆಟ್ಟಿಗೆ ಶ್ರೀಮತಿಯೆಂಬ ಮಗಳಾಗಿ ಮತ್ತಂ ಧನಕೀರ್ತಿಗೆ ವಲ್ಲಭೆಯಾದಳಾಮೀನುಮೀಪುರದೊಳ್ ಮೃಗಸೇನೆಯೆಂಬ ಸೂಳೆಯಾಗಿ [ಪೊತ್ತುಪೋಗಿಂಗೆ ಕೆಳದಿಯರ್ವೆರಸು ಸಿಂಪಾನದಿಯ ತಡಿವಿಡಿದು ಬರುತ್ತುಂ ಕೆಂದಳಿರ ಮಾವಿನ ಕೆಳಗೆ ಪಟ್ಟಿರ್ದ ಧನಕೀರ್ತಿಯಂ ಕಂಡು ತಂದೆಯಂ ಕಂಡಂತೆ ಸ್ನೇಹಿತೆಯಾಗಿ ಸಾರೆ ಕುಳ್ಳಿರ್ದು ರೂಪನಚ್ಚಿಕ್ಕಿತುರ್ ನೋಡುತ್ತುಂ ಸೋಗಿನೊಳಿರ್ದೋಲೆಯಂ ಕಂಡು ವಾಚಿಸಿ ನೋಡಿ ಮಱುಗಿ ತಲ್ಲೇಖಮಂ ಸೀಳ್ದಿಡಾಡಿ ಶ್ರೀಮತಿಯನೀವೋಲೆಗಾಣಲೊಡನೆ ಮಹಾಬಳನೀತಂಗೆ ಕುಡುವುದೆಂದು ಬರೆದು ಮಗುಳೆ ಮುದ್ರಿಸಿ ಮುನ್ನಿನಂತೆ ಸೋಗಿನೊಳಿಕ್ಕಿ ಪೋಪಳಪ್ಪುದಱಿಂ ಧನಕೀರ್ತಿಯ ಸಾವು ತಪ್ಪಿತೆಂದು ಮೂವರ ಭವಮುಮಂ ಪೇಳ್ದಂ॥ ೧೮೦

ಮುನಿಪತಿ ಪೇಳೆ ಕೇಳ್ದು ಗುಣಪಾಲವಣಿಗ್ವರನುಂ ಮಹೀಶನುಂ
ವನರುಹನೇತ್ರೆಯುಂ ಸಕಲಭೂಭುಜರುಂ ಧನಕೀರ್ತಿಭೂಮಿಪಾ

ಲನು ಮೃಗಸೇನೆಯುಂ ಮನದೊಳಚ್ಚರಿವಟ್ಟು ಜಿನೇಂದ್ರಧರ್ಮಮಂ
ಜನನುತಮಂ ಕರಂ ಪಡೆದು ನಂಬಿದವರ್ಗೆಡರುಂಟೆ ಲೋಕದೊಳ್] ||

ಕಿಱಿದಪ್ಪೀವ್ರತದಿಂದಮಾಮಹಿಮೆಯುಂ ಮತ್ತೀಮಹಾಧೈರ್ಯಮುಂ
ನೆಱೆದೀರಾಜ್ಯಮನೀಸುಖೋನ್ನತಿಯನೀಸದ್ರೂಪನೀತೇಜಮಂ
ತಱಿಸಂದೀಧನಕೀರ್ತಿ ಪೆತ್ತನೆನೆ ಪಂಚಾಣುವ್ರತಾನೀಕಮಂ
ನೆಱೆ ಕೈಕೊಂಡ ನರಂಗೆ ನಿರ್ವೃತಿಸುಖಂ ಕೈಸಾರ್ವುದೇನದ್ಭುತಂ ||

ಎಂದು ತಮ್ಮೊಳ್ ನುಡಿದು ದಂಟನೂಱುವಂಗೆ ಕೋಟಿಲ್ ದೊರೆಕೊಂಡುದೆಂಬಂತೆ ಕೋಣನನೇಱುವಂಗೆ ಮದಕರಿ ದೊರೆಕೊಂಡಂತೆ ಪುಲ್ಗುಡಿಸಿಲಿನೊಳಿರ್ಪಂಗೆ ಮಣಿಮಾಡಮಾದಂತೆ ನಾಯಕತನಂಗೆಯ್ವಂಗೆ ಚಕ್ರವರ್ತಿತ್ವಮಾದಂತೆ ಮುನ್ನಮೆ ಬ್ರತಮಂ ಕೊಳಲೆಂದಿರ್ದವರಹಿಂಸಾವ್ರತದ ಪ್ರತ್ಯಕ್ಷಫಲಮಂ ಕಂಡು ವಿಶ್ವಂಭರಮಹಾರಾಜನುಂ ಗುಣಪಾಲಸೆಟ್ಟಿಯುಂ ಲಕ್ಷ್ಮೀಮತಿಮಹಾದೇವಿಯುಂ ಧನಶ್ರೀಯುಂ ಜಿನದೀಕ್ಷೆಯಂ ಕೈಕೊಂಡರ್. ಧನಕೀರ್ತಿಕುಮಾರಂ ಮೊದಲಾಗೆ ಸಮಸ್ತರಾಜಕುಮಾರರುಂ ಶ್ರೀಮತಿ ಮೊದಲಾಗೆ ಪಲಂಬರರಸಿಯರುಂ ಸಕಲಪರಿಜನಮುಂ ನಿರ್ವಾಣಲಕ್ಷ್ಮಿಯ ತೊಡಪಿನೊಳ್ ಕೀಲಿಸಿರ್ದ ಪಂಚರತ್ನಮೆನಿಪ ಪಂಚಾಣುವ್ರತಂಗಳಂ ಕೈಕೊಂಡು ದರ್ಶನದೊಳ್ ದೃಢರಾಗಿ ಮುನಿರಾಜಹಂಸನಂ ಬಂದಿಸಿ ಪೊೞಲ್ಗೆ ವಂದು ಸಂತೋಷಂ ಬೆರಸಿರ್ದು || ೧೮೩

ಭರತನ ಸಗರನ ಮಘವನ
ಸುರಪನ ರಾಘವನ ವಜ್ರಜಂಘನ ಲಕ್ಷ್ಮೀ |
ಧರನ ದೊರೆ ಜೈನಧರ್ಮದೊ
ಳುರುಮುದದಿಂ ಮಿಕ್ಕರೆನಿಸಿ ವಸುಮತಿಯೆಲ್ಲಂ || ೧೮೪

---

1 ಪುಟ್ಟಿ ಧನಕೀರ್ತಿಗುಪಕಾರಂಗೆಯ್ದುಳ್ ಶ್ರೀದತ್ತಸೆಟ್ಟಿ ಕೊಲೆಯನೊಡರ್ಚಿದ ಪಾಪದ ಫಲದಿಂ ನರಕದೊಳ್ ಬಿರ್ದನೆಂದು ಮುನಿಪತಿ ಪೇಳೆ ಕೇಳ್ದು (ಗ)

ಕೈವಾರದಿಂ ಪೊಗೞೆ [ ಸನತ್ಕುಮಾರಚಕ್ರವರ್ತಿಯಂತೆ ತೇಜಸ್ವಿಯುಂ ಜಿನಧರ್ಮೋದ್ಧಾರಕನುಂ ಶ್ರೀಷೇಣಮಹಾರಾಜನಂತೆ ವೀರನುಂ ಅನ್ನದಾನವಿನೋದನುಂ ಪಂಚಮಚಕ್ರಧರನಂತೆ ಸದ್ಧರ್ಮನಿಶ್ಶಂಕನುಂ ಶ್ರುತವಿನೂತನುಂ ಅಭಯಕುಮಾರನಂತೆ ಕುಶಲನುಂ ಅಭಯದಾನಸಮೇತನುಂ ನಾಗಕುಮಾರನಂತೆ ಸುಭಗನುಂ ಜಿನಪೂಜಾನಂದನುಂ ಧನ್ಯಕುಮಾರನಂತೆ ಮುನಿಜನಾನಂದನುಂ ವಿನೀತನುಮಾಗಿ] ಧನಕೀರ್ತಿ ಮಹಾರಾಜಂ ಪಲಕಾಲಂ ರಾಜ್ಯಂಗೆಯ್ಯುತ್ತುಮಿರ್ದೊಂದುದಿವಸಂ ಕೆನ್ನೆಯ ನರೆಯಂ ಕಂಡು || ೧೪೫

ಎನ್ನಂತಪ್ಪತಿಮೂರ್ಖರಿಲ್ಲ ಜಗದೊಳ್ ಬೇಳಾಗಿ ನಿಷ್ಕಾರಣಂ
ಚೆನ್ನಂ ಸ್ತ್ರೀಯರ ಭೋಗಮಂ ಮಹಿಮೆಯುಂ ಶ್ರೀಯುಂ ಮಹೀಚಕ್ರಮಂ
ತನ್ನಂ ತಾನಱಿಯುತ್ತುಮಿರ್ಪ ತನುವಂ ನಂಬಿರ್ದು ಕೆಟ್ಟೆಂ ಜವಂ
ಗೆನ್ನಂ ತಿಂಗುರಿ ಮಾಡದೀಗಳ್ ಜಿನಶ್ರೀದೀಕ್ಷೆಯಂ ತಾಳ್ದುವೆಂ || ೧೪೬

ಉಡು ಕಣ್ಣಂ ಮುಚ್ಚಿದೆ
ನ್ನಡೆಯಂ ಕೇಳಾರುಮಱಿಯರೆಂಬೆಗ್ಗಿಂದಂ |
ಮಡಿವಂತೆ ಪಾಯ್ದು ಜಡರುಂ
ಕಿಡುವರ್ ಧನಗೇಹಮೆನ್ನದೆಂಬಳಿಪಿಂದಂ || ೧೪೭

[ ಉದಯಂಗೆಯ್ದಾದಿತ್ಯಂ
ಪದುಳಂ ನಡೆವಸ್ತಮಾನನಪ್ಪಂತೆವೊಲಂ |
ಮುದದಿಂ ನರರುಂ ಕ್ರಮದಿಂ
ವಿದಿತಂ ನೀಡಿಲ್ಲದೞಿದು ದುರ್ಗತಿಗಿೞಿವರ್ ] || ೧೪೮

ಮಾಗಿಯ ಕಾಲಂ ತೊಟ್ಟನೆ
ಬೇಗಂ ಹಿಮಮೆಯ್ದುವಂತೆ ಸಾವೆಯ್ದುವುದುಂ |
ನೀಗದ ದುಃಖಂ ಘಮ್ಮನ
ಲಾಗಳ ಬಂದಿರ್ಕುಮಲ್ಲಿ ಸಂದೆಯಮುಂಟೇ || ೧೪೯

ಊರಂ ಸಾರದೆ ಸಾರವಸ್ತುಚಯಮಂ ತಾಳ್ದಿಪ್ಪಿ ನಿರ್ಗ್ರಂಥದಿಂ
ದಾರಣ್ಯಂಗಳೊಳಿರ್ಪನುಂ ಕನಕಭಂಡಾರಕ್ಕೆ ಕಾಪಿಲ್ಲದು
ಗ್ರಾರಣ್ಯಂಗಳೊಳುಣ್ಮಿ ಪೊಣ್ಮಿ ಚಲದಿಂ ಪೋಪಾತನುಂ ಕಷ್ಟಸಂ
ಸಾರೋಗ್ರಾಹಿಗೆ ಬೆಚ್ಚಲೊಲ್ಲದವನುಂ ಕೇಡೆಯ್ದುವಂ ನಿಶ್ಚಯಂ॥೨೯॥

ಎಂದು ಸಂಸಾರಕ್ಕೆ ಪೇಸಿ ಸುಕೀರ್ತಿಯೆಂಬ ತನ್ನ ಪಿರಿಯ ಮಗಂಗೆ ಪಟ್ಟಮಂ ಕಟ್ಟಿ ರಾಜ್ಯಮಂ ತೊಱೆದು ಮುನ್ನಿನ ಯಶೋಧರಭಟ್ಟಾರಕರಲ್ಲಿ ಜಿನದೀಕ್ಷೆಯಂ ಕೈಕೊಂಡು ಸಕಲಶ್ರುತಪಾರಾವಾರ ಪಾರಗನಾಗಿ ಗುರುಗಳಾಜ್ಞೆಯಿಂದೇಕವಿಹಾರಮನೆತ್ತಿಕೊಂಡುಗ್ರೋಗ್ರಮಪ್ಪ ತಪದೊಳ್ ಪ್ರಾಯೋಪಗಮನದಿಂ ಸಂನ್ಯಸನವಿಧಿಯಿಂ ಮುಡಿಪಿ ಸರ್ವಾರ್ಥಸಿದ್ಧಿಯೊಳ್ ಮೂವತ್ತಮೂಱು ಸಾಗರೋಪಮ ಕಾಲಮಾಯುಷ್ಯಮನೆಡೆಯನುಮಹಮಿಂದ್ರನುಮಾಗಿ ಪುಟ್ಟಿದಂ ॥

ಸಿರಿಯಂ ಬಿಟ್ಟು ಸಮಸ್ತಭೂವಳಯಮಂ ಕೈಕೊಳ್ಳದೋರಂತೆ ಸೌಂ
ದರಹೇಮಾಂಗಿಯರೆಲ್ಲರಂ ತೊಱೆದು ಬಿಟ್ಟಾನಂದಮಂ ಭೋಗಮಂ
ಪರಮಶ್ರೀಋಷಿಪಿಂಗೆ ಸೋಲ್ತು ಜಿನಪಾದಾಂಭೋಜಮಂ ಪೊರ್ದಿ ಸ
ಚ್ಚರಿತಂ ಮತ್ತಪತಿ ಜೈನದೀಕ್ಷೆಗೊಡಲಂ ತಾನೊಡ್ಡಿದಂ ಧೈರ್ಯದಿಂ ॥

ಎನ್ನ ಸಂಪತ್ತೇನೆಂದು ಮಗನ ಮೋಹಮುಮಂ ರಾಜ್ಯದ ಕಾಂಕ್ಷೆಯುಮಂ ಬಿಸುಟು ಶ್ರೀಮತಿಯುಂ ವಿನಯಮತಿಯರೆಂಬ ಕಂತಿಯರಲ್ಲಿ ದೀಕ್ಷೆಯುಂ ಕೈಕೊಂಡು ನಿರ್ಮಾಯೆಯಾಗೆ ನೆಗಱ್ದು ಕಡೆಯೊಳ್ ಸಮಾಧಿವಿಧಿಯಿಂ ಮುಡಿಪಿ ದೇವಲೋಕದೊಳ್ ಪುಟ್ಟಿದಳ್. ವಿಶ್ವಂಧರಮುನಿ[ಕುಂಜರನುಂ ಗುಣಪಾಲಮುನಿಯುಂ ಲಕ್ಷ್ಮೀಮತಿಯುಂ ಧನಶ್ರೀಯುಂ ಮೃಗಸೇನೆಯುಂ ತಪದೊಳುತ್ತರೋತ್ತರಂ ನೆಗಱ್ದು] [1] ಸಮಾಧಿಮರಣದಿಂ ಮುಡಿಪಿ ದೇವಲೋಕದೊಳ್ ಪುಟ್ಟಿದರದುಕಾರಣದಿಂ॥

ಕೊಲೆಯಂ ಬಿಟ್ಟ ಮಹಾತ್ಮಂ
ಸುಲಲಿತಕೈವಲ್ಯಕಾಮಿನೀಶ್ವರನಕ್ಕುಂ ।

---

1 ಮೊದಲಾಗೆಲ್ಲರುಂ (ಗ)

ಪಲವುಂ ಮಾತಿನೊಳೇನೊ
ಳ್ಗಲಿಯಾಗಿ ಸಮಸ್ತಧಾತ್ರಿಯಂ ತಾನಾಳ್ಗುಂ ॥ ೨೯೪

ಕೊಲೆಯೊಳ್ ಕೂಡಿದ ಕಷ್ಟಂ
ತಲೆಕೆಳಗಾಗಿರ್ಕುಮುಗ್ರನರಕಾರ್ಣವದೊಳ್ ।
ಸಲೆ ತಿರಿಕಯೋನಿಯೊಳ್ ತಾಂ
ಸಲೆ ತಿರುಗುಗು [1] ಮಾವಕಾಲಮುಂ ಭವಭವದೊಳ್ ॥ ೨೯೫

ಎಂದಹಿಂಸಾವ್ರತದ ಪ್ರತ್ಯಕ್ಷಫಲಮುಮಂ ಹಿಂಸೆಯೊಳಾದ ಪೊಲ್ಲಮೆಯುಮಂ 'ಗಣಧರಸ್ವಾಮಿಗಳ್ ಪೇೞೆ ಕೇಳ್ದು ॥ ೨೯೬

ವರಭವ್ಯಾಂಭೋಜಸೂರ್ಯ್ಯಂ ನಿರುಪಮಗುಣನುದ್ಯತ್ತಪಂ ದೇವಧಾತ್ರೀ
ಧರಧೈರ್ಯ್ಯಂ ವಾಗ್ವಧೂವಲ್ಲಭನಘಕುಲವಿದ್ರಾವಣಂ ಸತ್ಯರತ್ನಾ
ಭರಣಂ ತ್ರೈವಿದ್ಯಚೂಡಾಮಣಿವಿಮಲಪದಾಂಭೋಜಭೃಂಗಂ ವಿನೇಯಾಂ
ಬರಚಂದ್ರಂ ತುಷ್ಟನಾದಂ [2] ಸುಕವಿಜನಮನಃಪದ್ಮಿನೀರಾಜಹಂಸಂ ॥

ಇದು ಸಿಖಿಲದಿವಿಜಪರನೃಪಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ಸಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುಂದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ಅಹಿಂಸಾವ್ರತವರ್ಣನಂ
ದಶಮಾಶ್ವಾಸಂ.

---

1 ಸಲೆ ತಿರುಗುಂ ಮತ್ತಂ ಮಲಮಲಮಱುಗುಗು (ಬ. ಕ.)

2 ಧರ್ಮರತ್ನಾಕರನುರ್ವೀಪೂಜ್ಯನಂಗೋದ್ಭವಮದಗಜಸಂಹಾರತ್ರೈವಿದ್ಯಚಕ್ರೇಶ್ವರಪಾದಾಂಭೋಜಭೃಂಗಂ (ಬ. ಕ )

# ಏ ಕಾ ದ ಶಾ ಶ್ವಾ ಸಂ

ಶ್ರೀಮದಹಿಂಸಾವ್ರತಮಿದು
ಸಾಮಾನ್ಯಮೆ ಸಕಲಸುಖಮನೀವಗ್ಗದ ಚಿಂ ।
ತಾಮಣಿಯೆಂದೊಸೆದಂ ಧರ
ಣೀಮಹಿತಂ ಸುಕವಿನಿಕರಪಿಕಮಾಕಂದಂ ॥ ೧

[ಅಂತಹಿಂಸಾವ್ರತದ ಕಥೆಯಂ ಕೇಳ್ದು ಮನದ ಪೆರ್ಚಿಂ ಮಗಧ ನಾಯಕಂ ಮತ್ತಂ ಗಣಧರಸ್ವಾಮಿಗಳ್ಗೆ ಪೊಡೆಮಟ್ಟು ಮುಂದಣ ಸತ್ಯವ್ರತದ ಕಥೆಯಂ ಬೆಸಸುವುದೆಂದು ಕೈಗಳಂ ಮುಗಿದಿರ್ಪುದುಂ ನಿರ್ವೃತಿಕಾಂತೆಯ ಕೂಟಕ್ಕಿದು ತಥ್ಯಮೆನಿಸುವ ಸತ್ಯವ್ರತದ ಕಥೆಯಂ ಗೌತಮಸ್ವಾಮಿಗಳಿಂತೆಂದು] [1] ಪೇೞ್ದರ್ :— ವೀರದೊಳ್ ಕೂಡಿ ಪರಿಗೆಯುಂ ಬಿಟ್ಟೇಱುಂಬೆರಸಿರ್ಪಂತೆ, ಕ್ಷತ್ರಿಯಂಗೆ ಪುಟ್ಟೆ ಸಿಂಹಾಸನಮುಂ ಬೆಳ್ಗೊಡೆಯುಂಬೆರಸಿರ್ಪಂತೆ, ಶಕ್ತಿಯೊಳ್ ಕೂಡಿ ಪೆಂಡಿರುಂ ಮಕ್ಕಳುಂಬೆರಸಿರ್ಪಂತೆ, ಶ್ರೀಯೊಳ್ ಕೂಡಿ ತೇಜಮುಂ ಮಹಿಮೆಯುಂಬೆರಸಿರ್ಪಂತೆ, [ಜಾತ್ಯಶ್ವಮನೇಱಿ ಸಬಳಮುಮಡಾಯುಧಮುಂಬೆರಸಿರ್ಪಂತೆ, ಬೆಳ್ಗೇಟೆಯೊಳ್ ಪೊಕ್ಕ ನೀರುಂ ಧಾನ್ಯಮುಂಬೆರಸಿರ್ಪಂತೆ, ಬೀಜದೊಳ್ ನೆರೆದು ಬಂಟರೆತ್ತಿನೊಳ್ ಬೆರಸಿರ್ಪಂತೆ, ಭೂಬಲದೊಳ್ ಕೂಡಿ ಬಲದೊಳಂ ಬೆರಸಿರ್ಪಂತೆ, ಜವ್ವನದೊಳ್ ಕೂಡಿ ವಿಳಾಸದೊಳಂ ಶೃಂಗಾರದೊಳಂ ಕೂಡಿರ್ಪಂತೆ], ಸಮ್ಯಗ್ದರ್ಶನದೊಳ್ ಕೂಡಿ ಕೊಲ್ಲದ ವ್ರತದೊಳಂ ಪುಸಿಯದ ವ್ರತದೊಳಂ ಬೆರಸಿರ್ಪುದು ॥ ೨

1 ಅಂತು ಕೊಲ್ಲದ ವ್ರತದ ಕಥೆಯನಱಿದು ಮುಕ್ತಿಕಾಮಿನಿಯ ಕೂಟಕ್ಕಿದುವೆ ಪಥ್ಯಮೆನಿಸುವ ಸತ್ಯವ್ರತದ ಕಥೆಯಂ ಬೆಸಸಿಮೆಂಬುದುಮಿಂತೆಂದು (ಗ)

ವಸುಧಾವಳಯಮಂ ವಿಶ್ವಾ
ಸಿಸಿ ಪೊರ್ದುವುದಿವನೆ ದೇವನೆಂದೆಲ್ಲಂ ಪೂ ।
ಜಿಸುವುದದಱಿಂದಮಗ್ಗಳ
ಪುಸಿಯಿಲ್ಲದ ಸುವ್ರತಕ್ಕೆ ದೊರೆ ಪೆಱತೊಳವೇ ॥ ೩

ಇನ್ನದಱ ಪೆಂಪೆಂತೆಂದೊಡೆ, ॥ ೪

ತುಱುಗಿದ ನಂದನಾವಳಿಯಿನೊಪ್ಪುವ ವಾರಿಜಷಂಡದೋಳಿಯಿಂ
ನೆಱೆದತಿಶೋಭೆಯಿಂ ಬಳಸಿದೂರ್ಗಳಿನೊಪ್ಪುವ ಕೆಯ್ವೊಲಂಗಳಿಂ
ಮಿಱುಗುವ ರತ್ನದಿಂದೆಸೆವ ಜೈನನಿವಾಸದಿನೆಯ್ದೆ ನೀಳ್ದು ಸು
ತ್ತಿಱಿದ ತಟಾಕದಿಂ ಕರಮೆ ರಂಜಿಸುತಿರ್ಪುದು ವೆಂಗಿಮಂಡಲಂ ॥ ೫

[ತದ್ವೆಂಗಿಮಂಡಲದೊಳಂ
ವಿದ್ವಜ್ಜನದಿಂ ಸುರೇಶ್ವರನಿಭಾನ್ವಿತರಿಂ ।
ಸದ್ವಚನಯುಕ್ತರಿಂ ದೃಢ
ಸದ್ವ್ರತರಿಂ ವಿಟವಿಟೀನಿಕಾಯದಿನಧಿಕಂ ॥ ೬

ರಮಣೀಯಮಪ್ಪುದು ಪ್ರತಿಪಾಲಪುರಮೆಂಬುದದನಾಳ್ವಂ ಧನದ ಮಹಾರಾಜನೆಂಬ ಮಹಾಮಾಂಡಳಿಕನಾತಂ ॥ ೭

ಜಿನನಾಥಾರ್ಚನೆಯೊಳ್ ಸುರಾಧಿಪತಿಯಂ ಶ್ರೇಯಾಂಸನಂ ದಾನದೊಳ್
ಮುನಿಪಾದಾಂಬುಜಭಕ್ತಿಯೊಳ್ ಮಘವನಂ ನಾಗೇಂದ್ರನಂ ಭೋಗದೊಳ್
ಧನದೊಳ್ ಖೇಚರರಾಜನಂ ಚೆಲುವಿನೊಳ್ ಕಂದರ್ಪನಂ ಬುದ್ಧಿಯೊಳ್
ಮನುವಂ ತೇಜದೊಳರ್ಕನಂ ಭರತಚಕ್ರಾಧೀಶನಂ ಪೆಂಪಿನೊಳ್ ॥ ೮

ಪೋಲ್ತು ಸುಖಸಂಕಥಾವಿನೋದದಿಂ ರಾಜ್ಯಲಕ್ಷ್ಮೀಮನೋಹರನಾಗಿರ್ಪುದುಮೊಂದುದಿವಸಂ ಚರನೊರ್ವನರಸನ ಚಿತ್ತವೃತ್ತಿಯನಱಿದು ತನ್ನ ಮನದ ಕಾರ್ಯಮನಱಿಪಿ ಮೆಚ್ಚುಗೊಳ್ವಪೇಕ್ಷೆಯಿಂ ಮೆಲ್ಲನೆ ಸಾರ್ದು ಸಾಷ್ಟಾಂಗವೆಱಗಿ ಪೊಡೆಮಟ್ಟು ದೂರದೊಳ್ ನಿಂದು ಕೈಗಳಂ ಮುಗಿದು ಬಿನ್ನಪಮೆಂದಿಂತೆಂದಂ ॥ ೯

ಮದನನ ಕೈಪಿಡಿ ಕಾಮನ
ಪದಪಿನ ತೀವ್ರಾಸಿ ಮನ್ಮಥನ ನಚ್ಚಿನ ನಂ ।
ಬಿದ ಕೈದು ಕಾಮದೇವನ
ಮದದಾನೆ ಮನೋಜನೃಪನ ಪೂವಿನ ಬಾಣಂ ॥ ೧೦

ಬಿದಿ ಕಾಡಲೆಂದು ಜಗಮಂ
ಸುದತಿಯನಚ್ಚಿತ್ತು ಪಡೆದು ಮೆಲ್ಲನೆ ಕೊಟ್ಟಂ ।
ಮದನಂಗೆ ಬಿದಿಯು ಬೆಸದಿಂ
ಮದನನುಮವಳಿಂದಮಲೆಯುದಿರ್ದಪನಿಳೆಯಂ ॥ ೧೧

ಆಪದ್ಮಾಕ್ಷಿಯ ಸೊಗಯಿಪ
ರೂಪಂ ಕೇಳ್ದಪರುಮಳಿಪಿ ಮೆಱುಗುವರೆನೆ ಧಾ ।
ತ್ರೀಪಾಲಕ ತದ್ವನಿತೆಯ
ರೂಪಂ ನೆಱೆ ಕಂಡೊಡಳಿಪದಿರ್ಪವನಾವಂ ॥ ೧೨

ಸಂಘಶ್ರೀಯೆಂಬ ಬುದ್ಧೋಪಾಸಕನಾತನ ಮಗಳ್ ಕಮಳಶ್ರೀಯೆಂಬ ಕನ್ಯೆಯಿರ್ದಪಳಾಕನ್ಯೆ ದೇವರ್ಗೆ ಪ್ರಾಣವಲ್ಲಭೆಯಾಗಲ್ ತಕ್ಕವಳೆಂಬುದಂ ಧನದಮಹಾರಾಜನಾತಂಗಂಗಚಿತ್ತಮನಿತ್ತು ಪೆರ್ಗಡೆಗಳಂ ಸಂಘಶ್ರೀಯಲ್ಲಿಗೆ ಕಳುಪಿ ಕಮಲಶ್ರೀಯುಮಂ ಬೇಡಟ್ಟುವುದುಂ ಸಂಘಶ್ರೀ ಪೆರ್ಗಡೆಗಳ ಬರವನಱಿದಿದಿರ್ಗೊಂಡು ಪೋಗಿ ಪಿರಿದಪ್ಪ ವಿಷ್ಟರಮನಿಕ್ಕಿ ವಸ್ತ್ರತಾಂಬೂಲಾದಿಗಳಿಂ ಸಂತೋಷಂಬಡಿಸಿ, ಬೆಸನಾವುದೆಂಬುದುಂ ಪೆರ್ಗಡೆಗಳಿಂತೆಂದರ್ ॥ ೧೩

ನಿನ್ನ ತನೂಜೆಯುಂ ವನಜಲೋಚನೆಯುಂ ಲಲಿತಾಂಗಿಯುಂ ವಿಳಾ
ಸೋನ್ನತೆಯುಂ ಮನೋಜಗಜಗಾಮಿನಿಯುಂ ರಮಣೀಯವಕ್ತ್ರೆಯುಂ
ಸನ್ನುತರೂಪೆಯುಂ ಧನದಭೂಪತಿ ಭೂವಳಯೈಕವಂದ್ಯನ
ತ್ಯುನ್ನತತೇಜನಿಂದ್ರವಿಭವಂ ನಯದಿಂ ಜಿನಪಾದಶೇಖರಂ ॥ ೧೪

ಬೇಡಿಯಟ್ಟಿದನೆಂಬುದುಂ ಪೋಲೆಯುಂಗೆ ಪೋರ್ ದೊರೆಕೊಂಡಂತೆ ಪೆರ್ಚಿ ತಿಮಿರವ್ಯಾಧಿಯುಳ್ಳರಂತೆ ಮೆಯ್ಯುಱಿಯದೆ ಸಂಘಶ್ರೀ ತನ್ನ ಮನದೊಳ್ ಗುಡಿಗಟ್ಟಿ ಧನದಮಹಾರಾಜನಪ್ಪೊಡೆ ಋಷಿಯರ್ಗಮತಿಭಕ್ತನಾತನೆನ್ನೊಡೆಯುಂ, "ಯಥಾ ರಾಜಾ ತಥಾ ಪ್ರಜಾಃ" ಎಂಬೀನೀತಿ ವಾಕ್ಯದಂತೆ ನಾಡುಂ ಬೀಡುಂ ಪ್ರಜೆಯುಂ ಪರಿಗ್ರಹಮುಂ ಮೊದಲಾಗೆಲ್ಲರುಂ ಜೈನರೆ; ಎನ್ನ ಪಿಡಿದ ಬುದ್ಧಸಮಯಮಿೂತನ ದೇಶದೊಳಂ ಪುರದೊಳಮಸೆಗುಮಿೂತನೆ ಯೆನ್ನ ಮಗಳಪ್ಪ ಕಮಳಶ್ರೀಯುಂ ತಂದನಪ್ಪೊಡೆ, ಮತ್ತೆನಿಸದಱಕೆ ಕಾರಣಮಾಗಿ ಮೋಹದಿನೆನ್ನಿಷ್ಟದೈವಮಪ್ಪ ಸುಗತಂಗಂ ಭಕ್ತನಕ್ಕುಮೆನಗುಂ ಪಿರಿದಪ್ಪ ನಿರ್ವಾಹಮೀತನ ದೆಸೆಯಿಂ ದೊರೆಕೊಳ್ಗುಮೆಂದಾಳೋಚಿಸಿ ಪೆರ್ಗಡೆಗಳ್ಗಿಂತೆಂದಂ ॥ ೧೫

ಧರಣೀಶಂ ಬೇೞ್ಪಂ ಗಡ
ಮರವಿಂದಾನನೆಯುನೆನ್ನ ಮಗಳಂ ಜಗದೊಳ್ ।
ಪಿರಿದಪ್ಪ ಜನಕ್ಕೆನ್ನಂ
ತಿರೆ ನೋಂತವರಾರ್ ಮನುಷ್ಯರೊಳ್ ನಿಶ್ಚಯದಿಂ ॥ ೧೬

ಧರಣೀಶ್ವರಜಿನಪಾದಾಂ
ಬುರುಹಂ ಭವ್ಯಜನವಾರಿಜಾರ್ಕಂ ಬೇಡಲ್ ।
ತರುಣಿಯನೀಯದೆ ಮಾಣ್ಬೆನೆ
ಸಿರಿ ಬರೆ ಮೊಣಕಾಲನಾಂಪ ಗಾಂಪರುಮೊಳರೇ ॥ ೧೭

ಎಂದು ಪೆರ್ಚಿ ನುಡಿದು ಕಮಲಶ್ರೀಯನೊಡಗೊಂಡು ಪೋಗಿ ಮೆಂಬುದುಂ ಪೆರ್ಗಡೆಗಳ್ ಕುಮಾರಿಯನಾನೆಯನೇಱಿಸಿಕೊಂಡು ಅರಮನೆಗೆವಂದು ಅರಸಂಗೊಪ್ಪಿಸುವುದುಂ ॥ ೧೮

ಅರಸಂ ಕನ್ನೆಯ ರೂಪಂ
ಪರಿಭಾವಿಸಿ ನೋಡಿ ನೋಡಿ ಲಾವಣ್ಯಕ್ಕ ।
ಚ್ಚರಿವಟ್ಟು ತೂಗಿ ತಲೆಯುಂ
ಸುರೇಂದ್ರಸತಿಗೀಕೆ ಚೆಲ್ವಿನೊಳ್ ಮಿಗಿಲಪ್ಪಳ್ ॥ ೧೯

ಆತನ ಪೇಚ್ಕೆಗೆ ರೂಪುಪ
ಮಾತೀತಂ ಚೆಲ್ವಿನೇಳ್ಗೆಯೊಳ್ ಮೇನಕಿಗಂ |
ಸೀತೆಗಮಬ್ಜಾನನೆ ತಾಂ
ಭೂತಳದೊಳಗೀಕೆ ನಾಲ್ವೆರಳ್ಮಿಗಿಲಪ್ಪಳ್ || ೨೦

ಎಂದು ಮನದೊಳ್ ಪೊಗೞ್ದು ಕಮಳಶ್ರೀಯುಂ || ೨೧

ಸಿರಿಯೊಳ್ ನಾರಾಯಣಂ ರಂಭೆಯೊಳಮರವರಾಧೀಶ್ವರಂ ಸೀತೆಯೊಳ್ ಭೂ
ಧರವಂದ್ಯಂ ರಾಘವೇಶಂ ರತಿಯೊಳಮಳಚಿತ್ತೋದ್ಭವಂ ರೋಹಿಣೀಸಾಂ
ದ್ರಶೋಭಾಕಾರೆಯೊಳ್ ಚಂದ್ರಮನನುನಯದಿಂ ಕೂರ್ತು ಕೂಡಿರ್ಪವೋಲ್ ಭೂ
ಧರಧೈರ್ಯಂ ಕನ್ಯೆಯೊಳ್ ಸಂತಸದಿನೊಸೆದು ಕೂಡಿರ್ದನುತ್ಸಾಹದಿಂದಂ || ೨೨

ಅಂತಿರ್ದೊಂದುದಿನಂ ಭೂ
ಕಾಂತಂ ಜಿನಪಾದಪದ್ಮಮಧುಪಂ ರಿಪುಭೂ |
ಪಾಂತಕನೊರ್ಮೆಯೆ ತನ್ನೊಳ್
ಚಿಂತಿಸಿದಂ ಸಾರಮಿಲ್ಲದೀಸಂಸೃತಿಯಂ ] [1] || ೨೩

ಪೆಂಡಿರ ವಶಮಾಗಿ ಮಹೀ
ಮಂಡಲದೊಳ್ ಪಲರುಮೆಯ್ದಿದರ್ ದುರ್ಗತಿಯುಂ |
ಪಂಡಿತರಪ್ಪವರದಱಿಂ
ಪೆಂಡಿರ ಬಳಸಿಂಗೆ ಬೇಗಮೆಳಸುವರಲ್ಲಂ || ೨೪

---

1 ಆದೇಶದೊಳ್ ಪ್ರತಿಪಾಲಪುರವೆಂಬುದು ಪುರಮುಂಟದನಾಳ್ವಂ ಧನದ ಮಹಾರಾಜನೆಂಬ ಮಾಂಡಳಿಕಂ ಸಂಘಶ್ರೀಯೆಂಬ ಬೌದ್ಧನ ಸುತೆ ಕಮಲಶ್ರೀಯೆಂಬ ಕುಮಾರಿಗೆ ಸೋಲ್ತು ವಲ್ಲಭೆಯಮಾಡಿ ಸಂಘಶ್ರೀಗೆ ಮಂಡಲಮಂ ಕೊಟ್ಟು ಕೆಲವು ದಿವಸಂ ಸುಖಮಿರ್ದೊಂದುದಿವಸಂ ತನ್ನ ಮರುಳಾಟಕ್ಕೆ ವಿಸ್ಮಯಂಬಟ್ಟು (ಗ)

ಜಿನಪಾದಸೇವೆಯುಂ ಬಿ
ಟ್ಟನವರತಂ ಪೆಂಡಿರೆಱಕದಿಂದಿರ್ದ ನರಂ ।
ಜನನಿಯುನೊಲ್ಲದೆ ರಾಕ್ಷಸ
ವನಿತೆಯುನಪ್ಪಿ ತುರ್ದು ಪೊರ್ದುವೆಗ್ಗನನಿಱುಕುಂ ॥ ೨೫

[ಜಿನಮುನಿಗಳ ಭಕ್ತಿಯುನುೞಿ
ದನುನಯದಿಂ ಪೆಂಡಿರೆಱಕದಿಂದಿರ್ಪಾತಂ ।
ಕನಕಮನೀಡಾಡಿ ಮರು
ಳ್ತನದಿಂದಿದ್ದಿಲನೆ ಕೊಳ್ವ ಮರುಳಂ ಪೋಲ್ಕುಂ] ॥ ೨೬

ಜಿನಭಕ್ತಿಯಿಲ್ಲದಾಕೆಯೊ
ಳನಂಗವಶನಾಗಿ ಸೋಲ್ತು ಕೂಡಿರ್ಪಾತಂ ।
ತನಗೆ ಕಡುಮುಳಿವ ನರನಂ
ಮನೆಯುಂ ಪೊಕ್ಕಿಪ್ಪ ಗಾಂಪನಂ ನೆಱೆ ಪೋಲ್ಕುಂ ॥ ೨೭

[ನಡುಮನೆಯೊಳ್ ನಿಧಾನಮಂ ಕಂಡದನಗೞ್ವನಿತು ಕಾಯುಕ್ಲೇಶಕ್ಕಾಱದೆ ಬಡತನದೊಳ್ ನವೆವನುಂ, ಪಲಕಾಲಂ ಗೊರೆಕೊಳ್ಳದ ಸದ್ಧರ್ಮಂ ಪುಣ್ಯದಿಂ ದೊರೆಕೊಂಡೊಡೆ ಧರ್ಮದೊಳಾದಲ್ಪ ದುಃಖಕ್ಕೆ ತನುವುಮಂ ಧನಮುಮನೊಡ್ಡಲಾಱದೆ ಪೆಂಡಿರ ರಾಜ್ಯದ ಧನಶ್ರೀಯೊಳಾದಲ್ಪಸುಖಕ್ಕೞಿಪಿ ನರಕದೊಳ್ ಬಿದ್ದು ಮಹಾದುಃಖದೊಳ್ ಕುದಿವರುಮೊಗ್ಗರೆಂದು ಭಾವಿಸಿ ಕಮಳಶ್ರೀಯೊಳಾದ ವಿರಹಾಗ್ನಿಯುಂ ಜಿನವಚನವಾರಿಯಿಂ ಮೆಲ್ಲನೆ ನಂದಿಸಿ][1] ಪಲತೆಱದ ಧರ್ಮಶ್ರವಣದಿಂ ಕಮಳಶ್ರೀಯುಂ ಸದ್ಧರ್ಮಕ್ಕೆ ತಂದು ಸಕಳಶ್ರಾವಕವ್ರತಂಗಳಂ ದೇವಗುರುಸನ್ನಿಧಾನದೊಳ್ ಕೈಕೊಳಿಸಿ ದರ್ಶನಶುದ್ಧಿಯುಪ್ಪಂತು ಮಾಡಿ ಸಂಘಶ್ರೀಯುಮಂ ಶ್ರಾವಕನಂ ಮಾಡ್ಪ ಬಗೆಯುಂ ತಂದು ತನ್ನೊಳಿಂತೆಂದಂ ॥ ೨೮

[1] ಎಂದು ಭಾವಿಸಿ (ಗ)

ಮುಳ್ಳುಳ್ಳ ವೃಕ್ಷಮಂ ಕರ
ಮಲ್ಲದೆ ಪೊರ್ದಿದ ಲತಾಳಿ ಕಿಡುವಂತಿರೆ ಪೆಂ ।
ಪಿಲ್ಲದ ಕುಮಾರ್ಗಗಳುಮಂ
ಮೆಲ್ಲನೆ ಪೊರ್ದಿರ್ದ ನರರ ಗುಣಮುಂ ಕಿಡುಗುಂ ॥ ೧೯

ಬಿಡದೆಂಜಲ ಕುಱಿಯುಂ ನೇ
ರ್ಪಡೆ ಪೊರ್ದಿದ ವಾರಿ ಪೊಲ್ಲದೆನಿಪವೊಲಳಿಪಿಂ ।
ಕಡುಪೊಲ್ಲರಪ್ಪ ಮಾನಸ
ರೊಡಗೂಡಿದ ಮಾನಿಸರ್ಗೆ ಸದ್ಗುಣಮಱಿಗುಂ ॥ ೨೦

ಅದುಕಾರಣದಿಂ ಪೆಂಡತಿಗೆ ಕೂರ್ಪಾತನತ್ತೆಯೊಡನೆ ಕಿರ್ಚು ಪೊಕ್ಕನೆಂಬ ನಾಣ್ಣುಡಿಯುಂ ನನ್ನಿಮಾಡಿ, ಕೆಮ್ಮನಪ್ಪ ಕುಮತಪ್ರೀತನುಂ ದುಷ್ಕರ್ಮಸಮೇತನುಮಪ್ಪ ಸಂಘಶ್ರೀಯುಂ ಕಮಳಶ್ರೀಯು ಮೋಹದಿಂ ಪಿಡಿದು ಕೊಂಡಾಡಿ ಸುಗತಿಯಿಂ ಕೆಟ್ಟು ಸದ್ಧರ್ಮಮಂ ಬಿಟ್ಟು ದುರ್ಗತಿಗೆ ಸಲ್ವ ಕಜ್ಜಮಂ ಬಗೆಯಲಾಗದಾತನುಮಂ ಧರ್ಮದೊಳ್ ದೃಢನಪ್ಪಂತು ಮಾಡಿ ಬಱಿಕ್ಕಾತನಮೇಲೆ ಮೋಹಮಂ ಮಾಡುವೆನೆಂದು ದಿವಸಕ್ಕಂ ಕ್ರಮಕ್ರಮದಿಂ ನಿರ್ವೃತಿಯು ಸೈದಾರಿಯೆನಿಪ ಜಿನಾಗಮಮುಮನಿಂತೆಂದು ಪೇೞ್ದಂ ॥ ೨೧

ಆರಯ್ದು ನೋಡಿ ನಾಡೆ ವಿ
ಚಾರಿಸಿ ಸದ್ಧರ್ಮಮಪ್ಪುದಂ ಪಿಡಿಯದೆ ನಿ ।
ಷ್ಕಾರಣಮವಿಚಾರತೆಯಿಂ
ಸಾರಂಗೆಟ್ಟಿರ್ದ ಧರ್ಮಮಂ ಪೊರ್ದುವುದೇ ॥ ೨೨

ವ್ರತದ ನೆಗಱ್ತೆಗೆ ಜೆಂಬಿ
ರ್ದತಿಶಯಸದ್ಧರ್ಮರತ್ನಮಂ ಬಿಟ್ಟು ಮಹೋ ।
ನ್ನತಿಯಿಂ ಕುಧರ್ಮಮಂ ಸಂ
ತತಮಳಿಪಿಂ ಪಿಡಿದು ನಲಿವ ಮನುಜನೆ ಗಾಂಪಂ ॥ ೨೩

ತನ್ನಯ ಮನವುವಿಚಾರಿಸೆ
ತನ್ನ ಮನಂಬೊಕ್ಕ ಬಳಿಕೆ ಮುಕ್ತಿಯನೀವ।
ತ್ಯನ್ನತಧರ್ಮಮನಱಿವಿಂ
ಸನ್ನುತಮತಿಯಾಗಿ ಪಿಡಿಯದಾತನೆ ಗಾಂಪಂ ॥ ೩೪

ಊರಾವುಗಳೋಡುವುದಂ ಕಂಡು ಕುರುಡಾವುಂ ಓಡಿತೆಂಬಂತೆ ವಿಜ್ಞಾನಹೀನರುಂ ದುರ್ಗತಿಭಾಜನರುಂ ಅಘಸಮೇತರುಮವಿಚಾರಿಗಳು ಮಪ್ಪ ದುರ್ಮತಿಗಳಂ ಕಂಡು ಬೆಳಬೆಂಜನನಾಗಿ, ಕೊಲೆಯೊಳ್ ಪೊರ್ದಿದ ಪುಸಿಯೊಳೊಡಂಬಟ್ಟ ಕಳವಿನೊಳ್ ಕೂಡಿದ ಪರಸ್ತ್ರೀಯು ರೊಳೊಂದಿದ ಪರಿಗ್ರಹಾಪೇಕ್ಷೆಯಿಂ ಮತಿಗೆಟ್ಟು ಮಱುಗುವ ಕುತ್ಸಿತ ಧರ್ಮಮುಮಂ, ರಾಗದ್ವೇಷಾದಿ ದೋಷಯುಕ್ತನುಂ [ವನಿತಾಸ ಕ್ತನುಂ] ರೌದ್ರಾತ್ಮನುಂ ನಿರ್ದಯನುಮಪ್ಪ ದೇವನುಮಂ, ಪೆಸರಿಲ್ಲ ದುಪದೇಶಮಿಲ್ಲದ [ನಿಯಮಮಿಲ್ಲದ] ನಿಷ್ಠೆಯಿಲ್ಲದ ದುರಾಚಾರದೊಳ್ ಪೊರ್ದಿದ ವ್ರತಮುಮಂ, ಅಭಿಮಾನಮಿಲ್ಲದ ಧೈರ್ಯಮಿಲ್ಲದ ಶಾಂತರೂಪ ಲ್ಲದ ಕೋಪದೊಳ್ ಕೂಡಿದ ಮಾಯಾವಿಯಾಗಿ ಮೆಚ್ಚಿದಂತೆ ನೆಗಳ್ದ ತಪಮುಮಂ, ಕೊಂಡಾಡುವ ಕೈಕೊಳ್ವ ಕೈಮುಗಿವ ಸುಗತಿವಡೆವೆ ನೆಂಬ ಮಾನಿಸಂ ಕಟ್ಟೆಗ್ಗನಕ್ಕುಮದೆಂತೆಂದೊಡೆ, ಮತ್ತಿಯೆಲೆಯುಂ ತಾಂಬೂಲದೆಲೆಯೆಂದು ಮೆಲ್ದು ಪಲ್ಗಱಿಗಾಸೆಗೆಯ್ವನುಮಂ ಬೂದಿಯು ಬೆಳ್ಪುಮಂ ನುಣ್ಪುಮಂ ಕಂಡು ಕಳವೆಯಕ್ಕಿಯ ಪಿಟ್ಟೆಂದು ಕಾವಲಿ ಯೊಳೞಿದಾಗನಡುವೆನೆಂಬನುಮಂ ಪೋಲ್ಕುಮಿಂತು ॥ ೩೫

ಕಸಮಂ ಸೋದಿಸಿ ಮಾಣದುತ್ತು ಮನೆಯುಂ ಸದ್ಭಾರ್ಯೆಯುಂ ಬಿಟ್ಟು ಸಂಕಿಸದೋರಂತಿರೆ ಕಾದು ಪಟ್ಟು ಪದೆಪಿಂ ಮಣ್ಣಿಕ್ಕಿ ಲೇಸಾಗಿ ಬಿ ತ್ತಿ ಸಮಂತೊಯ್ಯನೆ ಧಾನ್ಯಮಂ ಪಡೆವವೊಲ್ ಸದ್ಧರ್ಮದಿಂದಾದ ಬೇ ವಸಮಂ ಸೈರಿಸಿ ನಿಂದು ಮುಕ್ತಿಸುಖಮಂ ಕೈಕೊಳ್ವುದಾನಂದದಿಂ ॥

ಮತ್ತಂ ನೀರೊಳಗಣ ಮರದಂತೆ ಮೆಚ್ಚಿದಂತು ಪರಿಯದೆ ಕಡು ವೆಳದ ಮರದಂತೆ ಮನದೊಳಲ್ಲಾಡದೆ ಪಂದೆಯಪ್ಪನಂಕದಂತೆ ಪಲವಂ

ನೆನೆಯದೆ ಕಲಿಯಪ್ಪ ಮೂರ್ಖನಂತೆ ಮೆಯ್ಮಱೆಯದೆ ಪಲಕಾಲದ ವೃದ್ಧನಂತೆ ಮತಿಗಿಡದೆ ಪಾಣ್ಬೆಯಪ್ಪ ಸಜ್ಜನೆಯಂತೆ ಸಿಡಿಮಿಡಿಗೊಳ್ಳದೆ ಪೊಲೆಬೂತಿನಂತೆ ಕಿಡೆ ನುಡಿಯದೆ ಪಾದರಸದಂತೆ ನೆಲೆಗೆಟ್ಟು ಪರಿಯದೆ ಬೆಂದ ಮುತ್ತುಗಳಂತೆ ಪೆಟ್ಟುವೆರ್ಚದೆ ಬಕದಂತೆ ಪೊಲ್ಲಮೆಯಂ ಪಾರದೆ [1] ಬೇಸಗೆಯ ಪೊನಲಂತೆ ಕ್ಷಣಿಕನಾಗದೆ ಪಗರಣಿಗರಂತೆ ಬೇಳಂಬಮಾಗದೆ ಪುಲ್ಲೆಯ ನೋಟದಂತೆ ಸಂಚಳನಾಗದೆ ಕಷ್ಟರ ನನ್ನಿಯಂತೆ ಕಿಡದೆ ಕುಲಜನಂ ಕಂಡ ಪೊಲೆಯನಂತೆ ಪುಸಿಯದೆ ನಿಂದು ಸುವ್ರತಂಗಳಂ ತಾಳ್ದಿ ಪರತ್ರೆಯ ಮಹಾಸುಖಮಂ ಪಡೆವುದು ‖ ೩೭

ಕೆಮ್ಮನೆ ಮೂರ್ಖರ ಪೇೞ್ಕೆಗೆ
ತಮ್ಮ ಮನಂಸೋಲ್ತು ಸುವ್ರತಕ್ಕಱದೆ ಕಾ ।
ಡೆಮ್ಮೆಯ ತೆಱದಿಂ ಮಲೆವರ್
ಕೆಮ್ಮನೆ ಸದ್ದರ್ಶನಕ್ಕೆ ಮುನಿವರ್ ಧೂರ್ತರ್ ‖ ೩೮

ಪಿಡಿಯಚ್ಚು ವಿಡಿದು ಕೆಮ್ಮನೆ
ಜಡಮತಿಗಳ್ ತಮ್ಮ ಬೆಸನಮಂ ಸಲಿಸುವುದಂ ।
ಬಿಡಲಾಱದೆ ನಿರ್ವೃತಿಯಂ
ಕಿಡಿಸಿ ಕುಕಿಲ್ದೆಯ್ದೆ [2] ಪೊರ್ದುವರ್ ದುರ್ಮತಮಂ ‖ ೩೯

ಮುಱುವಿಕ್ಕಿ ಪೊರೆದು ಗೊಡ್ಡಂ
ಕಱೆದೊಡೆ ಪಾಲುಂಟೆ ದೋಷಿಯಪ್ಪಾತನುಮಂ ।
ಪೆಱಪಿಂಗದೆ ಪಿಡಿದಿರ್ದೊಡೆ
ನೆಱೆ ನಿರ್ವೃತಿಸುಖಮನಣ್ಣ ಪೇೞ್ಪಡೆದಪರೇ ‖ ೪೦

---

1 ಬಡಿವೆತ್ತ ಬೇಡನಂತೆ ಮುನಿಯದೆ ದಾಸಂಬಡೆಯದ ಪಾರ್ವನಂತೆ ಮನಂಗುಂದದೆ ಸೋಂಬನಂತಲಸದೆ ನಿರ್ಮಲನಾಗಿ ದೇವನುಮಂ ಧರ್ಮಮುಮಂ ವಿಚಾರಿಸಿ ಕೈಕೊಂಡು ಮರನ ಮೊದಲಂತಲ್ಲಾಡದೆ ತಿಪ್ಪೆಯ ನೀರಂತೆ ಪೊಲ್ಲನಿಸದೆ ಬೇಸಗೆಯ (ಗ)

ಕುಡುಗೆಂದು ಕುಕಿಲ್ದು (ಬ. ಕ.)

ಒರೆಗೀಪೊನ್ಗೀಪೊನ್ನಿನಿ
ವಿರಿದೀಪೊನ್ನಿದು ಸಮಂತು ಕಿಱಿದೆಂದಾರ ।
ಯ್ದುರುಮುದದಿನಱಿಯದಾಡುವ
ಪರದನವೊಲ್ ದೈವಮಱಿಯದವನುಂ ಕಿಡುಗುಂ ॥ ೪೧

ಪದನಱಿದು ಬಿತ್ತದ ಬೆಳಸುಂ, ಪ್ರಾಯಮಱಿದು ಪಡೆಯದ ಸೂಳೆಯ ಪಡಪುಂ, ಲಾಭಮಱಿಯದಾಡಿದ ಪರದುಂ, [1] ಪಾೞಱಿದು ಮಾಱುಗೊಳ್ಳದ ಪಯನುಂ, ವಿಚಾರಮಱಿಯದೆ ತಿರ್ದುವ ತಿರ್ದುಂ, ಜಾತಿಯಱಿಯದೆ ಕುಡುವ ಕೂಸುಂ, ಬೀರಮಱಿಯದೆ ಪೊರೆದ ಬಂಟನುಂ, ಶೀಲಮಱಿಯದ ಪೆಂಡಿರ ಕೂರ್ಮೆಯುಂ, ಪೊನ್ನಳವಿಯಱಿಯದಾತನ ಪರದುಂ [2], ರುಚಿಯಱಿಯದೂಟಮುಂ, ಬಡತನಮಱಿಯದ ಬೇಟಮುಂ, ಶಕ್ತಿಯಱಿಯದ ಪೊಱೆಯುಂ, ಪೆಸರಱಿಯದಂಗೆ ಕೊಟ್ಟ ಸಾಲಮುಂ, ಪೊಲನಱಿಯದ ತೋಟಮುಂ, ಮನಮಱಿಯದಾಟಮುಂ, ಸಲುಗೆಯಾದವನ ಪುರುಡುಂ, ದೇವನುಮುಂ ಧರ್ಮಮುಮಂ ವ್ರತಮುಮನಱಿಯದೆ ಮೊಗಂ ಮೇಲೆತ್ತಿ ಪೊಟ್ಟೇಱಿಸಿ ದುರ್ಮಾರ್ಗಮಂ ತನ್ನಿಚ್ಛೆಗೆ ನಚ್ಚಿ ಮೆಚ್ಚಿ ಕೊಂಡಾಡಿ ಮದದಿಂದೆನ್ನ ಪಿಡಿದುದೆ ದೈವಮೆನ್ನ ಮಾಡುವುದೆ ಧರ್ಮಮೆನ್ನ ನೆಗೞ್ದುದೆ ತಪಮೆಂದು ಮುಯ್ವುಂ ನೋಡುವ ಮಾನಿಸರುಂ ತುದಿಯೊಳ್ ಮಹಾದುಃಖಮನೆಯ್ದುವರಲ್ಲದೆ ಸುಖಮನೆಯ್ದುವರಲ್ಲರಿಂತು ॥ ೪೨

ತೆಂಗಿನಕಾಯದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂ
ದೇಂ ಗಳ ಬೆಚ್ಚಿ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ನಾ
ಯ್ಪಿಂಗಿದುದೆಂಬ ಬೆಳ್ತನಮನೊಯ್ಕನೆ ಮಾಡದೆ ಬುದ್ಧಿವಂತರುಂ
ಪಿಂಗದೆ ಪೊರ್ದಿ ಮೆಲ್ಲನೆ ವಿಚಾರಿಸಿ ಪೊರ್ದುವುದಾಪ್ತನಪ್ಪನಂ ॥ ೪೩

---

1 ಬೞಗಱಿಯದ ಕೋಟೆ ಪೞಗಮುಂ (ಗ)

2 ಮನಮಱಿಯದಾತನ ಕೆಳೆಯುಂ ಕುಲಮಱಿಯದಾತನೆಂಜಲುಂ ಬಲಮಱಿಯದಾತನ ಕಾಳೆಗಮುಂ ನೆಲೆಯಱಿಯದೆ ತೋಱೆಯುಂ ಪಾಯ್ವನುಂ (ಗ)

ದಕ್ಕಿನೊಳ್ ಮಾಡಿದ ಮನೆ ಸೊಕ್ಕಿದಾನೆ ಸೋಂಕೆ ಕೆಡೆದು ಬೀೞ್ವಂತೆ ದೋಷಿಯಪ್ಪ ದೇವನಂ ಪಿಡಿದ ಮಾನಿಸನುಂ ಕರ್ಮರಾಜನೊಡ್ಡಂ ಮಾರ್ಕೊಳಲಾಱದೆ ನರಕದೊಳ್ ತಲೆ ಕೆಳಕಾಗಿ ಬೀೞ್ಗುಮಿಂತು ॥ ೪೪

ಮಿಳಿಯೊಳ್ ಮಾತಂಗಮಂ ಕಟ್ಟಿದೊಡೆ ನಿಲುಗುಮಂತಲ್ಲದಾದಂದು ಕೂರ್ಪಂ
ಬಲದಿಂ ಮುಯ್ವಾಂತು ಪೇರಾನೆಯನವಯವದಿಂ ಪಂಜಿಯೊಳ್ ಕಟ್ಟಿದಂದು
ಮ್ರ್ಕಳದಿಂ ಮತ್ತದ್ವಿಪಂ ನಿಂದಪುದೆ ಮರುಳ್ ಸದ್ಧರ್ಮದಿಂದಲ್ಲದುರ್ವೀ
ತಳದೊಳ್ ದುಷ್ಕರ್ಮಬಂಧಂ ಕಿಡಲಱಿಗುಮೆ ಮತ್ತನ್ಯಧರ್ಮಂಗಳಿಂದಂ ॥ ೪೫

ಕಾೞ್ಕಿಚ್ಚಿಗಂಜಿದಾತಂ ಪೆರ್ಮಡುವಂ ಪೊಕ್ಕೊಡೆ ಬಾೞ್ಗುಮುದ್ಧತಿಯಿಂ ಕರಂಡಮಂ ಪೊಕ್ಕೊಡೆ ಕಱಿಮುಱಿಯಾಗಿ[1] ಬೇಗುಮಂತೆ ನರಕತಿರಿಕಂಗಳೊಳ್ ಕರಟದ ಕದಿರಂತೆ ತಿರಿಪುವ ಕರ್ಮಕಂಜುವಾತಂ ಸದ್ಧರ್ಮಮಂ ಪಿಡಿದೊಡೆ ಸುಖಿಯಕ್ಕುಮಲ್ಲದೆ ಕೊಲೆಯೊಳ್ ಕೂಡಿದ ಕುಧರ್ಮಮಂ ಪಿಡಿದೊಡೆ ನರಕಮಂ ಪೊಕ್ಕು ಮಹಾದುಃಖಮನೆಯ್ದುಗುಂ ॥ ೪೬

ಬೇವಿಂಗೆ ಕಯ್ಪು ಸಹಜಂ
ಭೂವಳಯದೊಳೆಂಬ ತೆಱದಿನತಿಪಾಪಿಗಳುಂ ।
ಶ್ರೀವರಸದ್ಧರ್ಮದ ದೆಸೆ
ಗೋವದೆ ಮುನಿಯುತ್ತುಮಿರ್ಪರಘವಶದಿಂದಂ ॥ ೪೭

ಒಡೆಯರ ಸಿರಿಯಂ ಕಂಡೊಡೆ
ಬಡವರ್ ಮುನಿವಂತೆ ನರಕಗತಿಗಿೞಿವವರುಂ ।
ತಡೆಯದೆ ನಿರ್ವೃತಿಸುಖಮಂ
ಪಡೆವವರಂ ಕಂಡೊಡಾಗಳುಂ ಕಡುಗಾಯ್ವರ್ ॥ ೪೮

---

1 ಕರಿಮುರಿಯಾಗಿ (ಗ)

ಪೊನ್ನುೞ್ಗವರಂ ಕಳ್ಗರ್
ಬೆನ್ನಟ್ಟಿ ತಗುಳ್ವ ತೆಱದಿನತಿನಿರ್ಮಳರಂ ।
ಸನ್ನುತದರ್ಶನಶುದ್ಧರ
ನುನ್ನತರಂ ಪಾಪಿಯಪ್ಪರುಂ ನೆಱೆ ತಗುಳ್ವರ್ ॥ ೪೯

ಮಱೆ ಮೊಕ್ಕಳಮಾದೊಡೆ ತೊಱೆ ಪೆರ್ಚಿ ಪರಿಗುಮಲ್ಲದೆ ಸಮುದ್ರಂ ಪೆರ್ಚಿ ಪರಿಯದಂತೆ ಕುತ್ಸಿತಧರ್ಮದ ಮಹಿಮೆಗೆ ಮಿಥ್ಯಾದೃಷ್ಟಿಗಳಪ್ಪ ದುರಾತ್ಮರ್ ಪೆರ್ಚುವರಲ್ಲದೆ ಸದ್ದೃಷ್ಟಿಗಳಪ್ಪ ಮಹಾತ್ಮರ್ ಪೆರ್ಚಲಱಿಯರ್ ॥ ೫೦

ಸಾರಂ ಚಾಮೀಕರಭಂ
ಡಾರಕ್ಕೞ್ಕಿತರ್ಪ ಕಾಪನಿಡುವವೊಲೆಲೆ ಸಂ ।
ಸಾರಭಯಮುಳ್ಳ ಭವ್ಯನು
ಮೋರಂತಿರೆ ಕಾದುಕೊಳ್ಗೆ ರತ್ನತ್ರಯಮಂ ॥ ೫೧

ಏಗೆಟ್ಟುದೆಂದು ಹೀನೋ
ದ್ಯೋಗದಿನೇಱದರ ಮಾತನಾಲಿಸಿ ಕಿಡದು ।
ದ್ಯೋಗಿಯಿವನೆನಿಪ ಭವ್ಯಂ
ಬೇಗಂ ತಿಳಿದಾತರ್ಪ ಪಿಡಿಗೆ ಸದ್ದರ್ಶನಮಂ ॥ ೫೨

ಮತ್ತಂ [ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆಣ್ಣನೂಱದೊಡೆ ಸೈರಿಸಲಾಱದೆ ಬೆಣ್ಣಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆಣ್ಗಳಂ ಪೊಯ್ದುಕೊಂಡರೆಂಬ ಗಾವಿಲಿಕೆಯಂ ಮಾಡಿ] ಲೋಕವಾಡಿದಂತಾಡಿ ಕುಮಾರ್ಗಮಂ ಪತ್ತದೆ ಮೂಢತ್ರಯಮಂ ಬಿಟ್ಟು ಮುಕ್ತಿಯನೆಯ್ದಿ[ಸುವ ಸದ್ಧರ್ಮಮಂ] ನಿರ್ದೋಷಿಯಪ್ಪ ದೇವನುಮಂ [1] [ಮಹಾಪರೀಷಹಂಗಳಂ ಗೆಲ್ವಂತಪ್ಪ ತಪಮುಮಂ] ಪೊರ್ದುವುದೆಂದು ಧನದ ಮಹಾರಾಜನಾಪ್ತಧರ್ಮದ ತಪದ ಸ್ವರೂಪಮಂ ಪೇೞ್ದೊಡಂ ಸಂಘಶ್ರೀ ಧರ್ಮಕ್ಕೆ[ಂತುಂ ಬಾರದಿರ್ಪುದುಮೊಂದುದಿವಸಂ ॥ ೫೩

---

1 ಕೋಲೆಯೊಳ್ ಪೊರ್ದದ ಸದ್ಧರ್ಮಮಂ (ಗ)

ಪರಮತಪೋಧನರ್ ದುರಿತಸಂಹರಣರ್ ನಿಖಿಳಾಗಮಾನ್ವಿತರ್
ಗುರುಪದಭಕ್ತರೂರ್ಜಿತಯಶರ್ ಜಿನಧರ್ಮಸರೋರುಹಾರ್ಕರು
ತ್ತಮಗುಣರಿಂದ್ರಶೈಲಸದೃಶಕ್ಷಮರುಗ್ರಕಷಾಯಹೀನರಂ
ಸುರನರಪೂಜಿತಕ್ರಮಪಯೋರುಹರುನ್ನತಪುಣ್ಯಮೂರ್ತಿಗಳ್ ॥ ೫೪

ಪೂರ್ವವಿದೇಹದಿಂ ಚಾರಣಋಷಿಯರ್ ವೈಕ್ರಿಯಿಕ ಋದ್ಧಿ ಪ್ರಾಪ್ತರಪ್ಪುದಱಿಂ ತಮ್ಮ ಪಂಚಶತಚಾಪೋತ್ಸೇಧಮಪ್ಪ ದೇಹಮಂ ಭರತಕ್ಷೇತ್ರದವರ ದೇಹದಸತು ಪ್ರಮಾಣಂಮಾಡಿ ಪೊಳೆವೆಳವೆರೆಯಂತೆ ತೊಳತೊಳ ತೊಳಗುವ ದೇಹಮನೊಡೆಯರಂತರಿಕ್ಷದೊಳ್ ಪೋಗುತ್ತಿರ್ದರವರಂ ಸಾಮಂತರಾಜಕುಮಾರಮಕುಟಬದ್ಧಪರಿವೃತನಾಗಿರ್ದ ವಾತ್ಸಲ್ಯರತ್ನಾಕರಂ ಕಂಡು ॥ ೫೫

ಖರಕರನುದಯದೊಳರಲದ
ಸರೋಜದಂತಾಗಳೆಯ್ದೆ ಭಕ್ತಿಯ ಭರದಿಂ ।
ಕರಮಲ್ಲದರಲೆ ಮುಖಪಂ
ಕರುಹಂ ಧರಣೀಶನೆದ್ದು ಸಿಂಹಾಸನದಿಂ ॥ ೫೬

ಚಾರಣಋಷಿಯರ ರೂಪಂ
ಚಾರುಗುಣಂ ನೋಡಿ ಸಂತಸಂ ಮಿಗೆ ಹಸ್ತಂ ।
ಭೋರುಹಮಂ ಮುಗಿದು ಗುಣಾ
ಧಾರಂ ಕಳಕಳಿಸಿ ನಕ್ಕು ಮಂತ್ರಿಯ ಮುಖಮಂ ॥ ೫೭

ನೋಡಿ, ನೋಡ ಸದ್ಧರ್ಮದೊಳಾದ ಮಹಿಮೆಯನೆಂದು ಮುನಿಯುಗಳಮಂ ತೋಱಿ ತಪದೊಳಪ್ಪ ಋದ್ಧಿಗಳುಮಂ ದಾನದಿಂದಪ್ಪ ಮಹಾಭೋಗಂಗಳುಮಂ ಪೂಜೆಯಿಂದಪ್ಪ ಪರಮೈಶ್ವರ್ಯಂಗಳುಮಂ ಸಮ್ಯಕ್ತ್ವದಿಂದಪ್ಪ ನಿರ್ವೃತಿಶ್ರೀಯುಮಂ ಪೇೞೆ, ಸಂಘಶ್ರೀ ಕೇಳ್ದು ಧರ್ಮದ ಪ್ರತ್ಯಕ್ಷ ಫಲಮಂ ಕಣ್ಣಾರೆ ಕಂಡು ಸದ್ಧರ್ಮಾಭಿಮುಖ

ನಾಗಿ ಮನದ ಶಂಕೆ ಪೋಗೆ ಮಿಥ್ಯಾತ್ವಕ್ಕೆ ಪೇಸಿ ಶ್ರಾವಕ ವ್ರತಂಗಳ ನೇಱಿಸಿಕೊಂಡು ದೃಢವ್ರತಿಯಪ್ಪುದುಂ ಧನದಮಹಾರಾಜಂ ರಾಗದಿಂ ದಿರ್ಪುದುಂ] [1] ॥ ೫೮

ದೊರೆಕೊಳ್ಳದ ಜಿನಧರ್ಮಂ
ದೊರೆಕೊಂಡುದು ಧನದಭೂಪನಿಂದೆನಗೆಂದಾ ।
ದರದಿಂ ಸಂಘಶ್ರೀ ಸುರ
ನರಪೂಜಿತಜಿನಪದಾಬ್ಜಮಂ ನಂಬುಗೆಯಿಂ ॥ ೫೯

ಪೊರ್ದಿ ಮತ್ತಿನ ಕುಮಾರ್ಗಾಳಾಪಮಂ ಪತ್ತುವಿಟ್ಟು ಧನದ ಮಹಾರಾಜಂಗೆ ಪರಮಮಿತ್ರನಾಗಿ ಸಲುತ್ತುಮಿರ್ದೊಂದುದಿವಸಂ [ಅರಸನ ವಂಶಾವತಾರಮಂ ತದ್ರಾಜಧಾನಿಗೆ ಪ್ರತಿಪಾಲಪುರಮೆಂಬ ಪೆಸರಾದ ಕಾರಣಮುಮಂ ಬೆಸಗೊಳ್ವೆನೆಂಬರ್ತಿಯಿಂದೋಲಗಂಗೊಟ್ಟಿರ್ದ ಸಮ್ಯಕ್ತ್ವಚೂಡಾಮಣಿಗೆ ಪೊಡೆಮಟ್ಟು ವಿನಯದಿಂ ಕೈಗಳಂ ಮುಗಿದು ಬಿನ್ನಪಮೆಂದು ತನ್ನ ಮನದೆಱಕದಿಂ ಬೆಸಗೊಳ್ವುದುಮರಸಂ ಬುದ್ಧಿ ಸಾಗರನೆಂಬ ಪೆರ್ಗಡೆಯ ಮೊಗಮಂ ನೋಡುವುದುಂ ॥ ೬೦

ಅರಸನ ಚಿತ್ತಮನಱಿದೋ
ಸರಿಸದೆ ಸಮ್ಯಕ್ತ್ವಜಲಧಿಯನ್ವಯಮಂ ವಿ ।
ಸ್ತರದಿಂ ಸಂಘಶ್ರೀಗು
ರ್ವರೆಪೂಜ್ಯಂ ನುಡಿದನಂಬುನಿಧಿನಿಸ್ವನದಿಂ ॥ ೬೧

---

1 ಬಾರದಿರ್ದೊಂದು ದಿವಸಮಾಕಾಶದೊಳ್ ಪೊಳೆವ ಯೊಳೆವೆಱೆಯುಂತೆ ತೊಳತೊಳಗುತ್ತ ಪೋಪ ಚಾರಣಋಷಿಯುಂನರಸಂ ಕಂಡು ಸಿಂಹಾಸನದಿಂದಿಳಿದು ವೋಲಗದೊಳಿರ್ದ ಸಮಸ್ತಮುಕುಟಬದ್ಧರ್ವೆರಸು ಭಕ್ತಿಯಿಂ ಪೊಡವಡುವುದುಂ ಸಂಘಶ್ರೀ ತಪದ ಮಹಿಮೆಗಾಶ್ಚರ್ಯಂಬಟ್ಟು ತಾನುಂ ಪೊಡಮಟ್ಟು ಮುನ್ನಮ ರಸಂ ತನಗೆ ಪೇಳ್ವ ಧರ್ಮಶ್ರವಣಮುಮಿಂತು ಮನದೆಗೊಂಡು ನಂಬಿ ಶ್ರಾವಕವ್ರತ ಮಂ ಕೈಕೊಂಡು ಧರ್ಮದೊಳ್ ಧೃಢನಾಗಿ (ಗ)

ಶ್ರೀವಾಸುಪೂಜ್ಯಜಿನನ ಮ
ಹಾವನಿಪಾಲಾರ್ಚಿತಾಂಘ್ರಿಪದಯುಗನ ವರ ।
ಶ್ರೀವರನ ತೀರ್ಥಕಾಲದೊ
ಳೀವಿಭುವಿನ ವಂಶಜಂ ಯಶೋಧರನೆಂಬಂ ॥ ೬೦

ಇಕ್ಷ್ವಾಕುವಂಶಪವಿತ್ರನಂಗವಿಷಯದ ಚಂಪಾಪುರಮನಾಳ್ವನಾತನರಸಿ ಸೌಂದರಿಮಹಾದೇವಿ ಯೆಂಬಳಾಯಿರ್ವರ್ಗಂ ಪುಟ್ಟಿದ ಕುಮಾರರನಂತವೀರ್ಯನುಂ ಪ್ರಿಯಬಳನುಮೆಂಬರಂಗಜಸನ್ನಿಭರವರೊಳ್ ಕೂಡಿ ಯಶೋಧರಮಹಾರಾಜಂ ರಾಜ್ಯಂಗೆಯ್ಯುತ್ತುಮಿರ್ದೊಂದು ದಿವಸಂ ತನ್ನೊಳಿಂತೆಂದು ಬಗೆದಂ ॥ ೬೩

ಪರಮಂಡಲದರಸುಗಳಂ .
ನಿರಾಕುಳಂ ವೀರದಿಂದಮಂಜಿಸಿ ಕಪ್ಪಂ ।
ಬೆರಸು ಬೆಸಕೆಯ್ಸಿಕೊಳ್ಳದ
ರರಸದು ಚತುರಂಗದರಸನನುಕರಿಸಿಕರ್ಗಂ ॥ ೬೪

ಸಕಲಧರಿತ್ರೀತಲಮುಮ
ನಕಳಂಕಚರಿತ್ರನಾಗಿ ಬೆಸಕೆಯ್ಸಿ ಯಶಃ ।
ಪ್ರಕಟಂಮಾಡದೆ ವೈರಿ
ಪ್ರಕರಮನೆಱಗಿಸದನರಸು ವಿರಸಮೆನಿಕ್ಕುಂ ॥ ೬೫

ಭರದಿಂ ಷಟ್ಖಂಡಭೂಮಂಡಲಮನಿದಿರ ನಿಕ್ಷೇಪಮಂ ಬೇಗದಿಂ ಕೊಂ
ಡುರುತೇಜಂ ತೇಜದಿಂದಬ್ಬರಿಸಿ ಪೊರೆದು ಸದ್ಧರ್ಮಮಂ ರಾಜ್ಯಸೌಖ್ಯೋ
ತ್ಕರನಾಗಿರ್ದರ್ದು ಬೆಂಬೀೞದೆ ನರಕದೊಳಾನಂದದಿಂ ಮುಕ್ತಿವೆತ್ತಂ
ಭರದಿಂ ತ್ರೈಲೋಕ್ಯವಂದ್ಯಂ ಬಗೆವೊಡೆ ಧರಣೀನಾಥರಿಂತಾಗವೇಡಾ ॥

ಅದುಕಾರಣದಿಂ ಸಮುದ್ರಮುದ್ರಿತವಸುಂಧರಾಚಕ್ರದೊಳ್ ಕೀರ್ತಿಲತೆಯುಂ ಧರ್ಮಮುಂ ಪೆರ್ಚುವಂತಾಗೆ ರಾಜ್ಯಂಗೆಯ್ಯದರಸಂ ಕಡಬರಸಂ ಪಾದರಸಂ ನಿಶ್ಚಯಮರಸಲ್ಲೆಂದು ತನ್ನೊಳ್ ಭಾವಿಸಿ ರಿಪು

ನೃಪರನಲ್ಲಾಡಿಸಲುಂ ಪ್ರತಾಪಪರರಪ್ಪ ಭೂಪರನೊತ್ತಿ ಕಪ್ಪಂಗೊಳಲುಂ ಭವ್ಯನಿಕರದ ಮನಕ್ಕಾಹ್ಲಾದಮಂ ಮಾಡಲುಂ ಸದ್ಧರ್ಮಮಂ ಬೆಳಗಲುಂ ವಿರೋಧಿನೃಪಸಾಧನಮಂ ಬೆಂಕೊಳ್ಳಲುಂ ಬಗೆದು ॥ ೬೭

ಕರೆದು ನಿಜಮಂತ್ರಿವರ್ಗಮ
ನರಸಂ ಲೇಸಾಗಿ ತನ್ನ ಬಗೆಯಂ ಪೇೞ್ದು ।
ಚರಿಯಾಗೆ ತಡೆದು ನಿಲ್ಲದೆ
ಬರವೇೞ್ದು ಸಮಸ್ತ ಮಕುಟಬದ್ಧರನಾಗಳ್ ॥ ೬೮

ಶರನಿಧಿಗಳ್ ಘೂರ್ಣಿಸುವಂ
ತಿರೆ ತೂರ್ಯರವಂಗಳೆಸೆಯೆ ಜಿನಪೂಜೆಯುಮಂ ।
ನಿರುಪಮಜಿನಾಭಿಷವಮುಮ
ನರಸಂ ನೆಱೆ ಮಾಡಿ ಮೂಱುದಿವಸಂಬರೆಗಂ ॥ ೬೯

ತದನಂತರಮೊಸೆದು ಮಹೀ
ಸುದತೀಶಂ ವೈರಿಭೂಮಿಪಾಲರ ಚಿತ್ತಂ ।
ಬೆದಱೆ ಯಶೋಧರಭೂಪಾ
ಭ್ಯುದಯಂ ಪೊಯ್ಸಿ ಪ್ರಯಾಣಭೇರಿಯನಾಗಳ್ ॥ ೭೦

ದಕ್ಷಿಣದಿಶಾವರಕೆತ್ತಿ ಮಾಳವ ಮಗಧ ಕರ್ಣಾಟ ಗೊಲ್ಲ ಕರಹಾಟ ಗೌಳ ಲಾಟ ಚೋಳ ಚೇರ ಪಾಂಡ್ಯ ಕಳಿಂಗಾದಿವಿಷಯಂಗಳಂ ಸಾಧಿಸಿ ಕಪ್ಪಂಗೊಂಡು ತನಗೆ ಬೆಸಕೆಯ್ವಂತು ಮಾಡಿ ವೆಂಗಿಮಂಡಲಕ್ಕೆ ವಂದು ತದ್ವಿಷಯದೊಳಾದ ಚೆಲ್ವಿಂಗೆ ಸೋಲ್ತನಗಿಪ್ಪೊಡೀವಿಷಯಮೆ ತಕ್ಕುದೆಂದು ತನ್ನ ಮನದೊಳ್ ಬಗೆದು ಸಮಸ್ತಧಾತ್ರೀವಳಯಮುಮಂ ತಾನೊರ್ವನೆ ಪ್ರತಿಪಾಲಿಸಿದನಪ್ಪುದಱಿಂ ಲೋಕಕ್ಕೆ ತನ್ನಳವುಮಂ ಪ್ರಕಟಂ ಮಾೞ್ಪಂತೆ ಪಿರಿದಪ್ಪ ಪೊೞಲಂ ಮಾಡಿ ಪ್ರತಿಪಾಲಪುರಮೆಂದು ಪೆಸರಿಟ್ಟು ಕೊಂಡಾಡಿ ॥ ೭೧

ಸುರುಚಿರರತ್ನಾಳಿಗಳಿಂ
ಸುರರ್ವಿಮಾನಂಗಳೆನಿಪ ಜಿನಭವನವುನಾ ।
ಪುರವರದ ಸುತ್ತಲುಂ ಭೂ
ಸುರತೇಜಂ ಗುಣಕರಂಡಕಂ ಮಾಡಿಸಿದಂ ॥ ೭೦

ತನ್ನಾಳ್ದ ಮಹೀವಳಯದೊ
ಳುನ್ನತಿಯಿಂ ಕೂಡೆ ಪಲವು ಜಿನಮಂದಿರಮಂ ।
ಸನ್ನುತಮೆತಿ ಮಾಡಿದನೆನ
ಲಿನ್ನಾತನ ಧರ್ಮದಳವನೇವಣ್ಣಿಪುದೋ ॥ ೭೧

ಜಿನಪತಿಯೆ ದೇವನಾಜಿನ
ಮುನಿಗಳ್ ಸದ್ಗುರುಗಳಾಜಿನಾಧೀಶ್ವರಭ ।
ಕ್ತನೆ ನಂಟನೆಂಬನಿನ್ನಾ
ಜನಪನ ಸಮ್ಯಕ್ತ್ವದಳವನೇವಣ್ಣಿಪುದೋ ][1] ॥ ೭೪

ಸುರರ ವಿನೋದದೊಳ್ ಜಿನರ ಪೂಜೆಯೊಳುತ್ತಮಮಪ್ಪ ಧಾರಿಣೀ
ಸ್ತುತರೆನಿಸಿರ್ದ ದಿವ್ಯಮುನಿನಾಥರ ಸೇವೆಯೊಳ್ಸದೆ ಭವ್ಯಸಂ
ತತಿಯ ವಿನೋದದೊಳ್ ಪದಪದಾರ್ಥವಿಚಾರಣೆಯೊಳ್ ತಗುಳ್ದು ಭೂ
ಪತಿ ಬುಧಗೋಷ್ಠಿಯೊಳ್ ಜನಪರೋಲಗದೊಳ್ ಮನವೊಲ್ದು ನಿಚ್ಚಲುಂ॥

---

[1] ಧನದಮಹಾರಾಜನನ್ವಯುರಂ ಮುಂಡಿಯು ವಂಶನೆಂಬಿದಕ್ಕೆ ಕಾರಣ ಮುಮಂ ತದ್ರಾಜಧಾನಿಗೆ ಪ್ರತಿಪಾಲಪುರಮೆಂಬ ನಾಮಮಾದ ವೃತ್ತಾಂತಮುಮ ನರಸನ ಸನ್ನಿಧಾನದೊಳ್ ಬುದ್ಧಿಸಾಗರನೆಂಬ ಪೆರ್ಗಡೆಯು ಬೆಸಗೊಳ್ವುದು ಸಂಘ ಶ್ರೀಗೆ ತಿಳಿವಂತಾಗಲೆಂತೆಂದು ಪೇಳ್ದಂ. ವಾಸುಪೂಜ್ಯಭಟ್ಟಾರಕರ ಕಾಲದೊಳೀ ಮಹೀಶ್ವರನ ವಂಶದೊಳ್ ಯಶೋಧರನೆಂಬ ಮಹಾಮಂಡಲಿಕಂ ಇಕ್ಷ್ವಾಕುವಂ ಶತಿಲಕನನಂತವೀರ್ಯನುಂ ಶ್ರೀಧರನುಂ ಪ್ರಿಯಂಬಕನುಮೆಂಬ ಮೂವರ್ಮಕ್ಕಳ್ವೆ ರಸಂಗ ವಿಷಯದ ಚಂಪಾಪುರಮನಾಳುತ್ತಮಿರ್ದು ಪ್ರತಾಪದಿಂ ದಕ್ಷಿಣದೇಶಮಂ ಸಾಧಿಸಿ ತನಗೆ ಪಡೆದ ವೆಂಗಿಮಂಡಲಂ ಚೆಲುವನಪ್ಪುದಱಿಂದೆನಗೀದೇಶಮುಮಂ ಪ್ರತಿಪಾಲಿಸಿದನಪ್ಪುದಱಿಂ ಪ್ರತಿಪಾಲಪುರಮೆಂಬ ಪೆಸರನಿಟ್ಟು (ಗ).

[ಕಾಲಮಂ ಕಳೆಯುತ್ತಿರ್ದೊಂದುದಿವಸಂ ಸಕಲಾಂತಃಪುರ ಪುರಂಧ್ರಿಯರ್ವೆರಸು ವನಕ್ರೀಡೆಗೆ ಪೋಗಿ ॥ ೨೬

ಓಳಿಯೊಳಂಗಸಂಭವನ [1] ಬೀಡಿನ ಕೆಂಗುಡಿಯಂತೆ ಸುತ್ತಲುಂ
ಲೀಲೆಯಿನಂಕುರಪ್ರಕರದಿಂ ಮಿಡಿಯಿಂ ತಳಿರಿಂ ಮುಸುಂಕಿ ಭೂ
ಪಾಲನ ಸೈನ್ಯಮಂ ಪದೆಪಿನಿಂದಿದಿರ್ಗೊಳ್ವವೊಲಿರ್ದ ಭೂ
ಜಾಳಿಗಳೊಪ್ಪಮಂ ಮನದ ಸೋಲದಿನಚ್ಚರಿವಟ್ಟು ಭೂಭುಜಂ ॥ ೨೭

ನೋಡುತ್ತುಂ ನಂದನವನದೊಳಗೆ ಪೊಕ್ಕು ಜಲಕ್ರೀಡೆಯುಮಂ ಪಿರಿದು ಪೊತ್ತಾಡಿ ನೆಱೆಯೆ ಶೃಂಗಾರಂಗೆಯ್ದು ಗಂಧಸಿಂಧುರಾರೂಢನಾಗಿ ದಿವಿಜೇಂದ್ರಲೀಲೆಯಿಂ ಪುರಕ್ಕೆ ಮಗುೞ್ವಾತಂ ರಾಜಪತ್ನಿಯರುಂ ವಿಳಾಸಿನಿಯರುಂ ವಿನೋದದಿಂ ತಿರಿಯೆ ತಱಂಟಾದ ಮಾವಿನ ಬಱುಗೊಂಬುಗಳಂ ಕಂಡು ಬೆಱಗಾಗಿ ॥] [2] ೨೮

ತಳಿರಿಂದೊಪ್ಪುವ ಚೂತಭೂಜನಿಕರಂ ಮತ್ಸೈನ್ಯದಿಂ ನೋಡೆ ನೋ
ಡೆ ಲಯಕ್ಕೆಯ್ದಿದುವಕ್ಕಟಾ ನರರ ಪೆಂಪುಂ ಶ್ರೀಯುಮಾಯುಷ್ಯಮುಂ
ಬಳಮುಂ ಪೆಂಡಿರ ಭೋಗಮುಂ ಮಹಿಮೆಯುಂ ಸೌಭಾಗ್ಯಮುಂ
ಭೋಗಮುಂ
ತಿಳಿವಂದೀತೆಱದಿಂದೆ ಘುಸ್ಮ್ರನೞುಗುಂ ಕೇಳಲ್ಲಿ ಸಂದೇಹಮೇ ॥ ೨೯

ಬೂತಿನ ಮಾತಂ ನಂಬಿ ಕಾಳಗಕ್ಕೆ ಪೋಪನುಂ, ಕಳ್ಳನೊಡಗೂಡಿ ವ್ಯವಹಾರಕ್ಕೆ ಪೋಪನುಂ, ಸೋಂಬನೊಡಗೂಡಿ ಕೆಲಸಂಗೆಯ್ಯೆದಿರ್ಪನುಂ [3] ಬಂದಿಕಾಱನ ಮಾತಂ ನಂಬಿ ಸಂಚಿತಧನಮಂ ತೋರ್ಪನುಂ, ತಳಾಱನ ಮಾತಂ ನಂಬಿ ಮನದ ಪೊಲ್ಲಮೆಯಂ ಪೇೞ್ವನುಂ,

---

[1] ಸನ್ನಿಭನ (ಕ. ಖ.)

[2] ರಾಜ್ಯಂಗೆಯ್ಯುತ್ತಮಿರ್ದೊಂದು ದಿವಸಂ ವನಕ್ರೀಡೆಯನಾಡಿ ಮಗುೞ್ದು ತಂ ವಿಲಾಸಿನಿಯರಿಂ ಪೊಡವಾಸದೊಳ್ ಪಂಡಿರಿಂ ತಿಱಿಯೆ ತಱಂಟಾದ ಮಾವಿನ ಶಾಖೆಯಮರಂಗಳಂ ಕಂಡು (ಗ).

[3] ಕೆಲಸಂಗೆಯ್ವ ವಿಪ್ರನುಂ (ಕ. ಖ.)

ಧೂರ್ತನಂ ನಂಬಿ ಬಾವಿಯೊಳ್ ಬೀೞ್ವನುಂ, ಟಕ್ಕನ ವಚನಮಂ ನಂಬಿ ನೆರೆಯೂರ್ಗೆ ಪೋಪನುಂ, ಡೊಂಬನ ಮಾತಂ ನಂಬಿ ಕೂಸುಗುಡುವನುಂ ಪಂಚೇಂದ್ರಿಯಂಗಳ ವಶಮಾಗಿ ಸಂಸಾರದಲ್ಪಭೋಗಮಂ ಪತ್ತಿ ಧರ್ಮಮಂ ಬಿಟ್ಟು ನೆಗೞ್ವನುಂ, ದುಃಖಕ್ಕಂ ದುರ್ಯಶಕ್ಕಂ ಭಾಜನನಕ್ಕು
ಮಲ್ಲದೆ ಮಱಿದಪ್ಪೊಡಂ ಸುಖಮನೆಯ್ದಲಾಱಂ ॥ ೮೦

ಜಲಮಂ ಕಡೆದು ಧರಿತ್ರೀ
ತಳದೊಳ್ ಬೆಣ್ಣೆಗೊಳಲಿರ್ಪ ನರನಂ ವಿಷಯಂ ।
ಗಳೊಳಳಸಿ ನಿಂದು ಸೌಖ್ಯ
ಕ್ಕಳಪುವನುಂ [1] ಮರುಳ ಬಾಲಪಾಗದೆ ಪೋಗಂ ॥ ೮೧

ಮಿಂಚಿನ ಬೆಳಕಂ ನಂಬಿ ಕ
ರಂ ಚಲದಿಂ ಬಟ್ಟವೋಪೆನೆಂಬನುಮುಳಿಪಿಂ ।
ಪಂಚೇಂದ್ರಿಯಸುಖಮಂ ಪಿತಿ
ದಂಚಿತಮೋಕ್ಷಕ್ಕೆ ಪೋಪನೆಂಬವನೆಗ್ಗಂ ॥ ೮೨

ಒಡೆಗೆಱೆಯುಂ ನಂಬಿ ಮನಂ
ಬಿಡೆ ಬೆಳಸಿಂಗಾಸೆಗೆಯ್ವನುಂ ಸಂಸೃತಿಯೊಳ್ ।
ಕಿಡುವೊಡಲಂ ನಂಬಿ ಸುಖ
ಕ್ಕೊಡರಿಸುವವನೆಯ್ದಲಾಱನೆಂತುಂ ಫಲಮಂ ॥ ೮೩

ಎನಗೆಂದುಂ ಸಾವಿಲ್ಲೆಂ
ದನವರತಂ ಸೊರ್ಕವೇಡ ಸಾವುಳ್ಳವನೊ ।
ಯ್ಯನೆ ಸಾವ ಮನುಜರಂ ಕಂ
ಡೆನಗಂ ಸಾವುಂಟು ಬೇಗಮೆಂದಱಿಗಱಿವಂ ॥ ೮೪

---

1 ಎಳಸುವನುಂ (ಗ).

ಸಾವವರಂ ಕಂಡಿರ್ದುಂ
ಸಾವೆಯ್ದಿದ ನರರನೊಯ್ದು ಸುಟ್ಟುಂ ಮತ್ತಂ[1] ।
ಸಾವೆನಗಿಲ್ಲೆಂದಿರ್ಪನೆ
ಗಾವಿಲನಾರಯ್ದು ನೋಡುವೆಂದುರ್ವರೆಯೊಳ್ ॥ ೮೫

ಸಿರಿ ಕೆಟ್ಟು ಕರ್ಮವಶದಿಂ
ತಿರಿವವರಂ ಕಂಡು ಕಂಡು ಶಾಶ್ವತವೆಂದಾ ।
ಸಿರಿಯುಂ ನಚ್ಚಿರ್ಪಾತಂ
ಮರುಳಿಳೆಯೊಳ್ ಮತ್ತೆ ಮರುಳ್ಗ ಕೋಡೆರಡೊಳವೇ ॥ ೮೬

ಮುನ್ನಿನ ಚಾಗಿ[2] ಗಳಾವೆಡೆ
ಮುನ್ನಿನ ವಿಭವಾನ್ವಿತರ್ಕಳಾವೆಡೆ ಮತ್ತಂ ।
ಮುನ್ನಿನ ಸಧರ್ಮ[3] ರಾವೆಡೆ
ಮುನ್ನಿನ ಚಕ್ರೇಶರೆಲ್ಲಿದರ್ ವಸುಮತಿಯೊಳ್ ॥ ೮೭

ಅಱಿತದೊಳು ಪಿರಿಯನೆಂಬಂ
ಕುಱಿಯಾಗದೆ ನಂಬಿ ಕಿಡದೆ ಸಂಸೃತಿಯುಸಿದಂ ।
ತೊಱೆದು ತಪದಿಂದೆ ತನ್ನಂ
ಮೆಱೆದು ಸದಾಚಾರನಾಗಿ ನೆಗೞಲ್ವೇಡಾ ॥ ೮೮

ನಿಲ್ಲದ ತನುವನಿದಂ ತಳು
ವಿಲ್ಲದೆ ತಪದಿಂದೆ ತವಿಸಿ ಕೈವಲ್ಯಶ್ರೀ ।
ವಲ್ಲಭನಾಗಲ್ವೇಡಾ
ಬಲ್ಲಿಂ ಸಂಸಾರದಱುವನೆಂಬ ಮನುಷ್ಯಂ ॥ ೮೯

---

1 ನರರನೆಯ್ದಿ ಪುಟ್ಟಿರ್ದುಂ ತಾ (ಗ).

2 ಭೋಗಿ (ಗ). 3 ಸೋದರ (ಗ).

ಎಂದು ಭಾವಿಸಿ ಪಟ್ಟದರಸಿಯರ ರೂಪುಗಳಂ ನೋಡುವುದುಂ, ಎಮಗೆ ಕಾಂಕ್ಷೆಯಂ ಮಾಡಿದಿರಪ್ಪೊಡೆ ನಿರ್ಮ್ಮಾತ್ಮಕಾರ್ಯಕ್ಕೆಡೆಯಿಲ್ಲದೆ ಸಮಸ್ತಾಗಲಿಱಿಯದೆಂದು ಪೇೞ್ವಂತೆ ಕೊಂಕಿದ ಕುರುಳ್ಗಳುಮಂ [1] ಎಮಗೆಱಕಂಮಾಡಿದಿರಪ್ಪೊಡೆ ಕೀನಾಶನ ಸುತ್ತುವಲೆಗೊಳಗಪ್ಪಿರೆಂದು ಪೇೞ್ವಂತಿರ್ದ ಮೇಖಳೆಯುಮಂ, ಎಮಗಪೇಕ್ಷೆಮಾಡಿದಿರಪ್ಪೊಡೆ ಕರ್ಮರಾಜಂ ಪಿಡಿಯಿಂದಲ್ಲಾಡಿಸದೆ ಮಾಣನೆಂದು ಪೇೞ್ವಂ[ತಲ್ಲಾಡುವ [2] ಮೇಲುದುಮಂ, ಎಮಗೆಱಗಿದಿರಪ್ಪೊಡೆ ಅಂತಕನಿಂದಿಱುಂಕೆಪಡುವಿರೆಂದು ಪೇೞ್ವಂತಿರ್ದ ತೊಡೆಯೊಳಿಱುಂಕಿದ ನಿಱಿಯುಮಂ, ಎಮಗೆ ಮನಂಗೊಟ್ಟರಪ್ಪೊಡೆ ಸಂಸೃತಿಯ ಕೈಗೊಳಗಪ್ಪಿರೆಂದು ಪೇೞ್ವಂತಿರ್ದ ತೋಳುಮಂ, ಎಮಗೆಚ್ಚರ್ತಿರಪ್ಪೊಡೆ ನಾರಕರ ಕಾಲ ತುಳಿಪಕ್ಕೊಳಗಪ್ಪಿರೆಂದು ಪೇೞ್ವಂತಿರ್ದ ಚರಣಾರವಿಂದಂಗಳುಮಂ] ಎಮಗೆ ಮೋಹಿಸಿದಿರಪ್ಪೊಡೆ ನಿರ್ಬುದ್ಧಿಗಳಪ್ಪಿರೆಂದು ಪೇೞ್ವಂತಿರ್ದ ದೊಡ್ಡಿದುವಪ್ಪ ಮುಡಿಗಳುಮಂ, ಎಮಗೆ ಸ್ನೇಹಂಗೆಯ್ದಿರಪ್ಪೊಡೆ ಕುಮಾರ್ಗಕ್ಕೆ ಸಲ್ವಿರೆಂದು ಪೇೞ್ವಂತೆ ಕೆಳಗಿೞಿದ ಬಾಸೆಗಳುಮಂ, ಎಮಗೆ ಬಗೆಗೊಟ್ಟರಪ್ಪೊಡೆ [3] ನರಕಕ್ಕಿೞಿವಿರೆಂದು ಪೇೞ್ವಂತೆ ನಸುಜೋಲ್ದ ಮೊಲೆಗಳುಮಂ, ಎಮಗೆ ಪತ್ತುಗೆಯಂ ಮಾಡಿದಿರಪ್ಪೊಡೆ ಸುಖದೊಳ್ ನೆಲೆಸದೆ ತಿರಿವಿರೆಂದು ಪೇೞ್ವಂತೆ ಸಂಚಳಿಸುವ ಕಣ್ಗಳುಮಂ, ನೋಡಿ ವೈರಾಗ್ಯಂ ಪೆರ್ಚೆ, [ಪೆಱರ ಮನೆಯ ಮದುವೆಯೊಳ್ ಲೋಗರಂ ನಂಟುಮಾಡಿಕೊಳ್ವದ

1 ಎಮಗೆಳಸಿದಿರಪ್ಪೊಡೆ ಮೇಲಿಸಿಯಂತಾಗದೆ ಮಾಣರೆಂದು ಪೇಳ್ವಂತೆ ಬಸವಾದ ನಡುವುಮಂ ನಮಗಾಸೆಗೆಯ್ದಿರಪ್ಪೊಡೆ ಸಂಸಾರದೊಳ್ ಸುಳಿಯದೆ ಮಾಣಿರೆಂದು ಪೇಳ್ವಂತೆ ಸುಳಿದಿರ್ದ ಪೊಕ್ಕುಳುಮಂ ಎಮಗೆ ನಚ್ಚಿದಿರಪ್ಪೊಡೆ ಜನನ ಪಾಶಂ ಪೊತ್ತದೆ ಪೋಗದೆಂದು ಪೇಳ್ವಂತಿರ್ದ ಕೊರಲ ರೇಖೆಗಳುಮಂ ಎಮಗೆಱಗಿದಿರಪ್ಪೊಡೆ ಮೃತ್ಯುರಾಜನ ಪೊಳೆವ ಸರಳ್ಗಳು ಕೇಳ್ವವೆ ಮಾಣವೆಂದು ಪೇಳ್ವಂತಿರ್ದ ದಂತಪಂಕ್ತಿಗಳುಮಂ ಎಮಗಾಸೆಗೆಯ್ದಿರಪ್ಪೊಡೆ ಕೃತಾಂತನ ಕೂರಲಗಿಂಗೊಳಗಪ್ಪಿರೆಂದು ಪೇಳ್ವಂತಿರ್ದ ಸೆಳ್ಳುಗುರುಗಳುಮಂ (ಗ).

2 ಪೇೞ್ವಂತಿರ್ದ ಆಭರಣಗಳುಮಂ (ಗ).

3 ಕೈಮೊಗ್ಗಿದಿರಪ್ಪೊಡೆ (ಗ).

ವನುಂ ಶಾಶ್ವತಮಲ್ಲದೊಡಲುಮಂ ನಿರಂತರಮಲ್ಲದ ಧನಮುಮಂ ತವಿಸಿ ಧ್ರುವಮಪ್ಪ ಸುಖಮಂ ಪಡೆಯದವನುಂ ಬುದ್ಧಿವಂತರಲ್ಲರೆಂದು ತನ್ನೊಳ್ ನುಡಿದು ಸಂಸಾರವಳ್ಳಿಯುಮಂ ಬೇರ್ವೆರಸಿ ಕಿೞ್ತೀಡಾಡುವ ಕಜ್ಜಮನೆತ್ತಿ ಕೊಂಡು] ರಾಜಮಂದಿರಕ್ಕೆ ವಂದು [ಮಱುದಿವಸಮನಂತವೀರ್ಯಂ ಮೊದಲಾದ] ಕುಮಾರರಂ ಬರಿಸಿ [ಮುಂದೆ ಕುಳ್ಳಿರಿಸಿ ಯಶೋಧರಮಹಾ ರಾಜನಿಂತೆಂದಂ ॥ ೯೦

ಸಕಳೋರ್ವೀಚಕ್ರಮಂ ಸಾಧಿಸಿ ಭುಜಬಲದಿಂ ತಾಳ್ದು ವೀರತ್ವದಿಂ ಭೂ
ಪಕದಂಬಂ ಹಸ್ತಕಂಜದ್ವಯಮುಕುಳಿತರಾಗಿರ್ದು ಕೈವಾರದಿಂ ಸೇ
ವಕರಾಗಿರ್ಪಂತು ಮಾಡಿ ಪ್ರಕಟಿಸಿ ಜಸಮಂ ವಾರ್ಧಿಯುಂ ತಾಪಿನಂ ಶ
ತ್ರುಕದಂಬಂ ಬೆರ್ಚಿ ಕಪ್ಪಂದಿಱಿಸಿದೆನೊಲವಿಂದಿನ್ನೆಗಂ ಲೀಲೆಯಿಂದಂ॥

ರಾಜ್ಯಂಗೆಯ್ದಿನ್ನೆನಗೆ ತಡೆಯಲೆಡೆಯಿಲ್ಲ ಮುಕ್ತಿಶ್ರೀಯುಮಂ ಕುಡುವ ಜಿನೇಂದ್ರಪದಪದ್ಮಂಗಳಂ ಶರಣ್ಬುಗಲ್ವೇೞ್ಪುದು ಧರಾಭಾರಮಂ ಕೈಕೊಳ್ಳವೆಂಬುದುಮನಂತವೀರ್ಯನಿಂತೆಂದಂ ॥][1] ೯೧

ದೇವ ಮರುಳಲ್ಲೆನೆನಗಂ[2]
ದೇವರ್ ಕೈಕೊಂಬ[3] ತಪಮೆ ಸಾಲ್ಗುಂ ಮುಕ್ತಿ ।
ಶ್ರೀವನಿತೆಯಲ್ಲದಳಿಪಿ ಮ
ಹೀವನಿತೆಗೆ ಸೋಲ್ತು ಕಿಡುವ ಗಾಂಪನೆನಲ್ಲಂ[4] ॥ ೯೨

[ಈಭವದ ಸುಖಕ್ಕೆನಗೆ ಮ
ಹಾಭಯಮೇಗೆಯ್ದುಮೊಲ್ವೆನಲ್ಲಂ ನೆಱೆ ಧಾ ।
ತ್ರೀಭಾರಮನವನೀಶ ಧ
ರಾಭಾರಮನಾಂತು ಕಿಡಿಸಲಾಱೆಂ ಸುಖಮಂ ॥ ೯೪

---

[1] ರಾಜ್ಯಮಂ ಕೈಕೊಳ್ಳಿಮೆಂಬುದುಂ ಅನಂತವೀರ್ಯನುಂ ವಾತ್ಸಲ್ಯರತ್ನಾಕರನುಮಿಂತೆಂದು ಸೇಳ್ದರ್ (ಗ).

[2] ಮರುಳಲ್ಲದೇವಗಂ (ಗ). [3] ಕೈಕೊಳ್ವ (ಗ), [4] ಗಾಂಪವರೆಲ್ಲಂ (ಗ).

ಎನಗೆ ದಯೆಗೆಯ್ವುದವನೀ
ವನಿತೇಶ್ವರ ದಿವ್ಯಮಪ್ಪ ಜಿನದೀಕ್ಷೆಯೆ ಸಾ |
ಲ್ಗನಿತೆಂಬುದುಂ ನೃಪಂ ಪ್ರಿಯ
ತನಯನ ಮಾತಿಂಗೆ ಪೆರ್ಚಿ ಮನದಾದರದಿಂ || ೯೫

ಈತಂ ಸಂಸಾರಕ್ಕತಿ
ಭೀತಂ ರಾಜ್ಯಕ್ಕೆ ಮೋಹಮುಳ್ಳವನಲ್ಲಂ
ಭೂತಳಭಾರಮನೆತ್ತುವೆ
ನೀತನ ತಮ್ಮಂಗೆ ತಡೆಯದೀಗಳ್ ಮುದದಿಂ || ೯೬

ಎಂದು ಯಶೋಧರಮಹಾರಾಜಂ ಶ್ರೀಧರಕುಮಾರನ ಮೊಗಮಂ ನೋಡಿ ವೆಂಗಿಮಂಡಲಂಮೊದಲಾದ ಸಮುದ್ರಮುದ್ರಿತಮಹೀವಳಯ ಮೆಲ್ಲಮಂ ಕೊಂಡು ರಾಜ್ಯಲಕ್ಷ್ಮೀಮನೋಹರನಾಗಿ ಸುಖದಿಂದಿರ್ಪುದೆಂ ಬುದುಂ ವಾತ್ಸಲ್ಯರತ್ನಾಕರಂ ಮುಗುಳ್ನಗೆನಕ್ಕಿಂತೆಂದಂ || ೯೭

ದೇವರ್ ಧರಿಯಿಸುವಿಳಯಂ
ಭೂವಳಯದೊಳಮ್ಮ ವಂದಿಗರ್ ತಮ್ಮಳವಂ |
ಭಾವಿಸದೆ ಸೊಕ್ಕಿ ಪೆಂಪಿಂ
ಗಾವಿಲತನದಿಂದ ಮುಕ್ಕಿ ಧರಿಯಿಸಲಳವೇ || ] ೯೮

ದೇವರ್ ದಯೆಗೆಯ್ವೊಡೆ ಸ
ದ್ಭಾವದಿನಪವರ್ಗಲಕ್ಷ್ಮಿಯುಂ ತತ್ಕ್ಷಣದಿಂ |
ದೀವ ಜಿನರಾಜದೀಕ್ಷೆಯ
ನೀವುದು ಪೆಱತೇವುದೆಮಗೆ ನಾಡುಂ ಬೀಡುಂ || ೯೯

ಕಳವೆಯಕೂೞುಮಂ ತಿಳಿದುಪ್ಪಮುಮಂ ಬಿಸುಟ್ಟು ನುಚ್ಚುಗೂೞುಮನೆಣ್ಣೆಯುಮನುಣ್ಬನುಮಂ ಬಾೞೆಯ ಪಣ್ಣುಮಂ ಖಂಡಶರ್ಕರೆಯುಮಂ ಬಿಸುಟು ಎಱೆಮ ಮಣ್ಣಂ ಮೆಲ್ವನುಮಂ ಪಾಸುಮಂ ಬಿಸುಟ್ಟು ಸಱಿಯ ಮೇಲೆ ಪಡುವನುಮಂ ನಂಟರುಮಂ ಕೆಳೆಯರು

ವಮಂ [1] ಬಿಟ್ಟು ದಾಯಿಗರಂ ಪೊರ್ದುವನುಂ ಕುದುರೆಯುಮನಾನೆಯುಮ
ನೊಲ್ಲದೆ ನಾಯನೇಱುವನುಂ ಅಮೂಲ್ಯಮಪ್ಪ ಅಣುವ್ರತಮಹಾವ್ರತಂ
ಗಳುಮನುದಾಸೀನಂಗೆಯ್ದು ಸಂಸಾರದಲ್ಪಸುಖಮಂ ಪೊರ್ದುವನುಂ
ಮರುಳರಲ್ಲದೆ ಚತುರರಲ್ಲರ್ ॥ ೧೦೦

[ಅದಱಿಂ ಕೈವಲ್ಯಶ್ರೀ
ಸುದತಿಯನಾರ್ತೀವ ಜೈನದೀಕ್ಷೆಯನೆ ಶುಭಾ ।
ಭ್ಯುದಯಮನೆ ಕುಡುವುದಲ್ಲದೆ
ವಿದಿತಂ ದಯೆಗೆಯ್ಯಬೇಡ ರಾಜ್ಯಶ್ರೀಯಂ] ॥ ೧೦೧

ಎನಗೆಲ್ಲನಿತುಂ ಸಾಸವೆ
ಯನಿತುಂ ಸೀರನಿತು ಮೋಹಮಿಲ್ಲವನಿಯುಮೇ ।
ಲೆನಗೆ ಪಿರಿದಪ್ಪ ಮೋಹಂ
ಜಿನದೀಕ್ಷೆಯೊಳಂಟು ದೇವ ನಿಶ್ಚಯದಿಂದಂ ॥ [2] ೧೦೨

ಎಂದು [ಪಲವಂ ನುಡಿಯದೊಂದನೆ ಪರಿಚ್ಛೇದಮಾಗಿ ನುಡಿದ
ಮಾಣ್ಬುದುಂ ಯಶೋಧರಮಹಾರಾಜಂ ಸಮ್ಯಕ್ತ್ವಚೂಡಾಮಣಿಯು
ಮನದ ನಿರ್ಮಳಿಕೆಯನಱಿದು ಪೆಱತಂ ನುಡಿಯದೀಪ್ರಿಯಬಂಧು
ಕುಮಾರಂಗೆ ಪಟ್ಟಮಂ ಕಟ್ಟಿ ಧರಾಭಾರಮಂ ಕೊಟ್ಟು ಮೆಯ್ದುಖಕ್ಕೆ
ಳಸದನಂತವೀರ್ಯಕುಮಾರನುಂ ವಾತ್ಸಲ್ಯರತ್ನಾಕರನುಂಬೆರಸು ಪೊ
ೞಲಂ ಪೊಱಮಟ್ಟು ಪೋಗಿ] [3] ವಿಶ್ವಸೇನರೆಂಬಾಚಾರ್ಯರಲ್ಲಿ ಜಿನದೀ
ಕ್ಷೆಯಂ ಕೈಕೊಂಡು ಸಕಳಶ್ರುತಮುಮನೋದಿ ॥ ೧೦೩

1 ನಂಟರ ಕೆಳೆಯಂ (ಗ)

2 ಎಮಗೆ ಮನದೊಳಗೆ ಕೇಳ್ ಸಾ । ಸವೆಯನಿತುಂ ಮೋಹಮಿಲ್ಲ ಭೂವನಿತೆ ಯುಮೇ ॥ ಲೆಮಗೆ ಪಿರಿದಪ್ಪ ಮೋಹಂ । ಭುವನೇಶ್ವರ ॥ ಜೈನದೀಕ್ಷೆಯೊಳ್ ನಿಷ್ಠೆಯದಿಂ (ಗ)

3 ಮಱುಮಾತಿಂಗೆಡೆಯಿಲ್ಲದಂತು ನುಡಿವುದುಂ ಪ್ರಿಯಂಬಕಕುಮಾರಂಗೆ ಪಟ್ಟಮಂ ಕಟ್ಟಿ ಮೂವರುಂ (ಗ)

ಗುರುಪದಸೇವೆಯಿಂದಮಳಚಿತ್ತದಿಸುಜ್ಜ್ವಲಮಪ್ಪುದೊಂದುದು
ರ್ಧರಚರಿತಂಗಳಿಂದಮೆರ್ದ ಸಂಯಮದಿಂ ಮನದೋಜೆಯಿಂ ಮನಂ
ಮುರಿಯದೆ ಬಾಹ್ಯದಿವ್ಯತಪದುನ್ನತಿಯಿಂ ಪಲವುಂ ಪರೀಷಹೋ
ತ್ಕರದೊಳಮಿರ್ದ ಬಾಧೆಗೆ ಮನಂಗಿಡದೂರ್ಜಿತಮಪ್ಪ ಧೈರ್ಯದಿಂ ॥

[ಇವರ್ಗೆ ದೊರೆಯಿಲ್ಲ ಬಗೆವೊಡೆ
ಭವನದೊಳಂದರ್ತಿವೆರಸು ಭಕ್ತಿಯ ಭರದಿಂ ।
ಪ್ರವರಗುಣಾಢ್ಯರ್ ಬಣ್ಣಿಸೆ
ವಿವಿಧಗುಣರ್ ತಪದೊಳುತ್ತರೋತ್ತರಮಾದರ್ ॥ ೧೦೫

ಮುನ್ನಿನ ಸಿರಿಯಂ ನೆನೆಯದೆ
ಮುನ್ನಿನ ಲೀಲೆಗಳನೆಯ್ದೆ ಪಂಬಲಿಸದೆ ಭೂ ।
ಪೋನ್ನತರರಟ್ಟ(?) [1] ತಪದೊಳ್
ಮುನ್ನಿನ ಸಚ್ಚರಿತರೋಜೆಗೆಣೆಯನೆ ನೆಗಳ್ದರ್] ॥ ೧೦೬

ಬೆಂಬೀೞದೆ ಪೆಱಪೆಱತಂ
ಪಂಬಲಿಸದೆ ಕರ್ಮವೈರಿಗೆಡೆಗುಡದೆ ಶರೀ ।
ರಂ ಬಡವಾದಪುದೆನ್ನದೆ
ಡೊಂಬಿಲ್ಲದೆ ಶುದ್ಧವೃತ್ತಿಯೊಳ್ ನೆಱೆ ನೆಗಳ್ದರ್ ॥ ೧೦೭

ಎಂತುಟು ಜಿನೇಂದ್ರವಚನಮ
ದಂ ತಪ್ಪದೆ ಪೆಱರ ಪೂಜೆಗೆಳಸದೆ ಸುಖಮಂ ।
ಚಿಂತಿಸದೆ ನಿರ್ವೃತಿಶ್ರೀ
ಕಾಂತೆಯ ಕೂಟಮನೆ ಬಯಸಿ ನೆಗಳ್ದರ್ ತಪದೊಳ್ ॥ ೧೦೮

ಪಾವಸೆಗಲ್ಲಂ ಮೆಟ್ಟಿದಂತೆ ಸನ್ಮಾರ್ಗಮಂ ಮೀಱಿ ಪರಿಯದೆ [ತ್ರಿದಂಡರಹಿತರುಂ ತ್ರಿಶಲ್ಯವರ್ಜಿತರುಂ ಚತುಷ್ಕಷಾಯದೂರರುಂ ತ್ರಯೋದಶವಿಧಚಾರಿತ್ರಸಂಪನ್ನರುಂ ಪಂಚಾಚಾರಯುಕ್ತರುಂ ದಶ

1 ಭೂಪೋನ್ನತರದಬಿಟ್ಟ (ಕ)

ಧರ್ಮಧರರುಮಾಗಿ] ಗುರುಗಳಾಜ್ಞೆಯಿಂ ಗುರುಗಳನಗಲ್ದು ವಿಹಾರಿಸುತ್ತುಂ ಬಂದು ಜಟಾಶಿಖರಮೆಂಬ ಪರ್ವತಮನೆಯ್ದಿ ತದ್ಗಿರಿಯೊಳ್ ಯಶೋಧರಭಟ್ಟಾರಕರುಮನಂತವೀರ್ಯಮುನಿಪುಂಗವನುಂ ಅಷ್ಟಕರ್ಮಮಂ ಕಿಡಿಸಿ [1] ಪರಮಶ್ರೀಮನಃಪ್ರಿಯರಾದರಕಳಂಕರೆನಿಸಿದ ಶ್ರೀಧರಾಚಾರ್ಯರಾಗಿರಿಯೊಳುಗ್ರೋಗ್ರಸುಪ್ಪ ತಪದೊಳ್ ನೆಗಱುತ್ತುಮಿರ್ದರನ್ನೆಗಂ ॥ ೧೦೯

ಪ್ರತಿಪಾಲಪುರಮುಮಂ ಸಂ
ತತಮವನೀತಳಮುಮಂ ಮಹೋನ್ನತಿಯಿಂದು ।
ದ್ಧತವೈರಿದರ್ಪದಳನಂ
ನುತಸತ್ಪ್ರಿಯಬಲಕುಮಾರಕಂ ಪಾಲಿಸುತುಂ ॥ ೧೧೦

[ಸುಖಸಂಕಥಾವಿನೋದದಿಂದಿರ್ಪುದುಮೊಂದುದಿವಸಂ ವನಪಾಲಕನೊರ್ವಂ ಬಂದು ಜಿನಸಮಯವಾರ್ಧಿವರ್ಧನಚಂದ್ರನಂ ಕಂಡು ತನ್ನ ತಂದ ಪೊಸಮಾವಿನೆಳದಳಿರುಮಂ ಜಾದಿಯ ಮಲ್ಲಿಗೆಯ ಪಾದರಿಯ ಪೊಸಪುಷ್ಪಮುಮಂ ಕೊಟ್ಟು ಪೊಡೆಮಟ್ಟು ॥ ೧೧೧

ಅಳಿಗಳ ಗಾಯನಂ ನಿಮಿರೆ ಕೋಕಿಲನಿಸ್ವನಮುಣ್ಮೆ ಕೇಕಿಸಂ
ಕುಳರವಮೊಪ್ಪೆ ಕೆಂದಳಿರ ಗೊಂದಣದಿಂ ಸಹಕಾರಭೂರುಹಾ
ವಳಿ ಕಡುರಮ್ಯಮಾಗೆ ವನಜಂಗಳರಲ್ದಿರೆ ಕೂಡೆ ಚಂದ್ರನು
ಜ್ಜ್ವಳಿಸಿ ವಿನೋದದಿಂ ಪದೆಯೆ ಬಂದನೂರಲ್ದು ವಸಂತವಲ್ಲಭಂ ॥ ೧೧೨

ಅಂತು ಬಂದ ವಸಂತಮಾಸಮಂ ವ್ಯರ್ಥಮಾಡದೆ ವನಕ್ರೀಡೆಗೆ ಬಿಜಯಂಗೆಯ್ವುದೆಂದು ಬಿನ್ನಪಂಗೆಯ್ವುದುಂ, ಪ್ರಿಯಬಳಕುಮಾರಂ ವನಪಾಲಕನ ಮಾತಿಂಗೆ ಮೆಚ್ಚಿ ಪಸಾಯದಾನಮಂ ಕೊಟ್ಟು ಮನಮಂ ಲೇಸುಮಾಡೆಂದು ಕಳುಪಿ ಮಱುದಿವಸಮುತ್ಸಾಹಭೇರಿಯಂ ಪೊಯ್ಸಿ ॥

[1] ಅಷ್ಟವಿಧಕರ್ಮನಿರ್ಮೂಲನಂ ಮಾಡಿ (ಗ)

ನೆಲೆವೊಲ್ ಶೋಭೆವೆತ್ತಿರೆ ಮುಖಾಂಬುರುಹಂ ಕಡುರಯ್ಯವಾಗೆ ಸಂ
ಚಲನಯನದ್ವಯಂ ಪೊಳೆಯೆ ಕರ್ಣಯುಗಂ ಕರವೊಪ್ಪೆ ನೀಲಕುಂ
ತಲದ ಬೆಡಂಗು ಶೋಭೆವಡೆದುನ್ನತಿವೆತ್ತಿರೆ ಗಾಡಿವೆತ್ತ ಕೋ
ಮಲೆಯರಿನೊಪ್ಪಿ ಬಂದನವನೀಶ್ವರನಂದಮರೇಂದ್ರಲೀಲೆಯಿಂ ॥ ೧೧೪

ಅಂತು ಬಂದು ತನ್ನ ಬರವಿಂಗೆ ತೋರಣಂ ಗಟ್ಟಿದಂತಿರ್ದ ಮಾಧವೀಲತೆಗಳುಮಂ, ತನ್ನ ಬರವಿಂಗೆ ವನದೇವತೆಯರ್ ನೆರೆದು ಮಂಗಳಂ ಪಾಡುವಂತೆ ಮೃದುನಿನಾದದಿಂ ಪಾಡುವ ಮಱಿದುಂಬಿಗಳುಮಂ, ತನ್ನ ಪಡೆಯನಿದಿರ್ಗೊಳ್ವಂತಿರ್ದ ಸರೋವರಗಳುಮಂ ತನ್ನಪಡೆಗೆ ವಸಂತರಾಜಂ ಬಿರ್ದಂ ಸಮೆದನೆಂಬಂತೆ ತನಿರಸದಿಂ ತೀವಿ ಬೀಗಿ ಬೆಳೆದ ಪಣ್ಗಳ ಭಾರದಿಂ ಮುಱಿವಂತಿರ್ದ ಮೃಂದ ವಾಟೆಗಳುಮಂ, ತನ್ನ ಬರವಿಂಗೆ ಪೂವಲಿಗೆದಱಿದರೆಂಬಂತೆ ನೆಲದೊಳಿಕ್ಕಿರ್ದ ಸುರಗಿಯ ನಾಗಸಂಪಗೆಯ ಪಾದರಿಯ ಪೂಗಳುಮಂ, ತನ್ನ ಪಡೆಗೆ ಬಿಡಲೆಂದು ಕಾಮದೇವಂ ಸಮೆದ......ಲತಾಮಂಟಪಂಗಳುಮಂ ನೋಡುತ್ತುಂ, ನಂದನವನದೊಳಗೆ ಪೊಕ್ಕು ಪಿರಿದುಬೇಗಂ ತನ್ನ ಮನದಲಪ್ಪು ಪೋಪಂತೆ ವನಕ್ರೀಡೆಯುಮನಾಡಿ ಮತ್ತಂ ತದ್ವನದಿಂ ಪೊಱಮಟ್ಟು ಪೋಗಲಾಱದೆ ವಿನೋದದಿಂ ತೊಳಲುತ್ತುಮೊಂದುಲತಾಮಂಟಪದೊಳಗೆ ಪೊಕ್ಕು ಕರ್ಪುರದ ಜಗುಲಿಯಮೇಲೆ ಕಂಕೆಲ್ಲಿಯ ಪಲ್ಲವಂಗಳಂ ಸಮೆದ ತಳಿರ್ವಾಸಿನಮೇಲೆ ಪವಡಿಸಿ ॥ ೧೧೫

ನರನಾಥಂ ಸುಖದಿಂದಿರೆ
ಕರಮುಗ್ರವಿಷಾಹಿಯಪ್ಪ ಪಾವೆಯ್ತಂದೋ ।
ಸರಿಸದೆ ನೃಪನುಂಗುಟಮಂ
ಭರದಿಂದಂ ಕಪ್ಪೆಯೆಂದು ಪಿಡಿವುದುಮರಸಂ] [1] ೧೧೬

---

1 ಅಂತು ಸುಖದಿನಿರ್ದೊಂದುದಿವಸಂ ವನಕ್ರೀಡೆಯನಾಡಿ ವಲ್ಲಭೆವೆರಸು ಕೆಂದಳಿರ್ವಾಸಿನ ಕೆಳಗಣ ಲತಾಪಂಟಪದೊಳ್ಪಟ್ಟುರ್ದುಂ ಸುಗಂಧಕ್ಕೆಳಸಿ ಬಂದ ಘಾವು ತಲೆಯುಂ ಪಿಡಿವುದುಂ (ಗ)

ಬೆಱಗಾಗಿ ತನ್ನ ತನುವಂ
ತೊಱೆದು ಮಹಾರಾಜ್ಯಲಕ್ಷ್ಮಿಯುಂ ನೆಸೆದು ಕರಂ ।
ಮಱುಗದೆ ಜಿನೇಂದ್ರಪದವಂ
ಸೆಱೆವಿಡಿದಂ ಜ್ಞಾನಿಯುಪ್ಪವಂ ಕೆಟ್ಟಪನೇ ॥ ೧೧೭

ಜಿನಪದಯುಗವಾರಿಜಮಂ
ನೆನೆಯುತ್ತುಂ ರಾಜ್ಯಮೋಹಮಂ ಬಿಟ್ಟು ಧರಾ ।
ವನಿತೇಶಂ ಗೀರ್ವಾಣಾಂ
ಗನೆಯರೊಳೊಡಗೂಡಿದಂ ಸಮಾಧಿಯ ಫಲದಿಂ ॥ ೧೧೮

[ಇತ್ತಲಿಂದ್ರಪ್ರಭನೆಂಬ ಪೆರ್ಗಡೆ ಪ್ರಿಯಬಳಕುಮಾರಂ ಪರಲೋಕಪ್ರಾಪ್ತನಪ್ಪುದನಱಿದು ಮನದೊಳ್ ಮಲಮಲಮಱುಗಿ ॥ ೧೧೯

ಸಂತತಿಯಿಲ್ಲದ ರಾಜ್ಯಂ
ಪಿಂತಾದುದು ವೈರಿಭೂಭುಜರ್ಗೆಡೆಯಾಯ್ತಿ ।
ನ್ನೆಂತಕ್ಕುಮೊ ಪೇಟ್ ಬಿದಿಯೆಂ
ದಂತರದೊಳ್ ಮಱುಗಿ ಕಂದಿದು ಬೆದೆಬೆದೆಬೆಂದಂ ॥ ೧೨೦

ಅಂತು ಕುಮಾರನ ಸಾವಿಂಗಂ ಪೆಱಗಣ ರಾಜ್ಯಭಾರಮಂ ತಾಳ್ವಂತಪ್ಪ ಸಂತತಿಯಿಲ್ಲದುದಕ್ಕಂ ಬೆಱಗಾಗಿ ಕುಮಾರಂ ಸತ್ತನೆಂಬುದ ನಾರ್ಗಮಱಿಪದೆ ಗುಪ್ತದಿಂದರಸಂ ವನಕ್ರೀಡೆಯಾಡಿ ಬಱಲ್ದನೆಂದು ರಾಜಭವನಕ್ಕೆ ತಂದು ರಾತ್ರಿಯೊಳ್ ಸಂಸ್ಕರಿಸಿ ನಾಡ ಗಡಿಗೆ ಪರಮಾಂಡಲಿಕರಿಂ ಬಾಧೆಯಾಗದಂತೆ ದಂಡಂ ಪೇೞ್ದು ವಾತ್ಸಲ್ಯರತ್ನಾಕರಂ ಋಷಿನಿವಾಸಪರ್ವತತೊಳಿರ್ದನೆಂಬುದಂ ಚರರ ದೆಸೆಯಿಂದಮಱಿದು ತನ್ನ ಪಿರಿಯ ಮಗಂಗರಸನವಸಾನಮನಱಿಪಿ ಬೀಡಿನ ಕಾಪಂ ಪೇೞ್ದು ॥

ತೆಂಕಣ ಭೂಪಾಲಕರಂ
ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ ಮನಂ ।
ಶಂಕಿಸದೆ ಕಾದಿ ಚಲದಿಂ
ದಂ ಕಪ್ಪಂದಪ್ಪುದೆಂದು ವೆಂಗಿಯ ನಾಥಂ ॥ ೧೨೨

ಎನಗೆ ಬೆಸಸಿದನೆಂದು ಕೃತಕವಚನಮಂ ಪೊೞಲೊಳಗೆಲ್ಲಂ ಪ್ರಕಟಂಮಾಡಿ ಚಾತುರಂಗಬಲಂಬೆರಸು ಪೊಱಮಟ್ಟು ಕತಿಪಯಪ್ರಯಾಣಂಗಳಿಂ ಋಷಿನಿವಾಸಪರ್ವತಮನೆಯ್ದಿ ಪರ್ವತನಿತಂಬದೊಳ್ ಬೀಡಂಬಿಟ್ಟು ಕತಿಪಯಜನಂಬೆರಸು ಪರ್ವತಮನೆಯ್ದೆ ಱಿ ಜಿನಭವನಂಗಳಂ ಪೂಜಿಸಿ ಶ್ರೀಧರಾಚಾರ್ಯರಲ್ಲಿಗೆವಂದು ತನ್ಮುನೀಂದ್ರನ ಪಾದಪಂಕಜಂಗಳಂ ಪಲವರ್ಚನೆಯಿಂದರ್ಚಿಸಿ ಪೊಡೆಮಟ್ಟು ಮುಂದೆ ಕುಳ್ಳಿರ್ದು ಕಿಱಿದು ಬೇಗಂ ಧರ್ಮಮಂ ಕೇಳ್ದು ಕೃತಕವಿನಯದಿಂದಿಂತೆಂದಂ ॥ ೧೩೩

ಪರಮಮುನೀಶ್ವರ ನೀವೀ
ಗಿರಿಯೊಳ್ ನೆಲೆಸಿರ್ದಿರೆಂಬುದಂ ಕೇಳ್ದು ಸದಾ ।
ಚರಿತಗುಣರಾಶಿ ನಿಮ್ಮಯ
ಚರಣಸರೋಜಾತಯುಗಳಮಂ ನಿಶ್ಚಯದಿಂ ॥ ೧೩೪

ಕಾಣ್ಬೆವೆಂಬರ್ತಿಯಿಂ ವೆಂಗಿಮಂಡಲದಿಂ ಬಂದೆಮಾವಪ್ಪೊಡೆ ಪರದರೆಮಾನ್ಯಯುದ (?) ಶ್ರಾವಕರೆವಿನ್ನುಂ ನಿಮ್ಮಡಿಗಳ ಶ್ರೀಪಾದಮಂ ಕಾಣಲೆಂದು ಪಲಂಬರುಂ ಪಿರಿದಪ್ಪ ವ್ರತಂಬೆರಸು ಬಂದು ಪರ್ವತದ ಕೆಳಗಿರ್ದರೀಗಿರಿಯನೇಱಲಾಱರ್ ಕಡುವೃದ್ಧರವರಂ ನಿಮ್ಮಡಿಗಳ್ ಬಿಜಯಂಗೆಯ್ದುಪರಸಿ ಸಂತೋಷಮಂ ಮಾಱ್ಪುದೆಂದು ಪ್ರಾರ್ಥಿಸಿ ಮಗುಳೆ ವಂದಿಸಿ ತಮ್ಮ ಬಿಟ್ಟಬೀಡಿಂಗೆ ಬಂದರನ್ನೆಗಂ ಮುನಿಮುಖ್ಯನವರ ಮಾತಿಂಗೆ ಕರುಣಿಸಿ ಮಧ್ಯಾಹ್ನದೊಳ್ ಚರ್ಯಾಮಾರ್ಗದಿಂ ಪೊಱಮಟ್ಟು ॥

ಅವರ ಮಾತುಗಳೆಲ್ಲಮಂ ಮುನಿಪುಂಗವಂ ದಿಟಮೆಂದು ಭೂ
ಭುವನವಂದಿತಪಾದಪಂಕಜನಾದರಂಬೆರಸರ್ತಿಯಿಂ
ವಿವಿಧಶೀಲಗುಣಾಬ್ಧಿ ನಂಬಿದನಂತು ಮೆಲ್ಲನೆ ಶೈಳದಿಂ
ದವನಿಗೆಯ್ತರೆ ನೋಡಿ ಕಂಡು ಮನೋನುರಾಗದಿನಾಖಳಂ ॥ ೧೩೫

ಭಕ್ತಿಪೂರ್ವಕಂ ನಿಲಿಸಿ ನಿದ್ರೆ ಪಿರಿದಪ್ಪಂತಪ್ಪ ಮದ್ದುಗಳಂ ಕೂಟದೊಳ್ ಬೆರಸಿ ಕಯ್ಯಲಿಕ್ಕುವುದುಂ ಶ್ರೀಧರಮುನಿನಾಥನವರ ಕಪಟ

ವೃತ್ತಿಯುನಱಿಯದುಂಡು ಸೋಕ್ಕಿ ಮೆಯ್ಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ವುದುಂ ಪೆರ್ಚಿ ಪಿರಿದಪ್ಪತ್ನದಿಂ ಸಿವಿಗೆಯೊಳಿಕ್ಕಿ ದಾಳಾದಾಳಿಯಿಂ ಬಂದು ಪ್ರತಿಪಾಲಪುರಮಂ ಪೊಕ್ಕು ಮಱೆದು ಪಟ್ಟೆ ಮುನಿಪತಿಗೆ ರತ್ನಾಭರಣಂಗಳಂ ತುಡಿಸಿ ಸುಗಂಧದ್ರವ್ಯಂಗಳಂ ಪೂಸಿ ದಿವ್ಯವಸ್ತ್ರಮನುಡಿಸಿ ರೋಮಜವೆಂಬ ಪಾಸಿನಮೇಲೆ ಪಡಿಸಿ ಸುತ್ತಿ ಮುತ್ತಿ ಬಂದೋಲಗಿಸುತ್ತುಮಿರ್ಪುದುಂ ಮೂಱನೆಯ ದಿವಸಕ್ಕೆ] [1] ||

ಪರಮಗುಣಾಂಬುರಾಶಿ ಖಳನಿಕ್ಕಿದ ಮದ್ದಿನ ತೀವ್ರಮಪ್ಪ ನಿ
ಷ್ಠುರವಿಷದುಕ್ಕು ಪೋಗೆ ತನು ಘರ್ಮನಲೊರ್ಮೆಯೆ ನೊಱೆ ತಾಗೆ ತ
ದ್ಗಿರಿಯೊಳ್ ನಿಂದೆನೆಂಬ ಬಗೆಯಿಂ ಮುಱಿದೊಯ್ಯನೆ ಮೆಯ್ಯನಾದರಂ
ಬೆರಸು ನಿಮಿರ್ಚಿ ಕಾಲನೊದೆದೆರ್ದು ಕರಂಗಳನಾತ್ಮದೇಹಮಂ||೧೨೪

ತಡವರಿಸಿ ನೋಡಿ ತುಡಿಸಿದ ತೊಡವುಗಳುಮನುಡಿಸಿದ ಸೀರೆಯುಮಂ ಪೂಸಿದ ಶ್ರೀಖಂಡಮುಮಂ ಪಟ್ಟಿರ್ದ ಪಾಸುಮಂ ಸುತ್ತಿ ಮುತ್ತಿರ್ದ ಮಕುಟಬದ್ಧರುಮಂ ಕಂಡು ಬೆಱಗಾಗಿ || ೧೨೫

ಸುರವರಪೂಜ್ಯಮಪ್ಪ ದಿವಿಜೇಶ್ವರಲಕ್ಷ್ಮಿಗಮೂಲ್ಯಮಪ್ಪ ಸೌಂ
ದರಮೆನಿಸಿರ್ದ ನಿರ್ವೃತಿಯುನೆಯ್ದಿಸಲಾರ್ಪ ಸಮಸ್ತದೋಷದೊಳ್

---

1 ಇತ್ತಲಿಂದ್ರಪ್ರಭನೆಂಬ ಪ್ರಧಾನಂ ಕುಮಾರನ ಸಾವನಱಿದು ಸಂತತಿಯಿಲ್ಲದುದಕ್ಕೆ ಮಲ್ಕಲು ಮಱುಗಿ ಶ್ರೀಧರಾಚಾರ್ಯರ್ ದಿಗಂಬರಗಿರಿಯೊಳಿರ್ದಪರೆಂದು ಅಱಿದನಪ್ಪುದಱಿಂ ತನ್ನಮಗಂಗೆ ಕುಮಾರನ ಕಾರ್ಯಮನಱಿಪಿ ಪುರಕ್ಕೆ ಕಾವಾಗಿರಿಸಿ ದಕ್ಷಿಣಭಾಗದವರನಳವಡಿಸಿ ಬಂದಪೆನೆಂದು ರುಷಿನಿವಾಸಪರ್ವತಕ್ಕೆ ಬಂದು ಶ್ರೀಧರಾಚಾರ್ಯರಂ ವಂದಿಸಿ ಮುಂದೆ ಕುಳ್ಳಿರ್ದು ಧರ್ಮಮಂ ಕೇಳ್ದು ತದನಂತರಂ ನಿಮ್ಮ ಶ್ರೀಪಾದಮಂ ಕಾಣಲೆಂದು ಪಲಂಬರುಂ ವ್ರತವಿಶೇಷದಿಂ ದೂರದೇಶದೊಳಿರ್ದು ಬಂದ ವೃದ್ಧರಪ್ಪುದಱಿಂ ಪರ್ವತಮನೇಱಲಾಱದಿರ್ದಪರೆಂಬುದುಮವರ್ಕರುಣಿಸಿ ತದ್ಗಿರೀಂದ್ರದಿಂದಿಳಿದವರಿರ್ದಟ್ಟ ಬೀಡಿನೊಳು ಚರಿಗೆಗುಪುವುದುಮಿಂದ್ರಪ್ರಭಂ ನಿರಿಸಿ ನಿದ್ರೆಬರ್ಪಂತಾಹಾರಮನಿಕ್ಕುವುದುಂ ಡಕ್ಕುಗೊಂಡಂತೆ ತೂಂಕಡಿಸಿ ಕೆಡೆದರಾನೆಯಮೇಲೆ ದಾಳಾದಾಳಿಯಿಂ ಪ್ರತಿಪಾಲಪುರಕ್ಕೆ ವಂದರಮನೆಯಂ ಪೊಕ್ಕು ದಿವ್ಯಾಭರಣಂಗಳಂ ತೊಡಿಸಿ ಪಾಸಿನ ಮೇಲಿರಿಸಿ ಸುತ್ತಿ ಮುತ್ತಿಕೊಂಡೋಲಗಿಸುತ್ತುಮಿರ್ಪುದು ಮೂಱನೆಯ ದಿವಸದಂದಿಂಗೆ (ಗ)

ಪೊರೆಯದ ದುಃಖಮುಮಂ ಮಱೆದು ಪೊರ್ದಿಸಲೀಯದ ಜೈನದೀಕ್ಷೆಯಂ
ಪರಿಹರಿಪಂತುಟೊಂದು ವಿಧಿಯುಂ ದೊರೆಕೊಂಡುದು ಕರ್ಮದೇಶೆ
ಯಿಂ ॥ ೧೩೦

ಪುಸಿದು ದುರಾತ್ಮನೆನ್ನ ಗುಣಮುಮಂ ಭುವನತ್ರಯಪೂಜ್ಯನಪ್ಪುದಂ
ಕುಸಿಯಿಸಿ ತನ್ನ ಬಾಳ್ಕೆಗೆಡೆಯಿಲ್ಲದೆ ವೈಶ್ಯರೆವೆಂದು ಬಂದು ನಂ
ಬಿಸಿ ಕಡುದೂರ್ತಿನಿಂ ಪಲವುಟಕ್ಕುಗಳಂ ಸಮೆದನ್ನಮುಮಂ ಸಮಂ
ಜಸಿಕೆಯನೊಕ್ಕು ಬೇಗಮೆನಗಿಕ್ಕಿ ಬಟಿಕ್ಕೆ ಮನೋನುರಾಗದಿಂ ॥೧೩೧

ಇಲ್ಲಿಗೆ ತಂದು ತಮ್ಮಂತು ಮಾಡಿದನೆಂದು ಕೇಡಂಗೆ ಬಿಸು ಸುಯ್ದು ಪಾಸಿನಮೇಲೆ ಬೀೞ್ವುದುಂ ಶೀತಲಕ್ರಿಯೆಗಳಿಂದೆೞ್ಚಱಿಸಿ ಸಯ್ತು ಕುಳ್ಳಿರಿಸಿ ಸಮ್ಯಕ್ತ್ವಚೂಡಾಮಣಿಗೆ ಸಮಸ್ತಬಂಧುಜನಮುಂ ಪ್ರಧಾನರುಂ [1] ಮೆಯ್ಯೆನಿಕ್ಕಿ ಬಿನ್ನಪಮೊಂದಿಂತೆಂದರ್ ॥ ೧೩೨

ಸಂತತಿಯಿಲ್ಲದ ರಾಜ್ಯಮ
ನಿಂತಿದನಡಿಗರ್ದಿ ಕಿಡಿಸದುನ್ನತಗುಣ ನಿ ।
ಶ್ಚಿಂತಂ ನಿಱಿಸಿ ಬಟಿಕ್ಕಂ
ಸಂತತಿಯಂ ಮಾಡಿ ದೇವ ತಪದೊಳ್ ನಿಲ್ ನೀಂ ॥ ೧೩೩

[ಪರಮಾಂಡಳಿಕರ್ ಭಯದಿಂ
ಕರಂಗಳಂ ಮುಗಿದು ಕಪ್ಪಮುಮಂ ತಂದೀವರ್ ।
ಕರಮಂಜೆ ನಿನ್ನ ಜನಕಂ
ಗೆರಡಿಲ್ಲದೆ ದೇವ ನೀನಿದಂ ಕಿಡಿಸುವುದೇ] ॥ ೧೩೪

ಎಂದು ಬಿನ್ನಪಂಗೆಯ್ದು ಕಾರುಣ್ಯಮಪ್ಪಂತು ಕಣ್ಣನೀರ್ಗಳ ನಿಕ್ಕಿ ನಿಷ್ಕರುಣಿಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ [2] ಕೊಂದು ಪೋಗೆಂದು ಮದದಾನೆಯಂ ಕಂಬಕ್ಕೆ ತಪ್ಪಂತೆ ಲಲ್ಲೆಗೆಯ್ದು

1 ಸಾಮಂತರುಂ (ಗ) 2 ಉಳ್ಳೊಡೆ ನೀವೇಮ್ಮುಮಂ (ಗ)

ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ ಸಿಂಹಪಮಂ ಸೇಱಯಿಡುವಂತೆ ರಾಜ್ಯ ದೊಳ್ ನಿಱಸಿ ಪಲವುತೆಱದ ಕಾಪುಗಳಿಂ ಮಿಡುಕಬಾರದಂತಾಗೆ ಕಾದು ರಾಜ್ಯಂಗೆಯ್ಯುವುದುಂ ‖ ೧೩೫

ಬಿಸುಟು ಸುತರಾಜ್ಯಲಕ್ಷ್ಮಿಯು
ನಸದೃಶವೆನಿಸಿರ್ದ ಮುಕ್ತಿಗೋಮಿನಿಯೊಳ್ ಸಂ ।
ತಸದೊಳ್ ಕೂಡುವುದೆಂಬಂ
ತಸಹಾಯ [1] ಪರಾಕ್ರಮಂ ಮಗಂ ಪುಟ್ಟುವುದುಂ ‖ ೧೩೬

[ಕರಮಲ್ಲದೊಸೆದು ರಾಗಂ
ಬೆಗಸು ಮಹೀಪಾಲನಾತ್ಮಪುತ್ರಂಗೆ ಮನೋ ।
ಹರಮಪ್ಪ ತನ್ನ ತಂದೆಯು
ವರನಾಮಮನಿಟ್ಟು ಕಟ್ಟಿ ಪಟ್ಟಮನಾಗಳ್] [2] ‖ ೧೩೭

ಸೆಱಮನೆಯೊಳಿರ್ದ ಮನುಜಂ
ಸೆಱ ಬಿಟ್ಟ ಬೞಕ್ಕ ನಿಲ್ಲದೋಡುವ ತೆಱದಿಂ ।
ಪೆಱಪಿಂಗಿ ಸೆಡೆದು ನಿಲ್ಲದೆ
ತಱಸಲದಿಂ ಬಿಟ್ಟು ಸಕಲರಾಜ್ಯಶ್ರೀಯುಂ ‖ ೧೩೮

[ಪೋಗಿ ಜಿನದೀಕ್ಷೆಯುಂ ಕೈಕೊಂಡು ದ್ವಾದಶವಿಧತಪದೊಳುತ್ತ ರೋತ್ತರಂ ನೆಗೞ್ದು ಮುನ್ನಿನ ಋಷಿನಿವಾಸಪರ್ವತದೊಳ್ ಪಲವುಕಾಲ ಮಿರ್ದು ಕರ್ಮಕ್ಷಯಂಗೆಯ್ದು ನಿರ್ವಾಣಶ್ರೀಸಮೇತನಾದನಂದಿನಿಂದಿ ತ್ತಲುಂ ಋಷಿನಿವಾಸಗಿರಿ ಶ್ರೀಧರಾಚಾರ್ಯರ ಪೆಸರೆ ಪೆಸರಾಗಿ ಶ್ರೀಪ ರ್ವತಮೆಂದು ಪ್ರಸಿದ್ಧಿಗೆ ಸಂದುದು. ತದ್ಗಿರಿಯ ದಕ್ಷಿಣಭಾಗದೊ ಳೊಂದು ವಟವೃಕ್ಷದ ಕೆಳಗಿರ್ದು ಮುಕ್ತಿಗೆ ಸಂದರಪ್ಪುದಱಂದಾಸ್ಥ

1 ಸಂತಸದಿಂ ನೆರೆಯಲ್ ಬೇಗದಿನಸಹಾಯ (ಗ)

2 ಪುಟ್ಟೆ ಯಶೋಧರನೆಂದು ಪೆಸರಿಟ್ಟು ರಾಜ್ಯವುಂ ಕೊಟ್ಟು (ಗ)

ನಕ್ಕೆ ಸಿದ್ಧವಟವೆಂಬ ಪೆಸರಾಯ್ತು. ಶ್ರೀಧರಕೇವಲಿಗಳ್ಗೆ ಕೇವಲಜ್ಞಾನ ಪೂಜೆಯಂ ಮಾಡಲೆಂದು ಚತುರ್ವಿಧದೇವನಿಕಾಯಂ ನೆರೆದರಪ್ಪುದಱಿಂ ದಾಸ್ಥಾನಕ್ಕಮರಾವತಿಯೆಂಬ ಪೆಸರಾಯ್ತು. ತನ್ಮುನಿ ತಪಂಗೆಯ್ವ ಕಾಲದೊಳ್ ಅರ್ಜುನವೃಕ್ಷದ ಕೆಳಗಿರ್ದಾರಂ ಖೇಚರರ್ ಮಲ್ಲಿಗೆಯಲರ್ಗಳಿಂ ಪೂಜಿಸಿದರಪ್ಪುದಱಿಂದಾಸ್ಥಾನಕ್ಕೆ ಮಲ್ಲಿಕಾರ್ಜುನವೆಸರಾಯ್ತು. ಇಂದ್ರ ಪ್ರಭನಾಮಮುನಿಯುಂ ಭದ್ರಿಕಸಲ್ವೇಡಿ ವೃದ್ಧರ್ ಬಂದಿರ್ದಾರೆಂದೊಡೆ ವೃದ್ಧ ಗಿರಿಯಾದುದು. ಯಶೋಧರಕುಮಾರಂ ಋಷಿಪುತ್ರನಪ್ಪುದಱಿಂದಾ ತನ ಮೈದುನರ್ ಮೇಳದಿಂ ಮುಂಡಿಯ ವಂಶಜನೆಯೆಂದು ಕುಮಾರ ನೊಡನೆ ನಗುವುದಱಿಂದದುವೆ ಪ್ರಸಿದ್ಧಮಾಗಿ ಮುಂಡಿಯ ವಂಶಮಾದು ದೆಂದು ಬುದ್ಧಿಸಾಗರಂ ಧನದಮಹಾರಾಜನ ವಂಶಾವತಾರಮುಮಂ ಪ್ರತಿ ಪಾಲಪುರದ ಪೆಸರ ವೃತ್ತಾಂತಮುಮಂ ಪೇೞೆ ಸಂಘಶ್ರೀ ಸಂತೋಷಂ ಬಟ್ಟು ॥ ೧೩೯

ಈತನ ವಂಶದವರ್ ವಿ
ಖ್ಯಾತರ್ ಸಾಮಾನ್ಯರಲ್ಲರೆಂದುಂ ಧರ್ಮೋ ।
ಪೇತರದಱಿಂದಮಿಾನೃಪ
ಜಾತನನಾನೆನಿತು ಪುಣ್ಯದಿಂ ಪೊರ್ದಿದೆನೋ [1] ॥ ೧೪೦

ಏನೆಂದಱಿಯದೆ ಮುನ್ನಪ
ಮಾನಂ ಗೆಯ್ದಿರ್ದೆನುಱದು ಜಿನತತ್ತ್ವಮನ ।
ಜ್ಞಾನತೆಯಿನೀಗಳಱಿದೆಂ
ಮಾನವಪತಿಯಿಂದಮೊಳ್ಳಿತೆಂಬುದನಿಂಬಿಂ ] [2] ॥ ೧೪೧

---

1 ಜಾತನನಾಗಿಂತು ಪುಣ್ಯದಿಂ ಪೊರ್ದಿರ್ದಪೆನೇ (ಕ. ಖ.)

2 ಜಾತರೂಪಧರನಾಗಿ ಕರ್ಮಕ್ಷಯಂಗೆಯ್ದು ನಿರ್ವಾಣಲಕ್ಷ್ಮಿಯೊಳ್ ಕೂಡಿ ದನಿತ್ತಲ್ ಯಶೋಧರಕುಮಾರನ ಮೈದುನಂ ಮುಂಡಿಯವಂಶಜನೆಂದು ಕಾಡು ವುದುಮದುವೆ ಪ್ರಕಟಮಾಗಿ ಮುಂಡಿಯವಂಶಜಮಾಪುದೆಂದಬ್ಧಿಸಾಗರರ್ ಪೇಳ್ವುದುಂ ಸಂಘಶ್ರೀ ಲೇಸಾಗಿ ತಿಳಿದು ಸಂತೋಷಂಬಟ್ಟು (ಗ)

ನರನಾಥನ ದೆಸೆಯಿಂ ಭಾ
ಸುರಮೋಕ್ಷಮುನೀವ ಧರ್ಮಮುಂ ಪಿರಿದಪ್ಪೀ ।
ಸಿರಿಯುಂ ದೊರೆಕೊಂಡುದು ವಿ
ಸ್ತರದಿಂದೆನ್ನಂತು ನೋಂತನಾವನೊ ಜಗದೊಳ್ ॥ ೧೪೨

[ಎಂದು ಸಂತೋಷಂಬಟ್ಟು ಸುಖದಿಂದಿರ್ಪುದುಮೊಂದುದಿವಸಂ ಸಂಘಶ್ರೀಯು ಮುನ್ನಿನ ಗುರು ಬುದ್ಧಶ್ರೀಯೆಂಬ ಭಿಕ್ಷುಕಂ ಸಂಘಶ್ರೀ ಧನದಮಹಾರಾಜನ ಪೇಳ್ಕೆಯಿಂ ಶ್ರಾವಕನಾದನೆಂಬುದಂ ಕೇಳ್ದು ಮುನಿದು ಮನೆಗೆ ಬರ್ಪುದುಂ ಸಂಘಶ್ರೀ ಮುನ್ನಿನ ಮಾರ್ಗದಿಂ ಪೊಡೆಮಡದೆ ಮನ್ನಿಸದೆ ಮೋನಂಗೊಂಡುದಾಸೀನಂಗೆಯ್ದಿರ್ಪುದುಂ ॥ ೧೪೩

ಮುನ್ನಿನ ಮಾರ್ಗದೊಳೆನ್ನಂ
ಮನ್ನಿಸದೀಖಳನನಾವ ಪಾಂಗಿನೊಳಂ ಸಂ ।
ಪನ್ನತೆಯಿಂ ಕಿಡಿಸುವೆನಂ
ದುನ್ನತಿಯಿಂ ಪೂಣ್ದು ನೋಡಿ ಸಂಘಶ್ರೀಯುಂ ॥ ೧೪೪

ನೀನಪ್ಪೊಡೆ ಧನದಧರಿ
ತ್ರೀನಾಥನ ಮನೆಗೆ ಮುಖ್ಯನೈ ನಿನ್ನಗೃಹ ।
ಕ್ಕಾನಿಂದು ಬಂದೊಡಿಂತಪ
ಮಾನಂ ಮಾಡುವುದು ಮಂತ್ರಿಗಿದು ಗುಣದೊಳವೇ ॥ ೧೪೫

ನಿನಗಿದು ಪಾಟಿಯಲ್ತು ಮೊಗವಿಾಯದೆ ಮನ್ನಿಸದುದ್ಧತಿಕ್ಕೆಯಿಂ
ಮುಸಿದವರಂತೆ ಕೇಳ್ ನುಡಿಯದಿರ್ಪುದು ನೆಟ್ಟನೆ ಮುನ್ನಿನಂತೆ ನೀ
ನೆನಗತಿಭಕ್ತನೆಂದು ಬಗೆಗೆಟ್ಟು ಭವದ್ಭವನಕ್ಕೆ ಬಂದೆನಿಂ
ತಿನಿತಪಮಾನಮಂ ನೆಱೆಯೆ ಮಾಡ್ಪೊಡೆ ಬರ್ಪೆನೆ ಹೀನವೃತ್ತಿಯಿಂ ॥

ಆನಾದೊಡಮಕ್ಕೆ ತನ್ನ ಗೃಹಕ್ಕೆ ಬಂದೊಡೆ ಗರ್ವದಿಂ
ದೇವನಂತಿಱಿಸಿರ್ಪುದುಂ ಕಡುಪೊಂಗಿ ಬಿಂಕದಿನಿರ್ಪುದುಂ
ಭಾವಕಂಗೆ ಬುಧಂಗೆ ಮಂತ್ರಿಗೆ ಸಜ್ಜನಪ್ರಿಯನಪ್ಪವಂ
ಗಾವುದೊಳ್ಗುಣಮಾವುದುನ್ನತಿ ಪೆಂಪದಾವುದು ಧಾತ್ರಿಯೊಳ್ ॥ ೧೪೬

ಎಂದು ಮೃದುವಚನಂಗಳಿಂ ಸಂಘಶ್ರೀಯ ಮನಂಗೊಳಿಸಲೆಂದು ನುಡಿದಾತನಂ ಸದ್ಧರ್ಮದಿಂ ಪತ್ತುವಿಡಿಸಿ ಮಿಥ್ಯಾತ್ವಮಂ ಪೊರ್ದಿಸುವ ಬುದ್ಧಿಯಿನಿಂತೆಂದಂ] [1] ೧೪೮

ನೀಂ ಬುದ್ಧಾಗಮದೊಳ್ ಕುಶ
ಲಂ ಬಗೆವೊಡೆ ನಿನ್ನ ದೊರೆಯು ಚತುರನುಮಾದಂ ।
ನಂಬಿ ಪೆಱತೊಂದು ಸಮಯಮ
ನಿಂಬಿಂ ಪೊರ್ದಿರ್ದನೆಂದೊಡಿಂತಿದು ಚೋದ್ಯಂ ॥ ೧೪೯

[ವ್ರತಮಂ ಪಾಲಿಸಿ ದೇಹಮಂ ತೊಱೆದು ವಿದ್ಯಾನೀಕಮಂ ಬಿಟ್ಟು ಪೆಂ
ಡತಿಯಂ ಧಾನ್ಯಮನಾತ್ಮಜಪ್ರತತಿಯಂ ಮುಂ ಬಿಟ್ಟು ಗಾಂಪಿಂದೆ ನಿ
ರ್ವೃತಿಯಂ ಸಾಧಿಪೆನೆಂಬ ಸಾಹಸಿಗರಂ ದಿಗ್ವಾಸರಂ ನಂಬಿ ದು
ರ್ವೃತ್ತ ನೀಂ ಗಾವಿಲರಂತಿದೇಕೆ ಕಿಡಿಪೈ ಸಂಸಾರಸೌಖ್ಯಂಗಳಂ ॥ ೧೫೦

ಸುರತದೊಳಿಚ್ಛೆಯಂ ಸಲಿಸುವಂಬುರಹಾಕ್ಷಿಯರೊಳ್ ನಿರಂತರಂ
ನೆರೆವುದು ದಿವ್ಯಭೋಜನಮನುಣ್ಬುದು ತನ್ನ ಮನಕ್ಕೆ ವಂದರೊಳ್
ಪರಿಸುವುತಿರ್ಪ (?) ದುದ್ಧತಿಯಿನಿಂದ್ರಿಯದಿಚ್ಛೆಯೊಳಿರ್ಪುದಾಗಳುಂ
ಮರುಳ ವಿನೋದದಿಂ ನಲಿಯುತಿರ್ಪುದು ಮೋಕ್ಷಮನಾರು ಕಂಡವರ್ ॥

ಎಂಬುದುಂ ಸಂಘಶ್ರೀಯಿಂತೆಂದಂ ॥ ೧೫೧

ಜಿನವಚನಂ ಪುಸಿಯಪ್ಪೊಡೆ
ಧನದಮಹಾರಾಜನೆನಗೆ ತೋಱಿದನಘಜೇ ।
ವನದಿ ಬಡಬಾಗ್ನಿಯೆನಿಸುವ
ಮುನಿಯುಗಳಮನಂತರಿಕ್ಷದೊಳ್ ಪೋಪವರಂ] [2] ॥ ೧೫೨

---

1 ಎಂದು ರಾಗದಿಂದಿರ್ಪುದುಂ ಸಂಘಶ್ರೀ ಶ್ರಾವಕನಾಗಿರ್ದನೆಂಬುದುಂ ಸಂಘಶ್ರೀಯ ಮುನ್ನಿನ ಗುರು ಬುದ್ಧಶ್ರೀಯೆಂಬ ಭಿಕ್ಷುಕಂ ಕೇಳ್ದು ಬಂದು ಸಂಘಶ್ರೀಗಿಂತೆಂದಂ (ಗ)

2 ಎಂಬುದುಂ ಸಂಘಶ್ರೀಯಿಂತೆಂದಂ (ಗ)

ವರತಪದೊಳಾದ ವೃದ್ಧಿಯು
ನೆರಡಿಲ್ಲದೆ ಕಂಡು ನಂಬಿದೆಂ ಜಿನಮತಮಂ ।
ಮರುಳಲ್ಲೆನೆನಗೆ ನಿನ್ನೀ
ಪುರುಳಿಲ್ಲದ ಧರ್ಮ ಬಾರ್ತೆಯಲ್ಲದು ಮತ್ತಂ ॥ ೧೫೪

ಎಂದು ನುಡಿವುದುಂ ಬುದ್ಧಶ್ರೀ ಸಂಘಶ್ರೀಯನೆಂತಾದೊಡಂ ಕಿಡಿಸುವೆನೆಂಬ ಕಜ್ಜದಿನಿಂತೆಂದಂ ॥ ೧೫೫

ಧನದಮಹೀಶ್ವರಂ ವಿಬುಧಬಂಧು ಚತುರ್ಬಲದಿಂದೆ ಕಾದಿ ಜೀ
ವನಧಿಪರೀತಭೂವಳಯಮಂ ನೆಱೆ ಸಾಧಿಸಿಕೊಂಡನೆಂದೊಡಿಂ
ನಿನಗೆ ಜನೇಶನಂಬರದೊಳಿರ್ಪರನುತ್ಸವದಿಂ ಮುನೀಂದ್ರರಂ
ಮನಮುರಿತೋಱಿ ತನ್ನ ವಶಮಾಗಿರೆ ಮಾಳ್ಪುದದಾವ ವಿಸ್ಮಯಂ ॥

ಎಂದು ಕಳಕಳಿಸಿ ನಕ್ಕು ಮತ್ತಮೆನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱಿ ಶೂನ್ಯವಾದಮಂ ಮಾಡಿ ತಡಂಗಾಲ್ಪೊಯ್ವುದುಂ ಸಂಘಶ್ರೀ ಬುದ್ಧಶ್ರೀಯ ವೃಥಾಲಾಪಕ್ಕೊಳಗಾಗಿ ಲೋಚನಹೀನನಂತೆ ಶೋಭೆಗೆಟ್ಟು [ತಿಗಂಗೆಟ್ಟು] ಕುದುರೆಯಂತೆ ಮನಂಗೆಟ್ಟು, ಮಾಗಿಯ ತೊಱೆ[1] ಯಂತೊಳಸಾರ್ದು, ಇರುಳ್ ಕಣ್ಗಾಣದರಂತೆ ತೊಟ್ಟನೆ ಕಣ್ಗೆಟ್ಟು [ಸದ್ಧರ್ಮ] ವಿಮುಖನಾಗಿ "ಪುನಃ ಶ್ವಾನೋ ಭವಿಷ್ಯತಿ" ಯೆಂಬ ನೀತಿಯನ್ನುಂಟುಮಾಡಿ ಮಿಥ್ಯಾತ್ವಮಂ ಪೊರ್ದಿದನಿಂತು ॥ ೧೫೭

[ಎನ್ನ ಚಲಂ ಕೂಡಿದುದೆಂ
ದುನ್ನತಿಯಿಂ ಪೆಟ್ಟುವರ್ಚಿ ಬುದ್ಧಶ್ರೀ ಪೋ ।
ದನ್ವಯದೊಳತ್ತಂಘಟಯು
ದುನ್ನತಿಯುಂ ಕಷ್ಟನಾದನಪಗತಪುಣ್ಯಂ॥] ೧೫೮

1 ಕೋಗಿಲೆ (ಕ. ಬ.)

ಜಿನಪದಸೇವನೆಯಂ [1] ಬಿ
ಟ್ಟನೇಕದುರ್ಮೂರ್ತಿಗಳೊಡನೆ ಕೂಡಿ ಮಹಾದು ।
ರ್ವಿನಯದಿನನಂತಸುಖಮಂ
ತನಗೀವಂತಪ್ಪ ಧರ್ಮತರುವಂ ಕಡಿದಂ [2] ॥ ೧೫೯

ವಿಮಲಗುಣಗಣಮನೊಕ್ಕು
ತ್ತಮಧರ್ಮಮನೊಲ್ಲದಧಿಕಪಾಪಂ ಶೂನ್ಯಾ ।
ಗಮಮಂ ಪೊರ್ದಿದನದಱಿಂ
ಸಮಂತು ಸದ್ಧರ್ಮವಿರ್ಪ್ರದಂ ಕಂಡವರಾರ್ ॥ ೧೬೦

ತಡೆಯದೆ ಮಹಾನಿಧಾನಂ
ಬಡವನ ಕೈಸಾರ್ದು ಭೂಪರಱಿಯದೆ ನೆಲಸಿ ।
ರ್ಪೊಡಮೊಳ್ಳಿತಪ್ಪ ಧರ್ಮಂ
ಕಿಡದಿರ್ಪೊಡಮವರೆ ಪುಣ್ಯವಂತರ್ ಧರೆಯೊಳ್ ॥ ೧೬೧

[3] ಕುಂಕುಮಮಂ ಬಿಟ್ಟು ಜಾದಂ ಪೂಸುವಂತೆ ಮನೆಯಂ ಬಿಟ್ಟು ಬೀದಿಯೊಳಿರ್ಪಂತೆ ಪಟ್ಟಣಮಂ ಬಿಟ್ಟು ಪೊಲೆಗೇರಿಯೊಳ್ ಪಡುವಂತೆ [4] ಪಾಲಂ ಬಿಟ್ಟು ಕಳ್ಳಂ ಕುಡಿವಂತೆ ರಾಜಕುಮಾರರ ಕೆಳೆಯಂ ಬಿಟ್ಟು ಪುಲ್ಲಡಕಿಯೊಳ್ ಕೆಳೆಗೊಳ್ವಂತೆ ಸೀರೆಯಂ ಬಿಟ್ಟು ನಾರ ನುಡುವಂತೆ ದಿವ್ಯಾಭರಣಂಗಳಂ ಬಿಟ್ಟು ಬಳ್ಳಿಗಳಂ ಕಟ್ಟುವಂತೆ ಸೊಡರ ಬೆಳಗಂ ಬಿಟ್ಟು ಕೊಳ್ಳಿಯ ಬೆಳಗಿನೊಳುಣ್ಬಂತೆ ಕಱುಮಾಡಮಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ ಜಾಜಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ದುಂ ವಾತ್ಸಲ್ಯರತ್ನಾಕರನಱಿದು ತನ್ನೊಳಿಂತೆಂದಂ ॥ ೧೬೨

---

1 ಜಿನಪದಸೇವೆಗಳಂ (ಗ) 2 ಅದು ಧನದಮಹಾರಾಜು ಕೇಳ್ದು ಕಮಲಶ್ರೀಯು ಮೊಗವಂ ನೋಡಿ ನಗುತವಿಂತೆಂದಂ ಏವಂ ಲಗೂ.... (ಗ)

3 ಎಂದು ಸಮ್ಯಕ್ತ್ವಶ್ರೀಯುಂ ಬರಿಸಿ ಪುತ್ತ್ರಂ ಧರ್ಮಮಂ ಪೇಳುವುದುಂ ಎಂತುಂ ನಂಬದಿರ್ಪುದು ವಿಂತೆಂದಂ (ಗ) 4 ಇರ್ಪಂತೆ (ಗ)

ಮೊಱಲೆಂದಳಿಪಿಂ ವಣಿಗ್ವರನೊಯ್ದು ಕರ್ಪೂರಮಂ ಕರಂ
ತೋಱಿ ಭಾವಿಸಿ ನೋಡಿ ತಾಂ ಪೊಲೆಯುಂ ದಿಟಂ ಕಳುಹಿಂಗೆ (?) ನೀಂ
ತೋಱು ಕೊಂಡಪೆನೆನ್ನ ಬಳ್ಳದೊಳಂಬವೊಲ್ ಪರಧರ್ಮಮಂ
ಕೀಱು ಪೇೞ್ದೊಡಮೊಲ್ವರಲ್ಲರಘಾನ್ವಿತರ್ ಗುಣವರ್ಜಿತರ್ ॥ ೧೬೩

ನಾಯ ಕುನ್ನಿಗೆ ಕೂರ್ತು ರಾಜ್ಯಮನಿತ್ತು ಪಾಸಿನ ಮೇಲೆ ತಂ
ದಾಯತಿಕ್ಕೆಯಿನೊಪ್ಪವಾಗಿರಿಸಿ ಪ್ರಭೂತ್ಕರಮಿರ್ದು ಕ
ಟ್ಟಾಯದಿಂದೊಡನೋವದೋಲಗಿಸುತ್ತುಮಿರ್ಪೊಡೆ ಮತ್ತಮಾ
ನಾಯ ಕುನ್ನಿ ಸಮಂತು ಮಾಣ್ಬುದೆ ಪೇಲ ತಿಂಬುದನೆಲ್ಲಿಯುಂ ॥ ೧೬೪

ಎಂದು [ಭಾವಿಸಿ ಸಂಘಶ್ರೀಯುಂ ಬರಿಸಿ ಮುಂದೆ ಕುಳ್ಳಿರಿಸಿ ಧರ್ಮಶ್ರವಣಮಂ ಮಾಡೆ] [1] ಮೂಗರಂತೆ ಮಱುಮಾತುಗುಡದೆ ಮರ[2]ದಂತೆ ಬಿಟ್ಟಾಡದೆ ಬೆಳ್ಪೊರಸಿನಂತೆ [3] ಶೂನ್ಯಹೃದಯನಾಗಿ ಬೆಳದ ಕೆಯ್ಯಂತೆ ತಲೆಯುಂ ಬಾಗಿ ಮಿಥ್ಯಾತ್ವಗ್ರಹಾವಿಷ್ಟನಾಗಿ ಕೇಳದಿರ್ಪುದುಂ, ಪಲವು ದಿವಸಮಾತನನೆಂತುಂ ಧರ್ಮಕ್ಕೆ ತರಲಾಱದೆ ಕಮಳಶ್ರೀಯು ಸಾವಂತರ ಮೊಗಮಂ ನೋಡಿ ಧನದಮಹಾರಾಜನಿಂತೆಂದಂ ॥ ೧೬೫

ಕಲ್ಲೆಂತುಂ ನನೆಯದವೊಲ್
ಪೊಲ್ಲಮೆಯೊಳ್ ಕೂಡಿ ರೌರವಕ್ಕಿೞಿವವರುಂ ।
ಸಲ್ಲಲಿತಮಪ್ಪ ಧರ್ಮ
ಕ್ಕೆಲ್ಲಿಯುಮೋವಂತೆ ಬಾರರಘವಶದಿಂದಂ ॥ ೧೬೬

ಇರುಳಪ್ಪುಗಳ್ ಪಶ್ಚಿಮ
ಶರನಿಧಿಗಿೞಿವಂತೆ ಸೂರ್ಯನಘಸಂಕುಲದಿಂ ।
ಪೊರೆದಿರ್ದ ತೀವ್ರರುಂ ಸಿ
ಷ್ಟರನರಕಕ್ಕಿೞಿವರಲ್ಲಿ ಸಂದೆಯಮುಂಟೇ ॥ ೧೬೭

---

1 ಮುಟ್ಟನುಡಿವುದ ೦ (ಗ)  2 ಮಂದರ (ಕ. ಬ.)  3 ಬೀಳ್ಪೊರಸಿನಂತೆ (ಗ)

ಎನಿತು ಕಡುಗೂರ್ತೊಡಂ ಬೇ
ವಿನ ಮರನಂ ಮಳಯಜೋರ್ವಿಜಂ ಮಾಡುವೆನೆಂ |
ಬನೆ ಗಾಂಪನಂತೆ ಪಾತಕ
ರೆನಿಸಿಂದೊಡಮಮಳಧರ್ಮಮಂ ಪೊರ್ದುವರೇ || ೧೬೮

ಎಂದು ನುಡಿಯುತ್ತುಂ [ಧರ್ಮವಾತ್ಸಲ್ಯದಿಂ ಕಾರುಣ್ಯರಸಮೊದವೆ ಸಂಘಶ್ರೀಯುಂ ನರಕಕ್ಕೆ ಸಲಲೀಯದೆ ಪಂಚಮಗತಿಯನೆಯ್ದಿಸುವೆನೆಂಬ ಮೋಹದಿಂದೆ]ನಿತಾನುಂ ತೆಱದ ಕಥೆಗಳುಮಂ ದೃಷ್ಟಾಂತಂಗಳುಮಂ ತೋಱಿ ನುಡಿದುಂ ವ್ರತಕ್ಕೆ ತರಲಾಱದೆ || ೧೬೯

ವರಚಾರಣಋಷಿಯರನಂ
ಬರದೊಳ್ ಪೋಗುತ್ತುಮಿರ್ದರಂ ನಿನಗಂದಾ |
ದರದಿಂ ತೋಱಿದೆನವನ
ಚ್ಚರಿಪಟ್ಟು ಮನೋನುರಾಗದಿಂ ಕಂಡುಂ ನೀಂ || ೧೭೦

ಜಡಮತಿಯಾಗಿ ನಿರ್ಬುದ್ಧಿತನದಿಂ ಮಿಥ್ಯಾತ್ವಯುತರಪ್ಪ ಧೂರ್ತರ ಮಾತಂ ಕೇಳ್ದು ಪರತ್ರೆಯುಮಿಲ್ಲ [1] ದೈವಮುಮಿಲ್ಲೆಂದು ಬೆಣಕಟಂಗೆಡೆಯಬೇಡ || ೧೭೧

ಅನುಪಮತಪದ ಫಲಂ ಮೋ
ದಿನಿಯೊಳ್ ಪೇೞಲ್ಲದಂದು ಪ್ರತ್ಯಕ್ಷಂ ನೀಂ |
ಘನಪದದೊಳ್ ಪೋಪವರಂ
ಮುನಿವರರಂ ವೃದ್ಧಿಯುಕ್ತರಂ ನಿಶ್ಚಯದಿಂ || ೧೭೨

ಕಂಡಿರ್ದುಂ ಮತ್ತಂ ವೇ
ತಂಡದ ವಿವಾಹಮನೆ ಮಾಡಿ ಸುವ್ರತಮಂ ಕೈ |
ಕೊಂಡು ಮತಿಗೆಟ್ಟು ಬಿಸುಟೀ
ಮಿಂಡರ ಮಾತಿಂಗೆ ಬೆಚ್ಚಿ ಸದ್ದರ್ಶನಮಂ [2] || ೧೭೩

---

[1] ಧರ್ಮಮುಮಿಲ್ಲ (ಗ)   [2] ಬೆಚ್ಚಿಸಲ್ ಸದ್ಧನಮಂ (ಕ. ಬ.)

ನಿನ್ನ ಗುರುವಪ್ಪ ಬೆಳಪುಂಜನ ವಚನಮನಂತರಿಸು ನೀನೆ ಪ್ರತ್ಯಕ್ಷಮಾಗೆ ನಭೋಂಗಣದೊಳ್ ಪೋಪ ಚಾರಣಋಷಿಯುರಂ ಕಂಡುದುಂಟೋ ಪೇೞುಲ್ಲವೋ ಪುಸಿಯುದೆ ಪೇೞೆನೆ ಬುದ್ಧಶ್ರೀಯು ಕುಹೇತುದೃಷ್ಟಾಂತವನೆ ನಂಬಿ ತೞುಂಟಿಗವೊೞುಂಟಿಗಂ ಮರ್ದಿಲ್ಲೆಂಬುದಂ ನನ್ನಿಮಾಡಿ ಚಾರಣಋಷಿಯುರಂ ಕಾಣೆನೆಂದು ತಲೆಮುಟ್ಟಿರಸನೊಡನೆ ಬಾಯುಂ ಬಡಿವುದುಂ॥ ೧೩೪

ಪುರದೇವತೆಗಳ್ ಮುನಿಸಿಂ
ಪರಿತಂದು ದುರಾತ್ಮನೆರಡು ಕಣ್ಗಳುಮಂ ನಿ।
ಷ್ಠುರಮಾಗಿ ಪೊಯ್ಯೆ ತೊಟ್ಟನೆ
ಕುರುಡಾದಂ ಪುಸಿಯ ಪೊಟ್ಟಣರ್ಗದು [1] ಪಿರಿದೇ ॥ ೧೩೫

ತಲೆ ನೋಯೆ ಕಣ್ಗಳೆರಡುಂ
ನೆಲದೊಳ್ ಬಿರ್ದಿರೆ ಸಭಾಳಿ ಬೆಱಗಾಗೆ ಖಳಂ।
ನೆಲನಂ ತಡವರಿಸುತ್ತುಂ
ಪೊಲೆಯರ ತೆಱದಿಂದೆ ದೂರದೊಳ್ ಕುಳ್ಳಿರ್ದಂ ॥ ೧೩೬

ಅಂತಿರ್ದ ಸಂಘಶ್ರೀಯುಂ ಸಭಾಜನಂ ನೋಡಿ ಪಾಪದ ಪ್ರತ್ಯಕ್ಷಫಲಮಂ ಕಂಡು ತಮ್ಮೊಳಿಂತೆಂದರ್ ॥ ೧೩೭

ಸರಸಿಜಮಿತ್ರನಂತೆ ತನು ಶೋಭಿಸೆ ಮಾನಸ ದೇವಖೇಚರೇ
ಶ್ವರನತಪಾದಪಂಕರುಹರುತ್ತಮರೂರ್ಜಿತರಂದು ಚಾರಣರ್
ನಿರುಪಮರಂತರಿಕ್ಷದೊಳಗುರ್ವಿಸಿ ಪೋಪರನೊಳ್ಪತಾಗೆ ಭಾ
ಸುರಗುಣ [2] ತೋೞೆ ಕಂಡು ಖಳನಕ್ಕಟ ನೋಡಿರ ಕಾಣೆನೆಂದಪಂ॥೧೩೮

ಇವನಿಂ ಬಿಟ್ಟು ಬ್ರಹ್ಮೇತಿಕಾಱರುಂ ದುಃಖಭಾಜನರುಮಸತ್ಯವಾದಿಗಳುಮಿಲ್ಲೆಂದು ಮತ್ತಮಿಂತೆಂದರ್ ॥ ೧೩೯

---

[1] ಪೊಟ್ಟಳರ್ಗದು (ಕ. ಖ.)   [2] ಭಾಸುರಮಣಿ (ಕ. ಖ.)

ಉಳ್ಳುದನಿಲ್ಲೆಂದೀತಂ
ಕಳ್ಳಂ ನುಡಿದಂತೆ ಪುಸಿದ [1] ಪಾಪದ ಫಲದಿಂ ।
ದೆಲ್ಲಿಯು ನಿಲ್ಲದೆ ತಾಂ ತಳು
ವಿಲ್ಲದೆ ಕಣ್ಣೊಡೆದು ದುಃಖಭಾಜನನಾದಂ ॥ ೧೪೦

ವಸುಮತಿಯೊಳ್ ವಿಬುಧರ್ ಭಾ
ವಿಸುವೊಡೆ ನರಕಕ್ಕೆ ಪೋಪ ಪೆರ್ದಾರಿ ಮಹಾ ।
ವ್ಯಸನಕ್ಕೆ ಮೂಲಮಾಱುವೊಡೆ
ಪುಸಿಯಿಂದಂ ಬಿಟ್ಟು ಪಾತಕಂ ಪೆಱತೊಳವೇ ॥ ೧೪೧

[2] ಎಂದು ಸಮಸ್ತಜನಮುಂ ಸಂಘಶ್ರೀಯನಶ್ರೀಯುಂ ಕಂಡಂತೆ ಬಯ್ಯುತ್ತಿರೆ [ಧನದ ಮಹಾರಾಜಂ ಮಿಥ್ಯಾತ್ವಕ್ಕೆ ಗಡಗಡನಡುಗಿ ಕಣ್ಣೊಡೆದು ನೆಲದೊಳ್ ಪೊರಳ್ವ ಸಂಘಶ್ರೀಯುಮಂ ಮನೆಗೆ ಪೊತ್ತುಕೊಂಡು ಪೋಗಿಮೆಂದು ಪೇೞ್ದು ಕಳುಪುವುದುಂ] ಸಂಘಶ್ರೀ ಚಿಂತೆಯಿಂ ಜರ್ಜರನೆ ಜಱಿದು ದುಃಖಪೀಡಿತನಾಗಿ [ಕೆಲವುದಿವಸಕ್ಕೆ] ಸತ್ತು ನರಕಕ್ಕೆಯ್ದಿ ದೀರ್ಘಸಂಸಾರಿಯಾದನವನೇೞ್ತಲೆವರೆಗಂ ಪುಟ್ಟಿದ ಮಕ್ಕಳೆಲ್ಲ ಮಂಧಕರಪ್ಪುದಱಿಂದಾದೇಶಕ್ಕಂಧಕವಿಷಯಮೆಂದು ಪೆಸರಾಯ್ತು. ವೆಂಗಿವಲ್ಲಭನಪ್ಪ ಧನದಮಹಾರಾಜನಿತ್ತಲ್ ಸಂಸಾರದ ವಿಚಿತ್ರಮಂ ಕಂಡು ರಾಜ್ಯಕ್ಕೆ ಬೆಚ್ಚಿ ವಿಷಯಸುಖಕ್ಕೆ ಭಯಸ್ಥನಾಗಿ ॥ ೧೪೨

ಚಾರಣಋಷಿಪದಯುಗಳಮ
ನೋರಂತಿರೆ ಕಂಡು ಕಾಣೆನೆಂದಂ ದುಷ್ಟ ।
ಪ್ರೇರಣೆಯಿಂದೇನಾಗದೊ
ಧಾರಿಣಿಯೊಳ್ ದುಷ್ಟಸಂಗತಂ ಪೊಲ್ಲದಱಿಂ ॥ ೧೪೩

---

1 ಕಳ್ಳಂ ಕಾಡಿದಂತೆ ಪುಸಿದು (ಗ)

2 ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ
ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಳಸುತ್ತ ಮೂಳೆಯೊಳ್
ಪುಸಿವನ ಕಾಲ ದೂಳಿಯೊಳಪೊಕ್ಕಪುದೆಂದೆಡಗಾಲ ಕೆಪ್ಪಿನಿಂ
ದೆಸೆಮುಸಿಯಾಗಿ ಮುಚ್ಚಿದಳಿದೇಂ ಪುಸಿ ಪೊಲ್ಲದು ಭೂತಳಾಗ್ರದೊಳ್ ॥(ಗ)

ಕಣ್ಣೊಳವಾಗಿಯುಂ ಕತ್ತಲೆಯೊಳ್ ಮುಂದಿರ್ದ ಮಾನಿಸರಂ ಕಾಣದಂತೆ ಜೀವಕ್ಕೆ ಮೂಱುಂ ಲೋಕಮನಱಿವ ಶಕ್ತಿಯುಂಟಾಗಿಯುಂ ಕರ್ಮದ ತೀವ್ರತೆಯಿಂ ಸದ್ದರ್ಶನಮನಱಿಯಲಾಱದುದಱಿಂ ದಾಪಾಪಮೆ ಕಡುಬಲ್ಲಿತ್ತೆಂದು ॥ ೧೮೪

ಮಿಥ್ಯಾತ್ವಬಂಧದಿಂದಂ
ಮಿಥ್ಯಾದೃಷ್ಟಿಗಳ ಮಾತೆ ರುಚಿಯಾಗಿರ್ಕುಂ ।
ಮಿಥ್ಯಾಹಾರಕರೆಂದುದೆ
ಪಥ್ಯಂ ಜೀವಕ್ಕೆ ಬಗೆದು ನೋೞ್ಪೊಡೆ ಜಗದೊಳ್ ॥ ೧೮೫

ಮತ್ತಂ ಕೋಡಗಂ ಮಾನಿಸರಂತಾಗಿಯುಂ ಮಾನಿಸಗುಣಮಂ ಪೋಲದಂತೆ, ಬೆಕ್ಕು ಪುಲಿಯ ರೂಪಾಗಿಯುಂ ಪುಲಿಯಲ್ಲದಂತೆ, ಪಿತ್ತಳೆ ಪೊನ್ನಂತಾಗಿಯುಂ ಪೊನ್ನಲ್ಲದಂತೆ, ಹೊಱಸು ಹಂಸೆಯಂತಾಗಿಯುಂ ಹಂಸೆಯಲ್ಲದಂತೆ, ತೊತ್ತು ವ್ಯವಸಾಯವಂತೆಯಾಗಿಯುಂ ಪೆಂಡತಿಯಲ್ಲದಂತೆ, ಪೊಲೆಯರ್ ಧನಕ್ಕೊಡೆಯರಾಗಿಯುಂ [1] ಮೇಲ್ಜಾತಿಯಾಗದಂತೆ, ಹಱುಹೆ [2] ಮಣಿಯಾಗಿಯುಂ ಬಲ್ವಸ್ತ್ರಮಾಗದಂತೆ, ಬೇಡಗೊಟ್ಟಮೂರಾಗಿಯುಂ [ಪಟ್ಟಣಮಾಗದಂತೆ, ಬಳೆ ತುಡಿಗೆಯಾಗಿಯುಂ ಸರಿಗೆಯಲ್ಲದಂತೆ, ಸಾವೆ ಬೆಳಸೆಯಾಗಿಯುಂ ಕಳವೆಯ ಬೆಳೆಯಲ್ಲದಂತೆ], ಪಗರಣಿಗನರಸಾಗಿಯುಂ ಕ್ಷತ್ರಿಯನಲ್ಲದಂತೆ, ಪಕ್ಷಿಗಳಾಕಾಶದೊಳ್ ಪೋಪುವಾಗಿಯುಂ ವಿದ್ಯಾಧರರಲ್ಲದಂತೆ, ನಾಯ್ ಸಿಂಹಾಕಾರಮಾಗಿಯುಂ ಸಿಂಹಮಲ್ಲದಂತೆ, ಜಾದು ಕೆಚ್ಚನಾಗಿಯುಂ ಕುಂಕುಮಮಲ್ಲದಂತೆ, [3] ಗುಡಿಸಿಲ್ ಚೆಲ್ವಾಗಿಯುಂ ಮಾಳಿಗೆಯಲ್ಲದಂತೆ, [4] ಬೂತೊಳ್ಳಿದನಾಗಿಯುಂ ಪ್ರಭುವಲ್ಲದಂತೆ, [5] ಪಗಿನಿನಿದಾಗಿಯುಂ ಬೆಲ್ಲಮಲ್ಲದಂತೆ, ಕಾಲುಗುರುದ್ದಮಾಗಿಯುಂ ಸೆಳ್ಳುಗುರಲ್ಲದಂತೆ, ದೂರಭವ್ಯರುಮಭ

---

1 ಧನಮೊಡೆಯರಾಗಿಯುಂ (ಗ)    2 ಪರುಣೆ (ಕ. ಬ.)
3 ಕಳ್ಳಿ ಹಳಿಯಾಗಿಯುಂ ಅಳೆಯಲ್ಲದಂತೆ (ಗ)
4 ಹೊರಸು ನೇರಿತಾಗಿಯುಂ ಹಾಸಲ್ಲದಂತೆ (ಗ)
5 ಹಿಂಟೆ ಬಲ್ಲಿತ್ತಾಗಿಯುಂ ಕಲ್ಲಲ್ಲದಂತೆ (ಗ)

ವ್ಯರುಂ ಶ್ರಾವಕರಾಗಿಯುಂ ಋಷಿಯರಾಗಿಯುಂ ಮೋಕ್ಷಗಾಮಿಗಳಲ್ಲರ್; ಬೆಳಗುಂ ಬೆಂಕೆಯುಂಬೆರಸಾದಿತ್ಯನೆಂತು, ಬಣ್ಣಮುಮೊರೆಯುಂಬೆರಸು ಪೊನ್ನೆಂತು, ಕಾಂತಿಯುಂ ಸೌಮ್ಯತೆಯುಂಬೆರಸು ಚಂದ್ರನೆಂತು, ಕಂಪುಂ ಕೆಂಪುಂ[1] ಬೆರಸು ಸಂಪಗೆಯೆಂತು, ಗುಣ್ಪುಮಗಲಮುಂ ಬೆರಸು ಸಮುದ್ರಮೆಂತು, ತೋರಮುಮುದ್ದಮುಂಬೆರಸು ಮಂದರಮೆಂತು, ಪಾಸುಂ ಪೊಕ್ಕುಂಬೆರಸು ಸೀರೆಯೆಂತು, ಮದವಣಿಗನುಂ ಮದವಳಿಗೆಯುಂಬೆರಸು ಮದುವೆಯೆಂತು, ನಾಡುಂ ಬೀಡುಂಬೆರಸು ರಾಜ್ಯಮೆಂತು, ಬಿಲ್ಲುಮಂಬುಂವೆರಸು ಬಿಲ್ಗಾಱನೆಂತು, ಕರಮೊಪ್ಪುಗುಮಂತೆ ಭಾವದೊಳಂ ಸಮ್ಯಕ್ತ್ವದೊಳಂ[2] ಬಳ್ಳಿದರೆನಿಸಿ ನೆಗೞ್ದಾಸನ್ನಭವ್ಯರೆ[3] ಮೋಕ್ಷಗಾಮಿಗಳೆಂದು ಮನದೊಳ್ ಭಾವಿಸಿ ॥ ೧೮೬

ಹೆಪ್ಪಿಟ್ಟೊಡೆ ಪಾಲ್ ಮೊಸರಾ
ಗಿಪ್ಪಂತಿರೆ ನೀರ್ಗಳಾಗಲಱಿಗುಮೆ ಭವ್ಯರ್ ।
ಬಪ್ಪಂತಿರಭವ್ಯರ್ಕಳ್[4]
ಬಪ್ಪರೆ ಸದ್ದರ್ಶನಕ್ಕೆ ಬಾರದೆ ಪೋಪರ್ ॥ ೧೮೭

ಎಣ್ಣೆ ನುಣ್ಪಂ ಮಾಡುವಂತೆ ಕಳ್ಳಿ ಮಾಡುಗುಮೆ, ಕೂಟ್ತಣಿವಂ ಮಾಡುವಂತೆ ಬಾಡು ಮಾತುಗುಮೆ, ಸಿರಿ ಮೆಯ್ಯೊಪ್ಪಂ ಮಾಡುವಂತೆ ಗೋಣಿ ಮಾಡುಗುಮೆ, ಕಿಚ್ಚು ಪುಳ್ಳಿಯಂ ಬೂದಿಮಾಡುವಂತೆ ಬಿಸಿಲ್ ಮಾಡುಗುಮೆ,[5] ಮಾಡಲಾಱವಂತೆ ಸಮ್ಯಕ್ತ್ವಂ ಕರ್ಮಗಳ್ಗೆ ಕೇಡಂ ಮಾಡುವಂತೆ ಮಿಥ್ಯಾತ್ವಂ ಮಾಡಲಾಱದಾ ಸಮ್ಯಕ್ತ್ವ[ದ ಮಿಥ್ಯಾತ್ವದ] ಭೇದಮಂ ಪೇೞ್ವೊಡೆ, ತೋಂಟದ ಗಿಡುವಿನ ಮಾಳದ ಗಿಡುವಿನ, ಸಮರ್ಥರ ಶಿಶುವಿನ ಪೊಲೆಯರ[6] ಶಿಶುವಿನ, ಪೊನ್ನ ರಾಶಿಯು

---

1 ಪೆಂಪುಂ (ಗ) 2 ಸುವ್ರತದೊಳಂ (ಕ. ಬ.)
3 ಆ ಸನ್ನುತಭವ್ಯರೆ (ಗ) 4 ಬಪ್ಪಂತಿರೆ ಕಷ್ಟನರರ್ (ಗ)
5 ಕೊಡಲಿ ಮರನಂ ಕಡಿಖಂಡಂ ಮಾಡುವಂತೆ ಕುಡುಗೋಲ್ಮಾಡುಗುಮೇ (ಗ)
6 ಬಡವರ (ಗ)

ಪಣ್ಣ ರಾಶಿಯು, ರತ್ನದ ತೊಡವಿನ ನೂಲ ತೊಡವಿನ, ಸೊಡರಿನ ಕಾೞ್ಕಿಚ್ಚಿನ, ರಕ್ಷೆಯುಂತರಿದುಮೊಳೆದವುಮಕ್ಕುಂ ॥ ೧೮೮

ಕಾಸಿದೊಡೆ ಬೆಣ್ಣೆ ತುಪ್ಪಂ
ಲೇಸಪ್ಪವೊಲೆಣ್ಣೆ ಕಾಸೆ ಘೃತಮಪ್ಪುದೆ ಕೇ ।
ಳಾಸನ್ನಭವ್ಯನಮೃತ
ಶ್ರೀಸತಿಗಿರದೆಱಗುವಂತೆ ಖಳನೆಱಗುಗುಮೇ ॥ ೧೮೯

ಕೆಸಱೊಳ್ ನೆಲ್ ಬೆಳಗುಮಲ್ಲದೆ ಜೋಳಂ ಬೆಳೆಯಲಱಿಯದು ಬಯಲೊಳ್ ಜೋಳಂ ಬೆಳೆವಂತೆ ನೆಲ್ ಬೆಳೆಯಲಱಿಯದಂತೆ ಪುಸಿವ ಕಷ್ಟರುಂ ಪುಸಿವರನೆ ಪೊರ್ದುವರಲ್ಲದೆ ಸತ್ಯಮುಳ್ಳರಂ ಪೊರ್ದಲಱಿಯರ್, ಸತ್ಯಮುಳ್ಳವರ್ ಸತ್ಯಮುಳ್ಳವರನಲ್ಲದೆ ಪುಸಿವರಂ ಪೊರ್ದಲಱಿಯರೆಂದು ಭಾವಿಸಿ ಮಿಥ್ಯಾತ್ವದ ಪ್ರತ್ಯಕ್ಷಫಲಮಂ ಕಣ್ಣಾರೆ ಕಂಡು ಮತ್ತೆ ಪುಸಿಯೊಳ್ ಪೊರ್ದಿದ ಕೊಲೆಯೊಳ್ ಪೊರೆಯದ ಜಿನೇಂದ್ರದೀಕ್ಷೆಯನುದಾಸೀನಂಗೆಯ್ದು ಸಂಘಶ್ರೀಯಂತೆ ಮಿಥ್ಯಾತ್ವಕ್ಕೆಡೆಗೊಟ್ಟು ನರಕದೊಳ್ ತಲೆಕೆಳಗಾಗಿ ಬಿದ್ದು ಮಱುಗುತಿರ್ಪುದು ಕಜ್ಜಮಲ್ಲೆಂದು ತನ್ನೊಳ್ ಬಗೆದು ॥ ೧೯೦

ಪರಮಜಿನೇಂದ್ರದೀಕ್ಷೆಯನುದಾರತೆಯಿಂ ನೆಱೆ ತಾಳ್ದಿ ಕರ್ಮಭೂ
ಮಿರುಹಮನೊಪ್ಪದಿಂ ಕಡಿದು ಶಾಶ್ವತಸೌಖ್ಯಮನೆಯ್ದುವೆಂ ವಸುಂ
ಧರೆ ಮರ್ಝು ಭಾಪು ಜೀಯೆನೆ ಧರಿತ್ರಿಯ ಭಾರಮನಾಂತು ಱಿಕ್ಕಟಂ
ನರಕದೊಳರ್ದು ದುಃಖಜಲರಾಶಿಯನೀಸುವ ಗಾಂಪದೇವುದೋ ॥ ೧೯೧

ಎಂದು ಪರಿಚ್ಛೇದಿಸಿ ತನ್ನ ಮಗನಪ್ಪ [ಇಂದ್ರಗುಪ್ತನಂ ಬರಿಸಿ ಮುಂದೆ ಕುಳ್ಳಿರಿಸಿ ಧರಣೀಭಾರಮನೊಪ್ಪುಗೊಳ್ಳೆಂಬುದುಮಾತನಿಂತೆಂದಂ ॥ ೧೯೨

[ಕ]ರಿ ತಾಳ್ದಿ ನಿಂದ ಪುಷ್ಪಕ
ಭರಮಂ ಭರದಿಂದೆ ತಾಳ್ದಲಾರ್ಪುದೆ ಕಪಿ ದೇ ।
ವರ[ತಾಳ್ದಿ] ನಿಂದ ಧರಣೀ
ಭರಮಂ ತಾಳಲ್ಕೆ ದೇವ ಪೇಡೆನ್ನಳವೇ ॥ ೧೯೩

ಎಂಬುದುಂ ನೆಗನ ಮಾತಿಂಗಂ ವಿನಯಕ್ಕಂ ಮೆಚ್ಚಿ ತಕ್ಕೈಸಿ ಕೊಂಡು ಮೊಗಮಂ ನೋಡಿ ಪಲತೆಱದ ಮೃದುವಚನಂಗಳಿಂ ದೆಂತಾನುಮೊಡಂಬಡಿಸಿ ॥ ೧೯೪

ನೆರೆದು ಲತಾಂಗಿಯರ್ ಪದೆದು ಮಂಗಳಮಂ ಮೃದುನಾದದಿಂದೆ ಸು
ಸ್ವರದಿನಗುರ್ವಿನಿಂದೊದವಿ ಪಾಡೆ ವಿದಗ್ಧೆಯರೊಲ್ದು ಪೊನ್ನ ಚಾ
ಮರಮನಳುರ್ಕೆಯಿಂ ಮುದದಿನಿಕ್ಕೆ ಪಯೋನಿಧಿಯಂತೆ ದುಂದುಭಿ
ಸ್ವರಮೆಸೆದೊಪ್ಪೆ ಕಟ್ಟಿದನಿಳಾಧಿಪನಾತ್ಮಸುತಂಗೆ ಪಟ್ಟಮಂ ॥ ೧೯೫

ಅಂತು ಪಟ್ಟಮಂ ಕಟ್ಟಿ ವೆಂಗಿಮಂಡಲಂಮೊದಲಾಗೆ ಸಕಲಧರಾ ಭಾರಮಂ ಕೊಟ್ಟು ಧರ್ಮಮುಮಂ ಜಿನೇಂದ್ರಪದಸೇವೆಯುಮಂ ಚಾತುರ್ವರ್ಣ್ಯಸಂಘದೊಳಾದ ಕೂರ್ಮೆಯುಮಂ ದರ್ಶನದೊಳಾದ ನಂಬುಗೆಯುಮಂ ಭವ್ಯರೊಳಾದ ಕೆಳೆಯುಮಂ ಸುಕವಿಗಳೊಳಾದ ಗೋಷ್ಠಿಯುಮಂ ದಾನದೊಳಾದ ವಿನೋದಮುಮಂ ಪೂಜೆಯೊಳಾದಾ ನಂದಮುಮಂ ಬಿಡವೇಡೆಂದು ಬುದ್ಧಿವೇೞ್ದು ಕೈಮುಗಿದು ಬೇಡಿ ಕೊಂಡು][1] ॥ ೧೯೬

ಧರಣಿಯ ಮೋಹದಿಂ ಸೆಡೆದು ನಿಲ್ಲದೆ ಪುತ್ರನ ಮೋಹದಿಂ ಮನಂ
ಮುರಿಯದೆ ಮುಯ್ವಿಕ್ಕೆಳಸಿ ನಿಲ್ಲದೆ ಪೆಂಡಿರೊಳಾದ ಮೋಹಮಂ
ಸ್ಮರಿಯಿಸಿ ಮೆಲ್ಲಮೆಲ್ಲನೊಳಸಾರದೆ ಪಾರಣತಂತ್ರವಾಹನೋ
ತ್ಕರದಱಮೋಹದಿಂ ಸೆಱಗುವಾರದೆ ಚಿಕ್ಕನೆ ಬಿಟ್ಟು ರಾಜ್ಯಮಂ ॥೧೯೭

ನಾನೂರ್ವರರಸುಮಕ್ಕಳ್ವೆರಸು ಪುರದಿಂ ಪೊಱಮಟ್ಟು[2] ಪೋಗಿ ಶ್ರುತಾರ್ಣವರೆಂಬಾಚಾರ್ಯರಲ್ಲಿ ಜಿನದೀಕ್ಷೆಯಂ ಕೈಕೊಂಡು ದ್ವಾದ ಶಾಂಗಶ್ರುತಧರರಾಗಿ ಗುರುಗಳಾಜ್ಞೆಯಿಂದೇಕವಿಹಾರಮನೆತ್ತಿಕೊಂಡು॥

---

[1] ಇಂದ್ರಗುಪ್ತಂಗೆ ಪಟ್ಟಮಂ ಕಟ್ಟಿ (ಗ) [2] ನಾಲ್ನೂಸಿರ್ವರ ಮಕುಟ ಬದ್ಧರವೆರಸು (ಗ)

[ಹಿಮಮುಮಂ ತಕ್ಕೈಸಿಕೊಂಡುದ್ಧತಿಯಿನಡರಿ ಸನ್ಮಾರುತಂ ತೀಡೆ ಧಾತ್ರೀ
ರಮಣಿ ಪ್ರಖ್ಯಾತೆ ಮುತ್ತಿಂ ಸಮೆದ ತುಡಿಗೆಯುಂ ತೊಟ್ಟಳಂಬಂದದಿಂದಂ
ಕ್ರಮದಿಂ [ಮಂ]ಜೊಪ್ಪೆ ಶೀತಂ ಜಗಮನಲೆಯೆ ಬಂದೌಕಿದೊಂದ್ಯೆಕಿ
ಲೊಳ್ ಕೇ
ಳ ಮನಂಗೆಟ್ಟೋಡದಿರ್ದರ್ ತೊಱೆಯ ಕೆಱೆಯ ತೀರಂಗಳೊಳ್
ಧೈರ್ಯದಿಂದಂ || ೧೯೯

ಅಂತು ಬೆಳ್ಯಾಳಂತೆ ತಲ್ಲಣಿಸದೆ ಮಾಗಿಯ ನಾಲ್ಕು ತಿಂಗಳುಂ
ಬೆಳ್ಳವಾಸ (?) ದೊಳಿರ್ದರ್ || ೨೦೦

ಬಿಸಿಲುರ್ವಿಂದಳ್ಕಿ ಬೆಂಬೀೞದೆ ತೃಷೆಯೊದವಿಂಗಳ್ಕಿ ಬಾಯ್ವಿಟ್ಟು ಬೇಗಂ
ಕುಸಿದೋರಂತಣ್ಮುಗೆಟ್ಟೋಡದೆ ಸುರಧರಣೀಂದ್ರಂಬೊಲುರ್ವೀತಳಂ ಸಂ
ತಸದಿಂದಂ ಜೀಯ ಭಾಪೆಂದಧಿಕವಿನಯದಿಂ ನಿಲ್ಲದೋರಂದದಿಂ ಬ
ಣ್ಣಿಸೆ ನಿಂದಂ ಯೋಗಿಸಂದ್ಯಂ ಗಿರಿಶಿಖರದೊಳುಗ್ರೋಗ್ರಮಾತಂಗಸಿಂಹಂ||

ಅಂತು ದೇಸಿಗನ ಕಾಳಗದಂತೋಸರಿಸಿ ನುಸುಳ್ದು ಪೋಗದೆ
ಬೇಸಗೆಯ ನಾಲ್ಕು ತಿಂಗಳುಂ ಕಲ್ಮೆಲೆನಿಂದು || ೨೦೨

ಕುಡುಮಿಂಚಾಶ್ಚರ್ಯಮಂ ಪುಟ್ಟಿಸುತಿರೆ ಭಯಮಂ ಮಾಡೆ ಮೇಘ
ಸ್ವನಂ ನೇ
ರ್ಪಡೆ ಪಾವಂ ವ್ಯೋಮದಿಂದಂ ತಡೆಯದೆಚಿತೆಯೊಳಿಕ್ಕಿದಂತಲ್ಲಿಯುಂ
ಮಾ
ಣ್ದುಡುಗಿತ್ತಂಬೊಂದುಮಾತಂ ಪಡೆಯದೆ ಮೞೆ ಭೋರೆಂದು ಕೇಳ್
ಪೊಯ್ಯೆ ವೀರಂ
ದೃಢಚಿತ್ತಂ ಶಂಕೆಯಿಂ ಬೆಚ್ಚದೆ ಮರವೊದಲೊಳ್ ನಿಂದನತ್ಯಂತಧೈ
ರ್ಯಂ || ೨೦೩

ಅಂತು ಮೞೆಗಾಲದ ನಾಲ್ಕು ತಿಂಗಳುಂ ದರವುರಿಗಂತರವರಿಸದೆ
ಮರವೊದಲೊಳಿರ್ದರ್ ] || ೨೦೪

ದುರಿತವಿರೋಧಿಯನದಟಲೆ
ದರವರಿಸದೆ ಮೋಕ್ಷಮೆಂಬ ಬಲ್ಗೋಂಟೆಯನಾ ।
ದರದಿಂದೀಭವದೊಳ್ ಎ
ಚ್ಚರದಿಂದಂ ಕೊಳ್ವೆನೆಂಬ ಮನದೊಲವಿಂದಂ ॥ ೧೦೫
ಧರೆ ಜೀಯೆನೆ ದೇವೇಂದ್ರ
ರ್ವೆರಸು ಸುರರ್ ನಚ್ಚಿ ಮೆಚ್ಚಿ ಬಣ್ಣಿಸುತಿರೆ ದು ।
ರ್ಧರಘೋರವೀರತಪದೊಳ್
ಚರಿಯಿಸಿದಂ ಸುಕವಿನಿಕರಪಿಕಮಾಕಂದಂ ॥ ೧೦೬

[ಜಿನತತ್ತ್ವಾನುರಾಗನುಂ ವಾತ್ಸಲ್ಯರತ್ನಾಕರನುಂ ಚತುಷ್ಕಷಾಯದೂರನುಂ ನಿಷ್ಕಳಂಕನುಂ ನವವಿಧಬ್ರಹ್ಮಚರ್ಯೋಪೇತನುಂ ಚತುರ್ಗತಿಗಮನಭೀತನುಂ ಷಡ್ವಿಧಜೀವೋಪೇತನುಂ ಲೋಕಪೂಜಾಲಾಭನಿರಪೇಕ್ಷನುಮಾಗಿ ತಪದೊಳ್ ತೀರ್ವೆರಸು] [1] ನೆಗೞ್ದ [2] ಅವಂತಿವಿಷಯವ ವಿದಿಸೆ [3] ಯೆಂಬ ತೊಱೆಯ ತಡಿಯ್ಯೈರಣೆ [4] ಯೆಂಬಪರ್ವತದೊಳಷ್ಟವಿಧಕರ್ಮಂಗಳಂ ಕಿಡಿಸಿ ಕೈವಲ್ಯಲಕ್ಷ್ಮೀಮನಃಪ್ರಿಯನಾದನದಱಿಂ ॥ ೧೦೭

ಪುಸಿಯಿಂದಂ ಸಂಘಶ್ರೀ
ಕುಸಿದಿರ್ದಂ ರೌರವಾಂಬುರಾಶಿಯೊಳದಱಿಂ ।
ಪುಸಿ ಪೊಲ್ಲೆಂದಂಜುವ ಮಾ
ನಿಸನೆಯ್ದುಗುಮಲ್ತೆ [5] ನಿರ್ವೃತಿಶ್ರೀಸುಖಮಂ ॥ ೧೦೮
ಪುಸಿ ಪೊಲ್ಲೆಂದಂಜಿ ಕರಂ
ವಸುಧೇಶಂ ತಪದೊಳೆಸಗಿ ನಿರ್ವೃತಿಯಂ ಸಂ ।
ತಸದಿಂ ಪೊರ್ದದನದಱಿಂ
ಪುಸಿ ಪೊಲ್ಲೆಂದಂಜಿ ಬೆಚ್ಚಿ ನಡೆವುದು ಪುರುಷಂ ॥ ೧೦೯

---

1 ಮೋಕ್ಷಮೆಂಬ ಪಟ್ಟಣಮಂ ಎ। ಚ್ಚರದಿಂ ಪೊಗುವುಜ್ಜುಗದಿಂ ಭರದಿಂದಂ ಸುಕವಿನಿಕರಪಿಕಮಾಕಂದಂ (ಗ) 2 ಅಂತು (ಗ) 3 ವಿದದದ್ವೆ (ಗ)
4 ಯರಣೆ (ಗ) . 5 ಮತ್ತೆ (ಗ)

ಎಂದು [1] ಸತ್ಯದೊಳಾದ ಸುಖ [2] ಮುಮನಸತ್ಯದೊಳಾದ ದುಃಖ [3] ಮುಮಂ [ಪ್ರತ್ಯಕ್ಷವಾಗೆ ಗಣಧರಸ್ವಾಮಿಗಳ್ ಪೇೞ್ವುದುಂ] [4] ‖ ೨೧೦

ಪರಮಶ್ರೀಜೈನತತ್ತ್ವಾಮೃತಜಲನಿಧಿವಿಸ್ತೀರ್ಣಸಂಪೂರ್ಣಚಂದ್ರಂ
ಸುರಶೈಲೇಂದ್ರಕ್ಷಮಂ ವಾಗ್ವಧುಪತಿ ಧರಣೀಸ್ತುತ್ಯನತ್ಯಂತಶುದ್ಧಾ
ಭರಣಂ ತ್ರೈವಿದ್ಯಚಕ್ರೇಶ್ವರವಿಮಲಪದಾಂಭೋಜಭೃಂಗಂ ಮುನೀಂದ್ರಾಂ
ಬುರುಹಾರ್ಕಂ ಹೃಷ್ಟನಾದಂ ಸುಕವಿಜನಮನಃಪದ್ಮಿನೀರಾಜಹಂಸಂ [5] ‖

ಇದು ನಿಖಿಲದಿವಿಜಪರಿವೃಢಮುಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ನಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತದಿಗಂಬರದಾಸನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ಸತ್ಯವ್ರತವರ್ಣನಂ
ಏಕಾದಶಾಶ್ವಾಸಂ.

---

1 ಅಂತು (ಗ) 2 ಮೋಕ್ಷ (ಗ) 3 ನರಕ (ಗ) 4 ಪೇಳ್ಕೇಳ್ದ (ಗ)

5 ಪರಮಶ್ರೀಕಾಮಿನೀವಲ್ಲಭನಜಿತಜಿನಾಂಘ್ರಿದ್ವಯಾಂಭೋಜಭೃಂಗಂ
ಸುರಶೈಲೇಂದ್ರಕ್ಷಮಂ ವಾಗ್ವಧುಪತಿಧರಣೀಸ್ತುತ್ಯಸಂಗೋದ್ಭವೇಭ
ದ್ವಿರದೇಂದ್ರಾರಾತಿಕರ್ವಾಚಲನುತಪವಿ ಸತಾರಿತ್ರೈವಿದ್ಯಲಕ್ಷ್ಮೀ
ವರಪಾದದ್ವಂದ್ವಭಕ್ತಂ ಸುಕವಿಜನಮನಃಪದ್ಮಿನೀರಾಜಹಂಸಂ ‖ (ಕ. ಬ.)

## ದ್ವಾ ದ ಶಾ ಶ್ವಾ ಸಂ.

ಶ್ರೀಸತ್ಯವ್ರತಮುವ್ರತ
ಶ್ರೀಸತಿಯ ವಿಳಾಸಮೆಂದು ಸಮ್ಯಕ್ತ್ವಗುಣಾ ।
ವಾಸಂ ನಲಿದಂ ಮನದೊಳ್
ಲೇಸಾಗಿರೆ ಸುಕವಿನಿಕರಪಿಕವಾಕಂದಂ ॥ ೧

ಅಂತು [ಸತ್ಯವ್ರತದ ಕಥೆಯುಂ ಮನದರ್ತಿವೆರಸು ಕೇಳ್ದು ಮತ್ತಂ ಮಗಧಾಧಿಪತಿ ಮುನೀಂದ್ರೋತ್ತಮಂಗೆ ಭಕ್ತಿಯಿಂ ಪೊಡೆಮಟ್ಟು ಕೈಗಳಂ ಮುಗಿದು ॥ ೨

ಮುನಿಜನವಂದಿತಪದಯುಗ
ವನರುಹ ಪೆಱಗಣ ಕಥಾಳಿಯಂ ನಿಮ್ಮಡಿ ಕೇ ।
ಳ್ದೆನಗೆ ಕಡುರಾಗಮಾದುದು
ಮನಸಿಜಮದಹರಣ ದುರಿತತಮಭಾನುನಿಭಾ] [1] ॥ ೩

ಗುಣಜಲನಿಧಿ ನಯದಿಂ ಮುಂ
ದಣ ಕಳದಾ ದಿವ್ಯಮಪ್ಪ ಸುವ್ರತಮಂ ಧಾ ।
ರಿಣಿ ಮೆಚ್ಚೆ ತಾಳ್ದಿ ಲೋಕಾ
ಗ್ರಣಿಯಾದರ ಕಥೆಯನೆನಗೆ ಬೆಸಸಲ್ವೇಳ್ಕುಂ ॥ ೪

ಎಂಬುದುಂ [ಗೌತಮಸ್ವಾಮಿಗಳ್ ದುರಿತದ ಬಲಕ್ಕೆ ನಿಸ್ತೇಜಂ] [2] ಮಾಂಸನಿವೃತ್ತಿವ್ರತದ ಕಥೆಯನಿಂತೆಂದು ಪೇೞ್ದರ್:— ಅರಸಿನೊಳ್ ಕೂಡಿ ಪರಿಗ್ರಹದಿಂದರಸಿಯರಿಂ ಪರಿಜನದಿಂದರಮನೆಯೊಪ್ಪುವಂತೆ, ಪ್ರಭುವಿನೊಳ್ ಕೂಡಿ ಕೋಂಟೆಯಿಂ ಕೇರಿಯಿಂದರಮನೆಯಿಂದೂರೊಪ್ಪುವಂತೆ, ಮಡೆಯೊಳ್ ಕೂಡಿ ಕೆಱೆಯಿಂ ಕಯ್ಯಿಂ ತೋಂಟದಿಂ ಪೊಲನೊಪ್ಪು

---

[1] ನಲಿದು (ಗ) [2] ಕರ್ಮರಾಜನೊಡ್ಡಂಗೆ ಸಿಸ್ತಯುಂ (ಗ)

ವಂತೆ, ತಂಬುಲದೊಳ್ ಕೂಡಿ ನಾಲಗೆಯಿಂ ಪಲ್ಲಿಂದಧರದಿಂ ಬಾಯೊಪ್ಪುವಂತೆ, ಕಾಡಿಗೆಯೊಳ್ ಕೂಡಿ ಬಿಳಿಯಾಲಿಯಿಂ ಕಱಿಯಾಲಿಯಿಂದೆವೆಯಿಂ ಕಣ್ಣೊಪ್ಪುವಂತೆ, ಬಲ್ಲಿದರೊಳ್ ಕೂಡಿ ಗಿರಿದುರ್ಗದಿಂ ಜಲದುರ್ಗದಿಂ ವನದುರ್ಗದಿಂ ಕೋಂಟೆಯೊಪ್ಪುವಂತೆ, ಕೂರ್ಮೆಯೊಳ್ ಕೂಡಿ ಪುರುಡಿಂ ಮುದ್ದಿಂ ಪೆರ್ಮೆಯಿಂ ಪೆಂಡಿರೊಪ್ಪುವಂತೆ, ಬಲ್ಗುದುರೆಯೊಳ್ ಕೂಡಿ ಮಣುಗೋಡಿಂದಂಕಣೆಯಿಂ ಬಲದಿಂದಶ್ವಧಾರಿ [1] ಯೊಪ್ಪುವಂತೆ, ಶುದ್ಧಮಾಸದೊಳ್ ಕೂಡಿ ಚಂದ್ರಬಲದಿಂ ತಾರಾಬಲದಿಂ ಮದುವೆಯೊಪ್ಪುವಂತೆ, ಸಲುಗೆಯೊಳ್ ಕೂಡಿ ನುಡಿಯಿಂ [2] ಪೊಡರ್ಪಿಂ ಮಂತ್ರಿಯೊಪ್ಪುವಂತೆ, ಸಮ್ಯಕ್ತ್ವದೊಳ್ ಕೂಡಿ ಕೊಲೆಯಿಂ ಪುಸಿಯಿಂ ಕಳವಿಂದಗಲ್ದ ಸುವ್ರತಂಗಳಿಂ ಭವ್ಯರುಮೊಪ್ಪುವೆರಸಿರ್ಪುದು [3] ॥ ೫

ಮನಮಂ ಪೇೞ್ವುದು ಬಯಕೆಯು
ಧನಮುಮನಱಿಪುವುದು ಸೀನೆ ಶರಣೆಂಬುದು ಮೇ ।
ದಿನಿಚಕ್ರಂ ಕಡುಗೂರ್ಮೆಯೊ
ಳನೆ ನೆಗೞ್ದೀಸುವ್ರತಾ [4] ಧಿಪಂಗೆಣೆಯೊಳರೇ ॥ ೬

ಇನ್ನಾವ್ರತದ ಮಹಿಮೆಯಂ ಪೇೞ್ವೊಡೆ ॥ ೭

[ಬಳಸಿದ ನಂದನವನದಿಂ
ತಳಿದಿರ್ದ ಸರೋರುಹಾಕರಂಗಳಿನೆತ್ತಂ ।
ಬಳಸಿದ ಪಲವುಂಗ್ರಾಮಂ
ಗಳಿನೊಪ್ಪುವುದೊಪ್ಪುವೆತ್ತವಂತೀವಿಷಯಂ ॥ ೮

ಆವಿಷಯದೊಳ್ ತದ್ಧರಾಂಗನೆಯ ತೊಟ್ಟ ಮಣಿಭೂಷಣದಂತೆ ನಾನಾಶೋಭೆಗಳಿಂದುಜ್ಜಯಿನಿಯೆಂಬ ಪೊೞಲೊಪ್ಪುಗುಮಾಪೊೞಲನಾಳ್ವಂ ಧರ್ಮಧರಮಹಾರಾಜನೆಂಬನಾತನ ರಾಜಶ್ರೇಷ್ಠಿ ॥ ೯

---

1 ಮಣುಗೋಡಿಂದಕನಣೆಯೆಂಬಳದಿಂದಶ್ವದಾರಿ (ಕ. ಬ.) ಯಿಂದಶ್ವಾವಳಿ (ಗ) 2 ನುಡಿಯಿಂ ನಾಲಗೆಯಿಂ (ಕ) 3 ಒಪ್ಪಂಬೆರಸು ಸುಖಮಿರ್ಪುದು (ಗ)
4 ಕಳ್ಳದ ಸುವ್ರತ (ಕ. ಬ.)

ಅನುಪಮಗುಣನಿಳಯಂ
ಜಿನಪಾದಪಯೋಜಷಟ್ಪದಂ ಜನನುತನಿಂ ।
ದ್ರನಿಭನಮಳಾಂಗನಿರ್ಪಂ
ಜಿನದತ್ತಂ ಜೈನಸಮಯವಾರಿಧಿಚಂದ್ರಂ ॥ ೧೦

ಆತನ ಪೆಂಡತಿ ಧರಣೀ
ಖ್ಯಾತೆ ಸದಾಶುದ್ಧಚರಿತೆ ಭವ್ಯಜನೈಕ ।
ಪ್ರೀತೆ ಸಮಸ್ತಗುಣಾಂಬುಧಿ[1]
ಮಾತೀನೊ ಜಿನೇಂದ್ರದಾಸಿಯೆಂಬಳ್ ಪೆಸರಿಂ ॥ ೧೧

ನೆಗಟ್ದ ಜಿನದತ್ತಂಗಂ
ಮೃಗನಯನೆಜಿನೇಂದ್ರದಾಸಿಗಂ ಮದನನಿಭಂ ।
ಜಗತೀಪೂಜ್ಯಂ ವಿಕ್ರಮ
ಮೃಗಾರಿ ಜಿನದಾಸನೆಂಬನಗ್ರತನೂಜಂ ॥ ೧೨

ಅಂತವರ್ ಸುಖದಿಂ ಪಲಕಾಲಮಿರ್ಪನ್ನೆಗಂ ॥ ೧೩

ದುರಿತಘನಪವನರುಜ್ಜ್ವಲ
ಚರಿತರ್ ಜೈನಾಗಮಾಂಬುನಿಧಿಹಿಮಕಿರಣರ್ ।
ಧರಣೀಸ್ತುತ್ಯರ್ ಮುನಿಜನ
ಪರಿವೃಢರಂಗಜಮದೇಭವಿಘಟನಸಿಂಹರ್ ॥ ೧೪

ಜಿನಪಾಲಿತರೆಂಬ ತಪೋಧನರೊರ್ವರೇಕವಿಹಾರಿಗಳ್ ವಸುಧಾವಳ ಯಮಂ ತೊಳಲುತ್ತುಂ ಬಂದುಜ್ಜಯಿನಿಗೆ ಬಂದು ನೇಸಱ್ ಪಟ್ಟ ಬೞಿಕ್ಕಂ ತೊಳಲ್ವುದು ಸಂಯಮಧರರಪ್ಪ ಋಷಿಯರ್ಗೆ ಮಾರ್ಗ ಮಲ್ಲೆಂದು ಗಂಧವತಿಯೆಂಬ ತೊಱೆಯ ತಡಿಯೊಳ್ ರೌದ್ರಮಪ್ಪ ಶ್ಮಶಾನಭೂಮಿಯ ನಡುವೆ ॥ ೧೫

---

[1] ಸದ್ಗುಣಮಹಾಂಬುಧಿ (ಗ)

ಪೊಲ್ಲನಿಸದ ಜೀವಾಳಗ
ಳಿಲ್ಲದ ರಮಣೀಯಮಪ್ಪ ಪಾಸಱೆಯಂ ತ ।
ಳ್ವಿಲ್ಲದೆ ಬೆಳಗಿನೊಳಾರ
ಯ್ಯುದ್ಧಳ್ಕದ ಗಂಡನಘಕಮಂದದಿನೇಶಂ ॥ ೧೬

ಸನ್ನುತರವಿಯುದಯಂಗೆ
ಯ್ಯನ್ನೆವರಂ ವಿಸುಕೆನೆಂದು ಮಂದರಧೈರ್ಯಂ ।
ತನ್ನಣ್ಮಿಂದಂ ಮಿಡುಕದೆ
ಸನ್ನುತಮತಿಯೊಂದೆ ಮಗ್ಗುಲೊಳ್ ಪಟ್ಟಿರ್ದಂ ॥ ೧೭

ಅಂತು ಗುಣಗಣಾಭರಣಂ ನಿತ್ಯಯೋಗಂಗೊಂಡೇಱಿಸಿದ ಬಿಲ್ಲಂತೆ ಶರೀರಮಂ ಚಳಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಮಿತ್ತಲುಜ್ಜಯಿನಿಯಿಂದೊರ್ವ ವಿಡಂಬನೆಂಬ ಸಾಧಕಂ ನಿಧಿನಿಕ್ಷೇಪಂಗಳಂ ಸಾಧಿಸಲೆಂದು ಯಥೋಚಿತಮಪ್ಪ ಬಲಿವೆರಸು ಪಲ್ಲಂ ಸುಲಿದು ಮಿಂದು ಶುಚಿಭೂತನಾಗಿ ಧೌತಾಂಬರಮನುಟ್ಟು ಮೀರದಿನುಪವಾಸಂಕೈಕೊಂಡು ತನ್ನ ನಿವಾಸಮಂ ಪೊಱಮಟ್ಟು ನಟ್ಟಿರುಳ್ ತನ್ನ ಕಟ್ಟಾಳ್ತನದಿಂ ॥ ೧೮

ಪಲವುಂ ಪೂಣ್ಕೆಗಳಿಂದಂ
ಚಲದಿಂದಸಹಾಯವಿಕ್ರಮಂ ತನ್ನಳವಂ ।
ಕಲಿತನಮಂ ನಂಬಿ ಬಲಂ
ತಳರದೆ ಸಾಧಿಸುವೆನೆಂಬ ಬಳಕೆಯಿನಾತಂ ॥ ೧೯

ಕರಡಿಯ ತೊವಲಂ ಕಾಡಿಗೆಯೊಳದ್ದಿ ವಿಧಾತ್ರಂ ಲೋಕಮಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ ಕೂಡಿದ ರಾತ್ರಿಯೊಳ್ ಗಂಧವತಿಯ ತಡಿವಿಡಿದು ಬಂದು ಪಿತೃವನಮಂ ಪೊಕ್ಕು ತನ್ನ ಕೈಯ ಸೊಡರಿಂ ॥ ೨೦

ತಲೆ ಪಱಿದಿರ್ದ ಪೆರ್ದಸಿಯುಮೇಲೆ ಮಹಾದ್ಭುತದಿಂದಮಿದ್ದ ಕ
ಣ್ಗಳನರೆಮುಚ್ಚಿಕೊಂಡು ಕೆಡೆದಿರ್ದ ಕರುಳ್ ಪಱಿದಿರ್ದ ಭೂ
ತಳಮನೆ ಕಚ್ಚಿ ವೈಮಱೆಯುತಿರ್ದ ಭಯಂಕರಮಾಗಿ ಪಟ್ಟ ಕ
ಣ್ಣೊಳ ತೆಗೆದಿರ್ದ ವೇದನೆಗೆ ಸೈರಣೆಗೆಟ್ಟೞುತಿರ್ದ ಭೀತರಂ ॥ ೨೧

ನೋಡುತ್ತುಂ ಬಂದೇಕಪಾರ್ಶ್ವದೊಳ್ ಪಟ್ಟಿರ್ದ ಜಿನಪಾಲಿತ ಮುನಿಯುಂ ಕಂಡು ಪೆಣನೆಂದು ಬಗೆದು ಬೇಗದಿನಲ್ಲಿಗೆ ಮತ್ತೆರಡು ಪೆಣಂಗಳಂ ತಂದು ಮೂಱುದಲೆಯುನೊಲೆಗಲ್ಮಾಡಿ ಕೆಳಗೆ ಕಿರ್ಚಂ ಪೊತ್ತಿಸಿ ಚರುವನಡುತ್ತಿರ್ಪುದುಂ][1] ॥ ೨೨

ಘೋರನೆನೆ ಕಿಚ್ಚಿನ ನಾಲಗೆ
ನೇರಿದವಾಗಳುರೆ ನೋವಿನೊಳ್ ಸ್ವೈರಣೆಗೆ[2] ।
ಟ್ಟೋರಂತೆ ಮಱುಗಿ ಕುದಿಯದೆ
ಧೀರಂ[3] ಜಿನಪಾದಪದ್ಮಮಂ ನೆನೆಯುತ್ತುಂ ॥ ೨೩

ಮಿಾಯದೆ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ, ಪಿಂಡುಗೂೞೊಳಗಗುಳನುಣ್ಬೆನೆಂಬ[4] [ಮದುವೆಯಾಗದೆ ಮಕ್ಕಳ್ವಡೆವೆನೆಂಬ, ಗಡ್ಡಂಬಾರದಂದವಿಡುವೆನೆಂಬ ಕಡೆಯದೆ ಬೆಣ್ಣೆಗೊಳ್ವೆನೆಂಬ] ಬೆಳೆಯದೆ ಹಗವಂ ತೋಡುವೆನೆಂಬ, ಪುಟ್ಟದ ಕೂಸಿಂಗೆ ಪೆಸರಿಡುವೆನೆಂಬ, ಸಾಲಿಸದೆ ಬಡ್ಡಿವೇೞ್ಕೆಂಬ,[5] [ನೆಯ್ಯದೆ ಸೀರೆಯನುಡುವೆನೆಂಬ], ಮಾಡದೆ ಮನೆಯಂ ಪೊಕ್ಕಪೆನೆಂಬ ಮರುಳನಂತೆ, ಪೆಱವುಣಿಸುಗಳನರೋಚಕಕಂಮಾಣ್ಬು ತುಯ್ಯಲ್ತುಪ್ಪದಂತಪ್ಪ, ಮತ್ತಿನ ಪೆಂಡಿರ್ಗೆ ಪೇಸು

---

1 ಮಾಳವದೇಶದೊಳುಜ್ಜೇನಿಯೆಂಬುದು ಪುರಮದನಾಳ್ವಂ ಧರ್ಮಧ್ವಜ ಮಹಾರಾಜನೆಂಬನಾತನ ರಾಜಸ್ರೇಷ್ಠಿ ಜಿನದತ್ತನೆಂಬನಾತನ ಭಾರ್ಯೆ ವಿಮಳ ಮತಿಯೆಂಬಳಾಯಿರ್ವರ್ಗಂ ಪ್ರಿಯನಂದನಂ ಜಿನೇಂದ್ರದಾಸನೆಂಬನಂತವರ್ಸುಖ ದಿಂದವಿರ್ಪುದುಂ ಜಿನಪಾಲರೆಂಬ ಮಹಾತಪೋಧನರ್ ವಿಹಾರಿಸುತ್ತುಮಾಪುರಕ್ಕೆ ವಂದು ಗಂಧಮತಿಯೆಂಬ ತೊಱೆತಡಿಯ ಮಹಾಕಾಳವೆಂಬ ಸ್ಮಶಾನಭೂಮಿ ಯೊಳ್ ಯತ್ರಾಸ್ತಮಿತವಾಸಿಗಳಪ್ಪುದಱಿಂ ನೇರ್ ಪಡುವುದುಂ ಪೋಗಲಱಿ ಯದೆ ಪಾರ್ಶ್ವದೊಳ್ ಯೋಱಿಸಿದ ಬಿಲ್ಲಿನಂತೆ ಪಟ್ಟಿರ್ಪುದುಂ ವಿಷಂಬನೆಂಬ ಸಾಧಕಂ ಬಂದು ನೋಡಿ ಪೆಣನೆಂದು ಮತ್ತಮೆರಡುಪೆಣಂಗಳನಲ್ಲಿಗೆತಂದು ಮೂಱುತಲೆಯ ಮನೊಲೆಕಲ್ಲೂಡಿ ಚರುವನಡಲೆಂದು ಮಡಕೆಯನೇಱಿಸಿ ಕೆಳಗೆ ಕಿಚ್ಚನುರುಹುವುದುಂ (ಗ) 2 ನೊಂದು ಸ್ವೈರಣೆಯುಂ ಬಿ (ಗ) 3 ವೀರಂ (ಗ)

4 ಹಿಂಡುಗೂೞೊಳಗೆ ಗೊಳನುಣ್ಬೆನೆಂಬ (ಗ), ಪಿಡುಗೂಳೊಳಳೆಯ ಕೂಳನಣ್ಬೆನೆಂಬ (ಕ) 5 ಸಾಲಮಿಾಯದೆ ಬಡ್ಡಿಗೊಳ್ವೆನೆಂಬ (ಗ)

ಗೆಯುಂ ಪುಟ್ಟಿಸುವ [1] ನಾಯಕಸ್ತ್ರೀಯಂತಪ್ಪ, ಪೊಲ್ಲ ನೀರ್ಗೆ ಮನಂಗಿಡಿಸುವ ಶೀತಲಜಲದಂತಪ್ಪ, ಹೀನದ್ರವ್ಯಂಗಳ್ಗೆ ಚಿತ್ತಮಂ ಮಾಡದ ಪೊನ್ನರಾಶಿಯುಂತಪ್ಪ, ಕಪ್ಪವಸ್ತ್ರಂಗಳ್ಗೆ ಬಗೆಯುಂ ಮಾಡದ ದುಕೂಲವಸ್ತ್ರದಂತಪ್ಪ, ಪುಲ್ವನೆಗೆ [2] ಪೆರ್ಚಂ ಮಾಡದ ಮಣಿಮಾಡದಂತಪ್ಪ, ಕಿಡುವ ಬೆಳಗುಗಳ್ಗೆ ಕಪ್ಪಮಂ ಮಾಳ್ಪ ಸೂರ್ಯರಶ್ಮಿಯುಂತಪ್ಪ, ಕಾಜಿನ ತುಡಿಗೆಗೆ ನಿಸ್ತೇಜಂ [3] ಮಾಳ್ಪ ಮುತ್ತಿನಾಭರಣದಂತಪ್ಪ, ಹೀನಶ್ರೀಗಂ ಕಿಱುಕುಳರಾಜ್ಯ [ಭೋಗಕ್ಕಮೂನಸುಖಕ್ಕಂ] ವಿರಾಗಂ ಮಾಡಿ ಮುಕ್ತಿ [ಶ್ರೀ]ಯೊಳ್ ಕೂಡುವ, ಚಕ್ರವರ್ತಿಪದವಿಯುಮಂ ದೇವೇಂದ್ರಪದವಿಯುಮಂ ಮೊದಲ ಮೂಱುಸಂಹನನಮುಮಂ ಶ್ರುತಬುದ್ಧಿಯ ಸಂಪೂರ್ಣತೆಯುಮಂ ಕ್ಷಪಕಶ್ರೇಣಿಯುನೆಯ್ದಿಸುವ ಮಹಿಮೆಯುಮಂ ಪುಟ್ಟಿಸುವ ಪುಣ್ಯಮಂ ನೆರೆಪುವ ಪಂಚಪರಮೇಷ್ಠಿಗಳ ಭಕ್ತಿಯುಮಂ ಪೂಜೆಯುಮಂ ಕೊಂಡಾಟಮುಮಂ ನಚ್ಚುಗೆಯುಮಂ ಬಿಸುಟು, ನೆಲ್ಲನಕ್ಕಿಮಾಡಲಲಸಿ ಲೇಸೆಂದಟ್ಟುಂಬ, ಕಲ್ಲಂ ನುಣ್ಪುಮಾಡದೆ ಚಿತ್ರಂಬರೆವ, ಪೊನ್ನನಾಭರಣಂಮಾಡದೆ ತುಡುವ, ಕೈಯ್ಯನುಱದೆ ಬಿತ್ತುವ, ನೂಲಂ ಪೊಸೆಯದೆ ಮಣಿಯಂ ಕೋವ, ಪುಳ್ಳಿಯಿಲ್ಲದೆ ಕಿರ್ಚಿನೊಳಡುವ [4] ಗಾಲಿಯಿಲ್ಲದೆ ಬಂಡಿವರಿಯಿಸುವ, ಬಲಮಿಲ್ಲದೆ ಕಾದುವ, ಕೋಱಿಲ್ಲದೆ ಮದ್ದಳೆಯುಂ ಬಡಿವ, ಕಱಿಯದೆ ಪಾಲಂ ಬಯಸುವ, ಬೆಲೆಗುಡದೆ ಬಂಡಮರಸುವ, ಬಿದಿರೆಲೆಯೊಳ್ ರಸಮನಱಸುವ ಕಳ್ಳಿಯ ಪಾಲೊಳ್ ಬೆಣ್ಣೆಯನಱಸುವ, ತೊಱೆಯ ಸಿಪ್ಪಿನೊಳ್ ಮುತ್ತನಱಸುವ; (...?) ಧಾನ್ಯದಂತೆ ಪಸಿಯ ಧಾನ್ಯದಂತೆ ಬಳಿಗಿದ ಧಾನ್ಯದಂತೆ ಮಿಡಿಯುತ್ತಿಪ್ಪ ಧಾನ್ಯದಂತೆ ಉಯ್ವೆರಸಿರ್ದ ಧಾನ್ಯದಂತೆ ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ ಕರ್ಚಿದಕ್ಕಿಯಂತೆ ಬೇವ ಕೂಱನಂತೆ ಬೆಂದಿಱಿಪಿದ ಕೂಱನಂತೆ ತಳಗೆಗೆವಂದ ಕೂಱನಂತೆ ಬಾಡು ತುಪ್ಪಂ ಮೊದಲಾದ ಪರಿಕರಂವೆರಸುಣ್ಬ ಕೂಱನಂತೆ, [ನೆಲದಂತೆ] ಭೂಮಿ

---

1 ಮನಮುಂ ಪೇಸುಗೆಯುಂ ಮಾಳ್ಪ (ಗ)   2 ಪಲವು ಮನೆಗಳ್ಗೆ (ಗ)
3 ಪೇಸುಗೆಯುಂ (ಗ)   4 ಕಿಚ್ಚದನುರುಹ (ಕ. ಖ.)

ಶೋಧನೆಯುಮಂತೆ ಗುಂಡೋತ್ತರದಂತೆ ನೆಲಗಟ್ಟನಂತೆ ರಂಗಘಟ್ಟಣೆಯುಮಂತೆ [1] ಕಂಭನಿಱಿಸುಗೆಯುಮಂತೆ ಕರುಮಾಡದಂತೆ ಬೋದಿಗೆಯುಕೂಟದಂತೆ ಮುಚ್ಚಳಂತೆ ಪ್ರತಿಷ್ಠೆಯುಂತೆ ಮೇಲ್ಪಣ ಬೆಸದಂತೆ ಸೊದೆಯುಮಂತೆ ಕಳಶಾರೋಹಣದಂತೆ, ಕೆಯ್ಯಂತೆ ಕೆಯ್ಯುಱುಮೆಯುಮಂತೆ [ಕೆಯ್ಯೊಳ್] ಪದಂಬಡೆವಂತೆ ಬಿತ್ತಣದಂತೆ ಸಸಿಯುಮಂತೆ ಪೊಡೆಯುಮಂತೆ ಪಾಲ್ದೆನೆಯುಮಂತೆ ಕೊಯ್ಲಾದಂತೆ ಸೂಡಿನಂತೆ ಕಳಕ್ಕೆವರ್ಪಂತೆ [2] ಒಕ್ಕಣದಂತೆ [3] ರಾಶಿಯುಮಂತೆ ಮಿಥ್ಯಾದೃಷ್ಟಿ ಸಾಧನಸಮ್ಯಗ್ದೃಷ್ಟಿ ಸಮ್ಯಙ್ಮಿಥ್ಯಾದೃಷ್ಟಿ ಅಸಂಯತಸಮ್ಯಗ್ದೃಷ್ಟಿ ದೇಶಸಂಯತ ಪ್ರಮತ್ತ ಅಪ್ರಮತ್ತ ಅಪೂರ್ವಕರಣ ಅನಿವೃತ್ತಕರಣ ಸೂಕ್ಷ್ಮಸಾಂಪರಾಯ ಉಪಶಾಂತ ಕಷಾಯ [4] ಸಯೋಗಿ [ಅಯೋಗಿ] ಎಂಬೀ [5] ಪದಿಮೂಱು ಗುಣಸ್ಥಾನಂಗಳಿರ್ಪುವು. ಅವಱೊಳಗಾವ ಗುಣಸ್ಥಾನದೊಳ್ ತಾನಿರ್ಪನಾಗುಣಸ್ಥಾನಕ್ಕೆ ತಕ್ಕುದಂ ನೆಗಱ್ವುದು; ನೆಗಱಲೊಲ್ಲದೆ ಮತ್ತೊಂದು ಗುಣಸ್ಥಾನದೊಳ್ ನೆಗಱ್ವೆನೆಂದು ನೆಗಱುತ್ತುಮಿರ್ಪೊಡೆ ಪೊಡೆಯಂ ಕೊಯ್ದು ಧಾನ್ಯಮರಸುವ, ಪಸಿಯುಂ ಕುಟ್ಟಿಯಕ್ಕಿಯುಮಱಸುವ, ಬೇಪ ಕೂೞಿನೊಳ್ ರುಚಿಯುಮಱಸುವ, [ನೆಲ್ಲನಟ್ಟು ಮೃದುಗೂೞನಱಸುವ] ನೆಲಗಟ್ಟಿನ ಮೇಲೆ ಕಲಶಮನಿಡುವ, ಗುಂಡೋತ್ತರದ [6] ಮೇಲೆ ಸೊದೆಯುಂ ಬಱಿವ, ಕಂಭನಿಱುಗೆಯಿಲ್ಲದೆ ಜಿನಭವನಮಂ ಮಾಳ್ಪ, ಮುಚ್ಚಳಮಿಲ್ಲದೆ ಪ್ರತಿಷ್ಠೆಯಂ ಮಾಳ್ಪ, ರಂಗಮಿಲ್ಲದೆ ಕಂಭಮಂ ನಿಱಿಸುವ, ಪಾಲ್ದೆನೆಯನೊಕ್ಕುವ, ಸಸಿಯುಂ ಕೊಯ್ದು ಮೆದೆಯನೊಟ್ಟುವ, ಬಿತ್ತುವ ಕಾಲದೊಳ್ ಬೆಳಸನಱಸುವ, ಬಿತ್ತದೆ ಸಸಿಯುಂ ನೋಡುವ, ಕಟ್ಟಿಗ್ಗನಂ ಪೋಲ್ಕುಮದುಕಾರಣದಿಂದನ್ನೆವರಂ ದೇಶಸಂಯತಗುಣಸ್ಥಾನದೊಳಂ ಪ್ರಮತ್ತಾಪ್ರಮತ್ತಗುಣಸ್ಥಾನದೊಳಮಿರ್ಪನ್ನೆವರಮಣುವ್ರತಿಗಳುಂ ಮಹಾವ್ರತಿಗಳುಂ ಮಱೆಯದೇಕಚಿತ್ತದಿಂದಾಹಾರಾಭಯಭೈಷಜ್ಯಶಾಸ್ತ್ರದಾನದೊಳಂ ಅನಶನಾದಿತಪದೊಳಮಾರ್ತಣ್ಮೆ ನೆಗೞುತ್ತುಂ

---

1 ರಂಗಗಟ್ಟಣಬಂತ (ಗ) 2 ಕಣಕ ಬಂದಂತೆ (ಬ. ಕ.)

3 ಭಕ್ಷಣದಂತೆ (ಕ. ಬ.) 4 ಉಪಶಾಂತಕಷಾಯ ಕ್ಷೀಣಯೋಗಿಸಯೋಗಿ (ಗ) 5 ಪದಿನಾಲ್ಕುಂ (ಗ) 6 ಗುಂಡವತ್ತದ (ಕ. ಬ.)

ಜಿನಸ್ವಾಮಿಯುಂ ಪೂಜಿಸುವುದು ಬಣ್ಣಿಸುವುದು [1] ನಿಚ್ಚನಿಚ್ಚಲೆಂದು
ಪರಮಾಗಮದೋಜೆಯುಂ ಭಾವಿಸ ‖ ೨೪

ನಯವಿದನಪ್ಪುದಱಿಂ ದು
ರ್ನಯಮುಮಂ ಬಿಸುಟೇಕಚಿತ್ತದಿಂ ನಂಬಿರ್ದಂ ।
ಭಯಮಿಲ್ಲದೆ ಜಿನಪತಿಯುಂ
ನಯಸೇನಂ ಸುಕವಿನಿಕರಪಿಕಮಾಕಂದಂ ‖ ೨೫

ದಿವಿಜೇಂದ್ರಂ ಜಿನಪೂಜೋ
ತ್ಸವದೆಸಕದಿನಿಲ್ಲಿ ಬಂದು ಮುಕ್ತಿವಧೂಟೀ ।
ಧವನಪ್ಪನೆಂದೊಡಿನ್ನೂ
ಪ್ಪವೆ ಜಿನರಂ ನಂಬಿದಂಗೆ ಕೇಳರಡುಂಟೇ ‖ ೨೬

ಜಿನರೂಪಿಂದಮಭವ್ಯನು
ಮಿನಿತು ನವಗ್ರೈವೆಯಲ್ಲಿ [2] ಪುಟ್ಟುವನೆನೆ ಮೇ ।
ದಿನಿಯೊಳ್ ಜಿನೇಂದ್ರಭಕ್ತಂ
ಗನಘಶ್ರೀ ಸೋಲ್ವಳೆಂಬುದಾವುದು ಗಹನಂ ‖ ೨೭

ಕಿಱಿದಪ್ಪ ವ್ರತವಿಂಗಂ [3]
ದೆಱಗಿದ ಮಾದೆಗನುಮಗ್ಗದ ವ್ಯಂತರಿಗ ।
ರ್ಗೆಱೆಯುಂ ತಾನಾದಂ ಪದೆ [4]
ದೆಱಗೆ ಜಿನಂಗಮೃತಪದವಿ ಗಹನಮೆ ಜಗದೊಳ್ ‖ ೨೮

ಪದೆಪಿಂ ಕಾಗೆಯ ಮಾಂಸದ
ಬಿದುಪಿಂಗಂ ಖದಿರಸಾಗರಂ ದಿವಿಜಸುಖಾ [5] ।
ಸ್ಪದನಾದನೆಂದೊಡರ್ಹ
ತ್ಪದಮಂ ಪಿಡಿದಂಗೆ ಮೋಕ್ಷಮಾವುದು ಗಹನಂ ‖ ೨೯

---

1 ನೆನೆವುದುಂ (ಗ) 2 ಮೇನಿಪನವಗ್ರೈಯುಲ್ಲಿ (ಕ. ಖ.) ಮಿನಿತುಂನವಗ್ರೈವೆ (ಗ) 3 ದಿಂಗಂ (ಗ) 4 ಗೆಱೆಯುದೆರೆಯನಾದನೆನೆಸಂ (ಕ. ಖ.) 5 ಮಾಂಸವು ಮುದದಿಂದಂ ಬಿಟ್ಟು ಕದಿರಸಾಗರ ದಿವಿಜಾ (ಗ)

ಓದನಮೊಂಡಂ [1] ಮನ್ನಣೆ
ಗಾದ ಮಹಾಮೋದದಿಂದೆ ತಪಮಂ ಕೈಕೊಂ ।
ಡಾದಂ ಸುರೇಶನೆನೆ ಜಿನ
ಪಾದಶರಣ್ಯಂಗೆ [2] ಜಗದೊಳರಿದೊಂದುಂಟೇ ॥ ೨೦

ದೃಢಸೂರ್ಪನೆಂಬ ಕಳ್ಳಂ
ಗಡ ಜಿನಶರಣೆಂಬ ಪೆಂಪಿನಾಱಕ್ಕರಮಂ ।
ಪಿಡಿದಮರನಾದನೆಂದೊಡೆ
ಪಿಡಿದಂಗರಿದುಂಟೆ ಲೋಕದೊಳ್ ಜಿನಪದಮಂ ॥ ೨೧

ವರದತ್ತಯೋಗಿಗಿಕ್ಕಿದ
ಪರಮಾನ್ನದಿನಂದು ಸೋಮಶರ್ಮನ ಸತಿ ಭೂ ।
ಪುರೆ ಯಕ್ಷಿಯಾದಳೆಂದೊಡೆ [3]
ಪರಮಜಿನಂಗೆಱಗಿದಂಗೆ ಪೇೞರಿದುಂಟೇ ॥ ೨೨

ಪುರುದೇವನನಾರಾಧಿಸೆ
ಧರಣೇಂದ್ರಂ ಬಂದು ನಮಿವಿನಮಿಗಳ್ಗ ವಿಯ ।
ಚ್ಚರಪದಮನಿತ್ತ [4] ನೆಂದೊಡೆ
ಪರಮಜಿನೇಶ್ವರನ ಪೆಂಪು ಸಾಧಾರಣಮೇ ॥ ೨೩

ದ್ರುಮಸೇನಂ ಜಿನನಾಥ
ಕ್ರಮಮಂ ಮತಿಯುಲ್ಲಿ ನಿಲಿಸಿ ಕರ್ಮಂಗಳನ ।
ಶ್ರಮದಿಂ ಕಿಡಿಸಿದನೆಂದೊಡೆ
ವಿಮಳಜಿನಾರಾಧಕಂಗೆ ದುರ್ಗಮೆ ಮೋಕ್ಷಂ ॥ ೨೪

ಬಿಡದೆ ರಥನೇಮಿ ಜಿನರಂ
ಬಿಡದೆ ಮಹಾವ್ಯಸನಿಯಾಗಿಯುಂ [5] ನಿರ್ವೃತಿಯುಂ ।

---

1 ಓದನಮನುಂಡು (ಗ)   2 ಪಾದಂ ಶರಣಂಗೆ (ಗ)
3 ಯಕ್ಷನಾದನೆಂದೊಡೆ (ಗ)   4 ಮಹಿಮೆಯಿತ್ತ (ಗ)
5 ಪಡದ ಮಹಾತ್ಮಂಗೆ ಸಕಲಸುಖ (ಕ. ಬ.)

ಪಡೆದನೆನೆ ಕೇಳ ಬಲ್ವಿಡಿ
ವಿಡಿದಂಗೆಡಱುಂಟೆ ಜಿನಗ ಚರಣದ್ವಯಮಂ ॥ ೩೫

ಜಿನನಾಳ್ದಂ ಬಂಟನೆ ನಾಂ
ಜಿನಪತಿಗೆಂಬನಿತಱಿಂ ಶಿಳಾಪುತ್ರಂ ನೆ ।
ಟ್ಟನೆ ಮುಕ್ತನಾದನೆಂದೊಡೆ
ಜಿನಪತಿಗಾಳಾಗೆ ಮುಕ್ತಿಪದಮರಿದಾಯ್ತೇ ॥ ೩೬

ಇಲ್ಲಿಯೆ ಜೈನವ್ರತಮಂ
ಬಲ್ಲಿತುಪಿಡಿದಂಗೆ ಬಾಧೆಯಾಗದು ಬಿಟ್ಟಂ ।
ಗೆಲ್ಲಿಲ್ಲದ ಪೀಡೆಗಳುಂ
ನಿಲ್ಲದೆ ಬಂದಡಸುಗೆಲ್ಲರುಂ ಬಲ್ಲರಿದಂ ॥ ೩೭

ಕೊರಳ ಶಕ್ತಿಯಿಲ್ಲದೊರಳಂ ನುಂಗುವೆನೆಂಬ, [1] ಕಯ್ಯ ಶಕ್ತಿಯಿಲ್ಲದೆ ಕಳ್ಳನಂ ಪಿಡಿವೆನೆಂಬ, ತಲೆಯ ಶಕ್ತಿಯಿಲ್ಲದೆ ಪೆರ್ಗಲ್ಲಂ [2] ಪೊಱುವೆನೆಂಬ, ಮೆಯ್ಯ ಶಕ್ತಿಯಿಲ್ಲದೆ ಬಲ್ಲೂಟಮನುಣ್ಬೆನೆಂಬ ನಿರ್ಬುದ್ಧಿಯಂತೆ, ವರುಷಮುಱುದಿಂಗಳುಪವಾಸಂಮಾಳ್ಪ, ವರುಷಮುಱುದಿಂಗಳೊಂದೆಡೆಯೊಳ್ ನಿಲ್ವ, ಬೇಡರ ಪಗೆವರ ಕ್ರೂರಮೃಗಂಗಳ ನಿಷ್ಠುರಮಪ್ಪ ಬಾಧೆಯುಂ ಸೈರಿಸುವ, ಸಕಳಶ್ರುತಮುಮನಱಿವ, ಮುನ್ನಿನ ಮಹಾಪುರುಷರ್ಗೆ ಧ್ಯಾನಮೆರಡುಗಳಿಗೆಯಿಂ ಮೇಲೆ ನಿಲ್ಲದೆಂದು "ಉತ್ತಮಸಂಹನನಸ್ಯೈಕಾಗ್ರಚಿಂತಾ [ನಿರೋಧೋ] ಧ್ಯಾನಮಂತರ್ಮುಹೂರ್ತಾತ್" [3] ಎಂಬೀಸೂತ್ರಮಂ ಪೂರ್ವಾಚಾರ್ಯರ್ ನುಡಿದರದುಕಾರಣದಿಂ ಬೇಳಾಗದೆ "ದರ್ಶನಶುದ್ಧತಾವಿನಯಸಂಪನ್ನತಾಶೀಲವ್ರತೇಷ್ವನತಿಚಾರಃ" ಎಂಬ ಜಿನೋದಿತಮಂ ನಂಬಿ ತಮ್ಮ ಗುಣಸ್ಥಾನಮನಱಿದು ಪ್ರಥಮಾನು [4] ಯೋಗದ [5] ಕರಣಾನು [6] ಯೋಗದ ದ್ರವ್ಯಾನು [7]

1 ಕಾಲಶಕ್ತಿಯಿಲ್ಲದೆ ಪಿರಿದು ಪರಿವೆನೆಂಬ, (ಗ) 2 ವೆಗ್ಗಳಮಂ (ಗ)
3 ಮುಹೂರ್ತಂ (ಗ)
4, 5, 6 ನಿಯೋಗ (ಗ) 7 ಚರಣಾನಿಯೋಗದ (ಗ)

ಯೋಗದ ಪೇೞ್ದ ಕ್ರಮಮಂ ತಪ್ಪಲೀಯದೆ ಲೇಸಾಗಿ ಭಾವಿಸಿ, ಸಸಿ ಧಾನ್ಯದೊಳ್ ತೋಂಟಂ ಗಿಡುವಿನ ಫಲದೊಳ್ ಶಿಶು ಕುಮಾರತ್ವದೊಳ್ ಕಬ್ಬು ರಸದೊಳ್ [ವೀರರ್ ಗೆಲ್ಲದೊಳ್] ಪಾಲ್ ತುಪ್ಪದೊಳ್ ಕಾರ್ [1] ಮೞೆಯೊಳ್ ಭೂಪರ್ ತೇಜಿಯೊಳ್ ಮಗಂ ಮುಪ್ಪಿನೊಳ್ ಪೆಂಡತಿ ಕುತ್ತದೊಳ್ ಫಲಮುಂ ತೋರ್ಪಂತೆ, ಮುನ್ನಮಧ್ಯಾತ್ಮಂ ಮೊದಲಾದ ಜೈನಾಗಮಮನಱಿದು ಆತ್ಮತತ್ತ್ವಫಲಮಂ ನಿರ್ವೃತಿಯ ಫಲಮುಮನೆಯ್ದುವ ಶ್ರಾವಕಂಗೆ ದಾನಾದಿಧರ್ಮಂ ಋಷಿಯರ್ಗೆ ಕ್ಷಮೆ ಮೊದಲಾದ ದಶಧರ್ಮಮಿವಱೊಳ್ ಶಕ್ತಿಗೆ ತಕ್ಕಂತು ನೆಗೞ್ದು ಕಡೆಯೊಳ್ಲ್ಲಮಂ ತೋಱುವುದಧ್ಯಾತ್ಮದ ಫಲಮಿನಿತಲ್ಲದೆ ತಳಾಱನ ಮನೆಯುಂ ಕಳ್ಳಂ ಪೊಕ್ಕನೆಂಬ ಮಾಸಾಳು ಕುತ್ತನೆಂಬ ನೀರುರಿದುದೆಂಬ ಸೊಬಗೆಗೆ ಸವತಿಯಾದಳೆಂಬ ಜೋಯಿಸನ ಮಗಳ್ [ಪಸೆಯುಮೇಲೆ] ರಂಡೆಯಾದಳೆಂಬ ಸಕುನಿಗನುಟ್ಟುದಂ ಕೊಟ್ಟನೆಂಬ [ಕಲಿ ಬಡಿವೆತ್ತನೆಂಬ] ಕಷ್ಟತಿಕ್ಕೆಯುಂ ಮಾಡಿ ಪೆಱರ್ ತತ್ತ್ವಮನೆನ್ನಂತಾರಱಿಯರೆಂದು ಪೊಟ್ಟೇಱಿಸಿ ತನ್ನ ಶಕ್ತಿಯು[ಮಂ ಮತಿಯುಮ] ನೊಂದುಮನಱಿಯದೆ ಶುದ್ಧಾಚಾರಮಂ ಬಿಟ್ಟು ವಜ್ರವೃಷಭನಾರಾಚಸಂಹನನದವರಂ ನೋಡಿ ತಾನುಂ ಷಡಾವಶ್ಯಕಕ್ರಿಯೆಗಳಂ ಪರಿಹರಿಸಿ ಮೆಚ್ಚಿದಂತೆ ನೆಗೞ್ದು ಜಿನರನಗಲ್ದು ಮುಕ್ತಿವಡೆವೆನೆಂಬುದು ಸೊಡರುಮಾದಿತ್ಯನುಂಚಂದ್ರನುಮಿಲ್ಲದೆ ಕಾಣ್ಬೆನೆಂಬ, [2] ಕಿರ್ಚಿಲ್ಲದೆ ಸೊಡರಂ ಪೊತ್ತಿಸುವೆನೆಂಬ ಬೆಳ್ತನಮಕ್ಕುಮದಱಿಂ ಕ್ಷೀಣಕಷಾಯರಾಗದನ್ನೆವರಮಿತ್ತಣವರ್ಗೆಲ್ಲಂ [3] ಜಿನೇಂದ್ರಪದಮೆಂಬ ಬಟ್ಟೆಯುಂ ಪೊರ್ದದೆ ಜಿನೇಂದ್ರಭಕ್ತಿಯೆಂಬ ಕುದುರೆಯುನೇಱದೆ ಜಿನೇಂದ್ರಾರಾಧನೆಯೆಂಬ [4] ಪೊಲಂಬಿಗನಿಲ್ಲದೆ ಜಿನೇಂದ್ರನಮಸ್ಕಾರಮೆಂಬ ನೆರವಂ ಪಾರದೆ [5] ಜಿನೇಂದ್ರಾಲೋಕನಾನಂದಮೆಂಬ

---

1 ಕಾಲಂ (ಗ)

2 ಮಳೆಯಿಲ್ಲದೆ ಬಿತ್ತುವೆನೆಂಬ, ನೆಲವಿಲ್ಲದೆ ಬೆಳೆವೆನೆಂಬ, ಕ..ಿಲ್ಲದ-ಣ್ಬೆನೆಂಬ (ಗ)

3 ಅನ್ನೆಗಮುತ್ತಮಗುಣಸ್ಥಾನದವರ್ಗೆಲ್ಲಂ (ಗ)

4 ಜಿನೇಂದ್ರಾಧಾರಮೆಂಬ (ಗ)

5 ನೆರವುಂ ಪೊಗದೆ (ಗ)

ಸಂಬಳಮಿಲ್ಲದೆ ನಿರ್ವಾಣಪುರಕ್ಕೆ ಪೋಗಲ್ಬಾರದೆಂದು ಜಿನಾಗಮದಿಷ್ಟದಿಂ ತತ್ತ್ವಮಂ ಮನದೊಳವಧಾರಿಸಿ ॥ ೩೮

ಜಿನನೆ ಗುರು ಜಿನನೆ ದೈವಂ
ಜಿನನೆ ಕುಲಸ್ವಾಮಿ ಜಿನನೆ ನಂಬಿರ್ದಾಳ್ವಂ[1] ।
ತನಗೆಂಬ ಪೆರ್ಚಿನಿಂ ನೆ
ಟ್ಟನೆ ನಲಿದಂ ಸುಕವಿನಿಕರಪಿಕಮಾಕಂದಂ ॥ ೩೯

ಮನದೊಳ್ ಜಱಿಯದೆ ಬೆಚ್ಚದೆ
ಮುನಿಯದೆ ಸೆಡೆಯದೆ ನಿಳಿಂಪನಗನಿಭಧೈರ್ಯಂ ।
ತನುವಿನಮೇಲಣ ಮೋಹಂ
ತನಗಿಲ್ಲದೆ ತಳರದಿರ್ದನುನ್ನತಚಿತ್ತಂ ॥ ೪೦

ಅಂತು ಚಿತ್ತದೊಳಳ್ಕದೆ ಜಿನಾಗಮಮಂ ಭಾವಿಸುತ್ತುಮಿರ್ಪುದುಂ [ಪೆಗಲೆಲ್ಲಂ ಬೆಂದು ] ತೋಳ ಮೊದಲಂ ಕಿರ್ಚಳುರ್ವಾಗಳ್ ನರವುಗಳ್ ತೆಗೆದು ತೋಳ್ ತನಗೆ ತಾನೆ ನೆಗೆವುದುಂ, ಪಿಡಂಬಂ [ಸೊಡರಂ ಕಂಡ ಕೋಡಗದಂತೆ ಬೆಬ್ಬಳಿಸಿ] ಕಾಡೆದು-ದೆಂದು ಬೆರ್ಚಿ [ಬೆಗಡು ಗೊಂಡು ತಾಂ ಮಂತ್ರವ್ಯಾಕರಣಮನಱಿಯನಪ್ಪುದಱಿಂ ಮಂತ್ರದೊಳಾದ ಹೀನಾಧಿಕಮನಱಿಯದೆ ಮತಿಗೆಟ್ಟು ॥ ೪೧

ಮರನುಂ ಗಿಡುವುಂ ಪೊದರುಂ
ತರತರದಿಂದಿರ್ದ ತರುನಿಕಾಯಮುಮಿರ್ದು ।
ಬ್ಬರಮಾಗೆ ಬಂದು ತನ್ನಂ
ಸೆರಗಿಲ್ಲದೆ ನುಂಗುವಂತೆ ತೋರ್ಪುದುಮಾಗಳ್ ॥ ೪೨

ಕೆಟ್ಟೆನೆಂದು ಬಾಯ್ವಿಟ್ಟು ತಡವರಿಸಿ ಪೆಱಗಣ್ಗೆ ಬಿರ್ದಟ್ಟುದುಮಂ ಸುರಗಿಯುಮನೀಡಾಡಿ ಮೆಯ್ಯಱಿಯದೆ] ಕೊಳ್ಪಟ್ಟರಂತೆ ಬತ್ತಲೆ ಕರುಳ್ ಪಱಿವಿನವೋಡುವುದುಂ ಜಿನಪಾಲಿತಮುನಿನಾಥಂ ಪಾಪಭೀರುವಪ್ಪುದಱಿಂದಾತನ ಪಾದಘಟ್ಟನೆಯಿಂ ತ್ರಸಸ್ಥಾವರಜೀವಂಗಳ್ಗೆ ಬಾಧೆ

1 ಜಗದಾರಾಧ್ಯಂ (ಗ)

ಯಾಗದೆ ಮಾಣದಕ್ಕಟಾ ಪೊಲ್ಲದಾಯ್ತೆಂದು [1] ಕಾರುಣ್ಯಹೃದಯನಾಗಿ ರ್ಪುದುಂ, [ವನದೇವತೆಯರುಂ] ನಗರದೇವತೆಯರುಂ ನೆರೆದು, ವಿಡಂಬನ ಡೊಂಬಾಟಕ್ಕಂ ಸಮ್ಯಕ್ತ್ವಚೂಡಾಮಣಿಯ ಧೈರ್ಯಕ್ಕಂ ಮನದೊಳಾದ ಜೀವದಯೆಗಂ ವಿಸ್ಮಯಂಬಟ್ಟು ಜಯಜಯನಿನಾದಮುಂ ದೇವದುಂದುಭಿಯುಮೊಡನೊಡನೆ ಸಮುದ್ರದಂತೆ ಘೂರ್ಣಿಸೆ [ಮೆಯ್ಯಱಿಯದೆ ರಾಗದಿಂ ಬಂದು] ನಮೋರು ಮಂದಾರಪಾರಿಜಾತಕಲ್ಪವೃಕ್ಷದರಲ್ಗಳಂ ಮುನಿಪುಂಗವನಮೇಲೆ ಸುರಿದು ಕರಕಮಲಂಗಳಂ ಮುಗಿದು ॥ ೪೩

[ಈ ಮುನಿನಾಥನಂತೆ ಮನದೊಳ್ ಕರಮಳ್ಕದೆ ನಿಂದ ಧೀರರಾ
ರೀಮುನಿವಂದ್ಯನಂತೆ ತನುವಂ ತೊಱೆದಳ್ಕದೆ ನಿಲ್ವ ಧೀರರಾ
ರೀಮುನಿರಾಜನಂತೆ ಜಿನತತ್ತ್ವದೊಳುನ್ನತನಾದನಾವನಿ
ನ್ನೀಮುನಿಪೂಜ್ಯನಂತೆ ದೃಢರಾರೊ ಮನಸ್ವಿಗಳಾರೊ ಲೋಕದೊಳ್ ॥

ತನ್ನಳವಂ ವಿಚಾರಿಸದೆ ನೋಡದೆ ಕೆಮ್ಮನೆ ತನ್ನ ವೀರಮಂ
ಕಿನ್ನರಭೂತಕಿಂಪುರುಷದೈತ್ಯನಿವಾಸಮನೆಯ್ದಿ ಡೊಂಬಿನಿಂ
ದುನ್ನತಚಿತ್ತನಂ ಪೆಣನೆ ಗೆತ್ತು ಖಳಂ ಪಿರಿದಪ್ಪ ಕೀರ್ತಿನಿಂ
ದನ್ನೆಱೆ ಸುಟ್ಟೊಡಂ ಮನದೊಳಳ್ಕದೆ ಬಳ್ಕದೆ ಮಂದರಕ್ಷಮಂ ॥ ೪೫

ಮುನಿನಾಥನ ನಿಡುದೋಳ್ನಗೆ
ದನಿತಱೊಳೋಡಾಗಿ ಸಾಧಕಂ ಭಯದಿಂ ಭೋಂ ।
ಕೆನೆ ಕೆಟ್ಟೆನೆಂದೊಡೀಪಿತೃ
ವನಮಂ ಪುಗುವಂಗೆ ಮತ್ತಮೆಂಟೆರ್ದೆಯೊಳವೇ ॥] ೪೬

ತನುವಂ ಧನಮಂ ತೊಱೆದಿರ
ಲನುಪಮರೆನಿಸಿರ್ದ ಜೈನಯೋಗಿಗಮಭಿಮಾ ।
ನನಿಧಾನರಪ್ಪುಪಾಸಕ
ಜನಕ್ಕಮಳವಡುಗುಮುಱಿದವರ್ಗದು ಮೊಗ್ಗೇ ॥ ೪೭

1 ತನ್ನಂ ತಾನೆ ನಿಂದಿಸಿಕೊಂಡು (ಗ)

ತನುವಿನ ಮೋಹಮಂ ಬಿಸುಟು ಪೆಂಡಿರ ಮಕ್ಕಳ ಪೊನ್ನ ಮೋಹದಿಂ
ಮನಮುರಿಬಟ್ಟು ಮೆಯ್ಸುಖಮನೊಲ್ಲದೆ ಬರ್ಪ ಪರೀಷಹಂಗಳಂ
ಘನತರಮಾಗೆ ತಾಳ್ದು ಪರಮಂ ನೆಱೆ ಸಾಧಿಸಲಯ್ಯ ಭಾಪು ಭಾ
ಪನುಪಮಜೈನಯೋಗಿಗಳ ಬಲ್ಲರಿಳಾತಳದೊಳ್ ನಿರಂತರಂ ॥ ೪೮

ಮನೆಯ ಕುಟುಂಬಮಂ ಪೊರೆಯಲೆಂದೆಡೆಯಾಡಿ ಪಲಂಬರಲ್ಲಿಗೊ
ಯ್ಯನೆ ಸುರರಾಯುಷಕ್ಕೆ ಸಿರಿಯಕ್ಕೆ ಮಹಾಸುಖಮಕ್ಕೆ ಮಕ್ಕಳ
ಕ್ಕೆನುತುಮಭೀಷ್ಟಮಂ ಕುಸಿದು ಪಲ್ದೆಱೆದಕ್ಕಟ ಬೇಡಿ ಬಾಳ್ವ ದು
ರ್ಜನತತಿ [1] ಪೇೞ ಪೆತ್ತಪರೆ ಜೈನರವೊಲ್ ಸುರರಾಜಸೌಖ್ಯಮಂ ॥ ೪೯

ಪರಿಯದೆ ಮಾರಮಾಳಿಯಣಿಸಿಂಗೆ ಸಮರ್ಥರನಾಸೆವಟ್ಟು ಬಂ
ದೆರೆಯದೆ ದೈನ್ಯವೃತ್ತಿಗೊಳಗಾಗದೆ ಸಂಸೃತಿವಾರ್ಧಿಯಲ್ಲಿ ಬಿ
ರ್ದುರುಳದೆ ವೀರವೃತ್ತಿಯನೆ ಪಾಟಸಿ ಮೋಕ್ಷಸುಖಕ್ಕೆ [2] ಚಿತ್ತಮಂ
ತಿರಿಪುತುಮಿರ್ಪ ಜೈನಮುನಿಪುಂಗವರಿಂ ಮಿಗಿಲಾರೊ ಲೋಕದೊಳ್ ॥೫೦

ಎಂದು ಪಲತೆಱದಿಂ [ಪೊಗೞ್ವ ದೇವನಿಕಾಯದ ಕಳಕಳಮಂ ಪೊಯ್ವ ಪಂಚಮಹಾಶಬ್ದಪ್ರಘೋಷಮಂ] [3] ಪುರದವರೆಲ್ಲಂ ಕೇಳ್ದು ವಿಸ್ಮಯಂಬಡುತಿರ್ದರನ್ನೆಗಂ ॥ ೫೧

[ಮನಸಿಜನಾಗಕೇಸರಿ ಜಿನಾಗಮದೋಜೆಯಿನದ್ರಿಯಂತೆ ನಿಂ
ದನುಪಮಚಿತ್ತನಂ ಗುಣಕರಂಡನನುಜ್ಜ್ವಳಕೀರ್ತಿಕಾಂತನಂ
ಮುನಿಜನವಂದ್ಯನಂ ತಡೆಯದೀಗಳ ನೋಡುವೆನೆಂಬ ಮಾೞ್ಕೆಯಿಂ
ದಿನಕರನೇಱಿದಂ ದಿವಿಜರಾಜದಿಶಾವರಧಾರಿಣೀಂದ್ರಮಂ ॥ ೫೨

ಅಂತಾ]ದಿತ್ಯಂ ಪೂರ್ವಾಚಲಶಿಖರಶೇಖರನಪ್ಪುದುಂ ಪೂಣ್ಕೆ ತೀರ್ದ ಜಿನಪಾಲಿತಮುನಿವೃಂದಾರಕಂ ಯೋಗಮಂ ನಿರ್ವರ್ತಿಸಿ ತಡೆಯದಲ್ಲಿಂದೆರ್ದು ಬರ್ಪುದುಂ ತನ್ಮುನಿನಾಥನಂ ಜಿನದತ್ತಂ ಕಂಡು ಮನದಾದರದಿಂ ವಂದಿಸಿ ತಮ್ಮ ಮನೆಗೆ ಬಡಗೊಂಡು ಬಂದು ದೇಹಾರದೊಳರಿಸಿ ॥ ೫೩

---

[1] ಜನಪತಿ (ಕ.ಬ.) ದುರ್ಜನರತಿ (ಗ)

[2] ಪದಕ್ಕೆ (ಕ.ಬ.) [3] ಪುರದೇವತೆಗಳುಂ (ಗ)

[ಅಲ್ಲಿಗೆ ದಿವ್ಯೌಷಧಮಂ
ಬಲ್ಲವರಂ ತರಿಸಿ ವೈಶ್ಯತಿಲಕಂ ಮುಂದಿ |
ರ್ದಲ್ಲಿಂದಗಲದೆ ಬೀಯ
ಕ್ಕುಳ್ಳಕ್ಕದೆ ಕೊಟ್ಟು ಪೊಂಗಳಂ ಪ್ರಿಯದಿಂದಂ ॥ ೫೪

ಮತ್ತಂ] ತಾನೆ ಕೆಲದೊಳಿರ್ದು ಪಥ್ಯಪಾನಂಗಳಂ ಪ್ರಯತ್ನದಿಂ ಮಾಡಿ ನಿರ್ದಯನಂತೆ ನಿಷ್ಕರುಣಿಯಾಗದೆ [1] ಪಾವಂ ಪಿಡಿದವರಂತೆ ದೂರದೊಳಿರದೆ, ಕುವಿಟನೊಳ್ ಕೂಡಿದ ಸೂಳೆಯಂತೆ ಮೊಗಂ ದಿರುಪದೆ, ಮನೆಯ ಗಂಡನಂ ಕಂಡ ಪಾದರಿಗಗಂಡನಂತೋಸರಿಸದೆ, [2] ಜೀವಿತಂಗುಡದಾಳ್ದನ ಬೆಸಕ್ಕಂಜುವ ಬಂಟನಂತೆ ಮನದೊಳ್ ಜಱಿಯದೆ, ಕ್ರೂರರೊಡನೆ ಬಟ್ಟೆವೋಪ ದ್ರವ್ಯಪತಿಯಂತೆ ಪೆಱಗುಱಿಯದೆ, ಪೊಲೆಬೂತಿಂಗೆ ಕೊಡುವರ್ಥದಂತೆ ಪೆಱರಮೇಲೆ ನೆವಮಿಕ್ಕದೆ, ಅಳಿಯನಂ ಕಂಡತ್ತೆಯಂತೆ [3] ಲಜ್ಜಿಸದೆ, ಕೀೞ್ಜಾತಿಯಂ ಕಂಡ ಕುಲಜನದಂತುದಾಸೀನಂಗೆಯ್ಯದೆ ಪರಮಭಕ್ತಿಯಿಂದೋವುದುಂ, ಕೆಲವುದಿವಸಕ್ಕೆ ಪುಣ್ಣೆಲ್ಲಂ ಮಾಯ್ದು [ಲೇಸಪ್ಪುದುಂ ಜಿನಪಾಲಿತಮುನಿ ತನ್ನೊಳಿಂತೆಂದಂ ॥ ೫೫

ವಿಪರೀತದ ಪುಣ್ಣಿನಿದಂ
ಕೃಪೆಯಿಂ ಸಾರಿರ್ದ ವೈಶ್ಯವಂಶಲಲಾಮಂ |
ಸುಪರೀಕ್ಷೆಯುಳ್ಳ ವೈದ್ಯರಿ
ನಪಹರಿಸಿದನಿಂತು ಸಾರ್ದ್ರಹೃದಯರುಮೊಳರೇ ॥ ೫೬

ಎಂದು ಮನದೊಳ್ ಮೆಚ್ಚಿ ಕಿರ್ಚಿನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ ತೀರ್ವುದೆನಿತುಕಾಲಮಿಲ್ಲಿರ್ದೆನನಿತೆ ಸಾಲ್ಗುಮಿನ್ನು ಧರಣೀವಳಯದೊಳ್ ವಿಹಾರಿಸುವೆನೆಂಬ ಬಗೆಯಂ ತಂದು,] ಸೆಟ್ಟಿಗೆ ತಮ್ಮ ಪೋಗಂ ಪೇೞ್ದು ತದಾಲಯದಿಂ ಪೊಱಮಡುವುದುಂ ॥ ೫೭

---

1 ಚಿನ್ನಸೂಳೆಯಂತೆ ವಯಸ್ಸದೆ (ಕ.ಬ.)

2 ಬಳಸರಿಯದೆ (ಗ) 3 ಪೆಱರಂ ಕಂಡು (ಗ)

[ಪರಮಮುನಿಪಾದಾಂಬುರುಹಮ
ನುರುಪಂದನೆಗೆಯ್ದು ಪಗಲಲಾಱದೆ ವೈಶ್ಯಂ ।
ಖರಭಾನು ಪೆಱಗೆ ನಿಲ್ಲದೆ
ಕರಮಾದರದಿಂದೆ ತಾನುಮಾತ್ಮಾಲಯಮಂ ॥ ೫೮

ಪೊಱಮಟ್ಟು ಬರ್ಪುದುಂ ಮುನಿ
ಕಿಱಿದಂತರದಲ್ಲಿ ನಿಂದು ಸದ್ಧರ್ಮಮನುಂ ।
ಮಱೆಯದೆ ಸನ್ಮುನಿಮತಮಂ
ತಱುವಲಿತನದಿಂದಮೋಟಿಸದೆ ನೀಂ ಮಗನೇ ॥ ೫೯

ಸದ್ಧರ್ಮಸಮೇತನುಂ ಸನ್ಮಾರ್ಗಪ್ರೀತನುಮಪ್ಪುದೆಂದು ಜಿನದತ್ತಸೆಟ್ಟಿಯುಂ ಮೃದುವಚನಂಗಳಿಂ ಬೋಧಿಸಿ ಮನೆಗೆ ಮಗುಳ್ದು ಪೋಗಿಮೆಂಬುದುಂ ಮಹಾಪ್ರಸಾದಮಂತೆಗೆಯ್ವೆನೆಂದು ಪ್ರದಕ್ಷಿಣಂಮಾಡಿ ಬಂದಿಸಿ ಮನೆಗೆ ಬಂದಿರ್ಪನ್ನೆಗಂ ॥ ೬೦

ತಂದೆಯು ಪೋಗಂ ಕಂಡಾ
ನಂದದಿನರ್ಥಕ್ಕೆ ಮುನ್ನಮಡಹಡಿಸಿ ಮನಂ ।
ಗುಂದಿ ಕಡುನೊಂದು ಮನದೊಳ್
ಬೆಂದು ಮಹಾಪುಱುಕದಿಂದಮಿರ್ಪ ದುರಾತ್ಮಂ ॥[1] ೬೧

ಮನೆಯವರಂ ಬಂಚಿಸಿ ಮೆ
ಲ್ಲನೆ ದೂತಿರ್ಗಂ ಕೊಂಡು ಬೀಯಗದ ಕಯ್ಯಂ ನೆ ।
ಟ್ಟನೆ ತೆಱೆದು ಪಡಿಯನೊರ್ವನೆ
ಮನಮಂಜದೆ ಪೊಕ್ಕು ಕಂಡು ಕನಕಮನಾಗಳ್ ॥ ೬೨

ಸಂತೋಷಂಬಟ್ಟು ಮುನ್ನಿನಂತೆ ಪಡಿಯಂ ಕೆತ್ತು ಪೊನ್ನನಿಂದು[2] ನೋಡಿ ಕಣ್ಬೇಹತನದಿಂ ತನ್ನಾರ್ಪನಿತಂ ಕಟ್ಟಿಕೊಂಡು ಪೋಪೆನೆಂದಿ

---

1 ಎಡೆವೆತ್ತಿನೆಂದು ಪೆರ್ಚ (ಕ)

2 ಪೊನ್ನನಿಂದುಂ (ಬ) ಪೊನ್ನನಿದುಂ (ಕ)

ರ್ಪುದುಂ ಜಿನದತ್ತಸೆಟ್ಟಿ ಬಂದು ಪೆಱತೊಂದುಮಂ ನೋಡದೆ ತನಗೆ ಪೊನ್ನೊಳಾದ ಮೋಹಂ ಪಿರಿದಪ್ಪುದಱಿಂ] [1] ಪೊನ್ನಡೆಯೊಳ್ ನಾಯನಪ್ಪೊಡಂ ನಂಬಲಾಗದೆಂಬ ನಾಣ್ಣುಡಿಯನವಧರಿಸಿ ಪೊನ್ನಿರ್ದೋವರಿಯ ಬಾಗಿಲಂ ನೋಡಿ ತನ್ನಿಕ್ಕಿದ ಬೀಯಗಮಂ ಕಾಣದೆ ಪಡಿಯಂ ನೂಂಕುವುದುಂ ಜಿನದಾಸಂ ತಂದೆ ಬಂದನೆಂದಱಿದು ಮನದೊಳ್ ಬೆಗಡುಗೊಂಡು [ನಾಡೆಯುಂ ಭಯಸ್ಥನಾಗಿ] ಪೊಱಮಟ್ಟು ಪೋಗಲಣ್ಮದೆ ಚಿನ್ನದ ದಿಂಡಿರ್ದೆಡೆಯಂ ಪೊಕ್ಕು ಮೇಲೊಂದು ಚಿನ್ನದ ದಿಂಡಂ ತೆಗೆದುಕೊಂಡು ತಾನಲ್ಲದಂತುಸಿರದಿರ್ಪುದುಂ ಸೆಟ್ಟಿ ಮನೆಯೊಳಗೆ ಪೊಕ್ಕು ನೋಡಿ ಪೊನ್ನ ರಾಸಿಯೊಳ್ ಕಿಱಿದು ಪೋರ್ ಪೋದುದಂ ಕಂಡು ॥ ೬೩

ಮಱುಕಂ ತೊಟ್ಟನೆ ಪುಟ್ಟೆ ನೊಂದು ಮತಿಗೆಟ್ಟೋವೆಂದು ಜಾಣ್ಗೆಟ್ಟು ಬೆಂ
ದಱಿತಂಗೆಟ್ಟೆರ್ದೆಗೆಟ್ಟು ಮೆಯ್ಮಱುಗಿ ಕೆಟ್ಟೆಂ ಬಾಱೆನೆಂದತ್ತು ಬಾ
ಯ್ದಱಿದೋರಂತಿರೆ ಕಂದಿ ಕುಂದಿ ಮನದೊಳ್ ಮಂಕಾಗಿ...ಮೆ
ಯ್ಮಱೆದಿನ್ನೇಗುವೆನೆಂದು ಮೋಹದೊದವಿಂ ಬಿರ್ದಂ ಧರಾಚಕ್ರದೊಳ್ ॥

ಅಂತು ಬಿರ್ದು [ಕಿಱಿದುಬೇಗದಿನೆರ್ದು ಕಳ್ಳನಿರ್ದನೆಂದು ಕೋಣೆಯಿಟ್ಟೆಡೆಕುಸುಕುಱೊಳೆಲ್ಲಂ ನೋಡಿ ತದಾವಾಸದೊಳಾರುಮಂ ಕಾಣದೆ ಮನೆಯಂ ಪೊಱಮಟ್ಟು] ಪಡಿಯಂ ಕಿತ್ತು ಮುನ್ನಿನಂತೆ ಮುದ್ರಿಸಿ ಬಿಲ್ ಕೆಟ್ಟವರ್ ಕೀಲಂ ತಡವರಿಸಿದರೆಂಬಂ[ತೆ, ಕುದುರೆ ಕೆಟ್ಟವರ್ ಬಾದಣಮಂ ನೋಡಿದರೆಂಬಂತೆ] ನಾಣ್ಣುಡಿಯಂ ನನ್ನಿಮಾಡಿ ಮನದ ಮಱುಕದಿಂ ಭ್ರಮೆಗೊಂಡು ಜಿನಪಾಲಿತಮುನಿನಾಥನ ಕೊಂಡುಪೋದನೆಂದು ಬೆನ್ನನೆ ಪರಿದು ಮುನಿಕುಂಜರನನೆಯ್ದಿ ಮಾಯಾವಿನಯದಿಂ ಪೊಡೆಮಟ್ಟು ॥ ೬೪

---

1 ಕಿಱಿದಂತರಂ ಕಳಿಪಿ ಬಪ್ಪನ್ನೆಗಮುನ್ನಮರ್ಥಕ್ಕೆಪಡಿಸುವ ಜಿನದಾಸಂ ಭಂಡಾರದಮನೆಯಂ ಪೊಕ್ಕು ಪಡಿಯಂ ಕಿತ್ತು ಪೊನ್ನನಿಂದು ನೋಡಿ ಕಣ್ಬಾಹಿತತನದಿಂ ತನ್ನಾಸೆ ನಿತ್ತು ಕಟ್ಟಿಕೊಂಡು ಪೋಪೆನೆಂದಿರ್ಪುದುಂ ಜಿನದತ್ತಸೆಟ್ಟಿ ಬಂದು ಪೆಱತೊಂದುಮಂ ನೋಡದೆ (ಗ.)

[ಇನ್ನೆಗಮೆನ್ನನುತ್ತಮಗುಣಾಂಬುಧಿ ಭವ್ಯಪಯೋರುಹಾರ್ಕ ಮ
ತ್ತೆನ್ನದೆ ಕೂರ್ವೆಯಿಂ ಪರಸುತಿರ್ದರವೋಘದಿನಿಂದು ಪೋಗಲಾ
ಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂ
ದುನ್ನತಶೀಲರಂ ತೆಗೆವುದುಂ ನಯದಿಂ ಪಲವುಂ ವ್ರತಂಗಳಿಂ ॥ ೬೬

ಮುನಿನಾಥಂ ಕಾರುಣ್ಯದಿಂ ಮಗುೞ್ವುದುಂ ಜಿನದತ್ತಸೆಟ್ಟಿ] ತನ್ನ ಮನೆಗೊಡಗೊಂಡು ಬಂದು ಪೊನ್ನಿರ್ದೋವರಿಯ ಬಾಗಿಲಲ್ಲಿ ಪಿರಿದಪ್ಪ ಪಣೆಯುಂ ತಂದಿಕ್ಕಿಸಿ [ಯತಿನಾಥನಂ] ಕುಳ್ಳಿರಿಸಿ ತಾನುಂ ಕೆಲದೊಳ್ ಕುಳ್ಳಿರ್ದು ತನ್ನೊಳಿಂತೆಂದಂ ॥ ೬೭

ತನುವಂ ಬಿಟ್ಟು ಪರತ್ರಯುಂ ಪಡೆವೆನೆಂಬಾಕಾಂಕ್ಷೆಯಿಂ ಜೈನಸೇ
ವನೆಯುಂ ಮಾಡುತುಮಿರ್ದು ನಿಷ್ಕಪಟದಿಂ ಪಾಪಾರಿಯುಂ ಗೆಲ್ದು ನೆ
ಟ್ಟನೆ ಕೈವಲ್ಯವಿಭೂತಿಯುಂ ಪಡೆಯದಿಂತೀಸಾಧು ಬೇಳಾಗಿ ಕೆ
ಮ್ಮನೆ ಮೋಹೋದಯದಿಂದಮೆನ್ನ ಧನಮಂ ತಾನೇಕೆ ಕಳ್ದುಯ್ದನೋ॥

ಎಂದು [ತನ್ನ] ದುರ್ಭಾವದಿಂ ಲೋಭಿ ಗುಣವಿಶೇಷಮನಱಿಯನೆಂಬುದಂ ನನ್ನಿಮಾಡಿ ಮುನಿನಾಥನಂ ಕಳ್ಳನೆಂದು ನಿಶ್ಚಯಿಸಿ [ಪೊನ್ನನೊರ್ಮೆಯೆ ಬೇಡಿದೆನಪ್ಪೊಡೆ ಮಹಾತಪೋಧನರಂ ಬಱಿದೆ ಕಾಡುತುಮಿರ್ದಪನನ್ಯಾಯಿಯೆಂದು ಕೆಲದವರೆಲ್ಲಮೆನ್ನಂ ದೂಱಿ ಕೊಲ್ವರದು ಕಾರಣದಿಂ ಮೆಲ್ಲನುಪಾಯದಿಂ ನುಡಿದು ಪೊಲ್ಲಮೆಯುಂ] [1] ದುರ್ಯಶಮುಮಾಗದಂತೆ ಬುದ್ಧಿಯಿಂದೆನ್ನ ಪೊನ್ನಂ ಕೊಳ್ವೆನೆಂದು ಮೆಲ್ಲನಲ್ಲಿಗೆ ತಕ್ಕಂತಪ್ಪ ಕಥೆಯುಂ ಪೇೞ್ದ[ಪೆನೆಂದಿಂತೆಂದಂ] ॥ ೬೯

ಮುನಿಪತಿ ಕೇಳ್ ಪೇೞ್ವೆಂ ಕಥೆ
ಯನಿದೊಂದಂ ವ್ಯಾಘ್ರಖೇಡಮೆಂಬಾಪೊೞಲೊಳ್ ।
ದಿನಕರಸನ್ನಿಭನಿರ್ಪಂ
ದಿನಕರನೆಂಬೊರ್ವನಾತನಗ್ರತನೂಜಂ ॥ ೭೦

1 ದೂರುಂ (ಗ)

ಕರಾಳನೆಂಬನಾತಂ ದುಷ್ಟಗೋಷ್ಠಿಯಿಂ ಸಪ್ತವ್ಯಸನಸಮೇತ ನಾಗಿ ಪಲಕಾಲಮಿರ್ದೊಂದುದಿವಸಂ ಸೂಳೆಗೆ ಕುಡಲರ್ಥಮಿಲ್ಲದೆ ರಾಜ ಭವನಮಂ ಕನ್ನಮನಿಕ್ಕಿ ಪೊಕ್ಕು ತನ್ನಾರ್ಪನಿತು ಪೊನ್ನಂ ಕೊಂಡು ಮುನ್ನಿನ ಪರಿಯಿಂ ಪೋಪುಮುತುವುದುಂ [ತೊಟಿಲ್ವ] ತಳಾಱರ್ ಕಂಡು ॥

[ಕಲ್ಲಿಂ ಗುಂಡಿಂ ಒಡಿಯಿಂ
ನಿಲ್ಲದೆ ಕೈಹಾರಮಿಡುತುಮುವರೆಯ್ದುವುದುಂ ।
ತಲ್ಲಣಿಸಿ ಕರಾಳಂ ತಳು
ವಿಲ್ಲದೆ ನಿಲ್ಲದೆ ಭಯಸ್ಥನಾಗಿ ದುರಾತ್ಮಂ ॥ ೯೦

ಬೆನ್ನನೆ ಕಾಲ್ವಾಗಿಸುತ್ತುಮಿನ್ನೆತ್ತ ಪೋದಪೆನೆಂದು ಬೆಗಡು ಗೊಂಡು ಪರಿದು ಪರಿಯಲಾಱದೆ ಬಂದೊರ್ವ ಪರದನ ಕಾಲಮೇಲೆ ಬಿರ್ದು ॥ ೩೩

ಸಾವಾದುದೆನಗೆ ನೀನೀ
ಸಾವಂ ಪೋಗಿಸುವುದೊಲ್ಲೆನೆಂದೊಡಮುವರುಂ ।
ನಾನಾವಿಧದಿಂ ಕೊಂದಪ
ರಾವಂಗಂ ಕಾಯಬಾರದಿಂದಿನ ಕೊಲೆಯುಂ ॥ ೩೪

ಎಂದು ದೈನ್ಯವೃತ್ತಿಯಿಂ ನುಡಿದು] [1] ಕಳ್ಳನೊಳ್ಳಿದನಿಲ್ಲ ನಾಯ್ ಮೋನಿಯಿಲ್ಲೆಂಬ ನೀತಿಯುಂ ಭಾವಿಸದೆ ಕಾರುಣ್ಯದಿಂ ಕರಾಳನಂ ತೆಗೆದು ತನ್ನ ಸಾರೆ ಕುಳ್ಳಿರಿಸಿ ಸೀರೆಯುಂ ಪೊದೆದುಕೊಂಡಿರ್ದನನ್ನೆಗಂ ತಳಾಱರ್ ಪರಿತಂದೀಮನೆಯುಂ ಪೊಕ್ಕನೆಂದು ಮನೆಯೊಳಗಱಸಿ ಕಾಣದೆ ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರಿತ್ತಲ್ ॥ ೩೫

[ಊರೊಳಗಾದುಲಿಯೆಲ್ಲಂ
ಭೋರೆನಲಿಂದುಡುಗೆ ಮನದ ನಿರ್ವೇಗಂ ವಿ ।

---

[1] ಬೆನ್ನಟ್ಟ ಬೆಗಡುಗೊಂಡು ಪರಿದು ಪರಿಯಲಾಱದೆ ಬಂದೊರ್ವ ಪರದನ ಮನೆಯುಂ ಪೊಕ್ಕು ಕಾಲಮೇಲೆ ಬಿರ್ದು ದೈನ್ಯವೃತ್ತಿಯುಂ ನಡಿವುದುಂ (ಗ)

ಸತ್ತ್ರದೊಳ್ ಪೋಗೆ ಪರದನ
ಚೇಲಮನೊಳಗಿರ್ದು ಮೆಲ್ಲನೀಕ್ಷಿಸಿ ಚೋರಂ] ॥ ೭೬

ಪುಸಿಯು ತಾಯ್ಮನೆ ಪಾಪದಾಗರಮಿಂದ್ರಿಯಂಗಳ ಪೆರ್ಚು ಶೋಭಿಸುವ ಪೆಂಪಿನ ಕೇಡು ಕೋಪದ ಪುತ್ತು ದುಃಖದ ಬಿತ್ತು ದುರ್ವ್ಯಸನದಿಕ್ಕೆಯು ಠಾವು ರೌರವಪಂಥಮಲ್ಲದೆ ಮನ್ಮಥ ವ್ಯಸನಮೆಂಬ ಜಿನೇಂದ್ರವಾಕ್ಯಮನಾಖಳಂ ನೆಱೆ ತೋಱಿದಂ ॥ ೭೭

ಮತ್ತಂ ವ್ಯಸನಿಯಿಂ ಬಿಟ್ಟು ಪಾತಕರುಂ ಪುಲಿಯಿಂ ಬಿಟ್ಟು ಕ್ರೂರರುಮಿಲ್ಲೆಂಬ ಮಾತಂ ನನ್ನಿಮಾಡಿ ॥ ೭೮

ಈಪರದನ ಕತದಿಂದೆನ
ಗಾಪತ್ತಿದು ಪೋದುದಱಿದೊಡವನಿಯೊಳನಗಿ ।
ನ್ನೀಪರದನೆ ಸಖನೆನ್ನದೆ
ಪಾಪಯುತಂ ಪೊನ್ನೊಳಾದ ಪದೆಪನೆ ಬಗೆದಂ ॥ ೭೯

ಪುಸಿವಂಗೆ ಮಾಡಿದ ಹಿತಮುಂ ಕಳ್ಳಂಗೆ ಮಾಡಿದುಪಕಾರಮುಂ ಸಮುದ್ರದೊಳ್ ಬಳಕೊಂಡ ಮೞೆಯುಂ ಗ್ರಾಮಣಿಗೆ ಮಾಡಿದ ಗುಣಮುಂ ವೃಥೆಯೆಂಬುದಂ ಮಾಡಿ [1] ತನ್ನ ಕಟ್ಟಿದ ಗೇಣಿಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಱ್ಬು ಕೊಂದು ಚೇಲಮಂ ಕೊಂಡು ಪೋದನಂತೆ ಕೆಲರ್ ದುರ್ಜನತ್ವಮಂ ಮಾಳ್ಪರಲ್ಲದೆ ಪರಮೋಪಕಾರಮಂ ನೆನೆಯರೆಂದು ಪೇೞ್ದು ಸಿರದಿರ್ಪುದುಂ ಮುನಿಕುಂಜರರ್ ಜಿನದತ್ತಂ ಪೇೞ್ದ ಕಥೆಯುಂದಕ್ಕೆ ವಿಸ್ಮಯಂಬಟ್ಟು ॥ ೮೦

ಇಂದೀಜಿನದತ್ತನ ಕಥೆ
ಯಂದಂ ಲೇಸಲ್ಲದಿದಱ ಭಾವಂ ಬೇಱೇ ।
ನೆಂದಪನೂ ತಿಳಿಯದೀತನ
ಮಂದಿರದೊಳ್ ಕೇಳ ವಸ್ತುವೊಂದೇನಾನುಂ ॥ ೮೧

1 ನೆಱೆಮಾಡಿ (ಗ)

ಕೆಟ್ಟುದಱಿಂದೀತಂ ಬಾ
ಯ್ವಿಟ್ಟು ಮಹಾಮೋಹದಿಂದೆ ಮೆಯ್ಯಱಿಯದೆ ಜಾ ।
ಣ್ಗೆಟ್ಟು ಮತಿಗೆಟ್ಟು ಗತಿಯಂ
ಬಿಟ್ಟೆಪ್ಪಂ ಕಳ್ಳನೆಂದು ಶಂಕಿಪನಕ್ಕುಂ [1] ॥ ೮೨

ಇದೆಲ್ಲಮೀತನ ಗೊಟ್ಟಾಟಮಲ್ಲ ದುಷ್ಕರ್ಮದ ಗೊಟ್ಟಾಟಮೆಂದು ಮನದೊಳ್ ನಕ್ಕು ವಣಿಗ್ಜಾತಂಗೆ ನಂಬುಗೆಯಪ್ಪ[ಂತಿ] ಲ್ಲಿಗೊಂದು ಕಥೆಯಂ ಮೆಲ್ಲನೆ ಪೇೞ್ದಂದುಪ್ಪೊಲ್ಲಮೆಯಂ ಕಳದುಕೊಳ್ವೆಮೆಂದು ಸೆಟ್ಟಿಗಿಂತೆಂದರ್ ॥ ೮೩

ಅತಿಶಯದಿಂ ಕೇಳ್ ದ್ವಾರಾ
ವತಿಯೆಂಬುದು ರಾಜಧಾನಿ ವೈಶ್ಯೋತ್ತಮ ಭೂ ।
ನುತನರ್ಧಚಕ್ರಿ ಧಾತ್ರೀ
ಪತಿ ನಾರಾಯಣನುದಾತ್ತನದನಾಳ್ವರಸಂ ॥ ೮೪

ಆತನ ಪುರಕ್ಕೆ [ಧರಣೀ
ಖ್ಯಾತರ್ ಗುಣಗಣಸಮೇತರುನ್ನತಶೀಲರ್ ।
ಪ್ರೀತಿಯಿನಪಗತದುರಿತ
ವ್ರಾತರ್ದ್ವಯ [2] ನಿಳಯರಮರಗಿರಿನಿಭಧೈರ್ಯರ್] ॥ ೮೫

ದಂಡಕರೆಂಬ ಋಷಿಯರ್ ಬರ್ಪುದುಮವರ [ಬರವಂ ಋಷಿನಿವೇದಕನಿಂದಱಿದು ನಾರಾಯಣಂ ಪರಿಜನಸಮೇತಂ ಬಂದು ವಂದಿಸಿ ಕಿಱಿದುಬೇಗಂ ಧರ್ಮಮಂ ಕೇಳ್ದು ಪಿರಿದಪ್ಪ ವ್ಯಾಧಿಯಿಂ ಮುನಿಪತಿ ಗಿಡಿಗಿಡಿಜಂತ್ರಮಾಗಿರ್ದುದಂ ಕಂಡು ತದ್ವ್ಯಾಧಿಯಂ ತೀರ್ಚುವೆನೆಂಬ ಬಗೆಯಂ ತಂದು ಬುದ್ಧಿವಂತನಪ್ಪುದಱಿಂ ನಿಮ್ಮಡಿ ನೀವೆನಗೆ ಕಾರುಣ್ಯಂಗೆಯ್ವಿರಪ್ಪೊಡೆ ಚಾತುರ್ಮಾಸ್ಯಮನೆನ್ನ ಪೊೞಲೊಳ್ ಮಾಡಿ ಪರಸುತ್ತುಮಿರ್ಪುದೆಂದು ಪಲವುಂ ಪ್ರತವಿಶೇಷದಿಂ ಬೇಡಿಕೊಳ್ವುದುಂ

[1] ಬಿಟ್ಟು ಕರಂ ಕಳ್ಳರೆಂದು ಸುತ್ತಿಪನಕ್ಕುಂ (ಗ)
[2] ದ್ವಯು (ಕ. ಬ.)

ದಂಡಕಋಷಿ ಮೊೞಿಗಾಲಮುಮಡಸಿತಪ್ಪುದಱಿಂದೊಡಂಬಟ್ಟು "ತಥಾಸ್ತು" ಎಂಬುದುಂ ನಾರಾಯಣಂ ತನ್ನ ದೇಹಾರಕೊಡಗೊಂಡು ಪೋಗಿ ||[1] ೮೬

ಶ್ರೀಕಾಂತಂ ಸದ್ವೈದ್ಯನ
ನೇಕಾಂತದೊಳೆಂದನೀಮುನೀಂದ್ರರ ರುಜೆಯಂ |
ವ್ಯಾಕುಳನಾಗದೆ ಕಳೆ ನಿ
ರ್ವ್ಯಾಕುಲಮಪ್ಪಂತು ಬೇಗಮೆಂಬುದುಮಾತಂ || ೮೭

ಅಂತೆ ಗೆಯ್ವೆನೆಂದು ಬೆಸನಂ ಕೈಕೊಂಡು ಪೋಗಿ ತದ್ವ್ಯಾಧಿಗೆ ತಕ್ಕಂತಪ್ಪ ದಿವ್ಯೌಷಧಂಗಳಂ ಕೂಡಿ ತಂದು ಭೂಪಾಲನ ಕೈಯೊಳ್ ಕುಡುವುದುಮರಸಂ ತನ್ಮುನೀಂದ್ರರೌಷಧಮೆಂದೊಡೆ ಕೊಳ್ಳರೆಂದುಪಾಯದಿಂ[ದೀಪರ್ವಮಿ]ದುಂಡೆಯ ಪರ್ವಮೆಂದು ಪ್ರಕಟಂಮಾಡಿ ಮದ್ದಂ ನವಣೆಯ ಪಿಟ್ಟನೊಳ್ ಕೂಡಿ ಕಿಱಿಯವಪ್ಪುಂಡೆಗಳಂ ಮಾಡಿ ತನ್ನ ಪದಿನಾಱುಸಾಸಿರ್ವರರಸಿಯರ ಮನೆಗೆಲ್ಲಮಿವುಂಡೆಗಳಂ ಮುನಿವಂದ್ಯರಿಂಗಿಕ್ಕುವುದೆಂದಟ್ಟುವುದುಂ || ೮೮

ಅರಸಿಯರಾತ್ಮವಲ್ಲಭನ ಪೇೞ್ಕೆಯೊಳಾಮುನಿವಂದ್ಯನಂ ಮನಂ
ಮುರಿಯದೆ ನಿಚ್ಚಲುಂ ನಿಲಿಸಿ ನಿಮ್ಮಡಿಯುಂಡೆಯ ಪರ್ವಮೀಗಳೀ
ಪುರದೊಳಮೀಮಹೀಶ್ವರನ ಗೇಹದೊಳಂ ಬಗೆವಂದಿವೂಟಮೆಂ
ದಿರದವನಿಕ್ಕೆ ಕಾಂತೆಯರ ಮಾತನೆ ನಂಬಿ ಮುನೀಂದ್ರನಂತಮಂ || ೮೯

ಮೆಲುತ್ತುಮಿರ್ಪುದುಂ ಕೆಲವಾನುಂದಿವಸಕ್ಕೆ ತನುವಿನೊಳಾದ ಕುತ್ತಮೆಲ್ಲಂ [ಕ್ರಮದಿಂ ಪಿಂಗಿ] ಪೋಪುದುಂ [ನಾರಾಯಣಂ ದಂಡಕಋಷಿಯ ವ್ಯಾಧಿ ಪೋದುದಕ್ಕೆ ಮುಯ್ಯುಮ್ಮದಮಾಗಿ ಸಂತೋಷದಿಂದಿರ್ಪುದುಂ, ವೈದ್ಯನುಂ ತನ್ನ ಮಾಡಿದ ಮದ್ದಿಂದಂ ರುಜೆಯೆಲ್ಲಂ ಪೋ

1 ನರಸಂ ವಂದಿಸಿ ತನ್ಮುನೀಂದ್ರನ ವ್ಯಾಧಿಯಂ ಕಂಡು ತದ್ವ್ಯಾಧಿಯನೆ ಕಳೆವೆನೆಂದು (ಗ)

ಯ್ತನ್ನಿಂ ವೈದ್ಯರಧಿಕರಾರೆಂದು ಪೆರ್ಚಿ ಮೆಯ್ಯಱಿಯದೆ ತನ್ನ ವೈದ್ಯದ ಮಹಿಮೆಯಂ ನಾರಾಯಣಂಗೆ ತೋಱಿ ಮೆಚ್ಚುಗೊಳ್ವೆನೆಂದು ದಂಡಕಋಷಿಯಂ ಸಾರೆ ಕುಳ್ಳಿರ್ದು ನಾರಾಯಣನಲ್ಲಿಗೆವಂದು ॥ ೯೦

ಅರಸಂಗಂ ಮುನಿಪತಿಗಂ
ಕರಮಾದರದಿಂದಮೆಱಗಿ ಕುಳ್ಳಿರ್ದು ಮುನೀ ।
ಶ್ವರಮುಖಕಮಲಮುಮಂ ವಿ
ಸ್ತರದಿಂದಂ ನೋಡಿ ನುಡಿದನಾಗಳ್ ವೈದ್ಯಂ ॥ ೯೧

ನಿತ್ತರಿಸಬಾರದೆನಿಸುವ
ಕುತ್ತಂ ಕಯ್ಕೊಂಡು ಬಿಡದೆ ಪತ್ತಿರ್ದುದು ಲೋ ।
ಕೋತ್ತಮರನಿನ್ನ ಪರೆಗಂ
ಮತ್ತಿನಿಸದೆ ಬಿಟ್ಟು ಪೋದುದೀಗಳ್ ನಯದಿಂ ] [1] ೯೨

ಕಡುಲೇಸಾಯ್ತೆಂದಾತಂ
ತಡವಿಲ್ಲದೆ ಭಾಷೆಯಿಂದಮೆಂದೊಡೆ ಮುನಿಪಂ ।
ನುಡಿದಂ ಕರ್ಮದಿನಕ್ಕುಂ
ಕಡುದುಃಖಂ ಕಿಡುಗುಮತ್ತಮದಱುಪಶಮದಿಂ ॥ ೯೩

ಅದಾವುದು ಚೋದ್ಯಂ [ದುಃಖಂ ಕರ್ಮದೊದವಿನೊಳಮದಱುಪಶಮದಿಂ ಸುಖಂ ಸಮನಿಸುಗುಮೆಂದು ಮುನಿರಾಜನವನಭಿಪ್ರಾಯಮನಱಿಯದೆ ಜಿನಾಗಮದೋಜೆಯಿಂದುಳ್ಳುದನುಳ್ಳಂತೆ ನುಡಿವುದುಂ ವೈದ್ಯಂ ಮುನಿದೆನ್ನ ಮಾಡಿದ ದಿವ್ಯೌಷಧದಿಂದುಪಶಮಮಾದುದೆನ್ನದೆ ಶುಭಕರ್ಮೋದಯಂ ಕಳೆದುದೆಂದೆನ್ನ ವೈದ್ಯಮನರಸನ ಮುಂದೆ ಕುಂಟುಮಾಡಿದನೆಂದು ಋಷಿಯ ಮೇಲೆ ಕೋಪಂ ಪುಟ್ಟೆ ಪಲಕಾಲಕ್ಕೆ ಪಿರಿದಪ್ಪಾರ್ತಂ ಪುಟ್ಟಿ] [2] ಸತ್ತು ಕೋಡಗಮಾಗಿ ಪುಟ್ಟಿದನಿತ್ತಲ್ ॥ ೯೪

---

1 ವೈದ್ಯಂ ಬಂದರಸಂಗಂ ಮುನೀಂದ್ರಂಗಂ ಪೊಡವಟ್ಟು ನಿಮ್ಮಡಿಗಳ ಕುತ್ತಮೀಗಳ್ ಲೇಸಾಗಿ ಪೋದುದೆಂಬುದುಂ ॥ (ಗ)

2 ಎಂಬುದುಂ ವೈದ್ಯಂ ಋಷಿಯುರಮೇಲೆ ಕೋಪಂ ಪುಟ್ಟಿಪಿರಿದಪ್ಪಾರ್ತದಿಂ(ಗ)

ಯತಿನಾಥನುಮೊಾದ್ವಾರಾ
ವತಿಯುಂ ಪೊಱಮಟ್ಟು ಮುನ್ನಿನಾ ಕ್ರಮದಿಂದಂ ।
ಕ್ಷಿತಿಯೊಳ್ ವಿಹಾರಿಸುತ್ತುಂ
ನುತವಾಕ್ಯಂ ತತ್ಕಪೀಂದ್ರನಿರ್ದಾಬನವಮಂ ॥ ೯೫

ಪೊಕ್ಕೊಂದುಮಾವಿನ [ಮರದ] ಕೆಳಗೆ ಶುದ್ಧಮಪ್ಪೆಡೆಯಂ ಪ್ರತಿಲೇಖನಂಗೆಯ್ದು ಕುಳ್ಳಿರ್ದು ಪಂಥಾತಿಚಾರಮಂ [1] ಮಾಡುತ್ತುಮಿರ್ಪುದುಂ, ಮುನ್ನಿನ ವೈದ್ಯಚರನಪ್ಪ ಕೋಡಗಂ ಕಂಡು ಜಾತಿಸ್ಮರನಾಗಿ ಪೂರ್ವವೈರಮಂ ನೆನೆದು ॥ [2] ೯೬

[ಸೊಕ್ಕಿಂದಂದೆನ್ನಂ ಕರ
ಮುಕ್ಕಿಸಿಯಂಭೋರುಹಾಕ್ಷನಾಸ್ಥಾಯಿಕೆಯೊಳ್ ।
ದಕ್ಕುಂದಲೆವಾಯ್ದೀಮುನಿ
ಯುಕ್ಕಂ ಲೇಸಾಗಿ ಕಿಡಿಸಿ ನೋವಂ ಮಾಪ್ಪೆಂ ॥ ] ೯೭

ಎಂದು ಕಪಿ ಮಸಗಿ ಮರ್ಕಟ
ವೃಂದಂಬೆರಸೊಂದುಮಾವಿನೊಣಗಿದ ಕೊಂಬಂ ।
ತಂದಿಕ್ಕುವುದುಂ ಮುನಿಜನ
ವಂದಿತಪದಯುಗನ ತೊಡೆಯುನಿಮ್ಮಿಯಾಗ್ನಿಣಲ್ ॥ ೯೮

ಅದು ಚೆಕ್ಕೆನಲುರ್ಚುವುದುಂ
ಸದಮಲಚಾರಿತ್ರನಳ್ಕಿ ತಲ್ಲಣಿಸದೆ ಬೆ ।
ಚ್ಚದೆ ನೊಂದೆನೆಂದು ಮನದೊಳ್
ಕುದಿಯದೆ ತನುವೆನ್ನದಲ್ಲದೆಂಬಂತಿರ್ದಂ ॥ ೯೯

[3] [ಮೋನದಿಂ ಮುನಿನಾಥನಿರ್ಪುದುಮಾಗಳಾಕಪಿ ನೋಡಿ ಸ
ಜ್ಞಾನಿ ಮಂದರಧೈರ್ಯನೀಮುನಿ ತನ್ನ ದೇಹಮನೊಲ್ಲದಂ

1 ಪಂಥಾಚಾರನೇಮವುಮಂ (ಗ) 2 ನೆನೆದುಕೊಲಲೆಂದು (ಗ)
3 ಅಂತಿರ್ಪುದುಂ (ಗ)

ಗಾನು ಮಾಡುವೆನೆಂಬುದೆಗ್ಗಱುವೈದ್ಯಮಂ ಕಡುಪಾಪಿಯೆಂ
ಹೀನನೆಂ ಕರಮೆಗ್ಗನೆಂ ಮುನಿಸಿಂ ವಿಚಾರಣೆಯಿಲ್ಲದಾಂ ॥ ] ೧೦೦

ನಿರಪರಾಧಂಗೆ ನೋವಂ ಮಾಡಿದೆನೆಂದು ತನ್ನಂ ತಾನೆ ನಿಂದಿಸಿಕೊಂಡು ಪಲವುಕೋಡಗಂಗಳ್ವೆರಸು ತೊಡೆಯನುರ್ಚಿ ನಟ್ಟಿರ್ದ ಕೊರಡಂ ಕಿೞ್ತು ಕಳೆದು ತಾಂ ಮುನ್ನಂ ವೈದ್ಯನಪ್ಪುದಱಿಂದಲ್ಲಿಗೆ ತಕ್ಕ ಮರ್ದಂ ಮಾಡಿ ಪುಣ್ಣಂ ಕಳೆದು ಬೞಿಕ್ಕಣುವ್ರತಧಾರಿಯಾಗಿ ಮುಡಿಪಿ ದೇವಗತಿವಡೆದುದಂತೆ ಕೆಲಂಬರ್ ಮೂರ್ಖರ್ ವಿಚಾರಣೆಯಿಲ್ಲದೆ ಸಾಧುಗಳಪ್ಪವರಂ ಬಱಿದೆ ಕಾಡುವರೆಂಬುದುಂ ಜಿನದತ್ತಸೆಟ್ಟಿ [ತನ್ನೊಳಿಂತೆಂದಂ ॥ ೧೦೧

ಪಡೆಯಲ್ಬಾರದ ಧನಮಂ
ಕಡುಲೋಭಂ ಕೊಂಡು ಕೈಗೆವಂದದನೆಂತುಂ ।
ಬಿಡಲಾಱದೆನ್ನ ಪೊನ್ನಂ
ಪಿಡಿದಿರ್ದಪನೇವನೆಂದು ಮನದೊಳ್ ನೋವಿಂ ॥ ೧೦೨

ಮಲಮಲಮಱುಗಿ ಕಿಱಿದುಬೇಗಂ ಹಮ್ಮರಂಬೋದರಂತುಸಿರದಿರ್ದು ಸೈರಿಸಲಾಱದಿನ್ನುಂ ಕಥೆಯನುಪಾಯದಿಂ ಪೇೞ್ದೆನ್ನ ಪೊನ್ನಂ ಕೊಳ್ವೆನೆಂದು] ಮತ್ತೊಂದುಕಥೆಯನಿಂತೆಂದು ಪೇೞ್ದಂ ॥ ೧೦೩

ಭಾನುಪುರಮೆಂಬ ಪುರದೊಳ
ನೂನಗುಣಂ ಕಪಿಲನೆಂಬ ಪಾರ್ವಂ ಸುಖದಿಂ ।
ತಾನಿರ್ದು ತನ್ನೊಳೊಮ್ಮೆ ಮ
ಹೀನುತನಾರಯ್ದು ಕಂಡನೊಂದೊಳ್ನಯಮಂ ॥ ೧೦೪

ಅನುಪಮವಿದ್ಯೆಗಳಂ ಬ
ಲ್ಲನವೋಘಂ ಬಲ್ಲನಾಗಿಯುಂ ಗಾರುಡಮೊಂ ।
ದನೆ ಕಲ್ಲದನ್ನೆವರೆಗಂ
ಜನಕೆಲ್ಲಂ ವಿದ್ಯೆಯಿಂದೆ ಬಿಣ್ಪಿದನಲ್ಲಂ ॥ ೧೦೫

ಎಂದು ಚಿಂತಿಸಿ [ಲಾಭಮುಂ ಕೀರ್ತಿಯುಮಿಂತಲ್ಲದಾಗದೆಂದು ಭಾನುಪುರಮಂ ಪೊಱಮಟ್ಟು ಗಾರುಡವಿದ್ಯೆಯನೆಲ್ಲಿ ಪೊಕ್ಕಪ್ಪೊಡಂ ಕಲಿವೆನೆಂದು ಪೂಣ್ದು] ಪೂರ್ವದೇಶಕ್ಕೆವೋಗಿ ತದ್ದೇಶದೊಳೂರ್ವ ಪ್ರಸಿದ್ಧನಪ್ಪ ಮಂತ್ರವಾದಿಯುಂ ಪೊರ್ದಿ ॥ ೧೦೬

[ತಿರಿದುಂಡಾತನ ಪೇೞ್ದ ಕಪಟೋಪಾಯಂಗಳಿಂ ಲಲ್ಲೆಯಿಂ ದರಿದೆಂದೋವದೆ ಶಿಷ್ಯವೃತ್ತಿಯನವಂ ಪೂಣ್ದಿರ್ಪುದುಂ ನಾಡೆಯುಂ ಕರುಣಂಬಟ್ಟುಪದೇಶಮಂ ಕುಡುವುದುಂ ಕೈಕೊಂಡು ತದ್ದೇಶದಿಂ ಬರುತುಂ ಬಟ್ಟೆಯೊಳೊಂದು ಸತ್ತ ಪುಲಿಯಂ ಕಂಡಾಗಳಂತಾದ್ವಿಜಂ॥

ಪಾವು ಕೊಂಡು ಸತ್ತಿತ್ತೆಂದಱಿದು ಕಾರುಣ್ಯದಿಂ ತನ್ನ ಮಂತ್ರಮಂ ನೞ್ಚುವವೆನಪ್ಪುದಱಿಂ] [1] ೧೦೮

ನೀರಂ ಮಂತ್ರಿಸಿ ತಳಿಯೆ ಚ
ಮೂರಂ ವಿಷಮಿೞಿದು ರಾಗದಿಂದೆರ್ದ ಮಹಾ ।
ಕ್ರೂರತೆಯಿಂ ವಿಪ್ರನನುಪ
ಕಾರಂಬುದುಲಂಡ (?) ಮೆಂಬನಾಣ್ಣುದೆಯುವೋಲ್ ॥ ೧೦೯

ಪಿಡಿದೊತ್ತಿ ಸೀೞ್ದು ತಿಂದುದು
ಗಡ ನಿಮ್ಮಡಿ ತನ್ನನುಗ್ರಫಣಿ ಮುಳಿಸಿಂದಂ ।
ಮಡಿಪಿದೊಡೆತ್ತಿದನಂ ಕೂ
ಗಿಡೆ ನುಣ್ಣನೆ ನೋಣೆದೊಡಾವ ಧರ್ಮಂ ಮುನಿಪಾ ॥ ೧೧೦

ಎಂದುಸಿರದಿರ್ಪುದುಂ ಜಿನದತ್ತನ ಮನದ ಕಪಟವೃತ್ತಿಯನ ಱಿದು ತಮ್ಮ ಮನದ ಶುದ್ಧವೃತ್ತಿಯನುಪಾಯದಿಂದಾತಂಗೆ ಪೇೞ್ವಂತೆ ಮತ್ತೊಂದುಕಥೆಯನಿಂತೆಂದು ಪೇೞ್ದರ್ ॥ ೧೧೧

1 ವಿಷವಾದಮಂ ಕಲ್ತು ಬರುತ್ತಮೊಂದು ಸತ್ತ ಪುಲಿಯಂ ಕಂಡು ಕಾರುಣ್ಯದಿಂ ತನ್ನ ಮಂತ್ರಮಂ ನಚ್ಚುವನಪ್ಪುದಱಿಂ (ಗ)

ಕೇಸರಿಪುರಮೆಂಬುದದಂ
ವಾಸವನೆಂಬವನಿಪಾಲನಾಳುತ್ತಿರ್ಪಂ ।
ಭಾಸುರಕೀರ್ತಿಪತಾಕಂ
ವಾಸವನಿಭವಿಭವನಮಳನೆಂಬಂ ಪೆಸರಿಂ [1] ॥ ೧೧೨

ರಾಜಶ್ರೇಷ್ಠಿ ತದ್ವಣಿಗ್ಜಾತನ ನಂದನಂ ವಿಮಳನೆಂಬ ಶಿಶು ಬಾಲಾಭರಣಸಮೇತನಾಗಿ ನಿಚ್ಚಲುಂ ತನ್ನ ಮನೆಯಂಗಣದೊಳಾಡುತ್ತಿರ್ಪುದುಂ ॥ ೧೧೩

ನೆರೆಮನೆಯಾಕೆ ಕಂಡು ಕಡುಮೋಹದಿನಾಶಿಶು ತೊಟ್ಟ ಮಿಂಚುವಾ
ಭರಣಮನೊಯ್ಯನೊಯ್ಯನಳಿಪಿಂ ಪೆಱರೇಗುವರೆನ್ನನೆಂದು ನಿ
ಷ್ಠುರೆ ಕರಮಲ್ಲದುಮ್ಮಳಿಸಿ ತಚ್ಛಿಶುವಂ ಪಿಡಿದೊತ್ತಿ ಗಂಟಲಂ
ಮುಱಿದು ಕವರ್ತೆಗೊಳ್ವತೆಱದಿಂ ಬಿಡದಾಭರಣಂಗಳೆಲ್ಲಮಂ ॥ ೧೧೪

ಕೊಂಡು ಮಗವಿನ ಪೆಣನನೀಮನೆಯೊಳ್ ಪೂೞ್ದನಪ್ಪೊಡೆ ವಿಷಮರಪ್ಪ ತಳಾಱರ ದೆಸೆಯಿಂದೆನಗೆ ಕೇಡು ಪುಟ್ಟುಗುಂ ಕಜ್ಜಮಲ್ಲದಿದನೀಗಳ್ ಕೊಂಡೊಯ್ದು ಬೀದಿಯೊಳಾಡುವ ಸಾದುಬಸವನ ಕೋಡಿನೊಳಗಿಕ್ಕಿ ಬುದ್ಧಿಯಿಂದೆತ್ತು ಕೊಂದುದು ಕೂಸನೆಂಬಂತು ಮಾಡಿ ದೂಱನೆತ್ತಿನಮೇಲಿಕ್ಕಿ ಸುಖದಿಂದಿರ್ಪೆನೆಂಬ ಸಮಕಟ್ಟನೆತ್ತಿ ಕೊಂಡು ಕೂಸಿನ ಪೆಣನನೊಯ್ದು ॥ ೧೧೫

ಪಗಲೆಲ್ಲಂ ತಿರಿತಂದು ಬೀದಿಗಳೊಳಾರಾನುಂ ಭರಂಗೆಯ್ದು ಕ
ಬ್ಬುಗಳಂ ಜೋಳವನಕ್ಕಿಯುಂ ಕಡಲೆಯುಂ ತೌಡಂ ಮನಂಬೆರ್ಚೆ ಪಿಂ
ಡಿಗಳಂ ಪುಲ್ಗಳನಿಕ್ಕೆ ಮೇದು ತಣಿವಿಂ ಮೆಲ್ಕುತ್ತುಗುಂ ನೋಡ ಪ
ಟ್ಟಗವೇಂದ್ರಾಧಿಪನಲ್ಲಿಗಾಕುಟಿಲೆ ಬಂದಾಗಳ್ ಮನೋರಾಗದಿಂ ॥ ೧೧೬

ಕೂಸಿನ ಪೆಣನಂ ತಾಟಕಿ
ಲೇಸಾಗಿರೆ ಬಸವನೆಡದ ಕೋಡಿನಮೇಲ ।

---

1 ನೆಂಬುವನೋರ್ವಂ (ಗ)

ತ್ಯಾಸುರವುಪ್ಪಂತಿಕ್ಕಿ ನಿ
ವಾಸಕ್ಕಾಧೂರ್ತೆ ಪೋದಳನ್ನೆಗಮಿತ್ತಲ್ ॥ ೧೧೭

ಅಮರ್ದಿನೊಳ್ದೊರೆಯುಪ್ಪ ಬಾಱಿಯ ಪಣ್ಣನೊಯ್ಯನೆ ಕೊಂಡು ಬಂ
ದಮಿತಸೌಖ್ಯನುದಾರನಾವಣಿಗೀಶ್ವರಂ ಮಗನೆಲ್ಲಿದಂ
ಕಮಲಲೋಚನನೆಂದು ಪುತ್ರನ ಮೋಹದಿಂ ಬೆಸಗೊಳ್ವುದುಂ
ಭ್ರಮೆಯಿನೆಲ್ಲರುಮಲ್ಲಿಗಲ್ಲಿಗೆ ನೋಡಿ ಕಾಣದೆ ದುಃಖದಿಂ] [1] ॥ ೧೧೮

ಬೀದಿಬೀದಿಗಳೊಳೆಲ್ಲಂ ಪರಿದು ನೋಡುತ್ತುಮಿರ್ದು ಬಸವನ ಕೋಡಿನೊಳಿರ್ದ ಪೆಣನಂ ಕಂಡು ಮೆಯ್ಮಱುಗಿ ಸೈರಿಸಲಾಱದೆ ಪಾಪಂಗೆಯ್ದಿತ್ತುಕೊಂದುದೆಂದು ಸುತ್ತಿ ಮುತ್ತಿಕೊಂಡು ಬಾಲಮಂ ಬಡಿದು ಕಂಡರ್ ಕಂಡ ಮುಖದೊಳ್ ನುಗ್ಗುನುಗ್ಗಾಗೆ ಬಡಿವುದುಂ ಬಸವಂ ವೇದನೆಗಿರಲಾಱದೆ ಗೋಱಿಟ್ಟೊಳಱಿ ದೆಸೆಗೆ ಬಿದಿರ್ದು ಪರಿಯುತ್ತುಂ ತನ್ನ ಮನದ ನಿರ್ಮಲತೆಯನೆಲ್ಲರ್ಗಂ ತೋಱುವಂತೆ ಕಮ್ಮಱನ ಮನೆಯಂ ಪೊಕ್ಕು ಕಾಸುತಿರ್ದ ಕಾಯ್ದ ಕಬ್ಬುನಮಂ ಕರ್ಚಿ ನೆರೆದ ನೆರವಿಗೆ ಇದಿರಾಗಿ ಬರ್ಪುದುಂ ॥ ೧೧೯

ನೆರೆದು ನೋಡುವ ನೋಟಕರ್ ಬೆಱಗಾಗಿ ಮಾಣಿಸಿ ಪೊಯ್ಗಳಂ
ನಿರುತಮಿಂತಿದು ಕೊಲ್ಲದೀಮೃಗನಂ ಪೆಱರ್ ಧನವಂಚಕರ್
ಕರುಣಮಿಲ್ಲದೆ ಕೊಂದರೆಂದು ತಳಾಱನಂ ಕ್ಷಣಮಾತ್ರದಿಂ
ಕರೆಸು ನೀನಿದನಿಂತುಪೇಕ್ಷಿಸಿ ಪೋಗಲೀಯದೆ ಕಳ್ಳನಂ ॥ ೧೨೦

ತರವೇೞ್ಕುಮೆಂದು ಪೇೞ್ವುದು
ಮರವರಿಸದೆ ಪೋಗಿ ನೋಡಿ ಬುದ್ಧಿಯ ಬಲದಿಂ ।

1 ನಾಗಿರ್ದನಾಮಗನಂ ನೆರಮನೆಯಾತಂ ಕೊಂದಾಭರಣಮೆಲ್ಲಮಂ ಕೊಂಡು ಮಗವಿನ ಪೆಣನಂ ನೆರಮನೆಯೊಳ್ ಪೂಳ್ದನಪ್ಪೊಡೆ ವಿಷಮರಪ್ಪ ತಳಾಱರ ದೆಸೆಯಿಂ ದೆನಗೆ ಕಿಡುಗು ಪುಟ್ಟುಗುಮದುಕಜ್ಜಮಲ್ಲೆಂದು ಕೊಂಡೊಯ್ದು ಬೀದಿಯೊಳಾಡುವ ಬಡಸಾದುಬಸವನ ಕೋಡಿನೊಳಿಕ್ಕಿ ದೂರ್ತೆ ಪೋದಳನ್ನೆಗಮಿತ್ತಲ್ ಮಗವಿನಱಿಕೆ ಯಾಗಿ (ಗ)

ಪರಿಣತನಾರಯ್ದಱಿದಂ
ದುರಿತಂ ಪೊಳ್ದುಂಟೆ ಕೊಂದವರ್ ಬದ್ಧಪರೇ ॥ ೧೬೧

ಅಂತು ಕಳ್ಳಯಂ ಪಿಡಿದಂಗಂಬೆರಸು ತಂದು ಪ್ರಜೆಗೊಪ್ಪಿಸುವುದುಂ ಬೞಿಕ್ಕೆ ಬಡಸಾಧುಗೊಂದೆಯಂ ಬಱಿದೆ ವಿಚಾರಣೆಯಿಲ್ಲದೆ ಮುಱಿಯೆ ಮೋದಿದೆವೆಂದು ತಮ್ಮಂ ತಾವೆ ಬಯ್ದುಕೊಂಡರದಱಿಂ ಮಹಾತ್ಮರಪ್ಪರವಿಚಾರಿಗಳಾಗದೆ ವಿಚಾರಿಸಿ ನೆಗೞ್ವುದೆಂಬುದುಂ ಜಿನದತ್ತಸೆಟ್ಟಿ ಯತಿಪತಿವಚನಮಂ ಕೈಕೊಳ್ಳದೆ [ಮತ್ತಮಾಮಹಾತ್ಮನೆ ಕಳ್ಳನೆಂದು ಬಗೆದು ತನ್ನ ಮನದ ಮಱುಕದಿಂ ನಿಲಲಾಱದೆ ಮುನಿನಾಥಂಗಿನ್ನೊಂದುಕಥೆಯಂ ಪೇೞ್ದು ಮೆಲ್ಲನೆನ್ನ ಪೊನ್ನಂ ತೆಗೆವೆನೆಂದು] ಮತ್ತೊಂದುಕಥೆಯುನಿಂತೆಂದು 'ಪೇೞ್ದಂ ॥ ೧೬೨

ಭಾರತಿಯೆಂಬೊಂದುನದೀ
ತೀರದೊಳೊರ್ವಂ ಕಪಾಲಿಯೆಂಬಂ ಗೊರವಂ ।
ಧೀರಂ ತಾಪಸತಪಸಿನೊ
ಳಾರಿಂದಂ ಕರಮೆ ಪಿರಿಯನೆಂದೊಸೆದಿರ್ದಂ ॥ ೧೬೩

ಅಂತಿರ್ಪುದುಮೊಂದುದಿನಂ
ಸಂತತಮಱಿಯಟ್ಟಿ ಪಾವನೆಱಿಲಿಕ್ಕಿದವೋಲ್ ।
ತಾಂ ತಗುೞ್ದು ಕರೆವುದುಂ ಮೞೆ
ಕಾಂತಾರದ ಗಿರಿಯ ಪಿರಿಯ ಪೆರ್ವೊನಲೆಲ್ಲಂ ॥ ೧೬೪

ಬಂದಾಗೆ ಕೂಡೆ ತೊಱೆ ಪೆ
ರ್ಚಿಂದಂ ವಾರಾಶಿ ಮೇರೆದಪ್ಪಿದುದೆಂಬೊಂ ।
ದಂದದೊಳ್ ಬರ್ಪುದುಂ ಧರೆ
ಗೊಂದೊಂದಾಶ್ಚರ್ಯಮದ್ಭುತಂ ಪುಟ್ಟುವಿನಂ ॥ ೧೬೫

ಅಂತು ಪೊಲನುಂ ನೆಲನುಂ ಜಲಪ್ರಳಯಮಾಗೆ [ಬಂದ] ತೊಱೆಯೊಳೊಂದಾನೆಯ ಮೆಱೆ ಬಿರ್ದು ಪ್ರಾಣಭಯದಿಂ ತಲ್ಲಣಿ (ಸಿ) ಬೆರ್ಚಿ

ಬೇರ್ವೆರಸಿ ಕಿತ್ತು ಬರ್ಪ ಮತ್ತಿಯ ಪೆರ್ಮರನಂ ಪಿಡಿದು [ಕೊಂಡು] ಮರನುಂ ತಾನುಂ ಬರುತ್ತಿರ್ಪುದುಂ ಕಪಾಲಿಭಿಕ್ಷುಕಂ [1] ಕಂಡು ॥ ೧೦೬

[ಕರುಣಂ ಕೈಮಿಗೆ ಮನದೊಳ್
ನಿರುತಂ ತೊಱೆಯೊಳಗೆ ಪೊಕ್ಕೊಡೀಯುವಸರದೊಳ್ ।
ಮರಣಮೆನಗಕ್ಕುಮೆಂದರ
ವರಿಸದೆ ನೆರೆದಿರ್ದ ತನ್ನ ಚಟ್ಟುಂ ತಾನುಂ] ॥ ೧೦೭

ಬುದಿಲೆನೆ ತೊಱೆಯಂ ಪಾಯ್ದು ಮಾತಂಗಕಳಭಮಂ ಪಿಡಿದು ಮರಂಬೆರಸು ತಡಿಗೆ ತಂದು ಮರನಂ ಪೋಗೆಬಿಟ್ಟು ತತ್ಕರಿಯಂ ಪೊಱ ಗಣ್ಗೆ ನೋಯಲೀಯದೆ ತೆಗೆದು ತದ್ಗಜದ ಮನದ ಭಯಮಂ ಪಿಂಗಿಸಿ ತನ್ನ ಮಠಕ್ಕೆ ತಂದು ॥ ೧೦೮

ಪುಳಿಗೂಱಿಂ [2] ತದಿಕಿನ ಕೆಂ
ದಳಿರಂ ಪಾಲ್ಗೆನೆಯನೆಳೆಯ ಪುಲ್ಲಂ ಕಬ್ಬಂ ।
ಬಲವಂತನಕ್ಕುಮೆಂದು
ಜ್ಜ್ವಲಚಿತ್ತಂ ತಂದು ಪೊರೆವುದುಂ ಗಜಶಿಶುವಂ ॥ ೧೦೯

ಕರಿಪತಿ ಬೆಳೆದು ಸುರೇಶನ
ಕರಿಗಂ ಮಿಗಿಲೆನಿಸಿ ಮಠದೊಳಿರೆ ಪಿಸುಣರ್ ತ ।
ತ್ಕರಿಯಿರ್ದುದನೊಯ್ಯನೆ ತ
ಮ್ಮರಸಂಗಱಿಪುವುದುಮರಸನಱಿದಾಕರಿಯಂ ॥ ೧೧೦

ಕವಿಲೆಗಳಲ್ಲದೆ ಗೊರವ
ಗೆ ವಿರುದ್ಧಂ ಮದಗಜೇಂದ್ರಮೇವುದು ತಾನಾ ।
ದಿವಿಜಗಜನಿಭಕರೀಂದ್ರಮ
ನೆವಗಟ್ಟುವುದಟ್ಟಿದಿರ್ದೊಡಂ ತಾನಱಿವಂ ॥ ೧೧೧

---

1 ಕಾಪಾಲಿ (ಗ) 2 ಹಳಿಗೂಳಂ (ಗ)

ಎಂದರಸಂ ಕಾಪಾಲಿಯಲ್ಲಿಗಾನೆಯಂ ಬೇಡಿಯಟ್ಟುವುದುಂ ಕಾಪಾಲಿ ರಾಜಭೃತ್ಯರ ದೆಸೆಯಿಂದೆ ತತ್ಪ್ರಪಂಚಮನೆಲ್ಲಮನಱಿದು ಭಯಸ್ಥನಾಗಿ ಮದಸಿಂಧುರಮಂ ಕುಡುವುದುಂ ಅವರಾನೆಯು[ನರಸನಲ್ಲಿ ಗೊಯ್ದೊಪ್ಪಿಸುವುದುಂ ಮಹೀಧರನಾನೆಯಂ ಕೈಕೊಂಡಿರ್ಪುದುಂ॥೧೩೨

ಅರಮನೆಯೊಳಗಿರಲಾಱದೆ
ಕರಿ ಪಿಡಿಮಿಡಿಗೊಂಡು ನೆನೆದು ಮುನ್ನಿನ ನೆಲೆಯಂ ।
ಪರಿಹರಿಸಿ ಕಾಪಿನವರಂ
ಪರಿತಂದುದು ಮಠಕೆ ಮನದ ಮೋಹದಿನಾಗಳ್ ॥ ೧೩೩

ಅಂತು ಬಂದಿರ್ಪುದುಂ ಧರಣೀನಾಥಂ ಮದಮಾತಂಗಂ ಕಾಪಿನವರಂ ಕೊಂದು ತನ್ನ ಮುನ್ನಿನ ಮಠಕ್ಕೆ ಪೋದುದೆಂದು ಕೇಳ್ದು ತನ ಗಾಗಜದಮೇಲೆ ಮೋಹಮುಂಟಪ್ಪುದಱಿಂ ಮಾನಿಸರನಟ್ಟಿ ಮಗುಳೆ ತರಿಸಿ ಮುನ್ನಿನೆಡೆಯೊಳ್ ಕಟ್ಟಿಸುವುದುಂ ಮತ್ತಂ ನಿಲಲಾಱದೆ ಮಠವೆ ಗುಱಿಯಾಗಿ ಪೋಪುದುಂ ಮಹೀನಾಥಂ ಪಲವುಸೂೞ್ತರಿಸಿ ಬೇಸತ್ತು ಕಪಾಲಿಗೆ ಮುಳಿದೆನಗೆ ಕೊಟ್ಟಾನೆಯಂ ಕುಡಲಾಱದೆ ತನ್ನ ಮಠವನೆ ನಚ್ಚಿಸಿ ಪಿಡಿದಿರ್ದನಾದೊಡೇನಾಯ್ತು ತಾನೆನ್ನ ದೇಶದಿಂ ಪೊಱಮಟ್ಟು ಪೋಪುದೆಂದಟ್ಟುವುದುಂ ಕಪಾಲಿ ಭಯಸ್ಥನಾಗಿ ತಾನುಂ ತನ್ನ ಚಟ್ಟಿ ಗಳುಮಾನೆಯುನರಮನೆಗೆ ತಂದರಸಂಗೊಪ್ಪಿಸಿ ತನ್ನ ಪೊಲ್ಲಮೆಯುಂ ಪಿಂಗಿಸಿ ಮಗುೞ್ದು ಬಂದಿರ್ಪುದುಂ ಕರಿ ಮನದೊಳ್ ಮುಳಿದು ॥ ೧೩೪

ಅರಸಂ ನಾಲ್ಕಡಿಪೋಗವೇೞ್ದೊಡೆ ಭಯಂಗೊಂಡೆನ್ನನಾಸಾಧು ತಂ
ದರಸಂಗೊಪ್ಪಿಸಿ ಪೋದನಾತನೊಳಗೇಂ ಕೇಳ್ದ್ವೇಷಮಿಲ್ಲೆಂದು ನಿ
ಷ್ಕರುಣಂ ಮಾಣದೆ ಕೊಲ್ಲನೆಂಬ ಮುಳಿಸಿಂ ಬಂದಾತನಂ ಕೊಂದುದು
ರ್ವರೆಯೊಳ್ ನಿರ್ದಯರಪ್ಪ ದುರ್ಗುಣಯುತರ್ ತಾವೊಳ್ಳಿತಂ ಮಾೞ್ಪ
ರೇ] [1] ॥ ೧೩೫

[1] ನರಸಂಗೊಪ್ಪಿಸ ಮದಗಜಂ ಮನದೊಳ್ ಮುನಿದು (ಗ)

ಧರೆಯುಂ [1] ಮೆಟ್ಟೆ ಪಲಂಬರುಂ ದಯೆಯುನೊಕ್ಕಾನಂದದಿಂದೀಕ್ಷಿಸು
ತ್ತಿರೆ ಕಾಪಾಲಿ ಮಹೀನುತಂ ಕರುಣದಿಂ ಪೊಕ್ಕೆನ್ನನಂದೆಯ್ದಿ ವಿ
ಸ್ತರದಿಂ ರಕ್ಷಿಸಿ ಕಾದನೆನ್ನದೆ ಗಜೇಂದ್ರಂ ಕೋಪದಿಂ ಬಂದು ನ
ಟ್ಟಿರುಳೊಳ್ಕೊಂದುದು ಬೌದ್ಧನಂ [2] ಧರಣಿಯೊಳ್ ನಿರ್ಧರ್ಮರೇಗೆಯ್ಯ್ಯ
ರೋ ॥ ೧೩೬

ಎಂದು ಜಿನದತ್ತಸೆಟ್ಟಿ ಮೂಣ್ದಿಸಿರದಿರ್ಪುದುಂ, ಜಿನಪಾಲಿತ ಮುನಿ [ನಾಥಂ] ನಕ್ಕು ಲೋಭಿಯ ಮನವುಂ [3] ಬಂದ ತೊಱೆಯುಂ ಶುದ್ಧವಾಗಲಱಿಯುವೆಂಬ ನಾಣ್ನುಡಿ [4] ಯನೀತಂ ನನ್ನಿಮಾಡಿದನಿನ್ನು ಮೊಂದು [5] ಕಥೆಯುಂ ಪೇಳ್ದೆನ್ನಮೀಗಣ ಪೊಲ್ಲಮೆಯುಂ [6] ಪಿಂಗಿಸಿ ಕೊಳ್ವೆನೆಂದು ಮತ್ತೊಂದುಕಥೆಯನಿಂತೆಂದು ಪೇೞ್ದಂ ॥ ೧೩೭

ದಂತಿಪುರಮೆಂಬ ಪೊೞಲೊಳ್
ಕಂತುವಿನರಲಂಬೆ ಪೆಣ್ಣ ರೂಪಾಯ್ತೆನ್ನಂ ।
ಬಂತೆಸೆವ ಚೆಲ್ವೆಯೊರ್ವಳ
ನಂತಶ್ರೀಯೆಂಬ ಸೂಳ್ ಸುಖದಿಂದಿರ್ಪಳ್ ॥ ೧೩೮

ಆಕೆಯ ಕೆಳದಿ ವಾಸವದತ್ತೆಯೆಂಬಳನಂತಶ್ರೀಗೊಂದುಗಿಳಿಯಂ ಮಾಱುಗೊಂಡು ಕೂರ್ಮೆಯಿಂ ತಂದು ಕುಡುವುದುಂ ಗಿಳಿಯ ಚೆಲ್ವಿಂಗೆ ನಾಡೆಯುಂ ಮನದೊಳ್ ಸೋಲ್ತು [ವಾಸವದತ್ತೆಗೆ ಮೆಚ್ಚುಗೊಟ್ಟು] ಪೊನ್ನ ಪಂಜರದೊಳ್ ಗಿಳಿಯನಿರಿಸಿ ನಾನಾಪ್ರಕಾರದ ಸೂಳ್ಮಾತುಗಳಂ ಶೃಂಗಾರವೃತ್ತಂಗಳುಮಂ ಕಲಿಸುತ್ತುಂ ಪರಮಸ್ನೇಹದಿಂ ಗಿಳಿಯ ವಿನೋದಮೆ ವಿನೋದಮಾಗಿ ಪಲವುದಿವಸಂ ಪೋಗೆ [ಪೋಗೆ] ॥ ೧೩೯

[ಸಿರಿಗಂ ಸೌಭಾಗ್ಯಕ್ಕಂ
ಪಿರಿಯಳ್ ಕೈಕೊಳ್ಳದಾರುಮಂ ಮದದಿಂದಂ ।

---

1 ದರಿಯುಂ (ಗ) 2 ಕೊಂದೆಯೆ ಪೋಯಿತಾರ (ಗ)
3 ಧನಮುಂ (ಕ. ಖ.) 4 ನಾಳ್ಣುದೆ (ಗ)
5 ನಿಮಂಗಿನ್ನೊಂದು (ಗ) 6 ಶಂಕೆಯುಂ (ಗ)

ಧರಣಿಯೊಳನ್ನೆನಗಾರುಂ
ಸರಿಯಲ್ಲರವೋಘವೆನುತುಮಿರ್ಪಳಗುರ್ವಿಂ ॥ ೧೪೦

ಮತ್ತಮವಳ ಸೌಭಾಗ್ಯದ ಪೆಂಪೆಂಬ ಪೆಸರೊಳಡಕೆಯು ಭಾಗದ ಭಾಗವಿಲ್ಲೆಂದು] ॥ ೧೪೧

ಪುರದೊಳಗಣ ಸೂಳೆಯರೆ
ಲ್ಲರುಮಾಕೆಗೆ ಮುನಿದು [ಕೊಲ್ವ ಬಗೆಯಂ ತಂದಾ ।
ದರದಿಂ ವಾಸವದತ್ತೆಯು
ನೆರಡಿಲ್ಲದೆ ತಮಗೆ ಮಾಡಿಕೊಂಡನುನಯದಿಂ] ॥ ೧೪೨

ಮೆಲ್ಲನೆ ವಾಸವದತ್ತೆಗೆ
ಕೊಲ್ಲಾಕೆಯನೆಂದು ಕೊಟ್ಟು ಪಲವುಂ ಪೊನ್ನಂ ।
ಕಳ್ಳೊಳಗೆ ಕಾಳಕೂಟಮ
ನೆಲ್ಲರುಮೊಂದಾಗಿ ಕೂಡಿ ಕೂಡುವುದುಮಾಗಳ್ ॥ ೧೪೩

ವಾಸವದತ್ತೆ ಪೊನ್ನ ಮೋಹದಿನಂತೆಗೆಯ್ವೆನೆಂದು ಪಲರನುಮ ತದಿಂ ಕಳ್ಳಂ ಕೊಂಡು ಬಂದು [ಕೂರ್ತು ತನ್ನ] ನಂತಶ್ರೀಗೆ ಕುಡು ವುದುಂ [ಅನಂತಶ್ರೀಯುಂ ॥ ೧೪೪

ಇಲ್ಲರಿಸಿ ಪೋಗು ಕಳ್ಳಂ
ಮೆಲ್ಲನೆ ಬಯ್ಗಿಂಗೆ ಕುಡಿಪಮಿರ್ವರು ನೀನಿಂ ।
ತಿಲ್ಲಿಗೆ ಬಾಯೆಂದಾಕೆಗೆ
ಸಲ್ಲಲಿತಲತಾಂಗಿ ಮೆಚ್ಚುಗೊಟ್ಟಾದರದಿಂ ॥ ೧೪೫

ಮನ್ನಿಸುವುದುಮಾಕೆಯುಂ ಸಂತೋಷಂಬಟ್ಟು ಕಳ್ಳಂ ಮಂಚದ ಕೆಳಗಿರಿಸಿ ತನ್ನ ಮನೆಗೆ ಪೋದಳತ್ತಲನಂತಶ್ರೀಯುಂ ಪಾಸಿನಮೇಲೆ ಪಟ್ಟಿರ್ದಳನ್ನೆಗಂ] ಪಂಜರದೊಳಿರ್ದ ಗಿಳಿ [ಕಾಜಿನ ಬಟ್ಟಲೊಳಿರ್ದ ಸುರಾಪಾನಮಂ ನೋಡುತ್ತುಮಿರ್ಪುದುಂ] ಕಳ್ಳ ಗಂಧಕ್ಕೆ ಮೊಗಸಿದ

ನೊಣಂಗಳೆಲ್ಲಂ ಸಾವುದಂ ಕಂಡು ವಿಷಮೆಂದಱಿದು ತನ್ನೊಳಪ್ಪ ಕಾರು
ಣ್ಯಬುದ್ಧಿಯಿಂದೀಕಳ್ಗಂ ಕುಡಿದಳಪ್ಪೊಡನಂತಶ್ರೀ ಸಾಯುಗ್ಗಮೆಂದು
ಗೂಡಿಂ ನೆಲಕ್ಕೆವಾಯ್ದು ಬಟ್ಟಲ ಕಳ್ಗಂ ನೆಲಕ್ಕುಗುವುದುಂ ॥ ೧೪೭

ಬೇಗಮನಂತಶ್ರೀ ಮುಳಿ
ದಾಗಿಳಿಯುಂ ಕೊಂದು ಬಱಿಕಮಾಕಳ್ಗಂ ನಿ ।
ರ್ವೇಗಂಬಟ್ಟಿಱುತುಂ ನೋ
ಟ್ಪಾಗಳ್ ಕಳ್ಗಱಿ ಸಾವ ಮೊಕ್ಷಿಕತತಿಯಂ ॥ ೧೪೮

ತೊಟ್ಟನೆಕೊಳ್ ಕಂಡು ಮನಂ
ಗೆಟ್ಟಿರ್ದೆಯುಂ ನೀವಿಕೊಂಡು ವಿಷಯುಕ್ತಮಿದಂ ।
ನೆಟ್ಟನೆ ಕುಡಿದೊಡೆ ಮರಣಂ
ತೊಟ್ಟನೆ ಸಮನಿಸುಗುಮಲ್ಲಿ ಸಂದೆಯಮೊಂಟೇ ॥ ೧೪೯

[ಈ ಗಿಳಿಯಿಂ ಧರ್ಮದಿಂದೊರ್ವೆಗೆ ಬದುಂಕಿದೆನೆನಗುಪ
ಕಾರಂಮಾಡಿದ ಗಿಳಿಯುಂ ವಿಚಾರಿಸದೆ ಕಳ್ಗುಡಿಕಿಗಳ್ಮಂ ನಿರ್ದಯರುಂ
ಮಾಡದ ಪಾಪಮಿಲ್ಲೆಂಬ ನುಡಿಯುಂ (ನನ್ನಿ) ಮಾಡಿದೆಂ ಮಹಾಪಾಪಿ
ಯೆಂದುತನ್ನಂ ತಾನೆ ಬಯ್ದುಕೊಂಡು ಬಱಿಕ್ಕಂ] [1] ಮಱುಗಿ
ಗಿಳಿಯು ಪೆಣನನೆರ್ದೆಯು ಮೇಲಿಕ್ಕಿಕೊಂಡಟ್ತಿಳಂಬಂತೆ ಬುದ್ಧಿವಂತರ
[ಪ್ಪರಾಕೆಯಂತ]ವಿವೇಕಿಗಳಾಗದೆ [ನೆಗಱ್ವುದಲ್ಲದೆ ಕೆಮ್ಮನುದ್ಧತಿ
ಕ್ಕೆಯಿಂ ನಿರ್ದೋಷಿಗಳ ಮೇಲೆ ದೋಷಮಂ ಮಾಡವೇಡೆಂಬುದುಂ ॥

ಮುನಿಪತಿಯು ಮಾತನೆಂತುಂ
ಮನದೊಳ್ ಕೈಕೊಂಡು ಶುದ್ಧರೆನ್ನದೆ ಮತ್ತಂ ।
ಧನದೆಱಕದಿಂದಮಾಮುನಿ
ಜನವಂದಿತಪಾದಪಂಕಜಂಗಾಪರದಂ] [2] ॥ ೧೫೦

---

[1] ಎಂದು (ಗ)  [2] ವಿಚಾರಿಸಿ ನೆಗಳ್ವುದೆಂಬುದುಂ (ಗ)

ಮತ್ತಮೊಂದು ಕಥೆಯನಿಂತೆಂದು ಪೇೞ್ದಂ ॥ ೧೫೧

ವರಮುನಿವಲ್ಲಭ ಕೇಳ
ಚ್ಚರಿಯಪ್ಪೀಕಥೆಯನವನಿಭೂಷಣಮೆಂಬಾ ।
ಪುರದೊಳ್ ಬಡಗಿಯದೊರ್ವಂ
ಕರಕುಶಲಂ ಬುದ್ಧಿವಂತನಿರ್ದೊಂದುದಿನಂ ॥ ೧೫೨

ಮರನಂ ಕಡಿಯಲೆಂದು ವಿಂಧ್ಯಾಚಳಪರ್ವತಕ್ಕೆ ಪೋಗಿ ॥೧೫೩

ತರತರದಿಂದಂ ಗಗನಂ
ಬರೆಗಂ ನೀಳ್ದೊಪ್ಪಿ ತೋರ್ಪ ಭೂಜಂಗಳನಾ ।
ದರದಿಂ ನೋಡುತುಮಿರ್ಪವ
ಸರದೊಳ್ ಮದದಾನೆಯೊಂದು ಕಂಡತಿಭರದಿಂ ॥ ೧೫೪

ಗಿಱ್ಱನೆ ಪರಿತರೆ ಬಡಗಿಯು
ಸುಱ್ಱನೆ ಸುಗಿದಂಜಿ ನಡುಗಿ ವನದೊಳಗೆಲ್ಲಂ ।
ತಿಱ್ಱನೆ ತಿರಿತಂದು ಖಳಂ
ಖಱ್ಱನೆ ತನು ಕಂದಿ ಕುಂದಿ ಭಯವಶದಿಂದಂ ॥ ೧೫೫

ಓಡಲಾಱದೊಂದುಪೆರ್ಮರನನೇಱುವುದುಂ ಮದಗಜೇಂದ್ರಂ ಕೊಲಲಾಱದೆ ಕಿಱಿದುಬೇಗಮಿರ್ದು ಮತ್ತೊಂದುದೆಸೆಗೆ ಪೋಪುದುಂ ಬಡಗಿ ಮರದಿಂದಮಿೞಿದು ॥ ೧೫೬

[ಆಮದೇಭಮಡರ್ತು ಕೋಪದಿನೆನ್ನನಟ್ಟಿ ತಗುಳ್ದು ಬಂ
ದೀಮಹೀಜಮನೇಱಿ ಬರ್ದೆನದಿಲ್ಲದಂದೆರಡಿಲ್ಲದಾ
ಸಾಮಜಂ ತುಳಿದಿಕ್ಕಿ ಕೊಲ್ಲದೆ ಮಾಣದಾನದಱಿಂದಮಿಂ
ತೀಮರಕ್ಕೞಿವಂ ವಿಮೋಹಿಸಿ ಮಾಡಲಾಗದು ನಿಶ್ಚಯಂ] [1] ॥ ೧೫೭

1 ಆನೆಯುಂ ಬಾರಿಯು ಕಾದುದೂ (ಗ)

ಎನ್ನದೆ ಬಡಗಿ ಕನಿಷ್ಠಂ
ತನ್ನಳಿಪಿಂ ಕಡಿದನಾಗಳಾ ಪುರನಂ ಮ |
ತ್ತೆನ್ನದೆ ದುರ್ಜನನಪ್ಪಂ
ಸನ್ನುತರಂ ಕಿಡಿಪನೆಂಬುದಾವುದು ಚೋದ್ಯಂ || ೧೫೮

ಎಂದು ವೈಶ್ಯಾತ್ಮಜನುಸಿರದಿರ್ಪುದುಂ ಮುನಿಕುಂಜರಂ [ಸೆಟ್ಟಿಯ ಮಾತಿಂಗೆ ವಿಸ್ಮಯಂಬಟ್ಟು ಸಂಶಯತುಲಾರೋಹಣನಪ್ಪೀತನನೆಂತುಂ ನಂಬಿಸುವುದರಿದೆಂದು ನಕ್ಕು ಮತ್ತಂ ತನ್ನ ಪೊಲ್ಲಮೆಯುಂ ಪಿಂಗಿಸಲೆಂದು] (ಇಂತೆಂದಂ) || ೧೫೯

ಜಿನದತ್ತ ಕೇಳ ಕಥೆಯೊಂ
ದನಪೂರ್ವಮನಮರಖೇಟಮೆಂಬೂರೊಳ್ ಮೇ |
ದಿನಿದೇವನೊರ್ವನಿರ್ಪಂ
ಜನವಿನುತಂ ಚಂದ್ರದತ್ತನೆಂಬಾಪೆಸರಿಂ || ೧೬೦

ಆತನ ಪೆಂಡತಿ ಯಜ್ಞದತ್ತೆಯೆಂಬಳಾಕೆಯೊಂದುಮುಂಗುರಿಯಂ ನಡಪಿ ಪಿರಿದುಮಕ್ಕರಿಂ ಕೊಂಡಾಡುತ್ತುಮಿರ್ದೊಂದುದಿವಸಂ || ೧೬೧

ತೊಟ್ಟಿಲೊಳು ತನ್ನ ಕೂಸಂ
ಪಟ್ಟಿರಿಸಿ ಲತಾಂಗಿ ಪೊತ್ತುವೋಗಿಂಗೆ ಮನಂ |
ಮುಟ್ಟದೆಡೆವೋದಳನ್ನೆಗ
ಮೊಟ್ಟಜೆಯಿಂ ಪಾವು ಸಿದ್ರೆಗೆಯ್ದು ಮಗವಂ || ೧೬೨

ಬಂದು ಕೊಲಲಿರ್ಪುದುಂ ಪರಿ
ತಂದುರಗನನಟ್ಟಿ ಪಿಡಿದು ಮುಂಗುರಿ ಕೊಂದಾ |
ನಂದಂ ಬೆರಸಿದಿರಂ ಪರಿ
ತಂದಾಕೆಯ ಕಾಲಮೇಲೆ ಪೊರಳ್ವುದುಮಾಗಳ್ || ೧೬೩

ಮುಂಗುರಿಯ ಬಾಯ ನೆತ್ತರಂ ಕಂಡು ಶಿಶುವಂ ಕೊಂದುದೆಂದು ಮುನಿದು ತನ್ನ ಪಿಡಿದಿರ್ದೊನಕೆಯನೆತ್ತಿ ಮುಂಗುರಿಯ [ತಲೆಯ] ನಿಪ್ಪೋಟಾಗೆ ಪೊಯ್ದು ಕೊಂದು || ೧೬೪

ಮಱುಗಿ ಕಂದಿದೊಳಱಿ ಕೆಟ್ಟೆಂ
ಕಱುವೇ ನಾನೇವೆನೆಂದು ಬಂದೊಳಗಂ ಪೊ ।
ಕ್ಕೊಱಗುವ ಕಂದನುಮಂ ಸ
ತ್ತುಱಿಕೆಯ ವಿಷಧರನ ಪೆಣನುಮಂ ಕಂಡಾಗಳ್ ॥ ೧೬೫

ಮತಿಗೆಟ್ಟು ಮಗುಳ್ ನೋಡಱಿ
ಪತಿಯಂ ಕೊಂದಿಕ್ಕಿ ಬೇಗಮೆನ್ನಾತ್ಮಜನಂ ।
ಧೃತಿವೆರಸು ಕಾದ ಮುಂಗುರಿ
ಗತಿಶಯಮಂ ಮಾಡಿ ಪಿರಿದುಮತ್ಯಾದರದಿಂ ॥ ೧೬೬

ಕೊಂಡಾಡದೆ ಕೊಂದೆನೆಂದು ಬಱಿಕ್ಕಂ ಮಿಡುಮಿಡುಮಿಡುಕಿ ಮಱುಗಿದಳಂತೆ ಸತ್ಪುರುಷರುಮಾಕೆಯಂತವಿಚಾರಿಗಳಾಗದೆ ವಿಚಾರಿಸಿ ನೆಗಱ್ವುದೆಂಬುದುಂ ಜಿನದತ್ತಸೆಟ್ಟಿ [ ಮತ್ತಂ ಮನದ ಸಂಶಯಂ ಪೋಗದೆ ಮೋಹವಶದಿಂ ಮುನೀಂದ್ರನ ಮಾತಂ ಕೈಕೊಳದೆ ಧನದಱಕದಿಂದಿನ್ನು ಪಾಯದಿನನ್ನ ಪೊನ್ನಂ ಕೊಳ್ವೆನೆಂದು ಮತ್ತೊಂದು ಕಥೆಯನಿಂತೆಂದು ಪೇೞ್ದಂ ] ॥ ೧೬೭

ಜಿನಪಾಲಿತಮುನಿಪತಿ ಮೇ
ದಿನಿವಂದಿತ ಕಥೆಯನೊಂದನವಧಾರಿಸಿ ಕೇ ।
ಳನಘ ಮನಮೊಲ್ದು ಕಾಮುಕ
ವನಮೆಂಬುದು ದುರ್ಗಮುಂಟು ಕೇಳ್ ತದ್ವನದೊಳ್ ॥ ೧೬೮

ಪಿರಿದಪ್ಪ ಪುರಾಣಕೂಪಮುಂಟಾಕೂಪದೊಳ್ ॥ ೧೬೯

ಗರಧರನುಂ ಪುಲಿಯುಂ ವಾ
ನರನುಂ ಬಿಡದಕ್ಕಸಾಲೆಯುಂ ಬಿರ್ದರೆ ಭೂ ।
ಸುರನೊರ್ವಂ ಗಂಗೆಗೆ ಸ
ಚ್ಚರಿತಂ ಪೋಗುತ್ತುಮಿರ್ದ ಕೌಶಿಕನೆಂಬಂ ॥ ೧೭೦

ನೀರಡಸಿ ತತ್ಕೂಪದೆಡೆಯುಂ ವನಚರರಿಂದಱಿದು [ಬಾವಿಯ ತಡಿಯೊಳ್ ನಿಂದು ತನ್ನುಟ್ಟುಂಬ ವಡಕೆಯ ಕೋಟೊಳ್ ಬಳ್ಳಿಯಂ ಕಟ್ಟಿ ನೀರಂ ಸೇದಲೆಂದು ಬಾವಿಯೊಳಗಿಕ್ಕುವುದುಂ ॥ ೧೩೧

ತಡೆಯದೆ ಸೇದೆಯ ನೇಣಂ
ಪಿಡಿದಿರೆ ಪುಲಿ ತೋಯುವೆಂದು ತದ್ವಿಪ್ರಂ ನೇ ।
ರ್ಪಡೆ ಪೆರ್ಚಿ ತೆಗೆಯೆ ಪುಲಿ ಬಂ
ದೊಡೆ ಭಯದಿಂ ನೋಡುತಿರ್ಪುದುಂ ತದ್ವ್ಯಾಘ್ರಂ ॥ ೧೩೨

ಕೌಶಿಕಂಗೆ ಪೊಡೆಮಟ್ಟು ನಿಮ್ಮ ಪ್ರಸಾದದಿಂ ಪ್ರಾಣಭಯಂ ಪಿಂಗಿದುದೆನ್ನಂ ಬೆಸಕೆಯ್ಸಿಕೊಳ್ವುದೆಂದು ತನ್ನ ನೆಲೆಗೆ ಪೋಯಿತ್ತಾಲ್ ॥ ೧೩೩

ನೀರಟ್ಟೆ ಪೆರ್ಚೆ ವಿಪ್ರನು
ದಾರಂ ಮತ್ತಿಕ್ಕೆ ಬಾವಿಯೊಳ್ ಸೇದೆಯುನಂ ।
ತೋರಂತೆ ಪಾವು ಪಿಡಿದಿರೆ
ವೀಗಂ ನೀರೆಂದು ತೆಗೆವುದುಂ ತತ್ಕ್ಷಣದಿಂ ॥ ೧೩೪

ಪಾವು ಬಂದೊಡೆ ಪಾವಂ ನೋಡಿ ಬೆಱಗಾಗಿರ್ಪುದುಂ ಫಣಿಪತಿ ಕೌಶಿಕಂಗೆ ಪೊಡೆಮಟ್ಟು ನಿಮ್ಮ ಪ್ರಸಾದದಿಂದೊಂದು ಕಂಟಕಂ ಪೋಯಿತ್ತೆಂದು ನಿಮ್ಮ ಮಾಡಿದುಪಕಾರಮನೆಂದಿಂಗಂ ಮಱೆಯಲ್ಬಾರದು ನಿಮಗೊಂದೇನಾನುಮಾಪತ್ತಾದೊಡೆ ಮಱೆಯದೆ ನೆನವುದೆಂದು ತನ್ನಿರ್ಪಾವಾಸಕ್ಕೆ ಪೋಯ್ತನ್ನೆಗಂ ॥ ೧೩೫

ಪಿರಿದಪ್ಪ ತೃಷ್ಣೆಯಿಂ ಭೂ
ಸುರನಾಗಳ್ ಮತ್ತೆ ಸೇದೆಯಂ ಭಾವಿಯೊಳೂ ।
ಪ್ಪಿರೆ ಬೇಗಮಿಕ್ಕೆ ನೇಣಂ
ತ್ವರಿತಂ ಭಯದಿಂದೆ ಪಿಡಿಯೆ ವಾನರನಾಗಳ್ ॥ ೧೩೬

ನೀರೆಂದು ತೆಗೆವುದುಂ ಕೋಡಗಂ ಪೊಱಮಡೆ ಕೌಶಿಕಂ ಬೇಱೆಗಾಗಿರ್ಪುದುಂ ಮರ್ಕಟಂ ದ್ವಿಜಂಗೆ ವಿನತನಾಗಿ ನಿನ್ನ ಧರ್ಮದಿಂದೊಂದು ಸೂೞೆನಗೆ ಬಂದಪಮೃತ್ಯು ಪಿಂಗಿ ಪೋಯ್ತು ನಿನಗಾನೇನಂ ಮಾಡಿದೊಡಂ ಮಾಟಮಲ್ಲೆನ್ನಿರ್ಕೆಯುಮೀ ಕಾಮುಕವನಮೆ ನಿನ್ನ ಚಿತ್ತದೊಳವಧರಿಸಿ ಕಾರುಣ್ಯದಿಂದೊಂದವಸರದೊಳ್ ನೆನೆವುದೆಂದು ನಿಜ ಸ್ಥಾನಕ್ಕೆ ಪೋಪುದುಂ ॥ ೧೬೬

ಅಡಹಡಿಸಿ ತೃಷ್ಣೆಯಿಂದಾ
ಗಡೆ ವಿಪ್ರಂ ಬಾವಿಯೊಳಗೆ ಸೇದೆಯನಿಕ್ಕಲ್ ।
ಕಡುಭಯದಿಂದಂ ಮನದೊಳ್
ನಡುಗುತ್ತಿರ್ಪಕ್ಕಸಾಲಿ ಸೇದೆಯ ನೇಣಂ ॥ ೧೬೭

ಪಿಡಿವುದುಂ ನೀರೆಂದು ಪೊಱಗಣ್ಗೆ ತೆಗೆಯೆ ಸ್ವರ್ಣಕಾರಕಂ ಬರೆ ಕೌಶಿಕಂ ನೋಡಿ ಚೋದ್ಯಂಬಟ್ಟಿರ್ಪುದುಮಕ್ಕಸಾಲಿ ವಿಪ್ರಂಗೆ ಪೊಡೆಮಟ್ಟು ॥ ೧೬೮

ನೀನಿತ್ತ ಜೀವಮಿದು ಧರ
ಣೀನುತ ನೀನಿಲ್ಲದಱಿದು ಸಾವೆದು ಪುಸಿಯೇ ।
ಕಾನನದೊಳಿಲ್ಲಿ ನಿಮಗಾ
ನೇನಂ ಮಾಡುವೆನೊ ಮಾಡದಿರ್ದೊಡೆ ಕಷ್ಟಂ] [1] ॥ ೧೭೦

ಈನೆಗಟ್ಟಿ ವನದ ಪೊರೆಯೊಳ್
ತಾನಗ್ಗದ ತಾಮ್ರಕೂಟಮೆಂಬುದು ಪೊೞಲಂ ।
ತಾನಗರದೊಳಾನಿರ್ಪೆಂ
ನೀನಲ್ಲಿಗೆ ಬರ್ಪುದೆಂದು ಕೈಮುಗಿದಾತಂ ॥ ೧೭೧

1 ಬಂದು ಬಾವಿಯೊಳ್ ಬಿದ್ದಿರ್ದ ಪಾವುಮಂ ಪುಲಿಯುಮಂ ವಾನರನುಮಂ ಕಾರುಣ್ಯದಿಂ ಪೊಱಮಡಿಸುವುದುಮವು ಪೊಱಮಟ್ಟು ಮಗುಳ್ದು ಬರ್ಪಾಗಳೆಮ್ಮಲ್ಲಿಗೆ ಬರ್ಪುದೆಂದು ಪೊಡೆವಟ್ಟಣಿಗನುಮಂ (ಗ)

ಪ್ರಾರ್ಥಿಸುವುದುಂ ಮಗುೞ್ದು ಬರ್ಪಾಗಳ್ ನಿನ್ನಲ್ಲಿಗೆ ಬಂದಲ್ಲದೆನ್ನ ನೆಲೆನೆ ಪೋಗೆನೆಂದಕ್ಕಸಾಲೆಯನೊಡಂಬಡಿಸುವುದುಮಾತನೊಡಂಬಟ್ಟು ತನ್ನ ಪುರಕ್ಕೆ ಪೋದನಿತ್ತಲ್ ಕೌಶಿಕಂ ತನ್ನಿಷ್ಟಸ್ಥಾನಕ್ಕೆ ಪೋಗಿ ಕೆಲವು ದಿವಸಕ್ಕೆ ಮಗುೞ್ದು ಬರುತುಂ ಕಾಮುಕವನಕ್ಕೆ ಬಂದು ಕೋಡಗ ನಿರ್ದಲ್ಲಿಗೆವರ್ಪುದುಂ ವಾನರ [ನಾನರನ] ನಱಿದು ಮುನ್ನಿನುಪಕಾರಮಂ ನೆನೆದು ಪಣ್ಪಲಂಗಳಂ ತಂದಿಕ್ಕುವುದುಂ ಪಸಿವು ಪೋಪಿನಂ ಮೆಲ್ದು ಪಥಪರಿಶ್ರಮಮಂ ಕಳೆದು ॥ ೧೮೨

ಪುಲಿಯಿರ್ಪ ಗುಹೆಗೆ ಬರ್ಪುದು
ಮಲಂಘ್ಯಗುಣನೆನ್ನನೆತ್ತಿದಾತಂ ಬಂದಂ ।
ಫಲಮಿತ್ತುದೆನ್ನ ಪುಣ್ಯಂ
ಕುಲಸಫಲಮುಮೆಂದು [1] ಪೆರ್ಚಿ ಪುಲಿ ಬಂದಿದಿರಂ ॥ ೧೮೩

ಅಂದು ಪೊಡೆಮಟ್ಟು ಪರಮಾ
ನಂದದಿನಟ್ಕಿತ್ತುರ್ ತಂದು ರತ್ನದ ತೊಡವಂ ।
ಮುಂದಿಡೆ ತದ್ವಿಪ್ರನುಮಾ
ನಂದದಿನಪನರ್ತಿವೆರಸು ಕೊಂಡಾವನದಿಂ ॥ ೧೮೪

ಪೊಱಮಟ್ಟು ತಾಮ್ರಕೂಟಕ್ಕೆ ಬಂದು ಸ್ವರ್ಣಕಾರನ [ಮನೆಗೆ ಬರ್ಪುದುಂ ಪೂರ್ವೋಪಕಾರಮಂ ನೆನೆದಿದಿರಂ ಪರಿತಂದು ಪೊಡೆಮಟ್ಟು ಭ್ಯಾಗತಪ್ರತಿಪತ್ತಿಯಂ ಮಾಡಿ ಬಟ್ಟೆಯ ಬೞಲ್ಕೆಯಂ ಕಳೆದು ಕೌಶಿಕನಂ ಕೊಂಡಾಡುತಿರ್ಪುದುಂ ಮಱುದಿವಸಂ] [2] ಬೃಹಸ್ಪತಿರವಿಶ್ವಾಸಂ [3] ಎಂಬೀನೀತಿಯಂ ಮಱೆದು ಚಮೂನಿತ್ತ ಪೊನ್ನಾಭರಣಗಳೆಲ್ಲಮಂ ಗಟ್ಟಮಾಡಿ ಕುಡುವುದೆಂದೇಕಾಂತದೊಳಕ್ಕಸಾಲೆಯ ಕೈಯೊಳ್ ಕುಡುವುದುಮಾತನಂತೆ ಗೆಯ್ವೆನೆಂದು ॥ ೧೮೫

---

1 ಫಲವೇಕಂದಂದು (ಬ. ಕ.)     2 ಕಂಡು (ಗ)

3 ಬೃಹಸ್ಪತಿಂ ನ ವಿಶ್ವಾಸಯೇತ್ (ಗ)

ಮೆನದೊಳ್ ಭಾವಿಸಿ ನೋಡಿ ನೋಡಿ ಪಿರಿದಪ್ಪೀದ್ರವ್ಯಮಂ ಸಾರ್ಚಿ ಮೇ ದಿನಿಕಾಂತಾಪತಿಯಲ್ಲಿ ಮೆಚ್ಚುಗೊಳ್ವೆಂ ನಿಷ್ಕಾರಣಂ ಕೊಟ್ಟು ಕೆ ಮ್ಮನೆ ವಿಪ್ರೋನ್ನತನಲ್ಲಿ ಬರ್ದ ಪಡಪೇನೆಂದಾದುರಾತ್ಮಂ ಮಹೀ ಶನನಾನಂದದಿನೆಯ್ದಿ ಪೇಟ್ದೊಡರಸಂ ಕೇಳ್ದಾಗಳಾತಪ್ಪಹದಿಂ ॥ ೧೮೬

[ತಳಾಱನಂ ಕರೆದು ನೀನೀಸ್ವರ್ಣಕಾರಕಂ ತೋಱಿದ ಪಾರ್ವನಂ ಸೆಱೆಯಿಡೆಂಬುದುಂ ತಳಾಱನಕ್ಕಸಾಲೆಯೊಡನೆ ಪೋಗಿ ಕೌಶಿಕನಂ ಪಿಡಿ ತಂದು ಕೋಳದೊಳಿಕ್ಕುವುದುಂ ಕೌಶಿಕಂ ಬೆಱಗಾಗಿ ॥ ೧೮೭

ಎನಗರ್ಥಮುಳ್ಳುದಂ ಮೇ
ದಿನಿಪತಿ ಯೆಂತಱಿವನೀದುರಾತ್ಮನೆ ಪೇೞ್ದಂ ।
ಧನಮುಂಟೆಂಬುದನೀದು
ರ್ಜನನಿಂ ಕೇಡಾದುದೆಂದು ಚಿಂತಿಸಿ ವಿಪ್ರಂ ॥ ೧೮೮

ಫಣಿಪತಿಯುಂ ನೆನವುದುಮಾ
ಫಣಿಪತಿ ಬಂದೇಕೆ ನೆನೆದಿರೆಂಬುದುಮಾಧಾ ।
ರಿಣಿದೇವನೆಂದನೀನಿ
ಷು ರನಿಂದೆನಗಾದ ದುಃಖಮಂ ತತ್ಕ್ಷಣದಿಂ ॥ ೧೮೯

ಪಿಂಗಿಸುವುದೆಂಬುದುಂ][1] ತದ್ರಾಜಸುತನಂ ಕೊಂಡು ಆರ್ಗಮಿಱಿ ಯುದಿರೆ ಕೌಶಿಕಂ ನಿರ್ವಿಷಂಮಾಡಿ ಮೆಚ್ಚುಗೊಂಡು ತದ್ವೃತ್ತಾಂತ ಮೆಲ್ಲಮನರಸಂಗೆ ಪೇೞೆ ಮಹೀನಾಥಂ ಚೋದ್ಯಂಬಟ್ಟು [ಮುನಿದು ಅಕ್ಕಸಾಲೆಯುಂ ವಿಶ್ವಾಸಘಾತಕನಿವನಂ ಕಮದೋಡೆ ದೋಷಮಿಲ್ಲೆಂದು ಕವದುರ್ಕೊಂಡ][2] ನಂತೆ ಕೆಲರುಪಕಾರಶೂನ್ಯರೊಳರೆಂದು ಜಿನದತ್ತ ಸೆಟ್ಟಿ ನುಡಿದುಸಿಂದಿರ್ಪುದಾಂ ಜಿನಪಾಲಿತಮುನಿ ವಿಸ್ಮಯಂಬಟ್ಟು ಸೆಟ್ಟಿಯ ಮುಖಮಂ ನೋಡಿ ॥ ೧೯೦

---

1 ಕೌಶಿಕನಂ ತಂದು ಕೋಳದೊಳಿಕ್ಕುವುದುಂ ಬೆರ್ಚಿ ಪಾವಂ ನೆನೆಯೆ ಪಾವುಬಂದು (ಗ)  2 ಬೆಱಗಾದ (ಗ)

ಅವಧರಿಸು ವೈಶ್ಯವಂಶ
ಪ್ರವರ ಮಹಾಚೋದ್ಯಮಪ್ಪ ಕಥೆಯನಿದಂ ಭೂ ।
ಭುವನಕ್ಕೆ ರೂಢಿವೆತ್ತಿ
ರ್ದವಂತಿಯೆಂಬೊಂದು ನಾಡು ತದ್ಧಾರಿಣಿಯೊಳ್ ॥ ೧೯೧

ಉಜ್ಜೈನಿಯೆಂಬುದು ಪುರಮದನಾಳ್ವಂ ಮಹೇಂದ್ರನೆಂಬರಸನಾತನ ರಾಜಶ್ರೇಷ್ಠಿ ಕುಬೇರನೆಂಬನಾಪರದನೊರ್ವಂ ಜಲಯಾತ್ರೆಗೆ ಪೋಗಿ [ಪಿರಿದಪ್ಪರ್ಥಲಾಭಮಾಗಿರ್ಪುದುಮೊರ್ವನೊಂದು ಮಾವಿನ ಪಣ್ಣಂ ತಂದು ಕುಬೇರನಂ ಕಂಡು ಅಪೂರ್ವಮಪ್ಪ ಮಾವಿನ ಪಣ್ಣಿದಂ ಮೆಲ್ವೊಡೆ ಸಕಲರುಜೆಗಳುಂ ಕಿಡುಗುಮಿದಱ ಪೆಸರುಂ ಸರ್ವರುಜಾಪಹಾರಿಯೆಂಬುದೆಂದು ಕುಡುವುದುಂ, ಸೆಟ್ಟಿಯಾತಂಗೆ ಸಾಲ್ವನಿತು ಪೊನ್ನಂ ಕೊಟ್ಟು ಸಂತೋಷಂಬಡಿಸಿ ಕಳಪೆ ಮಾವಿನ ಪಣ್ಣಂ ನೋಡಿ ॥ ೧೯೨

ಇದನಿಲ್ಲಿ ಮೆಲ್ದು ಕಿಡಿಸದೆ
ಪದುಳಂ ಕೊಂಡೊಯ್ದು ಮಾಳವೇಶಂಗಿತ್ತ ।
ಭ್ಯುದಯಶ್ರೀಯುಂ ಪಡೆವೆಂ
ಮುದದಿಂದಾನೆಂದು ಮೆಲ್ಲದಂತಾಪಣ್ಣಂ ॥ ೧೯೩

ಪ್ರಯತ್ನದಿಂ ತಂದುಜ್ಜೈನಿಯುಂ ಪೊಕ್ಕು ॥ ೧೯೪

ತೊಳಗುವ ವಸ್ತುಗಳಂ ಪರಿ
ಯಳದೊಳ್ ಲೇಸಾಗಿ ತೀವಿ ಮಾವಿನ ಪಣ್ಣಂ ।
ಬೆಳಗುವ ರತ್ನದಮೇಲು
ಜ್ಜ್ವಳಕೀರ್ತಿಪತಾಕನಿಟ್ಟು ತಂದವನಿಪನಂ ॥ ೧೯೫

ಕಂಡು ಪೊಡೆಮಟ್ಟು ರತ್ನದಿಂ ತೀವಿದ ಪರಿಯಣಮಂ ಭೂಪಾಲನ ಮುಂದಿಡುವುದುಂ ॥ ೧೯೬

ಅರಸಂ ಮಾವಿನಪಣ್ಣಂ
ಕರಮಾದರದಿಂದೆ ಕಳದುಕೊಂಡೆಂದಂ ಭೂ ।
ಧರಧೈರ್ಯ ! ಚೂತಫಲಮಿದು
ಧರಣೀಚಕ್ರದೊಳಪೂರ್ವಮಾದುದೆ ಮರುಳೇ ॥ ೧೯೭

ಅಮೂಲ್ಯಮಪ್ಪವಸ್ತುಗಳಮೇಕಾರಣದಿಂ ತಂದಿಕ್ಕುಟು[1] (?) ತಂದಿರೆಂಬುದುಂ ಕುಬೇರನಿಂತೆಂದಂ ][2] ॥ ೧೯೮

ನರೆ ಬಂದ ನರರ್ ಮೆಲ್ದಿರೆ
ತರುಣತ್ವಮನೆಯ್ದುವರ್ ಮಹಾವ್ಯಾಧಿಗಳಂ ।
ಕರಗುವವರ್ ಮೆಲ್ದೊಡೆ ನಿ
ರ್ಜರಸನ್ನಿಭರಪ್ಪರೆಂದು ಪೇಳ್ವುದುಮರಸಂ ॥ ೧೯೯

ವಿಸ್ಮಯಂಬಟ್ಟು ಕುಬೇರಂಗೆ ಮೆಚ್ಚಂ ಕೊಟ್ಟು ಮನೆಗೆ ಕಳಪಿ ಮಾವಿನಪಣ್ಣಂ ಭಾವಿಸಿ ನೋಡಿ ॥ ೨೦೦

ಮಣಿಯುಂ ಸಿಂಧುನಿಕಾಯಮುಂ ಪಶುಗಳುಂ ವೈದ್ಯಾಂಗನಾನೀಕಮುಂ[3]
ಬೆಳಸುಂ ಪಣ್ಫಲಮುಂ ಜಿನೇಂದ್ರಮತಮುಂ ಸರ್ವೋಪಕಾರಂಗಳಂ
ತಿಳಿಯೊಳ್ ಸದ್ಗುಣನಪ್ಪ ಮಾನಿಸನುಮಿನ್ನುಮಾರ್ಗದಿಂ ಬಾಳ್ದು ತ
ನ್ನಳವಂ ಮಾಸಿಸಿ ಲೋಗರಂ ಕಿಡಿಸುತಿರ್ಪಾ[4] ಕಷ್ಟನುಂ ಮರ್ತ್ಯನೆ ॥

---

1 ಇಕ್ಕುಟ್ಟು (ಕ)

ಸರ್ವರುಜಾಪಹಾರಿಯೆಂಬ ಮಾವಿನಪಣ್ಣನೊರ್ವಂ ತಂದುಕೊಡುವುದುಂ ಅದನಲ್ಲಿಯು ಮೆಲ್ಲದೆ ಉಜ್ಜೈನಿಗೆ ತಂದು ಮಹೇಂದ್ರಮಹೀಪಾಲಂಗೆ ಕೊಟ್ಟು ಸೆಟ್ಟಿಯಿಂತೆಂದಂ (ಗ)

3 ವೈಶ್ಯಾತ್ಮಜಾನೀಕಮುಂ (ಕ. ಖ.)

4 ಪೂರಯಿದಿರ್ಪಾಂ (ಕ. ಖ.)

ಅದುಕಾರಣದಿಂ ಪರೋಪಕಾರಿಯುಪ್ಪನ ಬಾೞ್ಕೆ ಸಫಲಮೆಂದು ಪಣ್ಣನೊರ್ವನೆ ಮೆಲ್ವುದು ಕಷ್ಟಂ ಪುರಮುಂ ಪರಿವಾರಮುಮರಸಿಯರುಂ ಕುಮಾರರುಂಬೆರಸು ಮೆಲ್ವೆನೆಂದು ಪಣ್ಣನರಮನೆಯ ಪೆಱಗಣ ನಂದನವನದೊಳ್ ಬಿತ್ತಿಸುವುದುಮದು ಬೆಳೆದು ಪೆರ್ಮರನಾಗಿ ಫಲಮಪ್ಪುದುಂ ॥ ೧೦೨

ಉರಗನನೊಂದುಪದ್ದ ಪಿಡಿದಾಮರನಂ ಪರಿದೇಱೆ ತದ್ವಿಷಂ
ತ್ವರಿತದಿನಾಗಳೊಂದುಫಲದೊಳ್ ನೆಲೆಗೊಳ್ವುದುಮಾಫಲಂ ಸವಿ
ಸ್ತರದೊಳ ಪಣ್ತು ಬೀೞೆ ವನಪಾಲಕನಂತದನೊಯ್ದು ಕೊಟ್ಟೊಡಂ
ದರಸನುಮರ್ತಿಯಿಂ ಕೆಲದೊಳಿರ್ದ ಮಗಂಗಿರದೀವುದುಂ ಮಗಂ ॥ ೧೦೩

ಮೆಲ್ದು ವಿಷಪೂರಿತನಾಗಿ ಸಾವುದುಂ ಮಹೇಂದ್ರಭೂಮೀಶ್ವರಂ ಮಗನ ಸಾವಿಂಗಱಲ್ದು ವಿಷವೃಕ್ಷಮಿದಂ [1] ಕಡಿದು ಕಳಯಿಮೆಂದು ಕಡಿದೀಡಾಡಿಸಿ ಕುಬೇರನಂ ಸಾಯೆ ಬಡಿಸಿ ಸರ್ವಸ್ವಮುಂ ಕವರ್ದು ಕೊಂಡ ನನ್ನಗಂ ಪುರದೊಳಗಣ ತೊನ್ನರುಂ ಪೆಱವರುಂ ಕುಂಟರುಂ ಕುರುಡರುಂ ಪರಿತಂದು ಸಾವೆವೆಂದು ಪಣ್ಣುಮಂ ಕಾಯುಮಂ [2] ತಿಂದು ಸುವರ್ಣ [ಮಯ] ಶರೀರರಪ್ಪುದುಮರಸನವರಂ ಕಂಡು ವಿಸ್ಮಯಂಬಟ್ಟು ಮಱುಗಿ ಕುಬೇರನರ್ಥಮುಂ ಕೊಟ್ಟು ಕ್ಷಮೆಗೊಂಡು ಮಾವಿನಮರನಂ ಪಾತಕನೆಂ ವಿಚಾರಿಸದೆ ಕಡಿಸಿದೆನೆಂದು ಚಿಂತಿಸಿದನಂತೆ ಕೆಲರವಿಚಾರತೆಯಂ ಮಾಡುವರದಱಿಂ [ಸಜ್ಜನರ್ ಪುರುಷರ್] ವಿಚಾರಿಸಿ ನೆಗೞ್ವುದೆಂದು ಜಿನಪಾಲಿತಮುನಿ ಮೋನಂಗೊಂಡಿರ್ಪುದುಂ ಮನಮಂ ಪಿಡಿಯಲಾಱದೆ ಜಿನದತ್ತಂ ॥ ೧೦೪

ವಂದಿತಗುಣ ಪಲವೇಕಿ
ನ್ನೊಂದನೆ ಕೇಳ್ಕಥೆಯನತ್ಯಪೂರ್ವಮಿದಂ ಸಾ ।
ನಂದಗಿರಿಯೆಂಬ ಪುರದೊಳ್
ಸಂದಿರ್ದ ಪುಳಿಂದನಮಿತನೆಂಬಂ ಪೆಸರಿಂ ॥ ೧೦೫

---

1 ಸಾವಿಂಗ ಮಱುಗಿ ವೃಕ್ಷಮಂ (ಗ) 2 ಕಾಯುಮಂ ತಿಗುಱುಮಂ(ಗ)

ಆತನೊಂದು ದಿವಸಂ ತೊೞಲುತ್ತುಂ ದೈತ್ಯವನಮೆಂಬಡವಿಯೊಳ್ ನೀರಡಸಿ ಪೋಗಲಾಱದೆ ಕುಳ್ಳಿರ್ದುಮಿಪನೊಂದುಕೋಡಗಂ ಕಂಡು ॥ ೨೦೬

ಕರುಣಿಸಿ ನೀರೆಡೆಯಂ ಪಾ
ನರನಾಥಂ ತೋಱೆ ಕುಡಿದು ಬೇಡಂ ತದ್ವಾ ।
ನರನೆನಗುಪಕಾರಮನೊ
ಪ್ಪಿರೆ ಮಾಡಿದನೆಂಬ ಬಗೆಯನುೞಿದಳಪಿಂದಂ ॥ ೨೦೭

ಎನ್ನ ಪೋಪೆಡೆಯಪ್ಪೊಡೆ ದೂರ[ಮಾನೀರಿರ್ದೆಡೆಯೊಳ್ ನೀರಂ ತುಂಬುವೆಂ ನೀರಿಲ್ಲದೆ ತೃಷ್ಣೆಯಿಂ ಸಾಯೆಬಾರದೆಂದು] [1] ಕೋಡಗವುಂ ಕೊಂದದಱ ತೊವಲೊಳ್ ನೀರಂ ತುಂಬಿಕೊಂಡು ಪೋದನಂತೆ ಕೆಲರುಪಕಾರಶೂನ್ಯ [ರೊಳ] ರೆಂದು ವಣಿಕ್ಪತಿ ನುಡಿಯುದಿರ್ಪುದುಂ ಮುನಿವೃಂದಾರಕಂ ನಾಡೆಯುಂ ವಿಸ್ಮಯಂಬಟ್ಟು ॥ ೨೦೮

ವರವೈಶ್ಯೋತ್ತಮ ಕೇಳು
ವರ್ರೆಯೊಳಿದಾಶ್ಚರ್ಯಮಪ್ಪ ಕಥೆಯುಂ ನೀನಾ ।
ಪರದಿಂ ಧಾತ್ರಿಯೊಳೊಪ್ಪುವ
ದುರುಮುದದಿಂ ಧನದರೆನಿಪ ವೈಶ್ಯಾತ್ಮಜರಿಂ ॥ ೨೦೯

ಕೌಶಾಂಬಿಯೆಂಬ ಪುರವದಱೊಳ್ ವಿಶಾಖನಂದನನೆಂಬ ಪರದ ನಿರ್ಧನಾತನ ಮಗನಂಗಾರಕ [ನೆಂಬನಾತ] ನೊಂದುದಿವಸವೊಂದು ಪದ್ಮರಾಗಮಂ ಬೞಿವಿಡಿದು ಪೊಱಗೆ ಪಟ್ಟವಣೆಯುಮೇಗೆ ದಿವ್ಯವಸ್ತ್ರಮಂ ಪಾಸಿ ತದ್ವಸ್ತ್ರದಮೇಲೆ ತದ್ರತ್ನಮನಿಕ್ಕಿ ನೋಡುತ್ತುಮಿರ್ಪನ್ನೆಗಂ ॥ ೨೧೦

ತ್ವರಿತಂ ಮೇಧಾವಿಮುನೀಂ
ಶ್ವರರೆಂಬರ್ ಚರಿಗೆವರ್ಪುದುಂ ವೈಶ್ಯಕುಲಾಂ ।

---

1 ದೂರದಿಂ ನೀರಿಲ್ಲದೆಡೆಯೊಳ್ ತೃಷೆಯಿಂ ಪೋಗಲಾಱೆನೆಂದು (ಗ)

ಬರಭಾನು ಕಂಡು ಪರಮಾ
ದರದಿಂ ಪರಿತಂದು ಭಕ್ತಿಯಿಂ ನಿಲಿಸುವುದುಂ ॥ ೨೧೧

ಮುನಿನಾಥಂ ನಿಲ್ವುದುಂ ಕೃತಾರ್ಥನಾದೆನೆಂದು ಮನೆಯೊಳಗಣ್ಗೊಡಗೊಂಡು ಪೋದನನ್ನೆಗಮಿತ್ತಲ್ ಪದ್ಮರಾಗಮಾಣಿಕ್ಯಮಂ ನೆರೆ ಮನೆಯಂಗಣದೊಳಾಡುತ್ತುಮಿರ್ದ ನವಿಲ್[1] ಕಂಡು ಮಾಂಸಮೆಂದು ಬಗೆದು ಪರಿತಂದು ನುಂಗಿ ಪೋಯ್ತು; ವಿಶಾಖನಂದನಂ ॥ ೨೧೨

ನವವಿಧ[2] ಪುಣ್ಯದಿಂ ಕುಡುವುದುಂ ಮುನಿಗನ್ನಮನೆಂದು ತನ್ಮುನಿ
ಪ್ರವರನುದಾತ್ತಚಾರುಚರಿತಂ ಬಳಿಕಕ್ಷಯದಾನಮೆಂದು ಭೂ[3]
ಭುವನಹಿತಂ ಸಮಸ್ತನುತನಾಗಳ ಪೋಪುದುಮಿತ್ತಲಾವಣಿ
ಕ್ಪ್ರವರನಮರ್ಕೆವೆತ್ತು ಬರಲಲ್ಲಿಗೆ ರಾಗಿಸಿ ಬಂದು ರತ್ನಮಂ ॥ ೨೧೩

ಕಾಣದೆ ಮಱುಗಿ ಲೋಭಿಯುಂ[4] ಕಡುಪಾಪಿ ತುಡುಗುಣಿಯುಂ[5] ಕಡುದೂರ್ತನೆಂಬ ಮಾತಂ ದಿಟಂಮಾಡಿ ಮೇಧಾವಿಮುನೀಂದ್ರನೆ ರತ್ನಮಂ ಕೊಂಡು ಪೋದನೆಂದು ಪೆಱಗೆ ಪರಿತಂದು ಕೃತಕದಿಂ ಪೊಡೆಮಟ್ಟು ಮನೆಗೊಡಗೊಂಡು ಬಂದು ಕುಳ್ಳಿರಿಸಿ ನಿಮ್ಮಡಿಗಳ್ ಸಕಲವಸ್ತುಮಂ ತೊಱೆದುಂ ನಿಮಗೆ ಮತ್ತೀರತ್ನದ[6] ಮೋಹಮೇಕೆ ಕಾಡವೇಡ [ಬೇಗ]ಮೆನ್ನ ಪದ್ಮರಾಗದ ಮಣಿಯನೀಯಿಮೆಂದು ಗಜಱಿ [ಗರ್ಜಿಸಿ] ॥ ೨೧೪

ನುಡಿದೊಡೆ ಮುನೀಂದ್ರವಂದ್ಯಂ
ಕಡುಮೂರ್ಖನ ನುಡಿಗೆ ನಾಡೆಯುಂ ಚೋದ್ಯಂಬ ।
ಟ್ಟೊಡಮೆಯನೀತಂ ಕಾಣದೆ[7]
ಕಿಡೆ ನುಡಿದವಿಚಾರಿ ಕಳ್ಳನೆಂದಪನೆನ್ನಂ ॥ ೨೧೫

---

1 ಕೊಂಚೆಯುಂ (ಗ)
2 ನವನಿಧಿ (ಕ. ಬ.)
3 ದಾನಮೆಂಬುದುಂ (ಕ. ಬ.)
4 ಅತಿಲೋಭಿಯುಂ (ಗ)
5 ಅತಿ ಕೋಪಿಯುಂ (ಗ)
6 ರತ್ನದಮೋಗೆ (ಗ)
7 ಮೋಹದನೀತಂ (ಗ)

ಆಪದ್ಮರಾಗಮಣಿಯುಮಂ
ಕೋಪಿಸದಿರ್ ಕೊಳ್ಳನೆಂದೊಡಂ ನಂಬದ ದು ।
ಷ್ಟಾಪಿ ಫಲಮೇವುದಿವಗಿ
ನ್ನೀಪದದೊಳ್ ಮೋನದಿಂದಮಿರ್ಪುದೆ ಕಜ್ಜಂ ॥ ೨೧೬

ಎಂದು ಪರಿಚ್ಛೇದಿಸಿ ಪೆಱ
ತೊಂದುಮನಾಮುನಿಪನೆನ್ನದರ್ಹತ್ಪದಮಂ ।
ಮಂದರಧೈರ್ಯಂ ತದ್ಧೃದ
ಯೇಂದೀವರದಲ್ಲಿ ತಾಳ್ದಿ ನಿಲ್ವುದುಮಿತ್ತಲ್[1] ॥ ೨೧೭

[ನುಡಿದೊಡೆ ನುಡಿಯುಂ ತಾನೆಂ
ದೊಡವೆಯುನಳಿಪಿಂದಮೊಯ್ದು ಮೋಹೋದಯದಿಂ ।
ಪಿಡಿದುಸಿರದೆ ಚದುರಿಕೆಯಿಂ
ಮಿಡುಕದೆ ಕುಳ್ಳಿರ್ದೊಡಕ್ಕಿಲಱಿಗುಮೆ ರತ್ನಂ] ॥ ೨೧೮

ನುಡಿಯದೆ ನೀನಿಂತಿರ್ದೊಡೆ
ಕಡೆನೂಂಕಿ ಪೊರೞ್ಚಿ ಗಂಟಲಂ ಮೆಟ್ಟಿ ಕರಂ ।
ತಡೆಗಡಹಿ ತನುಪ ಜಡಿದೆ[2]
ನ್ನೊಡವೆಯನುಗುೞಿಸದೆ ಮಾಣೆನಾರ್ಬಾರಿಪ್ರೊಡಂ ॥ ೨೧೯

ಎಂದು ನುಡಿದು ವೈಶ್ಯಜಂ ಮುನಿಕುಂಜರನಂ ನುಡಿಯಿಸಲಾಱದೆ ಕೋಪಾಗ್ನಿಯಿಂ ಕಣ್ಗಾಣದೆ ಕೆಲದೊಳಿರ್ದ ಬಂಡಿಯ ಪುಳ್ಳಿಗಳಂ ಕೊಂಡು ಸೊಪ್ಪುಸೋವಡಪ್ಪಿನಮಟ್ಟಿ ಬಡಿಯೆ ॥ ೨೨೦

ಎನ್ನನದೋಷಿಯಂ ಬಡಿದಪಂ ಖಳನೆನ್ನದೆ ಶುದ್ಧವೃತ್ತಿಯಿಂ
ದುನ್ನತಚಿತ್ತನಿಂದ್ರಧರಣೀಂದ್ರನಿಭಕ್ಷಮನಾಗಮಾನ್ವಿತಂ
ತನ್ನ ಶರೀರಮಲ್ಲದಿದು ತಾಂ ಪೆಱತೇಂ ಪೆಱರಂಗಮೆಂಬವೋಲ್
ಸನ್ನುತನಿರ್ದನಂತರದುರೋಘವಿರೋಧಿಯನಿಕ್ಕಿ ಮೆಟ್ಟುತುಂ ॥ ೨೨೧

1 ತದ್ಗೃಹಮೆಂದಪ್ಪನ ಪರಡನಲ್ಲಿ ನಿಲ್ವುದುಮಾಗಳ್ (ಗ)
2 ಕೂಡ | ಗೆಡಪಿ ತನುವೊಡೆಯೆ ಬಡಿದ (ಕ. ಬ.)

ಅಂತು ವೈಶ್ಯಜಂ ತನುವಂ ಬಾಧಿಸುವುದುಂ ಮೇಧಾವಿಮುನಿವರರ್ ಮೇಧಾವಿಯೆಂಬ ಪೆಸರನನ್ವರ್ಥಂಮಾಡಿ ಶುಕ್ಲಧ್ಯಾನಮೆಂಬ ದಳ್ಳುರಿಯಿಂ ಕರ್ಮೇಂಧನಂಗಳಂ ಸುಟ್ಟು ಕೇವಲಿಗಳಾಗಿ ಕೋಟಿ ಸೂರ್ಯಪ್ರಭಾನ್ವಿತದೇಹರಾಗಿರ್ಪುದುಂ ಕೇವಲಿಪೂಜೆಯಂ ಮಾಡಲೆಂದು ಚತುರ್ವಿಧದೇವನಿಕಾಯಂ ನೆರೆದು ಬರೆ ಕಂಡಂಗಾರಕಂ ನೀರ್ಮುಟ್ಟಿದಂಗಾರಕನಂತೆ ತಣ್ಣಿದನಾಗಿರ್ಪುದುಂ ॥ ೨೨೨

ಬಡಿವಲ್ಲಿ ನಿಡಿಯ ಪುಳ್ಳಿಯ
ಕಡೆಯುಡಿ ಸಿಟ್ಟಿಂದು ಪಾಱಿ ಕೊಂಚೆಯ ಕೊರಲಂ ।
ನಡುವುದು ಕೊರಲೊಡೆದಂತಾ
ಗಡೆ ರತ್ನಂ ಧರೆಗೆ ಬೀೞ್ವುದುಂ ತನ್ಮಣಿಯಂ ॥ ೨೨೩

ಕಂಡಂಗಾರಕನೀಮುನಿ
ಮುಂಡನನಂ ನಿಷ್ಕಷಾಯನಂ ಮನದೞಿಲಿಂ ।
ಕೊಂಡಂ ರತ್ನಮನೆಂದಾಂ
ದಂಡಿಸಿದೆಂ ಪಾಪಕರ್ಮನೆಂ ನಿರ್ದಯನೆಂ ॥ ೨೨೪

ಎಂದಾಗಳ್ ತನ್ನಂ ತಾಂ
ನಿಂದಿಸಿ ವೈರಾಗ್ಯಮೊದವೆ ಮನದೊಳ್ ಬೇಗಂ ।
ಕಂದರ್ಪಸದೃಶನಮರರ
ವೃಂದಂ ಕೈಮುಗಿಯೆ ಜೈನದೀಕ್ಷೆಯನಾಂತಂ ॥ ೨೨೫

ಅಂತಜ್ಞಾನಿಯಾಗಿ ಕಳ್ಳರಲ್ಲದರಂ ಕಳ್ಳ [ರೆಂದು ತನ್ನರ್ಥಾಭಿಲಾಷೆಯಿಂ ಬಱಿದ ಕಾಡುವುದು ಪುರುಷನಪ್ಪಂಗೆ ಧರ್ಮಮಲ್ಲೆಂಬುದುಂ ವಣಿಜ್ನಂದನಂ] [1] ಮತ್ತಂ ನಂಬದೆ ಬೆನ್ನನ ತಗುೞ್ವುದುಂ ॥ ೨೨೬

ಜಿನಪಾಲಿತಮುನಿ ಪರದನ
ಮುನಿಸಂ ಕಂಡೀತನಪ್ಪೊಡತಿಲೋಭಂ ದು ।

---

1 ರನಬೇಡೆಂಬುದುಂ (ಗ)

ರ್ಜನನೆನ್ನ ಮೇಲೆ ಪರಿದಪ
ನನಘರಿವರ್ಶದ್ಧರೆಂಬ ಮಾತನೆ ಬಿಟ್ಟಂ ॥ ೧೨೭

ಕೆಮ್ಮನೆ ಬಾಯುಂ ಬಡಿವುದು ಕಜ್ಜಮಲ್ಲೆಂದು [ಘೋರೋಪಸರ್ಗಂ ಪಿಂಗುವಿನಮಾಹಾರಶರೀರನಿವೃತ್ತಿಯೆಂದುಕೈಯನಿಕ್ಕಿ] [1] ಮೋನಂಗೊಂಡಿರೆ [ಜಿನದತ್ತಸೆಟ್ಟಿನುಡಿಯಿಸಲಾಱದೆ ಮಿಾಸೆಯುಂ ಕಡಿದು] [2] ॥ ೧೨೮

ಕಡುಕೊಂಡೊಡವೆಯನೀಗಳ್
ಕುಡದಿರ್ದೊಡೆ ಮುಱುವೆನಿಕ್ಕುಪೊಳ್ಕಯ್ಯಂ ಕೂ ।
ಗಿಡೆ ಕೊಯ್ದು ಕೊಯ್ದು ಸುಣ್ಣಮ
ನಿಡುವೆಂ ಪಿಡಿದೊಯ್ದು ಮೆಟ್ಟುವೆಂ ಪೆರ್ಗಱಿಯೊಳ್ ॥ ೧೨೯

ಎಂದು [ರೌದ್ರಾಟೋಪಮಂ ಪಣ್ಣಿ ನಿಗ್ರಹಂಗೆಯ್ವಲೆಂದಿರ್ಪುದುಂ, ಬಳಗೆ ಪಡಿಯುಂ ಪತ್ತಿರ್ದು] [3] ಕೇಳ್ದು ॥ ೧೩೦

ಜಿನದಾಸಂ ನಕ್ಕು ತಮ್ಮಯ್ಯನ ಮನದ ಮಹಾದ್ವೇಷಮಂ ಕಂಡು ಮೂರ್ಖಂ
ಮುನಿವಂದ್ಯಂಗುಗ್ರಕರ್ಮಾಂಬುರುಹರವಿಗೆ ಕೋಪಾಗ್ನಿಯಿಂ ಬಾಧೆಯಂ ಘೋರಂ
ಕೆನೆ ತೀವ್ರಂ ಮಾಡದನ್ನಂ ಪೂಜೆಮಡುವೆನಿದಂ ಬೇಗದಿಂ ದ್ರವ್ಯಮಂ ದು [4]
ರ್ವಿನಯಂಗಿತ್ತುಣ್ಮಿ ಲೋಕಂ ಪೊಗೞೆ ಪಲವುಮಾತೇವುದಾಂ ದೀಕ್ಷೆಗೊಳ್ವಂ ॥ ೧೩೧

---

1 ಬೇಸತ್ತು (ಗ) 2 ವೈಶ್ಯನಂದನಂ ನುಡಿಯಿಸೆ ನುಡಿಯಲಾಱದೆ ನಿಗ್ರಹಂಗೆಯ್ವಲೆಂದಿರ್ಪುದುಂ (ಗ)

3 ರೌದ್ರರೋಷಮಂ ಪಣ್ಣುವುದುಂ ಮಗಂ ಪಡಿಯು ಪೆಱಗಿರ್ದು (ಗ)

4 ಪೂಜೆಮಾಡುವೆನಿದೇಂ ದ್ರವ್ಯಮೋ ಕಷ್ಟಮೆಂದು (ಕ. ಬ.)

ಪೆಱತೇನೀಮುನಿಪಂ ಪೊಂ
ಗೆಱಗಂ ಪೊಂಗೆಱಗುವೊಂದುಮನಮುಳ್ಳೊಡೆ ಮುಂ |
ತೊಱೆವನೆ ಸಕಳಮನೆನ್ನದೆ
ನೆಱೆ ದಂಡಿಪನಿಂತು ಕಷ್ಟರಂ ಕಂಡಱಿಯೆಂ || ೧೩೧

ಮಱೆದಂ ಧರ್ಮದ ಒಟ್ಟೆಯು
ನಱಿತಂ ಪಿಂತಾಗಿ ಪೋಯ್ತು ಲೋಭೋದಯದಿಂ |
ಮುಱುಕಮುಮನಱಿವೊಡರ್ಥದ
ಮುಱುಕಕ್ಕೆಣೆ ಮುಱುಕಮೊಳವೆ ಬಗೆವೊಡೆ ಜಗದೊಳ್[1] || ೧೩೩

ಕಳ್ಳನಿವನೆಂದೊಡನಿತಱೊ
ಳಲ್ಲರುಮಱೆಯಟ್ಟಿ ಪಿಡಿದು ನಾನಾವಿಧದಿಂ |
ಕೊಲ್ಲದೆ ಮೂಣ್ಬರೆ ಕಳವಿಂ
ಪೊಲ್ಲಮೆ ಪೆಱತೊಳವೆ ಪಾಪದೆಬ್ಬಿರಮಲ್ತೇ || ೧೩೪

ಪೆಱರರ್ಥಕ್ಕೆಱಗುವನುಂ
ಪೆಱರರ್ಥಮನೆಯ್ದೆ ತರಿಸಿ ಕೊಳ್ವವನುಂ ಕೇ |
ಳಱಿವೊಡೆ ಕೊಲ್ವರ್ ನೆಲೆಯಿಂ
ಪೊಱಮಡಿಸುವರಟ್ಟೆ ದೂಱುವರ್ ಕೈಕೊಳ್ಳರ್ || ೧೩೫

ಕಳ್ಳರ ಕೊಟ್ಟುವಿದೆಂದೊಡೆ
ಬಲ್ಲಿದರುಂ ನಡುಗುತಿರ್ಪರಪ್ಪುದಱಿಂದಂ |
ಪೊಲ್ಲದು ಕಳವೆಂದಂಜುವು
ದಲ್ಲದೆ ಲೇಸೆಂದು ನಚ್ಚಲಕ್ಕುಮೆ ಕಳವಂ || ೧೩೬

---

1 ಮಱುಗಿ ಪದನಱಿತದರ್ಥದ ಮುಱುಕಕ್ಕೆಣೆಯೊಳವೆ ಬಗೆವೊಡಿಂತೀಜಗದೊಳ್.

ನರಕದ ದಾರಿ ಮಹಾನಿ
ಷ್ಠುರದುಃಖದ ಬಿತ್ತು ಪುಣ್ಯದ ಕ್ಷಯಮುಳಿಪಿಂ |
ಗಿರಲೆಡೆ ಕೊಳೆಯು ತವರ್ಮನೆ
ದುರಿತದ ಪೆರ್ಮೆಗಳಸು ಕಳವು ಬಗೆವೊಡೆ ಜಗದೊಳ್ || (೧)

ತನ್ನರ್ಥಮಂ ಕೆಟ್ಟೊಡೆ ಕೇ
ಳನ್ನರ್ಥಮಂ ಕೆಟ್ಟುದೆಂದು ಬಾಯ್ವಿಟ್ಟಪುವರ್ ।
ತನ್ನಂತೆ ಬಗೆಯಲಾಗದೆ
ಸನ್ನುತಮತಿಯಾಗಿ ಲೋಗರರ್ಥದ ಕೇಡಂ ॥ ೨೩೭

ಬಡಲುರಿವನ್ನೆಗಂ ಬಸಿದ ಶೂಲದೊಳಿಕ್ಕಿ ಪಲರ್ ಕುಕಿಲ್ದು ಬೊ
ಬ್ಬಿಡುತುಮಶಂಕೆಯಿಂ ತೆಗೆವ ಕಯ್ಯುಮನಂಘ್ರಿಯುಮಂ ನರರ್ತಡಂ
ಗಡಿವ ಧಗದ್ಧಗೆಂದುರಿವ ದಳ್ಳುರಿಯೊಳ್ ಪಿಡಿದೊತ್ತಿ ಕೋಪದಿಂ
ಸುಡುವತಿದುಃಖದೇಷ್ಟ್ಗಗಳ ಪೇಳುವೆ ತಾಂ ಕಳವಾಗದೆಂಬುದಂ ॥ ೨೩೮

ಪಿಡಿದು ತಳಾಱರೋವದೆ ಕನಲ್ದು ಮನಂಗಿಡೆ ಕಟ್ಟಿ ಶಂಕೆಯಿಂ
ನಡುಗುವ ದೇಹಮುಂ ನುಡಿಯಲಾಱದ ನಾಲಗೆಯುಂ ನಿಚೇಷ್ಟೆಯಿಂ
ನಡೆಯದ ಕಾಲುಮುಬ್ಬೆಗಮುಮಂಜಮೆಯುಂ [1] ಕಳವಾಗದೆಂಬುದಂ
ತಡೆಯದೆ ತೋಱಿ ಸಾಱುವವೊಲಿರ್ದಪು ಭಾವಿಸಿ ನೋಡೆಪ್ಪೊಡುರ್ವಿ
ಯೊಳ್ ॥ ೨೩೯

ಎಂದು ಕಳವಿನ ಕಷ್ಟವೃತ್ತಿಯುಮಂ ದ್ರವ್ಯದೊಳಾದ ಸಂಕ್ಲೇಶಮುಮಂ ವಿಚಾರಿಸಿ ಸಂಸಾರಕ್ಕೆ ಪೇಸಿ ಪಡಿಯಂ ತೆಱೆಯಿಸಿ ಪೊಱಮಟ್ಟು [ಮಹಾಪಾತಕಂ ಲೋಭದಿಂ ಮತಿಗೆಟ್ಟು ಸುಗತಿಯಂ ಕಿಡಿಸುವ ಕಜ್ಜಮನೆತ್ತಿಕೊಂಡು ಗಣಧರರಪ್ಪವರಂ ಬಱಿದೆ ಸುತ್ತುತ್ತಿರ್ದಪೆ] ಕೊಳ್ ನಿನ್ನ ಪೊನ್ನನೆಂದು ಪೊನ್ನಂ ತಂದೆರ್ದೆಯುಮೋಲೀಡಾಡಿ [ಮುನಿನಾಥಂಗೆ ಪೊಡೆಮಟ್ಟು ಮುಂದೆ ನಿಂದಿರ್ದು ॥ ೨೪೦

ದುರಿತಮದಗಂಧಸಿಂಧುರ
ಹರಿ ಚಾರುಚರಿತ್ರ ನಿರ್ವೃತಿಶ್ರೀಸತಿಯಂ ।
ಬರಿಸುವ ಜಿನೇಂದ್ರದೀಕ್ಷೆಯ
ನುರುಮುದದಿಂದೀವುದೆಂದು ಬೇಡುತೆ ಮುನಿಯಿಂ [2] ] ॥ ೨೪೧

---

1 ಮುಚ್ಚಿಗಮನೀಯಮೆಯುಂ (ಗ)   2 ಬೇಱ್ಪುದು ಮುನಿಯಂ (ಕ. ಬ.)

ಪರಮಶ್ರೀಯೊಳ್ ನೆರೆಪುವ
ದುರಿತಾರಿಯನಱಪ ದೇವರಿಂ ಪೊಗೞಪ ಭೂ ।
ಸುರಜೈನದೀಕ್ಷೆಯಂ ಸ
ಚ್ಚರಿತಂ ಜಿನದಾಸನಾಕ್ಷಣಂ [1] ಕೈಕೊಂಡಂ ॥ ೧೪೨

ಅಂತು ಜಿನದಾಸಂ ಜಾತರೂಪಧರನಾಗಿರ್ಪುದುಂ ಜಿನದತ್ತ ಸೆಟ್ಟಿಯುಂ ವೈರಾಗ್ಯಂ ಪುಟ್ಟಿ ತನ್ನ ಮಾಡಿದ ಮಾಟಕ್ಕೆ [ಕರಮಲ್ಲದೆ] ನೊಂದೆನ್ನ ಪಾಪಮಿಂತಲ್ಲದೆ ಪೋಗದೆಂದು ತಾನುಂ ಜಿನದೀಕ್ಷೆಯುಂ ಕೊಂಡು ತಪಂಗೆಯ್ದು ಸಂನ್ಯಸನವಿಧಿಯಿಂ ಮುಡಿಪಿ ಮಹರ್ಧಿಕ ದೇವನಾಗಿ ಪುಟ್ಟಿದಂ. ಜಿನದಾಸಮುನೀಂದ್ರನುಂ ಪಲಕಾಲಂ ತಪಂಗೆಯ್ದು ಸಮಾಧಿಮರಣದಿಂ [ಮುಡಿಪಿ] ಸರ್ವಾರ್ಥಸಿದ್ಧಿಯೊಳ್ ಮೂವತ್ತಮೂಱುಸಾಗರೋಪಮಾಯುಷ್ಯಮನೊಡೆಯನಹಮಿಂದ್ರನಾಗಿ ಪುಟ್ಟಿದನದಱಿಂ ॥ ೧೪೩

[ಕಳವಿನ ಮಾತಂ ನೆಱೆ ಪಂ
ಬಲಿಸದೆ ಜಿನಪಾದಸೇವೆಯಿಂದಿರ್ದ ನರಂ ।
ಮಲಹಾರಿಯಾಗಿ ನಿರ್ವೃತಿ
ಲಲನೆಗೆ ಪತಿಯಪ್ಪನೆಂಬುದೊಂದಚ್ಚರಿಯೇ] ॥ ೧೪೪

ಕಳವಿನ ಮಱೆಯೊಳ್ ಮೆಲ್ಲನೆ
ಮುಳಿಸಿಂದಘಮೆಂಬ ಬೇಡನಿರ್ದೆಚ್ಚಪನಾ ।
ಖಳನಂ ಬಂಚಿಸಿ ಸುಖದೊಳ್
ನೆಲಸುವ ಮನಮುಳ್ಳೊಡಂಜಿ ಮಾಣ್ಬುದು ಕಳವಂ ॥ ೧೪೫

ಎಂದು ಗಣಧರಸ್ವಾಮಿಗಳ್ ಕಳವಿನೊಳಾದ ಪೊಲ್ಲಮೆಯುಮನ ಸ್ತೇಯದೊಳಾದ ಮಹಾಮಹಿಮೆಯುಮಂ ಪೇೞ್ವುದುಂ ॥ ೧೪೬

---

1 ತಡೆದಿರದೆ ಕೂರ್ಮೆಯಿಂ (ಕ. ಖ.)

ದುರಿತಾರಾತೀಭಕಂಠೀರವನಖಗಿರಿವಜ್ರಾಯುಧಂ ವಾಗ್ವಧೂಸೌಂ
ದರರೂಪಂ ಕೇಳ್ದು ರಾಗಂಬೆರಸು ನಲಿದನತ್ಯೂರ್ಜಿತಂ ದೇವಧಾತ್ರೀ
ಧರಧೈರ್ಯಂ ನಿರ್ಮಲಂ ಸಂಸ್ಕೃತಿನಿಧಿಮದನಧ್ವಂಸಿ ತ್ರೈವಿದ್ಯಚಕ್ರೇ
ಶ್ವರ [1] ಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ||

ಇದು ನಿಖಿಲದಿವಿಜಪರವೃಢಮುಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ಸಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಭವಯುತ ದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ಅಸ್ತೇಯವ್ರತವ್ಯಾವರ್ಣನಂ
ದ್ವಾದಶಾಶ್ವಾಸಂ.

---

1 ಲಕ್ಷ್ಮೀವರ (ಗ)

# ತ್ರಯೋದಶಾಶ್ವಾಸಂ

ಶ್ರೀಮತ್ಸುರೇಂದ್ರವಂದ್ಯಂ
ಸಾಮಾನ್ಯಮೆ ಕಳ್ಳದ ವ್ರತಂ ಚಿಂತಿತಚಿಂ ।
ತಾಮಣಿಯೆಂದೊಸೆದಂ ಧರ
ಣೀಮಹಿತಂ ಸುಕವಿನಿಕರಪಿಕಮಾಕಂದಂ ॥ ೧

[ಅಂತಸ್ತೇಯವ್ರತಮಂ
ಕಂತುನಿಭಂ ಕೇಳ್ದು ಸಂತಸಂಬಟ್ಟು ಮಹೀ ।
ಕಾಂತಂ ನಾಲ್ಕನೆಯ ವ್ರತ
ಮಂ ತಡೆಯದೆ ಕೇಳ್ವೆನೆಂದು ಕರಮಾದರದಿಂ ॥ ೨

ಗೌತಮಸ್ವಾಮಿಗಳ್ಗೆ ಪೊಡೆಮಟ್ಟು ಕೈಗಳಂ ಮುಗಿದು ಕರ್ಮ ರಾಜನೊಡ್ಡಂ ಕಿಡಿಸುವ ನಿಬ್ರಹ್ಮದ] [1] ಕಥೆಯನೆನಗೆ ನಿಮ್ಮಡಿ ಬೆಸಸಿಮೆಂಬುದುಂ ॥ ೩

ಗಣಧರಮುನಿಮುಖ್ಯರ್ ಗುಣ
ಗಣನಿಳಯರ್ ಮೃದುನಿನಾದದಿಂ ಭೂಪ [2] ಶಿಖಾ ।
ಮಣಿಗೆ ಸುರಮನುಜಪನ್ನಗ
ಗಣಪರ್ ಕೈಮುಗಿಯೆ ಪೇಟಲುದ್ಯತರಾದರ್ ॥ ೪

[ಇಂತೆಂದು ಪೇಳ್ದರ್:—]ಹಣಿತೆಯೊಳ್ ಕೂಡಿ ಬತ್ತಿಯಿಂದೆಣ್ಣೆಯಿಂದಂ ಬೆಂಕಿಯಿಂದಂ ಬೆಳಗಿಂದಂ ಸೊಡರೆಂತೊಪ್ಪುಗುಂ, ಕರಿಯ ಭೂಮಿಯೊಡಗೂಡಿ ಮೊದಲಿಂದಂ ಪಣಿಯಿಂದಂ ಪೆರ್ಗೊಂಬುಗಳಿಂದಂ

---

1 ಅಂತು ಕಳ್ಳದ ವ್ರತದ ಕಥೆಯನಱಿದು ಮುಂದಣ ಕರ್ಮರಾಜನಬಲಮಂ ನಿಬ್ರಕ್ಕೆ ಕೆಡಿಸುವ ಅಬ್ರಹ್ಮದ (ಗ)     2 ಭವ್ಯ (ಗ)

[ಕಿಱುಗೊಂಬುಗಳಿಂದಂ]ಆಲದಮರನೆಂತೊಪ್ಪುಗುಂ, ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮುಚ್ಚಿರ್ಕೆಯಿಂದಂ [1] ಪೊನ್ನೆಂತೊಪ್ಪುಗುಂ, ರೂಪಿನೊಡಗೂಡಿ ವಸ್ತ್ರದಿಂ ತಿಳಕದಿಂ [ತೊಡವಿಂ] ಕಾಡಿಗೆಯಿಂ ಸ್ತ್ರೀಯೆಂತೊಪ್ಪುಗುಂ, ಬೆಳ್ದಿಂಗಳೊಡಗೂಡಿ ತಂಗಾಳಿಯಿಂ ದುಯ್ಯಲ್ಗಳಿಂ ವಿಲಾಸದಿಂ ತಿಳಿಗೊಳಂಗಳಿಂ ವಸಂತ [ಮಾಸ] ಮೆಂತೊಪ್ಪುಗುಮಂತೆ ಸಮ್ಯಕ್ತ್ವದೊಳ್ ಕೂಡಿ ಕೊಲ್ಲದ ಪುಸಿಯದ ಕಳ್ಳದ ಪಾದರಮಿಲ್ಲದ ವ್ರತಂಗಳಿಂದಂ ಶ್ರಾವಕನುಮೊಪ್ಪುವುದು ॥ ೫

ಪರವನಿತೆಗೆಱಗದವನಂ
ಧರೆ ನಂಬುವುದವನಿಪಾಳರುಂ ಕೈಕೊಳ್ವರ್ ।
ಕರಮಾದರದಿಂದೆನೆ ಪಾ
ದರಮುಂ ಮಾಣೆಂಬ ಸುವ್ರತಂ ಕೇವಳಮೇ ॥ ೬

[ಇನ್ನಾ ವ್ರತದ ಮಹಿಮೆಯೆಂತೆಂದೊಡೆ, ಈ ಜಂಬೂದ್ವೀಪದ ಭರತಕ್ಷೇತ್ರದ ವತ್ಸಕಾವತೀವಿಷಯದ ಕೌಶಾಂಬಿಯೆಂಬ ಪೊೞಲನಾಳ್ವ] [2] ದಂತಬಳನೆಂಬ ಮಹಾಮಾಂಡಳಿಕನಾತನ ಪಟ್ಟದರಸಿ ಧಾರಿಣೀಮಹಾದೇವಿ ಯೆಂಬಳವರ್ಗೆ ಪ್ರಿಯನಂದನಂ ॥ ೭

[ಸುರಪತಿವಿಭವಂ ಧಾತ್ರೀ
ಧರಧೈರ್ಯಂ ಕಾಮದೇವಸನ್ನಿಭನಹಿತ ।
ದ್ವಿರದೇಂದ್ರಸಿಂಹನರ್ಹ
ಚ್ಚರಣಸರೋಜಾತಭೃಂಗನಮಳಚರಿತ್ರಂ ॥ ೮

ಪ್ರಮಾಥಿಯೆಂಬಗ್ರನಂದನ] [3] ನಂತವರ್ ಸುಖದಿಂ ರಾಜ್ಯಂಗೆಯ್ಯುತ್ತುಮಿರ್ಪುದುಂ ॥ ೯

---

[1] ಈ ಪದವು (ಗ) ಪುಸ್ತಕದಲ್ಲಿ ಮಾತ್ರ ಕಂಡುಬರುತ್ತದೆ.

[2] ಇನ್ನದಱ ಮಹಿಮೆಯಂ ಪೇಳ್ವಡೆ ವತ್ಸವಿಷಯದ ಕೌಶಂಬಿಯೆಂಬ ಪುರಮದನಾಳ್ವಂ (ಗ)

[3] ಪ್ರಮಾಥಿ ಕುಮಾರನೆಂಬ (ಗ)

ವನಜಂಗಳ್ ದಳವೇೞೞೆ ಚೂತಲತೆಗಳ್ ನೀರೇೞೆ ಶೀತಾಂಶು ತೊ
ಟ್ಟನೆ ಪೂರ್ವಾದ್ರಿಯನೇೞೆ ಮನ್ಮಥಗಜಂ ಸೊಕ್ಕೇೞೆ ಪೊನ್ನುಯ್ಯಲಂ
ವನಜಾತಾಕ್ಷಿಯರೇೞೆ ಕಾಮನ ಶರಂ ಕೂರ್ಪೇೞೆ ಪುಂಡ್ರೇಕ್ಷುಚಾ
ಪನ ಚಾಪಂ ಗೊಲೆಗೇೞೆ ಬಂದುದು ವಸಂತಂ ಸಂತತೋತ್ಸಾಹದಿಂ ‖೧೦

[ಜಿನವಚನಾಮೃತಾಬ್ಧಿ ಜಗಮಂ ನೆಱೆ ಪರ್ವಿತೊ ಮೇಣ್ ಧರಿತ್ರಿಯಂ
ಜಿನವರಕೀರ್ತಿ......ನೆಱೆ ತೀವಿತೊ ಮೇಣಮೃತಾಬ್ಧಿ ಲೋಕಮಂ
ತನಗೆಡೆಮಾಡಿಕೊಂಡುದೊ ಮಹಾದ್ಭುತಮೆಂಬಿನಮುಜ್ಜಳಿಕ್ಕೆಯಿಂ
ವನಜವಿರೋಧಿಯೊಂದುನಿಜಕಾಂತಿ ಬಸಂತದೊಳೊಪ್ಪಿ ತೋಱುಗುಂ ‖

ಓಳಿಯೊಳಿರ್ದ ಚೂತಮಹಿಜಾತಸಮೂಹದ ಚೆಲ್ವುವೆತ್ತ ಸ
ಲ್ಲೀಲೆಯ ಕೆಂದಳಿರ್ಗಳಿಪಿ ಪೊರ್ದಿದ ತುಂಬಿಗಳರ್ತಿವಟ್ಟು ಸ
ಲ್ಲೀಲೆಯಿನಿಂದ್ರನೀಲದ ಪರಲ್ಗಳನಾವನದೇವಿಯರ್ ಮೃಗೇಂ
ದ್ರಾಳಿಗೆ ಕೆಂದಳಂಗಳನುದಾರತೆಯಿಂ ಕುಡುವಂತೆ ರಂಜಿಕುಂ ‖ ೧೨

ಕೊಸಗಿನ ಪೂವಿನೊಪ್ಪು ಸುರಹೊನ್ನೆಯ ಪುಷ್ಪದ ಚೆಲ್ವು ಪೆಂಪುವೆ
ತ್ತೆಸಕದಿನಿರ್ದ ಸಂಪಗೆಯ ಪೂವಿನೊಳಾದ ಬೆಡಂಗು ನಾಡೆ ರಂ
ಜಿಸೆ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾ
ಗಿಸಿ ಮನವೊಲ್ದು ಪೊತ್ತಿಸಿದ ದೀವಿಗೆಯಂದದಿನೊಪ್ಪಿ ತೋಱುಗುಂ‖೧೩

ನಲಿನಲಿದತ್ತಲಿತ್ತಲೆಡೆಯಾಡುವ ಸೋಗೆನವಿಲ್ಕಡಂಗಿ ಮೆ
ಲ್ಲುಲಿ ತರವೊಂದಿ ಪಾಡುವ ಮದಾಳಿ ಮನೋಭವರಾಗಮುಣ್ಮೆ ಬಂ
ದೆಳಸುವ ಜಕ್ಕವಕ್ಕಿ ಪುಗಲೆಂದನಟಂ ದನಿಗೆಯ್ವುತಿರ್ಪ ಕೋ
ಗಿಲೆ ವಿಟರರ್ತಿಯಂ ಸಲಿಸಿ ಮೆಲ್ಲನೆ ತೀಡುವ ದಕ್ಷಿಣಾನಿಲಂ ‖ ೧೪

ಅಂತು ವಿಟವಿಟೀಜನಕ್ಕಭ್ಯುದಯಮಾಗಿ ಬಂದ ವಸಂತಮಾಸ ದೊಳ್ ವನಪಾಲಕಂ ಬಂದು ದಂತಿಬಲ ಮಹಾರಾಜಂಗೆ ಬಿನ್ನಪಂಗೆ ಯ್ವುದುಮರಸನ...ಹೃದಯನಾಗಿ ವನಪಾಲಕಂಗಂಗಚಿತ್ತಮನಿತ್ತು ವನಮಂ ಲೇಸುಮಾಡೆಂದು ಪೋಗಲ್ವೇೞ್ದು ಮಱುದಿವಸಂ ವನಕ್ರೀಡೆಗೆ ಪೋಪ ಬಗೆಯಿಂದಾನಂದಭೇರಿಯಂ ಪೊಯ್ಸುವುದುಂ ‖ ೧೫

ಪೊಳೆವಲರ್ಗಣ್ಣ ನೀಳ್ದ ನಿಡುಪುರ್ವಿನ ಸುಕ್ಕಿದಮರ್ಕೆವೆತ್ತ ಕುಂ
ತಳದ ಪೊದಳ್ಕೆವೆತ್ತ ಸಿಯ ಬಾಸೆಯ ಪೊಂಗಳಸಂಬೊಲಿರ್ದ ಪೆ
ರ್ಮೊಲೆಯ ಲತಾಂಗದುಳ್ಳುಡೆಯ ತೆಳ್ವಸಿಱಿಂದುನಿಭಾಸ್ಯದಂಗನಾ
ವಳಿ ನೆರೆದಂದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ [1] ॥

ಪೊಳೆಪಿಂದಂ ಚಲ್ಲೆಗಣ್ ಕಾಮನ ಕುಸುಮಶರಾನೀಕಮಂ ಪೋಲೆ ಭೂಪಾ
ವಳಿಯುಂ ಕಯ್ಗಾಯುದುಜ್ಜು ತ್ತಿರೆ ವಿಟಜನಮಂ ಸತ್ಕಟಾಕ್ಷಂಗಳಿಂದ
ವ್ವಳಿಸುತ್ತುಂ ಕಾಮಪಾಶಕ್ಕೆಣೆಯೆನಿಸಿ ಕರಂ ಸುತ್ತಿ ರಾಜಾಲಯಕ್ಕ
ಗ್ಗಳವೊಪ್ಪಂಬೆತ್ತು ಬಂದಿರ್ದುದು ನಯದೊದವಿಂ ವಾರನಾರೀಕದಂಬಂ॥

ಅಂತು ಪೆಂಡವಾಸಮುಂ ಪುರಪುರಂಧ್ರಿಯರುಂ ರಾಜಕುಮಾರರುಂ ಪ್ರಮಾಥಿಕುಮಾರಂ ಮೊದಲಾದ ಕುಮಾರರುಂಬೆರಸು ಧಾರಿಣೀ ಮಹಾದೇವಿಯುಂ ತಾನುಂ ಗಂಧಸಿಂಧುರಾರೂಢರಾಗಿ ॥ ೧೮

ಕರಡೆಯ ಡಕ್ಕೆಯ ಪಪಳದ
ಪರಿಡಕ್ಕೆಯುಮರ್ದ ದನಿಗಳುಂ ಭೋರ್ಗರೆಯಲ್ ।
ಶರನಿಧಿಗಂಭೀರರವ
ಕೆಯ್ಕೊರೆಯಾಗಿರೆ ಬಂದು ದಂತಿಬಳನರನಾಥಂ ॥ ೧೯

ಮಹೋತ್ಸಾಹದಿಂ ಪೊಱಮಟ್ಟು ಬಂದು ವನಮಂ ಪೊಕ್ಕು ವಸಂತರಾಜನ ಕಟಕದಂತಿರ್ದ ವನದ ಚೆಲ್ವುಮಂ ನೋಡಿ ಧಾರಿಣೀ ಮಹಾದೇವಿಗಿಂತೆಂದಂ ॥ ೨೦

ಗಾಳಿಯ ತೀಟದಿಂಮಲಿವ ಕೆಂದಳಿರ್ಗಳ್ಪಱಿಯುಂ ಪೊದಳ್ದ ಭೃಂ
ಗಾಳಿಯ ನಿಸ್ವನಂ ನಿಮಿರ್ದ ಮಂಗಳಗೀತಮನಂತೆ ಚೂತಭೂ
ಜಾಳಿಗಳೊಳ್ಪು ಮಂಟಪದ ಭಂಗಿಯನಾವಗಮೇನೊ ಪೋಲೆ ಸ
ಲ್ಲೀಲೆಯಿನೀವನಂ ನೆಱಿಯೆ ಪೋಲ್ತುದು ನೋಡ ವಿವಾಹಗೇಹಮಂ॥ ೨೧

1 ವಳಿನೆರೆಸಿಂದು ಬಂಧುವನಮಂ ವಿಭು ಪೊಕ್ಕ ನನಂಗನಂದದಿಂ (ಗ)

ಎಂದು ಮುಂದೆ ಕಿಱಿದಂತರಮಂ ಪೋಗಿ ಗಗನತಳದ ನಿರ್ಮಳತೆಯಂ ನೋಡಿ ನಲ್ಲಳ್ಗಿಂತೆಂದಂ ॥ ೭೨

ದುರಿತದೊಳೊಂದದಿರ್ಪ ಮತದಂದಮುಮಂ ದುರಿತಾರಿಯಪ್ಪ ಭಾ
ಸುರಜಿನವಾಕ್ಯದಂದಮುಮನೊಳ್ಳತುಗೇಳ್ದ ಮಹಾತ್ಮನಪ್ಪವಂ
ಪರಮತಮಂ ಬಿಸುಟ್ಟು ವಿಮಳಾಂತರನಾದವೊಲಭ್ರಮಂ ಸವಿ
ಸ್ತರದೊಳ್ ಬಿಟ್ಟು ನಿರ್ಮಲತೆಯಂ ನೆಱೆ ತಾಳ್ದುದಾನಭೋಂಗಣಂ ॥ ೭೩

ಎನುತ್ತುಂ ಬರ್ಪಾತನರಲ್ದ ತಾವರೆಗೊಳಂಗಳಂ ನೋಡಿ ಮನಃಪ್ರಿಯೆಗಿಂತೆಂದಂ ॥ ೭೪

ಸುರಪತಿವಂದಿತಕ್ರಮಪಯೋರುಹನಪ್ಪ ಜಿನೇಶನೊಳ್ ಮನಂ
ಮುರಿಯದೆ ನಿಂದು ಕಾದಿ ಗೆಲಲಾಱದೆ ಕೆಟ್ಟೊಳಸಾರ್ದು ಪೋಗಿ ಬೆ
ಳ್ಳರಳಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀ
ವರವಧು ಕಾಮನಂ ನಗುವ ಭಂಗಿಯೊಳಿರ್ದುವು ವಾರಿಜಾಕರಂ ॥ ೭೫

ಎಂದು ನಗುತ್ತುಂ ಕಿಱಿದಂತರಂಬರಂ ನಡೆದು ಮನೋಜರಾಜನ ಮನೆಯಂತಿರ್ದ ಸಹಕಾರಮಹೀರುಹಂಗಳುಮಂ ಸುಜನರ ಮನದಂತೆ ನೇರಿತ್ತಾಗಿ ನಲಂಬೆತ್ತಿರ್ದೆಳಲತೆಗಳುಮಂ ಜಿನಧರ್ಮದಂತೆ ನಿರ್ಮಳಮಾಗಿ ಸೊಗಯಿಸುವ ತಿಳಗೊಳಂಗಳುಮಂ ಸಜ್ಜ್ಞಾನಿಯ ಮನದಂತೆ ಚೆಲ್ವುವೆತ್ತಶೋಕೆಯ ಮರಂಗಳುಮಂ ಸಹಜಕವಿಯ ವಚನದ ರಚನೆಯಂತಿನಿದಪ್ಪ ಮೃಂದವಾಡೆಗಳುಮಂ ಮನೋವಲ್ಲಭೆಗೆ ತೋಱುತ್ತುಂ ಬಂದು ತದನಂತರಂ ಮೊಲ್ಲೆಯ ಸಂಪಗೆಯ ಸುರಹೊನ್ನೆಯ ಕುಸುಮನಿಚಯದಿಂ ವಿನಿರ್ಮಿಸಿದ ಬಾಸಿಗಮುಮಂ ಸುರಗಿಯ ಜಾದಿಯರಲ್ಗಳಿಂ ವಿರಚಿಸಿದ ಕಂಕಣಮುಮಂ ಮನೋರಮೆಗೆ ಮನೋನುರಾಗದಿಂ ತುಡಿಸಿ ತಾನುಂ ತೊಟ್ಟು ನೆಱೆಯೆ ಶೃಂಗಾರಂಗೆಯ್ದು ಪ್ರಮಾಥಿಕುಮಾರಂ ಮೊದಲಾದ ಕುಮಾರರ್ಗಂ ಕೊಟ್ಟು ಪಿರಿದುಬೇಗಂ ವನಕ್ರೀಡೆಯನಾಡಿ ಬೞಲ್ದು ಬಂದೊಂದು ಮಾವಿನ ಲತಾಮಂಟಪದೊಳಗೆ

ತಳಿರ ಪಾಸಿನಮೇಲೆ ಪಟ್ಟಿರ್ಪುದುಂ ರಾಜಕುಮಾರರುಂ ವಿಳಾಸಿನೀ
ಜನಮುಂ ಕುಮಾರತಂಡಮುಂ ತಂತಮ್ಮ ಮನಕ್ಕೆ ಬಂದ ಸಹಕಾರ
ಮಹೀರುಹಂಗಳಂ ಸಾರ್ದು ವಿನೋದದಿಂದಿರ್ದರನ್ನೆಗಂ ಪ್ರಮಾಥಿಕು
ಮಾರನುಂ ಸೌಂದರದೇವಿಯುಮಾನಂದದಿಂದೊಂದು ಕಂಕೆಲ್ಲಿಮಹೀ
ಜಾತದ ಕೆಳಗೆ ॥ ೨೬

ಅರಲ ಪಾಸಿನಮೇಲೆ ರಂಭೆಯುಮಿಂದ್ರನುಂ ರತಿಯುಂ ಮಹೋ
ಜ್ಜ್ವಳಯಶೋನ್ವಿತನಪ್ಪ ಕಾಮನುಮಿರ್ಪ ಭಂಗಿಯೊಳಿರ್ದು ಕೋ
ಮಲೆಯು ಹಾಸವಿಲಾಸವಿಭ್ರಮಮಂ ನೃಪಾತ್ಮಜನಾಮಹಾ
ಬಲನ ಗಾಡಿಯನೊಪ್ಪವಾಸತಿ ಕೂರ್ತು ನೋಡುತುಮರ್ತಿಯಿಂ ॥ ೨೭

ಮೊರೆವಳಿಗಳ ಮೃದುನಿನಾದಕ್ಕಂ ಪಾಡುವ ಗಾಂಧರ್ವರ
ಗೇಯದ ನುಣ್ಪುವೆತ್ತ ಕೋಮಲನಿನಾದಕ್ಕಂ ಜನದ ಕಳಕಳಕ್ಕಂ
ಕಿವಿಸೋಲ್ತು ಪುರುಡಿಂ ಸವತಿವೆಂಡತಿ ಮುನಿದಗಲ್ವಂತೆ ನಿದ್ರಾಂಗನೆ
ಸೌಂದರಮಹಾದೇವಿಯನೊಲ್ವುದುಂ ॥ ೨೮

ಅರೆಮುಚ್ಚುತ್ತಿರ್ದ ನೇತ್ರದ್ವಯದ ಪೊಳೆಪು ಪಾಠೀನಯುಗ್ಮಂ ಸರೋಜಾ
ಕರದಿಂದಂ ಮೇಲೆ ಬಂದುಮ್ಮಳಿಸಿ ಪುಗುವವೋಲ್ ನೋಡೆ ಕಣ್ಣೊಪ್ಪೆ ನಿದ್ರಾ
ಭರದಿಂ ಮೆಯ್ಯೋಲೆ ಹಾರಂ ಕೆಲಕೆ ತೊಲಗೆ ಸುಯ್ಗಂಪಿನೊಳ್ ಕೂಡಿ ಪೊಣ್ಮು
ತ್ತಿರೆ ಧಮ್ಮಿಲ್ಲಂಗಳತ್ತಂ ಪರಿಯೆ ತೊಲಗೆ ದಿವ್ಯಾಂಬರಂ ದೇಹದಿಂದಂ॥ ೨೯

ಅಂತು ನಿದ್ರಾಂಗನಾಲಿಂಗಿತೆಯಾಗಿರ್ದ ನಲ್ಲಳಂ ತೆಗೆದು ತಪ್ಪೈಸಿ
ಮೆಲ್ಲನೆ ಪ್ರಸೂನಶಯ್ಯೆಯೊಳ್ ಪಟ್ಟಿರಿಸಿ ದಿಶಾವಲೋಕನಂಗೆಯ್ಯು
ತ್ತಿರ್ಪನವೊರ್ವ ಮಹಾಸಾಮಂತನ ಮಗಂ ವಸಂತನೆಂಬಂ ತನ್ನ
ಪ್ರಾಣವಲ್ಲಭೆಯಪ್ಪ ವಸಂತತಿಲಕೆಯೆಂಬ ರಾಜಪುತ್ರಿಗೆ ತನ್ನ ಬಿಲ್ಲ
ಬಲ್ಮೆಯಂ ತೋಱಲೆಂದು ಪುಂಖಾನುಪುಂಖಮೆಂಬ ಸೀಮಾವಿನ ದೋರೆ

ಗಾಯಗ್ಗಳಂ ಗೊಲೆವೆರಸು ನೆಲಕ್ಕೆ ಬೀೞಲೀಯದೆ ಸಾಯಕಮೆ ಕೈ
ಯೆನೆ ಪಟ್ಟೆರ್ದ ಪೊರ್ಗದೊಳ್ ಲೀಲೆಯಿಂದೆಚ್ಚು ಮನೋಹರಿಗೆ
ಕುಡುತಿರ್ಪುದುಂ ಅದಂ ಪ್ರಮಾಥಿಕುಮಾರಂ ಕಂಡು ॥ ೩೦

ಕಡುಜಾಣಂ ಬಿಲ್ಲೊಳೀತಂ ಸ್ಮರನಿಭನದಟಂ ನಲ್ಲಳಂದಂದು ನೇ
ರ್ಪಡೆ ನಾನಾಭಂಗಿಯಿಂ ತೋಱದಪನಿವನ ಕೌಶಲ್ಯಮಂ ಬೇಗದಿಂ ಕಂ
ಡೊಡೆ ನೀನುಂ ತೋಱವೇೞ್ಕೆನ್ನದೆ ಬಱದಿರಳೇಕಾಂತೆಯುಂ ಚಾಪ
ಮಂ ತಾಂ
ಪಿಡಿಯಲ್ ಜಾಣಿಲ್ಲ ಕೇಳಲ್ಲೆನಗೆನೆ ಪೆಱತೇಂ ಬಲ್ಲೆನತ್ಯಂತದೂರಂ ॥ ೩೧

ಅದನೀ ಕಾಮಿನಿ ಕಾಣದೆ
ಕದ (?) ಲೇಸಾಯ್ತೆನ್ನ ಪುಣ್ಯದಿಂದೀ ಪದದೊಳ್ ।
ಮದಗಜಗಮನೆಗೆ ನಿದ್ರೆಯು
ಮುದಯಿಸಿದುದು ಕೇಳದೊಂದತಿಶ್ರಮದಿಂದಂ ॥ ೩೨

ಇವಳಱಯದ ಕಳಗಳ್ ಭೂ
ಭುವನದೊಳಿಲ್ಲೀಕೆ ನಿದ್ರೆಯಿಂದಿರ್ದ ಮಹೀ ।
ಧವ ನಿನ್ನ ಬಿಲ್ಲ ಬಲ್ಮೆಯು
ನಿವನಂತಿರೆ ತೋಱವೇೞ್ಕುಮೆನ್ನದ ಮುನ್ನಂ ॥ ೩೩

ಪೋಪೆನೆಂದೆರ್ದ ಮೆಲ್ಲನೆ ಪೊಱಮಟ್ಟು ತನ್ನ ಪೊಳಗನೊರ್ವರ್ಗ
ಪ್ಪುಡಂ ಪೇೞದೆ ಧನುರ್ವಿದ್ಯೆಯಂ ಕಲ್ವೆನೆಂಬುದ್ಯೋಗಮನೆತ್ತಿಕೊಂಡು
ಕತಿಪಯಪ್ರಯಾಣಂಗಳಿಂ ಪಾಟಲೀಪುತ್ರಮೆಂಬ ನಗರಕ್ಕೆ ಬಂದು
ದ್ರೋಣಾಚಾರ್ಯರಂ ಕಂಡು ॥ ೩೪

ಬೆಲೆಯಿಲ್ಲೆನಿಸುವ ರತ್ನಾ
ವಳಿಯಿಂ ಬಿಲ್ಲೋಜನಂಘ್ರಿಯುಗಮಂ ಧಾತ್ರೀ ।

ತಳನಾಥಸುತಂ ಪೂಜಿಸಿ
ಪೊಡೆವಟ್ಟು ಬೞಿಕ್ಕೆ ವಿನಯದಿಂದಿರೆ ಭೂಪಂ] [1] ೩೫

ದ್ರೋಣಾಚಾರ್ಯರ್ ಮನದೊಳ್
ಜಾಣನಿವಂ ಚಾರುರೂಪನತ್ಯಧಿಕಗುಣಂ ।
ಕ್ಷೋಣೀಶನಾಗವೇೞ್ಕುಂ
ಕ್ಷೋಣಿಯೊಳುಱದವರ್ಗೆ ವಿನಯಗುಣಮಿನಿತೊಳವೇ ॥ ೩೬

[ಅವಿನಯಕ್ಕಂ ಬ್ರಾಹ್ಮಣ
ನವನೀನಾಥಂ ಸಮಸ್ತಗುಣಯುತನಕ್ಕುಂ ।
ಪ್ರವರವಣಿಕ್ತನಯಂ ಸಂ
ದ ವಿದಗ್ಧಂ ಜಾಡ್ಯನಕ್ಕುಮೆಂತುಂ ಶೂದ್ರಂ ॥ ೩೭

---

1 (ಗ) ಪುಸ್ತಕದಲ್ಲಿ ದಂತಬಲಮಹಾರಾಜನ ವನಕ್ರೀಡಾವರ್ಣನೆಯಿಲ್ಲ. ೧೧ನೆಯ ಪದ್ಯದಿಂದ ಮುಂದೆ ಅದರ ಪಾಠವು ಹೀಗಿದೆ :—

ಅಂತು ಬಂದ ವಸಂತಮಾಸದೊಳ್ ಪ್ರಮಾಥಿಕುಮಾರಂ ತನ್ನ ಮನಃಪ್ರಿಯೆ ವಸಂತಮಾಲೆವೆರಸು ವನಕ್ರೀಡೆಯನಾಡಲೆಂದು ಅರ್ಥಿವೆರಸು ॥ ಪೊಳೆವಲರ್ಗಣ್ಣ.... (ಪದ್ಯ ೧೬) ಅಂತು ಪೊಕ್ಕು ನಲ್ಲಳ ಮೊಗಮಂ ನೋೞ್ಪ ॥ ಗಾಳಿಯ ತೀಂಟದಿಂ...... (ಪದ್ಯ ೨೧) ಎಂದು ಕಿಱಿದಂತರಮಂ ಪೋಗಿ ॥ ಒಳಿಯೊಳಿರ್ದ...... (ಪದ್ಯ ೧೨) ಎಂದುಮೆಚ್ಚುತ್ತಂ ಕಿಱಿದೆಡೆಯಂಪೋಗಿ ॥ ಕೊಸಗಿನ ಪೂವಿನೊಪ್ಪು.... (ಪದ್ಯ ೧೩) ಎಂದು ಮುಂದೆ ಕಿಱಿದಂತರಂ ನಡೆದು ॥ ಸುರಪತಿವಂದಿತ...... (ಪದ್ಯ ೨೫) ಎಂದು ಮನೋವಲ್ಲಭೆಯಪ್ಪ ವಸಂತಮಾಲೆಯ ಕಯ್ಯಂ ಪಿಡಿದು ನಗುತಂ ಪೋಗಿ ವನಕ್ರೀಡೆಯುಮಂ, ಜಲಕ್ರೀಡೆಯುಮನಾಡಿ ನಿಂದಿರ್ಪುದುಂ, ವಿಶ್ವಸೇನನೆಂಬ ರಾಜಕುಮಾರಂ ಶ್ರೀಮತಿಯೆಂಬ ತನ್ನ ವಲ್ಲಭೆಗೆ ಮಾವಿನೆಳಗಾಯ್ಗಳಂ ಸರಸಂಧಾನಂಗೆಯ್ದು ನೆಲನಂ ಮುಟ್ಟಲೀಯದೆ ತರಿಸಿ ಕೊಡುವುದುಂ, ಪ್ರಮಾಥಿಕುಮಾರಂ ಕಂಡು ತನಗರ್ಥಿಯಾಗಿ ರಾಜಭವನಕ್ಕೆ ಬಂದು ಚಾಪವಿದ್ಯೆಯುಂ ಕಲ್ತು ಬರ್ಪೆನೆಂದು ನಡುವಿರುಳ ಪ್ಪಗಳೆರ್ದಾರ್ಗಂ ಪೇಳದೆ ಪಾಟಲಿಪುರಕ್ಕೆ ಪೋಗಿ ದ್ರೋಣಾಚಾರ್ಯರಂ ಕಂಡು ಪಲವುರತ್ನಂಗಳಂ ಪಾದದೊಳಿಕ್ಕಿ ವಿನಯದಿಂದಿಚ್ಛಾಕಾರಂಗೊಟ್ಟು ನಿಮ್ಮಲ್ಲಿಯೆ ಬಿಲ್ವಿದ್ಯೆಯುಂ ಕಲ್ವೆನೆಂದು ಬಂದೆನೆನ್ನ ಪೆಸರ್ಜಿನಭಕ್ತನೆಂದು ಪೇಳ್ವುದುಂ (ಗ)

ಚಾಗಿಗುಣಂ ಧಾರಿಣಿಪತಿ
ಗೋಗಡಿಸದೆ ವೈಶ್ಯಜಂಗೆ ಲುಬ್ಧಗುಣಂ ಕೇ।
ಳಾಗಳುಮೆಲೆ ಶಾಠ್ಯಗುಣಂ
ಬೇಗಂ ವಿಪ್ರಂಗೆ ಸಹಜಮಕ್ಕುಂ ಜಗದೊಳ್ ॥ ೩೮

ಎಂದು ಪೂರ್ವೋಕ್ತನೀತಿಶಾಸ್ತ್ರಮಂ ನೋಡಿ ತಲೆಯಂ ತೂಗಿ ಮಹಾವಿನಯಪರನೀತಂ ಕ್ಷತ್ರಿಯತನಯನಪ್ಪನೆಂದು ಪ್ರಮಾಥಿಕುಮಾರನ ಮೊಗಮಂ ನೋಡಿ ನೀಮೆಲ್ಲಿಂ ಬಂದಿರೆಲ್ಲಿರ್ಪಿರ್ನಿಮ್ಮ ಪೆಸರೇನೆಂಬುದಿಲ್ಲಿಗೇಂಕಾರಣಂ ಬಂದಿರೆಂದು ಬೆಸಗೊಳ್ವುದುಂ ಪ್ರಮಾಥಿಕುಮಾರನಿಂತೆಂದಂ ॥ ೩೯

ದೂರದೇಶದೊಳಿರ್ದು ಬಂದೆನಿಳಾಮರಾತ್ಮಜನೆಂ ಸವಿ
ಸ್ತಾರದಿಂ ಜಿನಭಕ್ತನೆಂಬುದು ಪೇೞಲೆನ್ನ ಪೆಸರ್ ಗುಣಾ
ಧಾರ ಪೆಂಪಿನ ಚಾಪವಿದ್ಯೆಯನರ್ತಿಯಿಂ ಕಲಲೆಂದು ಪಂ
ಕೇರುಹೋದರವಂಶಭಾಸ್ಕರ ಬಂದೆನೆಂದೊಡೆ ಕುಂಭಜಂ ॥ ೪೦

ಪ್ರಮಾಥಿಕುಮಾರನ ನುಡಿವ ಭಾವಕ್ಕಂ ವಿನಯಕ್ಕಂ ಮನದೆಗೊಂಡು ಚಾಪವಿದ್ಯೆಯೊಳೀತನಂ ಜಾಣನಂ ಮಾಡುವೆನೆಂದು ಚಿತ್ತದೊಳ್ ಪೂಣ್ದು ಪ್ರಮಾಥಿಕುಮಾರನ ಕಯ್ಯಂ ಪಿಡಿದೊಡಗೊಂಡು ಪೋಗಿ ಪಂಕ್ತಿಯೊಳುಣಲಿಕ್ಕಿಸಿ ವಸ್ತ್ರತಾಂಬೂಲಾದಿಗಳಿಂ ಸಂತೋಷಂಬಡಿಸಿ ಪಥಶ್ರಮಂಕಳೆದು ಮಱುದಿವಸಮಿಂತೆಂದಂ ॥ ೪೧

ಜಿನಭಕ್ತ ಚಾಪವಿದ್ಯೆಯ
ನನುನಯದಿಂದೆನ್ನ ಸಾರೆ ಧಾತ್ರೀತಳದೊಳ್ ।
ಮನವೊಲ್ದು ಕಲ್ತನವನಾ
ವನೊ ಭಾವಿಸಿ ನೋೞ್ಪೊಡಣ್ಣ ಕೇಳನ್ನೊಂದಂ ॥ ೪೨

ಚಾಪವಿದ್ಯೆಯೊಳ್ ನಿನ್ನಂ ಸವ್ಯಸಾಚಿಗಂ ಭೀಮಂಗಮಧಿಕನೆಂಬಂತು ಮಾಡುವೆನಂಜದೆ ಬಿಲ್ಲಂ ಕಲ್ಲೆಂಬುದುಂ ದ್ರೋಣಾಚಾರ್ಯ

ರೊಳಾದ ಕಾರುಣ್ಯಕ್ಕೆ ಮನದೊಳ್ ಮೆಚ್ಚಿ] [1] ಪ್ರಮಾಥಿ ಕುಮಾರಂ ತನ್ನೊಳಿಂತೆಂದಂ ॥ ೪೩

ಒಲಗಿಪಂಗೆ ಭೂಭುಜರ ಕೂರ್ಮೆಯುಮುತ್ತಮಮಪ್ಪ ಧರ್ಮಮಂ ಕೇಳಲು ಬಂದವಂಗೆ ಮುನಿನಾಥರ ಕೂರ್ಮೆಯುಮೆಯ್ದೆ ಶಸ್ತ್ರಶಾಸ್ತ್ರಾಳಿಯುಮಂ ಕರಂ [2] ಕಲಿಪವಂಗಿರದೋಜರೊಳಾದ ಕೂರ್ಮೆಯುಂ ಲೀಲೆಯಿನಾದೊಡಾತನೆ ಮಹೋದಯನಾತನೆ ಧನ್ಯನಲ್ಲನೇ ॥ ೪೪

[ಎಂದು ನಲಿದು ಬಿಲ್ಲ ಬಲ್ಮೆ ತನಗಾಗಳಾದಂತೆ ಮುಯ್ಯುಮ್ಮದಮಾಗಿ ಶುಭದಿನದೊಳ್ ಚಾಪವಿದ್ಯೆಯಂ ಮೊದಲ್ಗೊಂಡು ॥ ೪೫

ಬಂದೆಡೆಯೊಳುಂಡೆನಪ್ಪೊಡೆ
ಸಂದೀಬಿಲ್ವಿದ್ಯೆಯಾಗಲಱಿಯದು ತಿರಿದುಂ ।
ಡಂದಲ್ಲದೆ ಮೆಯ್ಮಣಿಯದು
ಸಂದೆಯುಮಿನ್ನೇಕೆ ಬಿಲ್ಲನಾಂ ಕಲ್ವೆನೆಗಂ ॥ ೪೬

ತಿರಿದುಂಬೆನೆಂದು ಪೂಣ್ದು ವಿದ್ಯೆ ಕಾರಣಮಾಗೆ ಮೆಯ್ಸುಖಮಂ ಬಿಟ್ಟು ದ್ರೋಣಾಚಾರ್ಯರ ಮಾತಂ ಮೀಱಿ ಭಿಕ್ಷಾಹಾರಮನುಂಡು ಪಲವುದಿವಸಮುಪಾಧ್ಯಾಯರ್ ಪೇೞ್ದೋಜೆಯೊಳ್ ನೆಗೞ್ದು ಚಾಪವಿದ್ಯೆಯೊಳತಿಪ್ರೀತನಾಗಿ ॥ ೪೭

ಜಿನಭಕ್ತನ ದೊರೆಯಾರ್ ಮೇ
ದಿನಿಯೊಳ್ ದೊರೆಯಪ್ಪೊಡರ್ಜುನಂ ಕರ್ಣಂ ರಾ ।
ಮನಮೋಘನಕ್ಕುಮಲ್ಲದೆ
ಜನಪಸುತರ್ ಚಾಪವಿದ್ಯೆಯೊಳ್ ಪೋಲ್ತಪರೇ ॥ ೪೮

---

1 ಎಂದು ಭಾವಯುತದಿಗಂಬರದಾಸನ ಮಾತಿಂದ ಪರಮಜೈನನೆಂದಱಿದು ಮನದೊಳ್ಮೆಚ್ಚಿ ಭೀಮಂಗರ್ಜುನಂಗು ಚಾಪವಿದ್ಯೆಯೊಳ್ ನಿನ್ನನಧಿಕಂ ಮಾಡುವೆನೆಂದಂಜದಿರೆಂದು ಕೂರ್ಮೆಯಿಂ ನುಡಿವುದುಂ (ಗ)

2 ನರ್ಥಿಯಿಂ (ಗ)

ಎಂದು ಪುರಜನಮುಂ ಜಗಜ್ಜನಮುಮೊಂದೆ ಕೊರಲೊಳ್ ಪೊಗೞೆ ಪ್ರಸಿದ್ಧಿಗೆ ಸಂದು ಚಟ್ಟುತ್ತರ[1] ಮಾಯ್ತೆಂಬ ನಾಣ್ಣುಡಿಯುಂ ನನ್ನಿಮಾಡಿ ದ್ರೋಣಾಚಾರ್ಯರ್ಗಂ ಮಿಗಿಲೆನಿಸಿ ಸುಖದಿಂದಿರ್ಪುದುಂ ||

ಎನ್ನ ಚಟ್ಟರೊಳಲ್ಲಮೀತನೆ ಬಿಲ್ಲ ಬಲ್ಮೆಗೆ ಜಾಣನ
ತ್ಯುನ್ನತಂ ಕಡುವೀರನುತ್ತಮಜೈನನೂರ್ಜಿತತೇಜನು
ತ್ಪನ್ನಬುದ್ಧಿ ವಿವೇಕಿ ಧೈರ್ಯಪರಂ ಜನಸ್ತುತನೆಂದು ತಾಂ
ತನ್ನ ಚಿತ್ತದೊಳಾಗಳುಂ ಕಡುಗೂರ್ಮೆಯಿಂ ದ್ವಿಜವಂದಿತಂ || ೫೦

ಪೊಗೞುತ್ತುಮತ್ಯಾದರದಿಂ ಪುತ್ರಸ್ಥಾನೀಯನಂ ಮಾಡಿಕೊಂಡಾಡುತ್ತಿರ್ದೊಂದುದಿವಸಂ ಜಿನಭಕ್ತಕಂ ಮೊದಲಾದ ಶಿಷ್ಯನಿಕಾಯಮುಂ ಬೆರಸು ಪೊೞಲಿಂ ಪೊಱಮಟ್ಟು ಪೋಗುತ್ತುಮಿರ್ಪುದುಮಾಪುರಮನಾಳ್ವ ಸಿಂಹಸೇನಮಹಾರಾಜನ ಮಗಳಪ್ಪ ಚಂದ್ರಲೇಖೆಯೆಂಬ ಕುಮಾರಿ ಕತಿಪಯಪರಿಜನಂಬೆರಸು ಪುರದ ಪೊಱಗಣ ಸಹಸ್ರಕೂಟ ಚೈತ್ಯಾಲಯಮುಮಂ ಬಂದಿಸಿ ಮಗುೞ್ದು ಬರುತ್ತುಮಿರ್ಪುದುಂ || ೫೧

ಮದದಿಂ ಕಣ್ಗೆಟ್ಟು ಘೋರೆಂದಧಿಕಬಲದಿನೇವಯ್ಸಿ ಕಾಪಿರ್ದರಂ ಕ
ಟ್ಟದ ಶುಂಭತ್ಕಂಬಮಂ ಕಿತ್ತಡಸಿ ಬಡಿಯುತುಂ ಸೀಳುತುಂ ಸೊರ್ಕಿನಿಂ ತೂ
ಳ್ದದಯಂ ಮೆಯ್ವೊರ್ಚೆಮುಂ ಬಂಧಿಸಿದ ನಿಗಳಮಂ ಚಕ್ಕನೆಕ್ಕಂಬಿನಂ ಕೋ
ಪದಿನಾಗಳ್ ನುಗ್ಗುನುಗ್ಗಪ್ಪಿನೆಗ ಮುಱಿದು ಕಾಡಾನೆವೊಲ್ ತೀವ್ರದಿಂದಂ || ೫೨

ದೂರದಿಂ ಮಾರಿಯ ಮೂರಿಯಂತೆ ಬರ್ಪ ಸೊರ್ಕಿದಾನೆಯುಂ ಕಂಡು ವೀರರೊಳಸಾರೆ ಗಱುಪರೊಳಸುರ್ಕೆ ಪೊಂಕಮುಳ್ಳವರ್ ಪೊಂಕಂಗೆಟ್ಟೋಡೆ, ಬಿರುದರರಿದೆಂದು ಪೆಱಪಿಂಗೆ, ಬಂಟರ್ ಕೊಂಡಾಡುವಗೆಂಟೊಳಿರೆ, ಬೆಸದವರ್ ಬೆಸದವರಂತೆ ಸಿವಿಗೆಯನಿರಿಸಿ ಪೋಗೆ ಚಂದ್ರಲೇಖೆಯೊರ್ವಳ || ೫೩

---

1 ಬಟ್ಟುತ್ತರ (ಗ)

ಪರಮಜಿನೇಂದ್ರಪಾದಪದ್ಮದ್ವಯಮಂ ಹೃದಯಾಂಬುಜಾತದೊಳ್
ಧರಿಯಿಸಿ ಚಿತ್ತದೊಳ್ ಕದಡದುಜ್ಜ್ವಳಚಿತ್ತದಿನೀಗಜೇಂದ್ರನಿ
ಷ್ಠುರದುಪಸರ್ಗಮೊರ್ಮೊದಲೆ ಪಿಂಗುವಿನಂ ತನುವೆನ್ನದಲ್ಲವೆಂ
ದರಸನ ಪೆರ್ಮಗಳ್ ತೊಱೆದು ಪಂಚಪದಂಗಳನೋದುತಿರ್ದಳಂ ॥೫೪

ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತಿಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದುಂ ಜಿನಭಕ್ತಂ ಚಂದ್ರಲೇಖೆಯ ಮನದ ಧೈರ್ಯಮುಮಂ ಧರ್ಮದೊಳಾದ ನಂಬುಗೆಯುಮಂ ತಳರದೆ ನಿಂದ ಪರಿಚ್ಛೇದಮುಮಂ ಕಂಡು ಮೆಚ್ಚಿ ಸಮಯವಾತ್ಸಲ್ಯಮಂ ಮೆಱೆವೆನೆಂದು ಕೋಪಾಟೋಪದಿಂ ಕುಮಾರಿಗಾಗಿ ಪರಿತರ್ಪ ಗಂಧಸಿಂಧುರಕ್ಕಡ್ಡಂ ಬಂದು ನಿಂದು][1] ॥ ೫೫

ತುಂಗಮೆನಿಸಿರ್ದ ಪಂಚಪ
ದಂಗಳನೋದುತ್ತುಮಧಿಕಗುಣಿ ಕರಿಪತಿಯುಂ ।
ಭಂಗಂಮಾಡಿ ಗಜೇಂದ್ರದ
ಬೆಂಗೆಱೆದನಯ್ಯ ಭಾಪು ಜೀಯೆನೆ ಪಲರುಂ ॥ ೫೬

---

1 ಎಂದು ಚಾಪವಿದ್ಯೆ ತನಗಾಗಳಾದಂತೆ ಮುಯ್ಯುವುದ್ಧಮಾಗ ಶುಭದಿನದೊಳ್ ಮೊದಲ್ಗೊಂಡು ಚಟ್ಟುತ್ತರಮಾಯ್ತೆಂಬ ನುಡಿಯಂ ನನ್ನಿಮಾಡಿ ಬಿಲ್ಲ ಬಲ್ಮೆಯೊಳ್ ದ್ರೋಣಗಂ ತಾನೆ ಮಿಗಿಲಾಗಿರ್ಪುದುಂ ಆ ಪುರಮನಾಳ್ವ ಸಿಂಹಸೇನಮಹಾರಾಜನಾತನ ಮಗಳಪ್ಪ ಚಂದ್ರಲೇಖೆಯೆಂಬ ಕುಮಾರಿ ಪುರದ ಪೊಱಗಣ ಸಹಸ್ರಕೂಟಮೆಂಬ ಬಸದಿಗೆ ಪೋಗಿ ದೇವರುಮಂ ಋಷಿಯರುಮಂ ವಂದಿಸಿ ಬರುತ್ತಿರ್ಪುದುಂ ಮುಂದೊಂದುಮದದಾನೆ ಕಂಭಮಂ ಮುಱಿದು ಘಾಳಿಯಂತೆ ವೇಗಿಯುಂ ಕಲಿಯಂತೆ ನಿಶ್ಶಂಕನುಂ ಮದ್ಯಪಿಯಂತವಿವೇಕಿಯುಂ ಮೂರ್ಖನಂತೆ ತೀವ್ರನುಂ ತಣಿಯುಂಡ ಪಾರ್ವನಂತಾಶದೃಷ್ಟಿಯುಂ ಬೇಡನಂತೆ ಮೂರ್ಖನುಂ ಕ್ರೂರನುಂ ಪಾಪಿಯಂತೆ ನಿಃಕರುಣಿಯುಮಾಗಿರ್ಪುದಂ ಕಂಡು ಭಯಂಗೊಂಡೆಲ್ಲರುಮೋಸುವುದುಂ ಚಂದ್ರಲೇಖೆಕುಮಾರಿ ಪೋಗದೆ ತಿರಿಗಿಯುಪಸರ್ಗಂ ಪಿಂಗುವಿನಮಾಹಾರಶರೀರನಿವೃತ್ತಿಯೆಂದು ಕಾಯೋತ್ಸರ್ಗದಿರೆ ದ್ರೋಣಾಚಾರ್ಯರ ಭಟ್ಟರೆಲ್ಲಂ ಬೆಟ್ಟದಂತೆ ಚಿಟ್ಟಾಡದಂಜಿ ನಿಲೆ ವಾತ್ಸಲ್ಯರತ್ನಾಕರಂ ಧರ್ಮವಾತ್ಸಲ್ಯದಿಂ ಬಂಧುರಕ್ಕಡ್ಡಂಬಂದು ನಿಂದು (ಗ)

ಅಂತು ವಿದ್ಯಾಧರಕರಣದಿಂದಾನೆಯೇಱು ಮಸೆದಸಿಯುಂ ಕಟ್ಟಿದ ನೇಣುಂ ಕೂರಂಕುಶಮಾಗೆ [ಸಿಂಹಮೆನಿಸಿದಾನೆಯುಂ ಗ್ರಾಮಸಿಂಹಮೆನಿಸಿ ನೆರೆದ ನೆರವಿ ಕಯ್ಮುಗಿಯೆ ಕಾಮಾರಿಯಲ್ಲಿಗೆ ಬಂದು ॥ ೫೭

ಜಿನಧರ್ಮೋತ್ಪಳಚಂದ್ರಿಕೆ
ನಿನಗಾರ್ದೊರೆ ಶುದ್ಧಮಪ್ಪ ದರ್ಶನದೊಳ್ ಮೇ।
ದಿನಿಪೂಜ್ಯೆ ನೀನೆ ಪಿರಿಯಳ್
ಜನವೆಂದಿತೆ ಕೇಳ ನೂಱುಸೂಚ್ ಬಣ್ಣಿಪೊಡಂ ॥ ೫೮

ಎಂದು ಮನದೊಳಾಡಾದರ ಭಾವದಿಂ ಪೊಗೞ್ದುಪಸರ್ಗಂ ಪಿಂಗಿತ್ತು ಕಯ್ಯನೆತ್ತಿಕೊಳ್ಳಮೆಂಬುದುಂ ಚಂದ್ರಲೇಖೆ ಕಯ್ಯನೆತ್ತಿಕೊಂಡು ಜಿನಭಕ್ತನಂ ನೋಡಿ ಮಹಾತ್ಮನೆಂದಱಿದು ಮನದೊಳ್ ಪೊಗೞ್ದು ಇನ್ನೆನಗೀಭವದೊಳೀತನೆ ಗಂಡನುೞಿದ ರಾಜಕುಮಾರರ್ ಮೊೞೆಯಲ್ಲರೆಂದು ಪೂಣ್ದು ರಾಜಮಂದಿರಕ್ಕೆ ಪೋದಳತ್ತಲ್ ಪ್ರಮಾಥಿಕುಮಾರನಾನೆಯುಂ ಪೂರ್ವಸ್ಥಾನಕ್ಕೊಯ್ದು ಕಟ್ಟಿ ಮಗುೞ್ದು ಬಂದು ದ್ರೋಣಾಚಾರ್ಯರೊಳ್ ಕೂಡಿರ್ದನಿರ್ಪುದುಂ ॥ ೫೯

ಪುರಮುಂ ಭೂಮಿಪಾಳನುಂ ದ್ರೋಣನುಮತಿಶಯದಿಂದೀತನಂ ಮೆಚ್ಚಿ ಚಾಮಿ
ಕರಶೈಲೇಂದ್ರಕ್ಷಮಂ ವಾಸವವಿಭವನನಂಗಾಭನುದ್ಯದ್ಗುಣಂ ಖೇಚರಶೌರ್ಯಂ ಚಾಪವಿದ್ಯಾಪರಿಣತನದಟಂ ವೀರನುರ್ವೀಸ್ತುತಂ ಭಾಸ್ಕರತೇಜಂ ಸೌಮ್ಯನೆಂದೆಂದಣಮೞಿಯದಲೋರಂತೆ ಕೊಂಡಾಡುತಿರ್ದರ್ ॥ ೬೦

ಎಂದು ಛಾತ್ರರೆಲ್ಲರುಂ ನೆರೆದು ಗುಜುಗುಜುಗೊಂಡು ಪಲ್ಮೊಱೆಯುತ್ತುಮಿರ್ಪುದುಮವರ ದುರ್ಜನತ್ವಮಂ ದ್ರೋಣಾಚಾರ್ಯರ್ ಮಾಕೊರ್ಂಡು ತಮ್ಮೊಳಿಂತೆಂದರ್][1] ॥ ೬೧

---

1 ಗಜಮನಜಂ ಮಾಡಿ ಕುಮಾರಿಯುಪಸರ್ಗಮಂ ಪಿಂಗಿಸಿ ದ್ರೋಣರ ಚೇಂಕರಿಸೆ ಕರಿಯನರಿಯನುಯ್ವಂತೆ ಪೂರ್ವಸ್ಥಾನಕ್ಕೊಯ್ದು ಕಟ್ಟುವುದುಂ ಲಲಿತ ಘಟಿಯು ಮುನಿದು ಪಲ್ಮೊರೆಯುತಿರ್ಪುದುಮದಂ ದ್ರೋಣಾಚಾರ್ಯರುಮಱಿದು (ಗ)

ಕವಿನಾಥರ್ ಕವಿಪುಂಗವರ್ಗೆ ಬಿರುದರ್ ಬೀರರ್ಗೆ ಭೂಪಾಲಕರ್
ಭುವನೇಶರ್ಗೆ ವಿಟರ್ ವಿಟರ್ಗೆ ಚತುರರ್ ಚಾತುರ್ಯರಪ್ಪರ್ಗೆ ವೈ
ಶ್ಯವರರ್ ವೈಶ್ಯವರರ್ಗೆ ಬಂಟರದಟಿಂ ಬಂಟರ್ಗೆ ಪುಣ್ಯಾಂಗನಾ
ನಿವಹಂ ಪುಣ್ಯವಧೂಜನಕ್ಕೆ ಸಹಜಂ ಕಾಯ್ವರ್ ಮಹೀಚಕ್ರದೊಳ್ ॥

[ಇವರ ಮುಳಿಸಿದಾಶ್ಚರ್ಯಮಲ್ಲದೆಂದು ಬೆರಲಂ ಪಿಡಿದು ಸಿಂಗವ ದನಿಯುಂ ಕೇಳದನ್ನೆಗಂ ಗಜಂಗಳ್ ಪ್ರತಾಪಂಗೆಯ್ಗುಂ ಸಿಂಗದದನಿಯುಂ ಕೇಳ್ದೊಡೆ ಭಯಂಗೊಟ್ಟೋಡುಗುಮಂತೆ ಜಿನಭಕ್ತನ ಧನುರ್ವಿದ್ಯೆಯುಂ ಕಾಣವನ್ನೆವರೆಗವಿನಾಲಿತಘಟೆ ತಾನೆಂದುದಂ ಮೆಟ್ಟಿ ಧನುರ್ವಿದ್ಯೆಯೊಳಾವೆ ಪ್ರವೀಣರೆಂದಿರ್ಪರಾತನ ಶರಾಸನದೊಳಾದ ಪರಿಣತೆಯುಂ ಕಂಡರಪ್ಪೊಡೆ ತಂತಮ್ಮ ದರ್ಪವನುಡುಗುವರೆಂದೀಕಾರಣದಿಂ ॥ ೬೩

ಜಿನಭಕ್ತಂ ಚಾಪವಿದ್ಯಾಪರಿಣತನಧಿಕಂ ವೀರನತ್ಯಂತಧೀರಂ
ಮನುಮಾರ್ಗಂ ಜೀಯ ಭಾಪೆಂದಿವರ ಮನದ ಮಾತ್ಸರ್ಯಮುಂ ದರ್ಪಮುಂ ಭೋಂ
ಕನೆ ಪೋಪಂತಾಗೆ ನಾನಾಸ್ತ್ರವನದಿನಿಳ ಕೈವಾರದಿಂ ಕೂರ್ಮೆಯಿಂ ನೆ
ಟ್ಟನೆ ಬಣ್ಣಿಪ್ಪಂತು ಮಾಪ್ಪೆಂ ಸೆಡೆಗು ತಡೆವುದೇಕೆಂದುಪಾಧ್ಯಾಯನಾಗಳ್ ॥ ೬೪

ಜಿನಭಕ್ತನುಮಂ ಸಮಸ್ತಶಿಷ್ಯರುಮಂ ಕರೆದು ನಿಮ್ಮ ನಿಮ್ಮ ಧನುರ್ವಿದ್ಯೆಯೊಳಾದ ಕೌಶಲ್ಯಮನೆನಗೆ ತೋಱಲ್ವೇಟ್ಪುದೆಂದು ಪೇಳ್ವುದುಮಂತೆ ಗೆಯ್ವೆವೆಂದು ಚಾಪೋಪಾಧ್ಯಾಯರ್ಗೆ ಪೊಡೆಮಟ್ಟು ಮಱುದಿವಸಮೊರ್ವರೊರ್ವರ್ಗೆ ಮಿಗಿಲಾಗಿ ನೆಱೆಯೆ ಶೃಂಗಾರಂಗೆಯ್ದು ದ್ರೋಣಾಚಾರ್ಯರಲ್ಲಿಗೆ ಬರ್ಪುದುಂ ಶಿಷ್ಯನಿಕಾಯಂಬೆರಸು ಪುರದ ಬಹಿರುದ್ಯಾನವನಕ್ಕೆ ಬಂದು ॥ ೬೫

ಇನಿಬರುಮೋರಂತಿರೆ ತೆಂ
ಗಿನಕಾಯ್ಗಳನಿಳಗೆ ಬೀೞಲೀಯದೆ ಧರೆ ಜೀ ।
ಯೆನೆ ಬಾಣನಿಕರದಿಂ ಮೆ
ಲ್ಲನೆ ತರವೇೞ್ಕೆಂದು ಬೆಸಸೆ ಗುರುವಿನ ಮಾತಂ ॥ ೬೬

ಮೀಱದೆ ಕುಮಾರರನಿಬರು
ಮಾಱೆಂದಿಕ್ಕೆಂದು ಸೆಡೆದು ನಿಲ್ಲದೆ ಜಾಣಂ ।
ತೋಱುವೆವಧಿಕರ ಪಟ್ಟಂ
ಪೊಱಿಸುವೆವಮೋಘಮೆಂದು ನಲಿನಲಿದಾಗಳ್ ॥ ೬೭

ಕರಮಾದರದಿಂದಂ ದ್ರೋ
ಣರ ಪಾದಕ್ಕೆಱಗಿ ಕೊಂಡು ಬಿಲ್ಗಳನವರು ।
ರ್ವರೆ ಪೊಗೞೆ ನೆರವಿ ನೋಡು
ತ್ತಿರೆ ತೆಂಗಿನಕಾಯ್ಗಳಂ ಮನೋಹರರೂಪರ್ ॥ ೬೮

ಪಲವುಸೂಱೆಚ್ಚು ದುಃಖಂಬಟ್ಟುಮೆಂತುಂ ನೆಲಕ್ಕೆ ಶರನಿಚಯದಿಂ ದ್ರೋಣರಲ್ಲಿಗೆ ತರಲಾಱದೆ ಒಟ್ಟೈವೋಪ ಕುತ್ತಂಗುಳಯಂತೆ ಸೇದೆಗೆಟ್ಟು, ಜವ್ವನಗಾಳ್ದನಾದ ಮುದುಪನಂತೆ ಪಲ್ಗಡಿಗಿಱಿದು, ಬಿರುದರೊಳ್ ತೊಡರ್ದ ಪಂದೆಯಂತೆ ಕುಂದಿ, ಸಂತತಿಯಿಲ್ಲದ ದ್ರವ್ಯಪತಿಯಂತೆ ಮುಱುಗಿ, ನಾಂದೆರೆಯ ಪೆಟ್ಟೆಯಂತೆ ಕರಗಿ, ರಾಹುವಿಂ ಪಿಡಿವೆತ್ತ ಚಂದ್ರನಂತೆ ಮನದೊಳ್ ಕಂದಿ, ಪಲರ್ಗೆ ಲಜ್ಜಿಸಿ ದ್ರೋಣಾಚಾರ್ಯರ ಮೊಗಮಂ ನೋಡಲಱಿಯದೆ ತೋರ ತೆನೆಯಂತೆ ತಲೆಯಂ ಬಾಗಿರ್ಪುದುಂ, ದ್ರೋಣಾಚಾರ್ಯಂ ತನ್ನೊಳಿಂತೆಂದಂ] [1] ॥ ೬೯

ಕುನರರ್ ಸತ್ಪುರುಷರ್ಗೆ ಕುತ್ಸಿತಗುಣರ್ ಮಾನ್ಯರ್ಗೆ ದುಷ್ಪಾಪಿಗಳ್
ಜಿನಧರ್ಮೋದಯರಪ್ಪವರ್ಗೆ ಬಡವರ್ ಧನ್ಯರ್ಗೆ ಹೀನರ್ ಜಗ
ಜ್ಜನವಂದ್ಯರ್ಗೆ ಕುರೂಪಿಗಳ್ ಬಿಡದೆ ಸೌರೂಪ್ಯರ್ಗೆ ದುರ್ಭಾವದಿಂ
ಮುನಿದುಂ ಕಾಯ್ದು ಮುಟಿಲ್ದು ಮೇಪರನವರಿಂ ತಾನಪ್ಪುದೇಂ ಪೋಪುದೇ [2] ॥

---

1 ಎಂದವರ ಗರ್ವಮಂ ಮುಱಿಯಲ್ವೇಡಿ ನೀಪಿರ್ವರುಮೀವನದ ತೆಂಗಿನ ಕಾಯ್ಗಳಂ ನೆಲನಂ ಮುಟ್ಟಲೀಯದಂತೆ ಅಂತರಿಕ್ಷದೊಳ್ ಶರಸಂಧಾನದಿಂದೆಮ್ಮಲ್ಲಿಗೆ ತನ್ನಿಮೆಂಬುದುಂ ತರಲಾಱದೆ ಕುತ್ತಂಗೊಳಿಯಂತೆ ಬಲಂಗೆಟ್ಟು ಜವ್ವನಗಾಣ್ರನಾದ ಮುದುಕನಂತೆ ಪಲ್ಗಡಿಗಿಱಿದು ಬಿರುದನೊಳ್ ತೊಡರ್ದ ಪಂದೆಯಂತೆ ಕುಂದಿ ನೀರ್ಮುಟ್ಟಿದೆರೆಯ ಪೆಟ್ಟೆಯಂತೆ ಸಡಿಲ್ದು ನಾಂದ ಕೋೞಿಯಂತುಲಿಪಂಗೆಟ್ಟು ಲಜ್ಜಿಸಿ ನೆಲನಂ ನೋಡುತಿರ್ಪುದುಂ ದ್ರೋಣಾಚಾರ್ಯರಿಂತೆಂದರ (ಗ)

2 ಬಪ್ಪುದೇಂ (ಗ)

[ಎಂದು ಮನದೊಳ್ ನಕ್ಕು ಜಿನಭಕ್ತನಂ ಕರೆದು ನೀಂ ನಾಳಿಕೇರ ಫಲಂಗಳನಿಲ್ಲಿಗೆ ನೆಲನಂ ಮುಟ್ಟಲೀಯದಂತರಿಕ್ಷದೊಳ್ ತಡೆಯದೆ ತರ್ಪುದೆಂಬುದು ಮಂತೆಗೆಯ್ವೆನೆಂದು ಪೊಡೆವಟ್ಟು ಬಿಲ್ಲಂ ತಳೆದುಕೊಂಡು ಜೇವೊಡೆಗೆಯ್ದು ॥ ೨೧

ಪರಮಜಿನಚರಣಯುಗಮಂ
ಸ್ಮರಿಯಿಸಿ ತೊದಳಿಲ್ಲದೆರಡುಗೇಳದೆ ಮನದೊಳ್ ।
ಜರಿಯದೆ ಕೊಂಡೊಡೆ ಕರಮು
ಬ್ಬರಿಸದೆ ಬಱಿದಂತೆ ಪೆಟ್ಟುವೆರ್ಚದೆ ನಯದಿಂ ॥ ೨೨

ಶರಸಂಧಾನಮೆಂಬಲಗಿಂ ತೆಂಗಿನಕಾಯ್ಗಳಂ (ಕೊಯ್ದು) ನೆರೆದ ನೆರವಿ ಮೆಚ್ಚು ಭಾಪೆಂದು ಝೇಂಕರಿಸೆ ದ್ರೋಣಾಚಾರ್ಯರಲ್ಲಿಗೆ ನೆಲನಂ ಮುಟ್ಟಲೀಯದೆ ಬಾಣನಿಚಯದಿಂ ತರ್ಪುದುಂ ನಾಡುಂ ಬೀಡುಂ ಜಿನಭಕ್ತನಂ ಬಿಲ್ಲ ಬಲ್ಮೆಗೆ ಸಂತೋಷಂಬಟ್ಟು ಪೊಗೞುತ್ತುಮಿರ್ದರಿರ್ಪುದುಂ ದ್ರೋಣಾಚಾರ್ಯರ್ ಛಾತ್ರನಿಕುರಂಬಂಬೆರಸು ಮನೆಗೆವಂದು ಸುಖದಿಂದಿರ್ಪುದುಂ ಛಾತ್ರರೆಲ್ಲಂ ಪುರುಡಿಸಿ ॥ ೨೩

ಇವನೊಳ್ ಮುಂ ಕೆಳೆಗೊಂಡು ಕೂಡಿ ಬೞಿಕಂ ಕೂರ್ತಂತೆಗೆಯ್ದೀ ತನಂ
ಜವನಂತಪ್ಪ ಮದಾಂಧಸಿಂಧುರದ ಮುಂದಣ್ಗೊಯ್ದು ನೀನೀಗಳೇಂ
ದ್ರಮನೋರಂತಿರೆ ವೀರದಿಂದಡಸಿ ಪೊಯ್ಯೆಂದಾದರ್ ಪಿಂಗಿದರ್ ನೋ
ಡುವೆವೀದೂರ್ತನನಾಗಳಂ ತುಳಿವುದಕ್ಕೆಪಚ್ಛದೆಮಂತಣಂ (?) ॥ ೨೪

ಎಂದು ತಮ್ಮನಿಬರುಂ ಸಮಕಟ್ಟೆ ಪುಸಿಗೂರ್ಮೆಯಿಂ ಜಿನಭಕ್ತನಂ ನಂಬಿಸಿ ಕೆಲವಾನುಂದಿವಸಂಪೋಗಲಿತ್ತೊಂದುದಿವಸಂ ಪೊೞವೊೞಲೊಳಾಡುತ್ತುಮಿರ್ಪುದುಂ ಅವರ ಬಗೆಗೊಡಂಬಟ್ಟಂತೆ ಮದದಿಂ ಕಣ್ಗಾಣದವರ ಬಯಸುವ ಮದಗಜಮೆ ಮೆಯ್ಯಱಿಯದೆ ಕಂಬಮಂ ಮುಱಿದುಕೊಂಡು ಗಾಳಿಯಂತೆ ವೇಗಿಯುಂ ನಿಚ್ಚಗಲಿಯಂತೆ ನಿಶ್ಶಂಕನುಂ ಕಳ್ಗುಡಿಕನಂತೆ [1] ತೀವ್ರನುಂ ಮೂರ್ಖನಂತವಿವೇಕಿಯುಂ

1 ಕಳ್ಗುಡುಹಿಯಂತೆ (ಕ. ಬ.)

ತಣಿಯುಂಡ ಪಾರ್ವನಂತಾಕಾಶದೃಷ್ಟಿಯುಂ ಗ್ರಾಮಣಿಯಂತೆ ನಿಷ್ಕರುಣಿಯುಂ ಕಿರಾತನಂತೆ ಕ್ರೂರನುಮಾಗಿರ್ಪ ಸೊಕ್ಕಿದಾನೆಯುಂ ಕಂಡು ||

ಜಿನಭಕ್ತಂ ವೀರದೊಳ್ ಫಲ್ಗುಣನನಿಱುಸುವಂ ಧಾರಿಣೀಪೂಜ್ಯನಿಂತೀ
ತನೆ ಪೋಗರ್ಪಂ ಮಿಕ್ಕರೇವರ್ ದ್ವಿಪವರನದಟಿಂ ತಾಗೆ ಬಂದೆಂದು ದೂರ್ತರ್
ಮುನಿಸಿಂ ಕೂರ್ತಂತೆಗೆಯ್ದುತ್ತರಿಸಿ ಪೊಗೞ್ವುದುಂ ಬರ್ಪ ಪೇರಾನೆಯಂ ಭೋಂ
ಕನೆ ವೀರಂ ಶಾಂತಿತೀರ್ಥೇಶ್ವರಪದಯುಗಮಂ ಚಿತ್ತದೊಳ್ ತಾಳ್ದಿ ಧೀರಂ||

ತನ್ನ ಕೆಲದೊಳರ್ದ ತಿರಿದುಂಬ ದುಲ್ಲಟಿಯುಂ ಕೊಂಡು ಗಜಮನ ಜಮನಿಡುವಂತೆ ಭಯುಮಿಲ್ಲದಿಡುವುದುಂ ಕರಿ ನರಿಯಂತೆ ಕೀಱುಟ್ಟಾಬಟ [1] ಭಯದಿಂದಿದಿರಾಗಿ ಬರಲಣ್ಮದೆ ಮಗುೞ್ದು ತನ್ನ ನೆಲೆಗೆ ಪೋಯಿತಿತ್ತಲ್ ಜಿನಭಕ್ತಂ ಹರಿಕಾಂತನಂತೆ ಮುಯ್ವಂ ನೋಡದೆ ಕುಪ್ಪಕುಱು [2] ಯಾಡುವ ಮಕ್ಕಳಂತೆ ತನ್ನಂ ಪೊಗೞ್ದುಕೊಳ್ಳದೆ ನವಿಲಂತೆ ತನ್ನಾಟಕ್ಕೆ ತಾನೆ ನಲಿಯದೆ ಸಮುದ್ರದಂತೆ ಗಂಭೀರನಾಗಿಪ್ಪುದುಂ ದ್ರೋಣನ ಚಟ್ಟರೆಲ್ಲರುಂ ಜಿನಭಕ್ತನ ಪುಣ್ಯದ ಮಹಿಮೆಗಂ ಮನದ ಧೈರ್ಯಕ್ಕಂ ಚೋದ್ಯಂಬಟ್ಟು ಮನದ ಕೋಪಮುಂ ಪತ್ತುವಿಟ್ಟು ಸಮ್ಯಕ್ತ್ವಚೂಡಾಮಣಿಗೆ ಮನದೊಳ್ ಪೊಡೆವಟ್ಟು ದ್ರೋಣಾಚಾರ್ಯರ್ಗೆ ತಮ್ಮ ದುರ್ಭಾವಮುಮಂ ವಾತ್ಸಲ್ಯರತ್ನಾಕರನ ಭಾಗ್ಯದ ಪೆಂಪುಮಂ ಪೇೞ್ವುದುಂ ದ್ರೋಣನಿಂತೆಂದಂ] [3] || ೩೨

[1] ಕೀಳಿಜ್ವಾಬಿಳ (ಕ. ಖ.) [2] ಕುರಿ (ಕ. ಖ.)

[3] ಎಂದು ಜಿನಭಕ್ತನ ಮೊಗಮಂ ನೋಡುವುದುಂ ಅಂತರಿಕ್ಷದೊಳ್ ತೆಂಗಿನ ಕಾಯ್ಗಳಂ ಶರಸಂಧಾನದಿಂ ದ್ರೋಣರಲ್ಲಿಗೆ ತಪ್ಪುದುಂ ಛಾತ್ರರೆಲ್ಲ ಮಾನಕಷಾಯಮಂ ಬಿಟ್ಟು ಭಾವಯುತದಿಗಂಬರದಾಸನ ಮೊಗಮಂ ನೋಡಿ
ಪರಮಾರ್ಥಮೆಂತುಮಿಂತಂ | ಪರಮಜಿನೇಶ್ವರನ ಪದಮ ಕಟ್ಟಿದ ಘೋಣಾ |
ಗಿರೆ ನಂಬುವೇಡ ನಿನಗಾರ್ | ದೂರೆ ಪೇಳ್ಕೆ ಸುಕವಿನಿಕರಪಿಕಮಾಕಂದಾ ||
ವಿನುತಜಿನಾಗಮರಸಸೇ | ವನೆಯೊಳ್ ನಿನ್ನಂತು ತುಷ್ಟನಾವಂ ನಿನ್ನಂ |

ನವನವದಿಂದೆ ಧಾರಿಣಿ ಸುವಸ್ತು ಲತಾಲಲಿತಾಂಗಿಯರ್ ಮಹೋ
ತ್ಸವಮತಿರಾಗಮುಣ್ಮೆ ಮಹಿಮಾಸ್ಪದಮುನ್ನತಿ ಪೆಂಪು ಸೌಖ್ಯ ಮಿ
ಕ್ಕವಿರಳಬುದ್ಧಿ ವೀರ್ಯಮಭಿವೃದ್ಧಿ ಮತಂಗಜಚಯಂ ಹಯಾಳಿ ಸಂ
ಭವಿಸುಗುಂ ಮುನ್ನುಪಾರ್ಜಿಸಿದ ಪುಣ್ಯದಿನಣ್ಣ ಮಹೀತಳಾಗ್ರದೊಳ್ ॥

ನುಡಿಯದೆ ಸಾರ್ದು ಕೈಮುಗಿದು ಸೇವಿಸಿ ಘುಮ್ಮನೆ ಬಾಯ್ಗೆ ಬಂದುದಂ
ನುಡಿದೊಡಮಂತದೊಳ್ನುಡಿ ವಿರೋಧಿಬಲಕ್ಕಿದಿರಾಗಿ ದರ್ಪದಿಂ
ಮಡಿ [1] ದೊಡಮಂತದಾರಿಪುಗೆ ತಲ್ಲಣಮರ್ಥಿಗೆ ಬೇಡಿದರ್ಥಮಂ
ಕುಡುವೊಡಮಂತದಕ್ಷಯಮೆನಲ್ ನೆಱೆ ಬಣ್ಣಿಪರಾರೊ ಪುಣ್ಯಮಂ ॥ ೭೯

ಬಲ್ಲದೆ ಕಾಡಿ ಬಂಡಿ [2] ಸುವೊಡಂ ನಿಲಲಾಱದೆ ಸಲ್ಲತಾಂಗಿಯರ್
ಮೆಲ್ಲನೆ ಪೊರ್ದಿ ಕಾಲ್ವಿಡಿದು ಬೇಡುವುದುಂ [3] ದೆಸೆಯೆಲ್ಲಮಂಜಿ ತ
ಳ್ವಲ್ಲದೆ ಬಂದು ನಿಂದು [4] ಬೆಸಕೆಯ್ವುದುಮಬ್ಧಿಯೊಳಿರ್ದ ರತ್ನಮುಂ
ನಿಲ್ಲದೆ ಬಂದು ಪೊರ್ದುವುದು ಸಂಚಿತಪುಣ್ಯಫಲಂಗಳಲ್ಲವೇ ॥ ೮೦

[ಉದಯದಿಂ ತೊಡಗಿ ನೇಸಱ್ ಪಡುವನ್ನೆಗಂ ಊರವರ್ ಕೊಡಂಗೊಂಡಡಕಿದೊಡಂ ತುಂಬುರ್ಚಿ ಕೆಯ್ಗಳ್ ಪರಿಯಿಸಿದೊಡಂ ಪಶುಮೊದಲಾದನೇಕಜೀವಂಗಳುಂಡೊಡಂ ಕೆಱೆಯ ನೀರ್ ಮೞೆಯ ನೀರುಳ್ಳನ್ನವರಂ ತವೆಯದು ಮೞೆ ಪೋಗಲೊಡಮಾರ್ ಬಂದು ರಕ್ಷಿಸುವೊಡಂ ಬತ್ತುಗುಮಂತೆ ಪುಣ್ಯಾಧಿಕನಪ್ಪ ಮಹಾತ್ಮಂಗೆ ಸದ್ವಿದ್ಯೆಗಳುಂ

ತನುಪಮನಾವಂ ಸಲೆ ಮೇ | ದಿನಿಯೊಳ್ ಕೇಳ್ಸುಕವಿನಿಕರಪಿಕಮಾಕಂದಾ ॥
ನರವಿ ಮಱ ಭಾಱ್ಪ ಭಾಱ್ಪನೆ | ಕರಿಪತಿಗಿದಿರಾಗಿ ಹಿರಿದು ತಾಗಿದ ಪೆಂಪ |
ಚ್ಚರಿ ಮನದೊಳ್ ಜನನಿರಲ | ಚ್ಚರಿಯುಂಟೆ ಸುಕವಿನಿಕರಪಿಕಮಾಕಂದಾ ॥
ಅರಸನ ಕುಮಾರ ಕೈಯಿ | ಕ್ಕಿರೆ ಧರ್ಮದೊಳಾದ ಮೋಹದಿಂ ನಿನ್ನಂತಾರ್ |
ಹಿರಿದೀ ಭವದೊಳ್ ಮಾಱಂ | ತರಪರಿಸದೆ ಸುಕವಿನಿಕರಪಿಕಮಾಕಂದಾ ॥
ವಾತ್ಸಲ್ಯರತ್ನಾಕರನೆಂಬ ಪೆಸರ್ ನಿನಗೊಪ್ಪುಗುಂ ನೀನೆ ಪುಣ್ಯಾಧಿಕಂ ಪುಣ್ಯಾಧಿಕರ್ಗೆ ತೀರದುದು ಲೋಕದೊಳಾವುದೆಂಬುದುಂ ದ್ರೋಣಾಚಾರ್ಯರಿಂತೆಂದರ್ ॥ (ಗ)

1 ನಡೆ (ಗ) 2 ಕಟ್ಟಿ (ಗ) 3 ಬೇಗದಿಂದಕೇಳ ಸಲ್ಲಲಿತಾಂಗಿಯರ್ ನೆರೆದು ಕೂಡುವುದುಂ (ಗ) 4 ಬಂದು (ಗ)

ವೀರಮುಂ ಧನಮುಂ ಭೋಗಮುಂ ಬುದ್ಧಿಯುಮೊಂದುತ್ತರಮಾಗೆ ಪೆರ್ಚುಗುಂ ಆಪುಣ್ಯಮಿಲ್ಲದಾಗಳನಿತುಪ್ರಯತ್ನಪರನಾದೊಡಂ ಪರಿಭವಮುಂ ಕಷ್ಟವೃತ್ತಿಯುಮಕ್ಕುಮೆಂದು ಧರ್ಮದೊಳಾದ ಮಹಿಮೆಯುಮಂ ಕರ್ಮದೊಳಾದ ಪೊಲ್ಲಮೆಯುಮಂ ಪೇೞ್ದು ಮತ್ತಂ ಪಾಪದೊಳಾದ ಹೀನತೆಯುಮನಿಂತೆಂದು ಪೇೞ್ದಂ ॥ ೮೧

ಸಿರಿಗೆ ನಿಲಯುಂ ಸೂರ್ಯಂ ಮಿತ್ರಂ ಸರಸ್ವತಿಯಿಕ್ಕೆಯಾ
ಗಿರಲುಮರವಿಂದಂಗಳ್ ಶೀತಾಂಶು ಭೋಂಕನೆ ಮೂಡಿ ನಿ
ತ್ತರಿಸಿ ಬಲದಿಂ ಮತ್ತಂ ಪೆರ್ಚಿಂದಮಿರ್ದಾವು ದರ್ಪದಿಂ
ಕೊರಗಿ ಮುಗಿಯಲ್ [1] ಕರ್ಮಕ್ಕಡ್ಡಂ ಬರಲ್ ಬಲಮುಳ್ಳರಾರ್ ॥ ೮೨

ಬಲದೊಳಧಿಕಂ ಕ್ರೂರಂ ಬಲ್ಲಾಳ್ವಿವೇಕಪರಾಯಣಂ
ಕುಲದೊಳಧಿಕಂ ವಿದ್ಯಾಧೀಶಂ ವಿಯಚ್ಚರವಲ್ಲಭಂ
ಕುಲಿಶವಿಭವಂ ಧೀರಂ ಲಂಕೇಶ್ವರಂ ಮೊದಲಾಗಿ ದು
ರ್ಮನದಿನಱಿದಂ ಕರ್ಮಕ್ಕಡ್ಡಂಬರಲ್ಕೆ ಸಮರ್ಥರಾರ್ ॥ ೮೩

ಅದುಕಾರಣದಿಂ ಕರ್ಮಮುಳ್ಳಂಗೆ ನೇಣಂ ಪಿಡಿದೊಡಂ ಪಾವಾಗಿ ತಿಂಗುಂ ಪೊನ್ನಂ ಪಿಡಿದೊಡಂ ಮಣ್ಣಾಗಿರ್ಕುಂ ಆಯುಮುಳ್ಳೊಡಂ ರುಜಾಧಿಕನಾಗಿ ನಮೆಗುಂ ಪಲವುಂ ಶಸ್ತ್ರಶಾಸ್ತ್ರವಿದ್ಯೆಗಳಂ ಕಲ್ತೊಡಂ ಫಲಮಿಲ್ಲಂಱಿಯುವೆಂದು ಮಿಥ್ಯೆಯುಂ ಪತ್ತುವಿಟ್ಟಿಳ್ಕದನುಳ್ಳಂತೆ ನುಡಿವುದು ॥ ೮೪

ಧರ್ಮಮೆ ತಂದೆ ಧರ್ಮಮೆ ಮನೋಹರಿ ಧರ್ಮಮೆ ಬಂಧುವರ್ಗಮೊ
ಳ್ಧರ್ಮಮೆ ಸೋದರಂ ನೆಗೞ್ದ ಧರ್ಮಮೆ ಸತ್ಸಖಿ ದಿವ್ಯಮಪ್ಪ ಸ
ದ್ಧರ್ಮಮೆ ಪಜ್ಜನುತ್ತಮದ ಧರ್ಮಮೆ ಭಾವಿಪೊಡಜ್ಜನೆಲ್ಲಿಯುಂ
ಧರ್ಮಮೆ ಮುಖ್ಯಮೆಂದು ಪರಿಭಾವಿಸುತಿರ್ಕೆ ಸುಖಾರ್ಥಿಯಪ್ಪವಂ ॥

ಧರ್ಮದಿನಕ್ಕುಮೊಳ್ಗುಣಿಸುಮುಳ್ಗಣಮುಂ(?)ಸುರಲಾಜಭೋಗಮುಂ
ಧರ್ಮದಿನಕ್ಕುನುನ್ನತಿಯುಮಾಜ್ಞೆಯುಮೊಳ್ನುಡಿಯುಂ ವಿವೇಕಮುಂ

---

[1] ಮುಗಿವವು (ಕ. ಬ.)

ಧರ್ಮದಿನಕ್ಕುಮಪೂರ್ವಮದಟುಂ ಸುಜನತ್ವಮುಮುನ್ನತಿಕ್ಕೆಯುಂ
ಧರ್ಮದಿನಕ್ಕುಮಗ್ಗಳದ ತೇಜಮುಮಕ್ಷಯಚಾರುಸೌಖ್ಯಮುಂ ॥ ೮೬

ಎಂದಾದ್ರೋಣಾಚಾರ್ಯರ್ ಛಾತ್ರರ್ಗೆ ಧರ್ಮದ ಮಹಾಗುಣಮುಮಂ ಪಾಪದ ಮಹಾಕಷ್ಟಮುಮಂ ಲೇಸಾಗೆ ತತ್ಸ್ವರೂಪದಿಂದಿಷ್ಟಂ ಧರ್ಮೇಣ ಯೋಜಯೇತ್ ಎಂಬ ನೀತಿಶಾಸ್ತ್ರದೋಜೆಯಂ ತೋಱಿ ಪೇೞ್ವುದುಮವರ್ ತಂತಮ್ಮ ಮನದ ಕೋಪಮನುಡುಗಿ ಜಿನಭಕ್ತನಂ ಕ್ಷಮೆಗೊಂಡು ಪರಮಮಿತ್ರರಾಗಿ ದ್ರೋಣಾಚಾರ್ಯರ್ಗೆ ಪರಮಭಕ್ತರಾಗಿ ವಿದ್ಯಾಭ್ಯಾಸಂಗೆಯ್ಯುತ್ತುಂ ಸುಖಸಂಕಥಾವಿನೋದದಿಂದಿರ್ಪುದುಮೊಂದುದಿವಸಂ] [1] ॥ ೮೭

ಆವನಾದೊಡಮಕ್ಕೆ ಚಂದ್ರಕವೇಧಮಂ ಮನದರ್ತಿಯಿಂ
ದೋಪದೆಚ್ಚು ಜಗಕ್ಕೆ ಚಾಪದ ಬಲ್ಮೆಯಂ ಮೆಱೆವಂಗೆ ಲ
ಕ್ಷ್ಮೀವಿಳಾಸೆಯನುನ್ನತಿಕ್ಕೆಯ ಚಂದ್ರಲೇಖೆಯನರ್ತಿಯಿಂ
ದೀವೆನೆಂದು ಮಹೀಶ್ವರಂ ತೊಡಳಿಲ್ಲದಾಪುರಮಧ್ಯದೊಳ್ ॥ ೮೮

ಗೋಸಣೆಗಳವುದುಂ [2] ಪ್ರಮಾಥಿಕುಮಾರಂ [ಭಿಕ್ಷಾನ್ನಮಂ ನದೀತೀರದೊಳುಣಲೆಂದು ಪೋಗುತ್ತುಮಿರ್ದು ಗೋಸಣೆಯಂ ಕೇಳ್ದು ತಡವಿಲ್ಲದೆ ಪರಿತಂದು ಗೋಸಣೆಯಂ ಪಿಡಿವುದುಮವರ್ ಜಿನಭಕ್ತಂಬೆರಸು ಸಿಂಹಸೇನಮಹಾರಾಜನಲ್ಲಿಗೆವಂದು ಗೋಸಣೆಯನೀತಂ ಪಿಡಿದನೆಂದು ತೋಱಿ ಬಿನ್ನಪಂಗೆಯ್ವುದುಂ ಅರಸಂ ಪ್ರಮಾಥಿಕುಮಾರನಂ ಕಂಡು॥

ಇವನೀಚಂದ್ರಕವೇಧಮ
ನವಯುವದಿಂದೆಸೆಗುಮಲ್ಲಿ ತೊಡಳಿಲ್ಲ ಮಹೀ ।
ಧವತನಯನಕ್ಕುಮಲ್ಲದೊ
ಡಿವಗಿಂತೀರೂಪುಶೌರ್ಯಮಿಂತೊಪ್ಪುಗುಮೇ ॥ ೯೦

---

1 ಎಂದು ಪುಣ್ಯದೊಳಾದ ಫಲಮಂ ಪೇಳ್ವುದುಂ ಎಲ್ಲರುಂ ಪ್ರಮಾಥಿಕುಮಾರಂಗೆ ಮಿತ್ರರಾಗಿರ್ಪುದುಂ ಒಂದುದಿವಸಂ (ಗ)

2 ಗೋಸಣೆಗೊಳ್ವುದುಂ (ಗ)

ಅದಟಂ ಪ್ರತಾಪಿ ಶೌರ್ಯಾ
ಭ್ಯುದಯಂ ಜಿನಪಾದಭಕ್ತನಮಲಚರಿತ್ರಂ ।
ಮದನಾವತಾರನರಿಬಲ
ಮದಭಂಜನನೀತನೆಮ್ಮ [1] ಕಿಱುಕುಳನಲ್ಲಂ ॥ ೯೧

ಎಂದು ಸಿಂಹಸೇನಮಹಾರಾಜಂ ವಾತ್ಸಲ್ಯರತ್ನಾಕರನ ಮೂರ್ತಿಯಂ ನೋಡಿ ನಚ್ಚಿ ಮೆಚ್ಚಿ ಮನದೊಳ್ ಪೊಗೞ್ದು ಕಯ್ಯಂ ಪಿಡಿದೊಡಗೊಂಡು ಪೋಗಿ ಮಜ್ಜನಭೋಜನತಾಂಬೂಲವಸ್ತ್ರಾಭರಣಾದಿಗಳಿಂ ಸಂತೋಷಂಬಡಿಸಿ ಮಱುದಿವಸಂ ದ್ರೋಣಾಚಾರ್ಯರ್ವೊದಲಾಗೆ ಚಾಪವಿದ್ಯಾಪರಿಣತರುಮಂ ವಿದ್ವಜ್ಜನಮುಮಂ ಬರಿಸಿ ಚಂದ್ರಕವೇಧ್ಯಮನೀತನೆಚ್ಚಪಂ ಪರೀಕ್ಷಿಸಿಮೆಂಬುದುಮವರಂತೆ ಗೆಯ್ವೆಮೆಂದು ನೋಡುತ್ತಿರ್ಪುದುಂ] [2] ॥ ೯೨

ಸೆರಗಂ ಪಾರದೆ ಬೆಚ್ಚದಳ್ಕದೆ ಭಯಂಗೊಂಡೋಡದಲ್ಲಾಡದೊ
ರ್ವರನಾಶ್ರಯಿಸದೆ ದೃಷ್ಟಿಮುಷ್ಟಿಶರಸಂಧಾನಂಗಳಿಂ ಭೂಪನ
ಚ್ಚರಿವಟ್ಟದ್ಭುತಮೆಂದು ತೂಗೆ ತಲೆಯಂ ದ್ರೋಣಂ ಮನಂಗೊಂಡು ಸು
ಸ್ವರದಿಂ ಬಣ್ಣಿಸೆ ನೋಟಕರ್ ಪೊಗೞೆ ಭಾಪ್ಪೈಯೆಂದು ಸಂತೋಷದಿಂ ॥

ಚಂದ್ರವೇಧಮನಿಸುವುದುಂ [ಸಿಂಹಸೇನ ಮಹಾರಾಜಂ ಮಹಾವಿಭೂತಿಯಿಂದರ್ಧರಾಜ್ಯಮುಮಂ ಪ್ರತಿಜ್ಞೆಯಿರ್ದ ಚಂದ್ರಲೇಖೆಯುಮಂ ಕುಡುವುದುಂ ಕೈಕೊಂಡು ಪ್ರಮಾಥಿಕುಮಾರಂ ಪೂರ್ವೋಪಾರ್ಜಿತಪುಣ್ಯದ ಫಲದಿಂ ಚಂದ್ರಲೇಖೆಯೊಳ್ ಕೂಡಿ ಮಾಳವಾರ್ಧಾಧೀಶ್ವರನಾಗಿ ಸುಖದಿಂ] [3] ರಾಜ್ಯಂಗೆಯ್ಯುತ್ತುಮಿರ್ಪುದುಂ ॥ ೯೪

---

1 ಈತನೆಮಗೆ (ಗ) 2 ಪಿಡಿದಂ (ಗ)

3 ಅದಟಂಪ್ರತಾಪಿ....ಕಿಱುಕುಳನಲ್ಲಂ (ಪದ್ಯ ೯೧). ಎಂದು ಸಿಂಹಸೇನ ಮಹಾರಾಜಂ ಚಂದ್ರಲೇಖೆಯುಮನರ್ಧರಾಜ್ಯಮುಮಂ ಕುಡೆ ಕೈಕೊಂಡು (ಗ)

ಅರಸಂಗೊರ್ವಂ ಬಂದ
ಚ್ಚರಿ ದೇವ ಮಹಾಪ್ರತಾಪದಿಂ ಕೌಶಾಂಬೀ |
ಪುರಮಂ ಪರಮಂಡಳಿಕರ್
ನೆರೆದು ಭಯಂಗೆಯ್ದು[1] ಮುತ್ತಿ ಕಾದಿಪರಿನ್ನುಂ ॥ ೯೫

ದಂತಬಲನೃಪತಿ ಕೋಂಟೆಯು
ನೆಂತುಂ ಕೊಳಲೀಯದೊಳಗೆ ಪೆರ್ಬಲದಿಂದಂ |
ಭ್ರಾಂತಿಂ ಕಾದುತುಮಿರ್ದಪ
ನಿಂತಲಸದೆ ಪತ್ತಿ ಕಾದುವನ್ನರನಱಿಯೆಂ ॥ ೯೬

[ಪೊಱಗೆ ಬಳಸಿರ್ದ ರಿಪುನೃಪ
ರಱಿಯಟ್ಟೆ ತಗುಳ್ದು ಪೊಣ್ದು ಪೋಗದೆ ಚಲದಿಂ |
ಕಱುಪಿಂ ಕಾದುತುಮಿರ್ದಪ
ರಱಿದೆನಪರಪೋರ್ಗಲಱಿಯಲಾತನ ಪುಣ್ಯಂ ॥ ೯೭

ಎಂಬ ಮಾತನರಸನ ಕೆಲದೊಳಿರ್ದ ಪ್ರಮಾಥಿಕುಮಾರಂ ಕೇಳ್ದು ಸಿಂಹದಂತೆ ಗರ್ಜಿಸಿ ಮುನಿದು ಸಿಂಹಸೇನಮಹಾರಾಜಂಗಱಿಪಿದೊಡೆ ಪೋಗಲೀಯನೆಂದು ತತ್ಪುರೋದ್ಯಾನನಿವಾಸಿಯಪ್ಪ ಧರ್ಮೋಜ್ಜ್ವಳನೆಂಬ ಯಕ್ಷಂ ಕೊಟ್ಟದೃಶ್ಯಾಂಜನಪ್ರಯೋಗದಿಂ ನಡುವಿರುಳಪ್ಪಾಗಳ್ ತಾನುಂ ನಲ್ಲಳುಂ ಸ್ಯಂದನಾರೂಢರಾಗಿ ಪುರದಿಂ ಪೊಱಮಟ್ಟು ॥ ೯೮

ನಿಲ್ಲದೆ ಮುನಿಸಿಂ ಸಾಹಸ
ಮಲ್ಲಂ ರಿಪುಬಲಮನಲೆಯಲೆಂದದಟಂದಂ |
ತಲ್ಲಣಿಸದ ಗಂಡಂ ಕೊಂ
ಕಿಲ್ಲದ ಕಲಿ ಕುಸಿಯದದಟನೂರ್ಜಿತತೇಜಂ ॥ ೯೯

ಬರುತ್ತುಂ ನದೀನಿಕರಂಗಳಂ ಕಳೆದು ಧೂರ್ತನಂತೆ ಮೇಲೆ ಪಾಯ್ವ ಪುಲಿಗಳಂ ಪಿಸುಣನಂತೆ ಜೆನುಂಗುವ ನೊಣಗಳಂ ದುರ್ಜನನಂತೆ ಕವಿವ ಸೀರ್ನಾಯ್ಗಳಂ ದಾಯಾದನಂತೆ ಮಲೆಪ ಕಾಡೆರ್ಮೆಗಳಂ

---

[1] ಭರಂಗೆಯ್ದು (ಕ. ಬ.)

ಕೂರ್ತ ತೊತ್ತಿನಂತೆ ಚಿತ್ತಮನಱಿಯದೆ ಸೀಳ್ವ ಸೀರ್ಕರಡಿಗಳಿಂದ ದ್ಭುತಮಪ್ಪ ಭೀಮವನಮೆಂಬ ಪೇರಡವಿಯೊಳಗೆ ಪೊಕ್ಕು ತನಗಿದಿರಾಗಿ ಗಜಱಿ ಗರ್ಜಿಸಿ ಪಾಯ್ವ ಸಿಂಹಮಂ ಚಕ್ರಾಘಾತದಿಂ ಶಾರ್ದೂಲನಂ ಶರವೇಧದಿಂ ಮದಾಂಧಸಿಂಧುರಮಂ ಶರಸಂಧಾನದಿಂ ದೃಷ್ಟಿವಿಷಮಪ್ಪ ನಾಗರಂ ಧ್ವನಿಯೆಂಬ ಶರದಿಂದೋಡಿಸಿ ವಲ್ಲಭೆಗೆ ತನ್ನ ಬಿಲ್ಲ ಬಲ್ಮೆಯಂ ತೋಱುತ್ತುಂ ಮೆಲ್ಲಮೆಲ್ಲನೆ ಬರುತ್ತಿರ್ಪುದುಂ ॥ ೧೦೦

ಆನಟ್ಟಡವಿಯೊಳುರ್ವಿಗಂ
ಹೀನಗುಣಂ ಪಾಪಯುಕ್ತನವಿಚಾರಿ ಸದಾ ।
ಸ್ತೇನವಿನೋದಂ ಚೋರಜ
ನಾನಂದಂ ಭೂಮಿಪಾಲನಪಗತಶೋಚಂ ॥ ೧೦೧

ಸುವೇಗನೆಂಬಂ ದಾಯಾದರ್ ಬಲ್ಲಿದರಾಗಿ ರಾಜ್ಯಮಂ ಕೊಂಡೊಡೆ ತದ್ವನಮಂ ಪೊಕ್ಕು ಕಳ್ಳರೆಲ್ಲರುಮಂ ಕೂಡಿಕೊಂಡು ॥ ೧೦೨

ದ್ರೋಣಾಚಾರ್ಯರ ರೂಪಂ
...ಮಾಡಿಟ್ಟು ಪಲವು ಪುಷ್ಪಾವಳಿಯಿಂ ।
ಮಾಣದೆ ಪೂಜಿಸಿ ನೆನೆದ
ಕ್ಷೂಣನ ಪದಪಂಕಜಂಗಳಂ ಚೋರೇಶಂ ॥ ೧೦೩

ನಿಚ್ಚಲುಂ ಬಿಲ್ಲಂ ಶ್ರಮಂಗೆಯ್ಯುತ್ತಿರ್ಪುದುಂ ॥ ೧೦೪

ಕರಮಲ್ಲದೆ ಕೋದಂಡದೊ
ಳರಡಿಲ್ಲದೆ ಘಲುಗುಣಂಗಮಾತನೆ ಜಗದೊಳ್ ।
ಪರಿಣತನೆನಿಸಿದನದಱಿಂ
ಗುರುಪದಭಕ್ತಂಗೆ ಸಾಧ್ಯಮಲ್ಲದುದುಂಟೇ ॥ ೧೦೫

ಅಂತು, ಬಿಲ್ಗೊಳತಿಜಾಣನುಂ ಪ್ರವೀಣನುಮೆನಿಸಿದ ಸುವೇಗಂ ಪ್ರಮಾಥಿಮಹಾರಾಜನ ಕೆಲದೊಳಿರ್ದ ಚಂದ್ರಲೇಖೆಯಂ ಕಂಡು ಕಣ್ಬೇಟಂಗೊಂಡು, ಜ್ವರಮಾದರಂತೆ ದಾಹದಿಂ ಮೆತ್ತಿ, ಕಾಯ್ದು ಕಬ್ಬುನದಂತೆ

ಮೆಯ್ಕಾಯ್ದು, ಗಾಳಿಮುಟ್ಟಿದರಲೆಯಂತೆ ನಡುಗಿ, ಗ್ರಹಂಪಿಡಿದ ಮನುಷ್ಯನಂತೆ ಪರವಶನಾಗಿ, ಕೊಂತಗೊಂಡವನಂತೆ ಜೋಲ್ದು, ಬೇಸಗೆಯೊಳ್ ಪಯಣಂಬೋಪನಂತೆ ಬೆಮರ್ತು, ಬಿಸಿಲೊಳಿರ್ದ ಶಿಶುವಿನಂತೆ ಕೊಱಗಿ, ಕಱು ಸತ್ತ ಪಶುವಿನಂತೆ ಮಱುಗಿ, ದಿವ್ಯಮಂ ಪಿಡಿದು ಸೋಲ್ತವನಂತೆ ಕೊಱಗಿ, ಬೇಗೆವೋದ ಬೆಟ್ಟದಂತೆ ಕಂದಿ, ನುಯ್ಗೊಟ್ಟ ಪಟ್ಟಪುಲ್ಲೆಯಂತೆ ಬೆದಱಿ, ಬೇತಾಳನಂ ಕಂಡ ಪಂದೆಯಂತೆ ಮೂರ್ಛೆವೋಗಿ, ಬಲವಿಲ್ಲದ ಕಾಳಗದಂತೆ ಕಗವೆ ಸೋಲ್ತು, ಶೀತಳಮಪ್ಪೆಡೆಯೊಳ್ ಪಡಲುಂ ಗಾಳಿಗೆ ಮೆಯ್ಯನೊಡ್ಡಲುಂ ಚಂದನಕರ್ಪೂರಂಗಳಂ ಮೇಲೊಟ್ಟಿಕೊಳಲುಂ ತಣ್ಣನಿರ್ಪ ನೀರಂ ಪೊಕ್ಕಿರಲುಂ ಮೇಲೆಱಚಿಕೊಳಲುಂ ಮನಮಾಗಿ ವಿರಹಾನಳನಿಂದಿರಲಾಱದೆ] [1] ॥ ೧೦೬

ಸಲ್ಲಲಿತಾಂಗಿಯುನ್ನತಿಯನಾರ್ಪೊಗೞರ್ ಬಗೆವಂದು ಕಾಮನಂ
ಬಲ್ಲದೆ ಕಾಮದೇವನಧಿದೇವತೆಯಲ್ಲದೆ ಕಾಮನಿರ್ಪ ಬೀ
ಡಲ್ಲದೆ ಕಾಮದೇವನ ಪತಾಕಿನಿಯಲ್ಲದೆ ಕಾಮನಾಡುವ
ಚ್ಚಲ್ಲದೆ ಕಾಮನೇಱುವ ಮದದ್ವಿಪಮಲ್ಲದೆ ಕಾಂತೆಯಲ್ಲಿವಳ್ ॥ ೧೦೭

ಮನಸಿಜನಾರಡಿಕಾಱಂ
ಮುನಿಸಿಂದೀಕಾಂತೆಯೆಂಬ ಕೂರಲಗಿಂ ಗಿ ।
ಱ್ಱನೆ ತೂಳ್ದು ಬೇಗಮಿಱಿದಪ
ನೆನಗಿಂ ಸಾವಲ್ಲದುೞಿವ ತೆಱನಂ ಕಾಣೆಂ ॥ ೧೦೮

---

1 ಎಂಬುದುಮಾಮಾತಂ ಪ್ರಮಾಥಕುಮಾರಂ ಕೇಳ್ದು ಸೈರಿಸಲುಮಾಱದೆ ಧೂಮಧ್ವಜನೆಂಬ ಯಕ್ಷಂ ಕೊಟ್ಟಂಜನಪ್ರಯೋಗದಿಂ ತಾನುಂ ನಲ್ಲಳುಂ ಅದೃಶ್ಯರೂಪದಿಂ ಸ್ಯಂದನಮನೇಱಿ ಪುರದಿಂ ಪೊಱಮಟ್ಟು ಪೊಱವೊಳಲೊಳಂಜನಪ್ರಯೋಗಮಂ ಬಿಸುಟು ಈರ್ವರುಂ ಸರ್ವಾಭರಣಭೂಷಿತರಾಗಿ ದಿವ್ಯವಸ್ತ್ರಮನುಟ್ಟು ವಿನೋದದಿಂ ಭೀಮವನಮೆಂಬ ಪೆರಡವಿಯೊಳ್ ಖರ್ಪನಂ ಸುವೇಗನೆಂಬೊರ್ವ ಕ್ಷತ್ರಿಯಪುತ್ರಂ ಪಗೆವರ್ಗಂಜಿ ತದ್ವನಮಂ ಪೊಕ್ಕು ಕಳ್ಳನಾಯ್ಕನಾಗಿ ಚಾಪವಿದ್ಯೆಯೊಳ್ ಗರ್ವಪರ್ವತಾರೂಢನಾಗಿರ್ದಾತಂ ಪ್ರಮಾಥಕುಮಾರನ ಕೆಲದೊಳಿರ್ದ ಚಂದ್ರಲೇಖೆಯುಮಂ ಕಂಡು ಕಣ್ಬೇಟಂಗೊಂಡು (ಗ)

ನೆರವಿಲ್ಲದಿಱಿವ ಕಷ್ಟಂ
ಸರೋಜಮುಖಿಯಿಾಕೆ ಯೆನ್ನಳಂ ಬಲ್ನೆರವಂ ।
ನಿರುತಂ ಪಡೆವೊಡೆ ಮೊಣ್ಣನೆ
ಮರುಳಪ್ಪಂ ಮಕ್ಕಳಾದೊಡಂ ಮೊಣ್ಣಪನೇ ॥ ೧೦೯

ಬಿರುದನೆನೆಂಬ ಮಾತು ಪೆಱಪಿಂಗಿದುದೊಳ್ಭಟನೆಂಬ ಮಾತು ನಿ ಬ್ಬರವುಡುಗಿತ್ತು ವೀರನೆನಿಪಗ್ಗದ ಮಾತದು ದೂರಮಾಯ್ತು ನಿ ಷ್ಠುರನಿವನೆಂಬ ಮಾತು ತೊಱೆವಾದುದು ಪೆಂಪಿನ ಮಾತು ಕೆಟ್ಟು ದೀ ತರುಣಿಯ ಕಾಣ್ಕೆಯೊಳ್ ಭಯಮು ಮೋಹಮುಮಾದಪುದೆತ್ತವೋ ಪೆಸೋ ॥ ೧೧೦

ಎಡೆದಪುದೆತ್ತಿ ನೂಂಕಿದಪುದಿರ್ದೆಡೆಯಿಂ ಕಡಿಕೆಯ್ದು [1] ದರ್ಪದಿಂ ತೊಲಗಿಪುದುರ್ವಿ ಬೇರ್ವೆಱಿದು ಕೀಲಿಸಿ ಕಾಡಿಪುದಟ್ಟಿ ಮುಟ್ಟಿ ಮಾ ರ್ಮಲೆದಪುದೆನ್ನ ಚಿತ್ತಮನಗುರ್ವಿನೊಳೀಕೆಯ ಚೆಲ್ವು ರೂಪು ಸಂ ಚಲನಯನಂ ಘನಸ್ತನಯುಗಂ ನುತಹಾವವಿಳಾಸವಿಭ್ರಮಂ ॥ ೧೧೧

ಸಲ್ಲಲಿತಾಂಗಿಯ ರೂಪವು [2]
ನೆಲ್ಲಿಯುಮಾಪಾದಮಸ್ತಕಂಬರೆಗಂ ತ ।
ಳ್ವಲ್ಲದೆ ನೋಟ್ಪೊಡೆ ಚೋದ್ಯಂ
ಚೆಲ್ಲಂ ಬೀಱುವವೊಲಿರ್ದುವವಯವಪನಿತುಂ ॥ ೧೧೨

ಬಿರುದರೊಳಾಂತು ಕಾದಿ ಸೆಡೆದುಳ್ಕನೆ [3] ವೀರರೊಳಾಂತು ಕಾದಿ ಮೆ ಯ್ಮುರಿಯನೆ [4] ಸೊಕ್ಕಿ ಮಿಕ್ಕದಟರೊಳ್ ತೊಡರ್ದೊಯ್ಯನೆ [5] ಯುದ್ಧದೊಳ್ ಮನಂ ದಿರಿಯನೆ ಕಾಮನೆಂಬ ಖಳನೀಲಲಿತಾಂಗಿಯನೊತ್ತಗೊಂಡು ಚೆ ಚ್ಚರಮಿಸೆ ಪುಷ್ಪಬಾಣತತಿಗಳ್ಕಿದೆನಳ್ಕಿದೆನೋವೊ ಬೆರ್ಚಿದೆಂ ॥ ೧೧೩



[1] ಕಡುಕೆಯ್ದು (ಗ) [2] ತಾಂಗಮನೊಪ್ಪವು (ಕ. ಬ.)
[3] ಉಳ್ಕಿನೆ (ಕ. ಬ.) [4] ಮುರಿಯೆನೆ (ಕ. ಬ.)
ತೊಡರ್ದಾಡೆನೆ (ಕ. ಬ.)

ಇವಳ ಕಟಾಕ್ಷಮೆನ್ನೆರ್ದೆಯನುರ್ಚಿಪುದೀಕೆಯ ರೂಪು ದಾಱಿಯೊಳ್
ಕವಿದಪುದೆತ್ತಲೀಸತಿಯ ಜವ್ವನಮೆನ್ನನಡರ್ತು ತಾಗಿ ಕಾ
ಡುವುದತಿಕೋಪದುಬ್ಬರದಿನೀಲಲಿತಾಂಗಿಯ ಗಾಡಿ ಸೊಕ್ಕಿ[1] ಕಾ
ದುವ ಬಲುಬಂದಿಕಾಱನವೊಲಾಱಡಿಗೊಂಡಪುದೆನ್ನ ಚಿತ್ತಮಂ ॥ ೧೧೪

ಪೋಗದೆ ಸುತ್ತಿ ಮುತ್ತಿ ಪೊಣರ್ದಳ್ಕದೆ...ತನ್ನ ಗಂಡನಿಂ
ಬಾಗಿರೆ ತೋಱಲೀಸತಿಯ ಮುಂದೆ ಮನೋಭವನೆನ್ನನೆತ್ತಲುಂ
ತಾಗಿ ಕನಲ್ದು ಪುಷ್ಪಶರಸಂತತಿಯಿಂ ಬಿಡದೆಚ್ಚು ತೂಳುತ
ಟ್ಟಾಗೆ ತಗುಳ್ದು ಕಾದಿದಪನಾವನನಾಂ ಶರಣೆಂದು ಕಾಣ್ಬೆನೋ ॥ ೧೧೫

ಕುರುಳ ಬೆಡಂಗುಮಂ ಮುಡಿಯ ಚೆಲ್ವುಮನಂಬುಜವಕ್ತ್ರದೊಳ್ಪಮಂ
ಕೊರಲ ಸಮುನ್ನತಸ್ತನದ[2] ತೋಳ ಕವುಂಕುಱ[3] ಬೆನ್ನ ಭಂಗಿವೆ
ತ್ತಿರವುಮನಣ್ಣ ಬಾಯ್ದೆಱೆಯ ಪುರ್ವಿನ ಮೂಗಿನ ಕಂಗಳು[4]
ಬ್ಬರಿಪ ವಿಳಾಸದಂದಮುಮನೀಕ್ಷಿಸಿ ಸೋಲದ ಗಂಡನಾವನೋ ॥ ೧೧೬

ಎಂದು ತನ್ನೊಳ್ ನುಡಿದು[5] ॥ ೧೧೭

ಸುರರಾಜಂ ಬಂದು ಮಾರ್ಕೊಂಡೊಡಮಹಿಪತಿ ಬಂದಡ್ಡಮಾಗಿರ್ದೊಡಂ ಭಾ
ಸ್ಕರನಣ್ಮಿಂ ಪೊಂಗಿ ಬಂದಾಂತೊಡಮವನಿಯೊಳುಳ್ಳ ಕ್ಷಿತೀನಾಥರೆಲ್ಲಂ
ಭರದಿಂ ಕೈಕೊಂಡು ವೀರಂಬೆರಸು ಪೆಣರ್ದೊಡಂ ಮಾಣೆನೀಕಾಂತೆಯಂ ವಿ
ಸ್ತರದಿಂ ಕೈಕೊಂಡು ಕೊಂದೀತನನವಯವದಿಂ ಭೋಗಿಪೆಂ ರಾಗದಿಂದಂ ॥ ೧೧೮

1 ಪೊಕ್ಕು (ಗ)
2 ಲಸದ್ಘಟಸ್ತನದ (ಗ)
3 ತೋಳಿನಕಾಂಕುಱ (ಗ)
4 ನೀಳ್ದಕಣ್ಣಳು (ಕ. ಬ.)
5 ಬಗೆದು (ಕ. ಬ.)

[ಎಂದು ಮನದೊಳ್ ಪ್ರಮಾಥಿಕುಮಾರನಂ ಕೊಲ್ವ ಕಜ್ಜಮನೆತ್ತಿ ಕೊಂಡು ಪ್ರತಾಪಪರನಪ್ಪುದಱಿಂ ಪ್ರಮಾಥಿಕುಮಾರನೊರ್ವನೆಂದೇಳಿಸಿ ತಾನೆತ್ತಲೊಲ್ಲದೆ ತನ್ನನಾಯಕನೊರ್ವನಂ ಕರೆದು ಬಟ್ಟೆವೋಪ ಬಡವನಂ ಕೊಂದು ಕೋಮಲಲತಾಲಲಿತಗಾತ್ರಿಯುಂ ವನಜನೇತ್ರಿಯುಮ ಪ್ಪಾತನ ಪೆಂಡತಿಯುಮನಿಲ್ಲಿಗೆ ತದ್ರಥಂಬೆರಸು ತರ್ಪುದೆಂದು ಬೆಸನಂ ಪೇಳ್ವುದುಮವನಂತೆಗೆಯ್ವೆನೆಂದು ಬೆಸನಂ ಕೈಕೊಂಡು ಪೊಡೆಮಟ್ಟು ತನ್ನ ನೆಲೆಗೆವಂದು ತನ್ನ ಬಲಮೆಲ್ಲಮಂ ಕೂಡಿಕೊಂಡು ಪ್ರಮಾಥಿ ಕುಮಾರನನ್ನೈದಿ ತಾಗಿ][1] ‖ ೧೧೯

ನಿನಗೇಕೀತರಳಾಯತಾಕ್ಷಿ ನಿನಗೇಕೀಸೌಂದರಾಕಾರೆ ಕಾ
ಮಿನಿಯುಂ ಕಾಯದೆ[2] ಬಿಟ್ಟು ಪೋಗು ಪದಪಿಂದೀ ಕಾತೆಯುಂ ಬಿಟ್ಟು ಭೋಂ
ಕನೆ ನೀಂ ಪೋಗದೆ ನಿಂದೆಯಪ್ಪೊಡಱಿವಕ್ಕೆಂದಾದುರ್ಬಿಲ್ಲಾಳ್ಕಹಾ
ಮುನಿಸಿಂದಂ ಶರವೃಷ್ಟಿಯಂ ಸುರಿವುದುಂ ವಾತ್ಸಲ್ಯರತ್ನಾಕರಂ ‖೧೨೦

ಜಿನಪಾದಾಂಬುಜಯುಗ್ಮಮಂ ನೆನೆದು ಬಿಲ್ಲಂ ಕೊಂಡು ಕೈಗಾಯದೊ
ರ್ವನೆ ಬಂದೊಡ್ಡಿದ ವೈರಿಯಾಳನದಟಿಂ ಬಾಣಾಳಿಯಿಂದಿಕ್ಕಿ ಮೆ
ಲ್ಲನೆ ವೀರಂ ನಗುತುಂ ಮನೋರಮೆಗೆ ತೋಱುತ್ತಿರ್ಪಿನಂ ಭೃತ್ಯನೊ
ರ್ವನವೋಘಾಸ್ತ್ರನ ಬಾಣದಿಂ ಬರ್ದುಕಿ ಭೀತಾತ್ಮಂ ಮಹಾಭೀತಿ ಯಿಂ ‖ ೧೨೧

ಬಂದು ಸುವೇಗಂಗೆ [ನಾಯಕರ] ಭೃತ್ಯರ ಸಾವುಮಂ ಪ್ರಮಾಥಿ ಕುಮಾರನ ವೀರಮುಮಂ ಬಿನ್ನಪಂಗೆಯ್ವುದುಂ ಮುನಿದು ಕೋಪಾವೇ

---

1 ಎಂದು ಪ್ರತಾಪಿಯಪ್ಪಾದಿತ್ಯಂ ತಾನೆತ್ತಲೊಲ್ಲದೆ ತನ್ನ ನಾಯಕನೊರ್ವನ ಕರೆದು ಬಟ್ಟೆವೋಪ ಬಡಸಾದವಂ ರಥವೇಗನೆನ್ನಿಲ್ಲಿಗೆ ಕೊಂಡುಬಾ ಬಾರಲೊಲ್ಲಂ ದೊಡಾತನಂ ಕೊಂದಾತನ ಪೆಂಡತಿಯನೊಡಗೊಂಡುಬಾಯೆಂದು ಬೆಸಸುವುದುಮಾತ ನಂತೆ ಗೆಯ್ವೆನೆಂದು ತನ್ನ ಬಲಮೆಲ್ಲಮನೊಂದಾಗಿ ಕೂಡಿಕೊಂಡು ಪೋಗಿ (ಗ)

2 ಸಾಯದೆ (ಕ. ಬ.)

ಶದಿಂ ನಾಯಕರೆಲ್ಲರಂ ಕರೆದು ಬೆಟ್ಟಮಂ ಗುಂಗುರು ಕಾಡಿತ್ತೆಂಬ, ಗಜಮಂ ನರಿ ನುಂಗಿತ್ತೆಂಬ, ಸಿಂಹಮಂ ನಾಯ್ ಕೆಣಕಿತೆಂಬ, ಶರಭನ ನೆರಲ ಜೋಡಾಡಿಸಿತೆಂಬ, ಮಾತಿನಂತೆ ಬಟ್ಟೆವೋಪ ತಿರಿಕನೊರ್ವನೆನ್ನ ನಾಯಕನಂ ಕೊಂದು ಬಲವೆಲ್ಲಮನಿಕ್ಕಿ ವೀರಕ್ಕೆ ತೊನೆದುದ್ಧತಂ ಮೆಟ್ಟಿ ಗಂಡಿಂಗಾನೆ ಪಿರಿಯನೆಂದಿರ್ದಪಂ ಗಡಮವನನೀಗಳ್ ನೀವಿನಿ ಬರುಂ ಪೋಗಿ ಕಾದಿ ದರ್ಪಮಂ ಕಿಡಿಸಿ ಕೊಲಲ್ವೇಡ ಪಿಡಿದು ಕೋಡಗ ಗಟ್ಟುಗಟ್ಟಿ ಕೊಂಡೆನ್ನಲ್ಲಿಗೆ ತನ್ನಿ [ಮಾತನನೆನ್ನ ಕಣ್ಣಾಣಿವಿನಮಾನೆ ನಾನಾವಿಧದಿಂ ಕೊಂದು ದೆಸೆವಲಿಗೆಯ್ದು ಬೞಿಕಮಾತನ ಪೆಂಡತಿಯನರಸಿ ಮಾಡಿಕೊಳ್ವೆನೆಂದು ಬೆಸಸುವುದುಂ] [1] ॥ ೧೭೦

ನೆರೆದು ಸಮಸ್ತತಸ್ಕರರಗುರ್ವಿನೊಳುರ್ವಿ ಕಡಂಗಿ ಪರ್ವಲಂ
ಬೆರಸು ಮಹಾಸಮುದ್ರಮಿಳೆಯಂ ತಳರ್ವಂತೆ ಧರಿತ್ರಿ ಭಾರದಿಂ
ಬಿರಿಯೆ ಧರಿತ್ರಿ ಮರ್ತ್ಯಮಯ [2] ಮಾದವೊಲದ್ಭುತಮಾಗೆ ಕೋಪದಿಂ
ದುರಿಯುತುಮುಕ್ಕಿ ಸೊಕ್ಕಿ ಕಡುಪಿಂ ತಳರ್ದತ್ತು ಪುಳಿಂದಸಾಧನಂ॥

ಅಂತೆತ್ತಿ ಬಂದು ಪ್ರಮಾಥಿಕುಮಾರನ ರಥಮಂ ಮೂವಳಸಾಗೆ ಮುತ್ತಿಕೊಂಡು ಪೋಗದಡ್ಡಂಬಿನ [ಕೂರಂಬಿನ ಕವಲಂಬಿನ] ಪಾಱುಂ ಬಳೆಯ ಕಕ್ಕಡೆಯ [ಮಿಟ್ಟೆಯ] ಮೊಟ್ಟೆಸರಲ ಬಲ್ಸರಿಯಂ ಸುರಿಯೆ ॥

ಇದು ಪರ್ವಲಮಾನೊರ್ವನೆ
ಕದನಂ ಪಿರಿದಕ್ಕುಮೆಂದು ಮನದೊಳ್ ಬೆಚ್ಚಿ ।
ಲ್ಲದೆ ಕೋಪಮಿಲ್ಲದಿರ್ದಂ
ವಿದಿತಯಶಃಪ್ರಕರ [3] ನಮಳಚಾರುಚರಿತ್ರಂ ॥ ೧೭೧

ಅಂತಿದೊರ್ಯ್ವನೆ ಲೀಲೆಯಿಂದನಿತುಬಾಣಕ್ಕಂ ಭರಂಗೆಯ್ದು ನಿ
ಶ್ಚಿಂತಂ ಸಾಯಕಮೊಂದನೆಚ್ಚನಿತುಮಂ ಬಿಲ್ಬಲ್ಮೆಯಿಂ ಭೂಪನೋ

---

[1] ಎನೆ (ಗ) [2] ಬಿರಿಯೆಯುು ಮರ್ತ್ಯಲೋಕಮಯ (ಗ)
[3] ಪ್ರವರ (ಕ. ಬ.)

ರಂತಲ್ಲಾಡೆ ತಗುಳ್ದು [1] ಖಂಡಿಸುವುದುಂ ಸಿಗ್ಗಾಗಿ ಬಂದೆಗ್ಗಿನೊ
ಳ್ಪಂತಿಂಗೋಡದೆ ಬೆಚ್ಚಿ [2] ಕಟ್ಟೆದಲಗಿಂ ಕಿತ್ತಣ್ಮಿನಿಂದಿರ್ಪುದುಂ ॥ ೧೨೬

ಚಂದ್ರಲೇಖೆ ನಕ್ಕು ದೇವ ನಿನಗಿವರ್ ದೊರೆಯಲ್ಲ, ಇವರ ನಿನ್ನ ಪ್ರತಾಪಮನಾರಯ್ವಂದು ಸಿಂಹದ ನಾಯು ಕರಿಯು ನರಿಯು ಪುಲಿಯು ಪುಲ್ಲೆಯು ತೋಳನ ಕುಱಿಯು ಗರುಡನ ಪಾವಿನ ಬಲಾಬಲಂಗಳಂ ಪೋಲ್ಕು [ಮಿವರ್ ತಮ್ಮ ಬಂದೆಗ್ಗನೊಳ್ ಸಿಗ್ಗಾಗಿ ತಮ್ಮಾಳ್ದನ ಮೊಗಮಂ ಮಗುಳ್ದು ಪೋಗಿ ನೋಡಲ್ ನಾಣ್ಚಿ ದೇವರ ಬಾಣಾವಳಿಯೊಳ್ ಬಿರ್ದಕ್ಕಾಱಲ್ ಬಗೆದಪರ್ ; ಗೆಲ್ಲದ ಕಾಳಗದಿಂದೋಟಮೆ ಲೇಸೆಂಬುದು ; ನರಿಯುಂ ಬಡಿದೊಡೆ ಪೇಲ್ ಸುರಿಗುಮಲ್ಲದೆ ಲಾಭಮಿಲ್ಲದದುಕಾರಣದಿಂ ದಿನಿಬರುಮಂ ಬಱಿದೆ ಕೊಂದು ಪಾಪಮಂ ಮಾಡಿಕೊಳ್ಳದೆ ನಿದ್ರಾಬಾಣ ದಿಂದಿನಿಬರ್ಗಂ ನಿದ್ರೆಯಂ ಮಾಡಿ ಸುಖದಿಂ ಪೋಪಮೆಂಬುದುಂ ಪ್ರಮಾಥಿಕುಮಾರಂ ನಲ್ಲಳ ಮಾತಿಂಗಂ ಮನದ ಕಾರುಣ್ಯಬುದ್ಧಿಗಂ ಮೆಚ್ಚಿ ದರ್ಶನಶುದ್ಧಿಯೆಂದಱಿದು ॥ ೧೨೭

ಇನಿಯಳ ಬುದ್ಧಿಯಂ ಮನದೆಗೊಂಡು ಮಹೀಶ್ವರನಾಗಳಲ್ಲಿ ದು
ರ್ಜನರನಪಾಯದಿಂ ಕೊಲಲುಚಿಂತೆನಡರ್ತು (?) ವಿವೇಕದಿಂದೆ ಮೆ
ಲ್ಲನೆ ದಯೆ ಪುಟ್ಟೆ ನಿದ್ರೆಯನೆ ಮಾಡುವ ಶಕ್ತಿಯನುಳ್ಳ ಬಾಣಮೊಂ
ದನೆ ತೆಗೆದಾರ್ದು ನಿಂದಿಸುವುದುಂ ರಿಪುಸೇನೆ ಬೞಲ್ದು ನಿದ್ರೆಯಿಂ ॥ ೧೨೮

ಬಡಿಕೊಂಡ ನೆಲ್ಲಿಯಂತೆ ನೆಲಕ್ಕೆ ಬೀೞ್ವುದುಂ] [3] ಅಪರಪಜಯುಮಂ ಸುವೇಗಂ ಕೇಳ್ದುಕ್ಕುಡಿಸೆ, [4] ನೆಲನಂ ಪೊಯ್ದು ಮೆಯ್ಯಱಿಯದೆ ತನ್ನ ಮುಂದಣ ನರಕಗಮನಮಂ ತೋರ್ಪಂತೆ ಕಂಪಿಸುವ ಮೆಯ್ಯುಂ ಕೆಚ್ಚನಾದ ಕಣ್ಣುಂ ಬೆಚ್ಚನಾದ ತನುವುಂ ಉರಿವೆರ್ದೆಯುಂ ಬೆರಸಗುರ್ವಾಗೆ ಮಸಗಿದ ಸಿಂಹದಂತಿರ್ದ ಸುವೇಗಂಗೆ ಪ್ರಧಾನ [ರುಂ ಬುದ್ಧಿ

1 ರಳ್ಳಂತಾಡದೆ ತಳರ್ದು (ಗ)  2 ಪಿಂತಣ್ಣೋಗದೆ ಪೆರ್ಚಿ (ಕ. ಬ.)
3 ಮಿವರಂ ಕೊಲಲ್ವೇಡೆಂಬುದುಂ ನಿದ್ರಾಬಾಣದಿಂದಿವರ್ಗೆ ನಿದ್ರೆಯುಂ ಮಾಡಿ ಪೋಪುದುಂ (ಗ)  4 ಕೇಳ್ದು (ಗ) ಕೇಳ್ದುಕ್ಕಿರಿಸಿ (ಕ. ಬ.)

ವೆಂತರುಂ ಚಾತುರ್ಯಮುಪ್ಪವರುಂ ದೀರ್ಘಶರೀರಿಗಳುಂ ಕಾರ್ಯವೇದಿ
ಗಳಪ್ಪವರುಮಿಂತೆಂದು ಪೇೞ್ದರ್] [1] ॥ ೧೨೯

ಸೆರಗಂ ಪಾರದೆ ನಮ್ಮ ನಾಯಕರನಿಂದಾಟಂದು ಕೊಂದಿಕ್ಕಿ ಭಾ
ಸ್ಕರತೇಜಂ ಕಲಿಯಾಗಿ ಪೋಗದೆ ಭರಂಗೆಯ್ದಿರ್ದನೆಂದಂದು ನಿ
ಷ್ಠುರವೀರತ್ವಮನಾರ್ಪ ನಣ್ಮನದಟಂ ಶೌರ್ಯತ್ವಮಂ ಪೆಂಪನು
ರ್ವರೆಯೊಳ್ ಬಣ್ಣಿಪನಾವನಾತನಿದಿರೊಳ್ ನಿಂದಾಂತು ಮೆಯ್ಗಾವರಾರ್ [2] ॥

ನೆರಮಿಲ್ಲೊರ್ವನೆ ದಿವ್ಯಕಾಮಿನಿಯನೀ ರೌದ್ರಾಟವೀಮಧ್ಯದೊಳ್
ಭರದಿಂದೊಯ್ದಪನೆಂದೊಡಾತನಳವಂ ಸೌಂದರ್ಯಮಂ ಧೈರ್ಯಮಂ
ಬಿರುದಂ ಬಣ್ಣಿಪನಾವನೇೞದತನಂಗೆಯ್ದಾತನಂ ಕೊಂದು ಸೌಂ
ದರಿಯೊಳ್ ಕೂಡುವೆನೆಂಬುದೆಗ್ಗು ಮರುಳೇ ಸೀಳಕ್ಕದೇಂಪೊಣ್ಬನೇ ॥

ಪರವೆಣ್ಣೊಳ್ಳಿದಳೆಂದು ಕೂರ್ತು ಸೆಱೆಯಿಟ್ಟಾರೆಂದೊಡಂ ಮಾಣದೊ
ರ್ವರುಮಂ ಕಾಣಿಕೆಗೊಳ್ಳದುಕ್ಕಿ [3] ಬಲಮಂ ನಚ್ಚಿರ್ದ ಲಂಕೇಶನಾ
ದೊರೆಯಂ ನಾಯವೊಲಣ್ಮುಗೆಟ್ಟು ಮಡಿದಂ ತಾನೆಂದೊಡಾಡಾಗಿ ಸಾ
ಯರೆ ದೂರಿಂಗೆಡೆಯಾಗಿ ಬೇಯರೆ ಪರಸ್ತ್ರೀಗಾಸೆಗೆಯ್ದಿರ್ಪವರ್ ॥ ೧೩೦

ಪರವಧುವೆನ್ನದಗ್ನಿಜೆಗೆ ಸೋಲ್ತು ಸುಯೋಧನನನ್ನನುಂ ಮಹೀ
ಧರನಿಭಧೈರ್ಯನಪ್ಪ ವಿಭುವಪ್ಪ ಮಹಾಗುಣಿಯಪ್ಪ ಭೀಮನಿಂ
ದರಿಯುವೊಲಟ್ಟಿ ತೂಳ್ದಿ [4] ಗದೆಯಿಂ ನೆಱೆ ಮೋದಿಸಿಕೊಂಡು ಸತ್ತನಾ
ದೊರೆಯನುಮೆಂದೊಡಾರೆಱೆಯರನ್ಯರ ಪೆಂಡತಿಗಾಸೆವಟ್ಟವರ್ ॥ ೧೩೧

ಅದುಕಾರಣದಿಂ ಪರಸ್ತ್ರೀಯ ನೋಟಮಂ ಜವನ ಕಾಟಮೆನ್ನದೆ, ಪೆಱರ ಪೆಂಡಿರ ಚೆಲ್ವುಮಂ ಸೂಲಮೆನ್ನದೆ [5], ಲೋಗರ ಭಾರ್ಯೆಯರ ವಿಳಾಸಮಂ ಮೃತ್ಯುವಿನ ಕಯ್ಯ ಪಾಶಮೆಂದೆನ್ನದೆ, ಅನ್ಯಾಂಗ

---

1 ರಂತೆಂದರ್ (ಗ)  2 ಮೇಗೆಯ್ವರೋ (ಗ)

3 ಕಾಣಿಗೆಕೊಳ್ಳದುಕ್ಕಿ (ಕ. ಬ.)  4 ತೂಳ್ದು (ಗ)

5 ಕಾಯ್ದಂತಕನ ಮಸೆದಲಗೆಂದೆನ್ನದೆ (ಕ. ಬ.)

ನೆಯುರ ರೂಪಂ ಪಾಪದ ಬಟ್ಟೆಯೆನ್ನದೆ, ಮೆಚ್ಚಿ ನಚ್ಚಿ ಕೂಡುವೆ ಬಯಕೆಯನುಳ್ಳಾತಂ ಸಱಿಯನೇಱಿ ನೆಲಕ್ಕೆ ಬೀೞ್ವ, ಕರಡಿಗಿದಿರಾಗಿ ಪುರ್ವ್ವಲಿಡುವ, ಪುಲಿಯ ಮುಂದೆ ಪಟ್ಟಿರ್ಪ, ಪಸಿದ ರಕ್ಕಸಿಯುಂ ಕೆಳೆಗೊಳ್ವ, ಸಿಂಗದ ಮೀಸೆಯುಂ ಕೀಳ್ವ, ಶರಭಮಂ ಪಿಡಿದೇಱುವ, ನೃಪರ ಮಂಡೆಯುಂ ಪೊಯ್ವ, ಮಸೆದ ಸುರಗಿಯುಂ ನುಂಗುವ, [1] ಕಿಚ್ಚಂ ಪುಗುವ, ಪಾವಿನ ಬಾಯೊಳ್ ಕೈಯನಿಡುವ, ಪರಿವ ಬಂಡಿಗೆ ಕಾಲಂ ನೀಡುವ, ಸುಣ್ಣಮಂ ಬಱಿದೆ ತಿಂಬೆಗ್ಗನಂ ಪೋಲ್ಕುಮಿಂತು ॥ ೧೩೪

ಪರಕಾಂತಾನಿಕರಕ್ಕೆ ಸೋಲ್ತು ಮನಮಂ ಸಂತಯ್ಸಲೇನಾಱದು
ಬ್ಬರದಿಂದುಬ್ಬರಮಾಗೆ ಕೂಡಿ ಪಿರಿದಾಟಂದೆತ್ತಿನೊಳ್ಪಾಡಿ ಮೇ
ಣ್ಪಿರಿದುಂ ನಿಗ್ರಹದಿಂದೆ ದಂಡಿಸಿ ಮಹಾದುಃಖತ್ವಮಂ ಮಾಡಿ ಪೋಣ್
ಧರಣೀಶರ್ ಕೊಲೆ ಸತ್ತು ಮತ್ತೆ ನರಕಂಬೊಕ್ಕಿರ್ಪರಾಪಾತಕರ್॥೧೩೫

ಪರವಧುಗಾಸೆಗೆಯ್ವ ನರನುಂ ಕುಲಮೆಂದಿರಸೊಲ್ಲದಿರ್ಪ ನಿ
ಷ್ಠುರನುಮುದಾರನಲ್ಲದರಸುಂ ನೆರೆಯುಂ ಪಗೆಗೊಳ್ವ ಗಾಂಪನುಂ
ಗುರುವನವಜ್ಞೆಗೆಯ್ವ ರುಷಿಯುಂ [2] ಪದಪಿಲ್ಲದ ದಾನಿಯುಂ ಜಿನೇ
ಶ್ವರಪದಸೇವೆಯಿಲ್ಲದವನುಂ ನೆಱೆ ರಂಜಿಸಲಾಱರುರ್ವಿಯೊಳ್ ॥ ೧೩೬

ಪರವಧುಗಾಸೆಗೆಯ್ದು ಗತಿಗೆಟ್ಟು ಪರತ್ರಿಯನೊಕ್ಕು ಕಂಡರೆ
ಲ್ಲರುಮಱಿಯುಟ್ಟಿ ಮುಟ್ಟಿ ಮುನಿದೋವದೆ ಪೊಯ್ದು ಕವರ್ತೆಗೊಂಡು ನಿ
ಷ್ಕರುಣದಿನೊತ್ತಿ ಮೆಟ್ಟಿ ತಲೆಯುಂ ಕಡಿದಾಕೆಯ ಮೂಗನೊಳ್ಳಿತಾ
ಗಿರೆ ನಡುಬೀದಿಯೊಳ್ ಪಲರಮುಂದರಿಪ್ರೊಂದಪಮಾನಪ್ರೊಳ್ಳತೇ ॥೧೩೭

ಪರವಧುಗೋತ ದುರ್ಜನನನಾಗಳ ಕೊಂದು ಧರಿತ್ರಿ ನೋಡೆ ಪಾ
ದರಿಗೆಯ ಮೂಗನಾಗಳರಿದಾತನ ಮಂಡೆಯನಾಗಳಾಕೆಗಾ
ಭರಣಮದೆಂದು ಕಟ್ಟಿ ನೆಱೆ ಬೀದಿಗಳೊಳ್ ಪಲರಾರ್ದು ಡಂಗುರಂ
ಬೆರಸು ತೊೞಲ್ವ ಕಷ್ಟತೆಯ ಪೇೞದೆ ಮುಂದಣ ದುರ್ಗತಿತ್ವಮಂ ॥

---

1 ಬೈಕೆಯುಪಗಳ್ವ (ಗ) 2 ಶಿಶುವುಂ (ಗ)

ಪರವಧುಗೋತು ಕೂಡಲೆಡೆಯಿಲ್ಲದೆ ನೋಡಿ ಕನಲ್ದು ಜೋಲ್ದು ಕೊಕ್ಕರಿಸಿ ಪೆಱಗೆ ಬೆಚ್ಚಿ ಮನೆಗೋಗಿ [1] ಮಹಾಮೆಱುಕಕ್ಕೆ ಭೂಮಿಯೊಳ್

ಪೊರಳುತುಮಿರ್ದು ನೀರಡಿಸಿ ಬಾಯ್ ಪೊಗೆವೋಗೆ ನಿರರ್ಥಕತ್ವದಿಂ ದುರಿಯುತುಮಿರ್ಪ ತನ್ನೆರ್ದೆಯ ದಾಹಮಂ ಪೇೞದೆ ಪೊಲ್ಲದೆಂಬುದಂ ॥

ಮಾವಿನ ಪಣ್ಣನೊಲ್ಲದೆ ಬೇವಿನ ಪಣ್ಣಂ ತಿಂಬಂತೆ, ನಿರ್ಮಲಮಪ್ಪ ನೀರಂ ಕುಡಿಯದೆ ಕೆಸಱ ನೀರಂ ಕುಡಿವಂತೆ, ಹಂಸೆಯ ಪಾಸನೊಲ್ಲದೆ ಮುಳ್ಳಮೇಲೆ ಪಡುಪಂತೆ, ಬಟ್ಟೆಯೊಳ್ ಪೋಗದೆ ಕಾಡಂ ಪುಗುವಂತೆ, ಕಱಿವಾಪಂ ಪೊರೆಯದೆ ಗೊಡ್ಡಂ ಪೊರೆವಂತೆ, ತೋಂಟಕ್ಕೆ ನೀರನೆತ್ತದೆ ಬೀದಿಗೆ [2] ನೀರನೆತ್ತುವಂತೆ, ಮನೆಯಂ ಬಿಟ್ಟು [3] ಶ್ಮಶಾನದೊಳಿರ್ಪಂತೆ, ಬಾವಿಯಂ ಪೂೞ್ದು ಬೆಟ್ಟಮನಗೆವಂತೆ, ಮಗನಂ ತೊಱೆದು ಕಳ್ಳನನೊಳಕೊಳ್ವಂತೆ, ಸೀರೆಯಂ ಕೊಟ್ಟು ನಾರಂ ಕೊಳ್ವಂತೆ, ತೆಂಗಿನ ಮರನಂ ಕಡಿದು ಸಾವೆಗೆ ಬೇಲಿಯನಿಕ್ಕುವಂತೆ, ಕಳವೆಯನೊಕ್ಕು ನುಳಲಂ ಕೊಳ್ವಂತೆ, ಮಾಣಿಕವಂ ಬಿಟ್ಟು ಗುರುಗುಂಜಿಯಂ ಪಿಡಿವಂತೆ, ಕರ್ಪೂರಮನೊಲ್ಲದೆ ಪಗಿನಂ ಕೊಳ್ವಂತೆ, ಸಿರಿಯನೊಲ್ಲದೆ ತಿರಿದುಂಬಂತೆ, ಮಾನಿಸವಾೞ್ಗಲಸಿ ನಂಜಂ ಕುಡಿವಂತೆ, ಸವ್ಯಕ್ತ್ವಮುಮಂ [4] ಸುಖಮುಮಂ ಪುತ್ರಲಾಭಮುಮನೀವ ಕುಲಾಂಗನೆಯನೊಲ್ಲದೆ ಪರಪೀಡೆಯುಮಂ ಮನೋದುಃಖಮುಮಂ ಬಹುಕ್ಲೇಶಮುಮಂ ಕೀರ್ತಿಯುೞಿವುಮಂ ಧರ್ಮಕ್ಷಯಮುಮಂ ನರಕದ ಮಹಾದುಃಖಮುಮಂ ಮಾೞ್ಪ ಪರಾಂಗನೆಗಳಿಪುವುದು ಕಜ್ಜಮಲ್ಲೆಂದು [5] ಧರ್ಮಸ್ವರೂಪಮಂ ನುಡಿವುದುಂ ॥ ೧೪೦

ಅವರ ವಚನಂಗಳಂ ಕೇ

ಳ್ದವಧಾರಿಸಿ ಪೊಲ್ಲದೆಂಬ ಬಗೆಯಿಲ್ಲದ ಲೋ।

---

1 ಮೂರು ಪುಸ್ತಕಗಳಲ್ಲಿಯೂ 'ಮನೆಗೋಗಿ' ಎಂದೇ ಇದೆ.

2 ಬಿದಿರಿಗೆ (ಗ)    3 ಸುಟ್ಟು (ಕ. ಖ.)

4 ಸಂಪತ್ತುಮಂ (ಕ. ಖ.)    5 ಬುದ್ಧಿಯಲ್ಲೆಂದು (ಗ)

ಕವಿರುದ್ಧಮಪ್ಪ ಕಜ್ಜಮ
ನವೆಯುವದಿಂದೆತ್ತಿಕೊಂಡು ಮೋಣದೆ ಚಲದಿಂ ॥ ೧೪೧

ಮುನ್ನಿನ ನಾಯಕರ್ ಮಡಿದರೆಂಬುದನೊಯ್ಯನೆ ಕೇಳ್ದು ಭೀತಿಯಿಂ
ದನ್ನಡುಗುತ್ತುಮುಳ್ಳಳುಕಿ ಕಾದುವ ಬುದ್ಧಿಯನೊಲ್ಲದಂತುವಿಂ [1]
ತುನ್ನಿಱಿ ಲೋಗರಂಗನೆಗೆ ಸೋಲದಿರೆಂದೆನಗೆಯ್ದೆ ಧರ್ಮವಂ
ಸನ್ನುತವಾಗಿ ಪೇಱ್ವರಱಿವಂಗಳ ನಿಮ್ಮ ಪರಾಕ್ರಮಂಗಳಂ ॥೧೪೨

ನಾಯು ಬಾಲವುಂ ಪಿಡಿದು ತೊಱೆಯಂ ಪಾಯ್ವಂತೆ ನಿಮ್ಮ ಬಲವುಂ ಪಿಡಿದು ಕಾದಿ ವಿಳಾಸವತಿಯನೆನಗೆ ಮಾಡಲಿರ್ದ ಗಾವಿಲನಲ್ಲೆನೆನ್ನ ಭುಜಬಲವೆ ಸಾಲ್ಗುಂ ಪಂದೆತನದಿಂದೆನ್ನೊಡನೆ ಕಾಳಗಕ್ಕೆ ಬರಲೊಲ್ಲಿರಪ್ಪೊಡಿಲ್ಲಿಯೆ ಮೋಣ್ದಿಸಿರದಿರ್ಪುದಲ್ಲದೆ ನಿಮ್ಮ ಕಾಪ [2] ಧರ್ಮಶ್ರವಣಮಂ ಪೇೞವೇಡೆಂಬುದುಂ ಪ್ರಧಾನರ್ ಸುವೇಗನ ಮನದ ತೀವ್ರತೆಯಂ ಕಂಡು ತಮ್ಮೊಳಿಂತೆಂದರ್ ॥ ೧೪೩

ದಿನಪತಿಗುಷ್ಣಮಂಬುರುಹವೈರಿಗೆ ಶೀತಳಮಬ್ಧಿಗುಪ್ಪುನೀರ್
ವನಿತೆಗೆ ಮಾಯವೃತ್ತಿ [3] ಫಣಿಗುಗ್ರವಿಷಂ ಸಹಜಂಗಳಂತು ಮೇ
ದಿನಿಯೊಳಗಂತೆ ದುರ್ಮತಿಯುಮುದ್ಧತಿಯುಂ ಪುರುಳ್ಗೆಟ್ಟ ವಾಕ್ಯಮುಂ
ಮುನಿಸುಮುಪಾಯಚಿಂತೆಗಳುಮಿಂ ಸಹಜಂ ಕುನಯರ್ಗೆ ಲೋಕ
ದೊಳ್ ॥ ೧೪೪

ಪಾಪದೊಳಾದ ಚಿಂತೆಯುಂ ಕೊಲೆಯೊಳಾದ ರಾಗಮುಂ ಸದ್ಧರ್ಮದೊಳಾದ ಮುನಿಸುಂ ಪರಸ್ತ್ರೀಯೊಳಾದ ಕೂರ್ಮೆಯುಂ ಬೆಸನಿಗಳೊಳಾದ ಕೂಟಮುಂ ಕಳವಿನೊಳಾದ ಪ್ರೀತಿಯುಂ ಪುಸಿಯೊಳಾದ ಜಾಣುಂ ಪರಪೀಡೆಯೊಳಾದ ಪ್ರವೀಣತ್ವಮುಂ [4] ಸಾಧುಗಳೊಳಾದ ದುರ್ವಚನಮುಂ ವಿಷಯಂಗಳೊಳಾದ ಮೋಹಮುಂ ದ್ರವ್ಯದೊ

1 ಬುದ್ಧಿಯನೆಯ್ದಲೊಲ್ಲದಂ (ಗ)

2 ಕೊಳ (ಗ) 3 ಮಾಯೆಮವೃತ್ತಿ (ಕ. ಖ.)

4 ಚತುಃ ಕಷಾಯದೊಳಾದ ಪೆರ್ಚುಗೆಯುಂ (ಗ)

ಳಾದ ಕಡುಲೋಭಮುಂ ನಿರ್ದೋಷಿಪರಮಾತ್ಮನೊಳಾದ ದೂಷಣೆಯುಂ ಸದ್ಧ್ಯಾನದೊಳಾದಾಲಸ್ಯಮುಂ ಕಾತ್ರಿತದಾನದೊಳಾದ ಪೆರ್ಚುಗೆಯುಂ [1] ನರಕಂಬುಗಲ್ವೇಡಿದ್ದ ಜೀವಕ್ಕೆ ಸಹಜಮಿದಂ ಮಾಣಿಸುವೆನೆಂಬುದು ಸರ್ವಜ್ಞಂಗಂ ಬಾರದದುಕಾರಣದಿಂ ನರಕಂಬುಗಲ್ವೇಡಿದರ್ಗಂಗೆ ಪರವೆಣ್ಣೊಳಾದ ಪ್ರೀತಿ ಪೋಗಲಱಿಯದು ["ದುರಾಗ್ರಹಸ್ಯ ಹಿತೋಪದೇಶೋ ಬಧಿರಸ್ಯಾಗ್ರತೋ ಗಾನಮಿವ" ಎಂಬ ನೀತಿಯುಂಟೇ] ತಂಗಾವೇನೆಂದೊಡಂ ನಮ್ಮ ಮಾತು ಕೀೞಿಕ್ಕುಮಲ್ಲದೀತಂ ಕೇಳ್ವನಲ್ಲ ನಾಮಿನ್ನು ಸಿರದಿರ್ಪವೆಂದು ಪ್ರಧಾನರುಸಿರದಿರ್ದುದುಂ ಸುವೇಗಂ ವೇಗಿಯಾಗಿ ಯುದ್ಧಕ್ಕೆ ನಡೆದು ‖ ೧೪೫

ಪೋಗದಿರೆಂದು ತಾಗಿ ರಥಮಂ ಸೆಡೆದುಳ್ಕದೆ ಪತ್ತಿ ಮುತ್ತಿ ಚೆ
ಲ್ವಾಗಿರೆ ತನ್ನ ಚಾಪದ ಪರಿಶ್ರಮಮಂ ನೆಱೆ ತೋರ್ಪೆನೆಂದು ಧ
ನ್ವಾಗಮವೇದಿಯುಂ ಜಿನಪದಾಂಬುಜಭೃಂಗನನಾಗಳತ್ಯಗು
ರ್ವಾಗೆ ಕುಕಿಲ್ದು ಕಾರ ಸರಿವ್ರೋಲ್ [2] ಸುರಿದಂ ಶರಸಂಕುಲಂಗಳಂ ‖

ಸರಳ ಸರಿಯಂ ನಿಕೃಷ್ಟಂ
ಸುರಿವುದುಮಪರಿಮಿತಮಾಗೆ ಭಯಮಿಲ್ಲದೆ ಧೀರಂ ।
ಕರಿಸಿ ರಿಪುಸೇನೆ ಬಾಣೋ
ತ್ಕರದಿಂ ಕಯ್ದಾಯುದನಿತುಮಂ ಖಂಡಿಸಿದಂ ‖ ೧೪೭

ಎಡೆಯೊಳ್ ಬಾಣಾವಳಿಯುಂ
ಕಡಿವುದುಮುಪನಾದರ್ಮ ಮತ್ತೆ ಸಾಯಕಚಯಮಂ ।
ಬಿಡುವುದು ಮಹಿಪನ ರಥಮಾ
ಗಡೆ ಸರಳಿಂ ಬಿದಿರ ಪೊದಱಿನಂತಾಯ್ತೆಸಿಸುಂ ‖ ೧೪೮

ಅನಿತುಂ ಸಾಯಕತತಿಯಂ
ಮನುಜೇಂದ್ರಂ ನೋಡಿ ನಕ್ಕು [3] ಪುತ್ತೊಂದಂಬಿಂ ।

1 ಹರ್ಷತ್ವಮುಂ (ಗ) 2 ಕಾಡ್ಸರಿವ್ರೋಲ್ (ಗ)
3 ಬೇಗ (ಕ, ಖ.)

ದನಿತುಮನರಿಸ್ಯೆನ್ಯಂ ಭೋಂ
ಕನೆ ಮನದೊಳ್ ಜಱಿಯೆ ಕುಸಿಯೆ ತತ್ತಱದಱದಂ ‖ ೧೪೯

ತಱಿವುದುಮಾತಂ ಮಲಮಲ
ಮೆಱುಗಿ ಮಹಾಕೋಪದಿಂ ಶರಾವಳಿಯುಂ ಮ ।
ತ್ತಱಿಯಟ್ಟೆ ಬೇಗಮಿಸುವುದು
ಮೆಱದುಂಬಿಗಳಂತೆ ಮೇಗೆ ನೆಗೆದೊಬ್ಬುಳಿಯಿಂ ‖ ೧೫೦

ಬರುತಿರ್ಪ ಬಾಣಮಂ ಸೌಂ
ದರರೂಪಂ ಕಂಡು ಬಾಣಮೊಂದಱನವನಂ ।
ತರದೊಳ್ ನಿರಿಸುವುದುಂ ವಿ
ಸ್ತರದಿಂ ರಮಣೀಯಮಾಯ್ತು ಪೀಲಿಯ ತಪೆವೋಲ್ ‖ ೧೫೧

ಅಂತಂಬರದೊಳ್ ನಿಂದಂ
ಬಂ ತಡೆಯದೆ ಕಂಡು ಕೋಪದೊದವಿಂದಾಕ ।
ರ್ಣಾಂತಂಬರೆಗಂ ತೆಗೆದಿಸೆ
ಸಂತತಮೊಡನೊಡನೆ ಮೇಗಣಿಂ ಬರ್ಪಂಬಂ ‖ ೧೫೨

ವಸುಧೀಶಂ ಕಂಡು ಬಾಣಾವಳಿಯೊಳನಿತುಮಂ ತತ್ಕ್ಷಣಂ ಕೋಪದಿಂ ಖಂಡಿಸೆ ಭೂಭಾಗಕ್ಕೆ ಬಿರ್ದರ್ದಲಗುಗಱಿಚಯಂ ಕೋಲ್ಗಳಂಭೋಧಿಯಂ ರಂಜಿಸೆ ನೀಲಾದ್ರೀಂದ್ರಮಂ ದುರ್ಗಮನನುನಯದಿಂ ಪೋಲೆ ತತ್ಸ್ಯಂದನಂ ಭಾವಿಸಿ ನೋಲ್ಪಂದೊಪ್ಪಿ ಲಂಕಾಪುರದ ಮಹಿಮೆಯಂ ಸೂಱೆಗೊಂಡಂತಿರಕ್ಕುಂ ‖ ೧೫೩

ಅಂತು ಪೋಗದೆಯಿಸೆ ಉಕ್ಕುಕ್ಕಂ[1] ತಾಗುವಂತೆ ತಾಗಿ ಸೆರಗುಗೆಯ್ಯದೆ ಕಾದುತ್ತಿರ್ಪುದುಂ ಪ್ರಮಾಥಿಕುಮಾರನ ಕಯ್ಯಂಬುಗಳರಡು

1 ಪೆಣಿದುಕಕ್ಕಂ (ಗ)

ಱಿಯೆ [1] ಮೆತ್ತೆಲ್ಲಂ ತಪ್ಪುದುಂ ಚಂದ್ರಲೇಖೆ ಕಂಡು ಬೆಱಗಾಗಿ ಪಲ್ಲಿಲ್ಲದ ಪುಲಿಯುಂ ನಖವಿಲ್ಲದ ಸಿಂಹಮುಮೆನಿತುಬಲ್ಲಿತಾದೊಡಮೇಗೆಯ್ವುದು ಈತನಪ್ಪೊಡೆ ಬಲ್ಲಿದಂ ಬಲ್ಲಿದನಾಗಿಯುಂ ಕೈದುವಿಲ್ಲದೇಗೆಯ್ಗುಂ [2] ಸಾವು ನಿಶ್ಚಯಮೆಂದು ಚಿಂತಾಕ್ರಾಂತೆಯಾಗಿ ‖ ೧೫೪

ಪತಿಯುಂ ಬಿಟ್ಟು ಪರತ್ರೆಗೆಟ್ಟು ಕುಲಮಂ ಕಿತ್ತಿಕ್ಕಿ ನಾಯಾಗಿ ದು
ರ್ಮತಿಯಿಂ ದುರ್ಜನದೊಳ್ ದುರಾಚರಿತರೊಳ್ ನಿರ್ಧರ್ಮರೊಳ್ ಕೂಡಿ ಸ
ನ್ಮತಮಂ ಬಿಟ್ಟು ಪತಿವ್ರತಾಗುಣಮನೊಕ್ಕಾನಂದದಿಂದಿರ್ದ ಸಂ
ಸ್ಮೃತಿಪೌಖ್ಯೋನ್ನತಿಯಿಂ ಮಹಾಮಹಿಮೆಯಿಂ ಸಾವೇಂ ಕರಂ ಪ್ರೊಲ್ಲದೋ ‖ ೧೫೫

ಉರಿಯೊಳ್ ತಂದಿಕ್ಕಿ ಕಾಯ್ವೆಣ್ಣೆಯನೆಱೆದರಿದೀಡಾಡಿ ಖಂಡಂಗಳಂ ಸಿಂ
ಧುರದಿಂ ನುಗ್ಗಾಗೆ ಕಾಲ್ಕೈಮುಱಿಯೆ ತುಳಿಸಿ ಕೊಂತಂಗಳಿಂ ಕುತ್ತಿ ಶಸ್ತ್ರೋ
ತ್ಕರದಿಂ ಛೇಱುಟ್ಟು ಖೈರಂದಱಿದು ಕಡಿದು ನಾನಾಪ್ರಕಾರಂಗಳಿಂ ನಿ
ಷ್ಠುರದುಃಖವ್ರಾತದಿಂ ದಂಡಿಸುವ ನರಕಜಗೇರ್ವೊ ಮೆಯ್ದೊಡ್ಡಲಾಱೆಂ ‖ ೧೫೬

ನರಿ ನಾಯ್ ಬೆಕ್ಕೆಂತಿ ಮಿರ್ಗ ಪೆರ್ಗ ನೊಣಮುಂಡು ಕರಿ ಪೆರ್ಬಾವು ಪಾರಾವತಂ ವಾ
ನರನೆತ್ತಾಡಂಚೆ ಸಿಂಹಂ ಕರಡಿ ಮಹಿಷಿ ಪೆಮ್ಮಾನಜಂ ಕೋಱುಗಾರ್ದಂ
ಶರಭಂ ಸಾರಂಗಮಶ್ವಂ ಪಶು ಪುಲಿಯಿಲಿ ಕಾಡೆಮ್ಮೆ ಕಾಟ್ಕೋಳಿಯೆಂಬೀ
ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇಱಲಾಱೆಂ ‖

1 ಬಂದೆರಡುಱಿಯೆ (ಗ)  2 ಏಗುವಂ (ಗ)

ಲಲಿತ [1] ಪತಿವ್ರತಾಗುಣಮನುರ್ವಿಸೆ ಕಾಂತನೊಳಾದ ಭಕ್ತಿಯಂ
ನಿಲಿಸಿ ಪೊದಲ್ದ ದುಃಖಮುಮನಾರ್ಪ ಮೊಸಂ ಕಡುನೋವುಮಂ ಮಹೀ
ವಳಯದೊಳಾಂತು ಬೆಬ್ಬಳಿಸದಂಜದೆ ನೋಡ ಸುಖಕ್ಕೆ ಕೀರ್ತಿಗ
ಗ್ಗಳಿಕೆಗೆ ಮುಖ್ಯರಾದರದಱಿಂ ಗುಣಮುಳ್ಳರೆ ಪೂಜ್ಯರಲ್ಲರೇ ॥ ೧೫೮

ಎಂದು ಮುನ್ನಿನ ಮಹಾಗುಣವಂತರಪ್ಪರ ಕಥಾಂತರಂಗಳಂ ಭಾವಿಸಿ ಪ್ರಮಾಥಿಕುಮಾರನಿಂ ಮುನ್ನನ್ನ ಪತಿವ್ರತಾಗುಣಕ್ಕಂ ದರ್ಶನಕ್ಕಂ ಹಾನಿಯಾಗಲೀಯದೆ ಸಾವೆನೆಂದು ಶರೀರಮಂ ತೊಱೆದು ಧರ್ಮಧ್ಯಾನದಿಂ ಪಂಚಪರಮೇಷ್ಠಿಗಳ [ಶ್ರೀಪಾದಂಗಳಂ] ಹೃತ್ಕಮಲದೊಳ್ ತಾಳ್ದಿ ಪಂಚನಮಸ್ಕಾರಂಗಳನೋದುತ್ತುಂ ಬರ್ಪಂ [ಬಿ] ಗಿದಿರಾಗಿ ರಥದಿಂ ಪೊಱಮಟ್ಟು ನಿಂದಿರ್ಪುದುಂ ಸುವೇಗಂ ಚಂದ್ರಲೇಖೆಯ ಸರ್ವಾಂಗಮಂ ಕಂಡು ॥ ೧೫೯

ಕೀಲಿಸಿದಂತಿರೆ ನಯನಂ
ಬಾಲೆಯ ಲಲಿತಾಂಗದಲ್ಲಿ ನಟ್ಟಿರೆ ಮತಿಗೆ ।
ಟ್ಟಾಲಾಪಮಿಲ್ಲದಱಿಯದೆ
ಕಾಳಗದೊಳ್ ಕೂವ [2] ಕಂಭದಂತಿರೆ ನಿಂದಂ ॥ ೧೬೦

ಅಂತಿರ್ಪುದುಂ ಪ್ರಮಾಥಿಕುಮಾರನೆಡೆವೆತ್ತು ಕೂರಂಬೊಂದಂ [3] ತೊಟ್ಟು ತೀವಿ ತೆಗೆದಿಸುವುದುಂ ॥ ೧೬೧

ತಲೆ ಪಱಿದು ಜೋಲ್ದು ತೊಪ್ಪನೆ
ನೆಲದೊಳ್ ತನು ಬೀಡೆ ಸತ್ತು ಪರವನಿತೆಗೆ ಸೋ ।
ಲ್ತಳಿಪಿದ ಪಾಪದ ಫಲದಿಂ
ಮಲಿನಮನಂ ಜವನ ದಾಡೆಗಂದೊಳಗಾದಂ [4] ॥ ೧೬೨

---

1 ಸುಳಿಸಿ (ಕ. ಬ.) 2 ಕೂನ (ಕ. ಬ.)

3 ಪ್ರಮಾಥಿಕುಮಾರನಂಬೊಂದಂ (ಗ)

4 ಹೀನಮನಂ ಶೀಘ್ರಮಿರದೆ ನರಕಂಬೊಕ್ಕಂ (ಕ. ಬ.)

ನೋಡಿರೆ ಪಾಪದ ಪೆರ್ಚಂ
ಕೂಡದೆ ಪಿರಿದಟ್ಟುಱಿಂದಮೊದವಿರೆ ಸಲೆ ಮಾ।
ತಾಡದೆ ದೂರಾಂತರದೊಳ್
ನೋಡಿದ ಫಲದಿಂದಮಿಱಿದನಸುಗತಿಗಾತಂ ॥ ೧೬೩

[ಕಾಳಗಮಪ್ಪುದನಱಿದುಂ
ಬಾಲೆಗೆ ಸೋಲ್ತುತ್ತಲಿತ್ತು ಮಿಡುಕದೆ ನಿಂದೊ।
ಳ್ಪಾಳಱಿದನೆಂದೊಡನ್ಯರ
ಬಾಲೆಗೆ ಸೋಲ್ತಂಗೆ ಬುದ್ಧಿ ದೊರೆಕೊಂಡಪ್ಪುದೇ ॥ ೧೬೪

ಗತಿಯುಂಟೋ ದಯೆಯುಂಟೋ
ಮತಿಯುಂಟೋ ಸುಗತಿಯುಂಟೊ ನಿರ್ವೃತಿಯುಂಟೋ।
ಧೃತಿಯುಂಟೋ ಕೇಳನ್ಯರ
ಸತಿಯರ್ಗಳಪಿದ ನರಂಗೆ ವಸುಧಾತಳದೊಳ್ ॥ ೧೬೫

ಅಂತು ಪ್ರಮಾಥಿಕುಮಾರನ ಬಾಣದಿಂ ಮಿಡಮಿಡಮಿಡುಕಿ ಸುವೇಗಂ ನರಕದೊಳ್ ಪುಟ್ಟಿದಂ. ಸಮ್ಯಕ್ತ್ವಚೂಡಾಮಣಿ ರಿಪುವಂ ಗೆಲ್ದು ಮುನ್ನಿನವರ ನಿದ್ರೆಯೆಲ್ಲಮನುಪಸಂಹರಿಸಿ ನಿಮ್ಮ ನಿಮ್ಮ ಮನೆಗೆ ಪೋಗಿಮೆಂದು ಕಳುಪಿ ಮನಃಪ್ರಿಯೆವೆರಸು ಕೌಶಾಂಬಿಗೆವೆಂದು ॥ ೧೬೬

ಬಿರುದಿಂ ಪೋಗಿ ಕಡಂಗಿ ದರ್ಪದೊದವಿಂ ಸುತ್ತಿರ್ದ ಭೂಪಾಲರೆ
ಲ್ಲರುಮಂ ಬೇಗದೆ ತಾಗಿ ಬಾಣತತಿಯಿಂ ಕೈಗಾಯದೆಚ್ಚುರ್ವಿ ನಿ
ಷ್ಠುರಕೋಪಾನಳನಿಂ ತಗುಳ್ದು ಹಯು.........
.................ಗೊಂಡು ವಿಜಯಶ್ರೀಗೀಶನಾಗಿರ್ಪುದುಂ ॥ ೧೬೭

ದಂತಿಬಲಮಹಾರಾಜಂ ಪ್ರಮಾಥಿಕುಮಾರನಪ್ಪುದಂ ದೂರದಿಂ ದಱಿದು ಪುರಮಂ ಶೃಂಗಾರಂಗೆಯ್ದು ದಿಗ್ಗೋಳಲ್ ಗುಡಿತೋರಣಂಗಳಂ ಕಟ್ಟಿಸಿ ಸಮಸ್ತಬಲಂಬೆರಸು ರಾಗದಿಂದಿದಿರ್ವರ್ಪುದುಂ ಕುಮಾರನ ಯ್ಯಂಗೆ ಬಂದು ಚಂದ್ರಲೇಖೆವೆರಸು ಪೊಡೆಮಡುವುದುಂ ॥ ೧೬೮

ಜಿನಪದಭಕ್ತನಾಗು ಜಿನಧರ್ಮದೊಳೊಳ್ಳಿದನಾಗು ಜೈನಶಾ
ಸನವರದೀಪನಾಗು ಜಿನಸೇವನೆಯೊಳ್ ದೃಢನಾಗು ರಾಜ್ಯಗೋ
ಮಿನಿಗಧಿನಾಥನಾಗಿ ಸಲೆ ಭವ್ಯಜನಾಳಿಯೊಳೊಂದಿ ಕೂರ್ತು ಸ
ಜ್ಜನನುತನಾಗಿ ಪಾಲಿಸು ಮಹಾವನಿಯುಂ ರವಿಚಂದ್ರರುಳ್ಳಿನಂ [1] ||೧೬೯

ಎಂದು ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು ಸಂತೋಷದಿಂ ಜಿನಾಭಿಷೇಕ ಪೂಜೆಗಳಂ ಮಾಡಿ ಕೆಲವುದಿವಸಕ್ಕೆ ಬಸಗೆಮರುಳ್ಗೊಂಡು || ೧೭೦

ತನಯುಂಗೆ ರಾಜ್ಯಭರವಂ
ಮನುಜೇಂದ್ರಂ ಕೊಟ್ಟು ಮಿಾಪರಿಗ್ರಹದಿಂ ಬೇ |
ಳನಿಸದೆ ಜಿನೇಂದ್ರಪದಸೇ
ವನೆಯೊಳ್ ಸಚ್ಚಿತ್ತನಾಗಿ ನಿಲ್ವುದುಮಾಗಳ್ || ೧೭೧

ಧರಣೀಶರ್ ಬೆಸಕೆಯ್ಯೆ ಕೂರ್ತು ಸತತಂ ಕೈವಾರದಿಂದೆಯ್ದೆ ಭೃ
ತ್ಯರುದಾರರ್ ಪದಪಿಂದೆ ಪೊರ್ದೆ ಪರಭೂಪಾಲರ್ ಮಹಾಭೀತಿಯಿಂ
ನರಿಯಂತಂಜಿ ಕುನುಂಗಿ ತಮ್ಮ ಧನಮಂ ತಂದೀಯೆ ಭವ್ಯಾಳಿ ಪೆ
ರ್ಚಿರೆ ಸದ್ಧರ್ಮದಗುರ್ವು ಪರ್ವೆ ಧರೆಯುಂ ಭೂಭಾಗಮಂ ತಾಳ್ದಿದಂ ||

ಅಂತು ರಾಜ್ಯಶ್ರೀಯುಂ ತಾಳ್ದಿ ಸೌಂದರಮಹಾದೇವಿಯುಂ ಚಂದ್ರಲೇಖೆಯುಂ ಮೊದಲಾದನೇಕರಸಿಯರೊಳ್ ಕೂಡಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತು ಮಿರ್ಪಿನಮಾಪುರಕ್ಕೊರ್ವ ಧರ್ಮಘೋಷಭಟ್ಟಾರಕರೆಂಬಧಿಕಗುಣರಪ್ಪ ರಾಜರ್ಷಿಯರ್ ಬರ್ಪುದುಂ ಅವರ ಬರವಂ ಋಷಿನಿವೇದಕಂ ಬಂದರಸಂಗೆ ಬಿನ್ನಪಂಗೆಯ್ವುದುಮಾತಂಗಂಗ ಚಿತ್ತಮನಿತ್ತು || ೧೭೨

ಪರಮೋತ್ಸವದಿಂ ಪುಣ್ಯಂ
ದೊರೆಕೊಂಡುದು ದಿವ್ಯಮುನಿಯ ಬರವಿನೊಳೆಮಗೆಂ |

[1] ಈ ಪದ್ಯವು (ಗ) ಪುಸ್ತಕದಲ್ಲಿ ಈ ಅಧ್ಯಾಯದ ಕೊನೆಗೆ ಬರುತ್ತದೆ.

ದರಸಂ ರಾಜಕುಮಾರರ್
ವೆರಸು ಸುರಾಧೀಶನಂತೆ ಪೊಱಮಟ್ಟಾಗಳ್ ॥ ೧೭೪

ಬಂದು ಜಿನಭಕ್ತಿಯಿಂ ಮುನಿ
ವೃಂದಾರಕನಂಘ್ರಿಯುಗಳಮಂ ಪೂಜಿಸಿ ಭೂ ।
ವಂದಿತಪದಪಂಕರುಹಂ
ವಂದಿಸಿ ಕುಳ್ಳಿರ್ದು ಮುಗಿದು ಹಸ್ತಾಂಬುಜಮಂ ॥ ೧೭೫

ನಿರ್ವಾಣಶ್ರೀಯ ಶೃಂಗಾರಮೆನಿಸಿದ ಜಿನಧರ್ಮಮಂ ಕಿವಿಯಾಂತೇಕಚಿತ್ತದಿಂ ಕೇಳುತ್ತುಮಿರ್ದು ವಾತ್ಸಲ್ಯರತ್ನಾಕರಂ ಪರಾಂಗನೆಗಳಪಿ ಕೆಡೆದ ಸಹಸ್ರಭಟನಪ್ಪ ಸುವೇಗನಂ ನೆನೆದು ಮನದೊಳ್ ವಿಸ್ಮಯಂಬಡುತ್ತಿರ್ಪುದುಂ ಧರ್ಮಘೋಷಣಭಟ್ಟಾರಕರವಧಿಜ್ಞಾನರೂಪ್ಪದಱಿಂ ಸಮ್ಯಕ್ತ್ವಚೂಡಾಮಣಿಯ ಮನದ ಚಿಂತೆಯನಱಿದಿಂತೆಂದರ್ ][1] ॥ ೧೭೬

ನೀಂ ನೆನೆಯುತ್ತಿರ್ಪ ಸುವೇ
ಗಂ ನಿನ್ನಂಗನೆಗೆ ಸೋಲ್ತ ಪಾಪದ ಫಲದಿಂ ।
ದಂ ನರಕಕೆಯ್ದಿ ವೇದನೆ
ಯಿಂ [2] ನವೆದಪನೀಗಳೆಂಬುದುಂ ನೃಪತನಯಂ ॥ ೧೭೭

[ಬೆಱಗಾಗಿ ಕರ್ಮಜೀವಿಗ
ಳಱಿಯದೆ ಮತಿಗೆಟ್ಟು ಪೆಱರ ಪೆಂಡಿರಯಿಂಪಿಂ ।
ಗೆಱಗಿ ಮತಿಗೆಟ್ಟು ಜಗುಪ್ಸೆಡೆ
ಯುಱಿಯದೆ ಪುಱುಗುತ್ತುಮಿರ್ಪರೇಂಸಾಸಿಗರೋ ॥ ೧೭೮

1 ಅಂತಾತನಂ ಕೊಂದು ಕೌಶಂಬಿಗೆ ಬಂದು ಪೊಱಗಿರ್ದರಿಬಲಮಂ ಕಾದಿ ಗೆಲ್ದು ದಂತಿಬಳಮಹಾರಾಜನೊಳ್ ಕೂಡುವುದುಂ, ಧರ್ಮಘೋಷಣರೆಂಬಾಚಾರ್ಯರ್ ರಾಪುರಕ್ಕೆ ಬರ್ಪುದುಂ ಅವರಂ ತಾನುಂ ತಮ್ಮಯ್ಯನುಂ ಪೋಗಿ ವಂದಿಸಿ ಧರ್ಮಮಂ ಕೇಳುತ್ತಮಿರ್ಪುದು ವಾತ್ಸಲ್ಯರತ್ನಾಕರನು ಚಂದ್ರಲೇಖೆಗಳಪಿ ಸತ್ತ ಸಹಸ್ರಭಟನಪ್ಪ ಸುವೇಗನನಂ ನೆನೆವುದುಂ ಮುನಿವೃಂದಾರಕನವಧಿಯಿಂದಱಿದು ಇಂತೆಂದಂ (ಗ) 2 ದಿನ್ನುಂ ನರಕದ ನೆಲೆಯಿಂದಂ (ಗ)

ಸಾರಂ ಸ್ತ್ರೀಸುಖಮೆಂದವಿ
ಚಾರತೆಯಿಂ ಬೞಿದೆ ಮುೞುಗಿ ಬೆಳ್ತನದಿಂ ಸಂ ।
ಸಾರಿಗಳೞಗುವರನ್ಯರ
ನಾರಿಗೆ ನರಕಕ್ಕೆ ಜಗುಳ್ವ ಸಮಕಟ್ಟೆಂದಂ ॥ ೧೭೯

ತವುಡಂ ತಿಂದು ತುಯ್ಯಲನುಂಡೆನೆಂಬಂತೆ ನಾಯನೇಱಿ ಕರಿಯು ನೇಱಿದೆನೆಂಬಂತೆ ಗಂಜಿಯುಂ ಕುಡಿದು ಕಳವೆಯ ಕೂೞನುಂಡೆನೆಂಬಂತೆ ಬಾಚೆಲೆಯುಂ ತಿಂದು ಪಣ್ಣಂ ತಿಂದೆನೆಂಬಂತೆ ಕಬ್ಬಿನಡಿಯು ಬೇರಂ ತಿಂದು ಕಬ್ಬಂ ಮೆಲ್ದೆನೆಂಬಂತೆ ಸಂಸಾರದಲ್ಪಸುಖಮಂ ಸಂಕಲ್ಪದಿಂ ಮಹಾಸುಖಮೆಂದು ನಂಬಿ ನರಕದೊಳಾದ ಮಹಾದುಃಖಕ್ಕೊಳಗಾದರಕ್ಕಟಾ ಮೂರ್ಖರೆಂದು ತನ್ನೊಳ್ ಭಾವಿಸಿ ಮುನಿಕುಂಜರಂಗೆ ಪುನರ್ನಮಸ್ಕಾರಂಗೆಯ್ದು ತನ್ನ ಮನೆಗೆವಂದು] [1] ॥ ೧೮೦

ಪುಲಿಯುಂ ಸೊರ್ಕಿದ ಗಂಧಸಿಂಧುರಮನತ್ಯಾಳಾಪಿಯಾಗಿರ್ದ ದು
ಷ್ಕುಲನಂ ಪನ್ನಗನಂ ವಿಷೋತ್ಕರಮನಸ್ತ್ರಾನೀಕಮಂ ಸಿಂಹಸಂ
ಕುಲಮಂ ಕಾಣ್ಬವೊಲಂಜಿ ಸಾರದೆ ಪರಸ್ತ್ರೀಯರ್ಕಳಂ ಭೂರಿಭೂ
ತಳದೊಳ್ ತಾಯ ಸಮಾನಮೆಂದು ಬಗೆದಂ ವಾತ್ಸಲ್ಯರತ್ನಾಕರಂ॥೧೮೧

ಎಸೆವ ಪರಸ್ತ್ರೀಯರ ತೆ
ಳ್ವಸಿಱಂ ಪೆತ್ತ ಬಸುಱೆಂಬನಲ್ಲದೆ [2] ಮತ್ತೊಂ ।
ದಸದಾಳಾಪಮನೆನ್ನಂ
ವಸುಮತಿಯೊಳ್ ಸುಕವಿನಿಕರಪಿಕಮಾಕಂದಂ ॥ ೧೮೨

ಮಂಡಿತಮೆನಿಸುವ ಲೋಗರ
ಪೆಂಡಿರ ಪೆರ್ಮೊಲೆಯುಮಂ ಮನೋಮುದದಿಂ ಮು ।

---

1 ಬೞಿಗಾಗಿ ದಂತಬಳಮಹಾರಾಜನದುವೆ ನಿರ್ವೇಗಮಾಗಿ ಸಾಸಿರ್ವರರಸುಮಕ್ಕಳ್ವೆರಸು ಜಾತರೂಪಧರನಾಗಿ ಪೋದನಿತ್ತಲ್ ಸಮ್ಯಕ್ತ್ವಚೂಡಾಮಣಿ (ಗ)

2 ಪರಸ್ತ್ರೀರತೆಯೊಳ್ ಬಱಂಬೆತ್ತ ಬಸುಱಿಂಬನಲ್ಲದೆ (ಗ) ಪರಸ್ತ್ರೀಯರ ತೆಳ್ವಸುರುಗಳಂ ಪೆತ್ತ ಬಸಿರೆಂದೆಂಬಂ (ಕ. ಬ.)

ನ್ನುಂಡ ಮೊಲೆಯೆಂಬನವನೀ
ಮಂಡಲದೊಳ್ ಸುಕವಿನಿಕರಪಿಕಮಾಕಂದಂ ॥ ೧೯೩

ಚಿತ್ತ್ರದಿಂದನ್ಯರ ಸಂ
ಪತ್ತಿನ ವನಿತೆಯರ ನೀಳ್ದ ನಿಡಿದೋಳ್ ಕಿಱಿಯಂ ।
ದೆತ್ತಿದ ತೋಳಂದಿರ್ದನು
ದಾತ್ತತೆಯಿಂ [1] ಸುಕವಿನಿಕರಪಿಕಮಾಕಂದಂ ॥ ೧೯೪

ಅಂತು ಕಾಳಕೂಟದೊಳ್ ಬೆರಸಿದ ಕೂೞಂತೆ ದೃಷ್ಟಿವಿಷಮಪ್ಪ ಪಾವಿನ ತಲೆಯ ಮಾಣಿಕದಂತೆ ಬೆಟ್ಟದಡಿಯಲ್ಲಿರ್ದ ನಿಧಿಯಂತೆ ನೆಗೞುಳ್ಳ ಮಡುವಿನೊಳಿರ್ದ ನಿಕ್ಷೇಪದಂತೆ ಚಕ್ರವರ್ತಿಯ ಬಾಯ ತುತ್ತಿನಂತೆ ಕತ್ತಿರಿವಾಣಿಯೊಳಗಣ ಕರ್ವಿನಂತೆ] ಪುಲಿಯ ಮೀಸೆಯೊಳಿರ್ದ ಮುತ್ತಿನಂತೆ ಸಿಂಹದ ದಾರಿಯೊಳಿರ್ದ ಗಾರಿಗೆಯಂತೆ ಡಾಕಿನಿಯರ ಕೈಯ ಪೋಳಗೆಯಂತೆ ರಕ್ಕಸಿಯರಮನೆಯ ಬೆಲ್ಲದಂತೆ ಕಲ್ಲ ಬಿಡಮೆಯೊಳಿರ್ದ ಪಣವಿನಂತೆ] ಸಿಡಿಲೊಳಗಿರ್ದ ಸಕ್ಕರೆಯಂತೆ ಕಾಡೆಮ್ಮೆಯ ಮೊಲೆಯ ಪಾಲಂತೆ ಕಟ್ಟರಿವಪ್ಪ ಪರವನಿತೆಯರಂ ಪಂಬಲಿಸುವ [2] ನಾಲಗೆಯೊಳ್ ಪಣವನಿಕ್ಕಿ ತೋಱುವ ಕಣ್ಸನ್ನೆಗೆಯ್ವ ಸಂಕೇತಮಂ ನುಡಿವ ಬೞಿಯಟ್ಟುವ ಮರುಳ್ಗಂ, ಕಾಲ ಕಿಚ್ಚನೆರ್ದೆಗೆ [3] ತೆಗೆವ ಬೆಟ್ಟೇಱಿ ಮೃತ್ಯುಗರೆವ ಸುಣ್ಣಮಂ [ಬಱಿದೆ] ಕುಡಿಪ ಕಣ್ಣೊಡೆದುಕೊಳ್ವ ಕೋೞಕ್ಕೆ ಕಾಲಂ ನೀಡುವ ಶೂಲಮನೇಱ ಕುಳ್ಳಿರ್ಪ [4] ಕೊಲ್ವಾನೆಯ ಕಾಲಂ ಪಿಡಿವವನಂ ಪೋಲ್ಕುಂ. ಗಂಡನ ನೆರೆಯ ಪೊರೆಯ ತಳಾಱರ ಲೋಗರ [5] ಮಿಂಡರ ಭೂಪರ ಬಾರಿಗೆ ಬಿರ್ದ ಬೋಡಾಗಿ ನಾಯಾಗಿ ತೇಜಂಗೆಟ್ಟು ಸಾಗುಮದು ತಪ್ಪಿ ಪಾದರಂ ಮೆಯ್ಯಿಕ್ಕಿದೊಡಂ, ಕದ್ದಾತನರಸನ ಕಯ್ಯೊಳ್, ಕದ್ದು ಪರದಾಡುವಂ ಸುಂಕಿಗನ ಕಯ್ಯೊಳ್,

---

1 ಉದಾತ್ತಯಶಂ (ಕ. ಬ.)

2 ಪಂಬಲಿಸುವವನುಂ ನೆವನೆವದಳೆ ಮಱುಗುವವನುಂ (ಗ)

3 ನಿದ್ರೆಗೆ (ಗ) 4 ಕೊಲುವಾನೆಗೆ ಪಾಳಂಬಪವನುಂ (ಗ)

5 ಮುನಿವರ (ಗ)

ತುಡುಗುಣಿನಾಯ್ ಮನೆಯುವರ ಕಯ್ಯೊಳ್, ಪಂಚಕ [ರಪ್ಪ ಗಂಡುಗ]ಳ್ ತಳಾಱರ ಕಯ್ಯೊಳ್, ಪಲವುಸೂಡ್ [ನೀರನೀ] ಸುವಂ ನೀರ ಕಯ್ಯೊಳ್, ಪಾವಡಿಗಂ ಪಾವಿನ ಕಯ್ಯೊಳ್, ಪುಲಿವೇಂಟೆಗಾಱಂ ಪುಲಿಯ ಕಯ್ಯೊಳ್, ಕಡುಬಿರುದಂ [1] ಕಲಿಯ ಕಯ್ಯೊಳ್, ತುಡುಗಾಡುವ ಬಸವನಾರಂಬಿಗನ ಕಯ್ಯೊಳ್, ಇರುಳ್ವಟ್ಟೆಗಾಱಂ ಕಳ್ಳನ ಕಯ್ಯೊಳ್, ಸಿಕ್ಕುವಂತೆ ನಾರ ಕರ ಬಾರಿಯೊಳ್ ಬಿರ್ದ ಬಾದ ಭವಂ ಬಱ್ದನೆಂಬ ಜಿನಾಗಮ ದೋಷೆಯಂ ಭಾವಿಸಿ ಪರದರದ ವ್ಯಸನಕ್ಕೆ ಭಯಸ್ಥನಾಗಿ ॥ ೧೮೫

ರತಿ ರಂಭೆ ತಿಲೋತ್ತಮೆ ಭಾ
ರತಿಯೆಂಬಿವರೊರೆಗೆ ಬರ್ಪ ಪರವನಿತೆಯರ್ಗ |
ನ್ನತರಾಜವಂಶತಿಲಕಂ
ಗತಿಶಯದಿಂ ಸೋಲವಲ್ತೆ ಕಣ್ಣುಂ ಮನಮುಂ ॥ ೧೮೬

[ಅಂತು ಪರನಾರೀನಂದನನುಂ ಜಿನಪಾದಪದ್ಮ ಷಟ್ಪದನುಂ ಸದ್ಧರ್ಮವಿನೋದನುಂ ಮುನಿಪಚನಾನಂದಹೃದಯನುಂ ಸಮ್ಯಕ್ತ್ವ ಚೂಡಾಮಣಿಯುಂ ಭವ್ಯಜನಸರೋಜಿನೀರಾಜಹಂಸನುಮಾಗಿ] [2] ಪಲ ವುಕಾಲಂ ರಾಜ್ಯಂಗೆಯ್ದೊಂದುದಿವಸಂ ಗಂಟಲನಡಸಿ ಪಿಡಿದ ಜವನ ಕಯ್ಯುಗುರಿನಂತೆ ಸಾವು ಮುಟ್ಟಿವೆಂದುದೆಂದು ಕಿವಿಯೊಳ್ [3] ಪರ್ಚಿ ಪೇೞಲ್ ಬಂದ ಯಮಧರ್ಮರಾಜನ [4] ದೂತನಂತೆ ಮೃತ್ಯುರಾಜನ ತಳಾಱ [ರಣೆದ]ಡಂಗೆಯ್ವ ಸುಣ್ಣದಂತೆ ಮುನ್ನಂ ಧರ್ಮದ್ರೋಹನಾ ಗಿರ್ದ ಬೆಳ್ನನದ ಬೆಳ್ಪನಂತೆ ತಲೆಗೆ ಬಿಗಿದ ಕೃತಾಂತನ ಕಯ್ಯ ನೂಲ ನೇಣಿನಂತೆ ಕೊಲಲೆಂದು ಮೊಗಮಿಕ್ಕಿದ ಯಮಗಜದಂತದಂತೆ ಕೀನಾಶ ನೆಂಬ ಕಿರಾತನೆಚ್ಚ ಕವಲಂಬಿನ ಮೊನೆಯಂತೆ ತಲೆಗೆ [5] ಪಾಯ್ವಂತಕ ನೆಂಬ ಪುಲಿಯ ಪಲ್ಲೆಂಬಂತೆ ಜವ್ವನವೆಂಬ ಸೂರ್ಯನ ಕೇಡಿಂ ಮರಣವೆಂಬ ರಾತ್ರಿಯೊಳುದಯಂಗೆಯ್ದ ಳವೆಱೆಯೆಂಬಂತೆ ಕುಂದಿದಾ

1 ಕಡುವಿರಿಪಂ (ಗ)  2 ಎನಿಸಿ (ಗ)
3 ಕಿವಿಯಿಲ್ (ಕ. ಬ.)  4 ಕರ್ಮರಾಜನ (ಗ)
5 ಪರಿದಱಿವುವಕಾಳಮುಖನಸಿತಪೀತಾಕೆಯಂತೆ (ಗ)

ಯುಷ್ಯವೆಂಬ ತೊಱೆಯೆರಡುತಡಿಯ ಬಿಳಿಯ ಮೞಲ ದಿಂಟೆಯಂತೆ ಪಿಡಿದಡಸಿ ನುಂಗುವ ಸಂಸೃತಿಯೆಂಬ ಶಾಕಿನಿಯ ಕಡೆಗಣ್ಣೆಂಬಂತೆ ಭಯಂಕರಮಾಗಿರ್ದ ಕೆನ್ನೆಯ ನರೆಯಂ ಕನ್ನಡಿಯೊಳ್ ಕಂಡು ||೧೮೭

ಎನಿಸೆನಿಸು ಸಿರಿಯೊಳದೊರ್ಡ
ಮನಿಸನಿಸು ಮನಕ್ಕೆ ಮೋಹಮೊದವುತ್ತಿರ್ಕುಂ |
ಮನವಿಂಗೆ ಸಹಜಮದಱಿಂ
ಮನವೆಂದುದನಾಡುತಿರ್ಪ ಮನುಜನೆ ಗಾಂಪಂ || ೧೮೮

ಧನಮನುಪಾರ್ಜಿಸುವುದು ಮ
ತ್ತೆನಗೆಂದುಂ ಮರಣಮಿಲ್ಲ ಶಾಶ್ವತಮೆಂಬಂ |
ತನುನಯಮೊದವುಗುಮಳಿಪುಂ
ಘನಮಕ್ಕುಂ ಸಹಜಮನುಗಿದಂ [1] ಬಾರಿಪರಾರ್ || ೧೮೯

ಸಾವಕ್ಕುಂ ಕಡುನೋಗುಂ
ಭಾವದೊಳಲ್ಲಾಡುತಿರ್ಕುಮತಿಲೋಲತೆಯಿಂ |
ಭಾವಿಪುದು ಧರ್ಮಮೆಂದೊಡೆ
ಜೀವಂ ಧಾರಿಣಿಯೊಳಂತಿದಂ ಬಾರಿಪರಾರ್ || ೧೯೦

ಪರವನಿತೆಗೋತು ಕೂಡಿರೆ
ಧರಣೀಶರ್ ಪಿಡಿಯೆ ಮೋಹಮಿಲ್ಲದೆ ಪೊನ್ನಂ |
ಪಿರಿದೀವಂ ಧರ್ಮಕ್ಕೊಂ
ದರೆಗಾಣಿಗೆ ಜೀವಮಕಟ [2] ಮೋಹಿಸುತಿರ್ಪಂ || ೧೯೧

ನಿಕ್ಕಾರಣಮರಸರ್ ಪಿಡಿ
ದಕ್ಕಟ ತೆಱಿಮೆಂದು ಬೇಡೆ ಬೇಡಿದ ಪೊನ್ನಂ |
ನಿಕ್ಕುವವಿಮಾಪಕೇೞಳೊಂ
ದಕ್ಕಿಯುಮಂ ಧರ್ಮಮೆಂದೊಡೀವವರೊಳರೇ || ೧೯೨

1 ಸಹಜಮನುಜಗಿದ (ಗ)  2 ಜೀವನದಕೆ (ಗ)

ಪರಿತಂದು ಬಂದಿಕಾಱರ್
ಕೊರಲಂ ಪಿಡಿದೊತ್ತಿ ಬೇಡಿದರ್ಥಮನೀವರ್ ।
ವರಧರ್ಮಕ್ಕೊಂದಡಕೆಯು
ನೆರೆದೊಡಮಣಮೀವರೊಳರೆ ವಸುಧಾತಳದೊಳ್ [1] ॥ ೧೯೩

ಮರಣಂ ಸಾರ್ಚಿದೊಡಂ ಪೆಣಂ ಕೆಡೆವೂಡಂ ದಾರಿದ್ರ್ಯರಾಗಿರ್ದೊಡಂ
ಸಿರಿಯಂ ಚಿಂತಿಸಿ ಪೆಂಡಿರಂ ನೆನೆದು ಪುತ್ರಾನೀಕಮಂ ನೋಡಿ ನಿ
ಷ್ಠುರದಿಂ ಬರ್ದುಗುಮಲ್ಲದಣ್ಣ ಧರೆಯೊಳ್ ಕೂಡಿರ್ಪ ಸದ್ಧರ್ಮಮಂ
ನಿರುತಂ ಚಿಂತಿಸಲಾಱರಲ್ತೆ ಸಹಜಂ ಜೀವಕ್ಕೆ ಭೂಲೋಕದೊಳ್॥೧೯೪

ಎಂದು ಜೀವನೊಳಾದ ಹೀನಸ್ವಭಾವಮಂ ಚಿಂತಿಸಿ [ರಾಜ್ಯದೊಳನಿತುಕಾಲಮಿರ್ದೊಡಂ ಜೀವಕ್ಕೆ ಮೋಹಮುಗುವಾಗೊದವುಗುಮಲ್ಲದೆ ಸಾವೂಡಂ ಪೋಗದೆಂದು ನಕ್ಕು] ತನ್ನ ಪಿರಿಯಮಗನಪ್ಪ ವಿಮಲಕೀರ್ತಿಯೆಂಬಂಗೆ ಪಟ್ಟಮಂ ಕಟ್ಟಿ ರಾಜ್ಯಮಂ [ತೊಱೆದು ತಪಂಗೆಯ್ದು] [2] ಸಮಾಧಿಮರಣದಿಂ [ಮುಡಿಪಿ ದೇವಗತಿವಡೆ]ದಾರಣಮೆಂಬ ಪದಿನೈದನೆಯ [3] ಸ್ವರ್ಗದೊಳಪ್ಪತ್ತೆರಡುಸಾಗರೋಪಮಾಯುಷ್ಯಮನುಳ್ಳ ಕೀರ್ತಿಧರನೆಂಬ ಮಹರ್ಧಿಕದೇವನಾಗಿ ಪುಟ್ಟಿದನಿಂತು ॥ ೧೯೫

[4] ಪರವನಿತೆಗೆ ಸೋಲ್ತೊಡೆ ತಾಂ
ಪರವನಿತೆಯೆ ಕಷ್ಟಮೆಂದು ಪರವನಿತೆಯರೊಳ್ ।

---

1 ಧರೆಯೊಳ್ ಧರ್ಮಕ್ಕೆನೆ ಕೇಳರೆಯುಡಕೆಯು ನೀವರೊಳರೆ ವಸುಧಾತಳದೊಳ್ (ಗ)

2 ಕೊಟ್ಟು॥ ಜಿನಪದಭಕ್ತನಾಗು........ರವಿಚಂದ್ರರುಳ್ಳಿನಂ (೧೬೯ನೆಯ ಪದ್ಯ.) ಎಂದು ಪರಸಿ ಬುದ್ಧಿವೇಳ್ದು ಮುನ್ನಿನ ಧರ್ಮಘೋಷಣಭಟ್ಟಾರಕರಲ್ಲಿ ದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು ಪ್ರಮಾಧಿಮುನೀಂದ್ರಂ ಕಡೆಯೊಳ್ (ಗ)

3 ಪದಿನಾಱನೆಯ (ಗ)

4 [ಪರವನಿತೆಗೆಱಗದನ್ಯರ
ತರುಣಿಗೆ ಮನಮೀಯದೇಕಚಿತ್ತದಿನಮರೇಂ ।

ನೆರೆಯದೆ ಜೀನೇಂದ್ರಪದಮಂ
ಸ್ಮರಿಯಿಸಿದ ಮಹಾತ್ಮನೆಯ್ದುಗುಂ ನಿರ್ವೃತಿಯುಂ ॥ ೧೯೬

ಎಂದು ಸ್ವದಾರಸಂತುಷ್ಟತೆಯಿಂ ದೇವಗತಿವಡೆದ ಪ್ರಮಾಥಿ ಕುಮಾರನ, ಪರಸ್ತ್ರೀರತಿಯಿಂ ನರಕಕ್ಕೆ ಸಂದ ಸುವೇಗನ[1] ಕಥೆಯುಂ ಗಣಧರಸ್ವಾಮಿಗಳ್ ಪೇಳ್ದುದುಂ[2] ॥ ೧೯೭

ಸುರರಾಜಾದ್ರೀಂದ್ರಧೈರ್ಯಂ ಪರಮತಗಿರಿವಜ್ರಾಯುಧಂ ಜೈನಯೋಗೀ
ಶ್ವರದಾಸಂ ವಾಗ್ವಧೂವಲ್ಲಭನಘತಮ[3] ತೀವ್ರಾಂಶು ಪೆರ್ಚಿದರ್ದನುರ್ವೀ
ಶ್ವರಪೂಜ್ಯಂ ರಾಗದಿಂದಂ ಗುಣಗಣನಿಳಯಂ ಕೇಳ್ದು ತ್ರೈವಿದ್ಯಚಕ್ರೇ
ಶ್ವರಪಾದಾಂಭೋಜಭೃಂಗಂ ಸುಕವಿಜನಮನಃಪದ್ಮಿನೀರಾಜಹಂಸಂ[4] ॥

ಇದು ನಿಖಿಲದಿವಿಜಪರಿವೃಢಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ಸಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ಬ್ರಹ್ಮ[5] ವ್ರತವ್ಯಾವರ್ಣನಂ
ತ್ರಯೋದಶಾಶ್ವಾಸಂ.

---

ದ್ರನನಿಳಿಂಪನಮ್ನಪದನಂ
ನೆನೆಯುತ್ತಿರೆ ಮೋಕ್ಷಮೆಂಬುದಾವುದುಗಹನಂ] (ಕ. ಖ.)

1 ಸುವೇಗನಿಂದಬ್ರಹ್ಮದೊಳಾದ (ಕ. ಖ.) 2 ಪೇಳ್ಕೇಳ್ದು (ಗ)

3 ಎಲ್ಲಾ ಪ್ರತಿಗಳಲ್ಲಿಯೂ ಈ ಶಬ್ದವು ಅಕಾರಾಂತವಾಗಿಯೇ ಕಂಡುಬರುತ್ತದೆ.

4 ವಾಗ್ವಧೂವಲ್ಲಭಘನತಮಚಂಡಾಂಶು ಪೆರ್ಚಿದರ್ದನಂದಾ | ದರದಿಂ ತ್ರೈವಿದ್ಯಚಕ್ರೇಶ್ವರನಮಲಪದಾಂಭೋಜಭೃಂಗಂ ಜಿನ ಶ್ರೀ | ಚರಣಾಲಂಕಾರಶೀರ್ಷಂ ಸುಕವಿಜನಮನಃಪದ್ಮಿನೀರಾಜಹಂಸಂ ॥ (ಗ) 5 ಸಬ್ರಹ್ಮ (ಗ)

## ಚತುರ್ದಶಾಶ್ವಾಸಂ

ಶ್ರೀವಿಳಸಜ್ಜನವಂದ್ಯಂ
ಪಾವನಸಬ್ರಹ್ಮ[1] ಸುವ್ರತಂ ನಿರ್ವಾಣ।
ಶ್ರೀವಿಭವಮೆಂದು ನಲಿದಂ
ಭೂವಿದಿತಂ ಸುಕವಿನಿಕರಪಿಕಮಾಕಂದಂ॥ ೧

ಅಂತು ಬ್ರಹ್ಮವ್ರತದ[2] ಕಥೆಯಂ ಕೇಳ್ದು ತದನಂತರಂ [ಶ್ರೇಣಿಕಮಹಾರಾಜನಮೃತಶ್ರೀರಮಣಿಯ ಗೃಹಮೆನಿಸುವಪರಿಗ್ರಹದ ಕಥೆಯುನೆನಗೆ ನಿಮ್ಮಡಿ ಬೆಸಸುವುದೆಂದು॥ ೨

ಕರಕಮಲಂಗಳಂ ಮುಗಿದು ಸಂತಸದಿಂದಿರೆ ಗೌತಮರ್ ಮಹೀ
ಧರನಿಭಧೈರ್ಯರೂರ್ಜಿತರನಂಗಹರರ್ ಮುನಿವಂದಿತಕ್ರಮಾಂ
ಬುರುಹರುದಾತ್ತಚಾರುಚರಿತರ್ ಜಲರಾಶಿನಿನಾದದಿಂ ಮಹೀ
ಶ್ವರರತಿಭಕ್ತಿಯಿಂದೊಸೆದು ಕೈಮುಗಿಯುತ್ತಿರೆ ಪೇಳ್ದರರ್ತಿಯಿಂ][3]॥೩

ಫಲಮಿಲ್ಲದೆ ಪೂವನೆ ತೋಱಿ ಪೋಪ ಸಂಪಗೆಯಂತೆ ಬಱ[4] ಮಾತನೆ ತೋಱಿ ಪೋಗದೆ, ತಳರನೆ ತೋಱಿ ಪೋಪಶೋಕೆಯಂತೆ ಸಿರಿಯನೆ ತೋಱಿ ಪೋಗದೆ, ಪರೆಪನೆ ತೋಱಿ ಪೋಪ ಆಲದಂತೆ ಬಳಸನೆ ಸುತ್ತಿ ಪೋಗದೆ, ಬಲ್ಪನೆ ತೋಱಿ ಪೋಪ ತರಿಯಂತೆ[5] ಮಹಿಮೆಯನೆ ತೋಱಿ ಪೋಗದೆ, ನಾರನೆ ತೋಱಿ ಪೋಪ ಸೆಣಂಬಿನಂತೆ ತನ್ನನೆ ಮೆಱೆದು[6] ಪೋಗದೆ; ಮಾವಿನಂತೆಲ್ಲವಱೊಳಂ ನೆಱೆದು ಪುಣಿಸೆಯಂತೆ ಪಲವಱೊಳಮೊಪ್ಪಿ, ಲವಣದಂತೆ ಸದ್ದೃಷಿಗಳ ಕೂಟ

---

1 ಸದ್ಧರ್ಮ (ಗ) 2 ಸುವ್ರತದ (ಗ) 3 ನಿಯಮಿತ ಪರಿಗ್ರಹದ ಕಥೆಯುಂ ಬೆಸಸಿವೆಂಬುದುಂ ಇಂತೆಂದು ಪೇಳ್ದರ್ (ಗ) 4 ಮಱು (ಗ) 5 ತಱಿಯ ಮರದಂತೆ (ಗ) 6 ತೋಱಿ ಮೆರೆದು (ಗ)

ದೊಳ್ ರುಚಿವಡೆದು, ದೀಪವರ್ತಿಯಂತೆ ಪಂಚಪರಮೇಷ್ಠಿಗಳ್ಗೆ‌ಅರ್ಕಂ ಮಾಡಿ, ಸೊಡರಂತೆ ಚಾತುರ್ವರ್ಣ್ಯದೊಳ್ ಸ್ನೇಹದಿಂ ಕೂಡಿ; ಸಮೆದ ಚೀಲದೊಳ್ ಪೊನ್ನನಿಕ್ಕುವಂತೆ, ಕಿಚ್ಚು ಳ್ಳೊಲೆಯೊಳ್ ಕೂೞನಡುವಂತೆ, ಪಣ್ಣಿದಾನೆಯನೇಱುವಂತೆ, ಮಡಿಯಾದ ಸೀರೆಯನುಡುವಂತೆ, ಮದುವೆಯಾದಳಂ ಮನೆಗೆ ತರ್ಪಂತೆ, ರಾಶಿಯಾದ ಧಾನ್ಯಮನಳೆವಂತೆ, ಸಮೆದಾಭರಣಮಂ [1] ತುಡುವಂತೆ, ತಂದೆ ತೋಱಿದ ಬಯ್ಕೆಯನಗೆಳ್ವಂತೆ [ಬಂದ ನಿಧಾನಮಂ ಕೈಕೊಳ್ವಂತೆ] ಸಮ್ಯಕ್ತ್ವಂಬೆರಸು ಪಂಚಾಣುವ್ರತಮಂ ಕೈಕೊಂಡು; ಕೋಡಗಂ ತಂಬುಲಮಂ ತಿಂಬಂತೆ, ಮರುಳ್ ಸೀರೆಯನುಡುವಂತೆ, ಕಾಗೆ ಕೂೞಂ ತಿಂಬಂತೆ, ಕುರುಡಿ ಜೋಳವಮಂ ಕುಟ್ಟುವಂತೆ, ಪಸುಗೂಸು ಪಾಲ್ಗುಡಿವಂತೆ, ಪಲ್ಲಿಲ್ಲದೆಮ್ಮೆ ಪುಲ್ಲಂಮೇವಂತೆ, ಮುದುಕಂ ಪೂಗಟ್ಟುವಂತೆ, ಜ್ವರಬಂದವನುಗ್ಬಂತೆ, ಮೋಟಂ ನೀರ್ಗುಡಿವಂತೆ, ಹಂಚುಹಱಿಮಾಡಿ ಕಿಡಿಸದೆ ಲೇಸಾಗಿ ನಡಪಿ; ವ್ಯವಹಾರಕ್ಕೆ ಪೋದನೆಡೆಯ ದುಃಖಮಂ ಸೈರಿಸಿ ಲಾಭಂಬೆರಸಿ ಮನೆಯಂ ಪುಗುವಂತೆ, ಷಟ್ಖಂಡಮಂ ಸಾಧಿಸಿದ ಚಕ್ರವರ್ತಿ ಗೆಲ್ಲಂ ಬೆರಸು ಪುರಮಂ ಪುಗುವಂತೆ, ಕೆಯ್ಯಂ ಕಾದು ದುಃಖಬಟ್ಟೊಕ್ಕಲಿಗಂ ಧಾನ್ಯಂ ಬೆರಸೂರಂ ಪುಗುವಂತೆ, ಪಲಕಾಲಂ ನಿಧಾನಮಂ ಸಾಧಿಸಿದಾತಂ ನಿಧಿವೆರಸು ನೆಲೆಗೆ ಪೋಪಂತೆ, ಕೂಸುಕಾರಣಮಾಗಿ ಮಾವಂಗೆ ಬೆಸಕೆಯ್ದಾಳಿಯಂ ಮದುವೆಯಾಗಿ ಸುಖಮಿರ್ಪಂತೆ, ಸಿರಿಯುಳ್ಳ ತಂದೆಗೆಡಱದೆ ಮನದನ್ನನಾಗಿ ತೊೞ್ತುವೆಸಂಗೆಯ್ದ ಮಗಂ ತಂದೆಯ ಸಿರಿಗೊಡೆಯನಾಗಿರ್ಪಂತೆ ಕಡೆಯೊಳ್ ದೇವೇಂದ್ರಚಕ್ರವರ್ತಿಗಳ ಪದಮನೆಯ್ದಿ ಕ್ರಮದಿಂ ಮೋಕ್ಷಶ್ರೀಯೊಳ್ ಕೂಡಿ ಸುಖಮಿರ್ಪುದು ॥ ೪

ಎನಿತು ಪರಿಗ್ರಹದ ತೊಡ
ರ್ಪನಿತೆ ಮನೋದುಃಖಮೆಂಬುದಂ ತಾಂ ತನ್ನೊಳ್ ।
ನೆನೆದು ಪರಿಗ್ರಹಮಂ ತೊಱೆ
ವನೆ ದೇವಂ [2] ಮುಕ್ತಿವನಿತೆಗಾತನೆ ಕಾಂತಂ ॥ ೫೪

---

1 ಸಲುಗೆಯಾದಾಭರಣಮಂ (ಗ) 2 ತಂನನೆತೊಱೆವಂ (ಗ)

ಇನ್ನಾ ಪರಿಗ್ರಹದೊಳಾದ ಮಹಾಮಹಿಮೆಯೆಂತೆಂದೊಡೆ, [ಜಂಬೂದ್ವೀಪದ ಭರತಕ್ಷೇತ್ರದ ಕುರುಜಾಂಗಣವಿಷಯದ ಶ್ರಾವಂತಿಯೆಂಬ ಪುರಮಾಪುರಮನಾಳ್ವನುಪರಿಚರಮಹಾರಾಜನೆಂಬನಾತನ ಮನೋಹರಿಯರ್ ಪದ್ಮಾವತಿಯುಂ ಪ್ರಭಾವತಿಯುಂ ಸುಪ್ರಭೆಯುಂ ಕನಕಪ್ರಭೆಯು][1] ಮೆಂಬ ನಾಲ್ವರ್ ಪಟ್ಟಮಹಾದೇವಿಯರ್ ಮೊದಲಾಗೈನೂರ್ವರರಸಿಯರಿಂತು ॥ ೬

ಶತದಳನಯನೆ ಮನೋಭವ
ಲತಾಂಗಿ ಸಮ್ಯಕ್ತ್ವನಿಳಯೆ ಸೀತಾನಿಭೆ[2] ಸ।
ನ್ನುತರೂಪೆಯೆನಿಪ ಪದ್ಮಾ
ವತಿಯು ಮಗಂ ತಾನನಂತವೀರ್ಯಂ ಪೆಸರಿಂ ॥ ೭

ಆತಂ ಮೊದಲಾಗೈನೂರ್ವರ್ [ಕುಮಾರರುಂ ಮಕುಟಬದ್ಧರುಂ ವಿಳಾಸಿನೀಜನಮುಮಂಬೆರಸು ದೇವೇಂದ್ರನಂತೊಡ್ಡೋಲಗಂಗೊಟ್ಟು] ರಸಗೀತಮುಮಂ ಪರಮಾಂಡಳಿಕರ ಪೆರ್ಗಡೆಗಳ ಮಾತುಗಳುಮಂ ಕೇಳುತ್ತುಂ ಕುಮಾರರ ವಿಳಾಸಿನೀಜನದ ಅರಸಿಯರ ರೂಪುಗಳಂ ನೋಡುತ್ತುಂ ಮಹಾವಿನೋದದಿಂದಿರ್ಪುದುಂ ॥ ೮

ಸುರಗಿಯು ಸಂದ ಸಂಪಗೆಯು ಪೊನ್ನೆಯು ಜಾದಿಯು ಚೆಲ್ವುವೆತ್ತ ಪಾ
ದರಿಯು ಸುಗಂಧಮಪ್ಪ ಕುಸುಮಾವಳಿಯಿಂ ನನೆಯಿಂ ಮುಗುಳ್ಗಳಿಂ
ಕರಪರಿಶೋಭೆಯಿಂ ಸಮೆದ ಹಾರಮುಮಂ ಸಹಕಾರಪಲ್ಲವೋ
ತ್ಕರಮುಮನೊಪ್ಪುವೆತ್ತೆಳೆಯ ಕಾಯ್ಗಳ ಗೊಂಚಲುಮಂ ಸರಾಗದಿಂ ॥

ವನಪಾಲಕಂ ತಂದೊಡ್ಡೋಲಗಂಗೊಟ್ಟಿರ್ದುಪರಿಚರಮಹಾರಾಜಂಗೆ ಕೊಟ್ಟು ಮೆಯ್ಯಿಕ್ಕಿ ಪೊಡೆಮಟ್ಟು ದೂರದೊಳ್ ನಿಂದು ಕೈಗಳಂ ಮುಗಿದು ದೇವಾ ವಸಂತದ ಪುಗಿಲೊಳ್ ವನಂ ವನದೇವಿಯ

1 ಕಣಾದವಿಷಯದ ಸಾವಂತಿಯೆಂಬ ಪುರಮನಾಳ್ವನುಪಚರಿತಮಹಾರಾಜನೆಂಬನಾತಂಗೆ ಪದ್ಮಾವತಿಯುಮಮಿತಮತಿಯುಂ ಸುಪ್ರತಿಯುಂ ಪ್ರಭಾವತಿಯು(ಗ)

2 ಶೀಲಾಂಬುದೆ (ಗ)

ಜವ್ವನದಂತೆ ರಯ್ಯಮಾಗಿರ್ದಪುದದಂ ದೇವರ್ಗೆ ಬಿನ್ನಪಂಗೆಯ್ಯಲೆಂ
ದು ಬಂದೆನವಧರಿಸುವುದೆಂದುಸಿರದಿರ್ಪುದುಮರಸನಾತಂಗಂಗಚಿತ್ತಮಂ
ಕೊಟ್ಟು ನಾಳೆ ಸಕಲಜನಂಬೆರಸು ವನಕ್ರೀಡೆಗೆ ಬಂದಪೆಂ ವನಮಂ
ಲೇಸುಮಾಡುವುದೆಂದು ಪೋಗಲ್ವೇೞ್ದು ಕುಮಾರರ್ಗಮರಸಿಯರ್ಗಂ
ವನಪಾಲಕಂ ಕೊಟ್ಟ ಕುಸುಮದ ತೊಡವುಗಳುಮಂ ಪಿರಿಯರ್ಕಿಱಿ
ಯರಱಿದು ಕೊಟ್ಟು ಮಱುದಿವಸಂ ॥ ೧೦

ಶರನಿಧಿಯಂತೆ ತೂರ್ಯರವಮುಣ್ಮೆ ಮಹೀಶ್ವರನಂದನರ್ ಮದ
ದ್ವಿರದಘಟಾಳಿಯಿಂ ಮದಗಜೇಂದ್ರಮನೇಱಿ ಮನೋಜನಂದದಿಂ
ಬರೆ ತನಯರ್ ಮನೋಹರಮದದ್ವಿರದಂಗಳನೇಱಿ ಸುತ್ತಲುಂ
ಬರೆ ಗಣಿಕಾಜನಂ ನೆರೆದು ಚಾಮರಮಿಕ್ಕೆ ವಿಭೂತಿಯಿಂ ನೃಪಂ ॥ ೧೧

ಪದ್ಮಾವತಿ ಮೊದಲಾದೈನೂರ್ವರರಸಿಯರುಂ ವಿಳಾಸಿನೀಜನಮುಂಬೆರಸು ಪೊಱಮಟ್ಟು ವನಕ್ಕೆ ಬಂದು ವನದ ಚೆಲ್ವಿಂಗೆ ಸಂತೋಷಂಬಟ್ಟು ಪಿರಿದುಬೇಗಂ ವನಕ್ರೀಡೆಯನಾಡಿ ಬೞಲ್ದು ಮತ್ತಿನರಸಿಯರುಮಂ ರಾಜಕುಮಾರರುಮಂ ದೂರದೊಳಿರವೇೞ್ದು ಮನೋನಯನವಲ್ಲಭೆಯಪ್ಪ ಪದ್ಮಾವತಿಯುಮಮಿತಮತಿಯುಂ ಸುಪ್ರಭೆಯುಂ ಪ್ರಭಾವತಿಯುಮೆಂಬ ನಾಲ್ವರ್ ಪಟ್ಟದರಸಿಯರುಂ ತಾನುಂ ಚಂದನಕರ್ಪೂರಕಾಳಾಗರುಕುಂಕುಮಮಂ ಮೊದಲಾದನೇಕದ್ರವ್ಯಂಗಳಂ ಮುನ್ನಮೆ ವನಪಾಲಕಂ ಕದಡಿದ ಸುದರ್ಶನಮೆಂಬ ಕೊಳಕ್ಕೆ ಬಂದು ॥ ೧೨

ಜಲವಿಹಗಂಗಳಿಂ ಸುೞಿವ ಹಂಸೆಗಳಿಂದೆಸೆದಿರ್ದ ನೆಯ್ದಿಲಿಂ
ಜಲದನಿಕಾಯದಿಂ ನೆಗೞ್ದ ನೀಳಸರೋರುಹದೊಪ್ಪದಿಂ ಮಹೋ
ಜ್ಜ್ವಲತರಮಪ್ಪ ರತ್ನನಿಕುರಂಬದ ಕಾಂತಿಗಳೆತ್ತಲುಂ ತಳ
ತ್ತಳಿಸುವ ಕೋಂಟೆಯಿಂ ಬಳಸಿಯುಂ ನೆಱೆ ಪತ್ತಿದ ಸಲ್ಲತಾಳಿಯಿಂ ॥ ೧೩

ಒಪ್ಪುವ ಕೊಳನಂ ನೀಡುಂ ನೋಡಿ ಸರೋವರದ ಚೆಲ್ವಂ ಮನದೆಗೊಂಡು ರತ್ನಮಯಮಪ್ಪ ಸೋಪಾನಂಗಳಂ ಮೆಟ್ಟಿ ಮೆಲ್ಲಮೆಲ್ಲನಿೞಿದು ನೀರಂ ಪೊಕ್ಕು ॥ ೧೪

ನರಪತಿ ಕೊಂಡು ಚೀರ್ಕೊಳವೆಯುಂ ಬಿಡದೊಯ್ಯನೆ ಕೂರ್ಮೆಯಿಂ ಮನೋ
ಹರಿಯುರ ಮೇಲೆ ಚಿಮ್ಮೆ ನಯದಿಂದೆ ತದಂಬು ಮೃದುತ್ವದಿಂ ತಳೋ
ದರಿಯುರ ಮೆಯ್ಯ ಕುಂಕುಮದೊಳೊಂದಿ ನಿಮಿರ್ಕೆಯಿನೊಪ್ಪಿ ಮಾಣಿಕಾ
ಭರಣದ ಭಂಗಿಯುಂ ನೆಱೆಯೆ ತಾಳ್ದುದದ್ಭುತಮೆಂಬಿನಂ ಜನಂ ॥ ೧೫

ಅರಸಿಯುರಾತ್ಮವಲ್ಲಭನಮೇಲೆ ತುಳುಂಕೆ ತದಂಬು ಮೇದಿನೀ
ಶ್ವರನತಪಾದಪಂಕಜನ ಪೂಸಿದ ಚಂದನಪಂಕದೊಳ್ ಸವಿ
ಸ್ತರಮೊಡಗೂಡಿ ಚೆಲ್ವುವಡೆದೊಪ್ಪುವುದದ್ಭುತಮಾಗೆ ಮೌಕ್ತಿಕಾ
ಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ ॥

ಸುರಗಿಯು ಕೋದ ಮಲ್ಲಿಗೆಯು ಜಾದಿಯು ಮೊಲ್ಲೆಯು ಬೆಳ್ಪಿನಿಂ ಮನೋ
ಹರಮೆನಿಸಿರ್ದ ಕುಂಕುಮರಜಂಗಳ ಶೋಭನಮಪ್ಪ ಕೆಂಪಿನಿಂ
ಸುರುಚಿರಮಪ್ಪ ಕಸ್ತುರಿಯೊಳೊಂದಿ ವಿರಾಜಿಪ ಕರ್ಪಿನಿಂ ಸರೋ
ವರಮೆಸೆದಿರ್ದುದಂಗಜನ ಲೀಲೆಯ ಚಿತ್ರಪಟಂಬೊಲೊಪ್ಪದಿಂ ॥ ೧೭

ಅರಸಂ ಸರಸಿರುಹಾನನೆ
ಯುರಮೇಲೆ ತುಳುಂಕೆ ರಾಗದಿಂದಂ ನೋಡು ।
ತ್ತಿರೆ ಬಿಡದೆ ವಾರಿಜಾನನೆ
ಯುರುಮುರಸನಮೇಲೆ ಸೂಸೆ ಜಲಮಂ ನಗುತುಂ ॥ ೧೮

ಅಂತು ರಾಗರಸಮೊದವೆ ಚಿತ್ತಾಹ್ಲಾದದಿಂ ಮೆಯ್ಯಱಿಯದೆ ಜಲಕ್ರೀಡೆಯನಾಡುತ್ತುಮಿರ್ಪನ್ನೆಗಂ ವಿಜಯಾರ್ಧಪರ್ವತದುತ್ತರಶ್ರೇಣಿಯೊಳಳಕಾಪುರಮೆಂಬುದುಂಟಾಪೊೞಲನಾಳ್ವಂ ಖೇಚರರಾಜಂ ವಜ್ರದಾಡನೆಂಬಂ ತನ್ನ ಪ್ರಾಣವಲ್ಲಭೆಯಪ್ಪ ಮದನವೇಗೆಯೆಂಬ ಪಟ್ಟದರಸಿವೆರಸಿ ಭೌಮವಿಹಾರಾರ್ಥಂ ವಿಮಾನಾರೂಢನಾಗಿ ದಕ್ಷಿಣಾಶಾಭಾಗಕ್ಕೆ ಬರುತ್ತಿರ್ಪಲ್ಲಿ ಪ್ರಾಣೇಶ್ವರಿಯರೊಳ್ ಕೂಡಿ ಜಲಕ್ರೀಡೆಯನಾಡುವುಪರಿಚರಮಹಾರಾಜನುಮಂ ಮುಂದಿರ್ದ ನಾಲ್ವರ್ ಮಹಾದೇವಿಯರುಮಂ

ನೆರೆದಿರ್ದಂತಃಪುರಪುರಂಧ್ರಿಯರುಮಂ ಬಳಸಿ ಸಂದಣಿಸಿರ್ದ ರಾಜಕುಮಾರರುಮಂ ಕಾಂಡತಿವಟ್ಟು ಪೋಗದೆ ನೋಡುತ್ತಿರ್ದುದುಂ ಮದನವೇಗೆಯಿಂತೆಂದಳ್ ][1] ॥ ೧೯

ಈತರಳಾಯತಾಕ್ಷಿಯರಿನೀ ನೆರೆದಿರ್ದ ಕುಮಾರರಿಂ ಮಹಾ
ಖ್ಯಾತಿಯನುಳ್ಳ ಭೂಪನಿಕುರಂಬದೀನಿಹಯಕೋಟಿಯಿಂ ಕರಿ
ವ್ರಾತದಿನೀವಿಳಾಸದ ವಿಳಾಸಿನಿಯರ್ಕಳನೀಭಟಾಳಿಯಿಂ
ದೀತನ ರಾಜ್ಯಲೀಲೆ ಸುರರಾಜನ ಲೀಲೆವೊಲೊಪ್ಪಿ ತೋಱುಗುಂ ॥ ೨೦

ಎಂದಂಗಾರ[ಕ]ವಾರದ ಪೆಸರ್ ಮಂಗಳವಾರವೆಂಬಂತೆ ಬಱಿದೆ ಕಾಗೆಗಳಂತಂತರಿಕ್ಷದೊಳ್ ಪಾಱುವ ನಮಗೆ ವಿದ್ಯಾಧರರೆಂಬೊಣ ಪೆಸರಲ್ಲದೀಮಹೀನಾಥನಂತೆ ವಿಭವಾನ್ವಿತರಲ್ಲರೆಂಬುದುಂ [ನಲ್ಲಳ ಮಾತಂ ಕೇಳ್ದು ವಜ್ರದಾಡನುಪರಿಚರಮಹಾರಾಜನಮೇಲೆ ಕೋಪಂ ಪುಟ್ಟೆ ಮದನವೇಗೆಯನಳಕಾಪುರಂಕ್ಕೆ ಕಳಿಪಿ ಮಗುಳ್ದು ಬಂದು][2] ॥ ೨೧

ಪಿರಿದಪ್ಪಱೆಯಂ ಖಚರೇ
ಶ್ವರನೊರ್ವಂದಲೆತ್ತಿ ತಂದು ಮುನಿಸಿಂ ಪದ್ಮಾ ।
ಕರಮನಲೊದವೆ ಪರಿಜನ
ಮರಿದಾಯ್ತೆಂದೊಡನೆ ಮುಚ್ಚಿ ಪೋಪುದುಮಾಗಳ್ ॥ ೨೨

[ಜನಪನುಮರಸಿಯರುಂ ಭೋಂ
ಕೆನೆ ಪಾಸಱೆ ಕೊಳದಮೇಲೆ ಕವಿದಿರೆ ಪೊಱಗ ।

---

1 ಕುಮಾರರವೆರಸು ಸುಖದಿನಿರ್ಪುದುಪರಿಚರಿತಮಹಾರಾಜಂ ರಾಜ್ಯಂಗೆಯ್ಯು ತ್ತಮಿರ್ದೊಂದುದಿವಸಂ ಸುದರ್ಶನವೆಂಬ ಸರೋವರದೊಳ್ ನಾಲ್ವರರಸಿಯರುಂ ತಾನುಂ ಜಲಕ್ರೀಡೆಯನಾಡುತಿಪ್ಪನ್ನೆಗಂ ವಜ್ರಕುಮಾರನೆಂಬ ವಿದ್ಯಾಧರಂ ಮದನ ವೇಗೆಯೆಂಬ ತನ್ನ ಪ್ರಾಣವಲ್ಲಭೆವೆರಸು ಭೌಮವಿಹಾರಾರ್ಥವಾಕಾಶದೊಳ್ ವಿಮಾ ನಾರೂಢನಾಗಿ ಬರುತ್ತಿರ್ಪಲ್ಲಿ ಮದನವೇಗೆ ಪ್ರಾಣೇಶ್ವರಿಯರೊಳ್ ಕೂಡಿ ಜಲಕ್ರೀಡೆ ಯನಾಡುತ್ತಿಪ್ಪುಪರಿಚರಿತಮಹಾರಾಜನಂ ಕಂಡು ತಲೆಯಂ ತೂಗಿ ವಜ್ರದಾಡನ ಮೊಗಮಂ ನೋಡಿ (ಗ)      2 ಮುನಿದು (ಗ)

ಣ್ಗೆ ನಸುಂ ಪೊಱಮಡಲಱಿಯದೆ
ಘನವಪ್ಪವಿಗೆಯ ಕಿರ್ಚಿನಂತೊಳಗಿರ್ದರ್ ॥ ೨೩

ತಡೆಯದೆ ಮೇಲೆತ್ತಲ್ ಬ
ಲ್ಲಿಡಿಗರ್ ಬಲದಿಂದೆ ಕೆಡೆಯೆ ನೂಂಕಲುಮೆಂತುಂ ।
ಗಡ ಬಾರದೆನಿಪ ಬೆಟ್ಟಂ
ಗಡಹಡಿಸದೆ ನೋಡಿ ನಾಲ್ವರುಂ ಕಾಮಿನಿಯರ್] [1] ॥ ೨೪

ಇದು ಕರ್ಮದೇಪ್ಗೆಯಿಂದಾ
ಯ್ತ್ತದಕ್ಕೆ ನಾವಲಸಿ ಮಱುಗಿ ಮನದಱಲಿಂದಂ ।
ಕುದಿದೊಡೆ ಪೋಕುಮೆ ಪೋಗದು
ಬಿದಿ ಬರೆದಕ್ಕರಮನೂರಸಿ ಕಳೆದವರೊಳರೇ ॥ ೨೫

ಪಾಪೋದಯದಿಂ ಪೊರ್ದುಗು
ಮೇ ಪಡೆಮಾತಧಿಕದುಃಖಮುಂ ಸಾವುಗಳುಂ ।
ಪೋಪುವೆ ಪೋಗವು ಕೆಮ್ಮನೆ
ಚಾಪಲಮನರಾಗಿ ಮಱುಗಲಕ್ಕುಮೆ ಭವ್ಯರ್ ॥ ೨೬

[ಈಗಳಿನಾಯ್ತ್ತು ಸುಖಮೆಂ
ಬೀಗರ್ಪಂ ಬೇಡ ತೀವ್ರಕರ್ಮೋದಯದಿಂ ।
ದಾಗದೆ ಪೋಕುಂ ಚಿಂತೆಯ
ನಾಗಳ್ ಪುಟ್ಟಿಸುಗುಮಘಮನಾಚರಿಸುವರ್ ॥ ೨೭

ತನಯರುಮಯ್ಯನುಮಜ್ಜನು
ಮನುಜರುಮತಿಮಿತ್ರರಪ್ಪರುಂ ಪತಿಯುಂ ಕಾಂ ।
ಚನಮುಂ ಮನೆಯುಂ ನಿಕ್ಕುವೆ
ಮೆನಗೆಂದುಂ ತಿಬ್ಬಮೆಂದು ನಲಿವನೆ ಗಾಂಪಂ] ॥ ೨೮

---

1 ಅದಂ ಆರಸಿಯರ್ ಕಂಡು (ಗ)

ಮಱುಗುವುದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ಸೇದೆಗೆ
ಟ್ಟಱಿಯದೆ ಬೇವುದೇಕೆ ಮನದೊಳ್ ಕಡುಗುಂದುವುದೇಕೆ ಚಿತ್ತದೊಳ್
ಮಱುಗದೆ ನೊಂದು ಚಿಂತಿಸದೆ ನಾಡೆ ಪಲುಂಬದೆ ಮತ್ತೆ ಸೇದೆಗೆ
ಟ್ಟಱಿಯದೆ ಬೇಯದಾತ್ಮಹಿತಮಂ ನೆಱೆ ಮಾಡುಗೆ ಬುದ್ಧಿಯುಳ್ಳವರ್ ॥

ಎಂದು ತಮ್ಮೊಳೋರೊರ್ವರ್ಗೆ ಧರ್ಮಶ್ರವಣಂಗೆಯ್ದು ಶುದ್ಧಮನರಾಗಿ [ನಮ್ಮಂ ಪೊರ್ದಿದರಸನ ಮನಮುಂ ಸುಖಮಪ್ಪಂತು ಮಾಡುವೆವೆಂದು ರಾಜ್ಯಾಭಿಲಾಷಾಚಿತ್ತನುಂ, ಅಧರ್ಮಮನನುಂ ಸ್ತ್ರೀಲಂಪಟನುಂ ಗದ್ಗದಕಂಠನುಂ ವಿಹ್ವಲೀಭೂತನುಂ ಮಹಾಭಯಸ್ಥನುಂ] ಮರಣಭೀರುವುಮಾಗಿರ್ದ ಪರಿಚರಮಹಾರಾಜಂಗಭಿಮುಖರಾಗಿ ಧರ್ಮಮನಿಂತೆಂದು ಪೇೞ್ದರ್ ॥ ೩೦

ಸಾವಾದುದೆಂದು ಬೆಚ್ಚದೆ
ಕಾವವರಾರೆನ್ನನೆಂದು ಜಱಿಯದೆ ಮನದೊಳ್ ।
ನೋವಿಂಗೇಗುವೆನೆನ್ನದೆ
ಭಾವಿಸು ಜಿನಪದಮನನ್ಯರಂ ಭಾವಿಸದಿರ್ ॥ ೩೧

[ಮುನ್ನಿನ ಸಿರಿಯುಂ ಮಹಿಮೆಯು
ನುನ್ನತಿಯುಂ ಗಜಮನಶ್ವಮುಂ ನಂದನರಂ ।
ಭಿನ್ನಾಂಬುಜವದನೆಯರಂ
ನೀನ್ನೆನೆಯದೆ ದೇವ ನೆನೆ ಜಿನೇಶ್ವರಪದಮಂ ] ॥ ೩೨

ಏನಾನುಮ ನೆನೆದಾರ್ತ
ಧ್ಯಾನದಿನೆಲೆ ಸತ್ತು ತಿರ್ಯಕರೊಳ್ ತಿರಿಯದೆ ಸ ।
ಜ್ಞಾನಾಂಭೋಧಿಯನಮೃತಸು
ಖಾನಂದನ ದಿವ್ಯಪಾದಮಂ ನೆನೆ ಮನದೊಳ್ ॥ ೩೩

[ಬಿಡು ರಾಜ್ಯದ ಮೋಹಮನೆಡೆ
ಯುಡುಗದೆ ನೆನೆ ಜೈನಧರ್ಮಮಂ ಕಿಡುವ ಪರಿ ।

ಗ್ರಹಯುಗವುಂ ಪಿಡಿಯದೆ ಬಿಡು
ಪಡಿವೂತೇಂ ಬಿಟ್ಟೊಡೆಯ್ದುವೈ ಶುಭಗತಿಯಂ] ॥ ೩೪

ಮತ್ತಂ [ಪರಿಗ್ರಹದ] ಮೋಹದಿಂ ಸಂಸಾರದೊಳ್ ತಿಱ್ಱನೆ ತಿರಿದು ದೆಸೆಗೆಟ್ಟು ಮುಱುಗಿದ ಪಟಹಸ್ತನ ಕಡಾರಪಿಂಗಳನ ಪಿಣ್ಯಾಕ [1] ಗಂಧನ ದಂಡಕಮಹಾರಾಜನ ಬ್ರಹ್ಮದತ್ತನಂತೆ ಮಹಾದುಃಖಕ್ಕೊಳಗಾಗದೆ ಬಾಹ್ಯಾಭ್ಯಂತರ [ಪರಿಗ್ರಹ]ಂಗಳಂ ಬಿಟ್ಟೇಕಚಿತ್ತದಿಂ ಜಿನಪಾದ ಪಲ್ಲವಂಗಳಂ ನೆನೆಯುತ್ತಿರ್ಪುದೆಂದು ಪೇೞ್ದ ॥ ೩೫

ಎನಿಸುಪರಿಗ್ರಹಭರಮುಂ
ಟನಿತುಮನಿಂಬಾಗೆ ಬಿಟ್ಟು ನಿರ್ಮಲನಂ ದೇ ।
ವನಿಕಾಯವಂದ್ಯನಂ ಮ
ತ್ತನಿಸದೆ ಜಿನನಂ ಸುಚಿತ್ತದಿಂ ನೆನೆಯುತ್ತಂ ॥ ೩೬

ಮುಡಿಪಿ ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನ ದೊಳೊಂದುಸಾಗರೋಪಮಾಯುಷ್ಯಮನೊಡೆಯ ಆನಂದನುಂ ಕಾಂ ತನುಂ ಅಮಿತಕಾಂತನುಂ ಸುಕಾಂತನು [2] ಮೆಂಬ ಸಾಮಾನಿಕದೇವ ರಾಗಿ ಪುಟ್ಟಿದರಿತ್ತಲ್ ಉಪರಿಚರಮಹಾರಾಜಂ ॥ ೩೭

[ಕರಿತುರಗಂ ಪದಾತಿ ರಥಸಂತತಿ ಸಂತತಮೊಪ್ಪೆ ಸುತ್ತಲುಂ
ಬರೆ ತರಳಾಯತಾಕ್ಷಿಯರನಂಗಲತಾಂಗಿಯರಿಕ್ಕೆ ಕೂರ್ತು ಚಾ
ಮರಮನಗುರ್ವಿನಿಂ ದಿವಿಜರಾಜನವೋಲ್ ನೆಱೆ ರಾಜವೀಧಿಯೊಳ್
ಕರಮನುರಾಗದಿಂದೆಸೆದು ಬರ್ಪುದನಾಂ ನೆನದೆಂತು ಸೈರಿಪೆಂ ॥ ೩೮

ನಿಕ್ಕುವಮಿಂದ್ರನ ಭಂಡಾ
ರಕ್ಕಂ ಖಚರಾಧಿಪತಿಯ ಪೆಂಪಿನ ಭಂಡಾ ।
ರಕ್ಕಂ ನೋಡೆನ್ನರ್ಥಂ
ಮೊಕ್ಕಳಮದನೆಂತು ಬಿಸುಟು ಪೋಪೆನೊ ಬಿಡಿಯೇ ॥ ೩೯

---

[1] ಪಿಂಗಳಕ (ಕ. ಬ.) [2] ಅತಿಕಾಂತನುಂ ಸುರಕಾಂತನುಂ (ಗ)

ಧರಣೇಂದ್ರನ ಸತಿಯರ್ಗಂ
ಸುರರಾಜನ ಪೆಂಡವಾಸದೊಳ್ವೆಂಡಿರ್ಗಂ ।
ಕರವೆನ್ನರಸಿಯರಯ್ಯೊ
ರ್ವರುಮಗ್ಗಳಮವರನೆಂತು ಬಿಸುಟಾನಿರ್ಪೆಂ ॥ ೪೦

ಪನ್ನಗರಾಜನ ಸಿರಿಗಂ
ಸನ್ನುತಸುರಪತಿಯ ಪಿರಿಯ ಸಿರಿಗಂ ಬಗೆವಂ ।
ದೆನ್ನ ಸಿರಿ ಮಿಗಿಲಿದಂ ಬಿ
ಟ್ಟೆನ್ನೆಲ್ಲಿಗವೊಯ್ದುವಗನೆ (?) ನಾಂ ಪೋದಪೆನೋ ॥ ೪೧

ಎಂದು] ಪರಿಗ್ರಹಕಾಂಕ್ಷೆಯಿಂ ಕುದಿವ ನೀರಂತೆ ಮಱುಗಿ ತಱಿದಿಕ್ಕಿದ ತಳಿರಂತೆ ಕಂದಿ ಮಾಗಿಯ ತೊಱೆಯಂತೆ ಕುಂದಿ ಪಿಡಿವೆತ್ತ ಪಾವಿನಂತೆ ಸುಯ್ದು ಬಿದಿಯಂ ಬೈದಾರ್ತಧ್ಯಾನದಿಂ ಸತ್ತು ಮನೋಹರವೆಂಬುದ್ಯಾನದೊಳ್ ಸರ್ವಾಶ್ರಯವೆಂಬ ಗುಹೆಯೊಳ್ ಪೆರ್ಬಾವಾಗಿ ಪುಟ್ಟಿದನಿತ್ತಲ್ ಅನಂತವೀರ್ಯಂ ಮೊದಲಾದೈನೂರ್ವರ್ ಕುಮಾರರುಮರಸಿಯರುಂ ಸಾಮಂತರುಂ ಪರಿಜನಮುಮರಸಂಗೆ [1] ತೊಟ್ಟನೆ ಕೇಡಾದುದಕ್ಕೆ ॥ ೪೨

[ಚಿಂತಿಸಿ ದುಃಖಾನಳನಿಂ
ಸಂತತಮೆರ್ದೆಯುರಿಯೆ ಮಱುಕದಿಂ ಮತಿಗೆಟ್ಟೋ ।
ರಂತೆ ನೆನೆನೆನೆದು ಧರಣೀ
ಕಾಂತನ ಕಾಂತೆಯರ ಗುಣಮನಿರುಳುಂ ಪಗಲುಂ] [2] ॥ ೪೩

ಪಿರಿದು ವಿಭೂತಿಯಿಂ ಮದಗಜೇಂದ್ರಮನೇಱಿ ಸಮಸ್ತಭೂಮಿಪರ್
ವೆರಸು ಸಮಸ್ತಕಾಮಿನಿಯರುಂ ಪರಿವಾರಮುಮಾತ್ಮಜಾತರುಂ
ಬೆರಸು ವನಕ್ಕೆ ರಾಗದಿನುದಾರ [3] ಗುಣಾಂಬುಧಿ ಪೋಪುದೇಕೆ ನಿ
ಷ್ಠುರದಪಮೃತ್ಯು ಬಂದಡಸಿ ಮುಟ್ಟುವುದೇಕಿದುಚೋದ್ಯಮಲ್ಲವೇ ॥ ೪೪

1 ಅರಸಂಗೆ ಅರಸಿಯರ್ಗೆ (ಗ)    2 ಬೞಗಾಗಿ (ಗ)
3 ಪೆರ್ಚಿದನುದಾರ (ಕ. ಖ.)

[ಸಿರಿಯುಂ ಖೇಚರರಾಜರ್
ಪುರುಡಿಸಿ ತಂದಿಕ್ಕೆ ಪೋದರೋ ದೂರ್ತಿಂ ವ್ಯಂ ।
ತರದೇವರಿಕ್ಕೆ ಪೋದರೊ
ಪರೀಕ್ಷಿಪಂದಿದು ಮಹಾದ್ಭುತಂ ಧಾರಿಣಿಯೊಳ್ ॥ ೪೫

ಎಂದು ಮಹೀನಾಥನ ಪದ್ಮಾವತಿವೊದಲಾದ ನಾಲ್ವರರಸಿಯರ ಗುಣಮಂ ನೆನೆನೆನೆದು ಮಱುಗಿ ಕುದಿದು ಕೆಟ್ಟೆನೆಂದೊಳಱಿ ಮೆಯ್ಯಱಿಯದಱಲ್ವನಂತವೀರ್ಯಂ ವೊದಲಾದ ಕುಮಾರರಂ] [1] ಬುದ್ಧಿವಂತರ್ ಧರ್ಮಶ್ರವಣದಿಂ ಮೋಣಿಸಿ ದುಃಖಮನಾಱಿಸಿ ಮಱುದಿವಸಂ ॥ ೪೬

ಮಂಗಳವಱೆ ಭೋರೆನೆ ವಾ
ರಾಂಗನೆಯರ್ ನೆರೆದು ಪಾಡೆ ಮಂಗಳಮಂ ಪು ।
ಣ್ಯಾಂಗನೆಯರಿಕ್ಕೆ ಸೇಸೆಯ
ನಂಗಜಸದೃಶಂಗನಂತವೀರ್ಯಂಗಾಗಳ್ ॥ ೪೭

[ನಲಿನಲಿದು ಮಕುಟಬದ್ಧರ್
ವಿಳಾಸದಿಂ ಕಟ್ಟೆ ಪಟ್ಟಮಂ ಜಿನಧರ್ಮೋ ।
ತ್ಪಲಚಂದ್ರನಾಗು ಮುನಿಜನ
ವಿಳಸಿತಪದಭಕ್ತನಾಗು ನೆಲನುಳ್ಳನೆಗಂ ॥ ೪೮

ಎಂದು ಪರಸಿ] [2] ಸಂತೋಷದಿಂದಿರೆ ಮಱುದಿವಸಂ ಸಾರಸ್ವತರೆಂಬಾಚಾರ್ಯರವಧಿಜ್ಞಾನಿಗಳಯ್ನೂರ್ವರ್ಮುನಿವರರ್ವೆರಸು ವಿಹಾರಿಸುತ್ತುಂ [ಶ್ರಾವಂತಿಪುರಕ್ಕೆ ಬಂದು ಮನೋಹರೋದ್ಯಾನದೊಳ್ ಲೇಸಪ್ಪ ಶಿಲಾತಳದಮೇಲೆ ಕುಳ್ಳಿರ್ದು ಪಂಥಾತಿಚಾರನೇಮಮಂ ಮಾಡುತ್ತಿರ್ಪುದುಮವರ ಬರವಂ ಋಷಿನಿವೇದಕನನಂತವೀರ್ಯಮಹಾರಾಜಂಗೆ ಬಿನ್ನಪಂಗೆಯ್ವುದುಂ ಅರಸನವರಿರ್ದದೆಸೆಯುತ್ತಲೇೞಡಿಯಂ ನಡೆದು ಪೊಡೆಮಟ್ಟು ಋಷಿನಿವೇದಕಂಗೆ ಮೆಚ್ಚುಗೊಟ್ಟು] [3] ॥ ೪೯

---

1 ಎಂದು ಮಱುಗುವನಂತವೀರ್ಯಂ ವೊದಲಾದೆಲ್ಲರ್ಗಂ (ಗ)

2 ಅಂತು ಪಟ್ಟಮಂ ಕಟ್ಟೆ (ಗ) 3 ಅಲ್ಲಿಗೆ ಬರ್ಪುದುಂ (ಗ)

ಪಿರಿದುವಿಭೂತಿಯಿನರ್ಚನೆ
ವೆರಸು ಸಮಸ್ತಾವನೀಶ್ವರರ್ವೆರಸು ಮಹೀ ।
ಶ್ವರನರ್ತಿವೆರಸು ಯೋಗೀ
ಶ್ವರರಲ್ಲಿಗೆ ಬಂದು ಮುನಿಕದಂಬಮನಾಗಳ್ ॥ ೫೦

ಬಲವಂದು ಮೂಱುಸೂಚ್ಚ
ರ್ಮಲನಂಘ್ರಿಯುನಷ್ಟವಿಧಸದರ್ಚನೆಯಿಂದು ।
ಜ್ಜ್ವಲಮನದಿಂದರ್ಚಿಸಿ ನಿ
ಶ್ಚಲಚಿತ್ತಂಗೆಱಗಿ ಭಕ್ತಿಪೂರ್ವಕದಿಂದಂ ॥ ೫೧

ವಂದಿಸಿ ನರೇಂದ್ರನಾದರ
ದಿಂದಂ ನಿರ್ಮಳರನುೞಿದ ಋಷಿಯರುಮಂ ಸಾ ।
ನಂದಮನಂ ಗುರುಪರಿವಿಡಿ
ಯಿಂದಂ ವಂದಿಸಿ ಮನೋನುರಾಗದಿನಾಗಳ್ ॥ ೫೨

ಮುನಿಪತಿಯ ಮುಂದೆ ಕುಳ್ಳಿ
ರ್ದನುಪಮಸದ್ಧರ್ಮಮಂ ಮನೋಭವರೂಪಂ ।
ಮನಮೊಱೆ ಕಿಱಿದುಬೇಗಂ
ಜನನಾಥಂ ಕೇಳ್ದು ತಿಳಿದು ತದನಂತರದೊಳ್ ॥ ೫೩

ಎಮ್ಮ ಜನಕಂಗಂ ಜನನಿಯರ್ಗಮಾಕಸ್ಮಿಕಮೆ ಕಾರಣಂ ಸಾವಾದುದೆಂತು ನಿಮ್ಮಡಿ ಬೆಸಸಿಮೆಂಬುದುಂ ಮುನೀಶ್ವರನವಧಿಲೋಚನದಿಂದಱಿದು [ವಜ್ರದಾಡನೆಂಬ ವಿದ್ಯಾಧರಂ ಭೌಮವಿಹಾರಾರ್ಥಂ ಮದನವೇಗೆಯೆಂಬ ತನ್ನ ಪೆಂಡತಿವೆರಸು ಬರುತ್ತುಂ ಜಲಕ್ರೀಡೆಯುನಾಡುತ್ತುಮಿರ್ದೀನಿಮ್ಮಯ್ಯನಂ ನೋಡುತ್ತುಮಿರ್ಪುದುಂ ಮದನವೇಗೆ ಮಹೀನಾಥರೊಳೀತನ ರಾಜ್ಯಮೆ ಸಫಲಮೆಂದು ಪೊಗೞ್ವುದುಮಾಮಾತಿಂಗೆ ವಜ್ರದಾಡಂ ಪುರುಡಿಸಿ ಮದನವೇಗೆಯುನಳಕಾಪುರಕ್ಕೆ ಕಳಿಪಿ ಪಿರಿದಪ್ಪ ಶಿಲೆಯುಂ ಕೊಂಡು ಬಂದು ನಿಚ್ಛಿದ್ರಮಾಗಿ ಮುಚ್ಚಿ ಪೋದನನವನಿಂ ಸಾವಾಯ್ತೆಂದು ಪೇೞ್ವುದುಂ ॥ ೫೪

ನರನಾಥನಱಿದು ಮತ್ತಂ
ವರಮುನಿನಾಥಂಗೆ ಭಕ್ತಿಯಿಂ ಪೊಡೆಮಟ್ಟಾ ।
ದರದಿಂ ನಿಮ್ಮಡಿ ಭೂಮೀ
ಶ್ವರನುಂ ಜನನಿಯುರುಮೆಲ್ಲಿ ಪುಟ್ಟಿರ್ದಪರೋ ॥ ೫೫

ಬೆಸಸುವುದದನೆನೆ ಕೀರ್ತಿ
ಪ್ರಸರಂ ಜೈನಾಂಗಮೋಂಬುನಿಧಿಶಿಶಿರಕರಂ ।
ವಸುಧಾಧಿಪತಿಗೆ ನೆಱೆ ಸಂ
ತಸಮಪ್ಪಂತಾಗೆ ಪೇೞಲುದ್ಯತನಾದಂ ॥ ೫೬

ನಿನ್ನ ಜನನಿಯರ್ ಪದ್ಮಾವತಿಮೊದಲಾದ ನಾಲ್ವರುಂ ಮೇಲೆ ಭಯಂಕರಮಾಗಿರ್ದ ಶಿಲೆಗಂಜದೆ ಪ್ರಾಣಭಯಮಾಯ್ತೆಂದು ಮನದೊಳ್ ನಡುಗದೆ ಚಿತ್ತದೊಳ್ ಕೊಂಕದೆ][1] ॥ ೫೭

ತನುಪಂ ಮತ್ತಿಹಲೋಕದಲ್ಪಸುಖಮಂ ದಿವ್ಯಾಂಬರಾನೀಕಮಂ
ಧನಮಂ ಭೂಷಣಮಂ ಸುಭೋಜನಮನಾತ್ಮಾಧೀಶನಂ ಕೂರ್ಪನಂ
ದನರಂ ಚಿಂತಿಸಿ ಕಂದಿ ಕುಂದಿರದೆ ಬಿಟ್ಟಾನಂದದಿಂ ಶುದ್ಧಭಾ
ವನೆಯಿಂ ನಿರ್ಮಲಚಿತ್ತದಿಂ ಮುಡಿಪಿ ತತ್ಸ್ವಾಧರ್ಮಸತ್ಕಲ್ಪದೊಳ್ ॥೫೮

[ಸ್ವಸ್ತಿಕಾವರ್ತಮೆಂಬ ವಿಮಾನದೊಳ್] ಸಾಮಾನಿಕದೇವರಾಗಿ ಪುಟ್ಟಿದರ್ ನಿಮ್ಮಯ್ಯಂ [ರಾಜ್ಯವಿಭೂತಿಯುಂ ಮಕ್ಕಳ ಭಂಡಾರದ ಪೆಂಡಿರ ಸ್ನೇಹಮಂ ನಿನ್ನ ಚಾಗದ ಭೋಗದ ಪರಿಗ್ರಹದ ನಾಡಿನ ಬೀಡಿನ ಚಾತುರಂಗಬಲದ ರಾಜ್ಯಭರದ ಮೋಹೋದಯದಿಂ]ದಾರ್ತಧ್ಯಾನಪರನಾಗಿ ಸತ್ತು ಮಱುಕದಿಂ ಬಂದೀವನದೊಳ್ ಸರ್ವಾಶ್ರಯಮೆಂಬ ಗುಹೆಯೊಳ್ ಪೆರ್ಬಾವಾಗಿ ಪುಟ್ಟಿರ್ದಪನೆಂಬುದುಂ ಜನನಿಯರ್ ಪರಿಗ್ರಹ ನಿವೃತ್ತಿಯಿಂದಾದ [ಶುಭಪರಿಣಾಮದಿಂ ಪಡೆದ] ದೇವಗತಿಯುಮಂ, ಜನಕಂ ಪರಿಗ್ರಹದಿಂದಾದ [ದುಷ್ಪರಿಣಾಮದಿಂ ಪಡೆದ ತಿರಿಕ] ಗತಿಯುಮಂ ಕಂಡು ಬೆಱಗಾಗಿ ॥ ೫೯

---

[1] ಅವರ ಮರಣದೊಳಾದ ವೃತ್ತಾಂತಮೆಲ್ಲಮಂ ಪೇಳ್ವುದುಂ ಅಱಿದವರೆಲ್ಲಿ ಪುಟ್ಟಿದರೆಲ್ಲಿರ್ದರೆನೆ ನಿನ್ನ ಜನನಿಯರ್ ನಾಲ್ವರುಂ (ಗ)

ಬಱಿದೆ ಪರಿಗ್ರಹಕ್ಕೆ ಅಗಿ ದುಷ್ಪರಿಣಾಮದಿನೇಟ್ಗೆಗೆಟ್ಟು ಪಾಂ
ಗಱಿಯದೆ ಸೌಖ್ಯಭೂಮಿರುಹಮಂ ಕಡಿದಕ್ಷಯಲಕ್ಷ್ಮಿಯಂ ಮನಂ
ಮುಱಿಯಿಸಿ ಪುಟ್ಟಿ ನಾಡೆ ತಿರಿಕಂಗಳೊಳಕ್ಕಟ ತೀವ್ರದುಃಖದಿಂ
ಮಱುಗುತುಮಿರ್ಪ ಕಾರ್ಯಮನೆ ಚಿಂತಿಸುತಿರ್ಪುವು ದುಃಖಜೀವಿಗಳ್[1]॥

ತನುವುಂ ಗೇಹಮುಮರ್ಥಮುಂ [2]ಕರಿಗಳುಂ ಜಾತ್ಯಶ್ವಮುಂ ಸಂದ ನಂ
ದನರುಂ ಮಿತ್ರರುಮಯ್ಯನುಂ ಜನನಿಯುಂ ಮುನ್ನಾರೊಡಂಬೋದರೊ
ಯ್ಯನೆ ಮುನ್ನಾವನನೊತ್ತಿ ಕಾದರದಱಿಂ [3] ತಾಂ ಬೇಱು ದೇಹಾದಿಯು
ಪ್ಪನಿತುಂ ಬೇಱೆನುತಿರ್ಪ ಭವ್ಯನೆ ವಲಂ ಧನ್ಯಂ ಪೆಱರ್ ಧನ್ಯರೇ ॥ ೬೧

ಎಂದು [ಪರಿಗ್ರಹದ ನಿಷ್ಪರಿಗ್ರಹದ ಹೀನಾಧಿಕತ್ವಮಂ ಮನದೊಳ್ ವಿಚಾರಿಸಿ ಮುನಿನಾಥಂಗೆ ಕರಕಮಲಂಗಳಂ ಮುಗಿದಿಂತೆಂದಂ ॥ ೬೨

ಉಪರಿಚರನೃಪತಿ ನಿಮ್ಮಡಿ
ವಿಪರೀತಧ್ಯಾನದಿಂ ದುರಾಗ್ರಹಿಯಾಗಿ ।
ರ್ದಪನೀಗಳಾತನಂ ನಿ
ಷ್ಕಪಟಜಿನೇಶ್ವರಮತೋಕ್ತಿಯಿಂ ಪ್ರಿಯದಿಂದಂ ॥ ೬೩

ತಿಳಿಪಲ್ ಬರ್ಕುಮೊ ಬಾರದೊ
ಫಳಿಲೆನೆ ಬೆಸಸುವುದು ಶೀಘ್ರಮೆಂಬುದುಮವನೀ ।
ತಳಪತಿಗೆ ನುಡಿದರುರ್ವೀ
ತಳಪೂಜ್ಯರ್ ವಿಮಳರಂಬುನಿಧಿನಿಸ್ವನದಿಂ] [4] ॥ ೬೪

ನೀಂ ಪೋಗಿ ಧರ್ಮಮಂ ಪೇೞ್ವುದುಮಾಪಾವು ಜಾತಿಸ್ಮರನಾಗಿ ತನ್ನ ಮುನ್ನಿನ ಭವಮನಱಿದು ಧರ್ಮಮಂ ಕೈಕೊಳ್ಗುಮನ್ನೆಗಂ ದೇವಲೋಕದಿಂ ನಿಮ್ಮ ಜನನಿಯುರಪ್ಪ ನಾಲ್ವರುಂ ಬಂದು ಪೂರ್ವ

---

1 ಜೀವರಾಶಿಗಳ್ (ಗ) 2 ಸಂಚಿಸಿದರ್ಥಮುಂ (ಗ)

3 ಕೊಂದರದಱಿಂ (ಗ) 4 ಬಗೆದು ಎಮ್ಮಯ್ಯನ ಪಾಪಮಂ ತಿಳಿಪಲುಂ ಬಕ್ಕುಮೊ ಬಾರದೊ ಬೆಸಸಿಮೆನೆ (ಗ)

ಸ್ವರೂಪದಿಂ ನಿನಗೆ [1] ಸಂಘಾತಮಾಗಿರೆ ಧರ್ಮಮಂ [ಪೇೞ್ದು ತದನಂತರಂ ಸದ್ಧರ್ಮದೊಳಾದ ಪರಮೈಶ್ವರ್ಯಮುಮಂ ಜಿನಪದಸ್ಮರಣೆಯೊಳಾದ ಮಹಾವಿಭವಮುಮಂ ನಿಷ್ಪರಿಗ್ರಹವ್ರತದೊಳಾದ ಪೆಂಪುಮಂ ತೋಱಿ ಸಾಱಿ ಲೋಕಕ್ಕಂ ನಿನಗಂ ಪೇೞ್ವಂತೆ ದಿವ್ಯಸ್ವರೂಪಮಂ ಕೈಕೊಂಡು ಗಗನತಳಕ್ಕೆ ನೆಗೆದು ತಂತಮ್ಮ ಶ್ರೀಯುಮಂ ವಿಭೂತಿಯುಮಂ ತೋಱಿ ದೇವಲೋಕಕ್ಕೆ ಪೋಪರೆಂಬುದುಂ ॥ ೬೫

ಮುನಿಪತಿಗನಂತವೀರ್ಯಾ
ವನಿನಾಥಂ ಭಕ್ತಿಪೂರ್ವಕಂ ಪೊಡೆಮಟ್ಟೊ ।
ಯ್ಯನೆ ಸರ್ಪನಿರ್ದ ಪುತ್ತಿಂ
ಗನುನಯದಿಂ ಬಂದು ಗುಹೆಯ ಬಾಗಿಲ ಪೊರೆಯೊಳ್] [2] ॥ ೬೬

ನಿಂದಿರ್ದು ನೋೞ್ಪುದುಂ ಮುನಿ
ವೃಂದಾರಕನೆಂದ ಮಾರ್ಗದಿಂ ಸುಯ್ಯುತ್ತುಂ ।
ಮುಂದಿರ್ದ ನಾಗನಂ ಕಂ
ಡೆಂದಂ ನೃಪನಿಚಯಮುಕುಟಘಟ್ಟಿತಚರಣಂ ॥ ೬೭

ವನಿತೆಯರಾಗಿರ್ದುಂ ನೆ
ಟ್ಟನೆ ವೀರಂಬೆರಸು ತೊಱೆದು ಸಕಳಮುಮಂ ಸ ।
ಜ್ಜನಪಾದಭಕ್ತಿಯಿಂ ದೇ
ವನಿವಾಸಕ್ಕೊಗೆದರಂತುಟಾಗಲ್ವೇಡಾ ॥ ೬೮

ವಿಾಸೆಗಳಂ ಪೊತ್ತಿರ್ದುಂ
ಸಾಸಂಗೆಟ್ಟಳ್ಕಿ ಬಳ್ಕಿ ಮನದುಬ್ಬೆಗದಿಂ ।
ಪೇಸುಪತಮಾಗಿ ನಾಗನಿ
ವಾಸದೊಳೋವಯ್ಯ ಪುಟ್ಟಿ ತಿರಿವುದು [3] ಮಾಯ್ತೇ ॥ ೬೯

---

1 ಪೂರ್ವಸ್ವರೂಪಮಂ ತೋಱಿ ನಿಮಗ (ಗ)

2 ಪೇಳ್ವರೆಂಬುದುಂ ಸರ್ಪಾಶ್ರಯಮೆಂಬ ಗುಹೆಗೆ ಬಂದು (ಗ)

3 ನಮೆವುದು (ಗ)

ಅರಸಿಯರನಿಬರುಮುರ್ಹ
ಚ್ಚರಣಮೆ ಶರಣೆಂದು ವೀರದಿಂ ಮುಡಿಪಿ ಸುರಾ |
ಸುರವಂದ್ಯರಾದರದಱಿಂ
ಧರೆಯೊಳ್ ಸನ್ಮತಿಗಳಪ್ಪವರ್ ಕೆಟ್ಟಪರೇ ॥ ೩೦

ತೊಡರ್ದ ಪರಿಗ್ರಹಯುಗದೊಳ್
ದೃಢನಲ್ಲದೆ ಬಿಟ್ಟು ಜೈನಪದಸೇವನೆಯಂ |
ಮಡಿದಿಲ್ಲಿ ಸರ್ಪನಾದೈ
ಕಡುಮೂರ್ಖರ್ ಕಿಡುವರೆಂಬುದಾವುದು ಚೋದ್ಯಂ ॥ ೩೧

ಸುರುಚಿರರತ್ನಾವಳಿಯಿಂ
ಚರಮೊಪ್ಪುವ ರಾಜಭವನದೊಳ್ ಮುನ್ನಿರ್ಪೈ |
ದುರಿತದ ಫಲದಿಂ ಫಣಿಮಂ
ದಿರದೊಳ್ ನೀನೀಗಳಿರ್ದ ನವೆವಂತಾದೈ ॥ ೩೨

ನರಪತಿ ನೀಂ [1] ದಿವ್ಯಸ್ತ್ರೀ
ಯರ ನಡುವೆ ವಿಳಾಸಮೊದವೆ ಮುನ್ನಿರ್ಪೈ ನಿ |
ಷ್ಠುರಪಾಪದಿಂದಮೀಗಳ್
ಗರಳಧರರ ನಟ್ಟ [2] ನಡುವೆ ನಿಲ್ವಂತಾದೈ ॥ ೩೩

ಕಳವೆಯ ಕೂೞಂ ಸೊಗಯಿಪ
ತಿಳಿದುಪ್ಪಂಬೆರಸು ಲೀಲೆಯಿಂ ಮುನ್ನುಣ್ಬೈ |
ಪುೞುಗಳನಿಲಿಗಳನಾಯ್ದಾ
ಯ್ದುಱಿಲೊಳಮೋವಮ್ಮ ಈಗ [3] ತಿಂಬಂತಾದೈ ॥ ೩೪

ಮೃದುಶಯ್ಯೆಯೊಳಂಗನೆಯರ
ಪದಪಿಂದಂ ಸೋಂಕೆ ರಾಗದಿಂ ಪವಡಿಸುವೈ |
ಮುದಮೊದವೆ ಮುನ್ನಮೀಗಳ್
ಮೃದುವಲ್ಲದ ಪರಲಮೇಲೆ ಪಡುವಂತಾದೈ ॥ ೩೫

---

1 ನರನಾಥರ (ಗ)   2 ಪಾಪದಲ್ಲಿನೀನಜಗರ ಸಂಕುಲಗೃಹದ (ಗ)
3 ಯ್ದಾಣಲೋವೋವಸ್ತಲಿಗ (ಕ.ಬ.) ಯ್ದುಳಲೊಪವಿದ ಕಪ್ಪೆಗಳುಮಂ(ಗ)

ಈಗಳಿನ ಕಷ್ಟತನಮುಮಂ
ನೋಗಡಿಸದೆ ಮುನ್ನಮಾದ ಮಹಿಮೆಯುಮಂ ನೀಂ ।
ಬೇಗಂ ಚಿಂತಿಸಿ ಬಿಡುವುದು
ಭೋಗದ ದೇಹದ ತೊಡರ್ಪುಮಂ ಮೋಹಮುಮಂ ॥ ೩೬

ತನುವಿನ ಧನವಿನ ಪೆಂಡಿರ
ತನಯರ ಕಡು [1] ಮೋಹದಿಂದೆ ನೀನಿಂತಾದೈ ।
ವಿನಯಪರನಾಗಿ ಮುನ್ನಿನ
ವನಿತುಮನಿಂಬಾಗಿ ಬಿಟ್ಟು ನಿರ್ಮಳನಾಗೈ ॥ ೩೭

[ವಿಷಯಂಗಳ ಕಾಂಕ್ಷೆಯಿನೆಲೆ
ವಿಷಧರನಾಗಿರ್ದೆಯಿನ್ನುಮತಿಲೋಲತೆಯಿಂ ।
ವಿಷಮಂ ತಾಳ್ದಿದೆಯಪ್ಪೊಡೆ
ವಿಷಮಮಿದೆನಿಸಿರ್ದ ನರಕವಾರಿಧಿಗಿೞಿವೈ] ೩೮

ಎಂದು ಪೇೞ್ದುದುಮುಪರಿಚರನಪ್ಪ ಪೆರ್ಬಾವು ಜಾತಿಸ್ಮರನಾಗಿ ತನ್ನ ಮುನ್ನಿನ ಭವಮನಱಿದು [ಗುಹೆಯ ಬಾಗಿಲ್ಗೆ ಬಂದು ಕಿವಿಯಾಂತ]ನಂತವೀರ್ಯಮಹಾರಾಜನ ಮಾತುಗಳಂ ಕೇಳುತ್ತುಮಿರ್ಪುದುಂ ದೇವಲೋಕದೊಳ್ ಪುಟ್ಟಿದರಸಿಯರ್ [ನಾಲ್ವರುಂ ಪರಿಗ್ರಹಕಾಂಕ್ಷೆಯಿಂ ಸ್ವಸ್ವಾಮಿಯಪ್ಪುಪರಿಚರನಾರ್ತಧ್ಯಾನದಿಂ ಸತ್ತು ಪೆರ್ಬಾವಾಗಿ ಪುಟ್ಟಿರ್ದನವಧಿಜ್ಞಾನದಿಂದಱಿದು ಧರ್ಮವಾತ್ಸಲ್ಯದಿಂ ಬೋಧಿಸಲೆಂದು ಮನೋಹರೋದ್ಯಾನವನಕ್ಕೆ ದೇವಲೋಕದಿಂದಿೞಿದು] ಮುನ್ನಿನ ರೂಪಿಂ ಬಂದು ಗುಹೆಯ ಬಾಗಿಲೊಳಿರ್ದ ಪಾವಿಂಗೆ [ಮೃದುನಿನಾದದಿಂ] ಧರ್ಮಮನಿಂತೆಂದು ಪೇೞ್ದರ್ ॥ ೩೯

ಕಿಡುವ ಪರಿಗ್ರಹಯುಗಮಂ
ಪಿಡಿದು ದುರಾಚಾರ ನಿನ್ನ ಪಾಪೋದಯದಿಂ ।

[1] ಮೋಹತೊಡಪಿನಿಂದಿಂತಿಪ್ಪೈ (ಗ)

ಕಡುದುಃಖಾಬ್ಧಿಯೊಳಪ್ಪುದ
ನೊಡರಿಸಿ ಪಾಪಾಗಿ ಪುಟ್ಟಿ ನವೆವೆಂತಾದ್ಯೆ ॥ ೯೦

ತೊಱೆವುದು ದುಷ್ಪರಿಗ್ರಹಮನೆಂದು ಜಿನೋಕ್ತಿಯಿನೆಮ್ಮ ಪೇೞ್ದುದಂ
ಮಱೆದು ಪರಿಗ್ರಹಕ್ಕೆಱಗಿ ದುರ್ಮತಿಯಿಂ ಮರಣಕ್ಕೆ ಗೊಡುಗೊಂ
ಡಱಿತಮನೊಕ್ಕು ಸತ್ತು ದುರಿತೋದಯದಿಂ ಫಣಿಯಾಗಿ ಪುಟ್ಟಿದೈ
ಕುಱಿ ಪೆಱರಾರೊ ನೀನೆ ಕುಱಿ ನೀನೆ ಜಡಾತ್ಮನೆ ನೀನೆ ಗಾಂಪನೈ ॥೯೧

[ಮುನ್ನೆಮ್ಮ ಪೇೞ್ದ ಧರ್ಮಮ
ದನ್ನೆಯದೆ ತಿರಿಕಯೋನಿಯೊಳ್ ಪುಟ್ಟಿದೆಯಿ ।
ನ್ನಿನ್ನ ಮರುಳಾಟಮಂ ಬಿ
ಟ್ಟುನ್ನತಜಿನಪಾದಪದ್ಮಮಂ ನೆನೆ ಮನದೊಳ್ ॥ ೯೨

ಜಿನಪಾದಪದ್ಮಮಂ ಬಿ
ಟ್ಟನಿತೊಂದಪಮಾನವೃತ್ತಿಗೊಳಗಾದೈ ನೀಂ ।
ಮನದೊಳ್ ಬಗೆಯದೆ ಪೆಱತಂ
ನೆನೆ ರಾಗದಿನಿಂದ್ರವಂದ್ಯನಂಘ್ರಿದ್ವಯಮಂ] ॥ ೯೩

ನಿಷ್ಕಾರಣಂ ತೆರಳಯ ಪುೞುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು ಬೆಟ್ಟದೊಳ್ ಪೂಣ್ದರ್ ಕೋಡಿಲ್ಲದ ಕಾಡಾನೆಯಂತೆ ಕೂಡದ ಸುಖಕ್ಕೆ ಬಯಸಿ ಸೇದೆಗಿಡದೆ, ಕಂಪಲೊಳ್ ಬಿರ್ದ ಪಶುವಿನಂತೆ ಸಂಸಾರದೊಳ್ ಬಿರ್ದು ನವೆಯದೆ, [ವೋನಂಗೊಂಡ] ಚಪಳನಂತೆ ತಿರಿಕಯೋನಿಯೊಳ್ ಪುಟ್ಟಿ [ಮಲಮಲ]ಮಱುಗದೆ, ಸಾಲಂಗೊಂಡ [ಬಡ] ವನಂತೆ ಸ್ತ್ರೀ ಸುಖಕ್ಕೆಳಸಿ ಮನದೊಳ್ ಜಱಿಯದೆ, ಮಾರ್ಬಲಮಂ [1] ಕಂಡ ಪಂದೆಯಂತೆ ಸದ್ಧರ್ಮದೊಳಾದ ನಡೆವಳಗೆ ಬೆದಱದೆ, ತುಡುಗುಣ್ಬ ತೊೞ್ತಿನಂತೆ ಕೊಲ್ಲದ ವ್ರತಕ್ಕಳಸಿ ನಡುಗದೆ, ಸುರಗಿಯಂ ಕಂಡ ಪುಲ್ಲೆಯಂತೆ ಸತ್ಯವ್ರತಕ್ಕಾಱದೋಸರಿಸದೆ, ತೇೞ್ತಿಂದ

---

1 ಪೂರ್ವ್ವಲಯುಮಂ (ಗ)

ಮಗವಿನಂತೆ ಕೊಲ್ಲದ ವ್ರತಕ್ಕೆ ಬೇಸತ್ತು ದೆಸೆಗಿಡದೆ[1], ಕಳವುವೋವ ಮನೆಯಂತೆ ಬ್ರಹ್ಮವ್ರತಕ್ಕೆ ಬೆರ್ಚಿ ತಲ್ಲಣಿಸದೆ, ಪುಲ್ಲಕಡ್ಡಿಯಂ ಕಂಡ ತೃಣಗ್ರಾಹಿಯಪ್ಪನಿಲದಂತೆ ಗುಣವ್ರತಕ್ಕೆ[2] ಸಂಚಲಿಸದೆ, ತೂಂಕಡಿಸುವ ವೃದ್ಧನಂತೆ ಶಿಕ್ಷಾವ್ರತಕ್ಕೆ ಭಯಸ್ಥನಾಗಿ ಜೋಲದೆ, ಪಱುಗೋಲೊಳರ್ದಂಬಿಗನಂತೆ[3] ಗುರುವಚನಮಂ ಬಿಟ್ಟು ಪೋಗದೆ, ಮೊದಲ್ಗೆಟ್ಟ ಪರದನಂತೆ ಘಳಿಗೆಗೊಂದಂ ನೆನೆಯದೆ, ಶೃಂಗಾರಕರ್ತಿಗನಪ್ಪ ಬಡವನಂತೆ ಚಿಂತಿಸಿ ಕೆಡದೆ, ವನಿತೆಗೋತ ಋಷಿಯಂತೆ ಶುಭಧ್ಯಾನದಿಂ ಕಿಡದೆ, ಕಾಲೂರ ಸೂಳೆಯಂತೆ ಬೞಿದೆ ದುರ್ಮತಕ್ಕೆ ತೊನೆಯದೆ, ಸನ್ಮಾರ್ಗಧಾರಿಯಾಗಿ ಮುನ್ನಿನವಗುಣಂಗಳಂ ಬಿಟ್ಟು ನಿರ್ಮಳಚಿತ್ತದಿಂ ಧರ್ಮದೊಳ್ ಕೂಡಿ ಜಿನಪಾದಸೇವೆಯೊಳರ್ದು ಸ್ವರ್ಗಾಪವರ್ಗ [ಸುಖ]ಕ್ಕೆ ಭಾಜನನಾಗೆಂದು ತಮ್ಮ ವೀರವೃತ್ತಿಯಿಂ ಪಡೆದ ದೇವಗತಿಯುಮಂ ಭೀತಮನದಿಂದನಿವೃತ್ತಿಯಿಂದುಪರಿ[4] ಚರಮಹಾರಾಜಂ ಪಡೆದ ತಿರಿಕಗತಿಯು ಪಡೆಪುವಮಂ ಪೇೞ್ದು ತದನಂತರಂ ॥ ೮೪

ಉರದೊಳ್ ಮುತ್ತಿನಹಾರಮೊಪ್ಪೆ ಶಿರದೊಳ್ ಮಿಕ್ಕಿರ್ದ ರತ್ನಾವಳೀ
ಸ್ಫುರಿತೋದ್ಯನ್ಮಕುಟಂ ಪಳಂಚೆ ಪೊಳೆಪಿಂ ಚೆಲ್ವಾಗಿ ಹಸ್ತಾಗ್ರದೊಳ್
ಕರಮಿಂಬಾಗಿರೆ ದಿವ್ಯರತ್ನವಳಯಂ ಸರ್ವಾಂಗದೊಳ್ ಭೂಷಣೋ
ತ್ಕರಮೆಲ್ಲಲ್ಲಿಗಮೆರ್ಕೆವೆತ್ತಿರೆ ಸುರರ್ ಲೋಕಕ್ಕಗುರ್ವಪ್ಪಿನಂ ॥ ೮೫

ದಿವ್ಯಾಂಬರಭೂಷಣಾಲಂಕೃತರಾಗಿ ॥ ೮೬

ಇವರ್ಗಂ ಸೂರ್ಯಂಗಮೇನಂತರಮವನಿಯೊಳಾರ್ ನೋೞ್ಪೊಡಂ
ತೇಜದೊಳ್ ಮ
ತ್ತಿವರ್ಗಂ ಚಂದ್ರಂಗಮೇನಂತರಮವನಿಯೊಳಾರ್ ನೋೞ್ಪೊಡಂ ಕಾಂ
ತಿಯೊಳ್ ಮ

---

1 ಸೆಡೆಯದೆ (ಗ)

2 ಅನಿಲದಂತೆ ಪರಿಗ್ರಹಕೆಡಗದೆ ಬಿಸಿಲೊಳಿರ್ದ ವಿಜ್ಞಾನಂತೆ ಗುಣವ್ರತಕ್ಕೆ (ಗ)

3 ಪರುಗೋಲರ್ದಂಬಿಗನಂತೆ (ಕ. ಖ.)  4 ದಾದನೀಚಯಿಂದೆಂದುಪರಿ (ಗ)

ತ್ರಿವರ್ಗಂ ಕಾಮಂಗಮೇನಂತರಮುಪನಿಯೊಳಾರ್ ನೋೞ್ಪೊಡಂ ರೂಪಿನೊಳ್ ಭೂ
ಭುವನಕ್ಕಾಶ್ಚರ್ಯಮೆಂಬಂತೊಗೆದು ಗಗನದೊಳ್ ನಿಂದರತ್ಯಂತಧೈರ್ಯರ್ ॥ ೮೭

ಅಂತು ಮುಕ್ತಾಜಾಲ [ಘಂಟಾಜಾಲಕ]ಂಗಳಿಂದೊಪ್ಪುವ ವಿಮಾನಾರೂಢರಾಗಿ ಸಮುದ್ರರವಕ್ಕೆಣೆಯೆನಿಸಿ ಘೂರ್ಣಿಸುವ ದೇವದುಂದುಭಿ ವೆರಸು [ಗಗನತಳದೊಳ್ ನಿಂದು ನಾಲ್ವರ್ ದೇವರುಂ ತಂತಮ್ಮ ವಿಭೂತಿಯುಮಂ] [1] ಪರಿಗ್ರಹನಿವೃತ್ತಿಯೊಳಾದ ಮಹಾಫಲಮುಮಂ ಪೇೞ್ದು ದೇವಲೋಕಕ್ಕೆ ಪೋದರಿತ್ತಲನಂತವೀರ್ಯಮಹಾರಾಜನುಂ ನೆರೆದ ನೆರವಿಯುಂ ವಿಸ್ಮಯಂಬಟ್ಟು ॥ ೮೮

[ಜಿನತತ್ತ್ವೋಕ್ತಿಯೊಳೂಂದಿ ಜೈನಮತಮಂ ಲೇಸಾಗಿ ಸಚ್ಚಿತ್ತದಿಂ
ಮನದೊಳ್ ಸಂಶಯಮಾಗದಾತ್ಮಹಿತಮೆಂದಾದಂ ಮನಂಗೊಂಡು ಸ
ಜ್ಜನರಂ ಮೆಚ್ಚಿಸಿ ಜೀಯಜೀಯೆನಿಸಿ ತಾಳ್ದಿರ್ದಾ ಮಹಾತ್ಮಂಗೆ ದೇ
ವನಿಕಾಯಂ ಬೆಸಕೆಯ್ವುದಚ್ಚರಿಯೆ ದೇವೇಂದ್ರತ್ವಮಾಶ್ಚರ್ಯಮೇ]॥

ಸಂದಾಣುವ್ರತಮಯ್ದುಮಂ ವಿಮಳಸದ್ರತ್ನಗಳಿಂದಂದು ಸಾ
ನಂದಂ ತಾಳ್ದಿ ಚತುಷ್ಕಷಾಯಭಟರಂ ತೂಳ್ದಟ್ಟಿ ಪಾಪಾರಿಯಂ
ಪೊಂದಲ್ಕೀಯದೆ ಕೂಡಿ ಸತ್ಪುರುಷರೊಳ್ ಜೈನಾಂಘ್ರಿಯಂ ತಾಳ್ದಿ ನಿಂ
ದಂದಕ್ಕುಂ ದಿವಿಜೇಂದ್ರದಿವ್ಯಸುಖಮುಂ ನಿರ್ವಾಣಸಾಮ್ರಾಜ್ಯಮುಂ ॥

[ಎಂದು ಜಿನಧರ್ಮದೊಳಾದ ವಿಭವಮುಮಂ ಜಿನಪಾದಸೇವನೆಯ ಪೆಂಪುಮಂ ಪೊಗೞ್ದು ಮಗುೞ್ದು ಬಂದು ಸಾರಸ್ವತಮುನಿನಾಥಂಗೆ ಪೊಡೆಮಟ್ಟು ನಿಮ್ಮ ಬೆಸಸಿದಂತೆಲ್ಲಾ ಕಾರ್ಯಮಾದುದಿನ್ನಾ ಪಾವಿಂಗಾಯುಷ್ಯಮೆನಿತುಂಟೆಂದು ಬೆಸಗೊಳ್ವುದುಂ ಮುನಿನಾಥನಿಂತೆಂದಂ ॥ ೯೧

1 ಜಿನಾಧಿಪತಿಯ ಚರಣಸೇವೆಯೊಳಾದ ಫಲಮುಮಂ (ಗ)

ನರಪತಿ ಪದಿನ್ಯೈದುದಿನಂ
ಬರೆಗಂ ಫಣಿಗುಂಟು ಜೀವಿತಂ ಮಿಗಿಲಿಲ್ಲೊಂ ।
ದರೆಗಳಗೆಯುವೆನೆ ಭೂಮಿ
ಶ್ವರನಱಿದಾಶ್ಚರ್ಯವೆಂದು ಮತ್ತಿಂತೆಂದಂ ॥ ೯೦

ಅಂತಾದೊಡೆ ನಿಮ್ಮಡಿ ನೀವೆಲ್ಲಿಗೆ ಬಿಜಯಂಗೆಯ್ದು ತತ್ಫಣಿಗೆ ತೊಱಿವಿಯಂ ಕುಡುವುದೆಂಬುದುಂ ಸಾರಸ್ವತಮುನಿನಾಥಂ ಸಕಲಮುನಿವರರ್ವೆರಸು ಸರ್ಪಾಶ್ರಯಗುಹೆಗೆವಂದು ಬಾಗಿಲೊಳದರ್ಪವರ್ಗೆ ಪಿವಾವಿಂಗೆ ಧರ್ಮಂಪೇೞ್ದು ಮುಕ್ತಿಲಕ್ಷ್ಮಿಯ ಕುಡುವ ಪಂಚರತ್ನಮೆನಿಸುವ ಪಂಚಾಣುವ್ರತಮಂ ಕಾರುಣ್ಯದಿಂ ಕೊಟ್ಟು ಮೆಲ್ಲನಿಂತೆಂದರ್ ॥ ೯೧

ನಿನಗಾಯುಷ್ಯಂ ಪಿರಿದಿ
ಲ್ಲನುನಯದಿಂ ಮೇಲೆ ನೋಡ ಪದಿನ್ಯೈದುದಿನಂ ।
ಮನವಿಕ್ಕಿ ಕುಂದಿ ಜಱಿಯದೆ
ನಿನಗಪ್ಪುದಿದೊಳ್ಳಿತಾಗಿ ನೆನೆ ನೀಂ ಮನದೊಳ್ ॥ ೯೪

ಮುನ್ನಿನ ಭವದೊಳ್ ನೀನ
ತ್ಯನ್ನತನ್ನ ರಾಜಪುತ್ರನ್ನ ದುರ್ಮನದಿಂ ।
ದೆನ್ನ ಸಿರಿಯೆಂದು ಮೋಹಿಸಿ
ಪನ್ನಗನಾದೈ ಜಡಾತ್ಮ ದುರಿತೋದಯದಿಂ ॥ ೯೫
ನೀನಱಿಯ ನಿನ್ನವನಿತೆಯ
ರೇನುಮನಱ್ಕಿರ್ತು ನೆನೆದು ಕುದಿಯದೆ ಜಿನನಂ ।
ಧ್ಯಾನಿಸಿ ತತ್ಫಲದಿಂದಮ
ನೂನಸುಖಾಸ್ಪದಮನೆಯ್ದಿದರ್ ಮಱುಭವದೊಳ್ ॥ ೯೬

ಆದುಕಾರಣದಿಂ ಸೌಖ್ಯಾ
ಭ್ಯುದಯಂ ಜಿನಪಾದಸೇವೆ ಮತ್ತುೞಿವವು ದುಃ ।
ಖದ ಪುತ್ತು ಚಿಂತೆಯಾಗರ
ಮೊದವಿದ ದುರ್ಗತಿಯ ದಾರಿ ನೋವಿನ ಮಡುಗಳ್ ॥ ೯೭

ಜಿನರೂಪಸ್ಮರಣೆಯೆ ಜೀ
ವನಿಕಾಯಕ್ಕಾರ್ಪಮಾತ್ಮಹಿತಮಘೌಹರಣಂ ।
ಜಿನನುತಮಪವರ್ಗಶ್ರೀ
ವನಿತೆಯ ತೊಡವಮರಪತಿಯ ಲಕ್ಷ್ಮಿಯ ತಿಲಕಂ] ॥ ೯೮

ಅದಕ್ಕೆ ಸಂದೆಯಮಿಲ್ಲೆಂದು ಜಿನಧರ್ಮದೊಳಾದ ವಿಭವಮುಮಂ ಜಿನಪಾದಸೇವೆಯ ಪೆಂಪುಮಂ ಪೊಗೞ್ದು [ಮತ್ತಮಾರಾಧನೆಯಿನರ್ಚಿಸಿ ಸ್ವಾಧ್ಯಾಯಂಗೊಂಡು] [1] ಮೃದುನಿನಾದದಿನಿಂತೆಂದು ಪೇೞ್ದರ್ ॥ ೯೯

ಜೀವಂಬಿಡುವೆಡೆಯೊಳ್ ದೃಢ
ಭಾವನೆಯಿಂ ತನುವನನ್ನಮಂ ತೊಱೆದವನು ।
ರ್ವೀವಳಯಮಱಿಯಲಮೃತ
ಶ್ರೀವನಿತೆಯೊಳರದೆ ನೆರೆದು ಸುಖಿಯಾಗಿರ್ಕುಂ [2] ॥ ೧೦೦

ಮುನ್ನಂ ಪಲವುಭವಂಗಳೊ
ಳನ್ನೆರಪಿದ ಕರ್ಮಚಯಮುಮೀಭವದೊಳ್ ಮ ।
ತ್ತನ್ನದೆ ಮಾಡಿದ ಪಾಪಮು
ಮೇಂ ನಿಲಲಱಿದಪುದೆ ತೊಱೆದ ಭವ್ಯಂಗಿಳೆಯೊಳ್ ॥ ೧೦೧

ಮತ್ತಂ ಸಂನ್ಯಸನದ ಪೆಂಪಂ ಪೇೞ್ವೊಡೆ ಸಂನ್ಯಸನಮಂ ಕೈಕೊಂಡ ಮಹಾಪುರುಷನ ಕರ್ಮಂ ಕಿಚ್ಚು ಪತ್ತಿದ ಕರಡದಂತೆ ಭಸ್ಮಮಕ್ಕುಂ ವಜ್ರಂ ತಾಗಿದ ಗಿರಿಯಂತೆ ನುಚ್ಚುನೂಱಕ್ಕುಂ ಸೂರ್ಯನ ರಶ್ಮಿ ಮುಟ್ಟಿದ ಮಂಜಿನಂತೆ ಕರಗುಗುಂ, ಬಲ್ಲಿದಂಗೆ ಪೊಣರ್ದೊಡ್ಡಿದನಂತೆ ಕೆಟ್ಟೋಡುಗುಂ, ಗಾಳಿಗೊಳಗಾದ ಮುಗಿಲಂತೆ ಪಾಱುಗುಂ,

---

1 ಸಾರಸ್ವತಮುನಿಯಲ್ಲಿಗೆ ಬಂದೆಲ್ಲಮಂ ಪೇೞ್ವುದುಮವರ್ ಪಾವಿನಲ್ಲಿಗೆ ಬಂದು ನಿನಗಿಂ ಪದಿನೈದು ದಿವಸಮಾಯುಷ್ಯಮೆಂದಱಿಪಿ ಪಂಚಾಣುವ್ರತಮುಮಂ ಸಂನ್ಯಸನಮುಮಂ ಕೊಟ್ಟಾರಾಧನೆಯುಮನರ್ಚಿಸಿ ಸ್ವಾಧ್ಯಾಯಮುಮಂ ಕೊಟ್ಟು (ಗ)

2 ವಳಯದೊಳ್ಪುನರ್ಭವಜೀವನರುಹಮುಖಿಯೊಳರ್ತಿಯಿಂ ನೆರೆದಿಕ್ಕುಂ (ಕ. ಬ.)

ಪೆರ್ವೊನಲಿಂಗಿದಿರಾದ ಮಳಲೇಱಿಯಂತೆ ಜರಿಗುಂ, ಸೊಡರಂ ಪೊರ್ದಿದ ಪತಂಗದಂತೆ ತವ್ವುಗುಂ, ಬೆಂಕೆಯಂ ಪೊರ್ದಿದ ತಱಗೆಲೆಯಂತೆ ಕರಿಪ್ಪುರಿಯಕ್ಕುಂ, ಚಂದ್ರನ ಕಿರಣಕ್ಕಿದಿರಾದ ಕತ್ತಲೆಯಂತೆ ಪರಿದೋಡುಗುಂ, ಸಿಂಹಕ್ಕಿದಿರಾದ ಗಜದಂತೆ ಕಿಡುಗು [1] ಮಿಂತು ॥ ೧೦೨

ಜಿನರಂ ನೆನೆ ಮನದೊಳ್ ಮ
ತ್ತಿನ ತನು ಮೊದಲಾದ ದುಷ್ಪರಿಗ್ರಹಮಂ ಬೆ ।
ಳ್ತನದಿಂ ಪಂಬಲಿಸದಿರೊ
ಯ್ಯನೆ ಕೇಳುತ್ತಿರು ಮದೀಯವಚನಾಮೃತಮಂ [2] ॥ ೧೦೩

ಮತ್ತಂ, ಪುಲ್ಲ ಕಿರ್ಚಿನಂತೆ ಸುರಚಾಪದಂತೆ ಬೀದಿಯ ಸೊಡರಂತೆ ಬಯಲೊಡ್ಡಿಯಂತೆ ಮಾಗಿಯ ಮರದೆಲೆಯಂತೆ ಶರೀರಂ ಮೊದಲಾಗೆಲ್ಲಾ ವಸ್ತುಗಳುಂ ನಿಷ್ಠೆಯಲ್ಲೆಂದು [3] ಪೇೞ್ವಧ್ರುವಮುಮಂ ; ನೀರಂ ಕಂಡ ಕತ್ತೆಯಂತೆ ಕಿರ್ಚಂ ಕಂಡ ಪುಲಿಯಂತೆ ಸೊಡರಂ ಕಂಡ ಕೋಡಗದಂತೆ ನಾಯಂ ಕಂಡ ಪುಲ್ಲೆಯಂತೆ ನಾಡರಸಂ ಕಂಡ ಮನ್ನೆಯನಂತೆ ತನು ಮೊದಲಾದ ಸಮಸ್ತಮುಂ ಶರಣಲ್ಲೆಂದು ಪೇೞ್ವ ಶರಣಮುಮಂ ಕಳನೇಱಿದಂಕನಂತೆ ಸೂಲಮೇಱಿದ ಕಳ್ಳನಂತೆ ಸಾವ ಮೂನಿಸನಂತೆ ಕುತ್ತದೊಳ್ ನವೆವನಂತೆ ಕೊಳದೊಳರ್ದನಂತೆ ಜೀವಮೆಲ್ಲಿಯುಮೇಕಮೆಂದು ಪೇೞ್ವೇಕತ್ವಮುಮಂ ; ಕಾೞ್ಕಿಚ್ಚಿಂಗೆ ಪುಲ್ಲ ಬೇಲಿ ಪೆರ್ವೊನಲಿಂಗೆರೆಯ ಪಟ್ಟೆ ಗಜಘಟೆಗೆ ಬಾಳೆಯ ಬನಂ ಬಡಿಗೆಗೆ ಮಡಕೆಯ ಮೆಟ್ಟು ಪೆರ್ಗಾಳಿಗೆ ಬೂದಿಯ ರಾಶಿ ಬಲ್ಲಿತಲ್ಲದಂತೆ ಮಂತ್ರ ದುರ್ಗ ಬುದ್ಧಿಬಲ ಮಿತ್ರ ಬಾಂಧವರ್ಮೊದಲಾಗೆಲ್ಲಂ ಸಾವುಮಂ ಕೇಡುಮಂ ತಪ್ಪಿಸಲಾಱರೆಂದು ಪೇೞ್ವನನ್ಯತ್ವಮುಮಂ ; ಪಗರಣಿಗರಂತೆ ಪಚ್ಚೊಳಿಂತಿಯಂತೆ [ತಿರಿವನ ಪಡಪಿನಂತೆ ಸೂರ್ಯನಂತೆ] ಬೆಳೆವ ಸಸಿಯಂತೆ [4]

---

1 ಬೆದಱಿ ಕಿಡುಗು (ಗ) 2 ಧರ್ಮಾಮೃತಮಂ (ಗ)

3 ಮೊದಲಾದ ದುಃಪರಿಗ್ರಹಮುಂ ಸಮಸ್ತಮುಂ ನಿತ್ಯಮಲ್ಲೆಂಬುದಮಂ (ಗ) 4 ಪ್ರತಿಸೂರ್ಯನಂತೆ (ಗ)

ಜೀವಂಗಳ್ ಬಗೆದ ಬಣ್ಣಿಗೆಯುಕ್ಕುವೆಂದು ಪೇೞ್ವ ಸಂಸಾರವುಮಂ ; ಸುರಗಿಯ ಮೊಟದಂತೆ ಬೆಲ್ಲವಡುಗೆಯಂತೆ ಕಾಳಗದ ಗೆಲ್ಲದಂತೆ ಬಂದಿಕಾಱನ ಪಡಪಿನಂತೆ ಸಾಧನೆಕಾಱನ ಸಿರಿಯಂತೆ ಕಡುದುಃಖಮುಂ ಸುಖಮುಮಿಾ ಸ್ವರೂಪವೆಂದು ಪೇೞ್ವ ಲೋಕಮುಮಂ ; ಪಡಿಗದಂತೆ ತೊವ್ವ ಕುೞಿಯಂತೆ ಪೊಲೆಯರ ಮನೆಯಂತೆ ಪಾವಿನ ಕಣದಂತೆ ಕಳ್ಳ ಮಡಕೆಯಂತೆ ಶರೀರಂ ಪೊಲ್ಲೆಂದು ಪೇೞ್ವಶುಚಿತ್ವಮುಮಂ ; ಸೂಜಿಯ ಬೞಯ ದಾರದಂತೆ ತಾಯ ಬೞಯ ಶಿಶುವಿನಂತೆ ಕಾಲ ಬೞಯ ನೀರಂತೆ ಮೊೞಗಿನ ಬೞಯ ಮಿಂಚಿನಂತೆ ಬೞಲ್ಕೆಯ ಬೞಯ ನಿದ್ರೆಯಂತೆ ಆರ್ತ ರೌದ್ರ ಧರ್ಮ ಶುಕ್ಲಮೆಂಬ ನಾಲ್ಕುಂ ಧ್ಯಾನದ ಬೞವಿಡಿದು ಶುಭಾಶುಭಕರ್ಮಾಸ್ರವಯಿಸುಗುಮೆಂದು ಪೇೞ್ವಾಶ್ರಯಮುಮಂ ; ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ ಕೇಣಿಕಮಿಕ್ಕುವ ಪರದನೊತ್ತೆಯಂ ಬಿಡಿಸುವಂತೆ [1] ನಡೆವ ಬಟ್ಟೆಯೊಳ್ ಪೊಂಗೆಡಿಸಿ ಅರಸುವಂತೆ [2] ಭಂಡಾರವನೊಪ್ಪಿಸಿ ಪೋಪ ಸೇನಬೋವನಂತೆ ಸಿದ್ಧಾಯುಮನಿಕ್ಕಿ ವಿಶುದ್ಧಿಯಂ ಕೊಂಬ ಗ್ರಾಮಣಿಯಂತೆ ಬರ್ಪ ಕರ್ಮಮಂ ತೆಗೆವ ಇರ್ದ ಕರ್ಮಮಂ ಗೆಲ್ವುಪಾಯಮಂ ಪೇೞ್ವ ಸಂವರೆಯುಮಂ ; ಸೊಡರೆಣ್ಣೆಯಂ ಪೀರ್ವಂತೆ ಬಿಸಿಲ್ ನೀರಂ ಪೀರ್ವಂತೆ ಮಂತ್ರಾಕ್ಷರಂ ವಿಷಮಂ ಪೀರ್ವಂತೆ ಕಿಚ್ಚು ನೀರಂ ಪೀರ್ವಂತೆ ಆನೆಯ ಜಠರದಗ್ನಿ ಬೇಳದ ಕಾಯ ತಿರುಳಂ ಪೀರ್ವಂತೆ ಮಹಾಪರೀಷಹಂಗಳಿಂ ಕರ್ಮಂಗಳ್ ಕಿಡುಗುಮೆಂದು ಪೇೞ್ವ ನಿರ್ಜರೆಯುಮಂ ; ಚಂದ್ರೋದಯದಿಂ ಸಮುದ್ರಂ ಪೆರ್ಚುವಂತೆ ಗೊಬ್ಬರದಿಂ ಬೆಳಸು ಪೆರ್ಚುವಂತೆ ಆಜ್ಞೆಯಿಂ ನಾಡು ಪೆರ್ಚುವಂತೆ ಪಿಂಡಿಯಿಂ [3] ದೆಮ್ಮೆಯ ಪಾಲ್ ಪೆರ್ಚುವಂತೆ ಮೊಲೆವಾಲಿಂ ಮಕ್ಕಳ್ ಪೆರ್ಚುವಂತೆ ದಾನಪೂಜೆಶೀಲೋಪವಾಸದಿಂ ಧರ್ಮದಿಂದಮುತ್ತಮಕ್ಷಮಾದಿತಪೋನುಷ್ಠಾನದಿಂ ಪುಣ್ಯಂ ಪೆರ್ಚುಗುಮೆಂದು ಪೇೞ್ವ

---

1 ನಂಬಿ ಕೊಡುವಂತೆ (ಕ. ಖ.) 2 ನೋೞ್ಪವಂತೆ (ಗ)

3 ಪಿಂಡಿಯಿಂದಕ್ಕಿಯಿಂ (ಗ)

ಧರ್ಮವುಮಂ ; ಚಕ್ರಾಯುಧದಂತೆ [1] ಬಿದಿಯು ರತ್ನದಂತೆ ಪರುಷವೇ ದಿಯಂತೆ ಸಿಧಿಯಂತೆ ಅಪೂರ್ವ ಪುಷ್ಪ ಬೋಧಿಯುಮಂ ಕ್ರಮಂ ತಪ್ಪ ಲೀಯದೆ ಪೇೞ್ದು ॥ ೧೦೪

ಬಂದುಭವಂ ಸಮಾಧಿಮರಣಂ ದೊರೆಕೊಂಡೊಡೆ ಕಷ್ಟವೃತ್ತಿಯೊಳ್
ಪೊಂದದೆ ದೇವಮಾನವಪತಿತ್ವಮನೆಯ್ದಿ ಸಮಸ್ತಕರ್ಮಮಂ
ಕುಂದಿಸಿ ಬೇಗಮೆಂಟುಭವದಿಂದೊಳಗಕ್ಷಯಮೋಕ್ಷಲಕ್ಷ್ಮಿಯೊಳ್
ಸಂದೆಯುಮಿಲ್ಲದೊಂದಿ ಸುಖಮಿರ್ಪರಸಂಚಲರಾಗಿ ರಾಗದಿಂ ॥ ೧೦೫

ದುಕೂಲಮನೀಡಾಡಿ ಬಣ್ಣಮನುಡುವ [2], ಸೊದರಂ ಪೊೞಗಿಕ್ಕಿ ಮಾಂಬುಱುವನೊಳಗಿಡುವ, ಕಣ್ಣಂ ಕಳೆದು ಪೀಲಿಯ ಕಣ್ಣನಿಡುವ ಕಯ್ಯಂ ಕಡಿದು ಮರಗಯ್ಯಂ[ಕಟ್ಟಿ]ಕೊಳ್ವ, ಪೊನ್ನಂ ಕೊಟ್ಟು ಮಾಗ ನರಿಸಿಕೊಳ್ವ, ಮೇಲುದಂ ಕೊಟ್ಟು ತಲೆಯಂ ಬೋಳಿಸಿಕೊಳ್ವ, ಕೆಯ್ಯಂ ಕೊಟ್ಟು ಪುಲ್ಲಂ ಕೊಳ್ವ, ಕಂಕಣಮಂ ಬಿಟ್ಟು ಬಳೆಯಂ ಕೊಳ್ವ, ಪೆಂಡಿರಂ ಮಾಱಿ ತೊೞ್ತುರಂ ಕೊಳ್ವ, ಹಾರಮನೀಡಾಡಿ ಪಾವಂ ಕಟ್ಟುವ, ಪಸುವಂ ಮಾಱ್ದು ನಾಯಂ ಕಱುವ, ತಂಬುಲಮಂ ಬಿಟ್ಟು ಪಗಣಮಂ ತಿಂಬ [3], ಕರ್ಪುರಮಂ ಬಿಟ್ಟು ಪಗಿನಂ ಕೊಳ್ವ [4] ಜಾತ್ಯ ಶ್ವಮಂ ಬಿಟ್ಟು ಮರಗಾಲಂ ಕೊಳ್ವ, ತುಪ್ಪಮಂ ಕೊಟ್ಟು ನೀರಂ ಕೊಳ್ವ, ಕೋಟಿವೇದಿಯುಪ್ಪ ರಸಮಂ ಬಿಟ್ಟು ಎಣ್ಣೆಯಂ ಕೊಳ್ವ, ಭಂಡಾರಮಂ ಕೊಟ್ಟು ಪಿಂಡಿಯಂ ಮೊಲ್ವ, ಗಾವಿಲನಂತಾಗಿ ಶಾಶ್ವತ ಸುಖಮನೀವ ರತ್ನತ್ರಯಂಗಳಂ ಬಿಟ್ಟು ಕಿಡುವ ಪರಿಗ್ರಹಮುಮಂ ನೆನೆಯುತ್ತುಮಿರಲಾಗದೆಂದು ಧರ್ಮಮಂ ಪೇೞುತ್ತುಮಿರ್ಪುದುಮಿತ್ತ ಲನಂತವೀರ್ಯಮಹಾರಾಜಂ ಪದಿನೈದುದಿವಸಂಬರಂ ಜಿನಪೂಜೆಗಳಂ

---

1 ಪರುಷವೇದಿಯಂತೆ ಚಕ್ರಾಯುಧದಂತ ಚಿಂತಾಮಣಿಯಂತ (ಗ)

2 ಹಱುಕೆಯನುಡುವ (ಗ)

3 ನಂದನವನವಂ ಕಡಿದು ಮನೆಯಂ ಮಾಡುವ (ಗ)

4 ಪೊನ್ನ ಮಡಕೆಯಂ ಕೊಟ್ಟು ಮಣ್ಣ ಮಡಕೆಯಂಕೊಳ್ವ (ಗ)

ಮಾಡಿಸುತ್ತುಮಿರ್ಪುದುಂ ಉಪರಿಚರನಪ್ಪ ಪೆರ್ಬಾವು ಧರ್ಮಮಂ ಕೇಳುತ್ತುಂ ಪ್ರಾಣವಿಯೋಗದೊಳ್ ವಜ್ರದಾಡನ ಮಾಡಿದ ಸಾಹಸವಂ ನೆನೆಯುತ್ತುಂ ಸತ್ತು ಭವನವಾಸಿಗರಲ್ಲಿ ಮೂಱುಪಳತೋಪಮಾಯುಷ್ಯ ಮನೊಡೆಯನಾಗಿ ವ್ಯಂತರಕುಲದೊಳ್ ವಿಮಳನೆಂಬ [ಪೆಸರ] ದೇವನಾಗಿ ಪುಟ್ಟಿದನಿತ್ತಲನಂತವೀರ್ಯಮಹಾರಾಜಂ ಮುನೀಂದ್ರೋತ್ತಮರಂ ಬೆಸಗೊಂಡು ದುರ್ಭಾವದಿಂ ಭವನವಾಸಿಗಲೋಕದೊಳ್ ತತ್ಕ್ಷಣ ಪುಟ್ಟಿದುದನಱಿದು ಬೆಱಗಾಗಿ ॥ ೧೦೬

ಪಿರಿದಪ್ಪ ಪರಿಗ್ರಹಮಂ
ಪರಿಹರಿಸಿದ ಫಲದಿನುಪರಿಚರನರಸಿಯರೊ ।
ಪ್ಪಿರೆ ದಿವಿಜವೆಂದ್ಯರಾದರ್
ಪರಿಗ್ರಹಾಪೇಕ್ಷೆಯಿಂದಮಿವನಿಂತಾದಂ ॥ ೧೦೭

ಎಂದು ಬೆರ್ಚಿ ತನ್ನ ಪಿರಿಯ ಮಗನಪ್ಪ ಸುಬಾಹುಕುಮಾರಂಗೆ ರಾಜ್ಯಪಟ್ಟಮಂ ಕಟ್ಟಿ [ಸಕಳ] ಸಾಮ್ರಾಜ್ಯಮಂ ತೊಱೆದು [ಸಮಸ್ತ ರಾಜಕುಮಾರರ್ವೆರಸು] [1] ಜಿನದೀಕ್ಷೆಯಂ ಕೈಕೊಂಡುಗ್ರೋಗ್ರತಪಶ್ಚರಣಂಗೆಯ್ದು [2] ಸಂಮೇಧಪರ್ವತದೊಳ್ ಕರ್ಮಕ್ಷಯಂಗೆಯ್ದು ನಿರ್ವೃತಿಯನೆಯ್ದಿದನಿತ್ತಲ್, ಭವನವಾಸಿಗನಪ್ಪ ವಿಮಲದೇವಂ ವಜ್ರದಾಡನಪ್ಪ ವಿದ್ಯಾಧರನಂ ಕಂಡು ವಿಭಂಗಜ್ಞಾನದಿಂ ಪೂರ್ವವೈರಮನಱಿದು ॥ ೧೦೮

ಮುನಿದು ಕಡುಕೋಪದಿಂ ಭೋಂ
ಕನೆ [3] ಖಚರನ ವಿದ್ಯೆಯೆಲ್ಲಮಂ ಕಿಡಿಸಿ ಮಹಾ ।
ವನಧಿಗೆಱದೊಯ್ದು ಖಚರೇ
ಶನುಮಂ ಖಚರಾಧಿಪತಿಯ ವಲ್ಲಭೆಯರುಮಂ ॥ ೧೦೯

1 ಸಾರಸ್ವತಭಟ್ಟಾರಕರಲ್ಲಿ (ಗ) 2 ತಪದೊಳ್ ನೆಗಳ್ದು (ಗ)
3 ಭೋಂಕನೆ (ಗ)

ಎನ್ನರಸಿಯುರುಮನೆನ್ನ ಮ
ನುನ್ನತಿಯಿಂ ಪೆಟ್ಟುವೆರ್ಚೆ ಪುರುಡಿಸಿ ಕೊಂದೈ ।
ಮುನ್ನಿಷ್ಕರುಣತೆಯಿಂ ನೀಂ
ನಿನ್ನಂ ಕಂಡೀಗಳಂತು ಸೈರಿಸಲಾರ್ಪೆಂ ॥ ೧೧೦

ಕುಡಿಕುಡಿ ನೀರಂ ಬಾಯಂ
ಬಿಡು ಬಿಡು ನೋವಿಂಗೆ ಸೆಡೆಯದಿರ್ ಸೆಡೆಯದಿರೆಂ ।
ದಡಿಗಡಿಗೆ ನಗುತುಮೋರಂ
ತೆಡೆಯುಡುಗದೆ ಪಿರಿದುಬೇಗಮಾಖಗಪತಿಯುಂ ॥ ೧೧೧

ಪುಡುಕುನೀರದರ್ದೆ ಮೊದಲಿಸುತ್ತುಮಿರ್ಪುದುಂ ವಜ್ರದಾಡವಿದ್ಯಾಧರಂ ಕಳತ್ರಂಬೆರಸು ಕೊಂದಕೊಲೆಸತ್ತರೆಂಬ ನಾಣ್ಣುಡಿಯುಂ ದಿಟಂ ಮಾಡಿ ರೌದ್ರಧ್ಯಾನದಿಂ ಸತ್ತು ಮೊದಲ ನಂಕದೊಳ್ ಮೂಱುಪಳತೋಪಮಾಯುಷ್ಯಮನೊಡೆಯನಾರಕನಾಗಿ ಪುಟ್ಟಿದಂ. ಇತ್ತಲ್ ಕುರುಜಾಂಗಣ ವಿಷಯದೊಳ್ ಹಸ್ತಿನಾಪುರಮೆನಾಳ್ವ ಜಯದತ್ತಮಹಾರಾಜನಾತನರಸಿ ವಿಜಯಮಹಾದೇವಿಯೆಂಬಳ್ ॥ ೧೧೨

ವನಜಾನನೆ ಸುತರಿಲ್ಲದೆ
ಮನಕತದಿಂ ಬಂದು ಗುರುಗಳಂ ವಂದಿಸಿ ಮೆ ।
ಲ್ಲನೆ ಬೆಸಗೊಳ್ವುದುಮಾಸ
ನ್ನಮುನಿಯೆಂದಂ ಮಗಳೆ ನಿನಗೆ ಪರಮೋತ್ಸವದಿಂ ॥ ೧೧೩

ಮದನನಿಭಂ ಜಿನಧರ್ಮಾ
ಭ್ಯುದಯಂ ಭುವನೈಕವಂದ್ಯನಮಲಚರಿತ್ರಂ ।
ವಿದಿತಯಶಂ ಪುಟ್ಟುಗುಮೆಂ
ಬುದುಮಾಗಳ್ ನಲಿದು ದಿವ್ಯಮುನಿಪನ ನುಡಿಯಂ ॥ ೧೧೪

ನಂಬಿರ್ಪುದುಂ ಕೆಲವುದಿಸಕ್ಕೆ ವಿಮಲದೇವನಪ್ಪ ಭವನವಾಸಿಗಂ ಬಂದು ಗರ್ಭದೊಳ್ ನೆಲೆಸುವುದುಂ ಗರ್ಭಮಾಗಿ ನವಮಾಸಂ ನೆಱೆದು

ಗಂಡುಗೂಸಂ ಪೆತ್ತು ಗುರುದತ್ತಭಟ್ಟಾರಕರಾದೇಶದಿಂ ಪುಟ್ಟಿದನಪ್ಪುದಱಿಂ ಗುರುದತ್ತನೆಂದು ಪೆಸರಿಟ್ಟು ಕೊಂಡಾಡುತ್ತಿರೆ ಸಕಲಶಾಸ್ತ್ರದೊಳ್ ಪರಿಣತನಪ್ಪುದಱಿಂ ವಿಜಯದತ್ತಮಹಾರಾಜಂ ಗುರುದತ್ತಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸುಧರ್ಮಭಟ್ಟಾರಕರಲ್ಲಿ ದೀಕ್ಷೆಯಂ ಕೈಕೊಂಡು ಪೋದನಿತ್ತಲ್ ॥ ೧೧೫

ಗುರುದತ್ತನೃಪತಿ ಸಕಲೋ
ರ್ವರೆಯಂ ತಮ್ಮಯ್ಯನೆಡೆಗೆ ತಾಂ ಮೀಱಕೆಯ್ಕೆ ।
ಬೇರಲಧಿಕವೆಂದು ಧರೆ ಝೋಂ
ಕರಿಸೆ ಮಹಾಖ್ಯಾತಿವೆರಸು ವಿಭವದಿನಾಳ್ದಂ ॥ ೧೧೬

ಅಂತಿರ್ದೊರ್ಮೆ ಚಂಪಾಪುರದ ಧಾತ್ರೀವಾಹನನ ಮಗಳಪ್ಪಭಯಮತಿಯಂ ಬೇಡಿ ಪೆರ್ಗಡೆಗಳನಟ್ಟುವುದುಂ ಕೊಡಲೊಲ್ಲನೆಂದೊಡೆ ಭಂಗಮಾದ ಸಿಂಗದಂತೆ ಪೋಗದೆತ್ತಿ ಕಾದುವುದುಂ ಏೞನೆಯ ದಿವಸದಂದು ಮಹೇಂದ್ರದತ್ತನೆಂಬ ರಾಜಪುತ್ರನಂಗೈ ಪಱಿದು ನೆಲಕ್ಕೆ ಬೀೞ್ವುದುಂ ಅದನೊಂದುಗಿಡುಗಂ ಕೊಂಡು ಪೋಗಿ ಕನ್ಯಾಮಾಡದ ಮುಂದಿಕ್ಕುವುದುಮನಭಯಮತಿಕುಮಾರಿ ಕಂಡು ತದ್ವೃತ್ತಾಂತಮನೆಲ್ಲಮನಱಿದು ಜೀವಬಾಧೆಗೆ ಪಿರಿದುಂ ಭಯಸ್ಥೆಯಾಗಿ [1]॥ ೧೧೭

---

1 ಈ ಗದ್ಯಕ್ಕೆ ಬದಲಾಗಿ (ಕ) ಪುಸ್ತಕದಲ್ಲಿ ಮುಂದೆ ಬರೆದಿರುವ ಭಾಗವಿದೆ :—

ಅಂತು ರಾಜ್ಯಲಕ್ಷ್ಮೀಮನೋಹರನಾಗಿರ್ಪುದುಮೊಂದುದಿವಸಂ ಪರದನೊರ್ವನಮೂಲ್ಯವಸ್ತುಗಳನೊಂದುಪಟಮುಮಂ ತಂದರಸನ ಮುಂದಿಟ್ಟು ನಿಂದಿರ್ಪುದು ಮರಸನಾಪಟದೊಳ್ ಬರೆದ ಪೆಣ್ಣ ರೂಪಂ ನೋಡಿ ವಿಸ್ಮಯಂಬಟ್ಟದಾರ ರೂಪೆಂದು ಬೆಸಗೊಳ್ವುದುಮಂಗವಿಷಯದ ಚಂಪಾಪುರಮನಾಳ್ವ ಧಾತ್ರೀವಾಹನ ಮಹಾರಾಜನ ಮಗಳಪ್ಪಭಯಮತಿಕುಮಾರಿಯ ರೂಪೆಂದು ಬಿನ್ನಪಂಗೆಯ್ವುದುಂ ॥

ಪರದಂಗೆ ಮೆಚ್ಚಿ ಧರಣೀ
ಶ್ವರಮಾದ್ಯಂ ಮೆಚ್ಚುಗೊಟ್ಟು ತದನಂತರದೊಳ್ ।
ಸಚಿವಮುಖಿಯುಂ ಮದಸಿಂ
ಧುರಗಮನೆಯನೆನಗೆ ಕುಡುವುದೆಂದವನೀಶಂ ॥

ಎನಗೆ ಗುರುದತ್ತನಲ್ಲದೆ
ಜನನಾಥರ್ ತಪ್ಪಿ ರೂಪು ನಿಶ್ಚಯಮೆಂದಾ ।
ವನಜಮುಖಿ ದಾದಿಯುಂ ನೆ
ಟ್ಟನೆ ವಸುಧಾಧೀಶನಲ್ಲಿಗಟ್ಟುವುದಾಗಳ್ ॥ ೧೧೮

ಧಾತ್ರೀವಾಹನಮಹಾರಾಜಂ ಮಗಳಟ್ಟಿದ ಮಾತಂ ಕೇಳ್ದು ಸಂತೋಷಂಬಟ್ಟು ಕಾಳಗಮಂ ಮಾಣಿಸಿ ಗುರುದತ್ತಮಹಾರಾಜಂಗೆ ಕುಮಾರಿ

---

ಪೆರ್ಗಡೆಗಳನಟ್ಟುವುದುಂ ಧಾತ್ರೀವಾಹನಮಹಾರಾಜನಭಯಮತಿಯುಂ ಕೂಡಲೊಲ್ಲದೆ ಕಲಹಮಂ ಪಣ್ಣೆ ವಿಶ್ವಮತಿಯುಂ ವಿಶ್ವಕರ್ಮನುಮೆಂಬಿರ್ವರ್ ಬಡಗಿಯರಂ ಕಂಡು ಗುರುದತ್ತನಪ್ಪೊಡೆ ಇಲ್ಲಿದನಾತನಂ ಪಗೆಗೊಂಡು ನಮಗೆ ಮೃತ್ಯುವೆಯ್ದಿಪ್ಪುದು ಕಜ್ಜಮಲ್ಲೆಂದು ನೀಮೋರ್ವರೋರ್ವರಾಱುತಿಂಗಳಿಂದೊಳಗೆ ತಡೆಯದೈನೂಱು ರಥಂಗಳಂ ಮಾಡುವುದೆಂಬುದುಂ ವಿಶ್ವಮತಿ ಬೇಗಮಾಱುತಿಂಗಳಿಂದೊಳಗೆ ಅಯ್ನೂರು ರಥಂಗಳಂ ಮಾಡಿ ತಂದೊಪ್ಪಿಸಿದಂ. ವಿಶ್ವಕರ್ಮನಾಱುತಿಂಗಳಿಂದೊಂದು ರಥದ ಗಾಲಿಯುಮಂ ಸವಿಸ್ತರಂ ಮಾಡಿ ತಂದರಸಂಗೆ ತೋಱುವುದುಮರಸನದಱ ಗುಣಮನಱಿಯದೆವೊಂದೆ ಗಾಲಿಯಂ ತಂದನೆಂದು ॥

ಮುನಿದು ಕೊಲವೇಳ್ಪುದೊಯ್ಯನೆ
ಬಡಗಿಯುಮಾರಥದ ಗಾಲಿಯಂ ಭರದೊಳ್ಕೀ ।
ದಿನಿಯೊಳರಡಿಕ್ಕೆ ಗುರುದ
ತ್ತನರೇಶ್ವನಲ್ಲಿಗುಜಿ ಬಂದವಯಾವದಿಂ ॥

ವಾತ್ಸಲ್ಯರತ್ನಾಕರನಂ ಕಂಡು ತನ್ನ ಬಂದ ವೃತ್ತಾಂತಮೆಲ್ಲಮಂ ಪೇಳ್ದು ಶರಣ್ಪೊಕ್ಕಿರ್ದನಿತ್ತಲಾರಥದ ಗಾಲಿ ನೆಲದೊಳ್ ಬೀಳದೆ ಪದಿನೈದುದಿವಸಂಬರಮೊಡೆಯುಡುಗದೆ ಅಂತರೀಕ್ಷದೊಳ್ ತಿಬ್ಬನೆ ತಿರಿಯುತ್ತಿರೆ ಧಾತ್ರೀವಾಹನಮಹಾರಾಜಂ ಕಂಡು ಮೆಚ್ಚಿ ವಿಶ್ವಕರ್ಮನೆಲ್ಲಿದನೆನೆ ಗುರುದತ್ತಮಹಾರಾಜನಂ ಶರಣ್ಬೊಕ್ಕಿರ್ದಪನೆಂಬುದುಂ ಅರಸಂ ಮುನಿದವನಂ ಶೀಘ್ರಮಟ್ಟುವುದೆಂದು ಗುರುದತ್ತಮಹೀಶನಲ್ಲಿಗೆ ಪೆರ್ಗಡೆಗಳನಟ್ಟುವುದುಮಭಯಮತಿಯುಂ ಕೂಡಲೊಲ್ಲದೆ ರೋಷದೊಳಗೀಯುತ್ತಿಪ್ಪಾತನೀಮಾತಿಂಗೆ ಭಂಗಮಾದ ಸಿಂಗದಂತೆ ಪೊದಳ್ದತ್ತಿ ಚಂಪಾಪುರಮಂ ಮೊವಳಸಾಗಿ ಸುತ್ತಿ ಮುತ್ತಿಕೊಂಡು ॥

ಸರಸಿಜಮುಖಿಯಂ ಕಪ್ಪಂ
ಬೆರಸೀವುದು ಬೇಗಮೀಯದಿರ್ದೊಡೆ ತನ್ನಂ ।

ಯುಂ ಕುಡುವುದುಂ ವಾತ್ಸಲ್ಯರತ್ನಾಕರನಭಯಮತಿಗೆ ಮಹಾದೇವೀ ಪಟ್ಟಮುಂ ಕಟ್ಟಿ ಹಸ್ತಿನಾಪುರಕ್ಕೆವಂದು ಸುಖದಿಂ ರಾಜ್ಯಂಗೆಯ್ಯುತ್ತುಮಿರ್ಪುದುಂ ವಜ್ರದಾಡನಪ್ಪ ನಾರಕಂ ನರಕದಿಂ ಬಂದು ನೀಲಗಿರಿಯೆಂಬ ಪರ್ವತದೊಳ್ ಪುಲಿಯಾಗಿ ಪುಟ್ಟಿ ತದ್ಗಿರೀಂದ್ರದ ಕೆಳಗಿರ್ದ ನಾಡವರೆಲ್ಲರುಮಂ ಕಾದುತ್ತಿರ್ಪುದುಮಾನಾಡವರೆಲ್ಲಂ ಗುರುದತ್ತಮಹಾರಾಜನರಮನೆಗೆ ಬಂದು ಪುಯ್ಯಲಿಡುವುದುಂ [1] ಪೂರ್ವವೈರಮುಂಟಪ್ಪುದಱಿಂ ತೊಟ್ಟನೆ

---

ಧುರದೊಳಿರದಿಲ್ಲದಿಕ್ಕುವ
ನರವರಿಸುವ ಗಂಡನಲ್ಲೆ ನೀಯುವ ಸರದೊಳ್ ||

ಎಂದು ಪೆರ್ಗಡೆಗಳನಟ್ಟುವುದುಂ ಧಾತ್ರೀವಾಹನಮಹಾರಾಜನವರ ಮಾತಿಂಗೆ ನಕ್ಕು ||

ಲಿಂಗಿಯುಮಂ ದೂತರುಮಂ
ಸಂಗರದೊಳ್ ಭೀತನಪ್ಪ ಬಂಟನುಮಂ ಪೇ ।
ೞಂಗನೆಯರುಮಂ ಕೈದುಗ
ೞಿಂ ಗೆಂಟಾಗಿರ್ದ ನರರುಮಂ ಕಲಿಯುಪ್ಪರ್ ||

ಕೊಲಲಾಗದು ನೀವುಸಿರದೆ ಪೋಗಿಮೆಂದು ಯುದ್ಧಸನ್ನದ್ಧನಾಗಿ ಪೊಱಮಟ್ಟು ಸಮುದ್ರಂ ಸಮುದ್ರಮುಂ ತಾಗುವಂತೆ ತಾಗಿ ಕಾದುತ್ತಿರ್ಪುದುಮೇೞನೆಯ ದಿವಸದಂದು ಬ್ರಹ್ಮೇಂದ್ರದತ್ತನೆಂಬ ರಾಜಪುತ್ರನ ಮಯ್ಗೆ ಪಱಿದು ನೆಲಕ್ಕೆ ಬೀೞ್ವುದುಮದನೊಂದು ಗಿಡಿಗಂ ಕೊಂಡು ಕನ್ಯಾಮಾಡದ ಮುಂದಿಕ್ಕುವುದುಮದನಭಯಮತಿಕುಮಾರಿ ಕಂಡು ತದ್ವೃತ್ತಾಂತಮೆಲ್ಲಮನಱಿದು ||

ಗುರುದತ್ತನುಮಂಗಮಹೀ
ಶ್ವರನುಂ ನುಗ್ಗಾಗಿ ತಾಗಿ ಚಾತುರ್ಬಲಮಂ ।
ಧುರದೊಳಱಿಯಟ್ಟಿ ಕೊಂದಪ
ನರಿದಾಯ್ತೀಮೆನ್ನ ಪಾಪಕರ್ಮದ ಕಥದಿಂ ||

ಚಲದಿಂ ಮೆಯ್ಯಱಿಯದೆ ಪಲ
ರಳಿವಂ ಕೈಕೊಳ್ಳದೆಯ್ದೆ ನಿಃಕರುಣದಿನು ।
ಜ್ಜ್ವಲದಯೆಯುಂ ಮನದಿಂದಂ
ತೊಲಗಿಸಿದಭೂಪರಿವರ್ಗರುಂ ಮುನಿಸಿಂದಂ ||

[1] ನರನಾಥಂ ಕೇಳ್ದು ಸವಿ
ಸ್ತರದಿಂ ಬರವೇಳ್ದು ಕೇಳ್ವುದುಂ ನಾಡವರಂ ।

ಕೋಪದಿಂ ಪುಲಿಯಿರ್ದ ಗುಹೆಯ ಬಾಗಿಲೊಳ್ ಬೆಟ್ಟಾಗಿ ಪುಳ್ಳಿಯ ನೊಟ್ಟಿಸಿ ಕಿಚ್ಚನಿಕ್ಕುವುದುಂ ಪಱಿಯ ರಭಸಕ್ಕೆ ಪುಲಿ ಪೊಱಮಡಲ ವಣ್ಮದೆ ಬೆಂದು ಸತ್ತು ಕಾಮನಿರ್ಜರೆಯೆಂಬ ಸೌರಾಷ್ಟ್ರವಿಷಯದ ದ್ರೋಣೀಮಂಥ ಮೆಂಬ ಪರ್ವತದ ಕೆಳಗಿರ್ದ ಪಳ್ಳಿಖೇಟಮೆಂಬೂರೊಳ ಳಾಭರಣನೆಂಬ ಪಾರ್ವಂಗಂ ಕಂಟಕೆಯೆಂಬ ಪಾರ್ವಿತಿಗಂ [1] ಹಳಮುಖ ನೆಂಬ ಮಗನಾಗಿ ಪುಟ್ಟಿ ಬಳೆಯುತಿರ್ದನಿತ್ತಲ್ ಗುರುದತ್ತಮಹಾರಾ ಜನಮೃತಾಶ್ರವಭಟ್ಟಾರಕರೇಕವಿಹಾರಿಗಳ್ ತನ್ನ ಪುರಕ್ಕೆ ಬಂದೊಡ ವರಂ ವಂದಿಸಿ [2] ತನ್ನ ಭವಮಂ ಬೆಸಗೊಳ್ವುದುಂ ಅವರುಪರಿಚರ ಮಹಾರಾಜನಾದ ಭವಂ ಮೊದಲಾಗೆ ಗುರುದತ್ತನಾದಲ್ಲಿವರಮಾದ ನಾಲ್ಕು ಭವದೊಳಾದ ವೃತ್ತಾಂತಮೆಲ್ಲಮಂ ಪೇಳ್ವುದುಂ ॥ ೧೯೯

ಅಭಯಮತಿದೇವಿಯುಂ ತ
ನ್ನ ಭವಮನಱ್ಕಿತುರ್ ಕೇಳ್ವುದುಂ ಮುನಿಪಂ ಸಂ |
ದಭಯಮತಿಗಱಿಪಿದಂ ಪೂ
ರ್ವಭವಮನಿಂತೆಂದು ದುಂದುಭಿಧ್ವನಿಯಿಂದಂ ॥ ೨೦೦

ಚಂಪಾಪುರದೊಳೊರ್ವಂ ಗರುಡವೇಗನೆಂಬ ಕಿರಾತನಿರ್ವ

---

ದರಸಂಗೆ ಪುಲಿಯೊಳಾದು
ಬ್ಬರಮಂ ಬಿನ್ನವಿಪುದುಂ ನರೇಂದ್ರಾರಾಧ್ಯಂ ॥ (ಕ.)

1 ಪಾರ್ವತಿಗಂ (ಗ) 2 ಗುರುದತ್ತಮಹಾರಾಜಂ ಪುಲಿಯಂ ಕೊಂದು ಮಹೋತ್ಸಹದಿಂ ಪೊಳಲ್ಗೆ ವಂದು ರಾಜ್ಯಂಗೆಯ್ಯುತ್ತಿರ್ಪುದುಮೊಂದು ದಿವಸಂ ॥

ಧರಣೀಭೂಷಣಮೆಂಬುದು
ಗಿರಿ ತದ್ಗಿರಿಯೊಳ್ ದುರಘೌಘಹರಣರ್ ಗುಣಸಾ |
ಗರರೂರ್ಜಿತರ್ಮನೋಭವ
ಹರಣರ್ಸಕಳಾಗಮೈಕಪಾರಗರಮಳರ್ ॥

ಏಳುನೂರ್ವರ್ ಋಷಿಯರ್ವೆರಸು ಅಮೃತಾಸ್ರವಭಟ್ಟಾರಕರ್ ವಂದಿರ್ದರೆಂಬುದಂ ಕೇಳ್ದು ಸಮ್ಯಕ್ತ್ವಚೂಡಾಮಣಿ ಸಕಳಮಕುಟಬದ್ಧರುಮಭಯಮತಿ ಮಹಾದೇವಿಯುಂಬೆರಸು ಪೋಗಿ ಮುನಿವರರಂ ವಂದಿಸಿ ಮುಂಪೆ ಕಾಳ್ದರ್ಧರ್ಮಮಂ ಕೇಳ್ದು ತದನಂತರಂ (ಕ.)

ನಾತನ ಪೆಂಡತಿ ಗೋಮುಖಿಯೆಂಬಳೊಂದುದಿವಸಂ ಶ್ರಾವಕರೆಲ್ಲರುಂ ಸಮಾಧಿಗುಪ್ತಾಚಾರ್ಯರಲ್ಲಿ ವ್ರತಂಗಳಂ ಕೈಕೊಳ್ವುದುಂ ಕಂಡರ್ತಿಯಾಗಿ ತಾನುಂ ಪಂಚಾಣುವ್ರತಂಗಳಂ ಕೈಕೊಂಡು ಪೋಗಿ ಗರುಡವೇಗಂ ಬಲೆಯನೊಡ್ಡಿ ತಂದ ಪಕ್ಕಿಗಳೆಲ್ಲಮಂ ಬಿಟ್ಟು ಕಳೆವುದುಂ ಜೀತಂ ಬಂದು ಬಡಿವುದುಂ ಗಂಡನಂ ಬಿಟ್ಟು ನಂಟರ ಮನೆಯೊಳ್ ಪೊರ್ದಿರ್ದು ಧಾತ್ರೀವಾಹನ ಮಹಾರಾಜನ ಸಿರಿಯಂ ನೋಡಿ ಬಯಸಿ ಕೆಲವಾನುಂ ಕಾಲಕ್ಕೆ ವ್ಯಾಧಿಯಿಂ ಸತ್ತು ತದ್ವ್ರತದ ಫಲದಿಂ ಮಗಳಾಗಿ ಪುಟ್ಟಿದೆಯೆಂಬುದುಂ ॥ ೧೨೧

ಜನಪತಿಯುಮರಸಿಯುಂ ಮು
ನ್ನಿನ ತಮ್ಮ ಭವಂಗಳಂ ಸವಿಸ್ತರದಿಂ ಮೆ ।
ಲ್ಲನೆ ಕೇಳ್ದು ನಂಬಿ ಸಂಸೃತಿ
ವನಧಿಯುಮಂ ದಾಂಟಿ ಪೋಪ ಬಗೆಯನೆ ಬಗೆದರ್ ॥ ೧೨೨

ಜವನೆಂಬ ನಾಯು ಬಾರಿಗೆ
ಭವಭವದೊಳ್ ಜೀವನೆಂಬ ಮೊಲನಘವಟ್ಟುಂ [1] ।
ಭವಮಱಿಯದೆ ಬೆಚ್ಚಿಲ್ಲದೆ
ಜವನನೆ ಮೆಚ್ಚಿಪ್ಪುದೊಲ್ಲವತಿಶಯಸುಖಮಂ ॥ ೧೨೩

ಪುಸಿವರ ಪಿಸುಣರ ದೆಸೆಯಿಂ
ವಸುಮತಿ ಕಿಡುಗೆನ್ನದವರ ಮಾತನೆ ಪಿಡಿವಾ ।
ಲಿಸುವವನಿಪಾಳರಂದದಿ
ನಸುವಂ [2] ಬಿಡದಿಂದ್ರಿಯಂಗಳೆಂದುದನೆಂಗುಂ ॥ ೧೨೪

ಅಳಿಪಿಂ ಸಂಸೃತಿಯುಂ ಮು
ನ್ನೊಳಗಱಿಯದೆ ನಂಬಿ ಕೆಟ್ಟ ಕೇಡದೆ ಸಾಲ್ಗುಂ ।
ಮಳರಹಿತಮಪ್ಪ ಜಿನರು
ಜ್ಜ್ವಳಪಾದಪಯೋಜಯುಗ್ಮಮಂ ಪೊರ್ದಿರ್ಪೆಂ ॥ ೧೨೫

1 ಮೂಲಂಬಟ್ಟುವುದುಂ (ಗ)   2 ಅಸುವುಂ (ಕ. ಖ.)

ಮನೆಯುಂ ನಿಲಿಸುವೆ ಸಜ್ಜನ
ವನಿತೆಯನೀಡಾಡಿ ಸೂಳೆಗೆಳಸಿರ್ದ ಜಡಾ ।
ತ್ಮನ ತೆಱದಿನೆಗ್ಗನಾಗದೆ
ಜಿನಮತಮಂ ಪಿಡಿವೆನನ್ಯಮತಮಂ ಬಿಡುವೆಂ ॥ ೧೦೬

ದಿವಿಜೇಂದ್ರಖೇಚರೇಂದ್ರವಿ
ಭವಮುಂ ಮನುಜೇಂದ್ರ[1] ರಱುಸುಖಂಗಳುಮೋವ ।
ಧ್ರುವಮವನಮೋಘಮೊಲ್ಲೆಂ
ಪ್ರವರಜಿನರ್ ಪಡೆದ ಮೋಕ್ಷಪದಮದೆ ಸಾಲ್ಗುಂ ॥ ೧೦೭

ನಿಲ್ಲದೆ ನಾಲ್ಕುಂಗತಿಗಳೊ
ಳೆಲ್ಲಂ ತಿರಿತಂದೆನನ್ಯರಂ ಪೊರ್ದಿ ಮನಂ ।
ತಲ್ಲಣಿಸಿದುದೀಜಿನಪದ
ಪಲ್ಲವಮಂ ಪೊರ್ದಿ ಪೊರ್ದುವೆಂ ನಿರ್ವೃತಿಯಂ ॥ ೧೦೮

ಎಂದು ಭಾವಿಸಿ ಶ್ರೀದತ್ತನೆಂಬ ತನ್ನ ಪಿರಿಯಮಗಂಗೆ ಪಟ್ಟಮಂ ಕಟ್ಟಿ ಧರಾಭಾರಮನೊಪ್ಪಿಸಿ ಸಕಲರಾಜ್ಯಮುಮಂ[2] ತೊಱೆದಮೃತಾಸ್ರವಭಟ್ಟಾರಕರಲ್ಲಿ ಜಿನದೀಕ್ಷೆಯಂ ಕೈಕೊಂಡು ದ್ವಾದಶಾಂಗಶ್ರುತಧರನಾಗಿ[3] ಪಲವುಕಾಲಂ ಗುರುಸೇವೆಯೊಳಿರ್ದು ಗುರುಗಳಾಜ್ಞೆಯಿಂದೇಕವಿಹಾರಿಗಳಾಗಿ ಪೋದರಿತ್ತಲಭಯಮತಿಯುಮವರೆ ಗುರುಗಳಾಗೆ ಸುವ್ರತಗಂತಿಯರಲ್ಲಿ ಜಿನದೀಕ್ಷೆಯಂ ಕೈಕೊಂಡು[ಗ್ರೋಗ್ರ] ತಪ[ಶ್ಚರಣ]ಂಗೆಯ್ದು [ಸಮಾಧಿಮರಣದಿಂ] ಮುಡಿಪಿ ಕಾಪಿಥ[4] ಮೆಂಬೆಂಟನೆಯ ಕಲ್ಪದೊಳ್ ಮಿತ[5] ಕಾಂತನೆಂಬ ದೇವನಾಗಿ ಪುಟ್ಟಿದಳಿತ್ತ ಗುರುದತ್ತಭಟ್ಟಾರಕರುಂ ವಿಹಾರಿಸುತ್ತುಂ ಬಂದು ಪಳ್ಳಿಖೇಡಪೊೞಲೊಳ್

1 ನರೇಂದ್ರ (ಕ. ಖ.) 2 ಕಟ್ಟಿ ಸಾಮ್ರಾಜ್ಯಮಂ ಕೊಟ್ಟು ತಾಂ ತೊಱೆದ (ಕ. ಖ.) 3 ಧಾರಿಯಾಗಿ (ಗ)
4 ಕಾಪಿಷ್ಟ (ಕ. ಖ.) 5 ಅಮೃತ (ಗ)

ಯತ್ರಾಸ್ತಮಿತವಾಸಿಗಳಪ್ಪುದಱಿಂ ನೇಸರ್ಪಡುವುದುಂ ಪೋಗಲೊಲ್ಲದೆ ರಾತ್ರಿಪ್ರತಿಮೆನಿಂದು ಬೆಳಗಾದಾಗಳ್ ಪಱೆ ಪಿರಿದಾಗೆ ನೆಲನಪ್ರಾಸುಕವೆಂದು ಸೂರ್ಯಪ್ರತಿಮೆನಿಂದರನ್ನೆಗಂ ವಜ್ರದಾಡ [ಚರ] ನಪ್ಪ ಹಳಮುಖನುೞಿಲೆಂದು ಪೋಗುತ್ತೆ [ತನ್ನ ವಲ್ಲಭೆಗೆ ಮೂಡಣಕೆಯ್ಗೆ ಕೂೞಿಂ ತರ್ಪುದೆಂದು ಪೇೞ್ದು ಪೋಗಿ] [1] ಮೂಡಣಕೆಯ್ ಕೆಸಱಾಗಿರೆ ಪಡುವಣ ಕೆಯ್ಗೆ [ಪೋಗುತ್ತೆ ಮೂಡಣಕೆಯ್ ಕೆಸಱ್ ಪಿರಿದಾದೊಡೆ ಪಡುವಣ ಕೆಯ್ಗೆ ಪೋದಂ ಕೂೞಿನಲ್ಲಿಗೊಯ್ಯೆಂದು· ಪೇೞ್ವುದೆಂದು ಮುನಿವರರ ಮುಂದೆ ನುಡಿದು] [2] ಪೋಗಿ ಮೂಱುಜಾವಂಬರಮುತ್ತು ಪೆಂಡತಿಯ ಬರವಂ ಕಾಣದೆ ಪಸಿದು ಮನೆಗೆ ಬಂದು [ಪಸಿದ ಕೋಪದಿಂ ತನ್ನ] ಭಾರ್ಯೆಯುಂ ಸಾಯಬಡಿವುದುಮಾಕೆ ನಿಮ್ಮ ಪೋದ ದೆಸೆಯನಱಿಯದಿರ್ದೆನೆನೆ ಅಲ್ಲಿ ನಿಂದ ರಿಸಿಯರ್ಪೇೞ್ದರಿಲ್ಲಾ [ಪೇೞನೆ ಅವಳಂಜಿ ಪೇೞ್ದರಿಲ್ಲೆಂದು ಪುಸಿದು] [3] ಪೇೞ್ವುದುಂ ಮುನಿನಾಥನಮೇಲೆ ಮುನಿಸಾಗಿ ದುಷ್ಟಋಷಿಯುಂ ಸುಟ್ಟು ಕೊಂದಲ್ಲದುಣ್ಣೆನೆಂದು [ಪರಿದು] ಪೋಗಿ ಸೀರೆಯನೆಣ್ಣೆಯೊಳದ್ದಿ ಪಾದದಿಂ ತಲೆವರಂ ಸುತ್ತಿಕಿಚ್ಚಂ ತಗುಳ್ಚುವುದುಂ ॥ ೧೨೯

ಹಳಮುಖನೆನ್ನಂ ಕೆಮ್ಮನೆ
ಮುಳಿಸಿಂ ನಾನಾಪ್ರಕಾರದಿಂ ಸುಟ್ಟಪನೆಂ ।
ದೊಳಗುರಿಯದೆ ತಲ್ಲಣಿಸದೆ
ತಳರದೆ ಸಂಕಿಸದೆ ನಿಂದನಚಲಿತಧೈರ್ಯಂ ॥ ೧೩೦

ಆತಂಗೆ ಮುನಿಯಲೊಲ್ಲದೆ
ಭೀತಿಯಿನಲ್ಲಾಡದೊಂದೆಮನದಿಂ ಕರ್ಮ ।
ವ್ರಾತಮನರಿದಂ ಬಗೆವೊಡೆ
ಭೂತಳದೊಳ್ ಕೋಪಮಿಲ್ಲದಾತನೆ ಧನ್ಯಂ ॥ ೧೩೧

---

1 ತನ್ಮಸೀಂದ್ರರಂ ಕಂಡು (ಗ) 2 ಪೋದಂ ಕೂಳನಲ್ಲಿಗುಯ್ಯೆಂದೆನ್ನ ಪೆಂಡತಿಗೆ ಪೇಳೆಂದು (ಗ) 3 ಪೇಳಿಮೆನೆ ಪೇಳದುಸಿರದಿರ್ದನೆಂದು. (ಗ)

ಮುನ್ನಿನ ಕರ್ಮಮೆ ನೆವನೆವ
ದಿನ್ನೆಟ್ಟನೆ ಬಂದು ಫಲಮನಿತ್ತಪುಗದಱಿಂ ।
ದಿನ್ನಾಕರ್ಮಕ್ಕಲ್ಲದೆ
ಸನ್ನುತಮತಿಯವರ್ಗೆ ಮುಳಿವೊದೊಂದೆಗ್ಗಲ್ತೇ ॥ ೧೩೨

ಮುನಿದೊಡೆ ಕರ್ಮವಿರೋಧಿಗೆ
ಮುನಿವುದು ತತ್ಕರ್ಮರಾಜನ ಪ್ರೇರಣೆಯಿಂ ।
ಘನಮಪ್ಪ ಪೀಡೆಯಂ ನೆ
ಟ್ಟನೆ ಮಾಡುವ ದುರ್ಜನರ್ಗೆ ಮುನಿವುದು ಚದುರೇ ॥ ೧೩೩

ಬಱಿವೆರಸಿದೇಱುಂ ಕುಪ್ಪಸವೆರಸಿದ ಮಿಾಹವುಂ ಮುಗಿಲ್ವೆರಸಿದ ಮದುವೆಯುಂ ಮಣ್ವೆರಸಿದ ನೀರುಂ ಕಿಸುವೆರಸಿದ ಪೊನ್ನುಂ ಗಸಿವೆರಸಿದೆಣ್ಣೆಯುಂ ನೀರ್ವೆರಸಿದ ಪಾಲುಂ ಕಪ್ಪುವೆರಸಿದ ಮಾಣಿಕವುಂ ಮುನಿಸುವೆರಸಿದ ಕೂರ್ಮೆಯುಂ ಮಳಲ್ವೆರಸಿದ ಕೂೞುಮೆಂತುಂ ಲೇಸಲ್ಲದಂತೆ ಶರೀರದ ಪರಿಗ್ರಹ [ದ] ಮೋಹದೊಳ್ ಬೆರಸಿದ ಧ್ಯಾನಮುಮೊಪ್ಪದು ಮತ್ತಂ ತೊಱೆ ಕಾರಣಮಾಗಿ ಪಱುಗೋಲಂ ಮುಳ್ ಕಾರಣಮಾಗಿ ಕೆರ್ಪಂ ಸೂಳ್ ಕಾರಣಮಾಗಿ ಕುಂಟಣಿಯುಂ ಮಗಳ್ ಕಾರಣಮಾಗಿ ಅಳಿಯನಂ ಬೆಸಂ ಕಾರಣಮಾಗಿ ಬಂಟನಂ ಕೊಂಡಾಡುವಂತೆ ಸ್ವರ್ಗಾಪವರ್ಗಂ ಕಾರಣಮಾಗಿ ಶರೀರಮುಮಂ ಪರಿಗ್ರಹಮುಮಂ ತಕ್ಕಂತೆ ಕೊಂಡಾಡುವುದು. ರಸಂ ಬಂದೊಡೆ ತಂಬುಲಮಂ, ಎಳ್ ಬಂದೊಡೆ ಕೊದಳೆಯಂ, ಬೆಳಸು ಬಂದೊಡೆ ನೆಲನಂ, ಸಾಲಂ ಬಂದೊಡೆ ಬಟ್ಟೆಗುತ್ತನಂ, ಕೂೞುಂಡೊಡೆ ಪುಲ್ಲಿಗೆಯಂ [1] ಬಿಡುವಂತೆ, ತನ್ನ ಕಾರ್ಯಂ ತೀರ್ದ ಬೞಿಕ್ಕೆ ಕಡೆಯೊಳ್ ಶರೀರಮುಮಂ ಪರಿಗ್ರಹಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿಚ್ಛೇದಿಯಪ್ಪುದೀನೀತಿಯಲ್ಲದೆ [2] ಸ್ವರ್ಗಾಪವರ್ಗಂಗಳನೆಯ್ದುವೆನೆಂಬಂ [ಗಳವೆರಸು ಬಿಲಂಬುಗುವೆನೆಂಬ ಕಡಿತಲೆವೆರಸು ಪಾಸಿನಮೇಲೆ ನಿದ್ರೆಗೆಯ್ವೆನೆಂಬ ಕುದುರೆಯ

1 ಪತ್ಥಳೆಯಂ (ಗ)   2 ಪರಿಚ್ಛೇದಿಸಿಯಿಪ್ಪುದಿನಿಸಲ್ಲದೆ (ಗ)

ನೇಱು ಮೂಡಕೆಯ್ದುವೆನೆಂಬ ಬಂಡಿವೆರಸು ಕೋಂಟೆಯುಂ ಲಂಘಿಸುವೆ ನೆಂಬ] ಬಿಟ್ಟೇಱುವೆಡ್ಡಣಂಬೆರಸು ತೊಱೆಯನೀಸುವೆನೆಂಬ ಬೆಳ್ತನ [1] ಮೆಕ್ಕುಮೊಂದು ಶರೀರಮುಮಂ ಪರಿಗ್ರಹಮುಮಂ ತೊಱೆದು ಶುಕ್ಲ ಧ್ಯಾನದಿಂ ಘಾತಿಕರ್ಮಂಗಳಂ ಕಿಡಿಸಿ ಕೇವಲಜ್ಞಾನಿಯಾಗಿರ್ಪುದುಂ ಚತುರ್ವಿಧದೇವರ್ಕಳುಂ ಕೇವಲಿಪೂಜೆಯಂ ಮಾಡಲ್ವೇಡಿ ಬಂದು ಪೂಜೆಸಿ ಮುಂದೆ ನಿಂದು [ಸ್ತುತಿಸಿದರಿಂತು] ‖ ೧೩೪

ಜಯ ದಿವಿಜಮಹಿತ ಜಯ ದೋಷರಹಿತ
ಜಯ ದಿವ್ಯಮೂರ್ತಿ ಜಯ ವಿದಿತಕೀರ್ತಿ
ಜಯ ಮದನವೈರಿ ಜಯ ದುರಿತಹಾರಿ
ಜಯ ಗುಣನಿಧಾನ ಜಯ ಸುಖನಿಧಾನ
ಜಯ ಶಾಂತರೂಪ ಜಯ ವಿಜಿತಕೋಪ [2]
ಜಯ ಮೋಹವಿಳಯ ಜಯಧರ್ಮನಿಳಯ
ಜಯ ಭವ್ಯವಂದ್ಯ ಜಯ ಜಗದ್ವಂದ್ಯ
ಜಯ ಕಾಂತಿಧಾಮ ಜಯ ಪುಣ್ಯಧಾಮ
ಜಯ ಮುನಿಗಣೇಶ ಜಯ ಮದವಿನಾಶ
ಜಯ ದಯಾಸಮುದ್ರ ಜಯ ನಯಸಮುದ್ರ
ಜಯ ಸಚ್ಚರಿತ್ರ ಜಯ ಜಗಪವಿತ್ರ
ಜಯ ಸೇವ್ಯವಚನ ಜಯ ಸತ್ಯವಚನ
ಜಯ ಯಮಕೃತಾಂತ ಜಯ ಮುಕ್ತಿಕಾಂತ
ಜಯ ಬೋಧರೂಪ ಜಯ ನಷ್ಟತಾಪ
ಜಯ ಸಕಲರುಂದ್ರ ಜಯ ಜಯ ಜಿನೇಂದ್ರಾ ‖ ೧೩೫

ಶ್ರೀಯುಂ ನಿಶ್ರೇಯಸಮಂ
ಶ್ರೀಯುಂ ಜಿನ ನಿನ್ನ ಪಾದಸೇವನೆಯಿಂ ವಾ ।
ಕ್ಶ್ರೀಯುಂ ಧವಳಿತಕೀರ್ತಿ
ಶ್ರೀಯುಂ ದೊರೆಕೊಳ್ಗುಮಲ್ಲಿ ಸಂದೆಯಮುಂಟೇ ‖ ೧೩೬

1 ಬೆಳಂಬ (ಗ) 2 ಪಾಪ (ಕ. ಖ.)

ಸುರರಾಜಮಕುಟಘಟ್ಟಿತ
ಚರಣದ್ವಯ ಕರ್ಮಜಲಧಿಬಡಬಾನಲ ಭಾ ।
ಸುರಬೋಧ ನಿನ್ನನಱಿಯದೆ
ದುರಿತಯುತರ್ ಪೊರ್ದಲಾಱರಕ್ಷಯಸುಖಮಂ ॥ ೧೩೭

ನರಕದೊಳಡಿಗಡಿಗೆ ಮಹಾ
ದುರಿತದ ಫಲದಿಂದೆ ಬಿರ್ದು ನವೆವರ್ ನಿನ್ನಂ ।
ಸ್ಮರಿಯಿಸಲರ್ಚಿಸಲೊಲ್ಲದೆ
ನರರವನಿಯೊಳಲ್ಲಿ ದೇವ ಸಂದೆಯಮುಂಟೇ ॥ ೧೩೮

ದಿನಕರನುದಯಂಗೆಯ್ಯದೆ
ಘನಮಪ್ಪ ಮಹಾಂಧಕಾರಮುಡುಗದ ತೆಱದಿಂ ।
ಜಿನನಾಥ ನಿನ್ನ ಪದಮಂ [1]
ನೆನೆಯದ ಮನುಜಂಗೆ ಪೋಗದೆಂತುಂ ಕರ್ಮಂ ॥ ೧೩೯

ತಾರಾಧೀಶ್ವರನುದಯದೆ
ವಾರಾಸಿ ಕಡಂಗಿ ಪೆರ್ಚುವಂತಿರೆ [2] ಮುಕ್ತಿ ।
ಶ್ರೀರಮಣ ನಿನ್ನ ಮಹಿಮೆಗೆ
ಧಾರಿಣಿಯೊಳ್ ಭವ್ಯನಪ್ಪ ಮನುಜನ ನಲಿಗುಂ ॥ ೧೪೦

ಪಿಂಗದ ಬೆಳ್ದಿಂಗಳ್ ಕ
ಳ್ಳಂಗೆಂತುಂ ಶೋಭೆವಡೆಯದಂತದಱಿಂದು ।
ತುಂಗಗುಣ ನಿನ್ನ ಮೃದುವಚ
ನಂಗಳುಮೇಗೆಯ್ದುವೊಪ್ಪವೆಱಮನದಂಗಂ ॥ ೧೪೧

ನಿನ್ನಾಗಮಮಿರ್ದಂತಿರೆ
ತನ್ನಿಚ್ಛೆಗೆ ನಚ್ಚಿ ಮೆಚ್ಚಿ ಕಷ್ಮರಮನಮಂ ।

---

1 ಮತವಂ (ಕ, ಖ.) 2 ತಾರಾಧಿಪನುದಯದೊಳಂಭೋರಾಶಿ ಕಡಂಗಿ ಪೆರ್ಚುವಂದದಿ (ಗ)

ಮನ್ನಿಸಿ ನೆಱೆ ಕೇಳ್ವ ನರಂ
ಸನ್ನುತಸೌಖ್ಯಕ್ಕೆ ದೇವ ಭಾಜನನಲ್ಲಂ ॥ ೧೪೨

ಬಿಡದಭವ ನಿನ್ನ ಮತಮಂ
ಪಿಡಿದಿರ್ದನೆ ಪಡೆಗುಮಕ್ಷಯಶ್ರೀಸುಖಮಂ ।
ಕುಡುವುದು ನಿನ್ನಭಿಮತಮಂ
ಬಿಡದಿರ್ಪತಿಶಯಸುಬುದ್ಧಿಯಂ ದುರಿತಹರಾ ॥ ೧೪೩

ಎಂದನೇಕಸ್ತುತಿಶತಸಹಸ್ರಂಗಳಿಂ ಸ್ತುತಿಯಿಸುವ ದಿವಿಜನಿಕಾಯಮಂ ಹಳಮುಖಂ ಕಂಡು ಭಯಂಗೊಂಡು ಗುರುದತ್ತಕೇವಳಿಗಳ ಶ್ರೀಪಾದಪದ್ಮಂಗಳ್ಗೆಱಗಿ ಪೊಡೆಮಟ್ಟು ತನ್ನ ಮುನ್ನಿನ ನಾಲ್ಕುಭವಂಗಳಂ ಕೇಳ್ದು ಸಂಸಾರಕ್ಕೆ ವಿಸ್ಮಯಂಬಟ್ಟು ವಿರಕ್ತನಾಗಿ ಅವಸರ್ಪಿಣೀಕಾಲವ ಸಾಮರ್ಥ್ಯಮೆನೆನಗೆ ಬೆಸಸುವುದೆಂದು ವಿನಮಿತಮಸ್ತಕನಾಗಿರ್ಪುದುಂ ಜಿನಸಮಯವಾರ್ಧಿವರ್ಧನಚಂದ್ರನಿಂತೆಂದು ಪೇಳ್ದಂ ॥ ೧೪೪

ಪರಹಿತರಿಲ್ಲ ಧರ್ಮಪರರಿಲ್ಲ ದಯಾನ್ವಿತರಿಲ್ಲ ಮರ್ತ್ಯರೊಳ್
ಕರುಣಿಗಳಿಲ್ಲ ಸಚ್ಚರಿತರಿಲ್ಲ ದೃಢವ್ರತರಿಲ್ಲ ಮೋಹದೊಳ್
ಪೊರೆಯದರಿಲ್ಲ ಶೀಲಗುಣಮುಳ್ಳವರಿಲ್ಲ ಸಮಸ್ತಶಾಸ್ತ್ರದೊಳ್
ಪರಿಣತರಿಲ್ಲ ಧಾರಿಣಿಯೊಳುರ್ವಿದ ದುಷ್ಷಮಕಾಲದೇಱ್ಗೆಯೊಳ್ [1] ॥ ೧೪೫

ದರವುರವಾಗಿ [2] ಪೋಕು ಮಱೆ ಪೆರ್ಚಿಳಸೆಲ್ಲಿಯುಮಾಗದೊರ್ವರುಂ
ಸ್ಥಿರಗುಣರಿಲ್ಲ ಭೂಭುಜರೊಳಾಜ್ಞೆಗಳಿಲ್ಲ ಕವರ್ತೆ ಮೊಕ್ಕಳಂ
ತಿರಿವರನೇಕರರ್ಥಪತಿಗಳ್ ಪಲರಿಲ್ಲ ಜನಕ್ಕೆ ಪೀಡೆ ತ
ಸ್ಕರರಿನಿಳೇಶರಿಂದೊದವುಗುಂ ಸಲೆ ದುಷ್ಷಮಕಾಲದೇಳ್ಗೆಯೊಳ್ ॥ ೧೪೬

ಸಿರಿ ದೊರೆಕೊಳ್ಳದಾಸಿರಿಗೆ ಚಿಂತಿಸುತಿರ್ಪರನೇಕರಾಗಮ
ಜ್ಞರ ನುಡಿದೋಱೆಯಿಂ ನಡೆವರಿಲ್ಲ ತದಾಗಮಮಂ ಧರಿತ್ರಿಯೊಳ್

1 ಕಲಿಗಾಲದೇಳ್ಗೆಯೊಳ್ (ಕ.)   2 ದುರದರ (ಗ)

ಕರಮನುರಾಗದಿಂ ಪದೆದು ಕೇಳದೆ ದುರ್ಗತಿಹೇತುವಪ್ಪ ದು
ಶ್ಚರಿತಕಥಾಳಿಯೊಳ್ನಲಿವರೊಪ್ಪಿರೆ ದುಷ್ಷಮಕಾಲದೇಟ್ಗೆಯೊಳ್ ॥ ೧೪೩

ದಯೆದಮಮಪ್ಪ ಧರ್ಮಮಮನೇಕರುಮೊಲ್ಲದೆ ಕಷ್ಟಮಪ್ಪ ನಿ
ರ್ದಯೆವೆರಸಿರ್ದ ಧರ್ಮಮನುದಾರತೆಯಿಂ ನೆಱೆ ಪೊರ್ದುವರ್ ಗುಣಾ
ಶ್ರಯರನಮುಂಕಿ ಬಾಧಿಸಿ ಕನಿಷ್ಠಗುಣಾನ್ವಿತರಪ್ಪರೊಳ್ ಮಹಾ
ಪ್ರಿಯಮನೆ ಮಾಡುವರ್ ಪದೆದು ಮಾಣದೆ ದುಷ್ಷಮಕಾಲದೇಟ್ಗೆಯೊಳ್॥

ಗಂಡರಮೇಲೆ ಸತ್ಯಗುಣಮುಂ ಪ್ರಭುಶಕ್ತಿಯುಮಾಯತಿಕ್ಕೆಯುಂ
ಪೆಂಡಿರಮೇಲೆ ದಿವ್ಯಗುಣಮುಂ ಪತಿಭಕ್ತಿಯುಮುನ್ನತಿಕ್ಕೆಯುಂ
ಪಂಡಿತರಪ್ಪರೊಳ್ಗುಣಮುಮಾಗಮದೋಜೆಯುಮುನ್ನತಿಕ್ಕೆಯುಂ
ಮಂಡಲದೊಳ್ ವಿಚಾರಿಸುವೊಡಾಗವು ದುಷ್ಷಮಕಾಲದೇಟ್ಗೆಯೊಳ್ [1] ॥

ಬಡವರಮೇಲುದಾರಗುಣಮುಳ್ಳವರೊಳ್ ಕಡುಲೋಭಮೊಳ್ಳಿತಂ
ನುಡಿವವರೊಳ್ ದರಿದ್ರತೆ ಕುಲಾನ್ವಿತರೊಳ್ ಕಡುಹೀನವೃತ್ತಿ ನೋ
ಪ್ಪೊಡೆ ಕುಲಹೀನರೊಳ್ ಮಹಿಮೆ ಗಾವಿಲರೊಳ್ ಸಿರಿ ಬುದ್ಧಿವಂತರೊಳ್
ಬಡತನಮಾವಗಂ ಜನಿಯಿಕುಂ ಸಲೆ ದುಷ್ಷಮಕಾಲದೇಟ್ಗೆಯೊಳ್ ॥

---

1 (ಕ) ಮತ್ತು (ಗ) ಪುಸ್ತಕಗಳಲ್ಲಿ ೧೪೯ನೆಯ ಪದ್ಯವಾದ ಮೇಲೆ
ಕುಲಜಾತ ಸತ್ಯಮುಳ್ಳವರ ಧರ್ಮಸಮೇತರ ಮಾತನಾರುಮೊ
ಬ್ಬಳತವುಡಿಂಗೆ ಕೊಳ್ಳರದನಾಲಿಸದೆಲ್ಲಿಯುಮೊಲ್ವ ಧಾತ್ರಿಪರ್
ಖಳರ ಕುಲಾಪಹಾರಿಗಳ ಕಷ್ಟರ ಮಾತನೋತು ಭೂ
ತಳದೊಳವಜ್ಞೆಗೈಯದೆ ಮನಂಬಿಡೆ ದುಸ್ಸಮಕಾಲದೇಳ್ಗೆಯೊಳ್ ॥
ಎಂಬ ಪದ್ಯವೂ, ೧೫೦ನೆಯ ಪದ್ಯವಾದ ಮೇಲೆ
ಗುರುಗಳ ವಾಣಿಯಿಂ ನಡೆವ ಶಿಷ್ಯರನುತ್ತಮಮಪ್ಪ ಧರ್ಮದೊಳ್
ಚರಿಯಿಪ ಮಾರ್ತ್ಯರಂ ಸುಜನರೆಂದುದನಾಲಿಪ ಕೇಳ್ವ ಭೂಮಿಪಾ
ಲರನೆಡಗರ್ಗಪ್ಪ ಬಾಂದವರನೊಳ್ಳಿದಗೊರ್ಳ್ಳಿದರಾಗಿ ಬಾಳ್ವರಂ
ಕರಮರಿದಣ್ಣ ಕಾಣ್ಬುದು ವಿಚಾರಿಸಿ ದುಸ್ಸಮಕಾಲದೇಳ್ಗೆಯೊಳ್ ॥
ಎಂಬ ಪದ್ಯವೂ ಇವೆ.

ಸಸಿ ಕಿಡುಗುಂ ತೃಣಂ ಬಹಳಮಕ್ಕುಮಸತ್ಯಮೆ ಪೆರ್ಚುಗುಂ ಶ್ರುತಂ[1]
ಕುಸಿಗುಮನಿಷ್ಟಕಾರಿಗಳ ಬಾಳ್ವರುದಾರರೆ ಸಾವರೆತ್ತಲುಂ
ಮಿಸುಕದು ಜೈನಧರ್ಮದ ನೆಗೞ್ತೆ ಕುಲಿಂಗಿಗಳುಂ ಕುದೈವಮುಂ
ವಸುಧೆಯೊಳುರ್ವುಗುಂ ನಿಮಿರ್ದು[2] ದುಷ್ಷಮಕಾಲದೇೞ್ಗೆಯೊಳ್ ||

ದುರಿತದೊಳಾರ್ತು ಕೂರ್ತೆಸಗಿ ದುರ್ಮತಮುಂ ಪಿಡಿದುರ್ಕಿ ಸೊಕ್ಕಿ ನಿ
ಷ್ಠುರನರಕಾಬ್ಧಿಯೊಳ್ ಕೆಡೆದು ದುಃಖಮನುಣ್ಬವರುರ್ವಿಯೊಳ್ ಪಲರ್
ನಿರುಪಮಮಪ್ಪ ಜೈನಪದಸೇವನೆಯಿಂ ಸುರಲೋಕಕೆಯ್ದುವರ್
ಧರೆಯೊಳಪೂರ್ವಮಚ್ಚರಿ ವಿಚಾರಿಸೆ ದುಷ್ಷಮಕಾಲದೇೞ್ಗೆಯೊಳ್ ||೧೫೨

ಎಂದು ಪೇೞ್ವುದುಂ ದುಷ್ಷಮಕಾಲಕ್ಕಂ ತನ್ನ ಮುನ್ನಗೆಯ್ದ ಪಾಪಕ್ಕಂ ನಡುಗಿ ಜಿನದೀಕ್ಷೆಯುಂ ಕೈಕೊಂಡು ಪೋದಂ ; ಗುರುದತ್ತಮುನಿನಾಥಂ[3] ಧರಣೀಚಕ್ರದೊಳ್ ವಿಹಾರಿಸುತ್ತುಂ [ಬಂದು] ಪಳ್ಳಿಖೇಟದೊಳ್[4] ಜಾತಿಜರಾಮರಣತ್ರಯದೂರಮಪ್ಪ ನಿರ್ವಾಣಶ್ರೀಯುನೆಯ್ದಿದನದುಕಾರಣದಿಂ || ೧೫೩

ಕರಮೆ ಪರಿಗ್ರಹಮಂ ಪಿಡಿ
ದಿರದೆ ಜಿನೇಂದ್ರಾಗಮೋಕ್ತಿಯಿಂದಿರ್ಪ ಮಹಾ ।
ಪುರುಷಂಗೆ ತಡೆಯದಕ್ಷಯ
ಸಿರಿಯಕ್ಕುಂ ಸುಕವಿನಿಕರಪಿಕಮಾಕಂದಾ || ೧೫೪

ಜಿನಪದಸೇವನೆಯುಂ ಮನ
ದನವರತಜಿನೇಂದ್ರಭಕ್ತಿಯುಂ ತತ್ವದಭಾ ।
ವನೆಯುಂ ಭಾವಿಸೆ ಸಹಜಂ
ನಿನಗಿಳೆಯೊಳ್ ಸುಕವಿನಿಕರಪಿಕಮಾಕಂದಾ || ೧೫೫

---

1 ನೃತಂ (ಬ.)  2 ಪಸರಿಸುಗುಂ ಸವಿಸ್ತರದೊಳುರ್ವುಗು (ಬ.)

3 ಜಿನಾಧೀಶ್ವರಃ (ಗ)  4 ಯೋಗನಿರೋಧಂಗೆಯ್ದು ಯೋಗಿಭಟ್ಟಾರಕನಾಗಿ ಪಂಚಹ್ರಸ್ವಾಕ್ಷರೋಚ್ಚಾರಣಮಾತ್ರದಿಂದಾಯುಷ್ಯನಾಮಗೋತ್ರವೇದನೀಯಮೆಂಬ ನಾಲ್ಕುಂ ಘಾತಿಕರ್ಮಂಗಳಂ ಕೆಡಿಸಿ ತತ್ಸಮಯದೊಳ್ (ಗ. ಕ.)

ಪಿಂಗದೆ ಮಿಥ್ಯಾವಾದಿಗ
ಳಂ ಗೆಡೆಗೊಂಡಃಡದಿರ್ಪ ಕಾರಣದಿಂದಂ ।
ಪಿಂಗದ ಸಂಸೃತಿಯನಿದಂ
ನೀಂ ಗೆಲ್ದೈ ಸುಕವಿನಿಕರಪಿಕಮಾಕಂದಾ ॥ ೧೫೬

ಉಱೆ ಸೆಱೆವಿಡಿದಿರ್ದುದಱಿಂ
ಮಱೆಯದೆ ಜಿನಪಾದಯುಗ್ಮಮಂ ದುರಿತಂಗಳ್ ।
ಪೆಱಪಿಂಗಿದುವಮೃತಶ್ರೀ
ಗೆಱೆಯನೆ ನೀಂ ಸುಕವಿನಿಕರಪಿಕಮಾಕಂದಾ ॥ ೧೫೭

ಮುಟ್ಟಲೆಗಂಡ ಸ್ತ್ರೀಯುಂ
ತಿಟ್ಟುಮಿರಲ್ಕಿಲ್ಲ ನಾಲ್ಕುದಿವಸಂ ನಿನಗಿಂ ।
ಕಟ್ಟಾಸನ್ನಮುಮೆಂದೆನೆ
ನಿಟ್ಟಿಸುವೊಡೆ ಸುಕವಿನಿಕರಪಿಕಮಾಕಂದಾ ॥ ೧೫೮

ಧರೆಯುಂ ಬಿಟ್ಟತ್ತಿತ್ತಲ್
ಸುರಗಿರಿ ತೊಲಗದವೊಲರ್ಹನಂಘ್ರಿಯನೆಂತುಂ ।
ಪರಿಹರಿಸದು ನಿನ್ನ ಮನಂ
ಪರಮಾರ್ಥಂ ಸುಕವಿನಿಕರಪಿಕಮಾಕಂದಾ ॥ ೧೫೯

ಕೆಱೆಯುಂ ಕಂಡು ಕಳವೆಯುಂ ಬಿತ್ತುವಂತೆ ರಪಣಮುಂ ಕಂಡು ಕಡನಂ ಕುಡುವಂತೆ ಮದವಣಿಗೆಯುಂ ಕಂಡು ಮದುವೆಗೊಡಂಬಡುವಂತೆ ಮೞೆಯುಂ ಕಂಡು ಆರಂಬಕ್ಕೊಡಂಬಡುವಂತೆ ಕೂೞಂ ಕಂಡು ಬಿದ್ದಿನರಂ ಕರೆವಂತೆ [1] ಪಯಿನಂ ಕಂಡು ಕಱುವಂ ಬಿಡುವಂತೆ ಬೆಳಗಂ ಕಂಡು ಪೊನ್ನಂ ನೋಡುವಂತೆ ಕಂಬನುಂ ಕಂಡು ಮನೆಯುಂ ಮಾಡುವಂತೆ ಬೆಳದ ಕೆಯ್ಯಂ ಕಂಡು ಕಣನಂ ಮಾಡುವಂತೆ ಸಸಿಯುಂ ಕಂಡು ನೀರಂ ಬಿಡುವಂತೆ ಮೊದಲೊಳ್ ನಿರ್ದೋಷಿಯಪ್ಪ ದೇವನನಱಿದು ಸಮ್ಯಕ್ತ್ವಂಬೆರ

1 ತಡವಂತೆ (ಬ, ಗ.)

ಸು ವ್ರತಂಗಳೊಳಂ ಧರ್ಮದೊಳಂ ನೆಗೞ್ದಾತಂಗೆ ವ್ರತದೊಳ್ ತಪದೊಳಾದ ಕಾರ್ಯಸಿದ್ಧಿಯುಕ್ಕುಂ. ಸಮ್ಯಕ್ತ್ವಮಿಲ್ಲದೆ ವ್ರತಮುಂ ಧರ್ಮಮುಂ ತಪಮುಂ ಪ್ರಭುವಿಲ್ಲದೂರಂತೆ ಸೂರ್ಯನಿಲ್ಲದ ಪಗಲಂತೆ ಬಟ್ಟೆಯಿಲ್ಲದ ಪಯಣದಂತೆ ಕೆಚ್ಚಲಿಲ್ಲದಾವಿನಂತೆ ನೀರಿಲ್ಲದ ಬೆಳಸಿನಂತೆ ಮುಡಿಯಿಲ್ಲದ ಶೃಂಗಾರದಂತೆ ಮೊಲೆವಾಲಿಲ್ಲದ ತಾಯಂತೆ ಬಾರ್ತೆಯಿಲ್ಲದದು ಕಾರಣದಿಂ ದರ್ಶನಾಂಗಂಗಳ ನಿಶ್ಶಂಕಾದ್ಯಷ್ಟಗುಣಂಗಳ ಫಲದಿಂ, ದರ್ಶನಂಬೆರಸಿದಯ್ದಣುವ್ರತಫಲದಿಂ, ದರ್ಶನಂಬೆರಸಿ, ಸುಖಮನೆಯ್ದಿದ ವಸುಭೂತಿಯುಂ ಅಂಜನಚೋರನುಂ ಅನಂತಮತಿಕುಮಾರಿಯುಂ ಉದ್ದಾಯನಮಹಾರಾಜನುಂ ರೇವತೀಮಹಾದೇವಿಯುಂ ಜಿನೇಂದ್ರಭಕ್ತನುಂ ವಾರಿಷೇಣಕುಮಾರನುಂ ವಜ್ರಕುಮಾರನುಂ ವಿಷ್ಣುಕುಮಾರನುಂ ಧನಕೀರ್ತಿಕುಮಾರನುಂ ಧನದಮಹಾರಾಜನುಂ ಜಿನೇಂದ್ರದಾಸನುಂ ಪ್ರಮಾಥಿಕುಮಾರನುಂ ಗುರುದತ್ತ ಮಹಾರಾಜನುಮೆಂಬೀ ಪದಿನಾಲ್ವರ್[ಮಹಾ]ಪುರುಷರೊಳಾದ ಪದಿನಾಲ್ಕುಂ ಕಥೆಗಳ ನಱಿದು ತಾನುಮವರಂತೆ ನೆಗೞ್ದು ಸಂಸಾರಸಮುದ್ರಮಂ ಕಳೆವುದೆಂದು ಗೌತಮಸ್ವಾಮಿಗಳ್ ಪೇೞೆ ಕೇಳ್ದು ಮಗಧಾವನೀವಲ್ಲಭಂ ತನಗಾಗಳ್ ಮುಕ್ತಿಶ್ರೀ ಕೈಸಾರ್ದುದೆಂಬಂತೆ ಸಂತೋಷಂಬಟ್ಟು ಪುರಕ್ಕೆವಂದು ಪೆರ್ಚಿಂದಿಪ್ಪತ್ತನಾಲ್ವರ್ [2] ತೀರ್ಥಕರ ಪರಮದೇವರ್ಗೆಯಭಿಷೇಕಮುಮಂ ಪೂಜೆಯುಮಂ ಮಾಡಿ ಪಲವುತೆಱದ ರತ್ನಂಗಳಿಂದರ್ಚಿಸಿ ಕೈಗಳಂ ಮುಗಿದು ॥ ೧೬೦

ಪುರುಪರಮೇಶ್ವರ ಸೌಖ್ಯಸದನ ಜಯ
ದಿವಿಜಗಣಾರ್ಚಿತಪಾದಪದ್ಮ ಜಯ
ವಿಲಸದಜಿತಜಿನ ದುರಿತಹರಣ ಜಯ
ಶತಮುಖಶತನುತಚಾರುಚರಣ ಜಯ
ಶಂಭವಜಿನಪತಿ [3] ದುರಘದೂರ ಜಯ
ಮುಕ್ತಿಶ್ರೀಕುಚನೂತ್ನಹಾರ ಜಯ

---

1 ಗೌತಮಗಣಧರ ಸ್ವಾಮಿಗಳ್ (ಗ) 2 ಪೆರ್ಚಿದಾಹಾರದಾನದಿಂದಂ ಇಪ್ಪತ್ತನಾಲ್ವರ್ (ಬ) 3 ಸಂಭವದುಜ್ವಲ (ಬ, ಗ.)

ಸಂದಭಿನಂದನ ವಿಗತಮೋಹ [1] ಜಯ
ರಮ್ಯಾಲಂಕೃತಗುಣಸಮೂಹ ಜಯ
ಸುಮತಿಜಿನೇಶಪರೋಪಕಾರಿ ಜಯ
ಮನಸಿಜಮದಗಜಸಿಂಧುರಾರಿ ಜಯ
ಪದ್ಮಪ್ರಭಜಿನ ಶಾಂತರೂಪ ಜಯ
ಲೋಕತ್ರಯಹಿತ ಪೂಜ್ಯಪಾದ ಜಯ
ಸತ್ಸುಪಾರ್ಶ್ವ ಭುವನೈಕಸಾರ ಜಯ
ಕರ್ಮಮಹೀರುಹವರಕುಠಾರ ಜಯ
ಚಂದ್ರಪ್ರಭ ಹಿಮಕಿರಣತೇಜ ಜಯ
ಭಾಕ್ತಿಕಜನಕಲ್ಪಾವನೀಜ ಜಯ
ಪುಷ್ಪದಂತ ದಿಗ್ರ್ವ್ಯಾಪ್ತವಸ್ತ್ರ ಜಯ
ಕಿಲ್ಬಿಷನಗಕುಲವಾಸವಾಸ್ತ್ರ ಜಯ
ಶೀತಲ ಶೀತಲಸದೃಶವಚನ ಜಯ
ವಜ್ರಶಿಲಾತಲಲಿಖಿತವಚನ ಜಯ
ಸುಶ್ರೇಯಾಂಸಜಿನೇಂದ್ರರುದ್ರ ಜಯ
ದುಷ್ಕೃತಪನ್ನಗಪತಿಖಗೇಂದ್ರ ಜಯ
ವಾಸುಪೂಜ್ಯದೇವಾಧಿದೇವ ಜಯ
ಸನ್ಮುನಿಸೇವ್ಯ ಮಹಾನುಭಾವ ಜಯ
ವಿಮಲ ಗುಣರತ್ನರಾಶಿ ಜಯ
ನಿಖಿಲಶೀಲಗುಣತೋಯರಾಶಿ ಜಯ
ಅನಂತ ಗುಣಾಂಬುಧಿ [2] ವೀತರಾಗ ಜಯ
ಪಂಚಮಹಾಕಲ್ಯಾಣಯೋಗ್ಯ ಜಯ
ಧರ್ಮಜಿನೇಶ್ವರ ಧರ್ಮವಾರ್ಧಿ ಜಯ
ನಿಷ್ಠುರಾಷ್ಟಕರ್ಮಭ್ರಪವನ ಜಯ
ಶಾಂತಿಜಿನೇಶ್ವರ ಪುಣ್ಯನಿಳಯ ಜಯ

---

1 ವೃಜಿನಮೋಹ (ಬ.)  2 ಜಯನನಂತ ಜಿನ (ಗ)

ಶರಣಾಗತಜನಕರ್ಮವಿಲಯ ಜಯ
ಕುಂಥುಜಿನೇಶ್ವರ ಜಗದ್ವಂದ್ಯ ಜಯ
ಗುಣಮಣಿ ಮುನಿಗುಣ [1] ನಿಕರ ವಂದ್ಯ ಜಯ
ಅರಜಿನ ಸುರನರನಿಕರವಂದ್ಯ ಜಯ
ಸಾರಸ್ವತತತ್ತ್ವವಿದಿತನುತ ಜಯ
ಮಲ್ಲಿಜಿನೇಶ್ವರ ಸುಸ್ವರೂಪ ಜಯ
ಕರ್ಮಕಲಂಕತಮಃಪ್ರದೀಪ ಜಯ
ಮುನಿಸುವ್ರತ ಜಿನರಾಜಹಂಸ ಜಯ
ಸುಗತಿವಧೂಕರ್ಣಾವತಂಸ ಜಯ
ನಮಿಜಿನ ಮುಕ್ತಿಶ್ರೀನಿವಾಸ ಜಯ
ಸಕಲಶ್ರೀವನಿತಾವಿಲಾಸ ಜಯ
ನೇಮಿಜಿನೇಶ್ವರ ವಿನುತಶರಣ ಜಯ
ಹರಿಕುಲಗಗನಸಹಸ್ರಕಿರಣ ಜಯ
ಪಾರ್ಶ್ವಜಿನೇಶ್ವರ ದಿವ್ಯಮೂರ್ತಿ ಜಯ
ಲೋಕಾಲೋಕವ್ಯಾಪ್ತಕೀರ್ತಿ ಜಯ
ವರ್ಧಮಾನಜಿನ ಭುವನಪೂಜ್ಯ [2] ಜಯ
ನೆಗಳ್ದಷ್ಟಾದಶದೋಷರಹಿತ ಜಯ ಜಯಜಯಾ [3] ॥ ೧೬೧

ಎಂದ[ನೇಕಸ್ತುತಿಶತಸಹಸ್ರಂಗಳಿಂ] ಸ್ತುತಿಸಿ ॥ ೧೬೨

ಪ್ರಿಯದಿಂ ತೂರ್ಯಸ್ವನಂ ವಾರಿಧಿವೊಲೆಸೆಯಲುಂ ವಾರನಾರೀಕದಂಬಂ
ನಯದಿಂ ಕೈಗೆಯ್ದು ಸುತ್ತಂ ಬರಲುಮೊಸಗೆಯಿಂ ಪುಣ್ಯಕಾಂತಾಜನಂ ಸೇ
ಸೆಯನುತ್ಸಾಹದಿಂದಂ ಪರಸಿ ವಿಭವದಿಂದಿಕ್ಕಲುಂ ಬಂದು ರಾಜಾ
ಲಯಮಂ ಚೆಲ್ವಾಗೆ ಪೊಕ್ಕಂ ಸುಕವಿಜನಮನಃಪದ್ಮನೀರಾಜಹಂಸಂ ॥

1 ಗಣಧರಾದಿಮುನಿ (ಕ)   2 ವರ್ಧಮಾನಭುವನೈಕಮಹಿತ (ಗ)
3 ರಹಿತಜಯ ಜಯಗುಣನಿಧಾನಾ (ಗ)

ಗಿರಿಶಿಖಿವಾಯುವೊರ್ಗ ಶಶಿಸಂಖ್ಯೆಯೊಳಾವಗವೊಂದಿ ವರ್ತಿಸು
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ
ಬೆರಸೆಸೆದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್
ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕವಾರದೊಳ್ ॥

ಧರಣೀಪೂಜ್ಯಂ ಭವ್ಯೋ
ತ್ಕರವಂದ್ಯಂ ಕಾವ್ಯರತ್ನಮಮಳಯಶಶ್ರೀ ।
ಕರವೆನಿಸಿರ್ದೀಗ್ರಂಥಂ
ನಿರುತಂ [1] ನಿರ್ವಾಹ [2] ಮಾಯ್ತು ನಿರ್ವಿಘ್ನತೆಯಿಂ ॥ ೧೬೫

ವರಚಕ್ರಾದಿಲಸಚ್ಚತುರ್ದಶ [3] ಮಹಾರತ್ನಂಗಳಂ ತಾಳ್ದಿ ನಿಂ
ದರವೋಘಂ ನುತಚಕ್ರವರ್ತಿಪದದೊಳ್ ನಿಲ್ವಂತೆ ಸದ್ದರ್ಶನಾ
ದ್ಯುರದೇವಾನತಸಚ್ಚತುರ್ದಶವಿದಗ್ಧಪ್ರೀತಿಯುಪ್ಪೀಕಥೋ
ತ್ಕರಮಂ ತಾಳ್ದಿದರುಂ ವಿಶೇಷಪದದೊಳ್ ನಿಲ್ವರ್ ಮಹೋತ್ಸಾಹದಿಂ ॥

ಪಲರುಂ ಧರ್ಮಮನೊಲ್ಲದುಗ್ರನರಕಾಂಭೋರಾಶಿಯೊಳ್ ಬಿರ್ದು ಕೋ
ಟಲೆಗೊಳ್ವರ್ಗಳಿವಂತು ಕನ್ನಡದಿನೊಪ್ಪಂಬೆತ್ತು ಜಾಣ್ಮಾತಿನಿಂ
ಪಲವುಂ ದೇಸೆಯಿ [4] ಸಂದುದಾಹರಣೆಯಿಂ ಪೇಳ್ದಂ ಬುಧಕರ್ಮಮಿಯಿಂ
ತಲೆಯುಂ ತೂಗುವಿನಂ ಜಿನೇಂದ್ರಮತವಂ ವಾತ್ಸಲ್ಯರತ್ನಾಕರಂ ॥೧೬೭

ಮುಳುಗುಂದದೊಳಿರ್ದು ಮಹೋ
ಜ್ಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾ ।
ವಳಿಗಱಿಪಿದಂ ಧರಿತ್ರೀ
ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ॥ ೧೬೮

ಕುಲಶೈಲಾವಳಿ ನಿಲ್ವಿನಂ ಸುರನಿವಾಸಂ ನಿಲ್ವಿನಂ ಧಾರಿಣೀ
ವಲಯಂ ನಿಲ್ವಿನಮಂಬುರಾಶಿನಿಕುರಂಬಂ ನಿಲ್ವಿನಂ ನಿಲ್ಕೆ ನಿ

---

1 ಹರುಷದ (ಗ)    2 ನಿರ್ವಾಣ (ಕ. ಖ.)
3 ವರಚಕ್ರಾಧಿಪರುಂ ಚತುರ್ದಶ (ಕ. ಖ. ಗ.)    4 ದೇಸೆಯ (ಗ)

ರ್ಮಲಧರ್ಮಾಮೃತಮೆಯ್ದೆ ತೋಯನಿಧಿಪರ್ಯಂತಂಬರಂ ಪರ್ವಿ ಭೂ
ತಳದೊಳ್ ಕಾಂಚನರಾಶಿಯಂತೆಸೆಯುತುಂ ಚಂದ್ರಾರ್ಕರುಳ್ಳನ್ನೆಗಂ ||

ಜಿನಧರ್ಮಂ ಸಕಲಾವನೀತಳಮುಮಂ ಪರ್ವಿಕ್ಕೆ ಭೂಪಾಲಕರ್
ಜನಮಂ ನ್ಯಾಯದೊಳಾಂದಿ ರಕ್ಷಿಸುಗೆ ಭೂಲೋಕಕ್ಕೆ ಸಂತೋಷಮ
ಪ್ಪಿನೆಗಂ ಪೆರ್ಮೆಟೆ ಕೊಳ್ಗೆ ಭವ್ಯನಿಕರಕ್ಕಾನಂದಮುಂ ಬೇಳ್ಪ ಕಾಂ
ಚನಮುಂ ಕೀರ್ತಿಯುಮಕ್ಕೆ ದಿವ್ಯಸುಖಮುಂ ಭದ್ರಂ ಶುಭಂ ಮಂ
ಗಳಂ || ೧೭೦

ಇದು ನಿಖಿಲದಿವಿಜಪರವೃಢಮಕುಟತಟಘಟಿತಮಣಿಗಣವಿಲುಳಿತಕಿರಣ
ಚುಂಬನೀಯಪರಮಜಿನಚರಣಯುಗಳಸರಸಿರುಹಮತ್ತಮಧುಕರ
ಸಿರುಪಮಸಹಜಕವಿಜನಪಯಃಪಯೋಧಿಹಿಮಕರ
ನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ
ಶ್ರೀಮನ್ನಯಸೇನದೇವವಿರಚಿತಮಪ್ಪ
ಧ ರ್ಮಾ ಮೃ ತ ದೊ ಳ್
ಅಪರಿಗ್ರಹ [1] ವ್ರತವ್ಯಾವರ್ಣನಂ
ಚತುರ್ದಶಾಶ್ವಾಸಂ.

---

## ಧರ್ಮಾಮೃತಂ ಸಂಪೂರ್ಣಂ.

---

[1] ನಿಃಪರಿಗ್ರಹ (ಗ)

ಶ್ರೀಮದ್ರಾಕ್ಷಸವತ್ಸರೇ ವಿಮಲಿನೇ ಮಾಸೇ ಪುನಃ ಫಾಲ್ಗುನೇ
ವಾರೇ ದೇವಗುರೋಸ್ಸುಕಾರ್ಯವಿಹಿತೇ ಶ್ರಿಪೌರ್ಣಮಾಸ್ಯಾಂ ತಿಥೌ
ಆದಿಶ್ರೀಯತಿಪುಂಗವಾಯ ಜಗತೀಪೂಜ್ಯಾಯ ವಿಪ್ರಾನ್ವಯೋ
ರಾಜಾಖ್ಯಸ್ಸ್ವಯಮಾದರೇಣ ಲಿಖಿತಂ ದತ್ತೇ ಸ್ಮ ಧರ್ಮಾಮೃತಂ (ಚ)